


# ಬೆಳ್ವೊಲ

(ಡಾ. ಆರ್. ಸಿ. ಹಿರೇಮಠ ಅವರ ಅಭಿನಂದನ ಗ್ರಂಥ)



ಸಂಪಾದಕರು :

ಡಾ. ಎಂ. ಎಸ್. ಸುಂಕಾಪುರ

ಡಾ. ಎಂ. ಎಂ. ಕಲಬುರ್ಗಿ

೧೯೮೧

# ಅರಿಕೆ

ನಾಡು–ನುಡಿಗಳಿಗಾಗಿ ದುಡಿಯುವವರನ್ನು, ದುಡಿಯುತ್ತಿರುವವರನ್ನು ನೆನೆಯುವುದು, ಗೌರವಿಸುವುದು ಸುಸಂಸ್ಕೃತ ಸಮಾಜದ ಲಕ್ಷಣ. ಕನ್ನಡಿಗರು ಈ ಕಾರ್ಯವನ್ನು ಯಥಾಮತಿ ಮಾಡುತ್ತ ಬಂದಿದ್ದು, ಇದರ ಒಂದು ಅಂಗ, ಗ್ರಂಥಸಮರ್ಪಣೆ. ಕರ್ನಾಟಕದಲ್ಲಿ, ಕಳೆದ ೫೦ ವರ್ಷದ ಅವಧಿಯಲ್ಲಿ ಇಂಥ ಗ್ರಂಥಗಳು ಗಮನಾರ್ಹ ಸಂಖ್ಯೆಯಲ್ಲಿ ಹುಟ್ಟಿ, ನಮ್ಮ ಸಾಹಿತ್ಯದ ಸತ್ವವನ್ನು ಬೆಳೆಸಿವೆ. ಇವುಗಳ ಸಾಲಿನಲ್ಲಿ ನಿಲ್ಲುತ್ತದೆ, ಡಾ. ಆರ್. ಸಿ. ಹಿರೇಮಠ ಅವರಿಗೆ ಸಮರ್ಪಿಸುತ್ತಿರುವ "ಬೆಳ್ವೊಲ".

ಡಾ. ಆರ್. ಸಿ. ಹಿರೇಮಠರು ನಮ್ಮ ನಾಡಿನ ಹಿರಿಯ ವಿದ್ವಾಂಸರು. ಒಮ್ಮುಖ ವಿದ್ವತ್ತಿನ ವಿದ್ವಾಂಸರೇ ಬೆಳೆಯುತ್ತಲಿರುವ ಇಂದಿನ ಸಂದರ್ಭದಲ್ಲಿ ಡಾ. ಹಿರೇಮಠರದು ಬಹುಮುಖವಿದ್ವತ್ತು. ಅನೇಕ ಭಾಷೆ, ಸಾಹಿತ್ಯ, ಶಾಸ್ತ್ರ, ಧರ್ಮ, ಸಂಸ್ಕೃತಿ ಇತ್ಯಾದಿ ಕ್ಷೇತ್ರಗಳನ್ನು ಏಕಕಾಲಕ್ಕೆ ಈಸಬಲ್ಲ ವಿರಳವಿದ್ವಾಂಸರ ಸಾಲಿನಲ್ಲಿ ಅವರದು ಅಗ್ರಸ್ಥಾನ. ಬಹುಶಃ ಅವರ ವಿದ್ವತ್ತಿನ ಬಹುಭಾಗ ಪ್ರಕಟವಾಗದೆ ಒಳಗೇ ಉಳಿಯಿತೆಂದು ಅವರ ನಿಕಟವರ್ತಿಗಳು ಬಲ್ಲರು.

ಡಾ. ಹಿರೇಮಠರು ಪ್ರಾಧ್ಯಾಪಕರಾಗಿ ಕನ್ನಡ ಅಧ್ಯಯನಪೀಠವನ್ನು ಕಟ್ಟಿದರು; ಸಾಹಿತಿಗಳಾಗಿ ಕನ್ನಡ ವಿದ್ವತ್‌ಲೋಕವನ್ನು ವಿಸ್ತರಿಸಿದರು; ಕುಲಪತಿಗಳಾಗಿ ವಿಶ್ವವಿದ್ಯಾಲಯವನ್ನು ಮುನ್ನಡೆಸಿದರು.

ಕರ್ನಾಟಕ ವಿಶ್ವವಿದ್ಯಾಲಯ ಅಸ್ತಿತ್ವಕ್ಕೆ ಬಂದ ಹೊಸತರಲ್ಲಿ ಕನ್ನಡ ವಿಭಾಗಕ್ಕೆ ಅಸ್ತಿಭಾರ ಹಾಕುವ ಬಹುದೊಡ್ಡ ಹೊಣೆಯನ್ನು ಡಾ. ಹಿರೇಮಠರು ಹೊರಬೇಕಾಗಿ ಬಂದಿತು. ವರ್ಷದಿಂದ ವರ್ಷಕ್ಕೆ ವಿಭಾಗವನ್ನು ಅವರು ಎಲ್ಲ ದಿಕ್ಕುಗಳಿಂದ ಬೆಳೆಸಿದರು. ಒಬ್ಬ ವಿದಾರ್ಥಿಯಿಂದ ಪ್ರಾರಂಭವಾದ ವಿಭಾಗ ಕನ್ನಡ, ಭಾಷಾಶಾಸ್ತ್ರ, ಜಾನಪದ ಶಾಖೆಗಳನ್ನು ಬಿಡಿಸಿಕೊಂಡು, ಅನೇಕ ಡಿಪ್ಲೋಮಾ ಕೋರ್ಸಗಳನ್ನು ಬಿಚ್ಚಿಕೊಂಡು ಬೆಳೆಯಿತು; ವಿಶ್ವವಿದ್ಯಾಲಯದ ಪ್ರಥಮ ವಿಭಾಗ ಎಂಬ ಮಾತಿಗೆ ಅರ್ಥತುಂಬಿಕೊಂಡು ಎದ್ದು ನಿಂತಿತು. ಇದು ಏಕವ್ಯಕ್ತಿಪ್ರಯತ್ನವೆಂದರೆ ಅತಿಶಯೋಕ್ತಿ ಏನಲ್ಲ. ಹೀಗಾಗಿ ಈ ಭಾಗದಲ್ಲಿ ಕನ್ನಡದ ಕ್ರಮವತ್ತಾದ ಪರಂಪರೆಗೆ ಅವರು ಗಂಗೋತ್ರಿಯಾದರು; ಶಿಷ್ಯ, ಪ್ರಶಿಷ್ಯ ಸಂತಾನಕ್ಕೆ ಆದ್ಯಪ್ರಾಧ್ಯಾಪಕರೆನಿಸಿದರು.

ಕವಿಗಳಾಗಿ ಹುಟ್ಟಿ, ಸಂಶೋಧಕರಾಗಿ ಬೆಳೆದುದು ಪ್ರಾಧ್ಯಾಪಕ ಹಿರೇಮಠರ ಸಾಧನ ಪಥವಾಗಿದೆ. ಅವರ ಸಂಶೋಧನೆ ಅನೇಕ ಕ್ಷೇತ್ರಗಳನ್ನು ಬಳಸಿಕೊಂಡು ಪ್ರವಹಿಸಿದ್ದು ಭಾಷಾವಿಜ್ಞಾನ, ಕನ್ನಡಸಾಹಿತ್ಯ, ಗ್ರಂಥಸಂಪಾದನೆಗಳು ಅದರ ಪ್ರಮುಖ ಪಾತ್ರಗಳು. ಕರ್ನಾಟಕದಲ್ಲಿ ಭಾಷಾವಿಜ್ಞಾನಮಾರ್ಗವನ್ನು ತೆರೆದ ಪ್ರಥಮರಲ್ಲಿ ಡಾ. ಹಿರೇಮಠರು ಒಬ್ಬರು. ಅದರ ಬೆಳವಣಿಗೆಯ ಹೊಣೆಯನ್ನು ಕೆಲವು ಕಾಲ ಆವರೊಬ್ಬರೇ ಹೊತ್ತು ನಡೆದರೆಂಬುದು ಐತಿಹಾಸಿಕ ಸತ್ಯ. ದ್ರಾವಿಡಭಾಷಾವಲಯಗಳಲ್ಲಿ ಭಾಷಾ ಶಾಸ್ತ್ರವನ್ನು ನಿರಂತರ ಪ್ರತಿನಿಧಿಸಿದ ಕನ್ನಡಿಗರಲ್ಲಿ ಡಾ. ಹಿರೇಮಠರು ಮೊದಲಿಗ ರೆಂಬುದು ಗಮನಿಸಬೇಕಾದ ಅಂಶ.

ಕನ್ನಡಸಾಹಿತ್ಯ–ಸಂಸ್ಕೃತಿ ಹಿರೇಮಠರ ವ್ಯಾಸಂಗದ ಕೇಂದ್ರಭೂಮಿ. ಕವಿವಿವೇಚನೆ, ಕಾವ್ಯಚಿಂತನೆಗಳ ಫಲವಾಗಿ ಅವರು ಕನ್ನಡಕ್ಕೆ 'ಮಹಾಕವಿ ರಾಘವಾಂಕ' ಮೊದಲಾದ ಕೃತಿಗಳನ್ನು ನೀಡಿದ್ದಾರೆ. 'ಷಟ್ಸ್ಥಲಪ್ರಭೆ' ಅವರ ವಿಶೇಷ ಅಧ್ಯಯನದ ಫಲವೆನಿಸಿದೆ. ಅನೇಕ ಗ್ರಂಥಗಳಿಗೆ ಬರೆದ ಪ್ರಸ್ತಾವನೆಗಳಲ್ಲಿ ಅವರ ವಿದ್ವತ್ತು ಹರಡಿಕೊಂಡಿದೆ. ಈ ಎಡೆಗಳಲ್ಲಿ ಅವರ ಸಂಶೋಧನೆಯ ಆಳ ಅಗಲಗಳನ್ನು ಗುರುತಿಸಬಹುದಾಗಿದೆ.

ಗ್ರಂಥಸಂಪಾದನೆಯ ಕ್ಷೇತ್ರದಲ್ಲಿಯಂತೂ ಶ್ರೀಯುತರದು ಯುಗಪ್ರವರ್ತಕ ಹೆಸರು. ಅನೇಕ ಕಾವ್ಯಗಳನ್ನು, ಇವುಗಳಿಗೆ ಮಿಗಿಲಾಗಿ 'ವಚನಸಾಹಿತ್ಯ'ವನ್ನು ಬೃಹತ್ತಾಗಿ ಪರಿಷ್ಕರಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ವಚನಸಾಹಿತ್ಯಕ್ಕೆ ಸಂಬಂಧಿಸಿದ ಸ್ವತಂತ್ರ ಮತ್ತು ಸಂಕಲನಕೃತಿಗಳನ್ನು ಶಾಸ್ತ್ರಶುದ್ಧವಾಗಿ ಯೋಗ್ಯ ಪ್ರಸ್ತಾವನೆ, ಅನುಬಂಧ ಗಳೊಂದಿಗೆ ಪ್ರಕಟಿಸಿ, ಆಧುನಿಕ ಗ್ರಂಥಸಂಪಾದನೆಯ ಅದರಲ್ಲಿಯೂ ವಚನ ಸಂಪಾದನೆಯ ಯುಗಪ್ರವರ್ತಕರಾಗಿದ್ದಾರೆ.

ಹೀಗೆ ದುಡಿದು ಕನ್ನಡ ವಿಭಾಗವನ್ನು ಅಧ್ಯಯನಪೀಠವನ್ನಾಗಿ ರೂಪಿಸುವುದರ ಮೂಲಕ ಡಾ. ಹಿರೇಮಠರ ನಿರ್ಮಾಣಶಕ್ತಿ ಪ್ರಕಟವಾಗುವಲ್ಲಿ ಅವರು ಸಿನೇಟ್, ಆಕಾಡೆಮಿಕ್ ಕೌನ್ಸಿಲ್, ಸಿಂಡಿಕೇಟ ಸಭೆಗಳ ಅನಿವಾರ್ಯ ಭಾಗವಾದರು. ಕ್ಷಿಪ್ರದಲ್ಲಿಯೇ ಈ ಶಕ್ತಿ-ಸಾಹಸಗಳ ಪರಂಪರೆ ಅವರಿಗೆ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿ ಪಟ್ಟಗಟ್ಟಿದವು. ೫ ವರ್ಷಕಾಲ ತನ್ನ ಶೈಕ್ಷಣಿಕ ಮತ್ತು ಆಡಳಿತ ಕ್ಷೇತ್ರಗಳಲ್ಲಿ ತೀವ್ರ ಚಟುವಟಿಕೆ, ಶೀಘ್ರ ನಿರ್ಣಯ ಮೊದಲಾದ ಉಪಕ್ರಮಗಳನ್ನು ಮೈಗೂಡಿಸಿ ಕೊಂಡು ಮುನ್ನಡೆಯಿತು, ವಿಶ್ವವಿದ್ಯಾಲಯ.

ಹೀಗೆ ಬಾಲ್ಯದಿಂದಲೂ ಸ್ವಯಂನಿರ್ಮಿತ ವ್ಯಕ್ತಿತ್ವದಿಂದ ಬೆಳೆದು, ಪರಿಸರವನ್ನು ಬೆಳಗಿಸಿದ ಡಾ. ಹಿರೇಮಠ ಅವರನ್ನು ೫೦ನೆಯ ವಯಸ್ಸಿನಲ್ಲಿ ಗೌರವಿಸಿ ಕನ್ನಡಿಗರು

ತಮ್ಮ ಕೃತಜ್ಞತೆಗಳನ್ನು ಅರ್ಪಿಸಿದರು. ಆಮೇಲೆಯೂ ಸತ್ಕರಿಸಿ ಗೌರವ ಸಲ್ಲಿಸುತ್ತ ಬಂದರು. ತರುವಾಯ ಡಾ. ಹಿರೇಮಠ ಅವರಿಗೆ ೬೦ ತುಂಬುವಲ್ಲಿ ಇಂಥದೇ ಗೌರವ ಸಲ್ಲಿಸಲು ಅವರ ಸ್ನೇಹಿತರು, ಹಿತೈಷಿಗಳು, ವಿದ್ಯಾರ್ಥಿಗಳು ಬಯಸಿದುದರ ಕಾರಣವಾಗಿ ೧೯೭೭ ರಲ್ಲಿ "ಡಾ. ಆರ್. ಸಿ. ಹಿರೇಮಠ ಸನ್ಮಾನ ಸಮಿತಿ" ಅಸ್ತಿತ್ವಕ್ಕೆ ಬಂದಿತು. ಸನ್ಮಾನ ಸಮಾರಂಭ, ಗ್ರಂಥಸಮರ್ಪಣೆ, ದತ್ತಿ ಅನುಷ್ಠಾನ ಕಾರ್ಯಗಳನ್ನು ಯೋಜಿಸಿ ಕೊಳ್ಳಲಾಯಿತು. ಈ ವ್ಯಾಪಕವಾದ ಕಾರ್ಯಕ್ಕೆ ಅನೇಕರು ಧನಸಹಾಯ ಮಾಡಿದರು, ಲೇಖನ ಒದಗಿಸಿದರು. ಈ ಲೇಖನಗಳ ಗ್ರಂಥರೂಪ 'ಬೆಳ್ವೊಲ'.

ನಮ್ಮ ನಾಡಿನ ಇತಿಹಾಸದುದ್ದಕ್ಕೂ ಭೂಸಂಪತ್ತು, ಸಾಂಸ್ಕೃತಿಕಸಂಪತ್ತುಗಳಿಗೆ ಹೆಸರಾಗಿದೆ ಬೆಳ್ವೊಲನಾಡು. ಇದರ ಸಾಂಸ್ಕೃತಿಕಸಂಪತ್ತಿನ ಭಾಗವಾಗಿ ಪಂಪ, ದುರ್ಗಸಿಂಹ, ಕುಮಾರವ್ಯಾಸ, ಚಾಮರಸರಂಥ ಮಹಾಕವಿಗಳು ಇಲ್ಲಿ ಹುಟ್ಟಿಬಂದಿದ್ದಾರೆ. ಬೆಳ್ವೊಲದಲ್ಲಿ ಹುಟ್ಟಿದ ಡಾ. ಹಿರೇಮಠರು ಈ ಕವಿಗಳ ವಿದ್ವತ್‌ಪರಂಪರೆಯನ್ನು ಪ್ರತಿನಿಧಿಸುತ್ತಾರೆ. ಹೀಗಾಗಿ ಡಾ. ಹಿರೇಮಠ ಅವರಿಗೆ ಅರ್ಪಿಸಲಿರುವ ಈ ಗ್ರಂಥಕ್ಕೆ 'ಬೆಳ್ವೊಲ'ವೆಂದೇ ನಾಮಕರಣ ಮಾಡಲಾಗಿದೆ. ಲೇಖನಗಳನ್ನು ಬರಮಾಡಿಕೊಳ್ಳುವ, ಆಯ್ಕೆ ಮಾಡುವ, ಪರಿಷ್ಕರಿಸುವ, ಪ್ರಕಟಿಸುವ ಈ ಕ್ರಿಯಾಘಟ್ಟಗಳಲ್ಲಿ ೩ ವರ್ಷಗಳೇ ಸರಿದು ಈಗ 'ಬೆಳ್ವೊಲ' ಬೆಳಕುಕಾಣುತ್ತಲಿದೆ. ಡಾ. ಹಿರೇಮಠರ ಮೇಲಿನ ಪ್ರೀತಿ ವಿಶ್ವಾಸ ಕಾರಣವಾಗಿ ನಮ್ಮೊಂದಿಗೆ ಸಹಕರಿಸಿದ 'ಸನ್ಮಾನ ಸಮಿತಿಯ' ಸದಸ್ಯರಿಗೆ, ಧನಸಹಾಯ ಮಾಡಿದ, ಲೇಖನಗಳನ್ನು ಒದಗಿಸಿದ ಎಲ್ಲ ಮಹನೀಯರಿಗೆ ನಮ್ಮ ಕೃತಜ್ಞತೆಗಳು.

ಇಂಥ ಒಂದು ಗ್ರಂಥ ಅಚ್ಚಿನ ಮನೆಯ ಮೂಲಕ ಹೊರಬರುವಲ್ಲಿ ಅನೇಕ ಹಸ್ತಗಳ ನೆರವು ಅಗತ್ಯ. ಈ ಅನೇಕ ಹಸ್ತಗಳನ್ನು ಏಕೀಭವಿಸಿಕೊಂಡು ನೆರವಾದ ಪ್ರೊ. ಬಿ. ಆರ್. ಹಿರೇಮಠ ಅವರಿಗೂ ನಾವು ಕೊಡುವ ಎಲ್ಲ ತೊಂದರೆಗಳನ್ನು ಸಹಿಸಿಕೊಂಡು ಸುಂದರವಾಗಿ ಮುದ್ರಿಸಿದ ಶ್ರೀ ರವಿ ಆಕಳವಾಡಿ ಅವರಿಗೂ ನಮ್ಮ ವಂದನೆಗಳು.

**—ಸಂಪಾದಕರು**

# ಪ ರಿ ವಿ ಡಿ

□ □ □ □ □ □ □ □ □ □ □ □ □ □ □ □ □ □ □ □ □ □ □ □ □

## ತೆನೆ : ಒಂದು

ಬದುಕು-ಬರಹ : [ಡಾ. ಆರ್. ಸಿ. ಹಿರೇಮಠ ಅವರ-]

ಬೆಳ್ವೊಲದ ಬಾಗಿನ (ಕವಿತೆ) ಚೆನ್ನವೀರ ಕಣವಿ

## ತೆನೆ : ಎರಡು

**ಸಾಹಿತ್ಯ-ಧರ್ಮ :**



## ತೆನೆ : ಮೂರು

**ಶಾಸ್ತ್ರ-ವಿಚಾರ :**

## ತೆನೆ : ನಾಲ್ಕು

**ಇತಿಹಾಸ–ಜಾನಪದ :**



**ಅನುಬಂಧ :**

# ಬೆಳ್ವೊಲದ ಬಾಗಿನ

ಬಯಲು ಸೀಮೆಯ ಬಿರುವಿಸಿಲಿಗೆರೆಹೊಲದೆದೆಯ
ಎರಕಲ ಬೀಡು ಕಾದು ಕಂಗೆಡಿಸಿರಲು, ಮುಗಿಲು–
ಮುಂಗಾರು ಹದಗೊಳಿಸಿ ಮುಂದಿನ ತತಿಗೆ ಮಿಗಿಲು
ಹಾರೈಸಿ; ಹಿಂಗಾರು : ಜೋಳ, ಗೋದಿಯ ತೆನೆಯ
ಸಿಂಗಾರ. ಕಡಲೆ ಮೀಡಿಗೆ ಕೊಡರ್ ಕೊಂಚೆ ಹಿಂಡು.
ಕುಸುಂಬೆ ಸಾಲಿನ ಹೂವಿನಂಚೆಲ್ಲ ಜರತಾರಿ
ಬಿಸಿಲಿಂ ಕಾಸಿದ ಬೆಳ್ಳಿ : ಹತ್ತಿ-ತೊಳೆ ರೂವಾರಿ.
ಮಾವು, ಹುಣಸೆಯು ಬೇವು ಗುಡಿಹುಣ್ಣಿಮೆಗೆ ಈಡು.
‘ ಬೆಳುವಲದ ಮುನ್ನೂರು ’ : ನೆಲ-ನೀರು-ಗಾಳಿಯಲಿ
ಹಲವು ಹಂಬಲ ತುಂಬಿ ಬಿಂಬ ಪ್ರತಿಬಿಂಬದಲಿ
ಒಲವಿನೊಂದೇ ರೂಪ, ಆರೋಗಣೆಯುಂಬಲಿ.
ಬಯಲ ದೀಪಸ್ತೂಪ ಹೇಗೊ ಹಿಡಿದಿದೆ ಜೋಲಿ.
ದುಡಿಮೆಯೊಳಗೊಂದು ಸುಖ : ನೋವು-ನಲವಿನ ಜೀಕ.
ಪಡೆದ ಭಾಗ್ಯವು ಬೇರೆ : ಸಂಸ್ಕೃತಿ ಭೂಮಿ ತೂಕ.

—ಚೆನ್ನವೀರ ಕಣವಿ



## ಡಾ. ಆರ್. ಸಿ. ಹಿರೇಮಠರು : ಜೀವನ ಮತ್ತು ಸಾಧನೆ

ಗುರುಲಿಂಗ ಕಾಪಸೆ

ಹೊಸಗನ್ನಡಸಾಹಿತ್ಯದೊಂದಿಗೆ ಜನಿಸಿ, ಅದರ ಬೆಳವಣಿಗೆಯೊಂದಿಗೆ ತಮ್ಮ ಜೀವನವನ್ನು ರೂಪಿಸಿಕೊಂಡ ಡಾ. ಆರ್. ಸಿ. ಹಿರೇಮಠ ಅವರು ಕವಿಗಳಾಗಿ, ಗದ್ಯಲೇಖಕರಾಗಿ, ಸಂಶೋಧಕರಾಗಿ, ಭಾಷಾವಿಜ್ಞಾನಿಗಳಾಗಿ ಮಾಡಿದ ಕಾರ್ಯ, ಪಡೆದ ಪ್ರಸಿದ್ಧಿ ಅವಲೋಕನೀಯವಾಗಿವೆ. ಹಾಗೆಯೇ ಅವರು ಕನ್ನಡದ ಅಸಾಧಾರಣ ವಿದ್ಯಾರ್ಥಿಯಾಗಿ, ಗಣ್ಯ ಪ್ರಾಧ್ಯಾಪಕರಾಗಿ, ಕನ್ನಡ ಅಧ್ಯಯನಪೀಠದ ಮುಖ್ಯಸ್ಥರಾಗಿ, ಕುಲಪತಿಗಳೂ ಆಗಿ ನಿರ್ವಹಿಸಿದ ಪಾತ್ರ ಗಮನಾರ್ಹವಾಗಿದೆ. ಸಾಹಿತ್ಯಿಕ ಮತ್ತು ಆಡಳಿತಾತ್ಮಕ ಕಾರ್ಯಗಳೆರಡರಲ್ಲಿಯೂ ಅವರು ತೋರಿದ ಶ್ರದ್ಧೆ, ಪರಿಶ್ರಮಗಳು ಕನ್ನಡಿಗರು ಮರೆಯದಂತಹವುಗಳು. ಸುಪ್ರಸಿದ್ಧ ವಿದ್ವಾಂಸರೆನಿಸಿದ, ಭಾಷಾವಿಜ್ಞಾನದ ವಿಷಯದಲ್ಲಿ ಭಾರತೀಯ ಹಾಗೂ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದ ಅವರ ಜೀವನವು ಒಂದು ಸಾಹಸದ ದಂಡಯಾತ್ರೆಯಂತಿದೆ. ಅವರು ಹುಟ್ಟಿದ್ದು ಅಜ್ಞಾತ ಹಳ್ಳಿಯೊಂದರಲ್ಲಿ; ಅವರ ವಿದ್ಯಾರ್ಥಿ ಜೀವನ ಸಾಗಿದ್ದು ಕಡುಬಡತನದ ಕಷ್ಟಕೋಟಲೆಗಳಲ್ಲಿ. ಅತ್ಯಂತ ದುರ್ಧರಸ್ಥಿತಿಯಲ್ಲಿಯೂ ಧೃತಿಗೆಡದೆ ಅವರು ವಿದ್ಯಾಭ್ಯಾಸವನ್ನು ಮುಂದುವರಿಸಿ ಪರೀಕ್ಷೆಗಳಲ್ಲಿ ಪಡೆದ ಯಶಸ್ಸು, ಬದುಕಿನಲ್ಲಿ ನಡೆದ ಔನ್ನತ್ಯ ಯಾರನ್ನೂ ದಂಗುಗೊಳಿಸುವಂತಿದೆ. ಅವರ ಹೋರಾಟದ ಜೀವನ ಹಾಗೂ ಸಾಧನೆಗಳ ಪರಿಚಯ ಹೊಸ ಪೀಳಿಗೆಗೆ ಒಂದು ದಿಕ್ಸೂಚಿಯಾಗಿ ನಿಲ್ಲುವುದರಲ್ಲಿ ಸಂದೇಹವಿಲ್ಲ.

ಡಾ. ಆರ್. ಸಿ. ಹಿರೇಮಠರ ಸಮಗ್ರಜೀವನವನ್ನು ಚಿತ್ರಿಸುವುದು ಸರಳವಾದುದಾಗಿಲ್ಲ. ಹಾಗೆ ನೋಡಿದರೆ ಯಾವ ಒಬ್ಬ ಧೀಮಂತವ್ಯಕ್ತಿಯ ಜೀವನಚರಿತ್ರೆ ಬರೆಯುವುದು ಸುಲಭದ ಕೆಲಸವಲ್ಲ. ಯಾಕೆಂದರೆ ಬದುಕು ಯಾವಾಗಲೂ ಬರೆವಣಿಗೆಯನ್ನು

ಮೀರಿದ್ದು. ಡಾ. ಆರ್. ಸಿ. ಹಿರೇಮಠರ ಬದುಕು ಈ ಮಾತಿಗೆ ಹೊರತಾಗಲಾರದು. ಅವರು ತಮ್ಮ ' ಆತ್ಮಗೀತೆ ' ಯನ್ನು ಬರೆಯುತ್ತ

ಹಳೆಯ ನೆನಹಿನ ಕೊಳದಿ
ಇಳಿಯುಬಹುದೇ ಕೆಳದಿ !

ಎಂದು ಉದ್ಗಾರವೆತ್ತಿದ್ದಾರೆ. ಈ ಸಾಲುಗಳಲ್ಲಿ ನೆನಪಿನ ಆಳಕ್ಕೆ ಇಳಿಯುವುದು ಅಸಾಧ್ಯವೆಂಬ ಧ್ವನಿಯಿರುವುದನ್ನು ಗಮನಿಸಬಹುದು. ಹಿರೇಮಠರ ಜೀವನವೊಂದು ಆಳವಾದ ಸರೋವರವಿದ್ದಂತಿದೆ : ಬಾಹ್ಯದಲ್ಲಿ ಸೊಗಸಾಗಿ, ಸುಂದರವಾಗಿ. ಆಕರ್ಷಕವಾಗಿ ಕಂಡರೂ ಅದರ ಅಂತರಂಗದಲ್ಲಿ ಹಲವು ಕಷ್ಟ-ಕಾರ್ಪಣ್ಯಗಳ, ದುಃಖ ದುಮ್ಮಾನಗಳ ಕಲ್ಲೋಲಮಾಲೆಯಿದೆ. ತರಂಗ-ತರಂಗವಾಗಿ ತೇಲಿಹೋದ ಘಟನೆ, ಘಟನಾವಳಿಗಳೂ ಇವೆ. ಅವುಗಳನ್ನೆಲ್ಲ ಇದ್ದಕ್ಕಿದ್ದಂತೆ ಕಂಡರಿಸುವುದು ಸಾಹಸದ ಕೆಲಸ. ಪ್ರಸ್ತುತ ಪ್ರಯತ್ನ ಅವರ ಜೀವನದ ರೂಪರೇಷೆಗಳನ್ನು ಗುರುತಿಸುವುದಾಗಿದೆ, ಅಷ್ಟೆ.

' ಆರ್. ಸಿ. ಹಿರೇಮಠ ' ಎಂದೇ ಪ್ರಸಿದ್ಧರಾಗಿರುವ ಅವರ ಪೂರ್ಣ ಹೆಸರು ರುದ್ರಯ್ಯ ಚಂದ್ರಯ್ಯ ಹಿರೇಮಠ. ' ರುದ್ರಯ್ಯ ' ಎಂಬುದು ಅವರ ಅಜ್ಜಂದಿರ ಹೆಸರೂ ಅಹುದು. ಈಗ ತಿಳಿದ ಮಟ್ಟಿಗೆ ಆ ಮಠದ ಪೂರ್ವಜರಾದ ರಾಚಯ್ಯನವರು ಮೂಲತಃ ಧಾರವಾಡ ಜಿಲ್ಲೆಯ ರೋಣ ತಾಲೂಕಿನ ನೀರಲಗಿ ಊರಿನವರು. ಅತ್ಯಂತ ಸಾತ್ವಿಕರು, ಧಾರ್ಮಿಕರು ಆಗಿದ್ದ ಅವರು ಜನಾದರಣೀಯ ವ್ಯಕ್ತಿಗಳೂ ಆಗಿದ್ದರು. ಅಂದಿನ ಕಾಲದಲ್ಲಿ ತಮ್ಮ ಆದರ್ಶಯುಕ್ತ ನಡೆ-ನುಡಿಗಳಿಂದ, ಧಾರ್ಮಿಕ ಕಾರ್ಯಗಳಲ್ಲಿ ತೋರಿಸುವ ಶ್ರದ್ಧೆ-ನಿಷ್ಠೆಗಳಿಂದ ನಿಜವಾದ ಅರ್ಥದಲ್ಲಿ ಅವರು ಜನತೆಯ ಗುರುಗಳಾಗಿದ್ದರು. ಅವರ ವ್ಯಕ್ತಿತ್ವವನ್ನರಿತ ಕುರುಡಗಿಯ (ಇದೂ ರೋಣ ತಾಲೂಕಿನಲ್ಲಿಯ ಒಂದು ಹಳ್ಳಿ) ಜನತೆ, ಅವರನ್ನು ತಮ್ಮೂರಿಗೆ ಭಕ್ತಿಪೂರ್ವಕವಾಗಿ ಬರಮಾಡಿಕೊಂಡಿತು. ಅಲ್ಲಿ ಅವರಿಗಾಗಿ ಒಂದು ಮಠವನ್ನು ಕಟ್ಟಿಸಿಕೊಟ್ಟಿತು. ಅವರ ಮಾರ್ಗದರ್ಶನದಲ್ಲಿ ತಮ್ಮ ಬದುಕನ್ನು ಹಸನಗೊಳಿಸಿಕೊಂಡಿತು. ಭಕ್ತರ ಕಣ್ಣರಿಕೆಯಲ್ಲಿ ರಾಚಯ್ಯನವರ ಜೀವನವು ನೆಮ್ಮದಿಯಿಂದ ಸಾಗಿತು.

ಮಠದ ಸ್ವಾಮಿಗಳಾದ ರಾಚಯ್ಯನವರು ಜನತೆಯ ಯೋಗಕ್ಷೇಮದ ಹಿತಚಿಂತಕರಾಗಿ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಚಟುವಟಿಕೆಗಳ ಮಾರ್ಗದರ್ಶಕರಾಗಿ ಜನಸೇವೆಯೇ ಪರಮಾತ್ಮನ ಸೇವೆ ಎಂಬ ಭಾವದಿಂದ ದುಡಿದರು. ಆ ಊರಿನ ಯಾವ ಮಂಗಲ ಕಾರ್ಯವೂ ರಾಚಯ್ಯನವರಿಲ್ಲದೆ ಜರುಗುತ್ತಿರಲಿಲ್ಲ. ಹಾಗೆಯೇ ಜನತೆಯ ಅನುವು ಆಪತ್ತುಗಳಲ್ಲಿ ಅವರು ಸಹಚಿಂತಕರಾಗಿ ಜನತೆಯೊಂದಿಗೇ ಬೆರೆತಿದ್ದರು. ವರ್ಷಕ್ಕೊಮ್ಮೆ ಶ್ರಾವಣ ಕಡೆಯ ಸೋಮವಾರ ಜರುಗುತ್ತಿದ್ದ ಗೊಡಚಿ ಜಾತ್ರೆಯ ಆ

ರಾಜಾ ವೀರಭದ್ರದೇವರ ಜಾತ್ರೆಯನ್ನೂ ಅವರು ಉತ್ಸಾಹಪೂರ್ಣವಾಗಿ ನಡೆಸಿಕೊಂಡು ಬರುತ್ತಿದ್ದರು. ಜನತೆಯ ಸುಖ-ದುಃಖ, ನೋವು-ನಲಿವು ಮುಂತಾದವುಗಳೊಂದಿಗೆ ಗಾಢಸಂಬಂಧ ಹೊಂದಿದ್ದ ರಾಚಯ್ಯನವರು ಕುರುಡಗಿಯ ಸಮಸ್ತ ಜನತೆಯ ಗೌರವಕ್ಕೆ ಪಾತ್ರರಾಗಿದ್ದರು.

ಹೀಗೆ ಒಂದು ಗ್ರಾಮದ ಜನಜೀವನದಲ್ಲಿ ಬೆರೆತುಕೊಂಡ ರಾಚಯ್ಯನವರ ವೈಯಕ್ತಿಕ ಜೀವನ ಸುಖಪ್ರದವಾಗಿಯೇ ಇತ್ತು. ಅವರು ಮೂವರು ಗಂಡುಮಕ್ಕಳನ್ನು ಪಡೆದಿದ್ದರು. ಈ ಮೂವರು ಮಕ್ಕಳು ತಂದೆಯ ಹೆಜ್ಜೆಯಲ್ಲಿಯೇ ಹೆಜ್ಜೆಯಿಟ್ಟು ತಮ್ಮ ಜೀವನವನ್ನು ಸಾಗಿಸಿದರು. ಅವರಲ್ಲಿ ಹಿರಿಯವರಾದ ವೀರಯ್ಯನವರ ಹಿರಿಯ ಮಕ್ಕಳಾದ ರುದ್ರಯ್ಯನವರು ಧಾರ್ಮಿಕ ಪ್ರವೃತ್ತಿಯವರಾಗಿ ಭಕ್ತರ ಮೆಚ್ಚುಗೆಯನ್ನು ಪಡೆದಿದ್ದರು

ರುದ್ರಯ್ಯನವರ ನಂತರ ಕುರುಡಗಿಯ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಗಳನ್ನು ಮುಂದುವರಿಸಿದವರು ಅವರ ಮಗ ಚಂದ್ರಯ್ಯನವರು. ಇವರಿಗೆ ಗಣಿತ, ಜ್ಯೋತಿಷ್ಯ ಶಾಸ್ತ್ರಗಳಲ್ಲಿ ಪರಿಣತಿಯಿತ್ತು. ಪುರಾಣಪ್ರವಚನ ಹಾಗೂ ಪ್ರಾಚೀನಕಾವ್ಯಗಳ ವಾಚನ ಇವು ಇವರ ವಿಶೇಷ ಅಭಿರುಚಿಯ ವಿಷಯಗಳಾಗಿದ್ದವು. ಚಂದ್ರಯ್ಯನವರ ಪುರಾಣ ಪ್ರವಚನವನ್ನು ಕೇಳುವುದು ಅಲ್ಲಿಯ ಜನತೆಗೆ ಅತ್ಯಂತ ಪ್ರೀತಿಯ ವಿಷಯವಾಗಿತ್ತು. ಅವರು ಪುರಾಣ ಪ್ರಾರಂಭಿಸಿದ ಸುದ್ದಿ ಕೇಳಿದ ಸುತ್ತಲಿನ ಹತ್ತುಹಳ್ಳಿಯ ಜನರು ಅಲ್ಲಿಗೆ ಧಾವಿಸಿ ಬರುತ್ತಿದ್ದರು. ಆಗಾಗ ತಮ್ಮಲ್ಲಿಗೂ ಅವರನ್ನು ಕರೆಯಿಸಿಕೊಂಡು ಪುರಾಣ ಹೇಳಿಸುತ್ತಿದ್ದರು. ಪ್ರಭುಲಿಂಗಲೀಲೆ, ಬಸವಪುರಾಣಗಳು ಚಂದ್ರಯ್ಯನವರ ಅಚ್ಚುಮೆಚ್ಚಿನ ಕೃತಿಗಳು. ಯಾವಾಗ ಬೇಕಾದಾಗ ಆ ಕೃತಿಗಳನ್ನು ಕುರಿತು ಅವರು ಅಧಿಕಾರವಾಣಿಯಿಂದ ಮಾತನಾಡಬಲ್ಲವರಾಗಿದ್ದರು. ಕನ್ನಡದ ಇತರ ಪ್ರಾಚೀನ ಕಾವ್ಯಗಳನ್ನೂ ಅವರು ಆಸ್ಥೆಯಿಂದ ಅಧ್ಯಯನ ಮಾಡಿದ್ದರು. ಸಂಸ್ಕೃತವನ್ನು ಅವರು ಚೆನ್ನಾಗಿ ಬಲ್ಲವರಾಗಿದ್ದರು. ಆ ಕಾಲದಲ್ಲಿ ಅವರು ಬರಿಯ ಪುರಾಣ ಹೇಳುವ ಸ್ವಾಮಿಗಳಾಗಿರದೆ, ಕನ್ನಡ ಸಂಸ್ಕೃತ ಸಾಹಿತ್ಯದ ಒಬ್ಬ ಗಣ್ಯವಿದ್ವಾಂಸರಾಗಿದ್ದರು.

ಚಂದ್ರಯ್ಯನವರು ಅಧ್ಯಯನ ಹಾಗೂ ಸಾರ್ವಜನಿಕ ಸೇವೆಗಳಿಗೆ ವಿಶೇಷಮಹತ್ವ ಕೊಟ್ಟಿದ್ದರು. ಅವರ ಮನೆತನಕ್ಕೆ ಒಂಟಿ ಕೂರಿಗೆ ಜಮೀನು ಇದ್ದುದರಿಂದ ಪ್ರಾಪಂಚಿಕ ತೊಂದರೆಗಳು ಇರಲಿಲ್ಲ. ಅವರದು ಸ್ಥಿತಿವಂತ ಮನೆತನವೇ ಆಗಿತ್ತು. ಚಂದ್ರಯ್ಯನವರ ಧರ್ಮಪತ್ನಿ ಶ್ರೀಮತಿ ವೀರಮ್ಮನವರು. ಇವರು ನವಲಗುಂದ ತಾಲೂಕಿನ ನಾಗನೂರಿನ ಶ್ರೀಮಂತ ಮನೆತನದವರು; ಹಿರೇಮಠದವರು. ಇವರ ಮನೆತನವೂ ಆ ಕಾಲದಲ್ಲಿ ಸುಸಂಸ್ಕೃತ ಹಾಗೂ ಸುಶಿಕ್ಷಿತ ಮನೆತನವೆಂದು ಹೆಸರಾಗಿತ್ತು. ಶ್ರೀಮತಿ ವೀರಮ್ಮನವರ ತಮ್ಮನೊಬ್ಬ ಆಗ ಮ್ಯಾಟ್ರಿಕ್ ಪಾಸಾಗಿದ್ದನೆಂಬುದು ಶೈಕ್ಷಣಿಕ ದೃಷ್ಟಿಯಿಂದ ಆ ಮನೆತನ ಮುಂದುವರಿದಿತ್ತೆಂಬುದಕ್ಕೆ ಒಂದು ಕುರುಹಾಗಿದೆ.

ಚಂದ್ರಯ್ಯನವರು ವಿದ್ವಾಂಸರಾದಂತೆ ವೀರಮ್ಮನವರು ತಮ್ಮ ಔದಾರ್ಯಗುಣದಿಂದ ಎಲ್ಲರಿಗೂ ಬೇಕಾಗಿದ್ದರು. ಈ ಆದರ್ಶ ದಂಪತಿಗಳಿಗೆ ಆರುಜನ ಮಕ್ಕಳು : ರಾಚಯ್ಯ, ರುದ್ರಯ್ಯ, ವೀರಮ್ಮ, ವೀರಯ್ಯ, ಪಂಚಾಕ್ಷರಿ, ಷಡಕ್ಷರಿ. ಈ ಆರು ಜನ ಮಕ್ಕಳಲ್ಲಿ ಎರಡನೆಯವರಾದ ರುದ್ರಯ್ಯನವರೇ ಡಾ. ಆರ್. ಸಿ. ಹಿರೇಮಠರು. ಇವರು ಹುಟ್ಟಿದ್ದು ಕುರುಡಗಿಯಲ್ಲಿಯೇ. ೧೯೨೦ ಜನೆವರಿ ೧೫ ಇವರ ಜನ್ಮದಿನ.

ಆರುಮಕ್ಕಳ ದೊಡ್ಡ ಪ್ರಪಂಚವನ್ನು ಕಟ್ಟಿಕೊಂಡ ಚಂದ್ರಯ್ಯನವರು ಉಂಡುಟ್ಟು ಸುಖವಾಗಿಯೇ ಇದ್ದರು. ಅವರು ವಿದ್ಯಾಸಂಪನ್ನರೂ ಧಾರ್ಮಿಕ ಮನೋಭಾವ ದವರೂ ಆಗಿರುವಂತೆ ಮುಗ್ಧಸ್ವಭಾವದವರೂ ಆಗಿದ್ದರು. ಈ ಮುಗ್ಧತೆ ಅವರ ಬದುಕಿನಲ್ಲಿ ಹಲವು ಕಷ್ಟಗಳಿಗೆ ಎಡೆಮಾಡಿಕೊಟ್ಟಿತೆನ್ನಬೇಕು.

ಜೀವನದ ಪೂರ್ವಾರ್ಧವನ್ನು ಹಾಯಾಗಿ ಕಳೆದ ಚಂದ್ರಯ್ಯನವರು ಉತ್ತರಾರ್ಧದಲ್ಲಿ ದಾರುಣವಾದ ಕಷ್ಟವನ್ನು ಅನುಭವಿಸಿದರು. ಅವರ ಇಬ್ಬರು ತಮ್ಮಂದಿರು ಬೇರೆ ಯಾಗಿ ಇವರನ್ನು ಏಕಾಕಿಯನ್ನಾಗಿ ಮಾಡಿ, ಅವರ ಮುಗ್ಧಮನಸ್ಸಿನ ಸ್ವಾಸ್ಥ್ಯವನ್ನು ಕೆಡಿಸಿದರೆ, ಆಗಂತುಕ ಪ್ಲೇಗಬೇನೆ ಬಂದು ಊರುಬಿಡುವ ಪರಿಸ್ಥಿತಿಯುಂಟಾಗಿ ಇನ್ನೊಂದು ರೀತಿಯಿಂದ ಮಾನಸಿಕ ನೆಮ್ಮದಿ ಕದಡಿತು. ಆಮೇಲೆ ಕ್ರಮವಾಗಿ ಅವರ ಆರ್ಥಿಕಸ್ಥಿತಿಯೂ ಕೆಟ್ಟಿತು. ತಮ್ಮ ಪಾಲಿನ ಹೊಲವನ್ನು ಕೇವಲ ಎರಡು ನೂರು ರೂಪಾಯಿಗಳಿಗೆ ಒತ್ತಿ ಹಾಕಬೇಕಾದ ಪರಿಸ್ಥಿತಿ ನಿರ್ಮಾಣವಾಯಿತು. ಹೀಗಾಗಿ ಅನುಕೂಲಸ್ಥರಾಗಿದ್ದ ಅವರಲ್ಲಿ ಬಡತನದ ವ್ಯಾಧಿ ಪ್ರವೇಶಿಸಿತು. ಒತ್ತಿ ಹಾಕಿದ ಹೊಲ ಸಾಲ ತೀರಿಸಲಿಕ್ಕಾಗದೆ ಬಡ್ಡಿ ಹೆಚ್ಚಾಗಿ ಕೊನೆಗೆ ಕೈಬಿಟ್ಟೇ ಹೋಯಿತು. ಸಾಲದ್ದಕ್ಕೆ ಬರಗಾಲವೂ ಕಾಣಿಸಿಕೊಂಡು, ಜೀವನನಿರ್ವಹಣೆಯೇ ಕಷ್ಟದ್ದಾಯಿತು. ದಿನದಿನಕ್ಕೂ ಉಲ್ಬಣಿಸುತ್ತಿರುವ ಆರ್ಥಿಕ ವಿಷಮಸ್ಥಿತಿಯನ್ನು ಎದುರಿಸುವುದೇ ದುಸ್ತರ ವಾದಾಗ ಅವರ ಇಬ್ಬರು ಮಕ್ಕಳು (ವೀರಯ್ಯ, ಪಂಚಾಕ್ಷರಯ್ಯ) ಒಬ್ಬರ ನಂತರ ಒಬ್ಬರು ಕಾಯಿಲೆಗೆ ತುತ್ತಾಗಿ, ಸರಿಯಾದ ಉಪಚಾರ ದೊರೆಯದೆ ಅಗಲಿಹೋದರು. ಆಗ ಚಂದ್ರಯ್ಯನವರ ಚೈತನ್ಯ ಉಡುಗಿ ಹೋಯಿತು. ಮುಂದೆ ದಾರಿಕಾಣದೆ ಅಸಹಾಯಕರಾಗಿ ಕುಳಿತುಬಿಟ್ಟರು.

ಚಂದ್ರಯ್ಯನವರ ಧರ್ಮಪತ್ನಿ ವೀರಮ್ಮನವರಿಗೀಗ ಮುಗಿಲೇ ಕಳಚಿ ಬಿದ್ದಂತಹ ಪರಿ ಸ್ಥಿತಿ. ಆರ್ಥಿಕ ವಿಷಮಸ್ಥಿತಿ, ಮಕ್ಕಳನ್ನು ಕಳೆದುಕೊಂಡ ದುಃಖ, ವಿದ್ಯಾಸಂಪನ್ನ ರಾಗಿದ್ದರೂ ಕಂಗೆಟ್ಟ ಪತಿಯ ದಾರುಣ ಅವಸ್ಥೆ, ರಟ್ಟೆಬಲಿಯದ ಕಂದಮ್ಮಗಳ ಪಾಲನೆ ಮಾಡಬೇಕಾದ ಹೊಣೆಗಾರಿಕೆ, ಪರಿಸ್ಥಿತಿಯನ್ನು ಹೇಗೆ ಎದುರಿಸಬೇಕು? ಜೀವನವನ್ನು ಹೇಗೆ ಸಾಗಿಸಬೇಕು? ಆಶ್ರಯವೆಲ್ಲಿ ? ಯೋಚಿಸಿಯೇ ಯೋಚಿಸಿದರು. ಯೋಚನೆಯ ವರ್ತುಳ ಹಿಗ್ಗುತ್ತ ಹಿಗ್ಗುತ್ತ ಕಗ್ಗತ್ತಲೆಯ ಕೂಪವಾಯಿತು. ಎಲ್ಲಿಯೂ ಒಂದು

ಬೆಳಕಿನ ಕಿರಣ ಕಾಣದಾಯಿತು. ಭವಿಷ್ಯತ್ತು ಬಹಳ ಭೀಕರವಾಗಿ. ಬದುಕುವುದೇ ಅಸಾಧ್ಯವೆನಿಸತೊಡಗಿತು. ಇಂಥ ಪರಿಸ್ಥಿತಿಯಲ್ಲಿ ಅವರಿಗೆ ಹೊಳೆದ ಉಪಾಯ ಒಂದೇ. ಅದೆಂದರೆ ಮಕ್ಕಳೊಂದಿಗೆ ಭವಿಷ್ಯತ್ತಿನ ಭೀಕರತೆಯನ್ನು ತಪ್ಪಿಸಿಕೊಳ್ಳಲು ಪ್ರಾಣ ನೀಗುವುದು. ಈ ಉಪಾಯ ಹೊಳೆದದ್ದೇ ತಡ, ಮಕ್ಕಳನ್ನು ಕಟ್ಟಿಕೊಂಡು ಬಾವಿ ಬೀಳಲು ಹೊರಟೇ ಬಿಟ್ಟರು. ಚಿಂತೆ, ವ್ಯಾಕುಲತೆ, ಕಳವಳಗಳಿಂದ ತುಂಬಿದ ಈ ತಾಯಿ ಹೀಗೆ ಹೊರಟಿರುವಾಗ ಎದುರಿಗೆ ದೇವತೆಯಂತೆ ಬಂದಳು ಒಬ್ಬ ಅಜ್ಜಿ. 'ಏನು ವೀರಮ್ಮಾ, ಮಕ್ಕಳನ್ನು ಕರೆದುಕೊಂಡು ಎಲ್ಲಿಗೆ ಹೊರಟಿರುವೆ?' ಎಂದು ಕೇಳಿದಳು. ದುಃಖತಪ್ತ ವೀರಮ್ಮನವರಿಗೆ ತತ್‌ಕ್ಷಣಕ್ಕೆ ಏನು ಹೇಳಬೇಕೋ ತಿಳಿಯಲಿಲ್ಲ. ಆದರೂ ಸತ್ಯವನ್ನು ಮರೆಮಾಚಲಿಕ್ಕೆ ಅವರಿಂದಾಗಲಿಲ್ಲ. ತಮ್ಮ ತತ್ಕಾಲದ ಅಸಹಾಯಕ ಸ್ಥಿತಿಯನ್ನೂ ಪ್ರಾಣಾರ್ಪಣಕ್ಕೆ ಸಿದ್ಧವಾಗಿರುವುದನ್ನೂ ಹೇಳಿಯೇಬಿಟ್ಟರು.

ಜೀವನದ ಹಲವು ಕಷ್ಟಕೋಟಲೆಗಳನ್ನು ಅನುಭವಿಸಿದ ಆ ಅಜ್ಜಿ ವೀರಮ್ಮನವರನ್ನು ಹತ್ತಿರ ಕರೆದು, ಮೈದಡವಿ, ಸಾಂತ್ವನ ನೀಡಿದಳು; ಬದುಕುವ ದಾರಿಯನ್ನು ತೋರಿಸಿ ಕೊಟ್ಟಳು. ಆಗ ಆ ಅಜ್ಜಿ ಹೇಳಿದ ಮಾತುಗಳ ತಿರುಳು ಇಷ್ಟು: 'ಪ್ರಾಣಾರ್ಪಣ ಮಾಡುವುದು ಉಚಿತವಲ್ಲ. ಅದು ಪಾಪದ ಕಾರ್ಯ. ಅದರಲ್ಲೂ ಈ ಮಕ್ಕಳ ಆಹುತಿಯನ್ನು ಶಿವನು ಮೆಚ್ಚಲಾರ. ಧೈರ್ಯದಿಂದ ಬದುಕಬೇಕು. ನೀವು ಹೇಗೂ ಜಂಗಮರಿದ್ದೀರಿ. ಭಿಕ್ಷಾ ಬೇಡಿ ಬದುಕಲು ನಿಮಗೆ ಹಕ್ಕಿದೆ. ಜಂಗಮರ ಮಕ್ಕಳು ಬೇಡಲು ಬಂದರೆ ನಮ್ಮ ಜನರು 'ಇಲ್ಲ' ಎನ್ನುವುದಿಲ್ಲ. ತಾಯಿ! ಈ ದಾರಿಯಲ್ಲಿ ನಡೆ. ಮಕ್ಕಳನ್ನು ಬೆಳೆಸು. ನಿನಗೆ ಅವರಿಂದ ಒಳ್ಳೆಯದಾಗುವುದು'. ಇಷ್ಟು ಹೇಳುವುದರ ಜೊತೆಗೆ, ತನ್ನ ಕಡೆಗಿದ್ದ ಒಂದು ಅರಿವೆಯನ್ನು ಹರಿದು ಜೋಳಿಗೆಯನ್ನು ಮಾಡಿಕೊಟ್ಟಳು. ವೀರಮ್ಮನಿಗೆ ಏನೋ ಒಂದು ಸಮಾಧಾನ ದೊರಕಿದಂತಾಯಿತು. ಮುಳುಗುತ್ತಿರುವವನಿಗೆ ಹುಲ್ಲುಕಡ್ಡಿಯು ಆಸರೆ ಸಿಕ್ಕಂತಾಯಿತು. ಆ ಹೊತ್ತಿನಲ್ಲಿ ಆ ಅಜ್ಜಿ ವೀರಮ್ಮನನ್ನೂ ಮಕ್ಕಳನ್ನೂ ತನ್ನ ಜೊತೆಗೇ ಊರಿಗೆ ಕರೆದುತಂದು ಬಿಟ್ಟಳು. ಬದುಕಿಗೆ ವಿದಾಯ ಹೇಳಹೊರಟಿದ್ದ ವೀರಮ್ಮನವರು, ಧೀರಮನಸ್ಸಿನಿಂದ ಆ ಅಜ್ಜಿಯ ಆದೇಶದಂತೆ ನಡೆದುಕೊಂಡರು. ಮಕ್ಕಳು ಕುರುಡಗಿಯನ್ನೊಳಗೊಂಡು ಗುಜಮಾಗಡಿ, ಕರಟಗೇರಿ, ಮುಯಿಲಗೋಳ ಗ್ರಾಮಗಳಲ್ಲಿ ಧರ್ಮಕೋರಾನ್ನ ಮಾಡಿಕೊಂಡು ತಮ್ಮ ಕುಟುಂಬವನ್ನು ಸಲಹತೊಡಗಿದರು. ಇನ್ನೂ ಹತ್ತುವರ್ಷಗಳು ತುಂಬದ ಎಳೆ ವಯಸ್ಸಿನಲ್ಲಿಯೇ ಆರ್. ಸಿ. ಹಿರೇಮಠರು ಬದುಕಿನೊಂದಿಗೆ ಹೋರಾಟ ಪ್ರಾರಂಭಿಸಬೇಕಾಯಿತು.

ಧರ್ಮಕೋರಾನ್ನದಿಂದ ಉಪಜೀವನ ಸಾಗಿಸುತ್ತಲೇ ಹಿರೇಮಠರು ಶಾಲೆಯ ಅಭ್ಯಾಸವನ್ನು ಮುಂದುವರಿಸಿದರು. ಆದರೆ ಅವರು ಶಾಲೆಯಲ್ಲಿ ಕಳೆದ ಅವಧಿಗಿಂತ, ದುಡಿಮೆಯಲ್ಲಿ ಕಳೆದ ಅವಧಿಯೇ ಹೆಚ್ಚು. ಆ ಆ ಸುಗ್ಗಿಗಳಲ್ಲಿ ಅವರು ಹೊಲಹೊಲಗಳಿಗೂ

ಕೆಲಸ ಮಾಡಲು ಹೋಗಬೇಕಾಗುತ್ತಿತ್ತು. ಹೀಗಿದ್ದರೂ ಶಾಲೆಯ ಅಭ್ಯಾಸದಲ್ಲಿ ಹಿಂದೆ ಬಿದ್ದವರಲ್ಲ. ಗಣಿತ ಹಾಗೂ ಕನ್ನಡಗಳಲ್ಲಿ ತಮಗಿರುವ ವಿಶೇಷ ಆಸಕ್ತಿಯನ್ನು ಆಗಲೇ ಪ್ರಕಟಪಡಿಸಿದ್ದರು. ಅನಿಯಮಿತವಾಗಿ ಶಾಲೆಗೆ ಬರುವ ಪರಿಸ್ಥಿತಿಯಿದ್ದರೂ ಅವರ ಸ್ಮರಣಶಕ್ತಿ, ವಿಚಾರಶಕ್ತಿಗಳು ಅವರ ಶಿಕ್ಷಕರನ್ನು ಬೆರಗುಗೊಳಿಸಿದ್ದವು. ಹಿರೇಮಠರ ಬುದ್ಧಿಸಾಮರ್ಥ್ಯವನ್ನು ಅರಿತುಕೊಂಡ ಶಾಲಾಧ್ಯಾಪಕರು, ಅವರ ಬಗ್ಗೆ ಅತ್ಯಂತ ವಾತ್ಸಲ್ಯಭಾವ ತಳೆದಿದ್ದರು. ಹಾಗೂ–ಹೀಗೂ ಕುರುಡಗಿಯಲ್ಲಿ ಹಿರೇಮಠರು ಪೂರ್ವಪ್ರಾಥಮಿಕಶಿಕ್ಷಣವನ್ನು ಮುಗಿಸಿದರು. ಅನಂತರದ ಶಿಕ್ಷಣದ ಸೌಕರ್ಯ ಕುರುಡಗಿಯಲ್ಲಿ ಇರಲಿಲ್ಲ. ಹಿರೇಮಠರಿಗೆ ಇನ್ನೂ ಓದಬೇಕೆಂಬ ಬಲವಾದ ಆಶೆಯಿತ್ತು, ಆದಕ್ಕೆ ಶಿಕ್ಷಕರ ಪ್ರೋತ್ಸಾಹವಿತ್ತು.

ಬದುಕುವುದೇ ಸಮಸ್ಯೆಯಾಗಿರುವಾಗ ಶಿಕ್ಷಣವನ್ನು ಮುಂದುವರಿಸುವುದೆಂತು ? ಅದೊಂದು ಬಹುದೊಡ್ಡ ಪ್ರಶ್ನಾರ್ಥಕ ಚಿಹ್ನವಾಗಿರುವಾಗಲೂ ಯಾವುದೋ ದೂರದ ಆಶೆಯಿಂದ ಅವರು ಗದಗಿಗೆ ಬಂದರು. ಗದಗಿನಲ್ಲಿ ಅವರಿಗೆ ಬಂಗಾರಶೆಟ್ಟರ ಪೆಟ್ರೋಲ್ ಪಂಪಿನಲ್ಲಿ ತಾತ್ಕಾಲಿಕವಾಗಿ ಕೆಲಸ ದೊರಕಿತು. ಹೊಟ್ಟೆಯ ಪ್ರಶ್ನೆ ಸ್ವಲ್ಪ ಮಟ್ಟಿಗೆ ಬಿಟ್ಟಂತಾಯಿತು. ಅಲ್ಲಿ ಕೆಲಸ ಮಾಡುತ್ತ ಸ್ವಲ್ಪ ದಿನಗಳನ್ನು ಕಳೆಯುವಷ್ಟರಲ್ಲಿ ಒಂದು ಸಂಗತಿ ನಡೆಯಿತು : ಒಂದುದಿನ ಬಾಲಕ ರುದ್ರಯ್ಯನವರು ತಾವು ಕೆಲಸ ಮಾಡುತ್ತಿರುವ ಪೆಟ್ರೋಲ ಪಂಪಿನ ಸಮೀಪದಲ್ಲಿಯೇ ಇರುವ ಪ್ರಾಥಮಿಕಶಾಲೆಯ ಕಡೆಗೆ ಹೋಗಿದ್ದರು. ಶಾಲೆಯನ್ನು ಕಾಣುವುದು ಅವರ ಅತ್ಯಂತ ಒಲವಿನ ವಿಷಯವಾಗಿತ್ತು. ಅವರ ಆ ಒಲವು ಅವರನ್ನು ಆ ಕಡೆಗೆ ಎಳೆದುಕೊಂಡು ಹೋಗಿತ್ತು. ರುದ್ರಯ್ಯನವರು ಶಾಲೆಗೆ ಹೋದಾಗ ಶಾಲಾಧಿಕಾರಿಗಳು ಅಲ್ಲಿಗೆ ಬಂದಿದ್ದರು. ಅವರು ಆರನೆಯ ವರ್ಗದ ತಪಾಸಣೆ ನಡೆಸಿದ್ದರು. ರುದ್ರಯ್ಯನವರು ಕುತೂಹಲಿಗಳಾಗಿ ಅದನ್ನು ನೋಡುತ್ತ ಅಲ್ಲಿಯೇ ನಿಂತುಕೊಂಡರು. ಶಾಲಾಧಿಕಾರಿಗಳು ಆ ಈ ಪ್ರಶ್ನೆಗಳನ್ನು ಕೇಳುತ್ತ 'ವೇಣಿಸಂಹಾರ' ಅಂದರೇನು ? ಎಂದು ಕೇಳಿದರು. ವರ್ಗದ ಹುಡುಗರಾರಿಗೂ ಅದರ ಅರ್ಥ ಹೇಳಲಿಕ್ಕಾಗಲಿಲ್ಲ. ಕುರುಡಗಿಯ ಪ್ರಾಥಮಿಕ ಶಾಲೆಯ ಶಿಕ್ಷಕರು ಇಂಥ ಪದಗಳನ್ನು ಅರ್ಥೈಸುವ ರೀತಿಯನ್ನು ಹೇಳಿಕೊಟ್ಟಿದ್ದರು. ರುದ್ರಯ್ಯನವರು ತಮ್ಮ ಶಿಕ್ಷಕರು ಕಲಿಸಿಕೊಟ್ಟ ರೀತಿಯಲ್ಲಿ ವೇಣಿ ಮತ್ತು ಸಂಹಾರ ಶಬ್ದಗಳನ್ನು ಬಿಡಿಸಿಕೊಂಡು ಅರ್ಥಮಾಡಿಬಿಟ್ಟರು. ಇದ್ದಕ್ಕಿದ್ದಂತೆ ಯಾವ ವಿದ್ಯಾರ್ಥಿಯಿಂದಲೂ ಸಾಧ್ಯವಾಗದ ಅರ್ಥವನ್ನು ಈ ಆಗಂತುಕ ಹುಡುಗ ಹೇಳಿದ್ದು. ಅಲ್ಲಿಯ ಶಿಕ್ಷಕರ, ಅಧಿಕಾರಿಗಳ ಗಮನ ಸೆಳೆಯುವಂತಾಯಿತು. ಅಲ್ಲಿಯ ಪ್ರಸಿದ್ಧ ಶಿಕ್ಷಕರಾದ ಕ. ಬ. ಅಂಗಡಿಯವರು ಈ ಹುಡುಗನ ಬಗ್ಗೆ ಹೆಚ್ಚು ಆಸಕ್ತಿ ತಳೆದರು. ಈತನ ಊರು, ತಾಯಿ–ತಂದೆಗಳ ವಿಷಯ ತಿಳಿದುಕೊಂಡು, ಈತನಿಗೆ ತಮ್ಮ ಶಾಲೆಯಲ್ಲಿ ಓದಲು ಅವಕಾಶಮಾಡಿಕೊಡಲು ಮುಂದಾದರು. ಬಂಗಾರಶೆಟ್ಟರ ಪೆಟ್ರೋಲ್

ಮಠದ ಮೇಲ್ವಿಚಾರಕರಾಗಿದ್ದ ಬ್ಯಾಡಗಿ ಶಿವಪ್ಪನವರು ಅಂಗಡಿ ಮಾಸ್ತರರ ವಿಚಾರವನ್ನು ಸ್ವಾಗತಿಸಿ, ರುದ್ರಯ್ಯನವರಿಗೆ ಶಾಲೆ ಕಲಿಯಲು ಅನುಕೂಲ ಮಾಡಿಕೊಟ್ಟರು. ಶಾಲೆಗೆ ಪ್ರವೇಶ ಪಡೆದ ಮೇಲೆ ರುದ್ರಯ್ಯನವರು ತಮ್ಮ ಅಚ್ಚುಕಟ್ಟಾದ, ಲಕ್ಷಣಯುಕ್ತವಾದ ಬರವಣಿಗೆಯಿಂದ, ಅಸಾಧಾರಣವಾದ ಸ್ಮರಣಶಕ್ತಿಯಿಂದ, ವಿನಯಸಂಪನ್ನವಾದ ನಡೆ-ನುಡಿಗಳಿಂದ ಆ ಶಾಲೆಯ ಶಿಕ್ಷಕರ ಪ್ರೀತಿಗೆ ಪಾತ್ರರಾದರು. ಆ ಪ್ರಾಥಮಿಕಶಾಲೆಯ ಐದು ವರುಷಗಳ ವಿದ್ಯಾಭ್ಯಾಸ ಅವರ ಮುಂದಿನ ಶಿಕ್ಷಣಕ್ಕೆ ಭದ್ರ ಬುನಾದಿಯನ್ನು ಹಾಕಿತು.

ಈ ಐದೂ ವರುಷಗಳ ಅವಧಿಯಲ್ಲಿ ಅವರು ಎಂದೂ ತಮ್ಮ ಜೀವನದ ಬಗ್ಗೆ ನಿಶ್ಚಿಂತರಾಗಿರುವ ಗಳಿಗೆ ಬರಲಿಲ್ಲ. ಮನೆತನದ ಬಡತನಕ್ಕೆ ಮತ್ತೆಮತ್ತೆ ಕಣ್ಣುಮುಂದೆ ಬಂದು ನಿಲ್ಲುತ್ತಿತ್ತು. ಗದಗಿನಲ್ಲಿ ತಮ್ಮ ಕುಟುಂಬದವರ ಉಪಜೀವನಕ್ಕೆ ಏನಾದರೂ ವ್ಯವಸ್ಥೆಯಾಗಬಹುದೆಂದು ಭಾವಿಸಿ ಅವರು ತಮ್ಮ ಪರಿವಾರವನ್ನೆಲ್ಲ ಅಲ್ಲಿಗೆ ಕರೆದುಕೊಂಡು ಬಂದರು. ವಿದ್ಯಾಭ್ಯಾಸದ ಜೊತೆಗೆ ಪ್ರಪಂಚದ ಭಾರವನ್ನೂ ಹೊರುತ್ತ ಎದೆಗಾರಿಕೆಯಿಂದಲೇ ಮುನ್ನಡೆದರು. ಗದಗಿನ ಶಿರಹಟ್ಟಿ ಫಕೀರಸ್ವಾಮಿಗಳ ಮಠದಲ್ಲಿ ಒಂದು ಪುಟ್ಟಮನೆಯನ್ನು ಬಾಡಿಗೆಗೆ ಹಿಡಿದು ಬಾಳಬಂಡಿಯನ್ನು ಮುನ್ನಡೆಸಿದರು.

ಹೇಗೆ-ಹೇಗೋ ಜೀವನಸಾಗಿರುವಾಗ ಇದ್ದಕ್ಕಿದ್ದಂತೆ ರುದ್ರಯ್ಯನವರ ತಂದೆ ಚಂದ್ರಯ್ಯನವರು ತೀರಿಕೊಂಡರು. ಅವರ ಶವಸಂಸ್ಕಾರವೇರ್ಪಡಿಸುವಷ್ಟೂ ಆರ್ಥಿಕ ಅನುಕೂಲತೆಯಿಲ್ಲದ ರುದ್ರಯ್ಯನವರು ಅಂಗಡಿ-ಅಂಗಡಿಗಳಲ್ಲಿ ಭಿಕ್ಷೆ ಬೇಡಿ, ಆ ಕಾರ್ಯವನ್ನು ನಿರ್ವಹಿಸಬೇಕಾಯಿತು. ಎಳೆಯ ವಯಸ್ಸು, ಅಸಹನೀಯ ದುಃಖ ಇಂಥ ದುರ್ಧರ ಪ್ರಸಂಗದಲ್ಲಿಯೂ ಅವರು ತೋರಿದ ಸ್ಥೈರ್ಯ ಅಸದೃಶವಾದುದು. ಚಂದ್ರಯ್ಯನವರು ಲಿಂಗೈಕ್ಯರಾದಾಗ ಅವರ ಧರ್ಮಪತ್ನಿ ವೀರಮ್ಮನವರಿಗೆ ಬರಸಿಡಿಲು ಬಡಿದಂತಹ ಆಘಾತ. ಅವರ ಕಣ್ಣೀರಿಗೆ ಆಗ ಕೊನೆಯೇ ಇರಲಿಲ್ಲ. ಅತ್ತದ್ದೋ ಅತ್ತದ್ದು. ಅತ್ತು ಅತ್ತು ಕಣ್ಣು ಕಳೆದುಕೊಂಡರು. ರುದ್ರಯ್ಯನವರ ಪಾಲಿಗೆ ಇದೂ ಒಂದು ದುಃಖದ ಪ್ರಸಂಗವೇ.

ಮನೆಯಲ್ಲಿ ಕಣ್ಣಿಲ್ಲದ ತಾಯಿ. ಒಬ್ಬ ತಂಗಿ ಮತ್ತು ಒಬ್ಬ ಚಿಕ್ಕ ತಮ್ಮ ( ಈ ಮಧ್ಯೆ ತಾಯಿಗೆ ಅಚ್ಚುಮೆಚ್ಚಿನವನಾಗಿದ್ದ ಅಣ್ಣ ಶಾಂತಯ್ಯನೂ ಕಣ್ಮರೆಯಾಗಿದ್ದನು). ಈ ಮೂವರನ್ನು ಸಲಹುವ ಭಾರವೂ ಈಗ ರುದ್ರಯ್ಯನವರ ಮೇಲೆ. ಧರ್ಮಕೋರ್ಟಿನ ಹಾಗೂ ಮೆಡಿಕಲ್ ಶಾಪಿನಲ್ಲಿಯೂ ಕೆಲಸ ನಿರ್ವಹಿಸುತ್ತ, ಅಂತೂ ದಿನವನ್ನು ಮುಂದುವರಿಸಿದರು.

ಪ್ರಾಥಮಿಕಶಾಲೆಯಲ್ಲಿ ಸಿದ್ಧರಾಮಶೆಟ್ಟರ ಮತ್ತು ಕ. ಬ. ಅಂಗಡಿ ಶಿಕ್ಷಕರ ಸಹಾನುಭೂತಿಯನ್ನು ಪಡೆದ ಹಿರೇಮಠರ ವಿದ್ಯಾಭ್ಯಾಸ ಚೆನ್ನಾಗಿಯೇ ನಡೆಯಿತು. ಏಳನೆಯ ವರ್ಗವನ್ನು ಕಲಿಸುತ್ತಿದ್ದ ಸಿದ್ಧರಾಮಶೆಟ್ಟರು ಶಿಸ್ತಿನ ಶಿಕ್ಷಕರು. ಆ ಕಾಲದಲ್ಲಿ ಆ ಭಾಗದಲ್ಲಿ ಮುಲ್ಕೀಪರೀಕ್ಷೆಗೆ ವಿದ್ಯಾರ್ಥಿಗಳನ್ನು ತರಬೇತುಗೊಳಿಸುವುದರಲ್ಲಿ ಅವರು ತುಂಬ ಪ್ರಸಿದ್ಧರಾಗಿದ್ದರು. ಗಣಿತದಲ್ಲಂತೂ ಅವರು ಎತ್ತಿದ ಕೈ ಎನಿಸಿದ್ದರು. ಅವರಲ್ಲಿ ತರಬೇತು ಪಡೆದ ರುದ್ರಯ್ಯನವರು ಗಣಿತವನ್ನೊಳಗೊಂಡು ಎಲ್ಲ ವಿಷಯಗಳಲ್ಲಿ ತುಂಬ ಪ್ರಗತಿಯನ್ನು ಸಾಧಿಸಿದರು. ತತ್ಪರಿಣಾಮವಾಗಿ ೧೯೩೪ ರಲ್ಲಿ ನಡೆದ ಮುಲ್ಕೀ ಪರೀಕ್ಷೆಯಲ್ಲಿ ಧಾರವಾಡ ಜಿಲ್ಲೆಗೆ ಪ್ರಥಮಸ್ಥಾನ ಪಡೆದು ಉತ್ತೀರ್ಣರಾದರು.

ಮುಲ್ಕೀ ಪರೀಕ್ಷೆಯಾದ ಮೇಲೆ ನೌಕರಿಯನ್ನು ಹಿಡಿಯಬೇಕೆಂಬ ಬಯಕೆ ಅಂದಿನ ಪರಿಸ್ಥಿತಿಯಲ್ಲಿ ರುದ್ರಯ್ಯನವರಲ್ಲಿ ಸಹಜವಾಗಿಯೇ ಮೂಡಿತು. ಆಗ ಸ್ಕೂಲಬೋರ್ಡ ಚೇರಮನ್‌ರಾಗಿದ್ದ ಗದಗಿನ ಶ್ರೀ ಶಿರೋಳ ವಕೀಲರನ್ನು ಭೆಟ್ಟಿಯಾಗಿ ಶಿಕ್ಷಕವೃತ್ತಿಗೆ ಸೇರುವ ಯೋಜನೆಯನ್ನು ಮಾಡಿದರು. ಆದರೆ ಬ್ಯಾಡಗಿ ಶಿವಪ್ಪನವರು ಇಂಗ್ಲಿಷ್ ಕಲಿಯುವುದರ ಕಡೆಗೆ ಅವರ ಗಮನ ಸೆಳೆದರು. ಅಷ್ಟಲ್ಲದೆ ಅವರೇ ಇಂಗ್ಲಿಷ್ ಹೇಳಲೂ ಪ್ರಾರಂಭಿಸಿದರು. ಒಂದುದಿನ ಪೆಟ್ರೋಲ್ ಹಾಕಿಸಿಕೊಳ್ಳಲು ಬಂದಿದ್ದ ಡಾ. ತುಮ್ಮಿನಕಟ್ಟಿಯವರು ಪೆಟ್ರೋಲ್ ಹಾಕುವ ಕಾರ್ಯದಲ್ಲಿ ತೊಡಗಿದ್ದ ರುದ್ರಯ್ಯನವರ ಬಗ್ಗೆ ಕುತೂಹಲದಿಂದ ವಿಚಾರಿಸಿದರು. 'ಯಾರು ಈ ಹುಡುಗ ? ಪೆಟ್ರೋಲ್ ಪಂಪ ಒತ್ತುವ ಕೆಲಸವನ್ನು ಬಹಳದಿನಗಳಿಂದ ಮಾಡುತ್ತಿದ್ದಾನೆ. ಇವನು ಶಾಲೆಗೇನಾದರೂ ಹೋಗುತ್ತಾನೆಯೇ ?' ಎಂದು ಮುಂತಾಗಿ ಕೇಳಿದರು. ಬ್ಯಾಡಗಿ ಶಿವಪ್ಪನವರು ರುದ್ರಯ್ಯನವರ ಪರಿಚಯ ಮಾಡಿಕೊಟ್ಟು, ಮುಲ್ಕೀ ಪರೀಕ್ಷೆಯಲ್ಲಿ ಪಡೆದ ಯಶಸ್ಸನ್ನು ಅತ್ಯಂತ ಅಭಿಮಾನದಿಂದ ತಿಳಿಸಿಕೊಟ್ಟರು. ಡಾ. ತುಮ್ಮಿನಕಟ್ಟಿಯವರು ರಸಾಯನಶಾಸ್ತ್ರದಲ್ಲಿ ತುಂಬ ಪರಿಣಿತರು. ಶಿಕ್ಷಣಪ್ರೇಮಿಗಳು. ಅಷ್ಟಲ್ಲದೆ ಅವರು ಉದಾರಹೃದಯದವರು ಆಗಿದ್ದರು. ಶಿವಪ್ಪನವರ ಮಾತು ಮುಗಿಯುತ್ತಿದ್ದಂತೆಯೇ ಅವರು "ಈ ಹುಡುಗ ಹಾಯ್‌ಸ್ಕೂಲಿಗೆ ಸೇರಬೇಕು. ಇನ್ನೂ ಓದಬೇಕು ಅವನ ಸ್ಕೂಲ್ ಫೀ ವ್ಯವಸ್ಥೆ ನಾನು ಮಾಡುತ್ತೇನೆ" ಎಂದು ಹೇಳಿ. ತಮ್ಮ ಕೆಮಿಕಲ್ ವರ್ಕ್ಸದಲ್ಲಿ ದಿನಾಲು ಮುಂಜಾನೆ ಸುಮಾರು ಎರಡು ತಾಸು ಕೆಲಸಮಾಡಲು ಸೂಚಿಸಿದರು. ಅವರ ಈ ಸೂಚನೆಯನ್ನು ಮನ್ನಿಸಿ. ಅವರಲ್ಲಿ ಕಾರ್ಯಮಾಡುತ್ತ ಅಭ್ಯಾಸ ಮುಂದುವರಿಸಲು ರುದ್ರಯ್ಯನವರು ನಿರ್ಧರಿಸಿದರು. ಶಿಕ್ಷಣ ಇಲ್ಲಿಗೆ ಮುಗಿಯಿತು ಎಂದೇ ಭಾವಿಸಿದ್ದ ಅವರು, ಮತ್ತೊಂದು ಅಡಿ ಮುಂದಿಟ್ಟರು.

ನಿತ್ಯ ಮುಂಜಾನೆ ಕೆಮಿಕಲ್ ವರ್ಕ್ಸದಲ್ಲಿ ಕೆಲಸ ಮಾಡುವ ಪ್ರಸಂಗ ಬಂದ ಮೇಲೆ ಕಂತಿ ಭಿಕ್ಷೆಯ ಕಾರ್ಯವನ್ನು ನಿರ್ವಹಿಸುವುದು ಅಸಾಧ್ಯವೆನಿಸಿತು. ಅಲ್ಲದೆ ದಿನಗಳೆದಂತೆ ಅಭ್ಯಾಸವೂ ಹೆಚ್ಚುತ್ತ ನಡೆಯಿತು. ಈ ಸಂದರ್ಭದಲ್ಲಿ ಕುರುಡಿಯಾದ ಅವರ ತಾಯಿ

ಕಲಿಸಿ ಮಗ ಷಡಕ್ಷರಯ್ಯನವರ ಕೈಹಿಡಿದುಕೊಂಡು ಆ ಕಾರ್ಯಮಾಡಬೇಕಾಯಿತು. ಹಾಯ್‌ಸ್ಕೂಲು ಶಿಕ್ಷಣದ ಕೊನೆಯ ಹಂತಕ್ಕೆ ಬರುವಷ್ಟರಲ್ಲಿ ಗದಗಿನ ತೋಂಟದಾರ್ಯಮಠದ ಫ್ರೀ ಬೋರ್ಡಿಂಗಿನಲ್ಲಿ ಪ್ರವೇಶ ದೊರಕಿ, ವೈಯಕ್ತಿಕವಾಗಿ ಅವರ ಎರಡು ಹೊತ್ತಿನ ಊಟದ ಸಮಸ್ಯೆ ಬಗೆಹರಿಯಿತು. ಅಷ್ಟಾದರೂ ಅವರಿಗೆ ತಮ್ಮ ತಾಯಿ, ತಂಗಿ, ತಮ್ಮಂದಿರ ಬದುಕಿನ ಬಗ್ಗೆ ಯೋಚಿಸುವುದು ತಪ್ಪಲಿಲ್ಲ. ಆಗಲೇ ಸ್ಕಾಲರ್‌ಶಿಪ್ ಪರೀಕ್ಷೆಯಲ್ಲಿ ತೇರ್ಗಡೆಹೊಂದಿ, ತಿಂಗಳಿಗೆ ರೂ. ೫-೦೦ ಸ್ಕಾಲರ್‌ಶಿಪ್ ಪಡೆಯುತ್ತಿದ್ದ ಅವರು ಆ ಕಾಲದಲ್ಲಿ ಕುಟುಂಬನಿರ್ವಹಣೆಗೆ ಅದನ್ನು ಬಳಸಿ, ಸ್ವಲ್ಪಮಟ್ಟಿಗೆ ಪರಿಹಾರ ಕಂಡುಕೊಂಡಿದ್ದರು.

ಹಲವು ಪ್ರತಿಕೂಲತೆಗಳನ್ನು ಎದುರಿಸುತ್ತಿರುವಾಗಲೂ ಹಿರೇಮಠರು ಅಧ್ಯಯನದಲ್ಲಿ ಹಿಂದೆ ಬಿದ್ದವರಲ್ಲ. ಆಗ ಗದಗಿನ ಮುನ್ಸಿಪಲ್ ಹಾಯ್‌ಸ್ಕೂಲಿನಲ್ಲಿ ಆಮೇಲೆ ರಾಷ್ಟ್ರಪ್ರಶಸ್ತಿ ಪಡೆದ ಶ್ರೀ ಕಲ್ಮಠ, ಗದಗದಲ್ಲಿ ಖ್ಯಾತರಾದ ಶ್ರೀ ಗ್ರಾಮಪುರೋಹಿತ ಮೊದಲಾದ ಆದರ್ಶ ಶಿಕ್ಷಕರ ಒಂದು ಗುಂಪೇ ಇದ್ದಿತು. ಅವರ ಪಾಠ-ಪ್ರವಚನಗಳು ಪರಿಣಾಮಕಾರಿಯಾಗಿದ್ದುದರಿಂದ ಚಿತ್ರಗ್ರಾಹಕ ಸ್ಮರಣಶಕ್ತಿಯುಳ್ಳ ಹಿರೇಮಠರಿಗೆ ಅಧ್ಯಯನದಲ್ಲಿ ಪ್ರಗತಿ ಸಾಧಿಸುವುದು ಕಠಿಣವಾಗಲಿಲ್ಲ. ಒಮ್ಮೆ ಕೇಳಿದ್ದನ್ನು, ಒಮ್ಮೆ ಓದಿದ್ದನ್ನು ಅವರೆಂದೂ ಮರೆಯುತ್ತಿರಲಿಲ್ಲ. ಹಾಯ್‌ಸ್ಕೂಲಿನ ಎಲ್ಲ ಪರೀಕ್ಷೆಗಳಲ್ಲೂ ಅವರು ತಮ್ಮ ಪ್ರಥಮಸ್ಥಾನವನ್ನು ಅಚಲವಾಗಿರಿಸಿಕೊಂಡು, ಶಾಲೆಯ ಶಿಕ್ಷಕರೆಲ್ಲರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿ ಬೆಳೆದರು.

ಮ್ಯಾಟ್ರಿಕ್‌ದ ವರೆಗೆ ಓದಿದ್ದು, ಈ ಹಾಯ್‌ಸ್ಕೂಲಿನಲ್ಲಿಯೇ. ಅವರು ಮ್ಯಾಟ್ರಿಕ್ ಪರೀಕ್ಷೆ ಕಟ್ಟಿದ್ದು ೧೯೪೭ ರಲ್ಲಿ. ಧಾರವಾಡ ಜಿಲ್ಹೆಗೆ ಸೇರಿದ ಅವರು ತಮ್ಮ ತಾಯಿಯ ಕಣ್ಣಿನ ಉಪಚಾರಕ್ಕಾಗಿ ಧಾರವಾಡ ಕೇಂದ್ರವನ್ನು ಬಿಟ್ಟು, ವಿಜಾಪುರ ಕೇಂದ್ರವನ್ನು ತಮ್ಮ ಪರೀಕ್ಷೆಗಾಗಿ ಆರಿಸಿಕೊಂಡರು. ಆಗ ವಿಜಾಪುರದಲ್ಲಿ ನೇತ್ರಚಿಕಿತ್ಸೆಯಲ್ಲಿ ಬಹಳ ಹೆಸರಾದ ಡಾ. ಶೆಟ್ಟಿ ಇದ್ದರು.

ರುದ್ರಯ್ಯನವರಿಗೆ ತಮ್ಮ ಪರೀಕ್ಷೆಯ ಚಿಂತೆಗಿಂತ ತಾಯಿಯ ಕಣ್ಣಿನ ಚಿಂತೆಯೇ ದೊಡ್ಡದಾಗಿತ್ತು. ಪರೀಕ್ಷೆಗೆ ಎರಡು ದಿನ ಮುಂಚಿತ ವಿಜಾಪುರಕ್ಕೆ ಬಂದು, ತಮ್ಮ ಪರಿಚಯದವರಾದ ಶ್ರೀ ಬಸವರಾಜಶಾಸ್ತ್ರಿ ಕೋಡಿಕೊಪ್ಪಮಠ ಅವರ ಮನೆಯಲ್ಲಿ ಉಳಿದುಕೊಂಡು, ಡಾ. ಶೆಟ್ಟಿಯವರಲ್ಲಿ ತಾಯಿಯನ್ನು ಕರೆದುಕೊಂಡು ಹೋದರು. ಡಾಕ್ಟರರು ಆಪರೇಶನ್ ಮಾಡುವುದಾಗಿ ಹೇಳಿದರು. ಹಿರೇಮಠರು ಒಪ್ಪಿಕೊಂಡರು. ಶನಿವಾರ ಆಪರೇಶನ್, ಸೋಮವಾರ ಪರೀಕ್ಷೆ. ರುದ್ರಯ್ಯನವರ ಮನಸ್ಸು ಈಗ ಪರೀಕ್ಷೆಯ ಮೇಲಿರಬೇಕಾಗಿತ್ತು; ಆದರೆ ಪರಿಸ್ಥಿತಿ ಅದಕ್ಕೆ ಆಸ್ಪದ ಕೊಡಲಿಲ್ಲ. ಆಪರೇಶನ್, ತಾಯಿಯ ಕಣ್ಣು ಕಾಣಿಸುವುದು ಇವೇ ಅವರ ಯೋಚನೆಗಳು. ಆಪರೇಶನ್

ಮೂರನೆಯ ದಿನ ಕಾತರದಿಂದ ರುದ್ರಯ್ಯನವರು ಡಾಕ್ಟರರಿಗೆ ಕೇಳಿದರು "ನನ್ನ ತಾಯಿಗೆ ದೃಷ್ಟಿ ಬರುವುದೇ ?" ಡಾಕ್ಟರರಿಗೆ ರುದ್ರಯ್ಯನವರ ಕಾತರವನ್ನು ಕಂಡು ಒಂದು ಕ್ಷಣ ಏನು ಹೇಳಬೇಕೋ ತಿಳಿಯಲಿಲ್ಲ. ಯಾಕೆಂದರೆ ಆಪರೇಶನ್ ಮಾಡಿದ ಮೇಲೆ ದೃಷ್ಟಿ ಬರುವುದು ಅಸಾಧ್ಯವೆಂದು ಡಾಕ್ಟರರಿಗೆ ಗೊತ್ತಾಗಿತ್ತು. ಒಂದಿಷ್ಟು ತಡೆದು ಮೆಲ್ಲನೆ ಅವರು ಹೇಳಿದರು : "ನಿಮ್ಮ ತಾಯಿಗೆ ದೃಷ್ಟಿ ಬರುವ ಸಾಧ್ಯತೆ ಯಿಲ್ಲ" ಎಂದು. ಇದನ್ನು ಕೇಳಿದ ರುದ್ರಯ್ಯನವರು ಜರ್ರನೇ ಇಳಿದುಹೋದರು. ಸ್ವಲ್ಪ ಹೊತ್ತು ಮಾತೇ ಬರಲಿಲ್ಲ. ಆಶೆಯಿಂದ ಬಂದು, ತುಂಬ ನಿರಾಶೆಯನ್ನು ಹೊಂದಬೇಕಾಯಿತು. ಆಗ ಅವರಿಗಾದ ಕಳವಳ ಅಷ್ಟಿಷ್ಟಲ್ಲ. ಹೀಗೆ ಕಳವಳಪಡು ತ್ತಿರುವ ಅವರಿಗೆ ಬೆಳಗಾದರೆ ಕಾದಿತ್ತು, ಪರೀಕ್ಷೆ.

ಇಂಥ ನಿರಾಶೆ, ತಳಮಳಗಳಲ್ಲಿಯೇ ಅವರು ಮ್ಯಾಟ್ರಿಕ್ ಪರೀಕ್ಷೆಯನ್ನು ಎದುರಿಸಿದರು. ಅವರ ಆತ್ಮಬಲ ಅಸಾಧಾರಣವಾದುದೆಂದೇ ಹೇಳಬೇಕು. ಪರೀಕ್ಷೆ ಬರೆಯುತ್ತಿರು ವಂತೆ ಅವರ ಅಂತರಂಗ ಸ್ಫುರಣಗೊಂಡು ಎಲ್ಲ ಪ್ರಶ್ನೆಗಳಿಗೂ ಸಮರ್ಪಕ ಉತ್ತರ ಗಳೇ ಅವರಿಗೆ ಹೊಳೆದವು. ಆ ವರ್ಷ ಗಣಿತದಲ್ಲಿ ಪಾಸಾದವರೇ ವಿರಳ, ಆದರೆ ಹಿರೇಮಠರು ಆ ವಿಷಯದಲ್ಲಿ ೧೦೦ಕ್ಕೆ ೮೦ ಗುಣಗಳನ್ನು ಪಡೆದಿದ್ದರು. ಒಟ್ಟು ಪರೀಕ್ಷೆಯಲ್ಲಿ ಕೇಂದ್ರಕ್ಕೆ ಮೇಲುಸ್ಥಾನದಲ್ಲಿ ನಿಂತು ತಮ್ಮ ವಿಜಯಧ್ವಜವನ್ನು ಹಾರಿಸಿದ್ದರು.

ಬದುಕಿನ ವಿಪರೀತಸ್ಥಿತಿಯಲ್ಲಿ ಹಿರೇಮಠರು ಮ್ಯಾಟ್ರಿಕ್ ವರೆಗೆ ಬಂದದ್ದೇ ಒಂದು ವಿಸ್ಮಯ. ಇನ್ನು ಮುಂದಿನ ಶಿಕ್ಷಣ ಪಡೆಯುವುದು ಹೇಗೆ ತಾನೇ ಸಾಧ್ಯ ? ಆಯಿತು. ಇಷ್ಟಕ್ಕೆ ಶಿಕ್ಷಣ ನಿಲ್ಲಿಸಿ ಶಿಕ್ಷಕವೃತ್ತಿ ಕೈಕೊಳ್ಳಲು ಯೋಚಿಸಿದರು. ಅರ್ಜಿ ಹಾಕಲು ಅವರು ಧಾರವಾಡ ಜಿಲ್ಲಾ ಸ್ಕೂಲಬೋರ್ಡಿಗೆ ಹೋದರು. ಆದರೆ ಅವರ ಅರ್ಜಿ ಅಲ್ಲಿ ಇಟ್ಟಿದ್ದ ಪೆಟ್ಟಿಗೆಯ ಒಳಗೆ ಬೀಳದೆ ಹೊರಗೆ ಬಿತ್ತು. ಇದು ಅವರಿಗೆ ಆ ವೃತ್ತಿ ಬೇಡವೆಂಬು ದರ ಸಂಕೇತದಂತಿತ್ತು. ಅದನ್ನು ಕಂಡ ಅಲ್ಲಿದ್ದ ಕಾರಕೂನ ಶ್ರೀ ಕುಲಕರ್ಣಿ ಸಂಗಪ್ಪ ನವರು ಹಿರೇಮಠರಿಗೆ "ನೀ ರ್‍ಯಾಂಕ ಬಂದ ಹುಡುಗ. ಇಲ್ಲೇಕೆ ಬರುತ್ತೀ ? ಮುಂದೆ ಕಲಿ" ಎಂದು ಹೇಳಿದರು (ಇವರು ಪರಿಚಯದವರಾಗಿದ್ದರು). ಅಷ್ಟರಲ್ಲಿದೆ ವಾರದ ಮನೆ ಹಚ್ಚಿಕೊಟ್ಟು ಮುಂದಿನ ಅಭ್ಯಾಸದ ಕಡೆಗೆ ಹಿರೇಮಠರನ್ನು ತಿರುಗಿಸಿ ದರು. ಕನ್ನಡ ಶಾಲೆಯ ಶಿಕ್ಷಕರಾಗಬಯಸಿ ಬಂದ ಹಿರೇಮಠರು, ಕರ್ನಾಟಕ ಕಾಲೇ ಜಿನ ವಿದ್ಯಾರ್ಥಿಯಾಗಿ ಬಿಟ್ಟರು.

ವಿಜ್ಞಾನ ವಿಭಾಗಕ್ಕೆ ಸೇರಿಕೊಂಡಿದ್ದ ಇವರಿಗೆ ಸಕಾಲಕ್ಕೆ ಪ್ರವೇಶ ಫೀ ಕಟ್ಟಲಿಕ್ಕಾಗಲಿಲ್ಲ. ಅದಕ್ಕಾಗಿ ಅವಕಾಶ ಕೇಳಿ ಹಿರೇಮಠರು ಒಂದು ಅರ್ಜಿ ಸಲ್ಲಿಸಿದರು. ಸಂಬಂಧಿಸಿ ದವರು ಅವಕಾಶಕೊಡಲು ನಿರಾಕರಿಸಿ, ಅರ್ಜಿಯ ಮೇಲೆ 'try elsewhere' ಎಂದು

ಬರೆದು ಬಿಟ್ಟರು. ಇನ್ನೇನು ಕಾಲೇಜು ಬಿಡಬೇಕು. ಆ ಕಾಗದವನ್ನು ಹಿಡಿದುಕೊಂಡು ಕ್ಲಾಸರೂಮಿನ ಕಡೆಗೆ ಬರುತ್ತಿದ್ದಂತೆ ಪ್ರೊ. ಆರ್ ವಿ. ಜಹಾಗೀರದಾರರು (ಶ್ರೀರಂಗ) ಹಿರೇಮಠರ ಬಾಡಿದ ಮುಖವನ್ನು, ಕೈಯಲ್ಲಿ ಹಿಡಿದ ಕಾಗದವನ್ನು ನೋಡಿದರು. 'ಏನ ಆ ಕಾಗದ?' ಎಂದು ಕೇಳುತ್ತಿದ್ದಂತೆ ಅದನ್ನು ತಮ್ಮ ಕೈಗೆತ್ತಿಕೊಂಡು ನೋಡಿದರು. ಮ್ಯಾಟ್ರಿಕ್ ಪರೀಕ್ಷೆಯಲ್ಲಿ ಸಂಸ್ಕೃತದಲ್ಲಿಯೂ ಹಿರೇಮಠರಿಗೆ ಹೆಚ್ಚಿನ ಗುಣಗಳಿರುವುದನ್ನು ತಿಳಿದ ಅವರು ಆರ್ಟ್ಸ ವಿಭಾಗಕ್ಕೆ ಬರಲು ಸೂಚಿಸಿದರು. ಅಗತ್ಯವಾದ ನೆರವೂ ನೀಡಿದರು. ಹಿರೇಮಠರು ಹೀಗೆ ವಿಜ್ಞಾನದಿಂದ ಕಲಾವಿಭಾಗಕ್ಕೆ ಬಂದರು. ಪ್ರಥಮ ವರ್ಷವನ್ನು ಮುಗಿಸಿದರು. ಆ ವರ್ಷ ಅವರೇ F. Y. Arts ಪರೀಕ್ಷೆಯಲ್ಲಿ ಪ್ರಥಮ ಸ್ಥಾನವನ್ನು ಪಡೆದಿದ್ದರು. ನೋಟೀಸ ಬೋರ್ಡಿನ ಮೇಲೆ ಒಂದು ಕಡೆಗೆ ಹಿರೇಮಠರ ಪರಿಕ್ಷೆಯ ಪರಿಣಾಮವಿದ್ದರೆ, ಇನ್ನೊಂದು ಕಡೆಗೆ ಅವರು ಎರಡನೆಯ ಟರ್ಮಿನ ಫೀ ತುಂಬಬೇಕಾದುದರ ಸೂಚನೆಯಿತ್ತು. ಈ ವಿರೋಧ ಹಿರೇಮಠರ ಜೀವನದ ಬಹುಭಾಗವನ್ನು ವ್ಯಾಪಿಸಿಕೊಂಡೇ ಇದೆ. ಮಧುರಚೆನ್ನರು ತಮ್ಮ 'ಸುಖ–ದುಃಖ' ಕವಿತೆಯಲ್ಲಿ ಬರೆದಂತೆ ಹಿರೇಮಠರ ಜೀವನದಲ್ಲಿಯೂ 'ಸುಖ-ದುಃಖ ಸರಿಸವನ' ವಾಗಿಯೇ ಇವೆ.

ಹಿರೇಮಠರ ಪರೀಕ್ಷೆಯ ಪರಿಣಾಮ ಪ್ರಕಟವಾದ ಸ್ವಲ್ಪದಿನಗಳಲ್ಲಿಯೇ ಕನ್ನಡ ಸಂಶೋಧನ ಸಂಸ್ಥೆ (Kannada Research Institute)ಯ ಸಭೆಗಾಗಿ (ಆಗ ಈ ಸಂಸ್ಥೆಯ ಕಾರ್ಯಾಲಯ ಕರ್ನಾಟಕ ಕಾಲೇಜಿನಲ್ಲಿತ್ತು) ಡಾ. ಶಿ. ಚೆ. ನಂದೀಮಠ ಅವರು ಬೆಳಗಾಂವದಿಂದ ಬಂದಿದ್ದರು. ಅಕಸ್ಮಾತ್ತಾಗಿ ಅವರು ನೋಟೀಸಬೋರ್ಡ ನೋಡಿ, ಹಿರೇಮಠರ ಸಾಧನೆ ಹಾಗೂ ಫೀ ತುಂಬದ ಸ್ಥಿತಿಗಳೆರಡನ್ನೂ ಕಂಡು ಅಚ್ಚರಿ ಪಟ್ಟರು. ಸಹಜವಾಗಿ ಕಾಲೇಜು ಅಧ್ಯಾಪಕರೊಬ್ಬರಿಗೆ ಹಿರೇಮಠರ ವಿಷಯವಾಗಿ ಆಲೋಚಿಸಿದರು. ಅವರು ಅಭಿಮಾನದಿಂದಲೇ ತಮ್ಮ ವಿದ್ಯಾರ್ಥಿ ಹಿರೇಮಠರ ಜಾಣತನವನ್ನು ಪ್ರಶಂಸಿಸಿದರು. ಅವರ ಕಡುಬಡತನದ ಬಗ್ಗೆಯೂ ಒಂದು ಮಾತು ಹೇಳಿದರು. ನಂದೀಮಠರಿಗೆ ಆ ಹುಡುಗನಲ್ಲಿ ಆಸಕ್ತಿ ಉಂಟಾಯಿತು. ಅವನನ್ನು ತಮ್ಮಲ್ಲಿಗೆ ಕಳಿಸಲು ಸೂಚಿಸಿದರು.

ಕರ್ನಾಟಕ ಕಾಲೇಜಿನಲ್ಲಿಯೇ ಹಿರೇಮಠರನ್ನು ಉಳಿಸಿಕೊಳ್ಳಬೇಕೆಂದು ಪ್ರಿನ್ಸಿಪಾಲ್ ಡ್ಯಾವಿಡ್ ಮತ್ತು ಪ್ರೊಫೆಸರ್ ಮಾಳವಾಡ ಅವರಿಗೆ ಆಶೆ. ತಮ್ಮ ಲಿಂಗರಾಜ ಕಾಲೇಜಿಗೆ ಒಯ್ಯಬೇಕೆಂದು ಡಾ. ನಂದೀಮಠರಿಗೆ ಆಸಕ್ತಿ. ಇದರಲ್ಲಿ ಗೆದ್ದವರು ನಂದೀಮಠರೇ. ಲಿಂಗರಾಜ ಕಾಲೇಜಿಗೆ ಪ್ರವೇಶ ಪಡೆದ ಮೇಲೆ ಫೀ ಸವಲತ್ತೇನೋ ಸಿಕ್ಕಿತು. ಆದರೆ ಹೊಟ್ಟೆಯ ಪ್ರಶ್ನೆ ಹಾಗೆಯೇ ಉಳಿಯಿತು. ಈ ಪ್ರಶ್ನೆಯನ್ನು ಬಿಡಿಸಲು ಮುಂದೆ ಬಂದವರು ಅವರ ಸ್ನೇಹಿತರು. ಆಗ ಆ ಕಾಲೇಜಿನ ವಿದ್ಯಾರ್ಥಿಗಳಾಗಿದ್ದ ಐ. ಬಿ. ಹಾಸನೂರ ಮೊದಲಾದವರು ಒಂದು ಪ್ರಸಾದನಿಲಯದಲ್ಲಿ

ಹಿರೇಮಠರಿಗೆ ಉಚಿತ ಊಟದ ವ್ಯವಸ್ಥೆಯನ್ನು ಮಾಡಿಕೊಟ್ಟರು. ಹೀಗಾಗಿ ಹಿರೇಮಠರ ವಿದ್ಯಾಭ್ಯಾಸದ ರಥ ಮುನ್ನಡೆಯತೊಡಗಿತು.

ಲಿಂಗರಾಜ ಕಾಲೇಜಿನಲ್ಲಿ ಕಳೆದ ಕಾಲಾವಧಿ ಹಿರೇಮಠರ ಜೀವನದಲ್ಲಿ-ಅಧ್ಯಯನದ ದೃಷ್ಟಿಯಿಂದ ಬಹಳ ಮಹತ್ವದ್ದು. ಡಾ. ಶಿ. ಚೆ. ನಂದೀಮಠ, ಡಾ. ಕೆ. ಆರ್. ಶ್ರೀನಿವಾಸ ಅಯ್ಯಂಗಾರ, ಪ್ರೊ. ಶಿ. ಶಿ. ಬಸವನಾಳ ಮೊದಲಾದ ಘನವಿದ್ವಾಂಸರು ಆಗ ಅಲ್ಲಿ ಪ್ರಾಧ್ಯಾಪಕರಾಗಿದ್ದರು. ಪ್ರೊ. ಎಸ್. ಎಸ್. ಭೂಸನೂರಮಠ, ಪ್ರೊ. ವಿ. ಜಿ. ಕುಲಕರ್ಣಿ ಕನ್ನಡ ವಿಭಾಗದಲ್ಲಿ ಕಾರ್ಯಮಾಡುತ್ತಿದ್ದರು. ಈ ಗುರು ವೃಂದದ ಮಾರ್ಗದರ್ಶನದಲ್ಲಿ ಹಿರೇಮಠರು ತಮ್ಮ ಜ್ಞಾನಸಕ್ತಿತಿಜವನ್ನು ವಿಸ್ತರಿಸಿ ಕೊಂಡರು. ಕನ್ನಡ, ಸಂಸ್ಕೃತ, ಇಂಗ್ಲಿಷ್ ಸಾಹಿತ್ಯವನ್ನು ಸಾಧ್ಯವಿದ್ದಷ್ಟೂ ತಿರುವಿ ಹಾಕಿದರು. ಮೂರು ವರುಷ ಪ್ರಥಮಸ್ಥಾನದಲ್ಲಿಯೇ ಇದ್ದು, ಬಿ. ಎ. ಪರೀಕ್ಷೆಯಲ್ಲಿ ಪ್ರಶಸ್ತಿಸಹಿತ ಪ್ರಥಮಸ್ಥಾನ ಸಂಪಾದಿಸಿದರು. ಕನ್ನಡವನ್ನು ಪ್ರಧಾನ ವಿಷಯವಾಗಿ ಅಭ್ಯಸಿಸಿ ಮುಂಬಯಿ ವಿಶ್ವವಿದ್ಯಾಲಯದ ಬಿ. ಎ ಪರೀಕ್ಷೆಯಲ್ಲಿ ಇಂಥ ಯಶಸ್ಸನ್ನು ಪಡೆದವರಲ್ಲಿ ಹಿರೇಮಠರೇ ಮೊದಲಿಗರು.

ಬಿ. ಎ. ಮುಗಿದ ಮೇಲೆ ನೌಕರಿ ಹಿಡಿಯಬೇಕಾದ ಪ್ರಾಪಂಚಿಕ ಒತ್ತಡವಿದ್ದರೂ, ಆ ಪರೀಕ್ಷೆಯಲ್ಲಿ ಪಡೆದ ಯಶಸ್ಸು ಶಿಕ್ಷಣವನ್ನು ಮುಂದುವರಿಸಲು ಪ್ರೇರೇಪಿಸಿತು. ಹೇಗಾದರೂ ಮಾಡಿ ಇನ್ನೆರಡು ವರ್ಷ ಕಲಿಯಬೇಕೆಂದು ನಿರ್ಧರಿಸಿ, ಆ ಎರಡು ವರ್ಷಗಳ ನಂತರ ಜೀವನದ ದಾರಿ ಸುಗಮವಾಗಲೆಂದು ಎಂ.ಎ. ಮತ್ತು ಎಲ್ಎಲ್.ಬಿ. ಕ್ಲಾಸುಗಳೆರಡಕ್ಕೂ ಪ್ರವೇಶಪಡೆದರು. ಈ ಎರಡು ಕೋರ್ಸುಗಳನ್ನು ಏಕಕಾಲಕ್ಕೆ ಅಧ್ಯಯನ ಮಾಡುವ ಸೌಲಭ್ಯ ಆಗ ಬೆಳಗಾವಿಯಲ್ಲಿತ್ತು. ಅಧ್ಯಯನ ಪ್ರಾರಂಭಿಸಿ ಇನ್ನೂ ಒಂದು ವರ್ಷ ಪೂರ್ಣಗೊಂಡಿರಲಿಲ್ಲ. ಅಷ್ಟರಲ್ಲಿ ಮಾಮಲೇದಾರ (ಈಗ ತಹಸೀಲದಾರ) ಸ್ಥಳಕ್ಕೆ ಅರ್ಜಿಸಲ್ಲಿಸಬೇಕೆಂಬ ಸಲಹೆ ಬಂದಿತು. ಬಿ. ಎ. ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣರಾದವರನ್ನು ಮಾಮಲೇದಾರ ಸ್ಥಳಕ್ಕೆ ನೇಮಕ ಮಾಡಿಕೊಳ್ಳುವ ಅಧಿಕಾರ ಆಗಿನ ಕಲೆಕ್ಟರರಿಗೆ ಇತ್ತು. ಆರ್. ಸಿ. ಹಿರೇಮಠರು ಆ ಸಲಹೆಯ ಮೇರೆಗೆ ಅರ್ಜಿ ಸಲ್ಲಿಸಿದ್ದರೆ ಅವರ ನೇಮಕವಾಗುವುದರಲ್ಲಿ ಸಂದೇಹವೇ ಇರಲಿಲ್ಲ ಆದರೆ ಹಿರೇಮಠರು ಆ ಕಾರ್ಯಕ್ಕೆ ಸೇರಲು ಮನಸ್ಸು ಮಾಡಲಿಲ್ಲ. ಅದಕ್ಕೆ ಮುಖ್ಯ ಕಾರಣ ಡಾ. ನಂದೀಮಠರು. ಅವರು 'ಯಾವುದಾದರೂ ರಾಜ್ಯ ಮಟ್ಟದ ಸ್ಪರ್ಧಾತ್ಮಕ ಪರೀಕ್ಷೆಗೆ ಕಟ್ಟುವುದು ಇನಕ್ಕಿಂತ ಉತ್ತಮ' ಎಂದು ಸಲಹೆ ಮಾಡಿದರು. ಹೀಗಾಗಿ ಹಿರೇಮಠರು ಮಾಮಲೇದಾರ ವೃತ್ತಿಗೆ ಸೇರದೆ ತಮ್ಮ ಶಿಕ್ಷಣವನ್ನು ಯಥಾಪ್ರಕಾರ ಮುಂದುವರಿಸಿದರು ಮುಂದೆ ಒಂದು ವರ್ಷದ ತರು ವಾಯ ಲಿಂಗರಾಜ ಕಾಲೇಜಿನ ಫೆಲೋ ಆದರು. ಫೆಲೋ ಆದವರು ಒಂದೇ ಕೋರ್ಸ್

ಡಾ. ಬಿ. ಬಿ. ಹೆಂಡಿಯವರು ಪ್ರೊಫೆಸರ್ ಹಿರೇಮಠರ ಆಗಿನ ಪ್ರಾಧ್ಯಾಪಕ ವೃತ್ತಿಯ ಬಗ್ಗೆ ಹೇಳುವ ಮಾತನ್ನಿಲ್ಲಿ ಗಮನಿಸಬಹುದು : "ವಿದ್ಯಾರ್ಥಿಗಳಿಗೆ ವ್ಯಾಸಂಗ ಮಾಡಿಸು ವಲ್ಲಿ ಆರ್. ಸಿ. ಹಿರೇಮಠರೆಂದೂ ಬೇಸರಪಟ್ಟುಕೊಂಡವರಲ್ಲ. ಇಪ್ಪತ್ತನಾಲ್ಕು ಗಂಟೆಯೂ ಅವರು ಪ್ರಾಧ್ಯಾಪಕರೇ". ಇದು ಆಗಿನ ಬಸವೇಶ್ವರ ಕಾಲೇಜಿನ ಎಲ್ಲ ವಿದ್ಯಾರ್ಥಿಗಳ ಅನುಭವವೂ ಆಗಿದ್ದಿತು. ಅಲ್ಲಿ ಹಾಸ್ಟೆಲ್ ಸುಪರಿಂಟೆಂಡೆಂಟರಾಗಿಯೂ ಅವರು ಕೆಲಸಮಾಡಿದ್ದರಿಂದ ವಿದ್ಯಾರ್ಥಿಗಳೊಂದಿಗೆ ಬೆರೆತು ಅವರ ಸುಖ-ದುಃಖಗಳಲ್ಲಿ ಪಾಲುಗೊಳ್ಳುವವರೂ ಅವರಾಗಿದ್ದರು.

ಹಿರೇಮಠರು ಪ್ರಾಧ್ಯಾಪಕರಾಗುವ ವರೆಗೂ ಅವರ ತಾಪತ್ರಯಗಳೆಲ್ಲ ಜೀವಂತ ವಾಗಿದ್ದವು. ಬಾಗಲಕೋಟೆಗೆ ಹೋಗಲು ಪ್ರಯಾಣ ವೆಚ್ಚಕ್ಕೂ ಇಲ್ಲದ, ಮೈಮೇಲೆ ಸರಿಯಾದ ಬಟ್ಟೆಬರೆಗಳಿಲ್ಲದ ಕಂಗಾಲಸ್ಥಿತಿ ಅವರದು. ಅವರಿವರಲ್ಲಿ ಸಾಲಮಾಡಿಯೇ ಬಾಗಲಕೋಟೆ ಸೇರಿದರು. ಆ ಸಾಲತೀರಿಸಿ ತಾಯಿ, ತಮ್ಮ, ತಂಗಿಯರನ್ನು ಬಾಗಲಕೋಟೆಗೆ ಕರೆಸಿಕೊಳ್ಳಲು ಸ್ವಲ್ಪಕಾಲವೇ ಹಿಡಿಯಿತು. ಇಲ್ಲಿಗೆ ಅವರ ಬಾಳು ಅನಿಶ್ಚಿತತೆಯ ಸ್ಥಿತಿಯನ್ನು ದಾಟಿ ಒಂದು ಕ್ರಮಕ್ಕೆ ಬಂದು ಮುಟ್ಟಿತು.

ಬಸವೇಶ್ವರ ಕಾಲೇಜನ್ನು, ಬಸವೇಶ್ವರ ವಿದ್ಯಾವರ್ಧಕ ಸಂಘವನ್ನು ಕಟ್ಟಿ ಬೆಳಿಸ ಬೇಕಾದ ಆ ದಿನಗಳಲ್ಲಿ ಸಂಬಳವಿಲ್ಲದೆ ಕೆಲಸ ಮಾಡಿದ ತಿಂಗಳುಗಳೂ ಉಂಟು. ಆರ್ಥಿಕ ತೊಂದರೆ ಬಹುಕಾಲದ ವರೆಗೆ ಆ ಸಂಸ್ಥೆಯನ್ನು ಪೀಡಿಸುತ್ತಿತ್ತು. ಹಾಗಿದ್ದರೂ ವಿದ್ವತ್ತೆಗೆ ಆ ಕಾಲೇಜು ಹೆಸರಾಗಿತ್ತು. ಡಾ. ನಂದೀಮಠ. ಡಾ. ಕೆ. ಆರ್. ಶ್ರೀನಿವಾಸ ಅಯ್ಯಂಗಾರ, ಡಾ. ಕೆ. ಕೃಷ್ಣಮೂರ್ತಿ, ಪ್ರೊ. ಎಲ್. ಜಿ. ಹಿರೇಮಠ, ಪ್ರೊ. ಯಲಬುರ್ಗಿ ಹಾಗೂ ಪ್ರೊ. ಆರ್. ಸಿ. ಹಿರೇಮಠ ಇವರೆಲ್ಲ ಆಗ ಅಲ್ಲಿಯ ಪ್ರಾಧ್ಯಾಪಕರು. ಇವರೆಲ್ಲರ ಪರಿಶ್ರಮದಿಂದ ಉತ್ತರಕರ್ನಾಟಕದ ಪ್ರಸಿದ್ಧ ಕಾಲೇಜು ಗಳಾಗಿದ್ದ ಕರ್ನಾಟಕ ಕಾಲೇಜು ಮತ್ತು ಲಿಂಗರಾಜ ಕಾಲೇಜುಗಳಿಗೆ ಹೊಯ್‌ಕೈಯಾಗಿ ಕೆಲವು ಅಂಶಗಳಲ್ಲಿ ಅವಕ್ಕಿಂತಲೂ ಒಂದು ತೂಕ ಹೆಚ್ಚಾಗಿ ಬಸವೇಶ್ವರ ಕಾಲೇಜು ಬೆಳೆದು ನಿಂತಿತೆಂದು ಹೇಳಿದರೆ ಉತ್ಪ್ರೇಕ್ಷೆಯಾಗದು. ಬಾಗಲಕೋಟೆಯಲ್ಲಿ ಇಂದು ಸಾಯನ್ಸ, ಕಾಮರ್ಸ, ಪೊಲಿಟೆಕ್ನಿಕ್, ಇಂಜನಿಯರಿಂಗ ಕಾಲೇಜುಗಳಿದ್ದು ಅದೊಂದು ಶಿಕ್ಷಣಕೇಂದ್ರವೇ ಆಗಿ ನಿಂತಿದೆ. ಇಂಥ ಒಂದು ಕೇಂದ್ರವನ್ನು ನಿರ್ಮಿಸುವಲ್ಲಿ ಡಾ. ಆರ್. ಸಿ. ಹಿರೇಮಠರ ಪಾಲೂ ಇರುವುದನ್ನು ಬಾಗಲಕೋಟೆಯವರೆಲ್ಲ ಬಲ್ಲರು. ಆರ್. ಸಿ. ಹಿರೇಮಠರ ಸಾಹಿತ್ಯಿಕ ಜೀವನಕ್ಕೆ ಒಂದು ವ್ಯವಸ್ಥಿತ ಸ್ವರೂಪ ಬಂದದ್ದು ಬಾಗಲಕೋಟೆಯಲ್ಲಿಯೇ ಎಂದು ಹೇಳಬೇಕು. ಆ ವರೆಗೆ ಸುಪ್ತವಾಗಿದ್ದ, ಪರೀಕ್ಷೆಯ ಮೇಲೆ ಪರೀಕ್ಷೆಗಳನ್ನು ಎದುರಿಸುವಲ್ಲಿ ತೊಡಗಿದ್ದ ಅವರ ಪ್ರತಿಭೆ, ಪಾಂಡಿತ್ಯಗಳು ಈಗ ಸೃಜನಾತ್ಮಕ ಹಾಗೂ ಸಂಶೋಧನಾತ್ಮಕ ಸಾಹಿತ್ಯದ ಕಡೆಗೆ ಹೊರಳಿದವು. ಹಾಗೆ ನೋಡಿದರೆ ಅವರಲ್ಲಿ ಸೃಷ್ಟ್ಯಾತ್ಮಕ ಸಾಹಿತ್ಯಶಕ್ತಿ ತೀರ ಎಳೆವರೆಯದಲ್ಲಿಯೇ

ಪ್ರಕಟಗೊಂಡಿತ್ತು. ಆದರೆ ಅದಕ್ಕೆ ಪ್ರೋಷಣೆ ನೀಡಲು ವ್ಯವಧಾನವಿರಲಿಲ್ಲ. ಪ್ರಾಥಮಿಕಶಾಲೆಯ ವಿದ್ಯಾರ್ಥಿಯಾಗಿದ್ದಾಗ ತಮಾಷೆಗಾಗಿಯೇ ಆಗಲಿ, ಅನುಕರಣ ಪ್ರವೃತ್ತಿಯಿಂದಾಗಿ ಆಗಲಿ ಅವರ ಕಾವ್ಯಶಕ್ತಿ ತನ್ನ ಮಿಂಚನ್ನು ಪ್ರದರ್ಶಿಸುತ್ತಿತ್ತು. ಕುರುಡಗಿಯ ಚೌಡಿ ಚೆನ್ನಪ್ಪನವರಲ್ಲಿ ನಡೆದ ಮದುವೆಯ ಪ್ರಸಂಗವನ್ನು ಅವರು ಒಂದು ಹಾಡಿನಲ್ಲಿ ವರ್ಣಿಸಿದ್ದರು :

ಚೌಡಿ ಚೆನ್ನಪ್ಪನ್ ಲಗ್ನದ ಸುದ್ದಿ
ಹೇಳತೇನಿ ಕೇಳ್ರಿ ಬುದ್ಧಿ

ಇದು ಆ ಹಾಡಿನ ಪಲ್ಲವಿ. ಜಾನಪದ ಲಯದಲ್ಲಿ ಹೀಗೆ ಹಾಡುಕಟ್ಟಿ, ಹಾಡಿ ಊರಿನ ಜನರನ್ನು ಅವರು ರಂಜಿಸಿದ್ದರು. ಜೊತೆಗೆ ಮಂಗಲಕಾರ್ಯಗಳಿಗೆ ಉಪಯುಕ್ತವಾಗುವ ಕೆಲವು ಗೀತಗಳನ್ನು ಅವರು ಬರೆದಿದ್ದರು. ಉದಾಹರಣೆಗೆ ಅವರು ರಚಿಸಿದ ಒಂದು ಪದದ ಈ ಚರಣಗಳನ್ನು ನೋಡಬಹುದು :

ರಾಮಶೆಟ್ಟಿ ಕೆರೆಯೊಳಗ ಹುಟ್ಟಿ
ನಡೆಸಿದೆಯೊ ಸೃಷ್ಟಿ
ಬೇಡಿದ ವರಗಳನು ನೀ ಕೊಟ್ಟಿ.

ಇದು ಸ್ಥಳೀಯ ದೇವರ ಒಂದು ಸ್ತುತಿ. ಆ ಕಾಲದಲ್ಲಿ ಅಲ್ಲಿಯ ಜನರಿಗೆ ಇದು ಪ್ರಿಯವಾದ ಸ್ತೋತ್ರಪದವಾಗಿತ್ತು.

ಗದಗಿನ ಮುನ್ಸಿಪಲ್ ಹಾಯಸ್ಕೂಲ ವಿದ್ಯಾರ್ಥಿಯಾಗಿದ್ದಾಗ 'ಉದಯ ರವಿ' ಎಂಬ ಕೈಬರೆಹದ ಪತ್ರಿಕೆಗೆ ಹಿರೇಮಠರು ಆ ಪತ್ರಿಕೆಯ ಆರಂಭದ ಪುಟದಲ್ಲಿ ಪ್ರಕಟಿಸಲು ಒಂದು ಅಕ್ಷರವೃತ್ತ ಬರೆದುಕೊಟ್ಟಿದ್ದರು. ಇಲ್ಲಿಯ ಛಂದಸ್ಸು ಮತ್ತು ಪದ ಪ್ರಯೋಗ ಅಚ್ಚರಿಯನ್ನುಂಟುಮಾಡುವಂತಿವೆ. ಮಾಧ್ಯಮಿಕ ಶಾಲೆಯ ವಿದ್ಯಾರ್ಥಿಯ ಮಟ್ಟಕ್ಕೆ ಮೀರಿದ ಅಭಿವ್ಯಕ್ತಿಯ ಸಾಮರ್ಥ್ಯವನ್ನಿಲ್ಲಿ ಕಾಣಬಹುದಾಗಿದೆ :

ಸುಲಲಿತ ಶೀಲಲೋಲ ಜಯಪಾಲ ವಿಶಾಲ ವಿಲೋಲಮಾಲ ಮೇಣ್
ಕುಲಗಿರಿವಾಸ ಈಶ ಸರ್ವೇಶ ಮಹೇಶ ಸುಖಾಶಯಾಬ್ಧಿ ಕಣ್
ಜಲಜದ ಪಾದಪೂಜಿತ ವಿರಾಜಿತ ಶಶಿಯುತ ಭಾಳನೇತ್ರ ಜಾಣ್
ಕುಲಪತಿ ಶಕ್ತಿ-ಮುಕ್ತಿಪತಿ ವಿಶ್ವದಿ ಸಮ ನಿನಗಾರ ಕಾಣೆ ಕಾಣ್ ॥

ಪ್ರಾಚೀನಕಾವ್ಯಗಳ ದೇವತಾಸ್ತುತಿಯ ಪ್ರಭಾವ ಈ ಪದ್ಯದ ಮೇಲಿದ್ದರೂ ಹಿರೇಮಠರ ಸ್ವಂತಿಕೆ (Originality) ತಾನೇ ತಾನಾಗಿ ಇಲ್ಲಿ ವ್ಯಕ್ತವಾಗುತ್ತದೆ. ಅವರ ಶಿಕ್ಷಕರೆಲ್ಲ ಹಿರೇಮಠರ ಈ ಕಾವ್ಯಶಕ್ತಿಯನ್ನು ಕಂಡು ಬೆರಗುಬಟ್ಟಿದ್ದರು: ಸೈ ಸೈ ಎಂದಿದ್ದರು.

ಆ ಮುಂದೆ ಕಾಲೇಜು ವಿದ್ಯಾರ್ಥಿಯಾಗಿದ್ದಾಗಲೂ ಅವರು ಕವಿತೆಗಳನ್ನು ಆಗಾಗ ಬರೆದದ್ದುಂಟು. ಆದರೆ ಪ್ರಕಟಣೆಯ ವಿಷಯದಲ್ಲಿ ಅವರು ಅನಾಸಕ್ತಿಯುಳ್ಳವರಾದ್ದರಿಂದ ಅವು ಹೆಚ್ಚಾಗಿ ಬೆಳಕು ಕಾಣಲಿಲ್ಲ. ಹಾಗಿದ್ದರೂ 'ಮಹಾಮರದ ಅಡಿಯಲ್ಲಿ' 'ಗುರಿಯ ನಿರೀಕ್ಷೆಯಲ್ಲಿ' ಎಂಬೆರಡು ಕವಿತೆಗಳು ಲಿಂಗರಾಜ ಕಾಲೇಜಿನ ಮಿಸಲೆನಿಯಲ್ಲಿ ಪ್ರಕಟವಾಗಿವೆ (ಈ ಎರಡೂ ಕವಿತೆಗಳು ಹಿರೇಮಠರ ಪ್ರಥಮ ಕವನ ಸಂಗ್ರಹ 'ಕುಸುಮಾಂಜಲಿ' ಯಲ್ಲಿರುವುದನ್ನು ನೋಡಬಹುದು).

ಹಿರೇಮಠರು ವಿದ್ಯಾರ್ಥಿಯಾಗಿದ್ದಾಗ ತಮ್ಮ ಅಧ್ಯಯನಕ್ಕಾಗಿ ಮಾಡಿಟ್ಟುಕೊಂಡಿದ್ದ ಟಿಪ್ಪಣಿಗಳು ಅತ್ಯಂತ ಪ್ರಗಲ್ಭವಾಗಿದ್ದವೆಂದು ಅವರ ಸಹಪಾಠಿಗಳು ಈಗಲೂ ಹೇಳುತ್ತಾರೆ. ಸಾಹಿತ್ಯಾಧ್ಯಯನವೇ ಅವರ ಮುಖ್ಯವಾದ ಆಗಿನ ಹವ್ಯಾಸವಾಗಿತ್ತು. ಪ್ರಾಚೀನಕವಿಗಳ ಕೃತಿಗಳನ್ನೂ ತಮ್ಮ ಸಮಕಾಲೀನ ಕವಿಗಳ ಕೃತಿಗಳನ್ನೂ ಅವರು ಶ್ರದ್ಧೆಯಿಂದ ವ್ಯಾಸಂಗ ಮಾಡಿದವರು. ಕುವೆಂಪು. ಬೇಂದ್ರೆ, ಮಧುರಚೆನ್ನ ಈ ಮೊದಲಾದವರ ಅನೇಕ ಪದ್ಯಗಳನ್ನು ಅವರು ಈಗಲೂ ಕಂಠಪಾಠ ಹೇಳುತ್ತಾರೆ. ಪಂಪ, ರನ್ನ. ಹರಿಹರ. ರಾಘವಾಂಕ, ಕುಮಾರವ್ಯಾಸ. ಚಾಮರಸ ಈ ಮೊದಲಾದವರ ಕೃತಿಗಳೆಲ್ಲ ಅವರಿಗೆ ಮುಖೋದ್ಗತ. ಪ್ರಾಚೀನ ಹಾಗೂ ಆಧುನಿಕ ಸಾಹಿತ್ಯಗಳೆರಡನ್ನೂ ಅಭ್ಯಸಿಸಿದ ಅವರು ವಚನಸಾಹಿತ್ಯವನ್ನು ಆಳವಾಗಿ ಕೂಲಂಕಷವಾಗಿ ಅಧ್ಯಯನ ಮಾಡಿದ್ದುಂಟು. ಅವರ ಅಧ್ಯಯನ ಎಂದೂ ಸೀಮಿತವಾದದ್ದಲ್ಲ. ಕನ್ನಡದ ಎಲ್ಲ ಮಹತ್ವದ ಕಾವ್ಯಗಳೊಂದಿಗೆ ಸಂಸ್ಕೃತ ಮತ್ತು ಇಂಗ್ಲಿಷ್ ಸಾಹಿತ್ಯದ ಮಹತ್ವದ ಕೃತಿಗಳನ್ನೂ ಅವರು ತೆರೆದ ಮನಸ್ಸಿನಿಂದ ವ್ಯಾಸಂಗ ಮಾಡಿದವರು.

ಬಾಗಲಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಆರ್. ಸಿ. ಹಿರೇಮಠರು ೧೯೪೫ ರಿಂದ ೧೯೫೧ ರ ವರೆಗೆ ದಣಿವರಿಯದೇ ದುಡಿದರು. ಈ ಅವಧಿಯಲ್ಲಿ ಅವರು ಕೌಟುಂಬಿಕ ಜೀವನದ ತಾಪತ್ರಯಗಳನ್ನು ನಿವಾರಿಸಿಕೊಳ್ಳುತ್ತ, ತಾಯಿ, ತಮ್ಮ. ತಂಗಿಯರ ಯೋಗಕ್ಷೇಮವನ್ನು ನೋಡಿಕೊಳ್ಳುತ್ತ ಗೃಹಸ್ಥಾಶ್ರಮವನ್ನೂ ಸ್ವೀಕರಿಸಿದರು. ಅವರ ಮದುವೆಯಾದದ್ದು ೧೯೪೮ ರ ಮೇ ತಿಂಗಳಲ್ಲಿ. ಅವರ ಧರ್ಮಪತ್ನಿಯಾಗಿ ಬಂದವರು ಬೆಳಗಾವಿ ಜಿಲ್ಲೆಯ ತುರಮರಿಯ ಪುರಮಠಾಧೀಶರೆನಿಸಿದ ದೊಡ್ಡ ಮನೆತನದ ಶ್ರೀಮತಿ ಸುಮತಿದೇವಿಯವರು. ಸರಸ್ವತಿಯ ಭಕ್ತರಾದ ಹಿರೇಮಠರಿಗೆ ಶ್ರೀಮತಿ ಸುಮತಿ ದೇವಿಯವರು ದೊರಕಿದುದು ಭಾಗ್ಯಲಕ್ಷ್ಮಿಯೇ ದೊರೆತಂತಾಯಿತು ಅವರು ಕಾಲಿರಿಸಿದಂದಿನಿಂದ ಹಿರೇಮಠರು ಉನ್ನತೋನ್ನತವಾಗಿ ಬೆಳೆಯುತ್ತಲೇ ನಡೆದರು. ಮನೆತನದ ಆಗು-ಹೋಗುಗಳ ಹೊಣೆಯನ್ನು ಹೊತ್ತುಕೊಂಡು. ಅವುಗಳನ್ನೆಲ್ಲ ಸಮರ್ಥವಾಗಿ ನಿಭಾಯಿಸಿಕೊಳ್ಳುವ ಶ್ರೀಮತಿ ಸುಮತಿದೇವಿಯವರು ಆರ್. ಸಿ. ಹಿರೇಮಠರನ್ನು ಸಾಹಿತ್ಯಕಾರ್ಯಕ್ಕಾಗಿಯೇ ಬಿಟ್ಟುಕೊಟ್ಟರು. ಅನಂತರ ಹಿರೇಮಠರು ದೈತ್ಯಶಕ್ತಿಯಿಂದ ಸಾಹಿತ್ಯಕಾರ್ಯ ಮಾಡಿದ್ದೇ ಮಾಡಿದ್ದು.

ಹಿರೇಮಠರ ಸಾಹಿತ್ಯಿಕ ಚಟುವಟಿಕೆಗಳು ಬಾಗಲಕೋಟೆಯಲ್ಲಿಯೇ ಪ್ರಾರಂಭವಾದವು. ಅವರ ಪ್ರಥಮ ಕವನ ಸಂಗ್ರಹ 'ಸುಮಾಂಜಲಿ' ೧೯೪೮ ರ ಅಗಸ್ಟದಲ್ಲಿ ಬೆಳಕು ಕಂಡಿತು. ೧೯೫೧ ರಲ್ಲಿ ಅವರ ವಿಮರ್ಶಾ ಲೇಖನಗಳ ಸಂಗ್ರಹ 'ಸಾಹಿತ್ಯ ಸಂಸ್ಕೃತಿ' ಪ್ರಕಟವಾಯಿತು. ಮಹಾಕವಿ ರಾಘವಾಂಕನನ್ನು ಕುರಿತು ಅವರು ಮಾಡಿದ ಆಳವಾದ ಅಧ್ಯಯನದ ದ್ಯೋತಕವಾಗಿ 'ಮಹಾಕವಿ ರಾಘವಾಂಕ' ಕೃತಿ ರೂಪುಗೊಂಡಿತು. ಬಿ. ಎಂ. ಶ್ರೀ ಅವರು ಪ್ರಕಟಿಸಿದ 'ಗದಾಯುದ್ಧ ನಾಟಕಂ' ಮಾದರಿಯಲ್ಲಿ ಹಿರೇಮಠರು 'ಹರಿಶ್ಚಂದ್ರ ನಾಟಕಂ' ಸಿದ್ಧಪಡಿಸಿದರು. ಹೀಗೆ ಅವರ ಸಾಹಿತ್ಯ ರಚನೆಯು ದಾಂಗುಡಿ ಕುಡಿಬಿಟ್ಟು ಹಬ್ಬತೊಡಗಿತು.

ಸಂಶೋಧನೆಯ ಕಡೆಗೆ ಗಮನ ಹರಿಸಿದ್ದೂ ಬಾಗಲಕೋಟೆಯಲ್ಲಿರುವ ಕಾಲದಲ್ಲಿಯೇ. ಡಾ. ನಂದೀಮಠರು ಆಗಲೇ ಶಾಸನವ್ಯಾಸಂಗದಲ್ಲಿ ಹೆಸರು ಗಳಿಸಿದ್ದರು. ಅವರ ಪ್ರೇರಣೆಯಿಂದ ಹಿರೇಮಠರು ಪ್ರಾಚ್ಯಶೋಧನೆಯ ವಿಷಯದಲ್ಲಿಯೂ ಆಸಕ್ತಿವಹಿಸಿದರು. ಬಾಗಲಕೋಟೆಯ ಸಮೀಪದ ಬಾದಾಮಿ, ಪಟ್ಟದಕಲ್ಲು, ಐಹೊಳೆಗಳ ಐತಿಹಾಸಿಕ - ಸಾಂಸ್ಕೃತಿಕ ಅಧ್ಯಯನವನ್ನು ವಿವರವಾಗಿ ಮಾಡಿದರು. ಈ ದಿಶೆಯಲ್ಲಿಯೂ ಅವರು ಕಾರ್ಯಮಾಡುವ ಸಾಮರ್ಥ್ಯವನ್ನು ಗಳಿಸಿಕೊಂಡರು. ಇಷ್ಟಲ್ಲದೆ ಭಾಷಾವಿಜ್ಞಾನದ ಅಧ್ಯಯನದ ಕಡೆಗೂ ಅವರು ಗಮನ ಹರಿಸಿದರು. ಹೀಗಾಗಿ ಅವರ ಸಾಹಿತ್ಯಿಕಜೀವನ ವಿವಿಧ ಮುಖವಾದ ವಿಕಾಸವನ್ನು ಪಡೆಯತೊಡಗಿತು.

೧೯೪೯ ರಲ್ಲಿ ಪ್ರಾರಂಭವಾದ ಕರ್ನಾಟಕ ವಿಶ್ವವಿದ್ಯಾಲಯ ಮೊಟ್ಟಮೊದಲಿಗೆ ಬೋಧನೆಗೆ ಎತ್ತಿಕೊಂಡ ವಿಷಯಗಳಲ್ಲಿ ಕನ್ನಡವೂ ಒಂದು. ಈ ಕನ್ನಡ ವಿಭಾಗಕ್ಕೆ ಪ್ರಾಧ್ಯಾಪಕರನ್ನಾಗಿ ತೀ. ನಂ. ಶ್ರೀಕಂಠಯ್ಯನವರನ್ನು ಬರಮಾಡಿಕೊಂಡ ವಿಶ್ವವಿದ್ಯಾಲಯ ಆರ್. ಸಿ. ಹಿರೇಮಠರನ್ನು ಸ್ವಾಗತಿಸಿತು. ೧೯೫೧ ರಲ್ಲಿ ಹಿರೇಮಠರು ರೀಡರ್ ಆಗಿ ನೇಮಕಗೊಂಡರು. ಬಾಗಲಕೋಟೆಯಲ್ಲಿ ಬಸವೇಶ್ವರ ಕಾಲೇಜನ್ನು, ವಿದ್ಯಾವರ್ಧಕ ಸಂಘವನ್ನು ಬೆಳೆಸುವ ಕಾರ್ಯದಲ್ಲಿ ನಿರತ ಹಿರೇಮಠರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗವನ್ನು ತನ್ಮೂಲಕ ವಿಶ್ವವಿದ್ಯಾಲಯವನ್ನು ಬೆಳೆಸುವದರಲ್ಲಿ ಮಹತ್ವದ ಪಾತ್ರವಹಿಸಬೇಕಾಯಿತು. ಅವರು ಕನ್ನಡ ವಿಭಾಗಕ್ಕೆ ಬಂದಾಗ ಅಲ್ಲಿ ಒಬ್ಬನೇ ಒಬ್ಬ ವಿದ್ಯಾರ್ಥಿಯಿದ್ದನು. ಗಂಡುಮಕ್ಕಳ ಸರಕಾರಿ ಟ್ರೇನಿಂಗ ಕಾಲೇಜಿನ ಒಂದು ಕೋಣೆಯಲ್ಲಿ ಈ ವಿಭಾಗವಿತ್ತು. ಕರ್ನಾಟಕ ವಿಶ್ವವಿದ್ಯಾಲಯದ ಸ್ವತಂತ್ರವಾದ ಕಟ್ಟಡ ರಚನೆಯ ಕಾರ್ಯದ ಜೊತೆ ಅವರ ಆಗಿನ ಅಡಳಿತ ವಿಭಾಗಕ್ಕಿದ್ದರೆ, ಅವರಾ ಬೋಧನ ಶಾಖೆಗಳನ್ನು ಬೆಳೆಸುವ ಹೊಣೆ ಅಲ್ಲಿಯ ಪ್ರಾಧ್ಯಾಪಕರ ಮೇಲಿತ್ತು. ದಕ್ಷ ಪ್ರಾಧ್ಯಾಪಕರನ್ನು ಹೊಂದಿದ ಕನ್ನಡ ವಿಭಾಗ ಶೀಘ್ರಗತಿಯಿಂದ ಬೆಳೆಯತೊಡಗಿತು.

೧೯೫೭ ರಲ್ಲಿ ಡಾ. ಆರ್. ಸಿ. ಹಿರೇಮಠರು ಕನ್ನಡ ವಿಭಾಗದ ಪ್ರಾಧ್ಯಾಪಕ ಮತ್ತು ಮುಖ್ಯಸ್ಥರು ಆದ ಮೇಲೆ ಅದಕ್ಕೆ ಅನೇಕ ಶಕ್ತಿ ಬಂದಂತಾಯಿತು. ಮುಂದೆ ವರ್ಷದಿಂದ ವರ್ಷಕ್ಕೆ, ದಶಕದಿಂದ ದಶಕಕ್ಕೆ ತನ್ನ ಕಾರ್ಯಕ್ಷೇತ್ರವನ್ನು ಹಿಗ್ಗಿಸಿಕೊಳ್ಳುತ್ತ ಒಂದು ಮಹಾಸಂಸ್ಥೆಯಾಗಿಯೇ ಬೆಳೆದು ನಿಂತಿತು. ಕನ್ನಡ ವಿಭಾಗವು ಬರಿಯ ಒಂದು ವಿಭಾಗವಾಗಿ ಉಳಿಯದೆ ಅಧ್ಯಯನಪೀಠವಾಗಿ ರೂಪ ತಳೆಯಿತು. ಹಸ್ತಪುಸ್ತಕ ನಿರ್ದೇಶನಾಲಯ, ಬಸವಪೀಠಗಳು ಅದರ ಇನ್ನೆರಡು ಬಾಹುಗಳಾಗಿ ಮೂಡಿನಿಂತವು. ವಚನಸಾಹಿತ್ಯ, ದಾಸಸಾಹಿತ್ಯ, ಜೈನಸಾಹಿತ್ಯಗಳ ಅಧ್ಯಯನವೂ ಪ್ರತ್ಯೇಕವಾಗಿ, ಸಂಶೋಧನಾತ್ಮಕವಾಗಿ ನಡೆಯುವಂತಾಯಿತು.

ಈ ಮಧ್ಯ ಹಿರೇಮಠರು ಭಾಷಾವಿಜ್ಞಾನದಲ್ಲಿ ಡಾಕ್ಟರೇಟ ಪದವಿಯನ್ನು ಸಂಪಾದಿಸಿದರು. ಸಂಪಾದನೆ, ಸಂಶೋಧನೆ, ವಿಮರ್ಶೆ ಈ ಮೊದಲಾದ ಕ್ಷೇತ್ರಗಳಲ್ಲಿ ತಮಗೆ ಕೀರ್ತಿ ತರುವಂಥ ಕೃತಿಗಳನ್ನು ಕನ್ನಡಕ್ಕೆ ಕೊಟ್ಟರು. ಡಾ. ಹಿರೇಮಠರು ಪ್ರಾಧ್ಯಾಪಕ ವೃತ್ತಿಗೆ ಹೇಳಿ ಮಾಡಿಸಿದಂಥ ವ್ಯಕ್ತಿ. ಪ್ರಾಚೀನಕಾವ್ಯದ ರಸವತ್ತಾದ ನಿರೂಪಣೆ, ಸಂಪಾದನಾಶಾಸ್ತ್ರದ ವ್ಯವಸ್ಥಿತವಾದ ವಿವರಣೆ, ಭಾಷಾವಿಜ್ಞಾನದ ಸಶಾಸ್ತ್ರೀಯವಾದ ವಿವೇಚನೆ ಮೊದಲಾದವುಗಳನ್ನು ಅವರಿಂದಲೇ ಕೇಳಬೇಕು. ಪಾಠಪ್ರವಚನಗಳಲ್ಲಿ ಅವರಿಗಿರುವ ಆಸಕ್ತಿ, ತನ್ಮಯತೆ ಅವರ್ಣನೀಯವಾದವು. ಕ್ಲಾಸಿನ ಅವಧಿಗಳು ಅವರಿಗೆ ಅವಧಿಗಳೇ ಅಲ್ಲ. ಒಮ್ಮೊಮ್ಮೆ ಎಲ್ಲ ಅವಧಿಗಳನ್ನೂ ಅವರು ಉಪಯೋಗಿಸಬಲ್ಲರು. ಅವರಿಗೆ ಅಧ್ಯಾಪನದಲ್ಲಿ ಬೇಸರವಾಗುವುದಿಲ್ಲ. ನೀರಸತೆಯೆಂಬುದೂ ಇಲ್ಲ. ಅದೊಂದು ಸಂತೋಷದ ಕಾಯಕ. ಸಂಸ್ಕೃತ ಹಾಗೂ ಇಂಗ್ಲೀಷ ಸಾಹಿತ್ಯದ ವ್ಯಾಸಂಗವುಳ್ಳ ಅವರು ಭಾರತೀಯ ಕಾವ್ಯಮೀಮಾಂಸೆಗೆ ಪಾಶ್ಚಾತ್ಯ ಕಾವ್ಯವಿಮರ್ಶೆಯ ಒಪ್ಪವಿಟ್ಟು ಒಂದು ಕಾವ್ಯಕೃತಿಯನ್ನು ನೋಡಬಲ್ಲರು. ಹಾಗಿದ್ದರೂ ಭಾರತೀಯ ಸಹೃದಯರು, ವಿಮರ್ಶೆಯ ಹೆಸರಿನಲ್ಲಿ ಕೂದಲು ಸೀಳುವಿಕೆಯ ಕೆಲಸವನ್ನು ಅವರೆಂದೂ ಮಾಡಲಾರರು. ಅವರ ಅಧ್ಯಾಪನ ವೃತ್ತಿ ಶ್ರದ್ಧೆಯ ನೆಲಗಟ್ಟಿನ ಮೇಲೆ ನಿಂತಂತಹದು. ವಿದ್ಯಾರ್ಥಿಗಳನ್ನು ಹತ್ತಿರಕ್ಕೆ ಕರೆದುಕೊಳ್ಳುವ, ಅವರ ಸುಖ-ದುಃಖಗಳನ್ನು ಕುರಿತು ವಿಚಾರಿಸುವ ಅವರ ಹೃದಯವಂತಿಕೆಯ ಸೌಜನ್ಯವನ್ನು ಕಂಡ ವಿದ್ಯಾರ್ಥಿಗಳಿಲ್ಲದಿಲ್ಲ. ತೀರ ಆಧುನಿಕತೆಗೆ ವಾಲಿದವರು ಹಿರೇಮಠರ ಶ್ರದ್ಧಾವಂತ ಜೀವನವನ್ನು ಅರಿತುಕೊಳ್ಳದೆ ದೂರಸರಿದಿದ್ದರೆ ಅದು ಅವರ ವೈಯಕ್ತಿಕ ನಿಲುವು ಅಷ್ಟೇ. ಹಿರೇಮಠರ ಗುರುತ್ವವನ್ನು ಮುಕ್ತಮನಸ್ಸಿನಿಂದ ಪ್ರಶಂಸಿಸುವ ವಿದ್ಯಾರ್ಥಿಗಳ ಸಂಖ್ಯೆ ಬೇಕಾದಷ್ಟಿದೆ.

ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಬಂದ ಮೇಲೆ ಅವರು ದೈತ್ಯಸದೃಶರಾಗಿ ದುಡಿದಿದ್ದಾರೆ. ಊಟ-ಉಡಿಗೆ, ನಿದ್ದೆ-ನೀರಡಿಕೆಗಳನ್ನು ಮರೆತು ಹಗಲು-ಇರುಳೆನ್ನದೆ ಅವರು ಪಟ್ಟ ಪರಿಶ್ರಮ ಅವರ್ಣನೀಯ. ಸಂಪಾದನೆ, ಸಂಶೋಧನೆ, ಭಾಷಾವಿಜ್ಞಾನದಂಥ ಕ್ಷೇತ್ರ

ಗಳಲ್ಲಿ ಅವರ ಪ್ರಮುಖ ಕಾರ್ಯ ಆಗಿರುವುದು. ವಚನಗಳ ಜೊತೆಗೆ ಅವರು ಪ್ರಾಚೀನ ಗ್ರಂಥಗಳ ಸಂಪಾದನೆಯೂ ನಡೆದಿದೆ. ಅವರು ಮಾಡಿದ ಪ್ರಾಚೀನ ಕಾವ್ಯಗಳ ಮತ್ತು ವಚನಸಾಹಿತ್ಯದ ಸಂಪಾದನೆ ಅಭೂತಪೂರ್ವವಾದದ್ದು. ಇಲ್ಲಿ ಯವರೆಗೂ ಅಪ್ರಕಟಿತವಾಗಿದ್ದ ಕೃತಿಗಳು ಅವರ ಸಮರ್ಥ ಸಂಪಾದನೆಯಿಂದ ಪ್ರಕಟವಾಗಿವೆ. ಒಬ್ಬನೇ ವ್ಯಕ್ತಿ ಇಷ್ಟು ಗ್ರಂಥಗಳನ್ನು ಸಂಪಾದಿಸಿದ್ದು ತೀರ ವಿರಳ. ಕನ್ನಡದಲ್ಲಿ ಇನ್ನೊಬ್ಬರಿಲ್ಲವೆಂದೂ ಹೇಳಬಹುದು. ಇದು ಅಪಾರವಾದ ತಾಳ್ಮೆ, ವ್ಯಾಸಂಗ, ಶ್ರದ್ಧೆ, ಪರಿಶ್ರಮಗಳನ್ನು ಅಪೇಕ್ಷಿಸುವ ಕಾರ್ಯ. ಡಾ. ಹಿರೇಮಠರಲ್ಲಿ ಈ ಎಲ್ಲ ಗುಣಗಳು ಮನೆಮಾಡಿಕೊಂಡಿದ್ದು ಅವುಗಳ ಜೊತೆಗೆ ವಿದ್ವತ್ತು, ಸಂಘಟನಾಶಕ್ತಿಗಳೂ ಸೇರಿಕೊಂಡಿವೆ. ಅವರೆದುರಿಗೆ ಬಂದ ಯಾವ ಪ್ರಾಚೀನಕೃತಿಯನ್ನು ತತ್ಕ್ಷಣಕ್ಕೆ ಅಳೆದು ನೋಡುವ ತೀಕ್ಷ್ಣಮತಿಗಳವರಾಗಿದ್ದಾರೆ. ಎಲ್ಲಿಯೋ ಮೂಲೆಯಲ್ಲಿ ಸಿಕ್ಕಿಕೊಂಡ ಹಸ್ತಪ್ರತಿ ಇಲ್ಲವೆ ಶಾಸನದ ಪ್ರತಿಯನ್ನು ಹೇಗೆ ದೊರಕಿಸಬೇಕೆಂಬ ಕೌಶಲವೂ ಅವರಲ್ಲಿದೆ. ಈ ಎಲ್ಲ ಕಾರಣಗಳಿಂದ ಅವರ ಸಂಪಾದನಾಕಾರ್ಯ ಇನ್ನೊಬ್ಬರು ಬೆರಳುಕಚ್ಚುವಂತೆ ನಡೆಯಿತು.

ಎರಡು ಕವನ ಸಂಗ್ರಹ. ಕೆಲವು ವಿಮರ್ಶಾಗ್ರಂಥಗಳನ್ನು ಕನ್ನಡಕ್ಕೆ ನೀಡಿದ ಅವರು ಬರೆದ ಸಂಶೋಧನಾತ್ಮಕ ಲೇಖನಗಳ ಸಂಖ್ಯೆಯೂ ದೊಡ್ಡದಿದೆ. ಅವರ ಸಾಹಿತ್ಯಕಾರ್ಯದ ಪರಿಶೀಲನೆಯೇ ಒಂದು ಗ್ರಂಥವಾಗುವಷ್ಟು ಇದೆಯೆಂಬುದನ್ನು ನೋಡಿದಾಗ ಅವರು ೧೯೫೭ ರಿಂದ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾಗಿ ೧೯೭೪ ರಲ್ಲಿ ಕುಲಪತಿಗಳಾಗುವ ವರೆಗಿನ ಕೇವಲ ೧೭ ವರ್ಷಗಳ ಅವಧಿಯಲ್ಲಿ ಮಾಡಿದ ಕಾರ್ಯದ ಮಹತ್ವ ಎಂಥದೆಂಬುದು ಗಮನಕ್ಕೆ ಬರುವುದು. ೧೯೭೪ ರಿಂದ ೧೯೭೮ ರ ವರೆಗೆ ಕುಲಪತಿಗಳಾಗಿದ್ದ ಅವಧಿಯಲ್ಲಿಯೂ ಅವರು ಬರವಣಿಗೆಯ ಕಾರ್ಯವನ್ನು ನಿಲ್ಲಿಸಿದವರಲ್ಲ. ಈ ಅವಧಿಯಲ್ಲಿ ತಮ್ಮ ವಿದೇಶ ಪ್ರವಾಸವನ್ನು ಕುರಿತು ಗ್ರಂಥವೊಂದನ್ನು ಬರೆದಿದ್ದು, ಅದು ಈಗ ಪ್ರಕಟವಾಗಬೇಕಾಗಿದೆ. ಕೆಲವು ಲೇಖನ, ಮುನ್ನುಡಿ, ಪ್ರಸ್ತಾವನೆಗಳನ್ನು ಈ ಅವಧಿಯಲ್ಲಿಯೂ ಬರೆದಿದ್ದಾರೆ.

ಹಿರೇಮಠರು ತಮ್ಮ ವಿದ್ಯಾರ್ಥಿಗಳನ್ನು ಸಂಶೋಧನಾಕಾರ್ಯದಲ್ಲಿ ತೊಡಗಿಸುವುದರಲ್ಲಿಯೂ ನಿಸ್ಸೀಮರು. ಪಿಎಚ್.ಡಿ. ಗೆ ವಿಷಯವನ್ನು ಆಯ್ದುಕೊಟ್ಟು, ಅದು ಪೂರ್ಣಗೊಳ್ಳುವಂತೆ ಪ್ರೋತ್ಸಾಹಿಸಿ ದುಡಿಸಿಕೊಂಡ ವಿದ್ಯಾರ್ಥಿಗಳ ಸಂಖ್ಯೆಯೂ ದೊಡ್ಡದಿದೆ. ಪ್ರಾಚೀನ ಕಾವ್ಯ, ವ್ಯಾಕರಣ, ಛಂದಶ್ಶಾಸ್ತ್ರ, ಜನಪದಸಾಹಿತ್ಯ, ಆಧುನಿಕಸಾಹಿತ್ಯ ಮುಂತಾದ ಎಲ್ಲ ಕ್ಷೇತ್ರಗಳಲ್ಲಿಯೂ ಸಂಶೋಧನೆ ನಡೆಯುವಂತೆ ಅವರು ನೋಡಿಕೊಂಡಿದ್ದಾರೆ. ಡಾ. ರಾ. ಯ. ಧಾರವಾಡಕರ, ಡಾ. ಕೆ. ಜಿ. ಶಾಸ್ತ್ರಿ, ಡಾ. ಎಸ್. ಆರ್. ಹೆಗಡೆ, ಡಾ. ಎಂ. ಎಂ. ಕಲಬುರ್ಗಿ, ಡಾ. ಜೆ. ಎಸ್. ಕುಳ್ಳಿ,

ಡಾ. ಜಿ. ಬಿ. ಹಂಪಿ, ಡಾ. ಎಂ. ಜಿ. ಕೊಟ್ರಶೆಟ್ಟಿ. ಡಾ. ಕೆ. ಎ. ಕತ್ತೂರ, ಡಾ. ಸಾ. ಶಿ. ಮರುಳಯ್ಯ ಮೊದಲಾದವರಿಗೆ ಹಿರೇಮಠರೇ ಮಾರ್ಗದರ್ಶಕರು. ಅವರು ಮಾಡಿದ ಶೈಕ್ಷಣಿಕ(Academic)ಕಾರ್ಯ ನಮ್ಮ ವಿಶ್ವವಿದ್ಯಾಲಯಕ್ಕೆ ಅತ್ಯಂತ ಭೂಷಣಪ್ರದವಾಗಿದೆಯೆಂಬುದರಲ್ಲಿ ಸಂದೇಹವೇ ಇಲ್ಲ.

ಕನ್ನಡ ವಿಭಾಗವನ್ನು ಅಧ್ಯಯನಪೀಠವಾಗಿ ಬೆಳೆಸಿದ ಅವರ ಕಾರ್ಯವನ್ನು ಈ ಸಂದರ್ಭದಲ್ಲಿ ನೆನೆಯಬೇಕು. ಒಬ್ಬರೋ ಇಬ್ಬರೋ ವಿದ್ಯಾರ್ಥಿಗಳುಳ್ಳ ಆ ವಿಭಾಗ ಇಂದು ಸುಮಾರು ಮುನ್ನೂರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಬೇರೆಬೇರೆ ಶಾಖೆಗಳಲ್ಲಿ ಶಿಕ್ಷಣ ಕೊಡುತ್ತಿರುವುದು ಒಂದು ವಿಶೇಷವಾಗಿದೆ. ಮೊದಲು ಬೋಧನಕಾರ್ಯ ಕನ್ನಡದಲ್ಲಿ ಎಂ. ಎ ತರಗತಿಯ ಶಿಕ್ಷಣಕೊಡುವುದಕ್ಕೆ ಸೀಮಿತವಾಗಿತ್ತು. ಈಗ ಆ ಎಂ. ಎ. ತರಗತಿಯ ಶಿಕ್ಷಣಕ್ರಮದಲ್ಲಿಯೇ ಬಹಳಷ್ಟು ಬದಲಾವಣೆಯಾಗಿದೆ. ಭಾಷಾವಿಜ್ಞಾನ. ಸಂಪಾದನಾಶಾಸ್ತ್ರ, ಶಾಸನಶಾಸ್ತ್ರ, ಜನಪದಸಾಹಿತ್ಯ, ಆಧುನಿಕ ಸಾಹಿತ್ಯ, ಜಾಗತಿಕಸಾಹಿತ್ಯ ಮುಂತಾದ ವಿಷಯಗಳು ಪಠ್ಯಕ್ರಮದಲ್ಲಿ ಸೇರ್ಪಡೆಯಾಗಿವೆ. ಜೈನ. ವೈಷ್ಣವ. ವೀರಶೈವ ಹಾಗೂ ಜಾಗತಿಕ ಧರ್ಮಗಳ ಅಭಿಜಾತ ಸಾಹಿತ್ಯದ ವ್ಯಾಪಕವಾದ ಹಾಗೂ ತೌಲನಿಕವಾದ ಅಧ್ಯಯನಕ್ಕೂ ಅವಕಾಶಮಾಡಿ ಕೊಡಲಾಗಿದೆ. ಪ್ರಾಯೋಗಿಕವಿಮರ್ಶೆಯನ್ನು ಅಭ್ಯಾಸಕ್ರಮದಲ್ಲಿ ಅಳವಡಿಸಲಾಗಿದ್ದು, ಆವಶ್ಯಕ ವಿಷಯಗಳಲ್ಲಿ ಕ್ಷೇತ್ರಕಾರ್ಯಕ್ಕೂ ಗಮನಕೊಡಲಾಗುತ್ತಿದೆ. ಬರೀ ಪುಸ್ತಕಗಳನ್ನು ಓದುವುದಕ್ಕಿಂತ ಸ್ವತಃ ಕ್ಷೇತ್ರಕಾರ್ಯ. ವಿಮರ್ಶಾಕಾರ್ಯಗಳನ್ನು ನಿರ್ವಹಿಸಲು ತರಬೇತಿ ಕೊಡುವ ಈ ಯೋಜನೆ ಆರ್. ಸಿ. ಹಿರೇಮಠ ಅವರಿಂದಲೇ ರೂಪಿತವಾದದ್ದು.

ಭಾಷಾವಿಜ್ಞಾನ ಮತ್ತು ಜನಪದಸಾಹಿತ್ಯಗಳಲ್ಲಿ ಎಂ. ಎ. ತರಗತಿಗಳನ್ನು ಪ್ರಾರಂಭಿಸಿದವರೂ ಹಿರೇಮಠ ಅವರೇ. ಭಾಷಾವಿಜ್ಞಾನಕ್ಕೆ ಇಂದು ಅಂತರರಾಷ್ಟ್ರೀಯ ಮಹತ್ವವಿದೆ. ಸ್ವತಃ ಹಿರೇಮಠರು ಭಾರತೀಯ ಮಹತ್ವದ ಭಾಷಾವಿಜ್ಞಾನಿಗಳಲ್ಲೊಬ್ಬರು. ಅವರು ೧೯೫೮ ರಲ್ಲಿ ಅಮೇರಿಕೆಯ ಕ್ಯಾಲಿಫೋರ್ನಿಯಾ ವಿಶ್ವವಿದ್ಯಾಲಯದಲ್ಲಿ ಆಧುನಿಕ ಭಾಷಾವಿಜ್ಞಾನದಲ್ಲಿ ತರಬೇತಿ ಪಡೆದವರು. ಅವರ 'The Structure of Kannada' ಭಾಷಾವಿಜ್ಞಾನಕ್ಷೇತ್ರಕ್ಕೆ ಒಂದು ಕೊಡುಗೆ. ಹೀಗಿರುವ ಅವರು ಕನ್ನಡ ಪ್ರಾಧ್ಯಾಪಕರಾಗಿ ಪ್ರಸಿದ್ಧಿ ಪಡೆದಂತೆ, ಭಾಷಾವಿಜ್ಞಾನದ ಪ್ರಾಧ್ಯಾಪಕರಾಗಿಯೂ ಖ್ಯಾತರಾಗಿದ್ದಾರೆ. ಕನ್ನಡ ಅಧ್ಯಯನಪೀಠದಲ್ಲಿರುವ ಭಾಷಾವಿಜ್ಞಾನ ಶಾಖೆ ಆಗಲೇ ಅನೇಕ ವಿದ್ಯಾರ್ಥಿಗಳಿಗೆ ತರಬೇತಿಯನ್ನು ನೀಡಿದ್ದು. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಆಗಲೇ ಮೂರು-ನಾಲ್ಕು ಜನರು ಡಾಕ್ಟರೇಟ ಪದವಿಯನ್ನು ಪಡೆದಿದ್ದಾರೆ.

ಜನಪದಸಾಹಿತ್ಯಕ್ಕೆ ಉತ್ತರಕರ್ನಾಟಕದ ಕೊಡುಗೆ ಅಪೂರ್ವವೂ ಅಮೌಲ್ಯವೂ ಆಗಿದೆ. ವಿಶ್ವವಿದ್ಯಾಲಯದಲ್ಲಿ ಈ ವಿಷಯವಾಗಿ ಸುವ್ಯವಸ್ಥಿತವಾದ ಅಧ್ಯಯನ ನಡೆಯಬೇಕಾದುದರ ಅವಶ್ಯಕತೆಯನ್ನು ಮನದಂದು ಹಿರೇಮಠರು ಅದರಲ್ಲಿಯೂ ಸ್ನಾತಕೋತ್ತರ ವರ್ಗಗಳನ್ನು ಪ್ರಾರಂಭಿಸಿದರು. ಅದರ ಜೊತೆಗೆ ಅಖಿಲ ಕರ್ನಾಟಕ ಜನಪದ ಸಾಹಿತ್ಯಸಮ್ಮೇಲನವನ್ನು ಜರುಗಿಸುವ ಕಾರ್ಯವನ್ನು ಕೈಕೊಂಡರು. ಈಗ ಈ ಕಾರ್ಯದಲ್ಲಿ ಗಮನೀಯ ಪ್ರಗತಿಯನ್ನು ಸಾಧಿಸಲಾಗಿದೆ.

ಸಮಾಜಶಾಸ್ತ್ರ, ವಿಜ್ಞಾನಗಳಂಥ ವಿಷಯಗಳನ್ನು ಅಭ್ಯಸಿಸಿದ ಪದವೀಧರರಿಗೆ ಕನ್ನಡ ಭಾಷೆ, ಸಾಹಿತ್ಯಗಳ ಅಭ್ಯಾಸಕ್ಕೆ ಅನುವು ಮಾಡಿಕೊಡಲು ಬಿ. ಲಿಟ್ ಕೋರ್ಸ ಒಂದನ್ನು ತೆರೆಯಲಾಗಿದೆ. ಕನ್ನಡವು ಉಚ್ಚಶಿಕ್ಷಣದ ಮತ್ತು ಆಡಳಿತದ ಮಾಧ್ಯಮವಾಗ ಲಿರುವ ಈ ಕಾಲದಲ್ಲಿ ಈ ಬಗೆಯ ಶಿಕ್ಷಣದ ಅವಶ್ಯಕತೆ ಬಹಳವಾಗಿತ್ತು. ಕನ್ನಡದ ಸರ್ವತೋಮುಖ ಏಳ್ಗೆಯನ್ನು ಸಾಧಿಸುವ ಮಹತ್ವಾಕಾಂಕ್ಷೆಯನ್ನು ಹೊಂದಿದ ಹಿರೇಮಠರು ಈ ಬಗೆಯ ಅಧ್ಯಾಪನದಿಂದಲೂ ಹೊಸಮಾರ್ಗವೊಂದನ್ನು ಹುಡುಕಿ ಕೊಂಡರು. ಇದರೊಂದಿಗೆ 'ಭಾಷಾಂತರ ಡಿಪ್ಲೋಮಾ' ವರ್ಗವನ್ನು ಪ್ರಾರಂಭಿ ಸಿದುದು ಒಂದು ಮಹತ್ವದ ಕಾರ್ಯವಾಗಿದೆ. ಭಾಷಾಂತರವೂ ಒಂದು ಕಲೆ. ಈ ಕಲೆಯ ಸಾಧನೆಗೆ ತಕ್ಕ ತರಬೇತಿ ಅವಶ್ಯಕ. ಬೇರೆ ಭಾಷೆಗಳಿಂದ ಕನ್ನಡಕ್ಕೆ, ಕನ್ನಡ ದಿಂದ ಬೇರೆ ಭಾಷೆಗಳಿಗೆ ಅನುವಾದಿಸಬೇಕಾದ ಕಾರ್ಯ ಬಹಳಷ್ಟಿದೆ. ಕನ್ನಡದಲ್ಲಿ ಸಮಾಜಶಾಸ್ತ್ರ, ವಿಜ್ಞಾನಗಳಂಥ ವಿಷಯಗಳ ಸಾಹಿತ್ಯದ ಕೊರತೆಯನ್ನು ತುಂಬಿ ಕೊಳ್ಳಲು ಅನುವಾದಕಾರ್ಯ ನಡೆಯಬೇಕಾಗಿದೆ. ಇದನ್ನೆಲ್ಲ ಪೂರೈಸಲು ಪ್ರೋಷಕ ವಾಗುವಂತೆ ಈ 'ಡಿಪ್ಲೋಮಾ' ತರಗತಿ ಕನ್ನಡ ಅಧ್ಯಯನಪೀಠದ ಆಶ್ರಯದಲ್ಲಿ ನಡೆಯುತ್ತಲಿದೆ.

ಕನ್ನಡಭಾಷೆ ಬರದವರಿಗೆ 'ಕನ್ನಡ ಸರ್ಟಿಫಿಕೇಟ್' ಕೋರ್ಸ, ನಮ್ಮ ಪ್ರಾಚೀನ ಸಾಹಿತ್ಯಕ್ಕೆ ಬೆನ್ನೆಲುಬಾಗಿದ್ದ ಜೈನ, ವೈದಿಕ, ವೀರಶೈವ ಧರ್ಮಗಳ 'ತೌಲನಿಕ ಧರ್ಮ ಡಿಪ್ಲೋಮಾ' ಕೋರ್ಸ ಮುಂತಾದವುಗಳನ್ನೂ ಆರಂಭಿಸಲಾಗಿದೆ.

ಈ ಎಲ್ಲ ಬಗೆಯ ಅಧ್ಯಾಪನಗಳೊಂದಿಗೆ ಸಾಹಿತ್ಯಸಂಶೋಧನೆ, ಭಾಷಾಸಂಶೋಧನೆ ಜನಪದಸಾಹಿತ್ಯಶೋಧನೆ ಮತ್ತು ಸಂಗ್ರಹ- ಈ ಮುಂತಾದ ಕಾರ್ಯಗಳೂ ಚುರುಕಾಗಿ ನಡೆದಿವೆ. ಅಧ್ಯಯನಪೀಠವು ಪ್ರಕಟಣಾಕಾರ್ಯವನ್ನು ಕೈಗೆತ್ತಿ ಕೊಂಡಿದ್ದುದು. ಆಗಲೇ ವಚನಸಾಹಿತ್ಯ, ಶಾಸ್ತ್ರಸಾಹಿತ್ಯ, ದಾಸಸಾಹಿತ್ಯ, ಜನ ಪದ ಸಾಹಿತ್ಯಗಳ ಹಲವಾರು ಗ್ರಂಥಗಳು ಪ್ರಕಟವಾಗಿವೆ. ವಚನಸಾಹಿತ್ಯದ ಚನ್ನ ಬಸವಣ್ಣನವರ ವಚನಗಳು, ಸಿದ್ಧರಾಮೇಶ್ವರ ವಚನಗಳು, ಬಸವಣ್ಣನವರ ವಚನಗಳು ಮುಂತಾದ ಸುಮಾರು ಇಪ್ಪತ್ತು ಗ್ರಂಥಗಳು ಬೆಳಕಿಗೆ ಬಂದಿವೆ. ಶಾಸ್ತ್ರಸಾಹಿತ್ಯದಲ್ಲಿ

'ಶಾಸನ ಸಂಪದ' 'ಶಾಸನವ್ಯಾಸಂಗ' 'ಧಾರವಾಡ ಜಿಲ್ಲೆಯ ಶಾಸನಗಳ ಸೂಚಿ' ಮುಂತಾದ ಹತ್ತಾರು ಗ್ರಂಥಗಳು ಪ್ರಕಟವಾಗಿವೆ. 'ರಾಜಶೇಖರ ವಿಳಾಸಂ' 'ಬಸವರಾಜ ವಿಜಯಂ' 'ಮಲ್ಲಿನಾಥ ಪುರಾಣ' 'ನೇಮಿನಾಥ ಪುರಾಣ' 'ಮೋಹನ ತರಂಗಿಣಿ' ಮುಂತಾದ ಸುಮಾರು ಎರಡು ದಶಕಗಳಷ್ಟು ಪ್ರಾಚೀನಕಾವ್ಯಗ್ರಂಥಗಳು ಶಾಸ್ತ್ರೀಯವಾಗಿ ಸಂಪಾದಿಸಲ್ಪಟ್ಟು ಕಾವ್ಯಾಭ್ಯಾಸಿಗಳಿಗೆ ಉಪಲಬ್ಧವಾಗಿವೆ. 'ಜೀವನ ಜೋಕಾಲಿ'ಯ ಐದು ಭಾಗಗಳು, 'ಜನಪದಸಾಹಿತ್ಯದರ್ಶನ'ದ ಆರು ಭಾಗಗಳು. 'ಶ್ರೀಕೃಷ್ಣ ಪಾರಿಜಾತ'ದ ಸಂಪಾದಿತ ಕೃತಿಗಳು ಜನಪದಸಾಹಿತ್ಯಕ್ಕೆ ಆಗಲೇ ಕನ್ನಡ ಅಧ್ಯಯನಪೀಠ ನೀಡಿದ ಗಮನಾರ್ಹ ಕೊಡುಗೆಗಳಾಗಿವೆ.

ಶೂನ್ಯಸಂಪಾದನೆಯ ಐದು ಸಂಪುಟಗಳು ಹಾಗೂ ಕೆಲವು ವಚನಕಾರರ ವಚನಗ್ರಂಥಗಳು ಇಂಗ್ಲಿಷಿಗೆ ಮತ್ತು ಹಿಂದಿಗೆ ಅನುವಾದಿಸಲ್ಪಟ್ಟು ಕನ್ನಡೇತರರಿಗೆ ಅವುಗಳ ಅಮೂಲ್ಯ ಜ್ಞಾನಸಂಪತ್ತು ದೊರೆಯುವಂತೆ ಮಾಡುವಲ್ಲಿಯೂ ಹಿರೇಮಠರು ತೋರಿದ ಶ್ರದ್ಧೆ, ಪರಿಶ್ರಮಗಳು ಸ್ಮರಣೀಯವಾಗಿವೆ.

ಕನ್ನಡ ಅಧ್ಯಯನಪೀಠವಲ್ಲಿ ಪ್ರಾಚೀನ ಹಸ್ತಪ್ರತಿಗಳ ಭಾಂಡಾರವನ್ನು ಯಾವ ಪ್ರಾಚೀನ ಸಾಹಿತ್ಯದ ಕೋಶಾಗಾರಕ್ಕಿಂತಲೂ ಕಡಿಮೆಯಿಲ್ಲದಂತೆ ಹಿರೇಮಠರು ಬೆಳೆಸಿದ್ದಾರೆ. ಜಾನಪದ ವಸ್ತುಭಾಂಡಾರಕ್ಕೆ ಬೇಕಾಗುವ ನೆಲಗಟ್ಟನ್ನು ಅವರು ಹಾಕಿಕೊಟ್ಟಿದ್ದಾರೆ. ಅದಿನ್ನು ವ್ಯವಸ್ಥಿತವಾಗಿ ರೂಪುಗೊಳ್ಳಬೇಕು. ಭಾಷಾಪ್ರಯೋಗಶಾಲೆಯೂ ಅಸ್ತಿತ್ವಕ್ಕೆ ಬರುತ್ತಲಿದೆ.

ಕರ್ನಾಟಕ ವಿಶ್ವವಿದ್ಯಾಲಯದ ಸಿನೇಟ ಸದಸ್ಯರಾಗಿ ಅದರ ಪ್ರಾರಂಭದಿಂದಲೂ ಕಾರ್ಯ ಮಾಡುತ್ತಿದ್ದ ಹಿರೇಮಠರು ಕೆಲಕಾಲ ಸಿಂಡಿಕೇಟ ಸದಸ್ಯರಾಗಿ ಅದರ ಪುರೋಭಿವೃದ್ಧಿಗಾಗಿ ದುಡಿದವರು. ೧೯೬೬ ರಲ್ಲಿ ಅವರು ಹಿರಿಯ ಪ್ರಾಧ್ಯಾಪಕರಾಗಿ (Senior Professor) ಆಗಿ ಬಡತಿಯನ್ನು ಹೊಂದಿದವರು. ವಿಶ್ವವಿದ್ಯಾಲಯಕ್ಕೆ ಅದು ಹುಟ್ಟಿದಂದಿನಿಂದ ಹಿರೇಮಠರ ಗಾಢ ಸಂಬಂಧವಿದ್ದೇ ಇದೆ. ಅವರು ಅದರ ಎಲ್ಲ ಆಗು-ಹೋಗುಗಳನ್ನು ಚೆನ್ನಾಗಿ ಬಲ್ಲವರು. ಹೀಗಿರುವ ಅವರು ೧೯೭೪ ಅಗಸ್ಟ ತಿಂಗಳಲ್ಲಿ ಹಂಗಾಮಿ ಕುಲಪತಿಗಳಾಗಿ ನೇಮಕವಾದಾಗ ವಿಶ್ವವಿದ್ಯಾಲಯದ ಆವರಣದಲ್ಲಿ ಸಂತೋಷದ ತಂಗಾಳಿ ಬೀಸಿತು. ೧೯೭೫ ಮೇ ತಿಂಗಳಲ್ಲಿ ಅವರೇ ಕುಲಪತಿಗಳೆಂದು ನೇಮಕವಾದಾಗ ಆ ಸಂತೋಷ ಉಕ್ಕಿ ಹರಿಯಿತು. ಅದು ಹಿರೇಮಠರ ಸಾಧನೆಯ ಒಂದು ಸಿದ್ಧಿಯ ದಿನ. ವಿಶ್ವವಿದ್ಯಾಲಯಕ್ಕೆ ತನ್ನ ನಿಜವಾದ ಹಿತೈಷಿಯನ್ನು ಪಡೆದ ಸಂಭ್ರಮದ ದಿನ. ಮುಂದಿನ ಮೂರು ವರುಷಗಳಲ್ಲಿ ಹಿರೇಮಠರು ವಿಶ್ವವಿದ್ಯಾಲಯಕ್ಕಾಗಿ ದುಡಿದದ್ದು ಒಂದು ಇತಿಹಾಸವಾಗುವಷ್ಟು.

ಹಿರೇಮಠರು ಕುಲಪತಿಗಳಾದಾಗ ಅವರ ಅಕಡೆಮಿಕ್ ಕಾರ್ಯಗಳಿಗೆಲ್ಲ ಹೊಸ ಜೀವ ಬಂದಂತಾಯಿತು. ಹಳೆ ವಿಭಾಗಗಳು ಚುರುಕಾದವು. ಹೊಸ ವಿಭಾಗಗಳು ಅಸ್ತಿತ್ವಕ್ಕೆ ಬಂದವು. ಬಿಜಿನೆಸ್ ಮ್ಯಾನೇಜಮೆಂಟ, ಸಂಗೀತ, ಯೋಗಾಧ್ಯಯನ, ಗಾಂಧೀ ಅಧ್ಯಯನ ವಿಭಾಗಗಳಲ್ಲದೆ ಕರ್ನಾಟಕ ಸಂಗೀತ ಮಹಾವಿದ್ಯಾಲಯ, ಕಾಂಪ್ಯೂಟರ ಕೇಂದ್ರ, ಸೆಂಟ್ರಲ್ ಇನ್‌ಸ್ಟ್ರುಮೆಂಟೇಶನ್ ಪ್ರಯೋಗಶಾಲೆಗಳೂ ರೂಪುಗೊಂಡವು.

ಒಂದಿಷ್ಟು ಉಪೇಕ್ಷಿಸಲ್ಪಟ್ಟಿದ್ದ ಕಲಬುರ್ಗಿ ಸ್ನಾತಕೋತ್ತರ ಕೇಂದ್ರಕ್ಕೆ ಹಿರೇಮಠರು ವಿಶೇಷ ಗಮನವಿತ್ತು ಮೈಕ್ರೊಬಯಾಲಜಿ, ಅಪ್ಲಾಯಿಡ್ ಇಲೆಕ್ಟ್ರಾನಿಕ್ಸ ವಿಭಾಗ, ವಾಣಿಜ್ಯಶಾಸ್ತ್ರ ವಿಭಾಗ, ಅರ್ಥಶಾಸ್ತ್ರ ವಿಭಾಗ, ಸಮಾಜಶಾಸ್ತ್ರ ವಿಭಾಗ, ಹಿಂದೀ ವಿಭಾಗ ಮತ್ತು ರಾಜ್ಯಶಾಸ್ತ್ರ ವಿಭಾಗಗಳನ್ನು ಪ್ರಾರಂಭಿಸಿದರು. ಈ ವರೆಗೆ ಕರ್ನಾಟಕ ವಿಶ್ವವಿದ್ಯಾಲಯದ ಒಂದು ಪುಟ್ಟ ಶಾಖೆಯೆನಿಸುತ್ತಿದ್ದ, ಕೇವಲ ನಾಲ್ಕು ವಿಭಾಗಗಳನ್ನು ಹೊಂದಿದ್ದ ಕಲಬುರ್ಗಿ ಕೇಂದ್ರವು ಒಂದು ವಿಶ್ವವಿದ್ಯಾಲಯ ಹೊಂದಬಹುದಾದಷ್ಟು ವಿಭಾಗಗಳನ್ನು ಹೊಂದಿ ಭರದಿಂದ ಬೆಳೆಯಿತು. ಅದೀಗ ಸ್ವತಂತ್ರ ವಿಶ್ವವಿದ್ಯಾಲಯ ಸ್ಥಾನವನ್ನು ಪಡೆಯುವಂತಾಗಿದೆ. ಈ ಅರ್ಹತೆಯನ್ನು ದೊರಕಿಸಿ ಕೊಟ್ಟವರು ಹಿರೇಮಠರೇ ಎಂಬುದನ್ನು ಇತಿಹಾಸ ಮರೆಯಲಾರದು.

ಸೊಂಡೂರ ಮತ್ತು ಕಾರವಾರ ಕೇಂದ್ರಗಳ ಅಭಿವೃದ್ಧಿಗಾಗಿಯೂ ಹಿರೇಮಠರು ಶ್ರಮಿಸಿದ್ದಾರೆ. 'ಕಾಲೇಜ ಆಫ್ ಜಿಯಾಲಜಿ' 'ಮಿನರಲ್ ಪ್ರೊಸೆಸಿಂಗ', 'ಮಿನರಲ್ ಎಕ್ಸಪ್ಲೊರೇಶನ್ ಮತ್ತು ಡ್ರಿಲ್ಲಿಂಗ' ವಿಭಾಗಗಳೆಲ್ಲ ಅಸ್ತಿತ್ವಕ್ಕೆ ಬಂದದ್ದು ಹಿರೇಮಠರ ಕಾಲಾವಧಿಯಲ್ಲಿಯೇ.

ಹಿರೇಮಠರು ಅಕಡೆಮಿಕ್ ಎನ್ನುವ ಯಾವ ಕಾರ್ಯಕ್ಕೂ ಹಿಂದು-ಮುಂದು ನೋಡದೆ ತಮ್ಮಿಂದಾಗುವ ಎಲ್ಲ ಸಹಾಯವನ್ನು ನೀಡುವವರು. ಅಂತೆಯೇ ಅವರ ಕಾಲದಲ್ಲಿ ನಡೆದಷ್ಟು ಅಖಿಲಭಾರತ ಮಟ್ಟದ ಸಮ್ಮೇಲನಗಳು ಬೇರೆ ಯಾರ ಕಾಲದಲ್ಲಿಯೂ ನಡೆಯಲಿಲ್ಲ.

೧. ಅಖಿಲಭಾರತ ಭಾಷಾವಿಜ್ಞಾನಿಗಳ ಸಮ್ಮೇಲನ ೨. ಅಖಿಲಭಾರತ ಗ್ರಂಥಾಲಯ ಸಮ್ಮೇಲನ ೩. ಅಖಿಲಭಾರತ ಎಪಿಗ್ರಾಫಿ ಸಮ್ಮೇಲನ ೪. ಅಖಿಲಭಾರತ ಸ್ಥಳನಾಮಗಳ ಸಮ್ಮೇಲನ ೫. ಅಖಿಲಭಾರತ ಪ್ರಾಣಿಶಾಸ್ತ್ರ ಸಮ್ಮೇಲನ ೬. ಅಖಿಲಭಾರತ ಮಾನವಶಾಸ್ತ್ರ ಸಮ್ಮೇಲನ- ಇವು ಆ ಸಮಯದಲ್ಲಿ ಜರುಗಿದ ಸಮ್ಮೇಲನಗಳು. ಮೃತ್ಯುಂಜಯ ಸ್ಮಾರಕ ವಿಶೇಷೋಪನ್ಯಾಸ ಮಾಲೆ, ಡಿ. ರಾಮಪ್ಪರ ಸ್ಮಾರಕ ವಿಶೇಷೋಪನ್ಯಾಸ ಮಾಲೆಗಳೂ ಪ್ರಾರಂಭವಾದವು.

ವಿಶ್ವವಿದ್ಯಾಲಯದ ರಜತಮಹೋತ್ಸವ ಅತ್ಯಂತ ವೈಭವದಿಂದ ನೆರವೇರಿದ್ದಂತೂ ಹಿರೇಮಠರ ಸಂಘಟನಾಕಾರ್ಯದ ಕಿರೀಟದಲ್ಲಿ ಒಂದು ತುರಾಯಿಯಿದ್ದಂತೆ. ಕರ್ನಾಟಕ ಕಾಲೇಜಿನ ವಜ್ರಮಹೋತ್ಸವ ಅವರ ಇನ್ನೊಂದು ಅಗ್ಗಳಿಕೆಯಾಗಿ ಕಂಗೊಳಿಸಿತು.

ವಿಶ್ವವಿದ್ಯಾಲಯದ ಆವರಣ ಮೈಕೊಡವಿ ಎದ್ದಂತೆ ಅದು ಹಲವಾರು ಕಟ್ಟಡಗಳನ್ನು ಪಡೆದು ಹೊಸರೂಪವನ್ನು ಪಡೆಯಿತು. ವಿದ್ಯಾರ್ಥಿಧಾಮ, ಕನ್ನಡ ಅಧ್ಯಯನ ಪೀಠದ ಕಟ್ಟಡ. ಭೂಗರ್ಭಶಾಸ್ತ್ರ ವಿಭಾಗದ ಕಟ್ಟಡ. ಭೌತವಿಜ್ಞಾನದ ಕಟ್ಟಡ, ನೂತನ ಗ್ರಂಥಾಲಯ ಕಟ್ಟಡ ಮುಂತಾದವುಗಳೆಲ್ಲ ತಲೆಯೆತ್ತಿ ನಿಂತವು. ಅರ್ಧಕ್ಕೆ ನಿಂತಿದ್ದ ಕಾಯಿದೆ ಕಾಲೇಜು, ಕರ್ನಾಟಕ ಕಾಲೇಜಿನ ಗ್ರಂಥಾಲಯ. ರಸಾಯನಶಾಸ್ತ್ರ ವಿಭಾಗದ ಕಟ್ಟಡಗಳು ಪೂರ್ಣಗೊಂಡವು.

ಕಲಬುರ್ಗಿ ಸ್ನಾತಕೋತ್ತರ ಕೇಂದ್ರದಲ್ಲಿ ವಸತಿಗೃಹ ಅಸ್ತಿತ್ವಕ್ಕೆ ಬಂದಿತು. ಸೊಂಡೂರ ಕೇಂದ್ರದ ಮೆಟಲರ್ಜಿ ಕಟ್ಟಡ, ಕೆಮಿಕಲ್ ಇಂಜನಿಯರಿಂಗ ಕಟ್ಟಡಗಳೂ ನಿರ್ಮಾಣಗೊಂಡವು. ಕಾರವಾರ ಕೇಂದ್ರದಲ್ಲಿ ಪ್ರಾಧ್ಯಾಪಕರ ವಸತಿಗೃಹಗಳು ಪೂರ್ಣಗೊಂಡಿದ್ದು, ಸಾಗರಜೀವನವಿಜ್ಞಾನ ವಿಭಾಗದ ಕಟ್ಟಡದ ವಿಸ್ತರಣೆಯ ಕಾರ್ಯ ಮುಂದುವರೆದಿದೆ.

ಹೀಗೆ ವಿಶ್ವವಿದ್ಯಾಲಯವನ್ನು ವಿವಿಧ ಮುಖವಾಗಿ ಬೆಳೆಸುವ ಕಾರ್ಯದಲ್ಲಿ ತೊಡಗಿದ್ದ ಹಿರೇಮಠರು ಸೆಮಿಷ್ಟರ ಪದ್ಧತಿಯನ್ನು ಯಶಸ್ವಿಯಾಗಿ ಜಾರಿಗೆ ತಂದರು. ಪಠ್ಯಕ್ರಮದಲ್ಲಿಯೂ ಗಮನೀಯವಾದ ಬದಲಾವಣೆಗಳನ್ನು ಮಾಡಿದರು. ಹಲವು ಹನ್ನೊಂದು ಬಗೆಯಾಗಿ ವಿಶ್ವವಿದ್ಯಾಲಯದ ಘನತೆಯನ್ನು ಹೆಚ್ಚಿಸುವಲ್ಲಿ ತನ್ಮಯರಾಗಿದ್ದ ಹಿರೇಮಠರ ಕಾಲಾವಧಿ ೧೯೭೭ಕ್ಕೆ ಮುಕ್ತಾಯವಾಯಿತು. ಆದರೆ ಅದರಿಂದ ಅವರಿಗೆ ಏನೂ ನಷ್ಟವಾಗಲಿಲ್ಲ. ಹದಿನಾರಾಣೆ ಪ್ರಾಧ್ಯಾಪಕರಾಗಿದ್ದ ಅವರು ಆಡಳಿತದ ಗೊಂಡಾರಣ್ಯದಿಂದ ಹೊರಬಂದು ಭಾರತೀಯ ರಾಷ್ಟ್ರೀಯ ಪ್ರಾಧ್ಯಾಪಕರಾಗಿ ನೇಮಕಗೊಂಡರು. ಹಿರೇಮಠರು ನಿಜವಾಗಿ ಏನಾಗಬೇಕಾಗಿತ್ತೋ ಅದೇ ಆದರು. ಅವರಿಗೀಗ ರಾಷ್ಟ್ರೀಯ ಮಹತಿ, ರಾಷ್ಟ್ರೀಯ ಸೇವೆ. ಕನ್ನಡದ ಪ್ರಾಧ್ಯಾಪಕರು ರಾಷ್ಟ್ರೀಯ ಪ್ರಾಧ್ಯಾಪಕರಾಗಿದ್ದುದು ಇದೇ ಮೊದಲು. ಇದು ಹಿರೇಮಠರ ಜೀವನದಲ್ಲಷ್ಟೇ ಅಲ್ಲ. ಕನ್ನಡ ಪ್ರಾಧ್ಯಾಪಕರ ವರ್ಗದ ವೃತ್ತಿಯಲ್ಲಿಯೇ ಒಂದು ಅಭೂತಪೂರ್ವ ದಾಖಲೆ. ಅವರೀಗ ಸಂಶೋಧನೆಯಲ್ಲಿ, ಬೇರೆಬೇರೆ ವಿಶ್ವವಿದ್ಯಾಲಯಗಳ ಸಂದರ್ಶನ ಮತ್ತು ಬೋಧನೆಯಲ್ಲಿ ನಿರತರು. ಅವರಿಂದು ವಿದ್ವತ್ತಿನ ಸಾಕಾರಮೂರ್ತಿ, ಜೊತೆಗೆ ಜೀವನಾನುಭವದ ಪಕ್ವಾವಸ್ಥೆ. ಅವರ ಇಂದಿನ ಮಾಗಿದ ಮನಸ್ಸು ಕನ್ನಡಕ್ಕೆ ತನ್ಮೂಲಕ ಭಾರತಕ್ಕೆ ಸತ್ಫಲಗಳನ್ನು ಕೊಡುವ ಭರವಸೆಯಿಲ್ಲದಿಲ್ಲ.



ಡಾ. ಆರ್. ಸಿ. ಹಿರೇಮಠ ಅವರ ಸಂಸಾರವರ್ಗ



ಆರ್. ಸಿ. : ಐವತ್ತು ಸನ್ಮಾನ (ಮೈಸೂರು ವಿಶ್ವವಿದ್ಯಾಲಯ)



ಕನ್ನಡ ಅಧ್ಯಯನಪೀಠ ಕಟ್ಟಡದ ಅಡಿಗಲ್ಲು ಪ್ರತಿಷ್ಠಾಪನ ಸಮಾರಂಭ



ಬೆಳಗಾವಿಯ ಕೆ. ಎಲ್. ಈ. ಸೊಸೈಟಿಯ ಸುವರ್ಣಮಹೋತ್ಸವ




ಕರ್ನಾಟಕ ವಿಶ್ವವಿದ್ಯಾಲಯದ ೨೬ ನೆಯ ಘಟಿಕೋತ್ಸವ ಸಮಾರಂಭ
ರಾಜ್ಯ ವಿದ್ಯಾಸಚಿವ ಶ್ರೀ ಮಲ್ಲಿಕಾರ್ಜುನಸ್ವಾಮಿ, ಕೇಂದ್ರ ವಿದ್ಯಾಸಚಿವ ಶ್ರೀ ನೂರುಲ್ ಹಸನ್
ರಾಜ್ಯಪಾಲ ಮೋಹನಲಾಲ ಸುಖಾಡಿಯಾ, ಕುಲಪತಿ ಡಾ. ಆರ್. ಸಿ. ಹಿರೇಮಠ




ಅಖಿಲ ಭಾರತ ಪ್ರಾಚ್ಯವಿದ್ಯಾ ಸಮ್ಮೇಲನ, ಧಾರವಾಡ ( ೧೯೭೬ )
ಕುಲಪತಿ ಡಾ. ಆರ್. ಸಿ. ಹಿರೇಮಠ ( ಸ್ವಾಗತಾಧ್ಯಕ್ಷರು ), ರಾಜ್ಯಪಾಲ ಶ್ರೀ ಉಮಾಶಂಕರ ದೀಕ್ಷಿತ ( ಉದ್ಘಾಟಕರು )
ಸಮ್ಮೇಲನಾಧ್ಯಕ್ಷ ಡಾ. ಸಿ. ಶಿವರಾಮಮೂರ್ತಿ, ಕಾರ್ಯದರ್ಶಿ ಶ್ರೀ ಆರ್. ಎಸ್. ದಾಂಡೇಕರ

ಅರವತ್ತು ತುಂಬಿದ ಹಿರೇಮಠರನ್ನು ಕಂಡವರು ಅವರಿಗಿಂದು ಅಷ್ಟು ವಯಸ್ಸೆಂದು ನಂಬುವುದೇ ಕಷ್ಟ. ಅವರ ಗಟ್ಟಿಮುಟ್ಟಾದ ಮೈಕಟ್ಟು, ಮುಪ್ಪಿನ ಛಾಯೆಯೂ ಕಾಣದ ಉತ್ಸಾಹದ ಮುಖ, ಪ್ರಾಯದ ಹುಮ್ಮಸ್ಸಿನಲ್ಲಿರುವಂಥ ಚಟುವಟಿಕೆ. ಸದ್ಯದಲ್ಲಿಯೇ ನಡೆಯುವ ಪರೀಕ್ಷೆಗೆ ಸಿದ್ಧತೆ ನಡೆಸುತ್ತಿರುವಂಥ ವಿದ್ಯಾರ್ಥಿಯ ಅಧ್ಯಯನ ತನ್ಮಯತೆ. ಪಂಪನಿಂದ ಕುವೆಂಪುವಿನ ವರೆಗೆ ಎಲ್ಲಿ ಬೇಕಾದಲ್ಲಿ ಇದ್ದಕ್ಕಿದ್ದಂತೆ ಆಧಾರಗಳನ್ನು, ಉದ್ಧರಣೆಗಳನ್ನು ಕೊಡುವ ವಿಲಕ್ಷಣವಾದ ಸ್ಮರಣಶಕ್ತಿ- ಇವೆಲ್ಲ ಅವರ ವ್ಯಕ್ತಿತ್ವದ ವಿಶೇಷತೆಗಳನ್ನು ಎತ್ತಿತೋರಿಸುತ್ತವೆ.

ಕೋಟು, ಪ್ಯಾಂಟು, ಟೈ ಧರಿಸಿದರೂ ಅವರು ಕನ್ನಡದ ಸತ್ಪುತ್ರರು. ಅವರ ಮಾತು ಧಾರವಾಡದ ಕನ್ನಡ, ಅವರ ಮನಸ್ಸು ಬಯಲುಸೀಮೆಯ ತಿಳಿಗೊಳ. ಅವರ ನಗುವಿನಲ್ಲಿ ಬೆಳವಲದ ಬಯಲಿನ ನಿರಭ್ರತೆಯಿದೆ. ಅಳುವಿನಲ್ಲಿ ಕೂಡಲಸಂಗಮದ ಕಾರುಣ್ಯವಿದೆ. ಯಾವಾಗಲಾದರೊಮ್ಮೆ ಕೋಪಿಸಿಕೊಂಡಾಗ ಗುಡುಗು ಮಿಂಚು ಕಾಣಿಸಿಕೊಳ್ಳುವುದುಂಟು. ಆದರೆ ಅದು ಬಹಳ ಹೊತ್ತು ಉಳಿಯಲಾರದು.

ಈ ಸಂದರ್ಭದಲ್ಲಿ ಅವರ ಕೌಟುಂಬಿಕ ಜೀವನದ ಬಗ್ಗೆ ಒಂದು ಮಾತು ಹೇಳಿದರೆ, ತಪ್ಪಾಗದು. ಹಿರೇಮಠರ ಧರ್ಮಪತ್ನಿ ಶ್ರೀಮತಿ ಸುಮತಿದೇವಿಯವರು ಪ್ರಾಪಂಚಿಕ ಜೀವನದ ಹೊಣೆಯನ್ನು ಹೊತ್ತುಕೊಂಡವರು. ಹಿರೇಮಠರಿಗೆ ಒಟ್ಟು ನಾಲ್ಕು ಜನ ಮಕ್ಕಳು. ಮೊದಲಿನವರಿಬ್ಬರು ಹೆಣ್ಣುಮಕ್ಕಳು. ಅವರಿಬ್ಬರೂ ಪ್ರತಿಭಾವಂತರು. ಹಿರಿಯ ಮಗಳು ಶಶಿಕಲಾ ಆರಂಭದಿಂದಲೂ ಪ್ರಶಸ್ತಿ ಸಹಿತ ಪ್ರಥಮವರ್ಗ ಪಡೆಯುತ್ತ ಈಗ ಎಂ. ಡಿ. ಮುಗಿಸಿದ ಒಬ್ಬ ಆದರ್ಶ ಡಾಕ್ಟರ್. ಅವಳನ್ನು ನೋಡಿದರೆ ಅವಳಷ್ಟು ಓದಿದ್ದಾಳೆಯೇ ? ಎಂಬ ಅನುಮಾನ ಬರುತ್ತದೆ. ಅವಳ ಇರುವಿಕೆ ಅಷ್ಟು ಸಾದಾ, ಮಾತು ಅಷ್ಟು ಸರಳ, ವಿದ್ಯೆಯ ಪ್ರತಿಷ್ಠೆ ಆಕೆಯ ಸಮೀಪಕ್ಕೂ ಸುಳಿದಿಲ್ಲ. ಎರಡನೆಯ ಮಗಳು ವಿಜಯಾ ಆಗಲೇ ಗೃಹಿಣಿ. ಗಣಿತ ವಿಷಯವನ್ನು ಅಭ್ಯಸಿಸಿ ಪದವೀ ಪರೀಕ್ಷೆಯಲ್ಲಿ ೨ನೆಯ ರ್‍ಯಾಂಕ ಬಂದವಳು. ಅವಳಿಗೆ ದೈವದತ್ತವಾದ ಇಂಪಾದ ಕಂಠವಿದೆ. ಜೊತೆಗೆ ಸಂಗೀತದ ಗಾಢವ್ಯಾಸಂಗವಿದೆ. ಅವಳು ವೀಣೆ ಹಿಡಿದು ಕುಳಿತರೆ ಸಾಕ್ಷಾತ್ ಸರಸ್ವತಿಯೇ. ಚಿತ್ರಕಲೆಯಲ್ಲಿಯೂ ಆಕೆಯದು ಸಿದ್ಧಹಸ್ತ. ಒಟ್ಟಿನಲ್ಲಿ ಹಿರೇಮಠರ ಮನೆಯ ಕಲಾಶಾರದೆ ಅವಳು.

ಗಂಡುಮಕ್ಕಳಲ್ಲಿ ಮೊದಲಿಗನು ರಾಜೀವ. ಚಿಕ್ಕಂದಿನಲ್ಲಿ ಅಸಹನೀಯ ಕಾಯಿಲೆಗೆ ತುತ್ತಾಗಿ, ದೈವಕೃಪೆಯಿಂದ ಬದುಕಿ ಬೆಳೆದವನು. ನಡೆ, ನುಡಿಗಳಲ್ಲಿ ಅವನನ್ನು ಇನ್ನೊಬ್ಬರು ಮೀರಿಸಲಾರರು ಎನ್ನುವಂಥ ಸ್ವಭಾವ ಅವನದು. ಕಿರಿಯ ಮಗ ಜಯದೇವನದು ಪಾರಜದಂಥ ಬುದ್ಧಿಮಂತಿಕೆ. ಓದಿನಲ್ಲಿ ೮೦ % ಕ್ಕೆ ಕಡಿಮೆಗುಣ ಅವನ ಲೆಕ್ಕದಲ್ಲಿ ಇಲ್ಲ. ಕ್ರೀಡಾಪ್ರೇಮಿ, ಕ್ರಿಕೆಟ್ಟಿನ ಎಲ್ಲ ರಿಕಾರ್ಡುಗಳೂ ಅವನಿಗೆ

ಗೊತ್ತು. ವಿಜ್ಞಾನ ಅವನ ಆಸಕ್ತಿಯ ವಿಷಯ, ಈಗ ಬಿ. ಇ. ಮೊದಲನೆಯ ವರ್ಷದಲ್ಲಿ ಓದುತ್ತಿರುವ ಅವನು ಉತ್ತಮ ಭವಿಷ್ಯ ರೂಪಿಸಿಕೊಳ್ಳುವ ಲಕ್ಷಣಗಳಿವೆ.

ಹಿರೇಮಠರಿಗೆ ಈಗ ಮೊದಲಿನಂಥ ಬಡತನದ ಸಮಸ್ಯೆಗಳಿಲ್ಲವೆಂದರೂ ತಾಪತ್ರಯಗಳಿಂದ ಸಂಪೂರ್ಣವಾಗಿ ಮುಕ್ತರಾಗಿದ್ದಾರೆಂದು ಹೇಳಲಿಕ್ಕಾಗದು. ಎಂಥ ಕಷ್ಟವನ್ನೂ ಎದುರಿಸಬಲ್ಲೆನೆಂಬ ಅವರ ಜೀವನಶ್ರದ್ಧೆ ಮಾತ್ರ ಅನನ್ಯವಾದುದು. ಕನ್ನಡ ನುಡಿಗೆ, ಕನ್ನಡ ಸಾಹಿತ್ಯಕ್ಕೆ ಮತ್ತು ಭಾಷಾವಿಜ್ಞಾನಕ್ಕೆ ಅವರಿಂದ ಇನ್ನು ಮುಂದೆ ಸಲ್ಲುವ ಸೇವೆ ಈ ಹಿಂದಿನಕ್ಕಿಂತ ಸತ್ವದಲ್ಲಿ. ಘನತೆಯಲ್ಲಿ. ವೈಶಿಷ್ಟದಲ್ಲಿ ಮಿಗಿಲಾದದ್ದಾಗುವುದೆಂದು ನಮಗೆಲ್ಲ ಅನಿಸುತ್ತಿದ್ದರೆ ಅದರಲ್ಲಿ ಅಸ್ವಾಭಾವಿಕವಾದದ್ದೇನೂ ಇಲ್ಲ.



# ವಿದ್ಯಾರ್ಥಿ : ಆರ್. ಸಿ. ಹಿರೇಮಠರು

□ □ □ □ □ □ □ □ □ □ □ □ □ □ □ □ □ □

ವಿ. ಜಿ. ಕುಲಕರ್ಣಿ

□ □ □ □ □ □ □ □ □ □ □ □ □ □ □ □ □ □

ನಲವತ್ತೆರಡು ವರ್ಷಗಳ ಸುಧೀರ್ಘವಾದ ಅಧ್ಯಾಪಕವೃತ್ತಿಯ ಅವಧಿಯಲ್ಲಿ ಅನೇಕಾನೇಕ ವಿದ್ಯಾರ್ಥಿಗಳ ಸಂಪರ್ಕವು ನನಗೆ ಬಂದಿದೆ. ಈ ಬಹುಸಂಖ್ಯೆಯ ವಿದ್ಯಾರ್ಥಿಗಳಲ್ಲಿ ಅತಿ ನಿಕಟ ಸಂಪರ್ಕಕ್ಕೆ ಬಂದಿದ್ದ ಕೆಲವರು ನನಗೆ ತೀರ ಆತ್ಮೀಯರಾಗಿ, ಮಿತ್ರರಾಗಿ ಉಳಿದುಕೊಂಡಿದ್ದಾರೆ. ಇಂಥವರಲ್ಲಿ ಕೆಲವರು ಇಂದು ಉನ್ನತ ಸ್ಥಾನ ಮುಟ್ಟಿದ್ದಾರೆ. ತಮ್ಮ ವಿದ್ವತ್ತೆಯಿಂದಲೂ ಕಾರ್ಯಕ್ಷಮತೆಯಿಂದಲೂ ಬಹಳ ಪ್ರಸಿದ್ಧಿಗೆ ಬಂದಿದ್ದಾರೆ. ಇವರಲ್ಲಿ ಇಂದು ಖ್ಯಾತರಾದ ಡಾ. ಆರ್. ಸಿ ಹಿರೇಮಠ ಅವರೊಬ್ಬರು. ನನಗೆ ಉಳಿದ ರೀತಿಯ ಸಂಪತ್ತು ಇಲ್ಲದಿದ್ದರೂ ವಿದ್ಯಾರ್ಥಿ ಸಂಪತ್ತು ಬಹುವಾಗಿ ಇದೆ. ಇದೊಂದು ನನ್ನ ಸುದೈವವೆಂದೇ ಭಾವಿಸುತ್ತೇನೆ. ಅವರ ವಿಷಯವಾಗಿ ನನಗೆ ಅಪಾರವಾದ ಪ್ರೀತ್ಯಾದರಗಳಿವೆ. ಪ್ರತಿಯಾಗಿ ಅವರು ನನ್ನಲ್ಲಿ ಇಟ್ಟುಕೊಂಡಿರುವ ಆದರಾಭಿಮಾನಗಳು ನನಗೆ ಒಂದು ಬಗೆಯ ಸಾರ್ಥಕತೆಯನ್ನು ತಂದು ಕೊಟ್ಟಿವೆ.

ಡಾ. ಆರ್. ಸಿ. ಹಿರೇಮಠರ ಮತ್ತು ನನ್ನ ಪರಸ್ಪರ ಪರಿಚಯ ಮೂವತ್ತೈದು ವರ್ಷಗಳಿಗೆ ಮೇಲ್ಪಟ್ಟಿದ್ದು. ಅವರು ವಿದ್ಯಾರ್ಥಿಯಾದಂದಿನಿಂದ ಎಂದರೆ ೧೯೪೨ ನೆಯ ಇಸವಿಯಿಂದ ಇಂದಿನ ವರೆಗೆ ನಮ್ಮ ಮಿತ್ರತ್ವವು ಒಂದೇ ಸಮನಾಗಿ ಗಾಢವಾಗಿಯೇ ಉಳಿದಿದೆ. ಅದಕ್ಕೆ ಕ್ಷಯವಿಲ್ಲ; ವೃದ್ಧಿಯಾಗುತ್ತಲೇ ಇದೆ. ಪ್ರಸಿದ್ಧ ಪ್ರಾಧ್ಯಾಪಕರೆಂದೂ ಖ್ಯಾತ ಸಂಶೋಧಕರೆಂದೂ ಒಳ್ಳೆಯ ಬರೆಹಗಾರರೆಂದೂ ಕರ್ನಾಟಕ ವಿಶ್ವವಿದ್ಯಾಲಯದ ಪ್ರಥಾಮಿ ಕುಲಪತಿಗಳೆಂದೂ ರಾಷ್ಟ್ರೀಯ ಪ್ರಾಧ್ಯಾಪಕರೆಂದೂ ಖ್ಯಾತರಾದವರು. ಇಷ್ಟೆಲ್ಲ ಹೆಸರು ಗಳಿಸಿದ ಅವರು ನನ್ನನ್ನು ತಾವು ವಿದ್ಯಾರ್ಥಿಯಾಗಿದ್ದಾಗ

ಕಾಣುತ್ತಿದ್ದಂತೆ ಇಂದಿಗೂ ಕಾಣುತ್ತಿದ್ದಾರೆ. ಅವರ ವಿನಯ ಸೌಜನ್ಯಗಳಿಗೆ ನಾನು ಮಾರುಹೋಗಿದ್ದೇನೆ. ಅವರ ಪ್ರೀತ್ಯಾದರಗಳನ್ನು ಅನುಭವಿಸುತ್ತಿರುವ ನಾನು ಅವರ ವಿಷಯವಾಗಿ ಏನಾದರೂ ಬರೆಯಬೇಕೆಂದರೆ ಸ್ವಲ್ಪ ಸಂಕೋಚವೆನಿಸುತ್ತದೆ. ಹೃದಯಲ್ಲಿ ಉದ್ಭವಿಸುವ ಭಾವಗಳು ನನ್ನ ಲೇಖನಿಯನ್ನು ಕುಂಠಿತಗೊಳಿಸುತ್ತವೆ. ತೀರಹತ್ತಿರದವ ನೆನಿಸುವ ಒಬ್ಬ ವ್ಯಕ್ತಿಯ ವಿಷಯವಾಗಿ ಏನಾದರೂ ಹೇಳಬೇಕೆಂದರೆ ನಮ್ಮ ಅನಿಸಿಕೆಗಳು ಭಾವಾತಿರೇಕದಿಂದ ಅಸ್ಪಷ್ಟವಾಗುತ್ತವೆ. ಹೃದಯವು ಬುದ್ಧಿಗೆ ಆವರಣವನ್ನು ಹಾಕುತ್ತದೆ. ಆದರೂ ಅವರು ವಿದ್ಯಾರ್ಥಿಯಾಗಿದ್ದಾಗ ಹೇಗೆ ಇದ್ದರು, ಹೇಗೆ ಅಭ್ಯಾಸ ಮಾಡುತ್ತಿದ್ದರು, ಅವರ ಚಟುವಟಿಕೆಗಳು ಯಾವ ರೀತಿಯಾಗಿದ್ದವು, ಅವರ ಸಾಮಾನ್ಯ ನಡತೆ ಹೇಗೆ ಇತ್ತು ಇವೇ ಮೊದಲಾದ ವಿಷಯಗಳನ್ನು ಕುರಿತು ನನ್ನ ವೈಯಕ್ತಿಕ ಭಾವನೆಗಳನ್ನು ಬದಿಗಿಟ್ಟು ಈ ಮಾತುಗಳನ್ನು ಬರೆಯುತ್ತೇನೆ.

ನಾನು ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ೧೯೩೫ ರಿಂದ ೧೯೬೧ ರ ವರೆಗೆ ಕನ್ನಡದ ಅಧ್ಯಾಪಕನಾಗಿ ಕೆಲಸ ಮಾಡಿದೆ. ಕೆಲವು ವರ್ಷ ಇಂಗ್ಲಿಷನ್ನೂ ಕಲಿಸುತ್ತಿದ್ದೆ. ೧೯೪೨ ರಲ್ಲಿ ಆರ್. ಸಿ. ಅವರು ಇಂಟರ ಕ್ಲಾಸಿನ ವಿದ್ಯಾರ್ಥಿಯಾಗಿ ಬಂದರು. ಆ ವರ್ಷ ಅವರ ನಿಕಟ ಪರಿಚಯ ನನಗೆ ಆಗಲಿಲ್ಲ; ಆದರೆ ಒಳ್ಳೆಯ ಜಾಣನೂ ಅಭ್ಯಾಸ ವೃತ್ತಿಯುಳ್ಳವನೂ ಆದ ವಿದ್ಯಾರ್ಥಿಯೆಂದು ನನಗೆ ಎನಿಸಿತು. ಅವರೊಬ್ಬ ಹಸಮ್ಮುಖಿಯಾದ ವಿದ್ಯಾರ್ಥಿ. ಜೋಲುಮೋರೆಯವರಲ್ಲ. ಸದಾ ಉತ್ಸಾಹಶಾಲಿ ಎಂದು ಕಂಡುಕೊಂಡೆ. ಅವರು ಎಷ್ಟು ಬಡತನದಲ್ಲಿ ಎಂಥ ಕಷ್ಟಪರಂಪರೆಯಲ್ಲಿ ಬೆಳೆದಿದ್ದಾರೆಂದು ನನಗೆ ಬೇರೆಯವರಿಂದ ತಿಳಿಯಿತು. ಇಷ್ಟು ಕಷ್ಟದಲ್ಲಿ ಬೆಳೆದವನೂ ಇಷ್ಟು ಕಷ್ಟದ ಜೀವನವನ್ನು ಸಾಗಿಸುತ್ತಿದ್ದವನೂ ಆದ ಈ ವಿದ್ಯಾರ್ಥಿ ಇಷ್ಟು ಉಲ್ಲಾಸ ವೃತ್ತಿಯವನೂ ಉತ್ಸಾಹಶೀಲನೂ ಆಗಿದ್ದುದನ್ನು ನೋಡಿ ಅವನ ವಿಷಯವಾಗಿ ಹೆಚ್ಚಾದ ಆದರವುಂಟಾಯಿತು. ಅನೇಕ ತೊಂದರೆಗಳಿದ್ದರೂ ವಿದ್ಯಾರ್ಜನೆಯನ್ನು ನಿಷ್ಠೆಯಿಂದ ಮಾಡುವದು ದೊಡ್ಡದು. ವಿದ್ಯಾರ್ಜನೆಯಲ್ಲಿ ಮೇಲ್ತರಗತಿಯ ಸ್ಥಾನ ವನ್ನು ಪಡೆಯುತ್ತಿರುವದು ಇನ್ನೂ ಹೆಚ್ಚಿನದು; ತನ್ನ ಕಷ್ಟಗಳನ್ನು ಲೆಕ್ಕಿಸದೆ ಉಲ್ಲಾಸ ವೃತ್ತಿಯಿಂದ ಇರುವದು ಇನ್ನೂ ಬಹಳ ಹೆಚ್ಚಿನದು ಎಂದು ಅವರ ವಿಷಯವಾಗಿ ತೀವ್ರವಾದ ಆದರಾಭಿಮಾನಗಳು ನನ್ನಲ್ಲಿ ಉಂಟಾದವು. ಇಂಥ ವಿದ್ಯಾರ್ಥಿಗೆ ಯಾವ ರೀತಿಯಾಗಿ ಸಹಾಯಮಾಡಿದರೂ ಕಡಿಮೆ ಎಂದು ನನಗೆ ಎನಿಸಿತು.

ಆರ್. ಸಿ. ಅವರು ಮುಂದಿನ ವರ್ಷ ಬಿ. ಎ ಕ್ಲಾಸಿಗೆ ಬಂದಾಗ ನನ್ನ ಅವರ ಸಂಬಂಧವು ಅತ್ಯಂತ ನಿಕಟವಾಯಿತು. ಬಿ. ಎ. ದಲ್ಲಿ ಅವರು ಕನ್ನಡವನ್ನು ಮುಖ್ಯ ವಿಷಯವೆಂದು ಆರಿಸಿಕೊಂಡದ್ದರಿಂದ ವಾರದಲ್ಲಿ ನಾಲ್ಕೈದುದಿನ ಅವರಿಗೆ ಪಾಠ ವನ್ನು ಹೇಳುವ ಸುಯೋಗ ನನಗೆ ದೊರೆಯಿತು. ಅವರು ಕನ್ನಡವನ್ನು ಮುಖ್ಯ ಯವೆಂದು ತೆಗೆದುಕೊಳ್ಳುತ್ತಾರೆಂದು ತಿಳಿದ ಕೂಡಲೆ ನನಗೆ ಒಂದು ಆಶಂಕೆ

ಯುಂಟಾಯಿತು. ಈ ಕಷ್ಟಪರಂಪರೆಯನ್ನು ಅನುಭವಿಸುತ್ತಿರುವ ಬಹಳ ಜಾಣನಾದ ವಿದ್ಯಾರ್ಥಿ ಕನ್ನಡವನ್ನು ತೆಗೆದುಕೊಂಡು ತನ್ನ ಭವಿಷ್ಯವನ್ನು ಕೆಡಿಸಿಕೊಳ್ಳುವನಲ್ಲಾ ಎಂದು ನನಗೆ ವಿವಂಚನೆಯಾಯಿತು. ಏಕೆಂದರೆ ಆ ಕಾಲದಲ್ಲಿ ಕನ್ನಡ ಬಿ. ಎ. ಎಮ್. ಎ. ಗಳಿಗೆ ವಿಶೇಷ ಮನ್ನಣೆಯಿದ್ದಿಲ್ಲ. ಅವರಿಗೆ ನೌಕರಿ ದೊರೆಯುವದೂ ಸುಲಭವಿರಲಿಲ್ಲ. ಕನ್ನಡ ಅಧ್ಯಾಪಕರ ಸ್ಥಾನಗಳೂ ಕಾಲೇಜುಗಳಲ್ಲಿ ಹೆಚ್ಚಾಗಿ ಇರಲಿಲ್ಲ. ಅಪರೂಪವಾಗಿ ಇದ್ದರೂ ಅವರಿಗೆ ಬಹಳ ಮಹತ್ವವಿದ್ದಿಲ್ಲ. ಅದೇ ಇಂಗ್ಲಿಷ, ಗಣಿತ ಇಲ್ಲವೆ ಸಂಸ್ಕೃತವನ್ನು ತೆಗೆದುಕೊಂಡು ಎಮ್. ಎ. ಆದರೆ ಕೆಲಸಗಳು ಬೇಗ ಸಿಕ್ಕಬಹುದಾಗಿತ್ತು; ಅವರಿಗೆ ಹೆಚ್ಚು ಮನ್ನಣೆಯೂ ಇತ್ತು. ಈ ಕಾರಣಗಳಿಂದ ಕನ್ನಡವನ್ನು ಮುಖ್ಯವಿಷಯವಾಗಿ ತೆಗೆದುಕೊಳ್ಳಬಾರದೆಂದು ಅವರನ್ನು ಭೇಟಿಮಾಡಿ ಉಪದೇಶಿಸಿದೆ. ಕನ್ನಡವನ್ನು ತೆಗೆದುಕೊಂಡರೆ ವೈಯಕ್ತಿಕವಾಗಿ ನನಗೂ ಕನ್ನಡ ವರ್ಗಕ್ಕೂ ಲಾಭವಿತ್ತು. ಒಬ್ಬ ಮೇಧಾವಿಯಾದ ವಿದ್ಯಾರ್ಥಿ ಕನ್ನಡವನ್ನು ತೆಗೆದುಕೊಂಡು ಪ್ರಥಮವರ್ಗದಲ್ಲಿ ಉತ್ತೀರ್ಣನಾದರೆ ನನಗೂ ಸ್ವಲ್ಪ ಯಶಸ್ಸು ಬರುತ್ತಿತ್ತು; ಕನ್ನಡ ಡಿಪಾರ್ಟಮೆಂಟಿಗೂ ಯಶಸ್ಸು ಬರುತ್ತಿತ್ತು. ಇಂಥ ವಿದ್ಯಾರ್ಥಿಯನ್ನು ಪಡೆಯುವ ಸುದೈವವು ನನ್ನದಾಗುತ್ತಿತ್ತು. ಆದರೆ ಅವರ ಭವಿಷ್ಯದಲ್ಲಿ ಲಕ್ಷ್ಯವಿಟ್ಟು ನನ್ನ ಸ್ವಾರ್ಥವನ್ನು ಬದಿಗಿಟ್ಟು, ಕನ್ನಡವನ್ನು ತೆಗೆದುಕೊಳ್ಳಬಾರದೆಂದು ಉಪದೇಶಿಸಿದೆ. ಆರ್. ಸಿ. ಅವರು ಸಂಸ್ಕೃತ ಇಂಗ್ಲಿಷಿನಲ್ಲಿಯೂ ಗಟ್ಟಿಗರಾಗಿದ್ದಾರೆಂಬುದು ನನಗೆ ಗೊತ್ತಿತ್ತು. ಗಣಿತವೂ ಅವರಿಗೆ ಪ್ರೀತಿಯ ವಿಷಯವೆಂದು ನನಗೆ ಗೊತ್ತಿತ್ತು. ಆದರೆ ನನಗೇ ಗಣಿತವು ತಿಳಿಯದ ವಿಷಯವಾಗಿತ್ತಾದ್ದರಿಂದ ನಾನೇನೂ ಹೇಳಲಾರೆ. ನನ್ನ ಉಪದೇಶವನ್ನು ಅವರು ಕೇಳಲಿಲ್ಲ. ಅದು ಬಹಳ ಒಳ್ಳೆಯದಾಯಿತು. ಏಕೆಂದರೆ ಕನ್ನಡದಲ್ಲಿ ಬಹು ಬೆಲೆಯುಳ್ಳ ಕಾರ್ಯವನ್ನು ಅವರು ಮಾಡಿದ್ದಾರೆ. ಕನ್ನಡದಿಂದಲೇ ಅವರಿಗೆ ಪ್ರಖ್ಯಾತಿಯುಂಟಾಯಿತು. ಆದ್ದರಿಂದ ನನ್ನ ಉಪದೇಶವೇ ತಪ್ಪಾಗಿತ್ತೆಂದು ಈಗ ನನಗೆ ತಿಳಿದಿದೆ. ನನ್ನ ಉಪದೇಶದಂತೆ ನಡೆಯದಿದ್ದದ್ದೇ ಒಳ್ಳೆಯದಾಯಿತು.

ಇವರು ಬಿ. ಎ. ಕ್ಲಾಸಿಗೆ ಬಂದ ವರ್ಷ ನಮ್ಮ ಕ್ಲಾಸಿನ ಉತ್ಕರ್ಷವು ಇನ್ನೂ ಹೆಚ್ಚಾಯಿತು. ನನಗೆ ಉತ್ಸಾಹವು ಇಮ್ಮಡಿಯಾಯಿತು. ಜಾಣರಾದ ರಸಗ್ರಹಣಮಾಡುವ ಶಕ್ತಿಯುಳ್ಳ ವಿದ್ಯಾರ್ಥಿಗಳಿದ್ದರು. ಇವರಲ್ಲಿ ಆರ್. ಸಿ ಅವರೇ ಮೊದಲಿಗರು. ಆಗ ರನ್ನನ ಗದಾಯುದ್ಧವು ಪಠ್ಯಪುಸ್ತಕವಾಗಿತ್ತು. ಅದನ್ನು ನಾನು ಕಲಿಸುವಾಗ ವಿದ್ಯಾರ್ಥಿಗಳಿಂದ ಬರುವ ಪ್ರತಿಕ್ರಿಯೆ ನನ್ನ ಉತ್ಸಾಹವನ್ನು ಇಮ್ಮಡಿಸುತ್ತಿತ್ತು. ಆ ದಿನಗಳನ್ನು ನಾನೆಂದೂ ಮರೆಯಲಾರೆ. ಆರ್. ಸಿ. ಅವರು ತನ್ಮಯರಾಗಿ, ಆ ಕಾವ್ಯದ ರಸಗ್ರಹಣ ಮಾಡುತ್ತಿದ್ದರು. ಅವರ ಬುದ್ಧಿಮತ್ತೆ, ನೆನಪಿನ ಶಕ್ತಿ, ಅಭ್ಯಾಸ ಪ್ರವೃತ್ತಿ, ಸಾರಾಸಾರ ವಿವೇಚನೆ— ಇವೆಲ್ಲವೂ ನನ್ನನ್ನು ಮುಗ್ಧನನ್ನಾಗಿ

ಮಾಡಿದವು. ಇವೆಲ್ಲಕ್ಕಿಂತ ಅವರ ವಿನಯ, ಸೌಜನ್ಯ, ಸಾದಾತನ— ಇವು ನನ್ನನ್ನು ಹೆಚ್ಚಾಗಿ ಆಕರ್ಷಿಸಿದವು. ಇಂಥ ವಿದ್ಯಾರ್ಥಿಯನ್ನು ಪಡೆದ ನಾನು ಸುದೈವಿಯೆಂದು ಎನಿಸುತ್ತಿತ್ತು. ಬಿ. ಎ. ಕ್ಲಾಸಿನಲ್ಲಿದ್ದಾಗಲೇ ಕಾಲೇಜಿನ ಕರ್ನಾಟಕ ಸಾಹಿತ್ಯಸಂಘದ ಕಾರ್ಯದರ್ಶಿಯಾಗಿ ಕೆಲಸಮಾಡಿದರು. ಆ ಕಾಲದಲ್ಲಿ ನಮ್ಮ ಕಾಲೇಜಿನ ಕರ್ನಾಟಕ ಸಂಘವು ಬೆಳಗಾವಿಯ ಸಾರ್ವಜನಿಕಜೀವನದಲ್ಲಿ ಒಂದು ಸ್ಥಾನವನ್ನು ಪಡೆದು ಕೊಂಡಿತ್ತು. ಅನೇಕ ಕಾರ್ಯಕ್ರಮಗಳನ್ನು ನಾವು ಜರುಗಿಸುತ್ತಿದ್ದೆವು. ನಮ್ಮ ವಾರ್ಷಿಕೋತ್ಸವಗಳು ಅತ್ಯಂತ ವಿಜೃಂಭಣೆಯಿಂದ ನೆರವೇರುತ್ತಿದ್ದವು. ಆರ್. ಸಿ. ಅವರು ಸಂಘದ ಕಾರ್ಯದರ್ಶಿಯಾಗಿ ಬಹಳ ಉತ್ಸಾಹದಿಂದ ಅಚ್ಚುಕಟ್ಟುತನದಿಂದ ಚಟುವಟಿಕೆಗಳನ್ನು ನಡಸಿಕೊಂಡುಹೋಗುತ್ತಿದ್ದರು. ಅವರಿಗೆ ಬೆಂಬಲವಾಗಿ ಅನೇಕ ಮಿತ್ರರಿದ್ದರು. ಡಾ. ಸುಂಕಾಪುರ. ಶ್ರೀ ಎಮ್ಮಿಯವರ, ಶ್ರೀ ಮಾಮಲೆದೇಸಾಯಿ, ಶ್ರೀ ನಂಜಯ್ಯನಮಠ ಮೊದಲಾದವರು ಅವರ ಜೊತೆಗೆ ಉತ್ಸಾಹದಿಂದ ಕಾರ್ಯ ಮಾಡುತ್ತಿದ್ದರು. ಆರ್. ಸಿ. ಅವರು ತಮ್ಮ ಸ್ವಾಭಾವಿಕವಾದ ವಿನಯಶೀಲತೆಯಿಂದ ಎಲ್ಲರ ಸಂಗಡ ಸೌಹಾರ್ದವೃತ್ತಿಯಿಂದ ನಡೆದುಕೊಳ್ಳುತ್ತಿದ್ದರು. ಕೆಲಸ ಮಾಡು ವಾಗ ಮೇಲು ಕೀಳು ಎಂದು ಅವರು ಯಾವಾಗಲೂ ಭಾವಿಸಲಿಲ್ಲ. ಖರ್ಚಿಗಳನ್ನು ಇಡುವದು ಮೊದಲಾದ ಕೆಲಸಗಳನ್ನು ಸಹ ಹುರುಪಿನಿಂದ ಮಾಡುತ್ತಿದ್ದರು.

ಅವರು ಕರ್ನಾಟಕ ಸಾಹಿತ್ಯ ಸಂಘದ ವಾರ್ಷಿಕೋತ್ಸವದ ನಾಟಕಗಳಲ್ಲಿಯೂ ಭಾಗ ವಹಿಸುತ್ತಿದ್ದರು. ಅಭಿನಯದಲ್ಲಿ. ವಿಶೇಷವಾಗಿ ಹಾಸ್ಯಪಾತ್ರಗಳಲ್ಲಿ ಡಾ. ಸುಂಕಾಪುರ, ಶ್ರೀ ಎ. ಯು. ಹಿರೇಮಠ, ಶ್ರೀ ನಂಜಯ್ಯನಮಠ ಮೊದಲಾದವರು ಬಹಳ ಪ್ರಸಿದ್ಧ ರಾಗಿದ್ದರು. ನಾನು ಒಮ್ಮೆ ಗದಾಯುದ್ಧ ನಾಟಕದಲ್ಲಿ ದುರ್ಯೋಧನನ ಪಾತ್ರವಹಿಸಿ ನಾಟಕ ಮಾಡಿದಾಗ ಆರ್. ಸಿ. ಅವರು ಮತ್ತು ಡಾ. ಸುಂಕಾಪುರ ಅವರು ಪಾತ್ರ ವಹಿಸಿದ್ದು ನನಗೆ ನೆನಪಿಗೆ ಬರುತ್ತದೆ. ಯಾವ ಕೆಲಸವನ್ನೇ ಮಾಡಲಿ ಆರ್. ಸಿ. ಅವರು ನಿಷ್ಠೆಯಿಂದ ಮಾಡುತ್ತಿದ್ದರು. ನಗುನಗುತ್ತ ಮಾಡುತ್ತಿದ್ದರು. ಅಭ್ಯಾಸ ವನ್ನೂ ನಗುನಗುತ್ತಲೇ ಮಾಡುತ್ತಿದ್ದರೆಂದು ಕಾಣುತ್ತದೆ. ಕಷ್ಟದಲ್ಲಿ ಬೆಳೆದ ಒಬ್ಬ ವ್ಯಕ್ತಿ ಇಂಥ ಉಲ್ಲಾಸ ವೃತ್ತಿಯಿಂದ ಇರುವದನ್ನು ನೋಡಿ ನನಗೆ ವಿಸ್ಮಯವಾಗು ತ್ತಿತ್ತು: ಆದರಾಭಿಮಾನಗಳು ಹೆಚ್ಚುತ್ತಿದ್ದವು. ಇದೇ ಗುಣವು ಅವರಲ್ಲಿ ಕಡೆತನಕವೂ ಉಳಿದಿದೆ. ಧೈರ್ಯ, ಸಾಹಸ. ಉತ್ಸಾಹ, ಉಲ್ಲಾಸ— ಇವೇ ಅವರನ್ನು ಜೀವನ ದಲ್ಲಿ ಪಾರುಮಾಡಿವೆ.

ಅವರು ಪ್ರಥಮವರ್ಗದಲ್ಲಿ ಪ್ರಥಮರಾಗಿ ಬಿ. ಎ. ಪರೀಕ್ಷೆಯಲ್ಲಿ ತೇರ್ಗಡೆ ಯಾದರು. ನಮ್ಮ ಕಾಲೇಜಿಗೂ ನನಗೂ ಕೀರ್ತಿಯನ್ನು ತಂದರು. ನನ್ನ ಜೊತೆಗೆ ಕನ್ನಡದ ಅಧ್ಯಾಪಕರಾಗಿದ್ದ ಪ್ರೊ. ಭೂಸನೂರಮಠ ಅವರೂ ಆರ್. ಸಿ. ಅವರಿಗೆ ಅನೇಕ ರೀತಿಯ ಪ್ರೋತ್ಸಾಹವನ್ನು ಕೊಟ್ಟರು. ಅವರಿಬ್ಬರ ಸಂಬಂಧವೂ ತೀರ

ಪತ್ರಿಸಿದ್ದಾಗಿತ್ತು. ಬಿ. ಎ. ಆದಮೇಲೆ ಆರ್. ಸಿ. ಅವರು ಲಿಂಗರಾಜ ಕಾಲೇಜಿನ ಫೆಲೋ ಆಗಿ ಎಂ. ಎ. ಅಭ್ಯಾಸವನ್ನು ಪ್ರಾರಂಭಿಸಿದರು. ಆಗಿನ ಕಾಲದಲ್ಲಿ ಎಂ. ಎ. ವಿದ್ಯಾರ್ಥಿಗಳಿಗೆ ಈಗಿನಂತೆ ದಿನದಿನವೂ ಪಾಠ ಹೇಳುತ್ತಿರಲಿಲ್ಲ. ಆಗ ನಾನೊಬ್ಬನೇ ಅಧ್ಯಾಪಕ; ಆರ್. ಸಿ. ಅವರೊಬ್ಬರೇ ವಿದ್ಯಾರ್ಥಿ – ಹೀಗೆ ಇತ್ತು ಪರಿಸ್ಥಿತಿ. ಬಿ. ಎ. ಕ್ಲಾಸಿನಲ್ಲಿ ನಿಯತವಾಗಿ ಪಾಠ ಹೇಳಿಕೊಟ್ಟಂತೆ ಎಂ. ಎ. ಕ್ಲಾಸಿನಲ್ಲಿ ನಾನೇನು ಅವರಿಗೆ ಕಲಿಸಲಿಲ್ಲ, ಎಲ್ಲವನ್ನೂ ಅವರೇ ನೋಡಿಕೊಳ್ಳುತ್ತಿದ್ದರು. ವಾರದಲ್ಲಿ ಒಂದೆರಡು ಸಲ ಭೇಟಿಯಾಗಿ ಕೆಲವೊಂದು ವಿಷಯಗಳನ್ನು ಚರ್ಚಿಸುತ್ತಿದ್ದೆವು. ಒಂದೊಂದು ಸಲ ನಮ್ಮ ಮನೆಯಲ್ಲಿಯೇ ಎಂ. ಎ. ಕ್ಲಾಸು ನಡೆಯುತ್ತಿತ್ತು. ಒಟ್ಟಿನಲ್ಲಿ ಎಂ. ಎ. ಅಭ್ಯಾಸವನ್ನು ಅವರೇ ಸ್ವತಂತ್ರವಾಗಿ ಮಾಡಿಕೊಂಡರೆನ್ನಬಹುದು. ಎಂ. ಎ. ಪರೀಕ್ಷೆಯಲ್ಲಿಯೂ ಪ್ರಥಮವರ್ಗದಲ್ಲಿ ಪ್ರಥಮರಾಗಿ ತೇರ್ಗಡೆ ಹೊಂದಿದರು ಅವರಿಗೆ ಅಭಿನಂದನೆಗಳ ಸುರಿಮಳೆಯಾಯಿತು: ನನಗೂ ಅಭಿನಂದನೆಗಳು ಬಂದವು. ಆಗಿನ ಕಾಲದಲ್ಲಿ ಈಗಿನಂತೆ ಎಂ. ಎ ದಲ್ಲಿ ಕನ್ನಡ ತೆಗೆದುಕೊಂಡು ಪ್ರಥಮವರ್ಗದಲ್ಲಿ ಬರುವವರ ಸಂಖ್ಯೆ ದೊಡ್ಡದಾಗಿರಲಿಲ್ಲ. ಇಡೀ ಮುಂಬಯಿ ವಿಶ್ವವಿದ್ಯಾಲಯದ ಇತಿಹಾಸದಲ್ಲಿ ಮೊಟ್ಟಮೊದಲು ಕನ್ನಡದಲ್ಲಿ ಎಂ. ಎ. ಪರೀಕ್ಷೆಯಲ್ಲಿ ಮೊದಲನೇ ವರ್ಗದಲ್ಲಿ ತೇರ್ಗಡೆಯಾದವರೆಂದರೆ ನನ್ನ ಪ್ರಿಯರಾಗಿದ್ದ ದಿ. ಎ. ಟಿ. ಸಾಸನೂರ ಅವರು. ಆಮೇಲೆ ನನ್ನ ಪ್ರಿಯ ವಿದ್ಯಾರ್ಥಿಯಾಗಿದ್ದ ಆರ್. ಸಿ. ಹಿರೇಮಠ ಅವರು.

ಆರ್. ಸಿ. ಅವರು ವಿದ್ಯಾರ್ಥಿಯಾಗಿದ್ದಾಗ ಅವರ ಅಸಾಮಾನ್ಯ ಯೋಗ್ಯತೆಯನ್ನು ಕಂಡ ನನಗೆ (ಗುರುವೆನಿಸಿಕೊಂಡಿದ್ದರೂ) ಅವರು ಬಹು ದೊಡ್ಡ ಸ್ಥಾನಕ್ಕೆ ಏರುವರೆಂದು ನಾನು ಭಾವಿಸಿರಲಿಲ್ಲ. ಕನ್ನಡದ ಶ್ರೇಷ್ಠ ಅಧ್ಯಾಪಕ, ಪಂಡಿತ, ಸಂಶೋಧಕ, ಬರೆಹಗಾರ ಆಗುವರೆಂದು ನಾನು ಭಾವಿಸಿದ್ದೆ. ಆದರೆ ವಿಶ್ವವಿದ್ಯಾಲಯದ ಕನ್ನಡದ ಮುಖ್ಯಸ್ಥ, ಮುಂದೆ ಕುಲಪತಿ ಹೀಗೆಲ್ಲ ಮಹತ್ವದ ಸ್ಥಾನಗಳನ್ನು ಪಡೆಯುವರೆಂದು ನಾನು ಭಾವಿಸುವದು ಅಂದು ಶಕ್ಯವೇ ಇದ್ದಿಲ್ಲ. ಏಕೆಂದರೆ ಭಾರತದ ಸ್ವಾತಂತ್ರ್ಯ, ಕರ್ನಾಟಕದ ಏಕೀಕರಣ, ಕರ್ನಾಟಕ ವಿಶ್ವವಿದ್ಯಾಲಯದ ಸ್ಥಾಪನೆ, ಕನ್ನಡ ಭಾಷೆಗೆ ಇಂದಿರುವ ಪ್ರಥಮಸ್ಥಾನ— ಇವೆಲ್ಲವೂ ಆಗ ಅಶಕ್ಯಕೋಟಿಯ ಮಾತಾಗಿದ್ದವು, ಇವೆಲ್ಲವೂ ಕಾಲವಶದಿಂದ ಸಂಘಟಿಸಿದವು. ಆರ್. ಸಿ. ಅವರು ಆಗ ನಾನು ಭಾವಿಸಿದ, ಇಚ್ಛಿಸಿದ, ಆಶೀರ್ವದಿಸಿದ ಸ್ಥಾನಕ್ಕಿಂತಲೂ ಉನ್ನತವಾದುದನ್ನು ಪಡೆದರು. ಇದಕ್ಕಿಂತಲೂ ಹೆಚ್ಚಿನ ಸಂತೋಷ ನನಗಿನ್ನೇನು ? ಇನ್ನೂ ಎತ್ತರ ಸ್ಥಾನಕ್ಕೆ ಅವರು ಹೋಗಲಿ, ಅವರ ಕೀರ್ತಿ ಇನ್ನೂ ಬೆಳಗಲಿ, ಅವರಿಂದ ಕನ್ನಡಕ್ಕೆ, ನಮ್ಮ ದೇಶಕ್ಕೆ ಇನ್ನೂ ಹೆಚ್ಚಿನ ಸೇವೆ ಸಲ್ಲಲಿ. ಅವರು ದೀರ್ಘಾಯುಷಿಗಳಾಗಿ ಸುಖಜೀವನವನ್ನು ಸಾಗಿಸಲಿ, ಅವರಿಗೂ ಅವರ ಕುಟುಂಬದವರಿಗೂ ಎಲ್ಲ ಸನ್ಮಂಗಳವಾಗಲಿ ಎಂದು ಹಾರೈಸುತ್ತೇನೆ.

"ಸಮಸ್ತ ಸನ್ಮಂಗಳಾನಿ ಭವಂತು"

■ ■

# ವಿದ್ಯಾರ್ಥಿಸ್ನೇಹಿತ ಆರ್. ಸಿ. ಹಿರೇಮಠ

□ □ □ □ □ □ □ □ □ □ □ □ □ □ □ □ □ □

ಪಾಟೀಲ ಪುಟ್ಟಪ್ಪ

□ □ □ □ □ □ □ □ □ □ □ □ □ □ □ □ □ □

ಎಷ್ಟೋ ಜನರಿಗೆ ಓದಲು ಅನುಕೂಲ ಇರುತ್ತದೆ. ಅವರು ಓದುವುದಿಲ್ಲ; ಕೆಲವು ಜನರು ಓದಬೇಕೆನ್ನುತ್ತಾರೆ, ಅವರಿಗೆ ಅನುಕೂಲ ಇರುವುದಿಲ್ಲ. ಕುರುಡಗಿಯ ಒಂದು ನಿರ್ಗತಿಕ ಕುಟುಂಬದ ರುದ್ರಯ್ಯ ಹಿರೇಮಠ, ತಮ್ಮ ಶಾಲೆ ಮುಗಿಸಿಯಾರು ಎಂದು ಯಾರೂ ನಿರೀಕ್ಷಿಸಿರಲಿಲ್ಲ. ಅವರೇನೋ ಓದಬೇಕೆಂದಾರು, ಆದರೆ ಊಟಕ್ಕೆ ಏನು ಮಾಡುತ್ತಾರೆ ಎನ್ನುವ ಪ್ರಶ್ನೆ ಎಲ್ಲರ ಮನಸ್ಸಿನ ಎದುರೂ ನಿಂತಿದ್ದಿತು. ಬಡತನ ಹಾಗೂ ಅಸಹಾಯಕತೆಗಳ ಕಿರೀಟ ಹೊತ್ತು ನಿಂತಿದ್ದ ಅವರ ದಾರಿಯಲ್ಲಿ ಅನಿಶ್ಚಿತತೆ ಯೊಂದೇ ನಿಶ್ಚಿತವೆನಿಸಿದ್ದಿತು. ಮುಂದಿನ ಊಟ ಎಲ್ಲಿ ಎನ್ನುವ ಸಂದಿಗ್ಧತೆ ಅವರನ್ನು ಹಿಡಿದು ಹಿಂದಕ್ಕೆಳೆದು ನಿಲ್ಲಿಸಿದ್ದಿತು.

ಈ ಆಲಿವ್ಹರ್ ಟ್ವಿಸ್ಟ್, ಕಷ್ಟದ ಕೂಳು ತಿಂದು ಕಣ್ಣೀರು ಕುಡಿದು, ಮ್ಯಾಟ್ರಿಕ್ ಪಾಸಾಗಿ, ಧಾರವಾಡ ಜಿಲ್ಲೆಗೇ ಧ್ವಜ ಹಚ್ಚಿ, ಹೆಚ್ಚಿನ ವಿದ್ಯಾಭ್ಯಾಸ ಮಾಡಲು ಕರ್ನಾಟಕ ಕಾಲೇಜಿಗೆ ಬಂದರೆ, ಎಲ್ಲರೂ ಅವನನ್ನು ನೋಡಬೇಕೆನ್ನುವವರೇ. ಆಗಿನ ಕಾಲದಲ್ಲಿ ವಿದ್ಯೆಯ ಸಾಧನೆ ಅಂಥ ಕುತೂಹಲವನ್ನು ಸುತ್ತಣ ಜನರಲ್ಲಿ ಕೆರಳಿಸುತ್ತಿತ್ತು. ಆದರೆ ನೋಡಬೇಕೆಂದರೆ ಹಿರೇಮಠರಲ್ಲಿ ಏನಿದೆ? ಹಸಿದ ಮುಖದ, ಬಡಕಲು ದೇಹದ ಆ ವ್ಯಕ್ತಿಯಲ್ಲಿ ನೋಡುವುದೇನೂ ಇರಲಿಲ್ಲ. ಅವರ ಶ್ರೀಮಂತ ವಿದ್ಯೆ ಅವರ ಬಡತನದ ಎದುರು ತಲೆತಗ್ಗಿಸಿ ನಿಂತುಕೊಂಡಿದ್ದಿತು. ಕಾಲೇಜಿಗೆ ಬಂದ ಹುಡುಗರು ಕೈ ಬಿಟ್ಟು ಖರ್ಚುಮಾಡುತ್ತಾರೆ, ಥಳಕು ಬೆಳಕಾಗಿ ಕಾಣುತ್ತಾರೆ. ಪರಂಪರಾಗತ ವಿದ್ಯಾರ್ಥಿಯನ್ನು ಕಣ್ಣೆದುರು ನಿಲ್ಲಿಸಿಕೊಂಡವರಿಗೆ ಹಿರೇಮಠರು ನಂಬರ್ ಹಚ್ಚಿದ ವಿದ್ಯಾರ್ಥಿಯಂತೆ ಕಾಣುತ್ತಲೇ ಇರಲಿಲ್ಲ.

ತಮ್ಮನ್ನು ಕಾಣಿಸಿಕೊಳ್ಳಬೇಕೆಂದು ಹಿರೇಮಠರು ತಾವಾಗಿಯೇ ಮುಂದೆಬಿದ್ದು ಹೋಗಲಾರರು. ಕಾಣಿಸಿಕೊಳ್ಳುವುದು ತಪ್ಪಲ್ಲಿ ಏನಿದೆ ಎಂದು ಅವರು ಹಿಂದೆ ಹಿಂದೆಯೇ ಇರುತ್ತಿದ್ದರು. ಅದನ್ನು ಒಂದುರೀತಿಯ ಕುಟಿಲ ಎನ್ನುವ ಭಾವನೆ ಎಂದರೂ ಸರಿಯೇ. ಅವರ ದೈನ್ಯಸ್ಥಿತಿಯು ಅವರ ಧೈರ್ಯವನ್ನು ಉಡುಗಿಸಿ ಹಾಕಿದ್ದಿತು. ಉಟ್ಟುಕೊಂಡು ಹೊರಗೆ ಹೋದೇನೆಂದರೆ ಅವರ ಬಳಿ ಇನ್ನೊಂದು ಧೋತರ ಇರಲಿಲ್ಲ. ತೊಟ್ಟುಕೊಂಡು ಹೊರಗೆ ಬರಬೇಕೆಂದರೆ ಇನ್ನೊಂದು ಅಂಗಿ ಇರಲಿಲ್ಲ. ಬಿಚ್ಚಿಕೊಂಡು ಮಲಗೇನೆಂದರೆ ಅವರಿಗೆ ಹಾಸುಗೆ ಇಲ್ಲ. ಹಚ್ಚಿಕೊಂಡು ಓದೇನೆಂದರೆ ಅವರಿಗೆ ದೀಪ ಇಲ್ಲ. ಬರೆಯುವುದಕ್ಕೆ ಕಾಗದ ಇಲ್ಲ, ಓದುವುದಕ್ಕೆ ಪುಸ್ತಕ ಇಲ್ಲ. ಉಂಡರೆ ಒಂದು ಹೊತ್ತು ಉಣ್ಣಬೇಕು. ಇಲ್ಲದಿದ್ದರೆ ಉಪವಾಸ ಇರಬೇಕು. ಅವರಿಗೆ ಶಿಷ್ಯವೇತನ ಬರುತ್ತಿತ್ತು: ಆದರೆ ಅವರಿಗೆ ತಾವು ಓದುವುದೊಂದೇ ಇರಲಿಲ್ಲ. ಗದುಗಿನಲ್ಲಿ, ಅವರ ಮೇಲೆಯೇ ಅವಲಂಬಿಸಿದ್ದ ತಾಯಿ ಹಾಗೂ ತಮ್ಮನ ಒಂದುಹೊತ್ತು, ಅವರು ಕಳಿಸುವ ಹಣದ ಮೇಲೆಯೇ ನಡೆಯಬೇಕು.

ಕಾಲೇಜಿಗೆ ಓದಲು ಬಂದಿದ್ದ ಹಿರೇಮಠರು ಸಂಪೂರ್ಣ ಹಳ್ಳಿಯ ಹೈದನಂತೆಯೇ ಇದ್ದರು. ಆದರೆ ನಯ ನಾಜೂಕಿನ ನವನಾಗರಿಕತೆಯ ಯುವಕರು ಯಾರೂ ಅವರಿಗೆ ಓದುಗಾರಿಕೆಯಲ್ಲಿ ಸರಿಹತ್ತಲಾರರು. ಹಿರೇಮಠರು ಓದುತ್ತಿದ್ದರೆಂದರೆ, ಅದು ಹೇಳುವುದಕ್ಕೆ ಒಂದು ಮಾತು ಅಷ್ಟೇ. ಯಾಕೆಂದರೆ ಅವರು ಪಠ್ಯಪುಸ್ತಕಗಳನ್ನು ನೋಡಿದ್ದರೇ ವಿನಾ ಕೊಂಡಿರಲಿಲ್ಲ. ವರ್ಗದಲ್ಲಿ ಅವರು ಮೈಯೆಲ್ಲ ಕಿವಿಯಾಗಿ ಕೇಳುತ್ತಿದ್ದರು. ವರ್ಗಕ್ಕೆ ಚಕ್ಕರ್ ಕೊಟ್ಟ ವಿದ್ಯಾರ್ಥಿಯು, ವರ್ಗದಲ್ಲಿ ಏನು ನಡೆಯಿತೆಂದು ಕೇಳಿದರೆ ಅವರು ನಡೆದುದನ್ನೆಲ್ಲ ನಡೆದಂತೆಯೇ ಹೇಳಿಬಿಡುತ್ತಿದ್ದರು. ಅವರದು ಚಿತ್ರಗ್ರಾಹೀ ಮನಸ್ಸು. ಒಮ್ಮೆ ಕೇಳಿದುದು ಅವರ ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಮೂಡಿರುತ್ತಿತ್ತು. ಉಳಿದವರು ಓದಲೆಂದು ಪುಸ್ತಕ ತಂದಿರುತ್ತಿದ್ದರು. ಆದರೆ ಓದುತ್ತಿರಲಿಲ್ಲ. ಹಿರೇಮಠರು ಅವಕಾಶ ಸಿಕ್ಕಾಗ, ಅವುಗಳ ಮೇಲೆ ಒಮ್ಮೆ ಕಣ್ಣು ಆಡಿಸಿ, ಅವುಗಳಲ್ಲಿ ಏನಿದೆಯೆಂದು ತಿಳಿದುಕೊಂಡು ಬಿಟ್ಟಿರುತ್ತಿದ್ದರು.

ನಿಲ್ಲಲು ನೆಲೆಯಿಲ್ಲದ, ಊಟ ಉಪಚಾರಕ್ಕೆ ಅನುಕೂಲತೆಯಿಲ್ಲದ, ಓದಲು ಪುಸ್ತಕ ಇಲ್ಲದ ಈ ಬಡವಿದ್ಯಾರ್ಥಿ ಕಾಲೇಜಿಗಾದರೂ ಏಕೆ ಬಂದನೆಂದು ಅವರ ಬಗೆಗೆ ಕನಿಕರ ವ್ಯಕ್ತಪಡಿಸುವವರೂ ಇದ್ದರು. ಮ್ಯಾಟ್ರಿಕ್‌ನಲ್ಲಿ ಏನೋ ಆಕಸ್ಮಿಕವೆಂದು ಚೆನ್ನಾಗಿ ಪಾಸಾಗಿರಬಹುದು. ಆ ಚಮತ್ಕಾರ ಕಾಲೇಜಿನಲ್ಲಿಯೂ ನಡೆಯುವುದೆಂದು ಹೇಳಲಿಕ್ಕಾಗದು, ಕಾಲೇಜು ಎಂದರೆ ಅದು ಇಂದು ಸಂಪೂರ್ಣ ಬೇರೆಯೇ ಜಗತ್ತು ಎಂದು ಹಿರೇಮಠರ ಬಗೆಗೆ ಅನುಮಾನಪಟ್ಟವರೂ ಇದ್ದರು. ಯಾಕೆಂದರೆ ಮ್ಯಾಟ್ರಿಕ್‌ನಲ್ಲಿ ಚೆನ್ನಾಗಿ ಪಾಸಾದವರು ಕಾಲೇಜಿಗೆ ಬಂದ ಮೇಲೆ ಚೆನ್ನಾಗಿಯೇ ಫೇಲ್ ಆದ ಉದಾಹರಣೆಗಳೇ ಇದ್ದವು. ಈ ಅನುಮಾನವನ್ನು ಕೆಲವು ಪ್ರೊಫೆಸರರೂ

ವಕ್ತಪಡಿಸಿದ್ದರು. ಹಿಂದೆ ಸರಿಯುವ ಸ್ವಭಾವದ ಹಿರೇಮಠರ ಬಗೆಗೆ ಅವರೂ ಒಬ್ಬರು ಕಾಲೇಜಿನಲ್ಲಿದ್ದಾರೆ ಎನ್ನುವ ಭಾವನೆಯನ್ನು ಅನೇಕರು ಮಾಡಿಕೊಂಡಿದ್ದರು.

ಆರ್. ಸಿ. ಅವರು ಆಟಗಳಲ್ಲಿ ಇರಲಿಲ್ಲ. ಡಿಬೇಟಿನಲ್ಲಿ ಇರಲಿಲ್ಲ, ಬೀದಿಗಳಲ್ಲಿ ಇರಲಿಲ್ಲ, ಹಾಳುಹರಟೆಯಲ್ಲಿ ಇರಲಿಲ್ಲ. ಹೊಟೆಲ್‌ನಲ್ಲಿ ಇರಲಿಲ್ಲ. ಥೇಟರಿನಲ್ಲಿ ಇರಲಿಲ್ಲ. ಎಂತಲೇ ಅವರು ಯಾರ ಬಾಯಲ್ಲಿಯೂ ಇರಲಿಲ್ಲ, ಯಾರಾದರೂ ಏನಾದರೂ ಮಾಡಿದರೇನೆ ಚರ್ಚೆಗೊಳ್ಳುತ್ತಾರೆ. ಏನನ್ನು ಮಾಡದೇ ಇದ್ದ ಅವರನ್ನು ಕುರಿತು ಯಾರು ಚರ್ಚೆ ಮಾಡಬೇಕು? ಚರ್ಚೆ ಮಾಡಿದರೆ ಅವರ ಮುಗ್ಧತೆಯ ಬಗೆಗೆ, ಹಿಂದುಳಿದ ಸ್ಥಿತಿಯ ಬಗೆಗೆ ಚರ್ಚೆ ಮಾಡಬೇಕು. ಅಷ್ಟೆ! ಇಂಥ ಸ್ಥಿತಿಯಲ್ಲಿ ಓದಲು ಕಾಲೇಜಿಗೇಕೆ ಬರಬೇಕೆಂದು ಕೆಲವರು ಅವರ ಬಗೆಗೆ ಅನುಮಾನ ರೀತಿಯಿಂದ ಆಡಿಕೊಂಡೇ ಇದ್ದರು. ಬಡತನವೆಂದರೆ ಏನೆಂಬುದನ್ನು ಅರಿಯದವರು ಬಡತನದ ಸ್ಥಿತಿಯಲ್ಲಿ ಇದ್ದವರನ್ನು ಕಂಡು ಹೀಯಾಳಿಸುತ್ತಾರೆ. ಆಡಿಕೊಳ್ಳುವವರ ಬಾಯಿಗೆ ವಸ್ತುವೇಕೆ ಆಗಬೇಕೆಂದು ಹಿರೇಮಠರು ಸಾಧ್ಯವಾದ ಮಟ್ಟಿಗೂ ಹಿಂದೆಯೇ ಉಳಿಯುತ್ತಿದ್ದರು.

ಸಾಮಾನ್ಯವಾಗಿ ಕಾಲೇಜಿನಲ್ಲಿ ಯಾರು ಏನು. ಹೇಗೆ ಎನ್ನುವುದು ಮೊದಲನೆಯ ಟರ್ಮಿನ ಪರೀಕ್ಷೆ ಆದಮೇಲೆ ಗೊತ್ತಾಗುತ್ತದೆ. ಪ್ರೊಫೆಸರರಿಗೆ ಕೂಡ ಹೊಸದಾಗಿ ಕಾಲೇಜು ಸೇರಿದ ವಿದ್ಯಾರ್ಥಿಗಳ ಅಳತೆ ಕಟ್ಟುವುದು ಆಗಿರುವುದಿಲ್ಲ. ಟರ್ಮಿನ ಪರೀಕ್ಷೆ ಆಗಿ ಪರಿಣಾಮ ಪ್ರಕಟವಾದ ಮೇಲೆ, ಹಿರೇಮಠರ ಬಗೆಗೆ ಸಹಜಭಾವನೆ ಮಾಡಿಕೊಂಡವರೂ ಕೂಡ, ನಿಜವಾದ ವಸ್ತು ಇಲ್ಲಿ ಇದೆ, ಇದೊಂದು ಆಳವಾದ ಸಮುದ್ರ ಎಂದು ತಮ್ಮಷ್ಟಕ್ಕೆ ತಾವೇ ತಮ್ಮ ಭಾವನೆಯನ್ನು ತಿದ್ದಿಕೊಂಡರು. ಸಾಮಾನ್ಯತೆಯಲ್ಲಿ ಅಸಾಮಾನ್ಯತೆ ಹುದುಗಿಕೊಂಡಿದೆ ಎಂಬುದನ್ನು ಹಿರೇಮಠರು ತೋರಿಸಿಕೊಟ್ಟರು. ಪರಿಕ್ಷೇ ಯಾವುದೇ ಇರಲಿ. ಪ್ರತಿಯೊಂದರಲ್ಲಿಯೂ ಹಿರೇ ಮಠರದೇ ಮೂಗು ಮೇಲು. ಅವರು ಪರೀಕ್ಷೆಗೆ ಕಟ್ಟಿದಾಗ ಪ್ರಥಮ ಯಾರು ಎಂಬುದನ್ನಂತೂ ಕೇಳುವಂತೆಯೇ ಇರಲಿಲ್ಲ. ಕೇಳಿದರೆ. ದ್ವಿತೀಯರು ಯಾರು ಎಂಬುದನ್ನು ಮಾತ್ರ ಕೇಳಬೇಕು. ಪ್ರಥಮಸ್ಥಾನ ಹಿರೇಮಠರಿಗೇ ಮೀಸಲು. ಇನ್ನೊಬ್ಬರು ಪಡೆದರೆ ಅವರು ಎರಡನೆಯ ನಂಬರು ಪಡೆದಾರು.

ಹಿರೇಮಠರಿಗೆ ಓದುವುದೊಂದನ್ನು ಬಿಟ್ಟು ಬೇರೆ ಯಾವ ಚಟವೂ ಇರಲಿಲ್ಲ. ಹಸೀ ಗೋಡೆಯಲ್ಲಿ ಎಸೆದ ಹರಳು ಅಲ್ಲಿ ನಿಲ್ಲದೇ ಇರಬಹುದು, ಆದರೆ ಹಿರೇಮಠರು ಗ್ರಹಿಸಿದ ವಿಷಯ ಅವರ ಮನಸ್ಸಿನಲ್ಲಿಯೇ ನೆಲೆ ನಿಂತಿರುತ್ತದೆ. ಅವರು. ಒಮ್ಮೆ ಕೇಳಿದುದನ್ನು ಓದಿದುದನ್ನು ಎಂದೂ ಮರೆಯುವುದಿಲ್ಲ. ಏನನ್ನೇ ಓದಲಿ, ಅವರು ಓದಿದ್ದನ್ನೆಲ್ಲ ಪುನರುಚ್ಚರಿಸುತ್ತಾರೆ. ಅವರ ಈ ಸಾಮರ್ಥ್ಯವನ್ನು ಕಂಡವರು

ಅವರೇನಾದರೂ ಕಂಠಪಾಠ ಮಾಡುತ್ತಿರಬಹುದೇ ಎಂದು ಸಂದೇಹಿಸಿದ್ದೂ ಉಂಟು. ಒಮ್ಮೆ ಓದಿದುದನ್ನು ಅವರು ಇನ್ನೊಮ್ಮೆ ಓದಬೇಕಾದ ಪ್ರಶ್ನೆಯೇ ಇಲ್ಲ. ಏಕಪಾಠಿ ಎನ್ನುವವರು ಇರುವರೆಂದು ನಾವು ಪುಸ್ತಕಗಳಲ್ಲಿ ಓದುತ್ತಿದ್ದೆವು. ಇಲ್ಲಿ ಅವರು ನಾವು ನೋಡುವುದಕ್ಕೆ ಪ್ರತ್ಯಕ್ಷವಾಗಿ ನಮ್ಮ ಕಣ್ಣೆದುರಿನಲ್ಲಿಯೇ ಇದ್ದಾರೆ.

ಅವರನ್ನು ಹಿಂದೆ ಹಾಕಬೇಕೆನ್ನುವವರು ಬೇಕಾದಷ್ಟು ಪ್ರಯಾಸಪಟ್ಟರೂ ಅವರಿಂದ ಅದು ಸಾಧ್ಯವಾಗಲಿಲ್ಲ. ಯಾಕಂದರೆ, ಹಿರೇಮಠರನ್ನು ಸಂಸ್ಕೃತ ಹಾಗೂ ಗಣಿತದಲ್ಲಿ ಹಿಡಿದವರೇ ಇಲ್ಲ. ಕಲೆ ವಿಜ್ಞಾನಗಳೆರಡರಲ್ಲಿಯೂ ಅವರು ನಿಸ್ಸೀಮರೆನಿಸಿದ್ದರು. ಅವರು ಕಲೆಯ ಬದಲು ವಿಜ್ಞಾನವನ್ನು ಆರಿಸಿಕೊಂಡಿದ್ದರೂ ಅದರಲ್ಲಿ ಕೂಡ ಅವರು ತಮ್ಮ ಧ್ವಜವನ್ನು ಎತ್ತರವಾಗಿಯೇ ಹಾರಿಸುತ್ತಿದ್ದರು.

ಈಗಿನಂತೆ ಆಗಲೂ ಕೂಡ ಅವರ ಮೆಚ್ಚಿನ ಕವಿ ಕುವೆಂಪು. ಆ ಕವಿ ಬರೆದದ್ದು ಬಹಳಷ್ಟು ಅವರಿಗೆ ಕಂಠಪಾಠವಾಗಿ ಹೋಗಿದ್ದಿತು. ಹಿರೇಮಠ, ಸಾಸನೂರ ಹಾಗೂ ನನ್ನ ಕೆಲವು ಹವ್ಯಾಸಗಳು ಒಂದೇ ಬಗೆಯಾಗಿದ್ದವು. ಚಿತ್ರಾಂಗದಂಥ ಒಂದು ಕಾವ್ಯ ವನ್ನು ಯಾರು ಹೆಚ್ಚು ಹೇಳುತ್ತಾರೋ ಎನ್ನುವುದು ನಮ್ಮೊಳಗಿನ ಜನಪ್ರಿಯ ಹವ್ಯಾಸ ವೆನಿಸಿದ್ದಿತು. ತಪ್ಪಿದವರು ಸೋತಂತೆ, ನಿಲ್ಲದಂತೆ ಹೇಳಿದವರು ಗೆದ್ದಂತೆ. ನಮ್ಮ ಪದ್ಧತಿ ಏನೆಂದರೆ ಮೊದಲು ಯಾರಾದರೊಬ್ಬರು ಆರಂಭಿಸಿ ಇಪ್ಪತ್ತು ಮೂವತ್ತು ಸಾಲು ಅನ್ನಬೇಕು, ಅನಂತರ ಇನ್ನೊಬ್ಬರು ಖೋ ಆಟದಂತೆ ಅದನ್ನು ಎತ್ತಿಕೊಂಡು ಮುಂದೆ ಹೋಗಬೇಕು.

ಅವರ ಇನ್ನೊಂದು ಗುಣ ಆಗಲೇ ಎಲ್ಲರಿಗೂ ಸುಪರಿಚಿತವೆನಿಸಿದ್ದಿತು. ಯಾವುದೇ ಪ್ರಚೋದನೆ ಇರಲಿ. ಹಿರೇಮಠರು ಎಂದೆಂದಿಗೂ ಉದ್ವಿಗ್ನಗೊಳ್ಳುತ್ತಿರಲಿಲ್ಲ. ವಿದ್ಯಾರ್ಥಿಗಳಿಂದ ಮೇಲಿ ಏನಾದರೂ ಒಂದು ರಂಪ ರಗಳೆ ಇದ್ದೇ ಇರುತ್ತದೆ. ಆದರೆ ಹಿರೇಮಠರನ್ನು ಸಿಟ್ಟಿಗೆಬ್ಬಿಸುವುದು ಮಾತ್ರ ಯಾರಿಂದಲೂ ಸಾಧ್ಯವಾಗಲಿಲ್ಲ. ಎಂಥ ಸ್ಥಿತಿಯಲ್ಲಿಯೂ ಅವರು ಮನಸ್ಸಿನ ಸ್ಥಿಮಿತವನ್ನು ಕಾಯ್ದುಕೊಳ್ಳುತ್ತಿದ್ದರು. ಸಹನೆಯೇ ಅವರ ಬದುಕಿನ ಜೀವಾಳವಾಗಿದೆ.

ಹಿರೇಮಠರನ್ನು ಬೆಳಗಾವಿಗೆ ಕರೆದುಕೊಳ್ಳಬೇಕೆಂದು ನಂದೀಮಠರಿಗೆ ಆಸೆ, ಧಾರವಾಡ ದಲ್ಲಿಯೇ ಉಳಿಸಿಕೊಳ್ಳಬೇಕೆಂದು ಫ್ಯಾರರ್‌ರಿಗೆ ಇಚ್ಛೆ. ಲಿಂಗರಾಜ ಕಾಲೇಜಿಗೆ ಹೆಸರು ತರುವ ವಿದ್ಯಾರ್ಥಿ ಸಿಕ್ಕುತ್ತಾನೆಂದು ನಂದೀಮಠರು ಹಿರೇಮಠರನ್ನು ಎಳೆದುಕೊಳ್ಳಲು ಹಗ್ಗ ಎಸೆದಿದ್ದರು. ಒಳ್ಳೆಯ ವಿದ್ಯಾರ್ಥಿಯನ್ನು ಬಿಟ್ಟುಕೊಡುವುದೇಕೆ ಎಂದು ಫ್ಯಾರರ್‌ರು ಪಟ್ಟುಹಿಡಿದಿದ್ದರು. ಕೊನೆಗೆ ನಂದೀಮಠರೇ ಗೆದ್ದರು. ಆರ್. ಸಿ. ಯವರನ್ನು ಹಿಡಿದುಕೊಳ್ಳಲು ಎಂಥ ಜಗ್ಗಾಟ ನಡೆದಿತ್ತೆಂಬುದನ್ನು ಗಮನಿಸಿದರೆ ಅವರ ಬೆಲೆ ಎಷ್ಟೊಂದು ದೊಡ್ಡದಿದ್ದಿತೆಂಬುದನ್ನು ಸುಲಭವಾಗಿ ಊಹಿಸಬಹುದು.

ಆರ್. ಸಿ. ಯವರು ಬೆಳಗಾವಿಗೆ ಹೋದರಾದರೂ ಅವರನ್ನು ಹಿಡಿದುಕೊಂಡಿದ್ದ ಸಮಸ್ಯೆಗಳು ಅವರನ್ನು ಬಿಟ್ಟು ಹೋಗಲಿಲ್ಲ. ಒಡ್ಡರ ಸ್ತ್ರೀಗೆ ಗಂಡನ ಮನೆಯೂ ಒಂದೇ, ತವರುಮನೆಯೂ ಒಂದೇ ಎನ್ನುವಂತೆ, ಬಡವನ ಸಮಸ್ಯೆಗಳು ಅವನಿಗೆ ಎಲ್ಲಿ ಹೋದರೂ ಒಂದೇ ಬಗೆಯಾಗಿರುತ್ತವೆ. ಸಹಾನುಭೂತಿಯುಳ್ಳವರಿದ್ದರೂ ಮನುಷ್ಯನು ಔದಾರ್ಯದ ಉರುಳಲ್ಲಿ ಒಮ್ಮೊಮ್ಮೆ ಜಿಬ್ಬೆಯಾಗಿ ಹೋಗುತ್ತಾನೆ. ಕಿತ್ತುಕೊಂಡು ಓಡಬೇಕೆನ್ನುವ ಸಂಕಷ್ಟಗಳು ಹಿರೇಮಠರನ್ನು ಹಿಡಿದು ಹೆಜ್ಜೆಹೆಜ್ಜೆಗೂ ಅವರನ್ನು ಹೆದರಿಸುತ್ತಿದ್ದವು. ಕಾಲೇಜಿನ ಖರ್ಚು ವೆಚ್ಚಗಳ ಬಜೆಟ್‌ನ್ನು ಬಾಯಿಗೂಡಿಸಲಿಕ್ಕಾಗದೆ, ಹಿರೇಮಠರು ಒಂದುದಿನ ತಮ್ಮ ಹಾಸುಗೆಯ ಸುರುಳಿಯನ್ನು ಬಗಲಲ್ಲಿ ಇರಿಸಿಕೊಂಡು ತಮ್ಮ ಊರಿಗೆ ಹೊರಟುಬಿಟ್ಟಿದ್ದರು.

ವಿದ್ಯಾರ್ಥಿ ಹಿರೇಮಠರು ವ್ಯವಸ್ಥಿತವಾದ ಆಲೋಚನೆಗ, ನಿಖರವಾದ ಪಾಂಡಿತ್ಯಕ್ಕೆ ಹೆಸರಾಗಿದ್ದರು. ಪಾಠ ಹೇಳುವ ಪ್ರೊಫೆಸರರಿಗೆ ತಮ್ಮ ತಿಳಿವಳಿಕೆ ತಡೆದು ನಿಂತು, ದಾರಿ ಕಟ್ಟಾಗಿದೆ ಎನ್ನುವ ಭಾವನೆ ಬಂದಾಗ, ಹಿರೇಮಠರು ಅವರ ನೆರವಿಗೆ ಹೋಗುತ್ತಿದ್ದರು. ತಮ್ಮ ತಪ್ಪು ಮನವರಿಕೆಯಾದ ಪ್ರೊಫೆಸರರಲ್ಲಿ ಕೆಲವರು, ಹುಡುಗರೆದುರು ಅದನ್ನು ಒಪ್ಪುವುದು ಹೇಗೆಂದು, "ಅದು ಹೀಗೂ ಆಗುತ್ತದೆ" ಎಂದು ಹೇಳಿ ನುಸುಳಿಕೊಂಡು ಹೋಗಲು ಅವರು ಪ್ರಯತ್ನಿಸಿದುದೂ ಉಂಟು. "ಅದು ಹೀಗೂ ಅಲ್ಲ, ಹೀಗೆಯೇ ಆಗುತ್ತದೆ" ಎಂದು ಒರಸೆ ಹಿಡಿದಾಗ ಆ ಪ್ರೊಫೆಸರರು ಪೆಚ್ಚಾದುದೂ ಉಂಟು, ಉದ್ದೇಶವು ಪ್ರೊಫೆಸರರನ್ನು ಪೆಚ್ಚು ಮಾಡಬೇಕೆನ್ನುವುದಲ್ಲ: ಪಾಂಡಿತ್ಯಕ್ಕೆ ಅಪಚಾರವಾಗಬಾರದೆನ್ನುವುದು.

ತಮಗೆ ಉಪಯೋಗ ಆಗಿರುವುದಕ್ಕಿಂತಲೂ ವಿದ್ಯಾರ್ಥಿ ಹಿರೇಮಠರು ತಮ್ಮ ಸಹಪಾಠಿಗಳಿಗೆ ಹೆಚ್ಚು ಉಪಯೋಗವಾಗಿದ್ದಾರೆ. ತಮ್ಮ ಬಳಿ ಪುಸ್ತಕಗಳಿದ್ದ ವಿದ್ಯಾರ್ಥಿಗಳು ಓದಿಕೊಂಡಿರಲಿಲ್ಲ, ಪುಸ್ತಕಗಳಿಲ್ಲದ ಹಿರೇಮಠರು ಓದಿಕೊಂಡಿದ್ದರು. ಅವರ ಓದು ಅವರಿಗಂತೂ ಸರಿಯೇ. ಅದು ಇನ್ನುಳಿದ ವಿದ್ಯಾರ್ಥಿಗಳಿಗೂ ಉಪಯೋಗವಾಯಿತು. ಓದದೇ ಇದ್ದವರು, ಪರೀಕ್ಷೆ ಪಾಸಾಗುವ ಸೂತ್ರವನ್ನು ಹೇಳಿಕೊಡಬೇಕೆಂದು ಹಿರೇಮಠರನ್ನು ಪೀಡಿಸುತ್ತಿದ್ದರು. ಹಿರೇಮಠರು ಅವರಿಗೆ ಹೇಳುತ್ತ, ತಮ್ಮ ಅಭ್ಯಾಸದ ಉಜಳಣೆ ಮಾಡಿಕೊಳ್ಳುತ್ತಿದ್ದರು. ಅನೇಕರಿಗೆ ಹೇಳುತ್ತ ಅವರು, ಆ ಜನರನ್ನು ತಮ್ಮೊಂದಿಗೆ ಮುಂದಿನ ವರ್ಗಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಇನ್ನೊಬ್ಬರಿಗೆ ಹೇಳಿಕೊಟ್ಟರೆ ತಮ್ಮ ಸಂಗ್ರಹ ಕಡಿಮೆಯಾದೀತೆನ್ನುವ ಅಳುಕು ಹಿರೇಮಠರಲ್ಲಿ ಎಂದೂ ಬರಲಿಲ್ಲ. ಅವರು ತಮ್ಮ ಜ್ಞಾನವನ್ನು ಎಷ್ಟು ತೋಡಿತೆಗೆದರೂ ಅದು ಕಡಿಮೆಯಾಗಲಾರದು. ಯಾಕಂದರೆ ಅವರು ಎಷ್ಟು ಕೊಟ್ಟರೂ ಅದು ಅವರಲ್ಲಿ ಇನ್ನೂ ಇದ್ದೇ ಇದೆ.

ಹಿರೇಮಠರು ತುಳುಕದಂಥ ತುಂಬಿದ ಕೊಡ. ತಮ್ಮ ವರ್ಗದ ತುತ್ತತುದಿಯಲ್ಲಿ ಇದ್ದರೂ ವಿಶ್ವವಿದ್ಯಾಲಯಕ್ಕೆ ಪ್ರಥಮರಾಗಿ ತೇರ್ಗಡೆಯಾದರೂ ಅವರು ತಮ್ಮ ನಮ್ರತೆಯನ್ನಾಗಲಿ, ವಿನಯವನ್ನಾಗಲಿ ಎಂದೂ ಕಳೆದುಕೊಂಡವರಲ್ಲ. ಅವರಲ್ಲಿ ಪಾಂಡಿತ್ಯ ಇದೆ, ಗರ್ವವಿಲ್ಲ; ಘನತೆ ಇದೆ, ಅಲ್ಪತೆ ಇಲ್ಲ. ಅವರು ಸಣ್ಣವರಲ್ಲಿಯೂ ಸಣ್ಣವರು, ದೊಡ್ಡವರಲ್ಲಿಯೂ ಸಣ್ಣವರು. ಎಂತಲೇ ಅವರು ಬೆಳೆಯುತ್ತ ನಡೆದಿದ್ದಾರೆ. ಬೆಳೆಯುವುದಿದೆ ಎಂದು ತಿಳಿದುಕೊಂಡವನು ಬೆಳೆಯುತ್ತಾನಲ್ಲದೆ, ಬೆಳೆದಿರುವುದಾಗಿ ತಿಳಿದುಕೊಂಡವನು ಬೆಳೆಯುವುದಿಲ್ಲ. ವಿದ್ಯಾರ್ಥಿಕಾಲದ ಜಿಜ್ಞಾಸೆ ಇರಿಸಿಕೊಂಡು ಹಿರೇಮಠರು ತಮ್ಮ ಜೀವನದುದ್ದಕ್ಕೂ ವಿದ್ಯಾರ್ಥಿಯಾಗಿಯೇ ಇದ್ದಾರೆ. ಗುರುವಾದವನು ವಿದ್ಯಾರ್ಥಿಯಾಗಿದ್ದರೇನೇ ಅವನ ಗುರುತ್ವ ಉಳಿದುಕೊಳ್ಳುತ್ತದೆ. ಆದರ್ಶ ವಿದ್ಯಾರ್ಥಿ ಆಗಿದ್ದವನೇ ಆದರ್ಶ ಗುರು ಆಗಿರಬಲ್ಲನು.

ವಿದ್ಯಾರ್ಥಿ ಹಿರೇಮಠರು ಹಚ್ಚಿಕೊಂಡ ಹವ್ಯಾಸಗಳೆಂದರೆ ಓದು ಹಾಗೂ ಸ್ನೇಹಿತರು. ದುಶ್ಚಟ ಎನ್ನುವ ಶಬ್ದವೇ ಅವರ ಜೀವನದ ಶಬ್ದಕೋಶದಲ್ಲಿ ಇರಲಿಲ್ಲ. ಅವಲೋಕನ, ಅಭ್ಯಾಸ, ಮನನ, ಧ್ಯಾನ ಇವೇ ಅವರು ಬೆಳೆಸಿಕೊಂಡು ಬಂದ ಚಟಗಳಾಗಿದ್ದವು. ಅವು ಅವರ ದೇಹದ ಚರ್ಮದಂತೆ ಅವರ ಜೀವಕ್ಕೇ ಅಂಟಿಕೊಂಡು ಬಂದಿವೆ. ಹಿರೇಮಠರ ಓದು ದೊಡ್ಡದು, ಆದರೆ ಆ ಓದಿಗಿಂತ ಹಿರೇಮಠರು ದೊಡ್ಡವರು.

■ ■



# ಸ್ನೇಹಿತ : ಆರ್. ಸಿ. ಹಿರೇಮಠರು

ದೇ. ಜವರೇಗೌಡ

ಸುಮಾರು ಇಪ್ಪತ್ತುವರ್ಷದ (೧೯೫೭) ಹಿಂದಿನ ಮಾತು. ಆಗ ಕರ್ನಾಟಕ ವಿಶ್ವ ವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿದ್ದ ತೀನಂಶ್ರೀಯವರು ವಿಶೇಷೋಪನ್ಯಾಸ ಕ್ಕಾಗಿ ಮೈಸೂರಿಗೆ ಬಂದಿದ್ದರು. ಸಾಹಿತ್ಯಪಂಥಗಳು, ಸಾಹಿತಿಗಳು, ಕನ್ನಡ ಇಲಾಖೆ ಗಳು, ಕನ್ನಡದ ಸ್ಥಾನಮಾನ ಮೊದಲಾದ ವಿಷಯಗಳನ್ನು ಕುರಿತು ಚರ್ಚೆ ನಡಸುತ್ತಿ ದ್ದಾಗ ಡಾ. ಆರ್. ಸಿ. ಹಿರೇಮಠರ ಪ್ರಸ್ತಾಪ ಬಂತು. ಆಗವರು ತೀನಂಶ್ರೀಯವರ ಜತೆಯಲ್ಲಿ ರೀಡರ್ ಆಗಿ ಅಧ್ಯಾಪನ ಲೇಖನ ಕರ್ಮಗಳಲ್ಲಿ ನಿರತರಾಗಿದ್ದರು. ಆ ದಿನ ತೀನಂಶ್ರೀಯವರು ತಮ್ಮ ಸಹೋದ್ಯೋಗಿಯನ್ನು ಕುರಿತು ಪರೋಕ್ಷವಾಗಿ ಆಡಿದ ಮಾತುಗಳು ಇಂದಿಗೂ ನನ್ನ ಕಿವಿಯಲ್ಲಿ ಘೂರ್ಣಿಸುತ್ತಿವೆ. "ಹಿರೇಮಠರು ಉತ್ಸಾಹಿ ತರುಣರು, ಕರ್ಮಠರಂತೆ, ಮಾಹೇಶ್ವರಸ್ಥಲದ ಶರಣರಂತೆ ಕರ್ತವ್ಯನಿಷ್ಠರಾಗಿ, ಕಾಯಕವೇ ಕೈಲಾಸವೆಂದು ನಂಬಿ ದುಡಿಯುತ್ತಿರುವ ಮೇಧಾವಿಗಳು; ವಿದ್ವತ್ಕ್ಷೇತ್ರದಲ್ಲಿ ಆಸೆ ಹುಟ್ಟಿಸಿರುವ ಪ್ರತಿಭಾವಂತರು" ಎಂಬುದಾಗಿ ಪ್ರವಾದಿಗಳಂತೆ ಅಂದು ಅವರಾಡಿದ ಭವಿಷ್ಯ ಇಂದು ನಿಜವಾಗಿರುವುದನ್ನು ನೋಡುತ್ತೇವೆ.

ಶ್ರೀಕಂಠಯ್ಯನವರು ಬಿಟ್ಟ ಸ್ಥಾನದಲ್ಲಿ ನಿಲ್ಲುವಂಥ ವ್ಯಕ್ತಿ ಸಾಧಾರಣನಾದರೆ ಆ ಸ್ಥಾನಕ್ಕೆ ಕುಂದು ತಟ್ಟಿ ಸರ್ವಾವಹೇಳನಕ್ಕೆ ಭಾಜನವಾಗುತ್ತದೆ. ಅವರಷ್ಟೇ ಸಮರ್ಥರಾದ ವಿದ್ವಾಂಸರು, ಅವರಷ್ಟೇ ಪ್ರಭಾವಶಾಲಿಗಳಾದ ವಾಗ್ಮಿಗಳು, ಅವರಷ್ಟೇ ಪ್ರಾಮಾಣಿಕ ರಾದ ಸಜ್ಜನರು ಮಾತ್ರ ಆ ಸ್ಥಾನವನ್ನು ಯಶಸ್ವಿಯಾಗಿ ತುಂಬಬಹುದಲ್ಲದೆ, ಅದಕ್ಕೆ ಕೀರ್ತಿಯ ಕಿರೀಟವನ್ನು ಮುಡಿಸಬಲ್ಲವರಾಗುತ್ತಾರೆ. ಅದೆ ತಾನೆ ಹೊಸದಾಗಿ ಹುಟ್ಟಿ

ಕೊಂಡಿದ್ದ ಕನ್ನಡ ಇಲಾಖೆಯನ್ನು ಕಟ್ಟಿ ಬೆಳೆಸಿದರಲ್ಲದೆ, ಮುಂದೆ ಅದರ ವಿವಿಧ ಮುಖಗಳನ್ನು ಸಾಕಾರಗೊಳಿಸಿ, ಅಧ್ಯಯನಪೀಠವೆಂಬ ಹೆಸರಿನಲ್ಲಿ ಮುಗಿಲೆತ್ತರಕ್ಕೇರಿಸಿದರು. ಬೇರೆ ರಾಜ್ಯದ ವಿಶ್ವವಿದ್ಯಾನಿಲಯಗಳಲ್ಲಿ, ಅಲ್ಲಲ್ಲಿಯ ದೇಶಭಾಷೆಗಳಿಗೆ ಪ್ರಾಯಶಃ ಕನ್ನಡಕ್ಕೆ ಇಲ್ಲಿ ದೊರೆತಿರುವಂಥ ಉಚ್ಚಸ್ಥಾನ ದೊರೆತಿಲ್ಲವೆಂದೇ ಹೇಳಬೇಕು. ಹಿರೇಮಠರ ಶ್ರದ್ಧೋತ್ಸಾಹಗಳು, ಸ್ಥಿರಸಂಕಲ್ಪ, ಕರ್ತೃತ್ವಶಕ್ತಿಗಳು ಮತ್ತು ಘನತೆ, ವ್ಯಕ್ತಿತ್ವಗಳು ಪೀಠದ ಉಗಮ–ವಿಕಾಸಗಳಿಗೆ ಸರ್ವಕಾರಣಗಳಾಗಿವೆ.

ಹಿರೇಮಠರ ಪ್ರಭಾವಯುತವೂ ಆಕರ್ಷಕವೂ ಆದ ವ್ಯಕ್ತಿತ್ವವನ್ನು ರೂಪಿಸಿದ ಶಕ್ತಿಗಳಲ್ಲಿ ಅವರ ಪಾಂಡಿತ್ಯಕ್ಕೆ ಪ್ರಥಮಸ್ಥಾನ ಸಲ್ಲುತ್ತದೆ. ವಚನವಾಙ್ಮಯ ಸಂಶೋಧನ ಸಂಸ್ಕರಣ ಮತ್ತು ಪ್ರಕಟನ ಯೋಜನೆ ಅವರ ಬೌದ್ಧಿಕ ಶಿಶು. ತಾವು ಹೆತ್ತ ಮಕ್ಕಳಿಂದ ಮೇರಿ ಯಶೋದೆಯರು ಲೋಕಪೂಜ್ಯರಾದಂತೆ, ತಾವು ಸೃಜಿಸಿದ ಯೋಜನೆಯ ಮೂಲಕ ಹಿರೇಮಠರ ಪ್ರತಿಭಾಶ್ರೀಮಂತತೆ ಬೆಳಗಲನುಕೂಲವಾಗುತ್ತದೆ, ಅವರ ಬಹುಶ್ರುತತ್ವದ ವ್ಯಾಪ್ತಿ ಮನವರಿಕೆಯಾಗುತ್ತದೆ. ಅವರ ವಿದ್ವತ್ತಿನ ಮಹತ್ವ ಸ್ಪಷ್ಟಗೋಚರವಾಗುತ್ತದೆ. ಆ ಯೋಜನೆ ಕಾರ್ಯಗತವಾಗುತ್ತಿದ್ದಂತೆ ಅವರೂ ಸಿದ್ಧಿಯ ಶಿಖರ ತಲುಪುತ್ತಾರೆ. ಶರಣತ್ವದ ಎತ್ತರಕ್ಕೇರುತ್ತಾರೆ. ಪ್ರಾಚೀನಕಾವ್ಯಗಳ ಸಂಪಾದನೆ ಯಾಂತ್ರಿಕ ಕರ್ಮವಲ್ಲ. ಅದೊಂದು ಪುನಃಸೃಷ್ಟಿ: ಅದು ಮಹತ್ಸಾಧನೆಯೂ ಅಹುದು; ಮೂಲಕವಿಯ ಉದ್ಧಾರಕಾರ್ಯವೂ ಅಹುದು. ಅದು ಸಂಪಾದಕನ ಸೃಜನಶೀಲತೆಗೆ, ಸಹೃದಯತೆಗೆ, ವಿಮರ್ಶನ ಸಾಮರ್ಥ್ಯಕ್ಕೆ, ಅಂತೆಯೇ ಅವನ ಸಹನೆ ದೃಢತೆಗಳಿಗೆ ನಿಕಷವಾಗುತ್ತದೆ. ಹಿರೇಮಠರವರು ಈ ಮಹತ್ಸಾಧನೆಯಲ್ಲಿ ಅಪೂರ್ವ ಯಶಸ್ಸು ಗಳಿಸಿದ್ದಾರೆ. ಭಾಷಾವಿಜ್ಞಾನದ ಕ್ಷೇತ್ರದಲ್ಲಿ ಮಾಡಿರುವ ಸಾಧನೆ ಅಲ್ಪವಲ್ಲವೆಂಬುದಕ್ಕೂ ಅವರು ಸಾಕಷ್ಟು ಸಾಕ್ಷಿ ಒದಗಿಸಿದ್ದಾರೆ.

ಕುಲಪತಿ ಹುದ್ದೆ ಹಿರೇಮಠರಿಗೆ ದೊರೆತದ್ದು ಅವರ ಪೂರ್ವಜನ್ಮದ ಪುಣ್ಯದೂರದ ಕಾರಣ: ಅದು ಅವರ ಪಾಂಡಿತ್ಯದ, ವಿವಿಧ ಸಿದ್ಧಿಗಳ ಮತ್ತು ನಾಡಿಗೆ ಅವರು ಸಲ್ಲಿಸಿದ ಸೇವೆಯ ಫಲವೆನ್ನುವುದೆ ಸತ್ಯ: ಕುಲಪತಿಯ ಹುದ್ದೆ ಸುಖದ ಸುಪ್ಪತ್ತಿಗೆಯಲ್ಲ. ಹೊಣೆಗಾರಿಕೆಯಲ್ಲಿ ಅದನ್ನು ಮೀರಿಸಿದ ಹುದ್ದೆ ಮತ್ತೊಂದಿಲ್ಲ. ನ್ಯಾಯಮೂರ್ತಿಯ ಕಠೋರ ಸಂಯಮವಾಗಲೀ ಸಾಮಾಜಿಕ ನಿರ್ಲಿಪ್ತತೆಯಾಗಲೀ, ಐಎಸ್ ಅಧಿಕಾರಿಯ ಬಿಂಕ ಬಿಗುಮಾನ ದರ್ಪಗಳಾಗಲೀ ಕುಲಪತಿಗೆ ಯಶಸ್ಸು ತರುವಂಥವಲ್ಲ. ಸೌಜನ್ಯ ಬೆರೆತ ಛಲ, ದರ್ಪಾಡಂಬರವಿಲ್ಲದ ಕ್ರಿಯಾಶಕ್ತಿ, ಅನುಕಂಪ ಸಹಾನುಭೂತಿಗಳಿಂದ ಕೂಡಿದ ಸಂಯಮ, ಪಾಂಡಿತ್ಯದಿಂದ ಶೋಭಾಯಮಾನವಾದ ಆಡಳಿತ ಕೌಶಲ್ಯ, ವಿವೇಕದ ಕೈಹಿಡಿದ ಬುದ್ಧಿವಂತಿಕೆ, ಹದವಾಗಿ ಸಮ್ಮಿಲನಗೊಂಡ ಸತ್ವರಜೋಗುಣಗಳು, ಸಮಸ್ಯೆ ಸವಾಲುಗಳನ್ನೆದುರಿಸಬಲ್ಲ ಕೆಚ್ಚೆದೆತನ, ನಿಷ್ಕಳಂಕಶೀಲ ಮತ್ತು ಸಾಮಾಜಿಕ ಸ್ನೇಹಗುಣ– ಈ ಎಲ್ಲ ಗುಣಗಳು ಮೇಳವಿಸಿದಾಗ ಕುಲಪತಿ ಯಶಸ್ವಿಯಾಗುತ್ತಾನೆ.

ಹಿರೇಮಠ ಅವರ ವ್ಯಕ್ತಿತ್ವದಲ್ಲಿ ಈ ಗುಣಗಳು ಉಚಿತ ಪ್ರಮಾಣದಲ್ಲಿ ಸಮಾವೇಶ ಗೊಂಡಿವೆಯೆಂಬ ಸಂಗತಿ ಅವರ ಗೆಳೆಯರಿಗೆ ಅಪರಿಚಯವೇನಲ್ಲ. ಅವರು ನಿರ್ವಿಘ್ನ ವಾಗಿ ಅಧಿಕಾರ ನಡೆಸಿದ್ದೇ ಈ ಮಾತಿಗೆ ಸಾಕ್ಷಿಯಾಗಿದೆ.

ಇಂಥ ಗುಣಸಂಪನ್ನರಾದ ವ್ಯಕ್ತಿ ಯಾವ ಸಂಸ್ಥೆಗಾದರೂ ಭೂಷಣವೇ ಸರಿ; ಅಂಥವರ ಸ್ನೇಹ ಯಾರಿಗಾದರೂ ಗೌರವ ತರುವಂಥದು. ಅವರ ಸ್ನೇಹ ನಿಸ್ವಾರ್ಥವಾದದ್ದು, ನಿಷ್ಕಳಂಕವಾದದ್ದು, ನಿರ್ವ್ಯಾಜವಾದದ್ದು. ಅವರ ಬಳಿ ಅಸೂಯೆಯಾಗಲೀ, ಅಹಂ ಕಾರವಾಗಲೀ, ಸ್ವಪ್ರತಿಷ್ಠೆಯಾಗಲೀ ಸುಳಿಯುವುದಿಲ್ಲ. ಅವರು ಪಂಡಿತರಾಗಿಯೂ ನಿಗರ್ವಿಗಳು, ಮಹಾಧಿಕಾರಿಗಳಾಗಿಯೂ ವಿನಯಸಂಪನ್ನರು. ತಾವು ನುಡಿದದ್ದೇ ನನ್ನಿ, ನಡೆದದ್ದೇ ಆದರ್ಶವೆನ್ನುವ ಹಠ ಅವರಲ್ಲಿಲ್ಲ. ಸಿಬ್ಬಂದಿವರ್ಗವನ್ನು ಸರಿಸಮ ನಾಗಿ ಕಾಣುವ, ಸರ್ವಾಧಿಕಾರವನ್ನು ಬಳಿ ಸುಳಿಸದ, ಎದೆಯನ್ನು ಸೀಡಿನ ಹುತ್ತವಾಗಿಸದ, ಎಳಸುಗಳಂತೆ ಬಾಯಿಬಡುಕರಾಗದ ವಿವೇಕಶಾಲಿಗಳು. ಸಭೆ ಸಮೂಹಗಳಲ್ಲಿ ಪರೇಂಗಿತಜ್ಞತೆಯನ್ನು ಮೆರೆಯುವ ಸುವಿಚಾರಿಗಳವರು.

ಯೇ ಯಾಂತ್ಯಭ್ಯುದಯೇ ಪ್ರೀತಿಂ ನೋಜ್ಝಂತಿ ವ್ಯಸನೇಷು ಚ
ತೇ ಬಾಂಧವಾಸ್ತೇ ಸುಹೃದೋ ಲೋಕಃ ಸ್ವಾರ್ಥಪರೋ ಪರಃ

ಎಂಬ ಸುಭಾಷಿತಕ್ಕೆ ಇವರು ದಿವ್ಯಲಕ್ಷ್ಯವಾಗಿದ್ದಾರೆ. ಅಧಿಕಾರವಿದೆಯೆಂದು ಓಲಗಿಸು ವುದು, ಅಧಿಕಾರಚ್ಯುತರೆಂದು ನಿರ್ಲಕ್ಷಿಸುವುದು ಲೋಕರೂಢಿ. ಅವರ ಮನಸ್ಸು ವರ್ತನೆಗಳು ಗಾಳಿಗೊಡ್ಡಿದ ಹಾಯಿಗಳು. ಹಿಂದಿನವರನ್ನು ಮರೆತು, ಇಂದಿನವರನ್ನು ಪೂಜಿಸುತ್ತ, ಮುಂದಿನವರನ್ನು ಆಶ್ರಯಿಸುವ ಜಾರರವರು. ಹಿರೇಮಠರು ಅಂಥವರ ಗುಂಪಿಗೆ ಸೇರಿದವರಲ್ಲ.

ನಿಷ್ಕಲ್ಮಷ ಸ್ನೇಹ ಪರಿಳಿತಗಳಿಲ್ಲದೆ ಸದಾ ಏಕರೀತಿಯಾಗಿರುವಂಥದು. ಅಷ್ಟೇ ಅಲ್ಲ, ಅಭ್ಯುದಯವೋ ಅವನತಿಯೋ, ಕಾಲಕಳೆದಂತೆಲ್ಲ ಅದರ ಮಾಧುರ್ಯ ಮಧುರತಮ ವಾಗುತ್ತದೆ.

ಇಕ್ಷೋರಗ್ರಾತ ಕ್ರಮಶಃ ಪರ್ವಣಿ ಪರ್ವಣಿ ಯಥಾರಸ ವಿಶೇಷಃ
ತದ್ವತ್ಸಜ್ಜನ ಮೈತ್ರೀ ವಿಪರೀತಾನಾಂ ಚ ವಿಪರೀತಾ

ಎಂಬ ಆರ್ಷವಾಕ್ಯದಂತೆ ಅವರ ಮೈತ್ರಿ ಯಾವಾಗಲೂ ಏರುಮುಖವೇ ಹೊರತು ಇಳಿಮುಖವಾಗುವುದಿಲ್ಲ. ಇಂಥ ಸ್ನೇಹದ ಫಲವನುಂಡ ಭಾಗ್ಯ ನನ್ನದಾಗಿದೆ. ನಾನು ರೀಡರಾಗಿ, ಪ್ರಾಧ್ಯಾಪಕನಾಗಿ, ವಿಶ್ವವಿದ್ಯಾನಿಲಯದ ಉನ್ನತಾಧಿಕಾರಿಯಾಗಿ, ನಿವೃತ್ತ ನಾಗಿ ಅವರೊಡನೆ ಹತ್ತಿರದಿಂದ ವ್ಯವಹರಿಸಿದ್ದೇನೆ. ಅಂದಿನಿಂದ ಇಂದಿನ ತನಕ ಅವರ ನಡೆನುಡಿಗಳಲ್ಲಿ, ಆಚಾರವ್ಯವಹಾರಗಳಲ್ಲಿ, ಆದರೋಪಚಾರದಲ್ಲಿ ಲವಲೇಶವೂ ವ್ಯತ್ಯಾಸ ಕಂಡಿಲ್ಲ. ಅದೇ ಮಾತು, ಅದೇ ವಿನಯ, ಅದೇ ನಿರ್ಮತ್ಸರ, ಅದೇ

ಹಿರೇಮಠರು. ಇಂಥ ಗುಣ ಪಾಂಡಿತ್ಯದಿಂದ, ವಿದೇಶಪ್ರವಾಸದಿಂದ, ಅಧಿಕಾರದಿಂದ, ಬೌದ್ಧಿಕಶ್ರೀಮಂತತೆಯಿಂದ ಲಬ್ಧವಾಗುವಂಥದಲ್ಲ, ಹೃದಯ ಪರಿಪಕ್ವತೆಯಿಂದ ಮತ್ತು ಪೂರ್ವಜನ್ಮದ ಸಂಸ್ಕಾರದಿಂದ ಸಂಪ್ರಾಪ್ತವಾಗುವಂಥದು.

ಮಾರಾರಿಯ ಕೃಪೆಯಿಂದ ಮಾನವ ಅಪೇಕ್ಷಿಸಬಹುದಾದ ಬಯಕೆಗಳೆಲ್ಲ ಅವರಿಗೊದಗಿವೆಯೆಂದರೆ ಉತ್ಪ್ರೇಕ್ಷೆಯಾಗಲಾರದು. ಅವಷ್ಟರಿಂದಲೇ ಮಾನವನಿಗೆ ತೃಪ್ತಿ ಸಂಭವಿಸೀತೆಂದು ಹೇಳಲಾಗದು. ಮನಸ್ಸೌಖ್ಯಕ್ಕೆ ಮನೆಸೊಗವೆ ಮೊದಲು, ಮನೆಸೊಗಕ್ಕೆ ಮನೆಯೊಡತಿಯೇ ಮೂಲ. ಸದಾ ಪ್ರಸನ್ನವದನೆಯಾದ ಅನ್ನಪೂರ್ಣೆಯಂತಿರುವ ಗೃಹಲಕ್ಷ್ಮಿ ಹಿರೇಮಠರ ಭಾಗ್ಯತಾರೆಯಾಗಿದ್ದಾರೆ. ಅದರಿಂದಾಗಿ ಹಿರೇಮಠರು ಪುಣ್ಯಶಾಲಿಯಾಗಿದ್ದಾರೆ, ನಿತ್ಯತೃಪ್ತರಾಗಿದ್ದಾರೆ, ಆಯುಷ್ಮಂತರಾಗಿದ್ದಾರೆ, ಜೀವನಕಲೆಯಲ್ಲಿ ಸಿದ್ಧಿಯ ಶಿಖರವನ್ನು ಮುಟ್ಟಿದ್ದಾರೆ. ಆ ಆದರ್ಶ ದಂಪತಿಗಳ ಔದಾರ್ಯಕ್ಕೆ ಮಿತಿಯಿಲ್ಲ, ಆತಿಥ್ಯಕ್ಕೆಣೆಯಿಲ್ಲ, ಸಜ್ಜನಿಕೆಗೆ ಊಣೆಯಿಲ್ಲ. ಶ್ರೀಮದ್ರಾಮಾಯಣದಲ್ಲಿ ಕೆಳಗಿನ ಶ್ಲೋಕವೊಂದು ಬರುತ್ತದೆ :

ಆತ್ಮಪ್ರಶಂಸಿನಂ ದುಷ್ಟಂ ಧೃಷ್ಟಂ ವಿಪರಿಧಾವಕಂ
ಸರ್ವತೋತ್ಸೃಷ್ಟದಂಡಂ ಚಲೋಕಃ ಸತ್ಕುರುತೇ ನರಮ್

ಆತ್ಮಪ್ರಶಂಸೆಯ, ಔದ್ಧತ್ಯದ, ಪ್ರದರ್ಶನಶೀಲರಾದ ಅಹಂಕಾರಿಗಳನ್ನು ಲೋಕ ಗೌರವಿಸುತ್ತದೆನ್ನುವ ಮಾತು ನಿಜ. ಆ ಗೌರವ ಕೇವಲ ತಾತ್ಕಾಲಿಕವಾದದ್ದು. ಮೇಲಣ ಒಂದು ಗುಣವೂ ಹಿರೇಮಠರಲ್ಲಿಲ್ಲ. ಆತ್ಮಪ್ರಶಂಸೆಯೆಂಬುದೇ ಅವರಿಗೆ ಗೊತ್ತಿಲ್ಲ. ಔದ್ಧತ್ಯ ಅವರ ಸ್ವಭಾವಕ್ಕೆ ವಿರುದ್ಧವಾದುದು; ಜೀವನದಲ್ಲಿ ವಿಜಯ ಪರಂಪರೆಗಳನ್ನು ಸಾಧಿಸಿದರೂ ಪರರ ಪ್ರಶಂಸೆಗಾಗಿ, ಪತ್ರಿಕಾ ಪ್ರದರ್ಶನಕ್ಕಾಗಿ ಹಾತೊರೆವವರಲ್ಲ. ಈ ಎಲ್ಲ ದೌರ್ಬಲ್ಯಗಳಿಂದ ಅವರು ದೂರವಾಗಿದ್ದಾರೆ. ಅವರು ನಾಡುನುಡಿಗಳಿಗೆ ಸಲ್ಲಿಸಿರುವ ಅಮೂಲ್ಯಸೇವೆಯನ್ನು ನಾಡು ಗುರುತಿಸಿದೆ; ಅವರನ್ನು ಗೌರವಿಸುತ್ತಿದೆ.

ಇಂಥ ಧೀಮಂತರನ್ನು ಪಡೆದ ನಾಡು ಧನ್ಯ; ಇಂಥವರ ಗೆಳೆತನವೂ ಒಂದು ಪುಣ್ಯ. ಅವರು ನಾಡುನುಡಿಗಳಿಗೆ ಇನ್ನೂ ಹೆಚ್ಚಿನ ಸೇವೆ ಸಲ್ಲಿಸಲವಕಾಶವಾಗುವಂತೆ ಶಕ್ತಿ ಸಾಮರ್ಥ್ಯಗಳನ್ನೂ ಆಯುರಾರೋಗ್ಯಗಳನ್ನೂ ಭುವನೇಶ್ವರಿ ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

■ ■

# ನಾಲ್ಕು ದಶಕಗಳ ಗೆಳೆತನ

ಬಸವರಾಜ ಕಟ್ಟೀಮನಿ

ಡಾ. ಆರ್. ಸಿ. ಹಿರೇಮಠ ಅವರು ನನ್ನ ಸಹಪಾಠಿಯಲ್ಲ, ಸಹೋದ್ಯೋಗಿಯಲ್ಲ. ಅವರು ಎಂ. ಎ., ಪಿಎಚ್.ಡಿ. ಪದವೀಧರರು: ನನಗೆ ಯಾವ ಪದವಿಯೂ ಇಲ್ಲ. ಆದರೂ ಸುಮಾರು ನಲವತ್ತು ವರ್ಷಗಳಿಂದ ಅವರದೂ ನನ್ನದೂ ಗೆಳೆತನ. ಆತ್ಮೀಯತೆ. ನಾಲ್ಕು ದಶಕಗಳ ಕಾಲ ಇದು ಹೇಗೆ ಉಳಿಯಿತು ? ಹೇಗೆ ಬೆಳೆಯಿತು ? ಎಂದು ನನಗೇ ಆಶ್ಚರ್ಯವಾಗುತ್ತದೆ, ಒಮ್ಮೊಮ್ಮೆ.

ಪ್ರೇಮ ಮತ್ತು ಸ್ನೇಹಗಳೆರಡೂ ಒಂದೇ ಬಗೆಯ ಭಾವನೆಗಳು. ನಿಜವಾದ ಪ್ರೇಮ ಅಪೂರ್ವವಾಗಿರುವಂತೆಯೇ ನಿಜವಾದ ಸ್ನೇಹವೂ ಅಪೂರ್ವ. ನಲವತ್ತು ಐವತ್ತು ವರ್ಷಗಳ ದೀರ್ಘಾವಧಿಯಲ್ಲಿ ಹಲವಾರು ಘಟ್ಟಗಳಲ್ಲಿ ಹಾಯ್ದು ಬಂದರೂ ಉಳಿದು ಕೊಳ್ಳುವ ಸ್ನೇಹವಂತೂ ಅಪರೂಪದ ವಸ್ತು. ಮೊದಲು ಸ್ನೇಹವಾಗಿಯೇ ಆರಂಭವಾದದ್ದು ಅನಂತರ ಔಪಚಾರಿಕ ಪರಿಚಯವಾಗಿ ಮುಂದುವರಿಯುವುದೇ ಹೆಚ್ಚು. "ಗಳಸ್ಯ ಕಂಠಸ್ಯ" ಸ್ನೇಹಿತರಾಗಿದ್ದವರು ಪರಮವೈರಿಗಳಾಗಿ ಪರಿಣಮಿಸುವುದೂ ಉಂಟು. ಅರ್ಥಾತ್, ಅದಕ್ಕೆ ಕಾರಣಗಳಿರುತ್ತವೆ.

ಚಿಲ್ಲರೆ ಭಿನ್ನಾಭಿಪ್ರಾಯಗಳು ಸಣ್ಣ ಪ್ರಮಾಣದ ಜಗಳಗಳು. ವೈಮನಸ್ಸುಗಳು ಎಲ್ಲ ಸ್ನೇಹಗಳಲ್ಲೂ ಪ್ರೇಮಗಳಲ್ಲೂ ತಲೆದೋರುವುದುಂಟು. "ಪಾಲಾ ಪ್ಲಾ" ಬಿಡುವುದು. ದೂರವಾಗುವುದು. ಮತ್ತೆ ಮೊದಲಿನ ಸ್ನೇಹದ ನೆನಪು ಬಂದು ಒಂದಾಗುವುದು. ಮರೆಯುವುದು, ಅರಿಯುವುದು—ಇದೆಲ್ಲ ನಡೆಯುತ್ತದೆ. ಪ್ರೇಮದಂತೆ ಸ್ನೇಹದ ಪರಿಯೂ ವಿಚಿತ್ರ. ಆರ್. ಸಿ. ಅವರ ಮತ್ತು ನನ್ನ ಸ್ನೇಹದ ಬೆಳವಣಿಗೆಯನ್ನು ಗಮನಿಸಿದಾಗ ನನಗೆನ್ನಿಸುವುದು ಹೀಗೆ.

× × ×

೧೯೩೬ :
ಆಗ ನಾನು ಗದುಗಿನಲ್ಲಿದ್ದೆ. ಅಲ್ಲಿನ ವಾರಪತ್ರಿಕೆಯಲ್ಲಿ ಉಪಸಂಪಾದಕನ ಕೆಲಸ. ವಯಸ್ಸು ಇನ್ನೂ ಹತ್ತೊಂಬತ್ತು !

ನಗರಸಭಾಭವನದಲ್ಲಿ ಎಂಥದೋ ಒಂದು ಸಭೆ. ಅಲ್ಲಿ ನನ್ನ ಭಾಷಣ. ನನ್ನ ವಯಸ್ಸಿ ನಂತೆಯೇ ಅದೂ ಅಪಕ್ವ. ಶ್ರೋತೃಗಳಿಗೆ ಅದು ಎಷ್ಟರಮಟ್ಟಿಗೆ ಹಿಡಿಸಿತೋ ತಿಳಿ ಯದು. ಅದನ್ನು ತಿಳಿದುಕೊಳ್ಳುವ ಗೊಡವೆಗೂ ಹೋಗುತ್ತಿರಲಿಲ್ಲ.

ನನಗಿನ್ನೂ ಚೆನ್ನಾಗಿ ನೆನಪಿದೆ : ನನಗಿಂತಲೂ ಎರಡು ಮೂರು ವರ್ಷಗಳ ಕಿರಿಯ ವಯಸ್ಸಿನ, ಧೋತರ-ಕೋಟು-ಟೊಪ್ಪಿಗೆ ಧರಿಸಿದ, ಕುಳ್ಳಗಿನ-ತೆಳ್ಳಗಿನ ಯುವಕ ನೊಬ್ಬನ ಪರಿಚಯವಾಯಿತು, ಅಂದು. ಅವರ ಮುಖದಲ್ಲಿ ಅಸಾಧಾರಣವಾದ ಬುದ್ಧಿಶಕ್ತಿ ಎದ್ದು ಕಾಣುತ್ತಿತ್ತು. ಕಣ್ಣುಗಳಲ್ಲಿ ಸರಳತೆಯ ಛಾಯೆ; ತುಟಿಗಳ ಮೇಲೆ ಸಹಜವಾದ ಮುಗುಳುನಗೆ. ಅವರು ಮ್ಯಾಟ್ರಿಕ್ ವಿದ್ಯಾರ್ಥಿಯೆಂದೂ ಹೆಸರು ಆರ್. ಸಿ. ಹಿರೇಮಠ ಎಂದೂ ಗೊತ್ತಾಯಿತು. ನನ್ನ ಭಾಷಣವನ್ನು ಅವರೂ ಕೇಳಿದ್ದರಂತೆ.

"ಜೋರಾಗಿ ಮಾತಾಡ್ತೀರಿ. ಆದರೆ, ನೀವು ಇನ್ನೂ ಸ್ವಲ್ಪ ವಿದ್ಯಾಭ್ಯಾಸ ಮಾಡಿದ್ದರೆ ಒಳ್ಳೆಯದಾಗುತಿತ್ತು..." ಎಂದರು ಹಿರೇಮಠ.

ಅವರು ಸತ್ಯಸಂಗತಿಯನ್ನೇ ಹೇಳಿದ್ದರು. ಎಂತಲೇ ನನಗೇನೂ ಕೋಪ ಬರಲಿಲ್ಲ. ಮ್ಯಾಟ್ರಿಕ್ ಮುಗಿಸಬೇಕೆಂಬ ವಿಚಾರ ನನಗೂ ಇತ್ತು. ಆದರೆ ಬಡತನದಿಂದಾಗಿ ಶಕ್ಯವಾಗಲಿಲ್ಲ.

ಆರ್. ಸಿ. ಅವರೂ ನನ್ನಂತೆಯೇ ಕಡುಬಡತನ ಅನುಭವಿಸಿದವರು. 'ಸುಮಾಂಜಲಿ' ಯಲ್ಲಿ ಆ ಬಡತನದ ಹಲವು ಚಿತ್ರಗಳಿವೆ. ಮಕ್ಕಳನ್ನು ಕಟ್ಟಿಕೊಂಡು ಅವರ ತಾಯಿ ಪಟ್ಟ ಕಷ್ಟಸಂಕಟಗಳ ವಿವರಗಳಿವೆ. ಅವುಗಳನ್ನೋದುತ್ತಿದ್ದರೆ ಕಣ್ಣೀರು ಉಕ್ಕುತ್ತದೆ.

ಬಡತನದೆದುರು ಆರ್. ಸಿ. ಸೋತು ಹಿಂಜರಿಯಲಿಲ್ಲ. ಎಂ. ಎ. ಮುಗಿಸುವ ವರೆಗೂ ವಿರಮಿಸಲಿಲ್ಲ. ಅಭ್ಯಾಸ...ಅಭ್ಯಾಸ...ಅಭ್ಯಾಸ...ಹಗಲಿರುಳೂ ಅಭ್ಯಾಸ. ಗಾಢ ವಾದ ವ್ಯಾಸಂಗ. ಹಿಡಿದ ಗುರಿ ಬಿಡಲಿಲ್ಲ. ಎಲ್ಲ ಪರೀಕ್ಷೆಗಳಲ್ಲೂ ಉಚ್ಚಸ್ಥಾನ. ಗುರುಗಳಿಗೆ ಹಿಗ್ಗು. ಗೆಳೆಯರಿಗೆ ಹೆಮ್ಮೆ. ತಾಯಿಗೆ ಸಂಭ್ರಮ.

ರಜಾ ಕಾಲದಲ್ಲಿ ಗದುಗಿಗೆ ಬಂದಾಗಲೆಲ್ಲ ಅವರ ಭೆಟ್ಟಿ ಲಭಿಸುತ್ತಿತ್ತು. ಸಾಹಿತ್ಯಕ ವಿಚಾರಗಳ ಚರ್ಚೆ. ವಾದವಿವಾದ. 'ಮುಸಾರಿ' ಯತ್ತ ವಾಯುವಿಹಾರ. ಸಾಯಂಕಾಲದ ಸುಂದರ ವಾತಾವರಣದಲ್ಲಿ ಬಯಲಲ್ಲಿ ಕುಳಿತು ಹರಟೆ. ಅವರ ಕವಿತೆ

ಗಳ ಬಗೆಗೆ, ನನ್ನ ಕಥೆಗಳ ಬಗೆಗೆ ವಿಮರ್ಶೆ. ಮುಂದಿನ ಮಾರ್ಗಕ್ರಮಣದ ಬಗೆಗೆ ಯೋಜನೆ. ಅದು, ಕನಸು ಕಾಣುವ ಯೌವನದ ಕಾಲ.

× × ×

ಯೌವನ ಕಳೆದು, ಪ್ರೌಢತೆ ಬಂದು, ಅನೇಕ ಕನಸುಗಳು ಹುಡಿಗೂಡಿ ಹೋಗಿ ನಾನು ವಾಸ್ತವವಾದಿಯಾಗುತ್ತಿದ್ದಾಗ ಧಾರವಾಡದಲ್ಲಿ ಮತ್ತೆ ಆರ್. ಸಿ. ಅವರ ಭೆಟ್ಟಿ. ಅದೇ ತಾನೆ ಅವರು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗಕ್ಕೆ ರೀಡರ್ ಆಗಿ ಬಂದಿದ್ದವರು, ಕರ್ನಾಟಕ ಕಾಲೇಜ್ ಹಾಸ್ಟೆಲಿನಲ್ಲಿ ಬಿಡಾರ ಮಾಡಿದ್ದರು. ನಾನು ಮಲಾಮರಡಿಯಲ್ಲಿದ್ದವನು, ಆಗಾಗ ಧಾರವಾಡಕ್ಕೆ ಬಂದು ಹೋಗುತ್ತಿದ್ದೆ. ಕನ್ನಡ ಪಠ್ಯ ಪುಸ್ತಕವೊಂದರಲ್ಲಿ ಧಾರವಾಡದ ಕವಿಮಿತ್ರರೊಬ್ಬರ ಕವಿತೆಯೊಂದನ್ನು ಸೇರಿಸಬೇಕೆಂದು ಆರ್. ಸಿ. ಅವರನ್ನು ಕಂಡು ಬಿನ್ನವಿಸಿಕೊಂಡೆ. ಖಂಡಿತವಾಗಿಯೂ ಸೇರಿಸುವುದಾಗಿ ಅವರು ಮಾತುಕೊಟ್ಟರು.

ಆದರೆ, ಆ ಪುಸ್ತಕ ಸಿದ್ಧವಾಗಿ ಹೊರಬಂದಾಗ ನನ್ನ ಕವಿಮಿತ್ರರ ಕವಿತೆ ಅದರಲ್ಲಿ ಕಾಣಿಸಲಿಲ್ಲ.

ಆ ಕವಿಮಿತ್ರರಿಗೆ ಸಿಟ್ಟು ಬಂದಿದ್ದಿತೊ ಇಲ್ಲವೊ ತಿಳಿಯಲಿಲ್ಲ. ನನಗೆ ಮಾತ್ರ ಸಿಟ್ಟು ಬಂದದ್ದು ನಿಜ. "ಖಂಡಿತ ಸೇರಿಸುವುದಾಗಿ" ಹೇಳಿದ್ದರೂ ಅದೇಕೆ ಸೇರಿಸಲಿಲ್ಲ ? ಇದು ವಚನಭಂಗವಲ್ಲವೆ ? ಎಂದು ನನಗೆ ಭಯಂಕರ ಸಿಟ್ಟು ಬಂದಿತು. ಪಠ್ಯಪುಸ್ತಕದಲ್ಲಿ ಒಂದು ಕೃತಿಯನ್ನು ಸೇರಿಸುವುದೂ ಸೇರಿಸದಿರುವುದೂ ಸಮಿತಿಯ ಒಬ್ಬ ಸದಸ್ಯರ ಮೇಲೆಯೇ ಅವಲಂಬಿಸಿರುವುದಿಲ್ಲ. ಆ ಸದಸ್ಯರು ಆ ಕೃತಿಯನ್ನು ಎಷ್ಟೇ ಪುರಸ್ಕರಿಸಿದರೂ ಒಮ್ಮೊಮ್ಮೆ ಅದು ಬಿದ್ದು ಹೋಗುವುದುಂಟು ಎಂಬ ವಾಸ್ತವಾಂಶ ಅಂಥ ಸಮಿತಿಗಳ ಅನುಭವವಿರದ ನನಗೆ ಆಗ ತಿಳಿಯುವುದೇ ಶಕ್ಯವಿರಲಿಲ್ಲ.

ಸರಿ, ಸಿಟ್ಟಿನಲ್ಲಿಯೇ ಆರ್. ಸಿ. ಅವರ ಹತ್ತಿರ ಹೋಗಿ ಅರ್ಧಗಂಟೆಯ ಕಾಲ. ಭಯಂಕರ ಬಿರುಸಾಗಿ ಮಾತನಾಡಿದೆ. ಆರ್. ಸಿ. ಅವರ ಸಿಟ್ಟೂ ಕಡಿಮೆಯದೇನಲ್ಲ. ಆದರೂ–

ಆ ದಿನ ಮಾತ್ರ ಅರ್ಧಗಂಟೆಯ ವರೆಗೂ ನನ್ನ ಕೋಪತಾಪಗಳೆಲ್ಲವನ್ನು ನಗುನಗುತ್ತಲೇ ಎದುರಿಸಿದರು. ಆರ್. ಸಿ. ಅವರು ನನ್ನೊಡನೆ ವಾದಕ್ಕೆ ನಿಲ್ಲುವ ಗೊಡವೆಗೂ ಹೋಗಲಿಲ್ಲ. ಸಿಟ್ಟಿನಿಂದ ಚೀರಾಡುವ ಮಕ್ಕಳನ್ನು ನೋಡಿ ನಗುವಂತೆಯೇ ನನ್ನನ್ನೂ ನೋಡಿ ನಗುತ್ತಲಿದ್ದರು. ಅವರು ನಕ್ಕಂತೆ ನಕ್ಕಂತೆ ನನ್ನ ಸಿಟ್ಟೂ ನೀರಾಗಿ ಹರಿದುಹೋಯಿತು. ಆ ಕವಿತೆಗೆ ಸ್ಥಾನ ಸಿಕ್ಕದಿರಲು ಏನಾದರೂ ಕಾರಣವಿರಬಹುದು ಎಂಬ ಜ್ಞಾನೋದಯವಾಯಿತು. ನನ್ನ ವರ್ತನೆಯ ಬಗೆಗೆ ನನಗೇ ನಾಚಿಕೆಯಾಯಿತು.

" ಕೋಪವೆಂಬುದು ಪಾಪಕ್ಕೆ ಮೂಲ " ಎಂಬ ವಚನ ನೆನಪಿಗೆ ಬಂದಿತು. ಆರ್. ಸಿ. ಯವರ ನಗುಮೊಗ ಮತ್ತೆಮತ್ತೆ ಕಣ್ಣೆದುರು ಮೂಡತೊಡಗಿತು. ಏನು ಸಹನೆ... ಎಂಥ ತಾಳ್ಮೆ...ಎಂಥ ಸಮಾಧಾನ...ನನ್ನದು ಮಾತ್ರ ಎಂಥ ಮುಂಗೋಪ...

ಎರಡು ಮೂರು ದಿನ ಊಟ ರುಚಿಸಲಿಲ್ಲ. ನಿದ್ರೆ ಬರಲಿಲ್ಲ.

ಅನಂತರ, ನಾನೆಂದೂ ಆರ್. ಸಿ. ಅವರೊಡನೆ ಆ ರೀತಿ ವರ್ತಿಸಿಲ್ಲ.

ಅವರೂ ಸಹ ಅಂದಿನ ಆ ಘಟನೆಯನ್ನು ನೆನಪಿನಲ್ಲಿಟ್ಟುಕೊಂಡಂತಿಲ್ಲ. ಅವರ ಬದಲು ಇನ್ನೊಬ್ಬರಾಗಿದ್ದರೆ ಮತ್ತೆ ನನ್ನೊಡನೆ ಮಾತನ್ನೂ ಆಡುತ್ತಿರಲಿಲ್ಲವೇನೊ ? ಆದರೆ, ಆರ್. ಸಿ. ಯವರು ಮಾತ್ರ ಆರ್. ಸಿ. ಯವರೇ. ಮಾನವನ ದೌರ್ಬಲ್ಯಗಳನ್ನು ಅವರು ಚೆನ್ನಾಗಿ ಬಲ್ಲರು. ತಾತ್ಕಾಲಿಕವಾದ ಕೋಪ-ತಾಪಗಳನ್ನು ಅವರು ಗಂಭೀರ ವಾಗಿ ಪರಿಗಣಿಸುವುದಿಲ್ಲ. ಅವುಗಳನ್ನು ಅಲ್ಲಿಗೇ ಬಿಟ್ಟು ಸ್ನೇಹಸಂಬಂಧ ಮುಂದು ವರಿಸುತ್ತಾರೆ.

ಮತ್ತೆ ನಾನು ಅವರನ್ನು ಧಾರವಾಡದಲ್ಲಿ ಕಂಡಾಗ ಮೊದಲಿನಂತೆಯೇ ಸಹಜವಾಗಿ ನಗು ನಗುತ್ತಲೇ ಮಾತನಾಡಿದರು, ಕಷ್ಟ-ಸುಖ ವಿಚಾರಿಸಿದರು. ತಮಗೆ ಶಕ್ಯವಿದ್ದಾಗ ಲೆಲ್ಲ ಹಲವು ಬಗೆಯಲ್ಲಿ ನೆರವಾದರು. ಈ ನೆರವು ಇಂಥದೇ ಎಂದು ವಿವರಿಸಿ ಹೇಳು ವಂತಿಲ್ಲ. ಇದು ಬಹಳ ಸೂಕ್ಷ್ಮ ವಿಷಯ. ಹೇಳುವಾಗ ಒಂದು ಶಬ್ದ ಹೆಚ್ಚು ಕಡಿಮೆಯಾದರೆ ಅರ್ಥ ಅನರ್ಥವಾಗುವ ಸಂಭವ. ಧಾರವಾಡದಲ್ಲಿ ಆರ್. ಸಿ. ಅವರೂ ಮೈಸೂರಿನಲ್ಲಿ ದೇಜಗೌ ಅವರೂ ಈ ರೀತಿ ನೆರವಾದುದರಿಂದಲೇ ನನ್ನ ಕೆಲವು ಪುಸ್ತಕ ಗಳು ಕಾಲೇಜು ತರಗತಿಗಳಿಗೆ ಪಠ್ಯವಾಗಿ ನೇಮಕಗೊಂಡವು. ಅವುಗಳಿಂದ ಬಂದ ಹಣದಿಂದಲೇ ನಾನು ಧಾರವಾಡದಲ್ಲಿ ಮನೆ ಕಟ್ಟಿಸಿದ್ದು. ಈಚೆಗೆ ಆ ಮನೆಯ ಮುಖ್ಯ ಭಾಗವನ್ನು ಮಾರಿ, ಅದೇ ಆವಾರದಲ್ಲಿರುವ ಕಿರುಮನೆಯಲ್ಲಿರಬೇಕಾಗಿ ಬಂದಿದೆ. ಆ ವಿಚಾರ ಬೇರೆ.

ಪಠ್ಯಪುಸ್ತಕಗಳನ್ನು ಗೊತ್ತುಪಡಿಸುವಾಗ ಪಕ್ಷಪಾತ ಮಾಡಲಾಗುವುದೆಂಬ ಆರೋಪ ಬರುತ್ತಿರುತ್ತವೆ. ಆ ಆರೋಪಗಳಲ್ಲಿ ಹುರುಳಿರುವುದಿಲ್ಲ. ಯಾವ ಲೇಖಕರ ಬಗೆಗೂ ಪಕ್ಷಪಾತವಾಗದಂತೆ, ತುಂಬ ಎಚ್ಚರದಿಂದ. ಸಮಿತಿ ಆ ಕೆಲಸ ಮಾಡುತ್ತದೆ. ಜಾತಿ ಮತಗಳನ್ನೂ ಗಮನಿಸದೆ, ಯೋಗ್ಯ ಪುಸ್ತಕಗಳನ್ನು ಮಾತ್ರ ನೇಮಿಸಲಾಗುತ್ತದೆ. ಶ್ರೀಗಳಾದ ಕುವೆಂಪು, ದೇಜಗೌ. ಆರ್. ಸಿ. ಅವರು ಅಧಿಕಾರಸ್ಥಾನಗಳಿಗೆ ಬರುವ ಮೊದಲು ಕೇವಲ ಕೆಲವೇ ಜನರ ಪುಸ್ತಕಗಳು ಮತ್ತೆಮತ್ತೆ ಪಠ್ಯಗಳಾಗುತ್ತಿದ್ದುವು. ಅಂಥ ಅನ್ಯಾಯ ಈಗ ನಡೆಯುವುದಿಲ್ಲ. ಬೇರೊಬ್ಬರ ಪುಸ್ತಕಗಳ ಜೊತೆಗೆ ನನ್ನದೂ ಒಂದು ನೇಮಕವಾಗುತ್ತದೆ; ಅಷ್ಟೆ. ಇದರಲ್ಲಿ ಪಕ್ಷಪಾತವೇನು ಬಂತು ?

× × ×

ಆರ್. ಸಿ. ಅವರ ಶೀಘ್ರಕೋಪವೂ ಸುಪ್ರಸಿದ್ಧವಾದದ್ದು. ಅವರ ಸ್ನೇಹಿತರಿಗೂ ಶಿಷ್ಯರಿಗೂ ಅದರ ಅನುಭವ ಬಂದೇ ಇದೆ. ನನಗೂ ಒಮ್ಮೆ ಅದರ ದರ್ಶನವಾಯಿತು.

ಆ ಸಂದರ್ಭ ಹೀಗೆ :

೧೯೬೪ ನೆಯ ವರ್ಷ. ಗೆಳೆಯ ದೇಜಗೌ ಅವರಿಗೆ ಧಾರವಾಡದಲ್ಲಿ ಸನ್ಮಾನ ಸಮಾರಂಭ ಏರ್ಪಡಿಸಿದ್ದೆವು. ಆ ಸಮಾರಂಭದ ಸೂತ್ರಧಾರತ್ವ ನನ್ನದಾಗಿದ್ದಿತು. ಅವರು ಇಲ್ಲಿಗೆ ಆಗಮಿಸುವ ಸಂದರ್ಭದಲ್ಲಿಯೇ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ವತಿಯಿಂದಲೂ ಜನತಾ ಕಾಲೇಜಿನ ವತಿಯಿಂದಲೂ ಅವರ ಸಭೆಗಳನ್ನೇರ್ಪಡಿಸುವ ಯೋಜನೆ ಹಮ್ಮಿಕೊಂಡರು. ದಿನಾಂಕ ಮತ್ತು ಸಮಯ ತಿಳಿದುಕೊಳ್ಳಲು ಅವರು ದೇಜಗೌ ಅವರಿಗೆ ವಿನಂತಿಸಿಕೊಂಡಾಗ, ಧಾರವಾಡದ ಮುಖ್ಯ ಸಮಾರಂಭವನ್ನು ಏರ್ಪಡಿಸಿದ್ದ ನನ್ನೊಡನೆ ಸಮಾಲೋಚಿಸಿ, ಅನುಕೂಲವಾದ ಸಮಯ ಗೊತ್ತುಪಡಿಸಬಹುದೆಂದು ದೇಜಗೌ ಅವರು ಉತ್ತರಿಸಿದರು. ಜನತಾ ಕಾಲೇಜಿನ ಧಾರವಾಡಕರರೇನೋ ನನ್ನ ಹತ್ತಿರ ಬಂದು ಸಮಯ ಗೊತ್ತುಪಡಿಸಿಕೊಂಡು ಹೋದರು. ಆದರೆ, ವಿಶ್ವವಿದ್ಯಾಲಯ ಒಂದು ದೊಡ್ಡ ಸಂಸ್ಥೆಯಾದುದರಿಂದ ನನ್ನಂಥ ವ್ಯಕ್ತಿಯಿಂದ ಸಮಯ ನಿಶ್ಚಿತಪಡಿಸುವುದು ಉಚಿತವಾಗಿ ಕಂಡಿರಲಾರದು. ನಾವೆಲ್ಲ ಒಂದೇ ಎಂಬ ಭಾವನೆಯಿಂದ ದೇಜಗೌ ಆ ರೀತಿ ಉತ್ತರಿಸಿದ್ದರು. ಅವರದೇನೂ ತಪ್ಪಿರಲಿಲ್ಲ. ಧಾರವಾಡದಲ್ಲಿನ ಅವರ ಎಲ್ಲ ಕಾರ್ಯಕ್ರಮಗಳ ಗುತ್ತಿಗೆ ವಹಿಸಿಕೊಂಡಂತೆ ವರ್ತಿಸುತ್ತಿದ್ದುದು ನನ್ನದೇ ತಪ್ಪಾಗಿದ್ದಿತು.

ಈ ವಿಚಾರವಾಗಿ ಮಾತನಾಡಲು ನಾನು ಕನ್ನಡ ವಿಭಾಗಕ್ಕೆ ಹೋಗಿ ಆರ್. ಸಿ. ಅವರನ್ನು ಕಾಣುತ್ತಲೂ ಅವರ ಸಿಟ್ಟು ಜ್ವಾಲಾಮುಖಿಯ ಲಾವಾರಸದಂತೆ ಹದಿನೈದು ನಿಮಿಷಗಳ ಕಾಲ ಉಕ್ಕಿ ಹರಿಯಿತು.

"ಕನ್ನಡ ವಿಭಾಗದಲ್ಲಿ ಜವರೇಗೌಡರ ಕಾರ್ಯಕ್ರಮ ಏರ್ಪಡಿಸಲು ನಿಮ್ಮನ್ನೇಕೆ ನಾವು ಕೇಳಬೇಕು ?......" ಇತ್ಯಾದಿ ಇತ್ಯಾದಿ.

ಅವರು ನ್ಯಾಯಬದ್ಧವಾದ ಮಾತನ್ನೇ ಆಡುತ್ತಿದ್ದರಾದುದರಿಂದ ನಾನೇನೂ ಕೋಪಿಸಿಕೊಳ್ಳಲಿಲ್ಲ. ಮನಸ್ಸನ್ನು ಕಹಿಮಾಡಿಕೊಳ್ಳಲಿಲ್ಲ.

ದೇಜಗೌ ಅವರು ಕನ್ನಡ ವಿಭಾಗಕ್ಕೂ ಬಂದರು. ಅಲ್ಲಿಯೇ ಊಟವೂ ಆಯಿತು. ನಾನೂ ಹೋಗಿದ್ದೆ. ನಮ್ಮ ಕಾರ್ಯಕ್ರಮಕ್ಕೆ ಆರ್. ಸಿ. ಅವರೂ ಬಂದರು. ಎಲ್ಲವೂ ಸರಿ ಹೋಯಿತು.

ಆರ್. ಸಿ. ಅವರಿಗೂ ನನಗೂ ಸಂಬಂಧ ಕೆಡಿಸಿ ಮೋಜು ನೋಡಬೇಕೆಂದಿದ್ದವರು ಮಾತ್ರ ನಿರಾಶರಾದರು.

ಹೌದು. ಇಂಥ "ಕೆಡಿಸಪ್ಪ" ಗಳು ಎಲ್ಲ ಕಡೆಗಳಲ್ಲೂ ಇರುತ್ತಾರೆ. ನಾವು ಧಡ್ಡ ರಾದರೆ ಮಾತ್ರ ಅಂಥವರ ಆಟ ನಡೆಯುತ್ತದೆ, ಅಷ್ಟೆ.

× × ×

ಆರ್. ಸಿ. ಅವರು ಕುಲಪತಿಗಳಾದ ಮೇಲೆ ಧಾರವಾಡದಲ್ಲಿ ಅವರ ಸನ್ಮಾನ ಸಮಾರಂಭ ಜರಗಿಸಲು ನಿರ್ಧರಿಸಿದೆವು. ಅವರು ಒಪ್ಪಿಕೊಳ್ಳಲಿಲ್ಲ.

"ಒತ್ತಾಯ ಮಾಡಬೇಡಿ. ನಾನು ಕೆಲಸ ಮಾಡಬೇಕಾದುದು ತುಂಬ ಇದೆ. ಅದರಲ್ಲೇ ನನಗೆ ಸಂತೋಷ." ಎಂದು ಹೇಳಿದರು.

ಸತ್ಕಾರ ಸಮಾರಂಭಗಳನ್ನು ನಿರಾಕರಿಸುವ ಇಂಥ ವ್ಯಕ್ತಿಗಳು ಕರ್ನಾಟಕದಲ್ಲಿ ಬಹಳ ಜನರಿಲ್ಲ.

× × ×

ಆರ್. ಸಿ. ಅವರು ಕುಲಪತಿಯಾಗುವ ಮೊದಲು ನಾವಿಬ್ಬರೂ ವಾರಕ್ಕೊಮ್ಮೆ ಯಾದರೂ ಭೆಟ್ಟಿಯಾಗುತ್ತಿದ್ದೆವು.

ಅವರು ಕುಲಪತಿಯಾಗುತ್ತಲೂ ನಾನಾಗಿ ವಿಚಾರಮಾಡಿ, ಭೆಟ್ಟಿಯ ಸಂದರ್ಭಗಳನ್ನು ಕಡಿಮೆಮಾಡಿದೆ.

ಉಚ್ಚಸ್ಥಾನಗಳಲ್ಲಿರುವ ಸ್ನೇಹಿತರ ಹತ್ತಿರ, ಅವರು ಆ ಸ್ಥಾನಗಳಲ್ಲಿರುವ ವರೆಗೂ ಹೆಚ್ಚಾಗಿ ಓಡಾಡಬಾರದು. ಅದರಿಂದ ಉಭಯತರಿಗೂ ಕ್ಷೇಮ.

ಎಂತಲೇ, ಮೂರು ವರ್ಷಗಳಿಂದ ನಾನು ಅವರ ಕಚೇರಿಗಾಗಲಿ, ಮನೆಗಾಗಲಿ ಹೋದದ್ದು ಎರಡು ಮೂರು ಬಾರಿ, ಅಷ್ಟೆ.

"ಆರ್. ಸಿ. ಅವರಿಗೂ ಬ. ಕ. ಅವರಿಗೂ ಏನೋ ಜಗಳವಾಗಿರಬೇಕು. ಇಲ್ಲ ವಾದರೆ, ಮೊದಲೆಲ್ಲಾ ಕೂಡಿಯೇ ಇರುತ್ತಿದ್ದ ಇಬ್ಬರೂ ಈಚೆಗೆ ಎಲ್ಲೂ ಒಟ್ಟಿಗೆ ಕಾಣಿಸಿಕೊಳ್ಳುತ್ತಿಲ್ಲವಲ್ಲ!" ಎಂದು ಅನೇಕರು ಮಾತನಾಡಿಕೊಂಡದ್ದು ನನಗೂ ಗೊತ್ತಾಗಿದೆ.

ಯಾರು ಏನನ್ನಾದರೂ ಮಾತನಾಡಿಕೊಂಡರೂ ಪರವಾಯಿಲ್ಲ. ನಿಜವಾದ ವಿಚಾರ ಅವರಿಗೆ ಗೊತ್ತಿರುವುದಿಲ್ಲ. ಅದರಿಂದಾಗಿ ಆಡಿಕೊಳ್ಳುತ್ತಾರೆ.

ಮೊದಲಿನಿಂದ ಕಡೆಯ ವರೆಗೂ ಒಂದೇರೀತಿ ವರ್ತಿಸಿಕೊಂಡು ಬರುವ ಸ್ನೇಹಿತರು ವಿರಳವೆಂಬುದು ನನ್ನ ಅನುಭವಕ್ಕೆ ಬಂದ ಸಂಗತಿ. ನನಗಂತೂ "ನಿಜವಾದ ಸ್ನೇಹಿತ" ರೆನ್ನುವವರು ಮೂರು ನಾಲ್ಕು ಜನ, ಅಷ್ಟೆ. ಆ ನಾಲ್ಕು ಜನರಲ್ಲಿ ಆರ್. ಸಿ. ಅವರೂ ಒಬ್ಬರು. ತಾತ್ಕಾಲಿಕವಾದ ಕೋಪ-ತಾಪ–ಸಂತಾಪ-ಮಿಂಚು–ಗುಡುಗು–ಗರ್ಜನೆ ಗಳಿಲ್ಲ ವಾಯುವಾಗಿ ಆಕಾಶ ನಿರಭ್ರವೂ ನಿರ್ಮಲವೂ ಆಗಿದ್ದಾಗ ಅಲ್ಲಿ ಕಾಣುವುದು, ಗದುಗಿನ ನಗರಸಭಾಭವನದಲ್ಲಿ ಮೊದಲಬಾರಿಗೆ ಕಂಡ ಅದೇ ಸಹಜ ಸರಳ ನಗುಮೊಗ.

■ ■

# ಸ್ನೇಹದ ರಸಪ್ರಸಂಗಗಳು

ಎಂ. ಎಸ್. ಸುಂಕಾಪುರ

೧೯೪೩ನೆಯ ಇಸ್ವಿ, ಜೂನ ತಿಂಗಳ ೧೪ನೆಯ ತಾರೀಖು. ಮರುದಿನವೇ ಎಲ್ಲ ಕಾಲೇಜುಗಳಂತೆ ನಮ್ಮ ಲಿಂಗರಾಜ ಕಾಲೇಜು ಪ್ರಾರಂಭವಾಗಲಿತ್ತು. ನಮ್ಮೂರಿನಿಂದ ಬಸ್ಸು ಹಿಡಿದು ಹುಬ್ಬಳ್ಳಿಗೆ ಬಂದೆ. ಅಲ್ಲಿಂದ ಬೆಳಗಾಂವಿಯ ವರೆಗೆ ಟ್ರೇನಿನಲ್ಲಿ ಹೋಗಬೇಕೆಂದು ತೀರ್ಮಾನಿಸಿದ್ದೆ. ಮಧ್ಯಾಹ್ನ ೧ ಗಂಟೆಗೆ ಪ್ಯಾಸಿಂಜರ ಗಾಡಿ ಹುಬ್ಬಳ್ಳಿ ಬಿಡುತ್ತಿತ್ತು. ವೇಳೆಗೆ ಸರಿಯಾಗಿ ಸ್ಟೇಶನ್ನಕ್ಕೆ ಬಂದು, ಟಿಕೀಟು ಪಡೆದು. ಗಾಡಿಯು ಮೂರನೇ ನಾಮಾಂಕಿತ ಡಬ್ಬಿಯೊಂದರಲ್ಲಿ ಪ್ರವೇಶಿಸಿದೆ. ಕೂಡಲು ಸ್ಥಳ ವಿದ್ದಿಲ್ಲ. ಅಷ್ಟೊಂದು ಪ್ರಯಾಣಿಕರು. ಅದರಲ್ಲಿಯೇ ಇಂಬು ಮಾಡಿಕೊಂಡು ಕುಳಿತುಕೊಂಡೆ. ಹೊರಗೆ ಉರಿಬಿಸಿಲು, ಒಳಗೆ ಗಮ್ಮ. ಒಂದೆರಡು ನಿಮಿಷಗಳಲ್ಲಿ ತೊಟ್ಟ ಅಂಗಿ ತೊಯ್ದು ತಪ್ಪಡಿ ಆಯಿತು. ಮಾಡುವುದೇನು ? ಕರವಸ್ತ್ರದಿಂದ ಗಾಳಿ ಹಾಕಿಕೊಳ್ಳುತ್ತ ಕುಳಿತೆ. ಅಷ್ಟರಲ್ಲಿಯೇ ಗಾಡಿ ಸೀಟಿ ಹೊಡೆಯಿತು. ಇನ್ನೇನು ಗಾಡಿ ಓಡುತ್ತದೆ ಎನ್ನುವಷ್ಟರಲ್ಲಿ ಶ್ರೀ ಆರ್. ಸಿ. ಹಿರೇಮಠರು ಹಳೆಯ ಪುಸ್ತಕಗಳ ಮೂಟೆ ಯೊಡನೆ ನಾನಿದ್ದ ಡಬ್ಬಿಗೆ ನುಗ್ಗಿ ಬಂದರು. ಅವರ ಪರಿಚಯ ಆ ಮೊದಲೇ ನನಗೆ ಇತ್ತು. ಆದರೆ ಅಷ್ಟೊಂದು ಗಾಢವಾಗಿರಲಿಲ್ಲ. ಆ ವರ್ಷ ಅವರು ಬಿ. ಎ. ಪರೀಕ್ಷೆ ಯಲ್ಲಿ ಕನ್ನಡ ವಿಷಯ ತೆಗೆದುಕೊಂಡು ಮುಂಬಯಿ ವಿಶ್ವವಿದ್ಯಾಲಯಕ್ಕೆ ಪ್ರಥಮ ದರ್ಜೆಯಲ್ಲಿ ಪ್ರಥಮರಾಗಿ ಪಾಸಾದುದು ನನಗೆ ಹರ್ಷವನ್ನುಂಟುಮಾಡಿದ್ದಿತು. ಅವ ರನ್ನು ಕಂಡೊಡನೆ ಆತ್ಮೀಯತೆಯಿಂದ ಒಳಗೆ ಬರಮಾಡಿಕೊಂಡೆ. ಅವರ ಗಂಟು ಮೂಟೆಯನ್ನು ಎತ್ತಿಡುವಲ್ಲಿ ಸಹಾಯಕನಾದೆ. ಇದ್ದುದರಲ್ಲಿಯೇ, ನಾನು ಈ ಮೊದಲು ಹಿಡಿದಿದ್ದ ಸ್ಥಳವನ್ನೇ ಹಂಚಿಕೊಂಡು ಕುಳಿತುಕೊಂಡೆವು. ಒನ್ ಬಾಯ್ ಟು ಎನ್ನುವಂತೆ ನಮ್ಮ ಪ್ರಯಾಣ ಮುಂದುವರಿಯಿತು.

ಗಾಡಿ ನಿಲ್ದಾಣ ನೋಡಿ ನಿಂತು, ಮತ್ತೆ ಮುಂದಕ್ಕೆ ಓಡುತ್ತಿತ್ತು. ಆದರೆ ನಮ್ಮಿಬ್ಬರ ಸಂಭಾಷಣೆಗೆ ಬ್ರೆಕ್ಕು ಎನ್ನುವದೇ ಇರಲಿಲ್ಲ. ಸುಖದುಃಖಗಳನ್ನು ತೋಡಿಕೊಳ್ಳುವುದರಲ್ಲಿಯೇ ವೇಳೆ ಕಳೆಯತೊಡಗಿದುದು ನಮಗೆ ತಿಳಿಯಲಿಲ್ಲ. ನಿಮ್ಮ ಅಭ್ಯಾಸಕ್ಕೆ ಅನುಕೂಲ ಮಾಡುತ್ತೇನೆ. ನೀವು ಕನ್ನಡವನ್ನೇ ಪ್ರಧಾನ ವಿಷಯವನ್ನಾಗಿ ಈ ವರ್ಷ ಬಿ.ಎ. ಪರೀಕ್ಷೆಗೆ ಆರಿಸಿಕೊಳ್ಳಿರಿ ಎಂದು ಮಾತಿನ ಮಧ್ಯದಲ್ಲೊಮ್ಮೆ ಶ್ರೀ ಹಿರೇಮಠರು ನುಡಿದರು. ಅದರಂತೆ ಕನ್ನಡ ಆಯ್ದುಕೊಳ್ಳಲು ಒಪ್ಪಿಕೊಂಡೆ. ಅಷ್ಟರಲ್ಲಿಯೇ ಲೋಂಡಾ ಸ್ಟೇಶನ್ ಬಂದು ಬಿಟ್ಟಿತು. ಕಾಫಿ ಕುಡಿಯಬಹುದಲ್ಲ ? ಎಂದೆ. ಆಗಲಿ ಎಂದರು. ಲೋಂಡಾ ಜಂಕ್ಷನ್ ಸ್ಥಳ. ಅಲ್ಲಿ ಗಾಡಿ ಇಪ್ಪತ್ತು ನಿಮಿಷ ನಿಲ್ಲುತ್ತಿತ್ತು. ಅಷ್ಟರಲ್ಲಿ ಒಬ್ಬ ಖಾಕಿಬಟ್ಟೆಯ ವ್ಯಕ್ತಿ ಮೀಸೆಗೆ ಹುರಿಹಾಕುತ್ತ, ನಮ್ಮ ಡಬ್ಬಿಯಲ್ಲಿ ಬಂದು ಗಂಟು ಗದಡಿಗಳನ್ನೆಲ್ಲ ಬಿಚ್ಚಿಸಿ ತಪಾಸಮಾಡತೊಡಗಿದ. ಮಹಾಯುದ್ಧದ ಬಿಸಿ ಇನ್ನೂ ಆರಿರಲಿಲ್ಲ. ರೇಶನ್‌ಕಾಲ. ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ದವಸಧಾನ್ಯಗಳನ್ನು ಸಾಗಿಸಬಾರದೆಂದು ಸರಕಾರದ ಆಜ್ಞೆ. ಇದೆಲ್ಲ ನನಗೆ ಗೊತ್ತಿದ್ದರೂ ಒಂದು ಶೇರಿನಷ್ಟು ಸಕ್ಕರೆಯನ್ನು, ಚಹಾ ಕಾಸಿದರೆ ಬೇಕೆಂದು ತಂದಿದ್ದೆ. ಆ ಖಾಕಿ ಚೌಕಿದಾರ ನನ್ನ ಗಂಟು ಬಿಚ್ಚಿ, ಅರಿವೆಯಲ್ಲಿ ಕಟ್ಟಿದ್ದ ಸಕ್ಕರೆಯನ್ನು ಹೊರ ತೆಗೆದು ಅಷ್ಟ ಉದ್ದ ಜಿಗಿದಾಡತೊಡಗಿದ. "ನಾವು ವಿದ್ಯಾರ್ಥಿಗಳು, ಕ್ಷಮಿಸಿರಿ" ಎಂದೆ. ಅವನಿಗೆ ಜೀವನದಲ್ಲಿಯೇ ದಯೆ ಭೆಟ್ಟಿಯಾದಂತೆ ಕಾಣಲಿಲ್ಲ. ಮುಗಿಲುದ್ದ ಮಾತಾಡತೊಡಗಿದ. "ಗಂಡನ ಮನೆಗೆ ಗರತಿಯ ಉಡಿಯಕ್ಕಿಯನ್ನು ಸಹ ನಾ ಬಿಟ್ಟವನಲ್ಲ. ಕಾಯ್ದೆ ಅಂದರೆ ಕಾಯ್ದೆ" ಎಂದು ಕಾಯ್ದೆಶೀರ ಮಾತಾಡತೊಡಗಿದ. ಇಷ್ಟುಹೊತ್ತಿನ ವರೆಗೆ ಸುಮ್ಮನೆ ಕುಳಿತಿದ್ದ ಹಿರೇಮಠರು ನನಗೆ ಸನ್ನೆಮಾಡಿ ಅವನೊಡನೆ ವಾಗ್ವಾದ ನಡೆಸಿದರು. ಸಹಪ್ರಯಾಣಿಕರು ಎರಡೂ ಪಕ್ಷಕಟ್ಟಿ ಮಾತಾಡತೊಡಗಿದರು. ಅವರ ವಾದವಿವಾದ ಇನ್ನೂ ಮುಗಿದಿರಲಿಲ್ಲ. ಕೊನೆಗೆ ಹಿರೇಮಠರು ರೊಚ್ಚಿನಿಂದ "ಅವನ ಮುಖದ ಮೇಲೆ ಸಕ್ಕರೆ ಚೆಲ್ಲಿಬಿಡಿರಿ" ಎಂದರು. ಗಾಡಿ ಸಿಳ್ಳು ಹಾಕಿ ಸಾಗತೊಡಗಿತ್ತು. ನಾನು ಸಕ್ಕರೆ ಕಟ್ಟಿದ ಅರಿವೆಯನ್ನು ಆ ಕಾಯ್ದೆಶೀರ ಮನುಷ್ಯನ ಕಡೆಗೆ ಚೆಲ್ಲಿದೆ. ಆತ ದರ್ಪದಿಂದ "ಸಕ್ಕರೆ"? ಎಂದ. "ತಿಂದು ಮುಗಿಸಿದೆ" ಎಂದು ಉತ್ತರಿಸಿದೆ. ಎಲ್ಲರೂ ನಗತೊಡಗಿದರು. ಹಿರೇಮಠರೂ ನಕ್ಕರು. ಅವರು ಅಷ್ಟು ನಗಬಲ್ಲರು—ಎಂದು ಅಂದೇ ತೀರ್ಮಾನಿಸಿಕೊಂಡೆ.

× × ×

ಲಿಂಗರಾಜ ಕಾಲೇಜಿನ ಲಿಂಗರಾಜ ಹಾಸ್ಟೆಲ್ ನಮ್ಮ ವಾಸಸ್ಥಾನವಾಗಿತ್ತು. ಶ್ರೀ ಹಿರೇಮಠರು ಉತ್ತಮಶ್ರೇಣಿಯಲ್ಲಿ ಪಾಸಾಗಿದ್ದುದರಿಂದ ಅವರಿಗೆ ಸ್ಕಾಲರಶಿಪ್ ಜೊತೆಗೆ ಇರಲು ಒಂದು ಸಿಂಗಲ್ ರೂಮ್ ಸಹ ದೊರಕಿತ್ತು. ಅಲ್ಲಿಯೇ ನನ್ನ ಇನ್ನೊಂದು ರೂಮು. ಅಭ್ಯಾಸ ಮುಗಿದ ಮೇಲೆ ಸಂಜೆಯ ಮುಂದೆ ಸ್ವಲ್ಪಹೊತ್ತು

ತಿರುಗಾಡಲು ಇಬ್ಬರೂ ಹೋಗುತ್ತಿದ್ದೆವು. ಪ್ರೊ. ಭೂಸನೂರಮಠರ ಮನೆಗೆ ಹೋಗಿ ಅವರನ್ನೂ ಕೂಡಿಕೊಂಡು ತಿರುಗಾಡುವುದು ನಮಗೆ ಬರುಬರುತ್ತ ರೂಢಿಯಾಯಿತು. ವಿಷಯ ವಿವೇಚನೆ ನಮ್ಮ ವಿಹಾರದ ಉದ್ದೇಶವಾಗಿದ್ದರೂ ಒಮ್ಮೊಮ್ಮೆ ವಿಷಯ ಎಲ್ಲಿಯೋ ನಿಂತುಹೋಗಿ, ನಗೆಚಾಟಿಯೇ ಹೆಚ್ಚಾಗಿ ಬಿಡುತ್ತಿತ್ತು. ನನ್ನ ಆಯ್ದುಕೆ ಮಾತು, ನಗೆಹೊಗೆ ಪಕ್ವಗೊಂಡುದು ಅವರ ಸಹವಾಸದಿಂದಲೇ. ಹಿರೇಮಠರ ಜೀವನದಲ್ಲಿ ಸುಖ ಕಡಿಮೆ, ದುಃಖ ಜಾಸ್ತಿ. ಏನಿದ್ದರೂ ಬೇಕು, ಬೇಡ ಎನ್ನುವ ಶಬ್ದಗಳು ಅವರಿಂದ ಬರುತ್ತಲೇ ಇಲ್ಲ. ತಾವಾಯಿತು; ತಮ್ಮ ಅಭ್ಯಾಸವಾಯಿತು; ಸುಮ್ಮನಿದ್ದುಬಿಡುತ್ತಿದ್ದರು. ನಾನು ಕರೆದರೆ ಒಗೊಟ್ಟು ನನ್ನೊಡನೆ ಬರುತ್ತಿದ್ದರು.

ಒಂದುದಿನ ಸಂಜೆ ಗಂಟೆ ಏಳಾಗಿರಬೇಕು. ಅಂದು ಹಾಸ್ಟೆಲಿನಲ್ಲಿ ಊಟ ಇರಲಿಲ್ಲ. ಅವರು ಓದುತ್ತ ಕುಳಿತಲ್ಲಿಗೆ ನಾನು ಏದುತ್ತ ಹೋದೆ "ಊರಲ್ಲಿ ಹೋಗಿ ಬರೋಣ" ಬನ್ನಿ ಎಂದೆ. ತಯಾರಾದರು. ಆಗಲೇ ಸಾಕಷ್ಟು ಕತ್ತಲೆಯಾಗಿತ್ತು. ಮುಂದೆ ನಡೆದೆವು. ದಾರಿಯ ಪಕ್ಕದಲ್ಲಿ ಒಂದು ಮದುವೆಯ ಮನೆ; ಶೃಂಗರಿಸಿದ ಮಂಟಪ. ವಿದ್ಯುದ್ದೀಪಗಳ ಭರ್ಜರಿ ಅಲಂಕಾರ. ನೋಡುವ ಹಾಗಿತ್ತು ಮದುವೆಮನೆ. ಒಂದೆರಡು ನಿಮಿಷ ನೋಡುತ್ತ ನಿಂತೆವು. ಅಷ್ಟರಲ್ಲಿ ನೂರಾರುಜನ ಬೀಗರೊಂದಿಗೆ ಅಳಿಯನ ಅವತಾರವಾಯಿತು. ಹಂದರದ ತುಂಬ ಮಂದಿಯಾದರು. "ಅಡಿಗೆ ತಯಾರಿದೆ, ಎಲೆ ಬಡಿಸಿದೆ" ಎಂದು ಯಾರೋ ನುಡಿದ ಶಬ್ದ ಕೇಳಿಸಿತು. 'ಹಿರೇಮಠರೇ ಬನ್ನಿ' ಎಂದು ಬೀಗರೊಡನೆ ಒಳಗೆ ನಡೆದೆ. ಆ ಮದುವೆಮನೆಯವರು ನನ್ನ ಸ್ನೇಹಿತರೆಂದೇ ಭಾವಿಸಿರಬೇಕು; ನನ್ನೊಡನೆ ಯಾವುದೇ ಸಂಕೋಚವಿಲ್ಲದೆ ಒಳಗೆ ಬಂದರು. ಕೈಕಾಲು ತೊಳೆದುಕೊಂಡು ಪಂಕ್ತಿಯಲ್ಲಿ ಕುಳಿತೆವು. ಊಟ ಸಲೀಸಾಗಿ ನಡೆಯಿತು. ಕೇಳಿಕೇಳಿ ಉಣಬಡಿಸಿದರು. ನಾವೂ ಬೇಡಿಬೇಡಿ ಉಂಡೆವು. ನೀವು ಯಾರು ? ಎಂದು ಯಾರೂ ಕೇಳಲಿಲ್ಲ. ವರನ ಪಕ್ಷದವರೆಂದು ವಧುವಿನ ಪಕ್ಷದವರಿಗೆ ವಧುವಿನ ಪಕ್ಷದವರೆಂದು ವರನ ಪಕ್ಷದವರಿಗೆ ಅನಿಸಿತ್ತೋ ಏನೋ ? ನಾವು ವೀಳ್ಯ ಮೆಲ್ಲುತ್ತ ಹೊರಗೆ ಬಂದು ಕತ್ತಲೆಯಲ್ಲಿ ಮರೆಯಾದೆವು. "ಸುಂಕಾಪುರ ಅವರೇ, ನಾವು ಯಾರೆಂಬುದು ಗೊತ್ತಾಗಿದ್ದರೆ ಎಂತಹ ಫಜೀತಿ !" ಎಂದರು. "ಅದೆಲ್ಲ ಸರಿ: ನಾವು ವಧೂವರರ ಪಕ್ಷಗಳಿಗೆ ಸಂಬಂಧಿಸಿದವರಲ್ಲವಾದರೂ ನಮ್ಮದು ಹೊಟ್ಟೆ ಪಕ್ಷ ಅಲ್ಲವೆ?" ಎಂದೆ. ಅಂದು ನಾವು "ಅನ್ನದಾತೋ ಸುಖಿನೋ ಭವಂತು" ಎನ್ನದಿರಲಿಲ್ಲ.

× × ×

ಕೆ. ಎಲ್. ಇ. ಸೊಸಾಯಿಟಿ, ಲಿಂಗರಾಜ ಕಾಲೇಜು ಬೆಳಗಾಂವಿಯಲ್ಲಿ ಸ್ಥಾಪನೆಯಾಗದೆ ಹೋಗಿದ್ದರೆ ಅಲ್ಲಿ ಕನ್ನಡ ಬದುಕುತ್ತಿದ್ದಿಲ್ಲವೆಂದೇ ನನ್ನ ಮತ. ನಾವು ವಿದ್ಯಾರ್ಥಿಗಳಾಗಿದ್ದ ಕಾಲದಲ್ಲಿ ಎಲ್ಲೆಲ್ಲಿಯೂ ಮರಾಠಿಭಾಷೆಗೆ ಪ್ರಾಧಾನ್ಯವಿತ್ತು. ಕನ್ನಡವನ್ನು ಕೇಳುವವರೇ ಇದ್ದಿಲ್ಲ. ಅಂತಹ ಸ್ಥಿತಿಯಲ್ಲಿ ಲಿಂಗರಾಜ ಜಯಂತಿ,

ಕಾಲೇಜ ಕರ್ನಾಟಕ ಸಂಘಗಳ ಮುಖಾಂತರ ಕನ್ನಡದ ಚಳುವಳಿ ಪ್ರಾರಂಭವಾಯಿತು. ಊರ ಪ್ರಮುಖರಲ್ಲಿ ಕೆಲವರು ಕನ್ನಡಾಭಿಮಾನಿಗಳಿದ್ದರು ಗದಗ, ವಿಜಾಪುರ, ಬೈಲಹೊಂಗಲ, ಅಥಣಿ ಭಾಗಗಳಿಂದ ಬೆಳಗಾಂವಿಗೆ ವಿದ್ಯಾಭ್ಯಾಸಕ್ಕೆ ಬರುತ್ತಿದ್ದವರ ತಂಡವೂ ದೊಡ್ಡದಾಗುತ್ತ ಬಂತು. ಕನ್ನಡ ಚಟುವಟಿಕೆಗಳಿಗೆ ಕೋಡು ಮೂಡಹತ್ತಿದವು. ಶ್ರೀ ಆರ್. ಬಿ. ಹಿರೇಮಠರು ಕನ್ನಡದ ಕಟ್ಟಾ ಅಭಿಮಾನಿಗಳಾಗಿದ್ದರು. ಅವರು ನಮ್ಮನ್ನೆಲ್ಲ ಕೂಡಿಸಿಕೊಂಡು ಕನ್ನಡದಲ್ಲಿ ಭಾಷಣ, ನಾಟಕ. ಬರೆವಣಿಗೆ ವರ್ಧಿಸುವಂತೆ ನೋಡಿಕೊಂಡರು. ಆಗ ನಮ್ಮದೇ ಆದ ಕನ್ನಡಾಭಿಮಾನಕ್ಕೆ ಒಂದು ಉದಾಹರಣೆ ಸಾಕು.

ಬೆಳಗಾಂವಿಗೆ ಕನ್ನಡ ಸಿನಿಮಾ ತರಿಸುತ್ತಲೇ ಇರಲಿಲ್ಲ. ಸಿನಿಮಾ ಮಾಲಿಕರನ್ನು ಕೇಳಿದರೆ "ಅವು ನಡೆದರೆ ನಾವೇಕೆ ತರಿಸಲಾರೆವು" ಎನ್ನುತ್ತಿದ್ದರು. ಒಮ್ಮೆ ಅಪ್ಪಿ ತಪ್ಪಿ "ಸತ್ಯ ಹರಿಶ್ಚಂದ್ರ" ಚಲನಚಿತ್ರ ಬೆಳಗಾಂವಿಗೆ ಬಂತು. ಒಳ್ಳೆಯ ಫಿಲ್ಮು ಮಾತ್ರ ಹೌದು. ನೋಡುವವರ ಸಂಖ್ಯೆ ಹೆಚ್ಚಾಗಲೆಂದು ನಾನೂ ಹಿರೇಮಠರೂ ಅದು ನಡೆಯುವ ವರೆಗೆ ದಿನವೂ ತಪ್ಪದೆ ನೋಡುವುದೆಂದು ನಿರ್ಧರಿಸಿದೆವು. ಸಾಲಶೂಲಕ್ಕೆ ಹೆದರಲಿಲ್ಲ, ಅಭ್ಯಾಸ ಹಾಳಾಗುತ್ತಿದ್ದರೂ ಲೆಕ್ಕಿಸಲಿಲ್ಲ. ಆಗ ಮೇ ತಿಂಗಳ ರಜೆ. ಪ್ರೊ. ಭೂಸನೂರಮಠರು ಶತಕತ್ರಯದ ಅಭ್ಯಾಸಕ್ಕೋಸುಗ ನಮ್ಮಿಬ್ಬರನ್ನೂ ಅಲ್ಲಿಯೇ ಇಟ್ಟುಕೊಂಡಿದ್ದು ನಮ್ಮ ಸಿನಿಮಾ ಅಭಿಮಾನಕ್ಕೆ ಅನುಕೂಲವೇ ಆಗಿತ್ತು. ಟಿಳಕವಾಡಿಯಲ್ಲಿ ಪ್ರೊಫೆಸರರ ಮನೆ: ಹಾಸ್ಟೆಲ್ಲಿನಲ್ಲಿ ನಮ್ಮ ಠಾಣೆ. ಪ್ರತಿನಿತ್ಯ ಅವರಲ್ಲಿಗೆ ನಡೆಯುತ್ತಲೇ ಹೋಗಿ ಬರುತ್ತಿದ್ದೆವಾದರೂ ಹತ್ತು ಗಂಟೆಯ ಸಿನಿಮಾ ಪ್ರದರ್ಶನಕ್ಕೆ ಹಾಜರಾಗುತ್ತಿದ್ದೆವು. ಇದರಿಂದ ಊಟ ತಪ್ಪಿದಾಗ ಶೇಂಗಾ ನಮ್ಮ ಆಹಾರ. ೧೫ ದಿವಸ ತಪ್ಪದೆ ನಾವು ಆ ಫಿಲ್ಮಿಗೆ ಹಾಜರ. ಅದರ ಹಾಡು, ಮಾತು ನಮಗೆ ಕಂಠಪಾಠವಾದವು. ಆ ಹಾಡುಗಳನ್ನು ಶ್ರೀ ಹಿರೇಮಠರು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಒಂದುದಿನ ನಾವಿಬ್ಬರೂ ಸಾಕಷ್ಟು ತಿರುಗಾಡಿ ದಣಿದಿದ್ದೆವು. ಸಿನಿಮಾ ನೋಡುತ್ತ ಕುಳಿತಾಗ ತೂಕಡಿಸತೊಡಗಿದೆವು. ಒಳ್ಳೆಯ ಹಾಡು ಇದ್ದಾಗ ಒಬ್ಬರಿಗೊಬ್ಬರು ಸನ್ನೆಮಾಡಿ ಎದ್ದು, ಕೇಳಿ ಪುನಃ ಮಲಗಿಬಿಡುತ್ತಿದ್ದೆವು. ಕೊನೆಗೆ ಗಾಢನಿದ್ರೆ ಆವರಿಸಿ ಕುಳಿತ ಖುರ್ಚಿಯಲ್ಲಿಯೇ ಮಲಗಿಬಿಟ್ಟಿದ್ದೆವು. ಎಲ್ಲ ಪ್ರೇಕ್ಷಕರು ಮನೆಗೆ ಹೋಗಿ ಎಷ್ಟು ಹೊತ್ತಾಗಿತ್ತೋ ಏನೋ ? ಸಿನಿಮಾಮಂದಿರವನ್ನು ಸ್ವಚ್ಛಮಾಡುವ ಜಾಡಮಾಲಿ ಬಂದು, "ರಾಯರೇ, ಸಿನಿಮಾ ಮುಗಿದುಹೋಗಿದೆ. ದಯಮಾಡಿ ಮನೆಗೆ ಹೋಗಿರಿ. ಕಸ ಹೊಡೆಯುವದಕ್ಕೆ ಆತಂಕ" ಎಂದು ಮರಾಠಿಯಲ್ಲಿ ಹೇಳಿ ಎಬ್ಬಿಸಿ ಕಳಿಸಿದ. ಅಂದು ಮನೆಗೆ ಮರಳಿದವರು ತಿರುಗಿ ಸಿನಿಮಾಕ್ಕೆ ಹೋಗಲಿಲ್ಲ. ಇದು ನಮ್ಮದೇ ಆದ ಕನ್ನಡದ ಅಭಿಮಾನ.

× × ×

ನಾವು ಕಲಿಯುತ್ತಿದ್ದಾಗ ಮುಂಬಯಿ ವಿಶ್ವವಿದ್ಯಾಲಯದ ಪರೀಕ್ಷೆಗಳು ಈಗಿನಂತೆ ಹಿಂದುಮುಂದೆ ಸರಿದಾಡುತ್ತಿದ್ದಿಲ್ಲ. ಕಾಲೇಜುಗಳಿಗೆ ಮೂರುತಿಂಗಳ ಬೇಸಿಗೆಯ ರಜೆ. ಆ ಕಾಲದಲ್ಲಿ ಪರೀಕ್ಷೆ ಮುಗಿಸಿಕೊಂಡು ವಿದ್ಯಾರ್ಥಿಗಳು ತಮ್ಮೂರಿಗೆ ಮರಳುತ್ತಿದ್ದರು. ಆಗ ಶ್ರೀ ಆರ್. ಸಿ. ಹಿರೇಮಠರು ತಾಯಿ, ತಮ್ಮನಿಗಾಗಿ ಮನೆಮಾಡಿಕೊಂಡಿದ್ದ ಗದಗ ಶಹರಕ್ಕೆ ಬಂದರೆ, ನಾನು ಗದಗ ಸಮೀಪದ ಮುಳಗುಂದಕ್ಕೆ ಬರುತ್ತಿದ್ದೆ. ಶಿರಹಟ್ಟಿ ಜಾತ್ರೆಯು ಮುಂದೆ ನಾಲ್ಕಾರುದಿನ ಇದ್ದಾಗ ಶ್ರೀ ಹಿರೇಮಠರು ನಮ್ಮೂರಿಗೆ ಬರುತ್ತಿದ್ದರು. ಅಲ್ಲಿ ನಾಲ್ಕಾರುದಿನವಿದ್ದು ಜಾತ್ರೆ ಮುಗಿಸಿಕೊಂಡು ಮರಳುತ್ತಿದ್ದರು. ಎರಡುವರ್ಷ ಅವರು ನಮ್ಮಲ್ಲಿಗೆ ಬಂದುದು ನನಗೆ ನೆನಪಿದೆ. ಅವರು ನಮ್ಮಲ್ಲಿಗೆ ಬಂದೊಡನೆ ಮೊದಲು ನಡೆಯಬೇಕಾದ ಕಾರ್ಯ, ಹಜಾಮನನ್ನು ಬರಮಾಡಿಕೊಂಡು ತಲೆಯ ಭಾರವನ್ನು ಕಡಿಮೆಮಾಡಿಕೊಳ್ಳುವುದು. ಪರೀಕ್ಷೆಯ ಗಡಿಬಿಡಿಯಲ್ಲಿ ತಲೆಯ ಕಡೆಗೆ ನೋಡುವುದಕ್ಕೆ ನಮಗೆ ಆಗುತ್ತಿದ್ದಿಲ್ಲ. ಸಾಹೇಬರ ಹಜಾಮತಿಯೆಂದು, ಇಡೀ ಒಂದುದಿನ ಶ್ರಮವಹಿಸಿ ದುಡಿದು ನಮ್ಮನ್ನು ತಿದ್ದಿ ತೀಡುತ್ತಿದ್ದ. ಬಾವಿಯ ಜಳಕ, ಹೊಟ್ಟೆತುಂಬ ಸಿಹಿಯೂಟ, ಕಣ್ತುಂಬ ಸಕ್ಕರೆ ನಿದ್ರೆ ನಮ್ಮ ದೈನಂದಿನ ಕಾರ್ಯಕ್ರಮ. ಊರಲ್ಲಿ ನಾವಿಬ್ಬರೂ ಹೊರಟರೆ "ಯಾವಾಗ ಬಂದ್ರಿ ? ಏನು ಸಮಾಚಾರ ?" ಮುಂತಾಗಿ ಜನರು ಕೇಳಿದರೆ ಹಿರೇಮಠರು ಸುಮ್ಮನಿರುತ್ತಿದ್ದರು. ನಾನು ಮಾತ್ರ ಕೇಳಿದವರಿಗೆಲ್ಲ "ಜವಳ ಇಳಿಸುವ ಕಾರ್ಯಕ್ರಮವಿತ್ತು. ಅದಕ್ಕಾಗಿ ಬಂದಿದ್ದೇವೆ" ಎಂದು ಉತ್ತರಿಸಿ ಮುಂದೆ ಸಾಗುತ್ತಿದ್ದೆ. ಆಮೇಲೆ ನಮ್ಮದನ್ನೇ ನಾವು ನೆನೆಸಿಕೊಂಡು ನಕ್ಕು ನಲಿಯುತ್ತಿದ್ದೆವು. ಅಷ್ಟರಲ್ಲಿ ಜಾತ್ರೆಯ ಬಂಡಿ ತಯಾರಾಗುತ್ತಿತ್ತು. ಬುತ್ತಿಗಂಟು ಹೇರಿಕೊಂಡು ಬಂಡಿ ಪ್ರವಾಸ ಮಾಡುತಿದ್ದೆವು. ಜಾತ್ರೆಯಲ್ಲಿ ಎತ್ತಿನ ಪರಸೆ ದೊಡ್ಡದಾಗುತ್ತಿತ್ತು. ಒಳ್ಳೆಯ ಹೋರಿಗಳನ್ನೂ ಎತ್ತುಗಳನ್ನೂ ಕಂಡರೆ ಹಿರೇಮಠರಿಗೆ ಇಲ್ಲದ ಹಿಗ್ಗು. ಚಾವಣಿಗಳನ್ನೆಲ್ಲ ನೋಡುತ್ತ ಒಳ್ಳೆಯ ಹೋರಿಗಳನ್ನು, ಮಲಗಿದ್ದರೆ ಎಬ್ಬಿಸಿ ನೋಡುತ್ತಿದ್ದೆವು: ಧಾರಣೆ ಕೇಳುತ್ತಿದ್ದೆವು. ಚಹರೆಪಟ್ಟಿ ನೋಡಿ, ನಮ್ಮ ಯಜಮಾನರನ್ನು ಕರೆದುಕೊಂಡು ಬರುತ್ತೇವೆಂದು ಹೇಳಿ. ಮುಂದೆ ಸಾಗುತ್ತಿದ್ದೆವು. ಒಂದುಕಡೆ, ಇಡಿ ಜಾತ್ರೆಗೇ ಮಿಗಿಲಾದ ಮೂಡಲಹೋರಿಯನ್ನು ಕಂಡೆವು. ಪದ್ಧತಿಯ ಪ್ರಕಾರ ಚವಕಶಿ ಮಾಡಿ, "ಇದು ನಮ್ಮ ಹೋರಿಗೆ ಎಡ ಆಗುತ್ತದೆ" ಎಂದೆವು. ಆ ಹೋರಿಯ ಮಾಲಕ ಸಿಟ್ಟಿನಿಂದ "ನಿಮ್ಮ ಹೋರಿಯನ್ನಾದರೂ ತೋರಿಸಿರಿ: ನಾನೂ ನೋಡುತ್ತೇನೆ" ಎಂದ. ಅವನಿಗೆ ಏನು ಉತ್ತರಕೊಡಬೇಕೆಂಬುದು ತಿಳಿಯದಾಯಿತು. ಗೆಳೆಯ ಹಿರೇಮಠರು "ಅದು ಇನ್ನೂ ಬಂದಿಲ್ಲ. ನಾಳೆ ಬರಬಹುದು" ಎಂದು ಮುನ್ನಡೆದರು. ಕಾಲೇಜ ಫೀ ಕಟ್ಟಲು ಒದ್ದಾಡುತ್ತಿದ್ದ ನಮಗೆ ಇಂತಹ ದೊಡ್ಡ ವ್ಯವಹಾರದ ಹವ್ಯಾಸ ಈಗಾಗಿದ್ದರೆ ಅಂತಹ ಹತ್ತು ಹೋರಿಗಳನ್ನು ಕಟ್ಟಬಹುದು ಎನಿಸುತ್ತದೆ. ಇದು ನಮ್ಮ ಬಾಲಲೀಲೆಗಳ ಒಂದು ಮಾದರಿ.

× × ×

ಮಹಾಪುರುಷರಂತೆ ಸಣ್ಣವರೂ ಒಮ್ಮೊಮ್ಮೆ ಅಘಟಿತ ಘಟನೆಗಳನ್ನು ಮಾಡುವದುಂಟು. ನಾವಿಬ್ಬರೂ ಒಮ್ಮೆ ಧಾರವಾಡದಲ್ಲಿ ಕೂಡಿದೆವು. ಬೆಳಗಾಂವಿ ಜಿಲ್ಲೆಯ ಒಂದು ಹಳ್ಳಿಗೆ ಶ್ರೀ ಹಿರೇಮಠರು ಹೋಗಬೇಕಾಗಿತ್ತು. ನನಗೂ ಅಲ್ಲಿಗೆ ಬರಲು ಹೇಳಿದರು. ಒಪ್ಪಿಕೊಂಡೆ. ಸೂರ್ಯ ಆಗಲೇ ನೆತ್ತಿಯ ಮೇಲಿದ್ದ. ಆ ವೇಳೆಗೆ ಬೆಳಗಾಂವಿಯ ಕಡೆಗೆ ಒಂದು ಬಸ್ಸು ಹೊರಡುತ್ತಿತ್ತು. ಇಬ್ಬರಿಗೂ ಊಟ ಆಗಿರಲಿಲ್ಲ. ಆ ಬಸ್ಸು ತಪ್ಪಿದರೆ ಮುಂದಿನ ಬಸ್ಸು ಸಂಜೆಗೆ ಇತ್ತು. ಮುಂದೆ ನಾಲ್ಕಾರು ಮೈಲು ನಡೆಯಬೇಕು ಆ ಹಳ್ಳಿ ಮುಟ್ಟಬೇಕಾದರೆ. ಸಧ್ಯಕ್ಕೆ ಹೊರಡುವುದೇ ವಾಸಿಯೆಂದು ತಿಳಿದು ಮಧ್ಯಾಹ್ನದ ಬಸ್ಸನ್ನೇ ಹಿಡಿದೆವು. ಆ ಬಸ್ಸಿಗೆ ಅನೇಕ ಭವರೋಗಗಳಿದ್ದವು. ಹತ್ತು ನಿಮಿಷ ಓಡಿದರೆ ಇಪ್ಪತ್ತು ನಿಮಿಷ ಅದು ವಿಶ್ರಾಂತಿ ಪಡೆಯುತ್ತಿತ್ತು. ರಿಪೇರಿ ಮಾಡಿ ಓಡಿಸಲು ಡ್ರೈವರ ಪ್ರಯತ್ನಿಸುತ್ತಲಿದ್ದರೂ ಅದು ಪದೇಪದೇ ಸತ್ಯಾಗ್ರಹ ಹೂಡಿಬಿಡುತ್ತಿತ್ತು. ಮಾಡುವುದೇನು ? ಒತ್ತಿದರೆ ಇಳಕಲದಲ್ಲಿ ಓಡುತ್ತಿತ್ತು. ಹತ್ತಿ ಕುಳಿತಾಗ ಏರಿ ಬಂತೆಂದು ನಿಂತುಬಿಡುತ್ತಿತ್ತು. ನಮಗೆ ಮೊದಲೇ ಊಟವಿದ್ದಿಲ್ಲ; ಈಗಂತೂ ಗಾಡಿಯನ್ನು ಮುಂದೆ ನೂಕಿನೂಕಿ ಇಲ್ಲದ ಹಸಿವಾಯಿತು. ಈ ಗಾಡಿಯ ಸಹವಾಸ ಸಾಕೆಂದು ಇಳಿದು ಮುಂದಿನ ಊರಿಗೆ ನಡೆಯುತ್ತ ಹೋದೆವು. ಆಗಲೇ ನಾಲ್ಕು ಗಂಟೆಯಾಗಿತ್ತು. ಕರೆದು ಉಣಿಸುವ ಪುಣ್ಯಾತ್ಮರು ಆ ಊರಲ್ಲಿ, ಆ ಸಮಯದಲ್ಲಿ ಯಾರು ಬರಬೇಕು ? ಒಂದು ಮಠ ಕಾಣಿಸಿತು. ಹುಟ್ಟಿಸಿದ ದೇವರು ಹುಲ್ಲು ಮೇಯಿಸಲಾರ ಎಂದುಕೊಂಡು ಕರ್ತೃಗದ್ದಿಗೆಯ ದರ್ಶನಕ್ಕಾಗಿ ಒಳಗೆ ಹೋದೆವು. ಸ್ವಾಮಿಗಳು ಆಗಲೇ ಪೂಜೆ, ಪ್ರಸಾದ ಮುಗಿಸಿಕೊಂಡು ಪಲ್ಲಂಗದ ಮೇಲೆ ಒರಗಿ ಕಣ್ಣು ಮುಚ್ಚಿಕೊಂಡಿದ್ದರು. ಶ್ರೀ ಹಿರೇಮಠರು ಸ್ವಾಮಿಗಳಿಗೆ ತೊಂದರೆಯಾಗಬಾರದೆಂದು ನಿಂತಲ್ಲಿಯೇ ಗದ್ದುಗೆಗೆ ಮೌನವಾಗಿ ಮಣಿದರು. ನಮಗೆ ಹಸಿವೆ ಹೆಚ್ಚಾದ್ದರಿಂದ ಬಾಗಿ ನಮಸ್ಕರಿಸಲೂ ಸಾಧ್ಯವಿದ್ದಿಲ್ಲ. ದೇವರು ನನಗೆ ಯಾವುದೋ ಬುದ್ಧಿ ಕೊಟ್ಟ. ಗದ್ದುಗೆಯ ಎದುರಿಗೆ ತೂಗಾಡುತ್ತಿದ್ದ ಗಂಟೆಯನ್ನು ಘಣಾರನೆ ಬಡಿದು ಬಿಟ್ಟೆ. ಆ ಸಪ್ಪಳಕ್ಕೆ ಸ್ವಾಮಿಗಳು ಗಡಬಡಿಸಿ ಎದ್ದರು. ನಮ್ಮ ಗುರುತು ಅವರಿಗಿಲ್ಲ; ಅವರ ಗುರುತು ನಮಗಿರಲಿಲ್ಲ. ದೂರದಿಂದಲೇ ಬಗ್ಗಿ ನಮಸ್ಕಾರ ಮಾಡಿದೆವು. ' ಕೂತುಕೊಳ್ಳಿ ' ಎಂದು ಅಪ್ಪಣೆಯಾಯಿತು. ಶ್ರೀ ಹಿರೇಮಠರು ಕುಳಿತರು: ನಾನು ಬರುತ್ತೇನೆಂದು ಹೇಳಿ ಮಠದ ಉಗ್ರಾಣ ಮನೆಯಲ್ಲಿ ಕಾಲಿಟ್ಟೆ. ಶಿಷ್ಯೋತ್ತಮರು, ಮಾಡಿದ್ದನ್ನೆಲ್ಲ ಉಂಡು ಖಾಲಿಮಾಡಿ ಪಾತ್ರೆಗಳನ್ನು ಡಬ್ಬುಹಾಕುವದರಲ್ಲಿದ್ದರು. ಅವರನ್ನು ಮಾತಾಡಿಸುತ್ತಲೇ ವಿನಯಪೂರ್ವಕವಾಗಿ " ಇಬ್ಬರು ಪಂಡಿತರು ಇದೀಗ ಸ್ವಾಮಿಗಳ ದರ್ಶನಕ್ಕೆ ಬಂದಿದ್ದಾರೆ. ಅವರಿಗೆ ಪ್ರಸಾದ ಸಿದ್ಧಪಡಿಸಬೇಕೆಂದು ಬುದ್ಧಿ ಅವರ ಅಪ್ಪಣೆ ಆಗಿದೆ. ಶೀಘ್ರ ಏನನ್ನಾದರೂ ಮಾಡಬೇಕಲ್ಲ " ಎಂದೆ. " ಆಗಲಿ, ಸ್ವಾಮಿಗಳ ಅಪ್ಪಣೆ ಮೀರಲಾದೀತೇ ?" ಎಂದು ಒಬ್ಬ ಮುದಿಕೆ ನುಡಿಯುವುದೇ ತಡ "ಶೀಘ್ರ ತಯಾರಿಸಿ: ಪರಡಿ ಪಾಯಸ, ಅನ್ನ ಆದರೆ ಬಹಳ ಹೊತ್ತು ಹಿಡಿಯುವುದು"

ಎಂದು ಹೇಳಿ ಸ್ವಾಮಿಗಳವರ ಎದುರಿನಲ್ಲಿ ಬಂದು ಕೂತುಕೊಂಡೆ. ಸ್ವಾಮಿಗಳೂ ಹಿರೇಮಠರೂ ವಚನಸಾಹಿತ್ಯ ವಿಷಯದಲ್ಲಿ ಗಾಢ ಚರ್ಚೆ ನಡೆಸಿದ್ದರು. ಅರ್ಧತಾಸಿನ ವರೆಗೆ ಅವರು ಪ್ರಸಾದ ಮಹಿಮೆಯನ್ನೇ ಕುರಿತು ಮಾತನಾಡಿದ್ದು ನನಗೆ ಇಂದಿಗೂ ನೆನಪಿದೆ. ಕೊನೆಗೆ ನಾನೇ ಶ್ರೀ ಹಿರೇಮಠರಿಗೆ ಸನ್ನೆಮಾಡಿ, "ಅಪ್ಪಾ ಅವರ ನಿದ್ರೆಗೆ ತೊಂದರೆಬೇಡ; ಹೋಗೋಣ" ಎಂದೆ. ಸ್ವಾಮಿಗಳಿಗೆ ನನ್ನ ಮಾತು ವ್ಯವಹಾರಿಕ ವೆನಿಸಿರಬೇಕು. ನಾವಿಬ್ಬರೂ ನಮಸ್ಕರಿಸಿ ಹೊರಗೆ ಬಂದೆವು. ಅಷ್ಟರಲ್ಲಿಯೇ ಸ್ವಾಮಿ ಗಳವರ ಗೊರಕೆಯು ನಾದ ಪ್ರಣವಪಂಚಾಕ್ಷರಿಯಂತೆ ಕೇಳತೊಡಗಿತು. ನನಗೆ ಧೈರ್ಯ ಬಂತು. ನಾವಿಬ್ಬರೂ ಪ್ರಸಾದದ ಮಳಿಗೆಯಲ್ಲಿ ಕುಳಿತು ಯಥೇಷ್ಟವಾಗಿ ಪ್ರಸಾದ ಮುಗಿಸಿಕೊಂಡು ಆ ಊರು ಬಿಟ್ಟು ನೇರವಾಗಿ ನಾವು ಹೋಗಬೇಕೆಂದಿದ್ದ ಊರದಾರಿ ಹಿಡಿದೆವು. ಇದು ಸ್ವಾಮಿಗಳಿಗೆ ಒಂದು ಪವಾಡ ಎನಿಸಿತೋ ಏನೋ ? ನಮ್ಮ ಅನನ್ಯಭಕ್ತಿಗೆ ಪರಮಾತ್ಮನು ಒಲಿದದ್ದು ಮಾತ್ರ ಸುಳ್ಳಲ್ಲ.

× × ×

ನಾವಿಬ್ಬರೂ ಒಮ್ಮೆ ಗದಗಿನಲ್ಲಿ ಕೂಡಿದೆವು. ಬಾಗಿಲುಕೋಟೆಗೆ ಹೋಗುವುದೆಂದು ನಿರ್ಧರಿಸಿದೆವು. ಯಾವ ಕೆಲಸಕ್ಕಾಗಿ ನಾವು ಅಲ್ಲಿಗೆ ಹೊರಟಿದ್ದೆವೋ ನನಗೀಗ ನೆನ ಪಿಲ್ಲ. ಹೋದದ್ದು ಮಾತ್ರ ಹದಿನಾರು ಆಣೆ ಗೊತ್ತು. ಅಂದು ರಾತ್ರಿ, ಊಟ ಮುಗಿಸಿಕೊಂಡು, ಮೊದಲನೆಯ ಸಿನಿಮಾಕ್ಕೆ ಹೋದೆವು. ಅವರಿಗೆ ಸಿನಿಮಾ ನೋಡುವ ಮನಸ್ಸಿದ್ದಿಲ್ಲ. ನನ್ನ ಒತ್ತಾಯಕ್ಕೆ ಒಪ್ಪಿಕೊಂಡು ಬಂದರು. ಆ ಸಿನಿಮಾದ ಹೆಸರು ಹಂಟರವಾಲಿ. ಯಾವ ಹೆಸರಿದ್ದರೇನು ? ಅದು ಹೇಗಿದ್ದರೇನು ? ನನಗೆ ಬೇಕಾಗಿದ್ದುದು ರಾತ್ರಿ ಹನ್ನೆರಡರ ವರೆಗೆ ಎಚ್ಚರವಿದ್ದು ಕಾಲಹರಣ ಮಾಡುವುದು. ಸಿನಿಮಾ ಮುಗಿಸಿ ಹೊರಬಂದೆವು ಆಗಿನ ಕಾಲದಲ್ಲಿ ಗದಗಿನಿಂದ ಬಾಗಿಲುಕೋಟೆಗೆ ರಾತ್ರಿ ೪ ಗಂಟೆಗೆ ಒಂದು ಟ್ರೇನು ಹೊರಡುತ್ತಿತ್ತು. ಪ್ರವಾಸಿಕರ ಅನುಕೂಲತೆಗೆಂದು ರಾತ್ರಿ ಹನ್ನೆರಡಕ್ಕೇ ಹಳಿಯ ಮೇಲೆ ನಿಲ್ಲಿಸಿ ಅದರ ಬಾಗಿಲು ತೆರೆದುಬಿಡುತ್ತಿದ್ದರು. ಆ ಗಾಡಿಗೆ ಹೋಗಬೇಕಾದವರು ಬಿಡುವ ಮೊದಲೇ ಹೋಗಿ ಆ ಗಾಡಿಯ ಡಬ್ಬಿಯಲ್ಲಿ ಮಲಗಬಹುದಾಗಿತ್ತು. ಅದನ್ನು ನೆನೆಸಿಕೊಂಡು ಶ್ರೀ ಹಿರೇಮಠರಿಗೆ ಆ ಗಾಡಿಯ ಅನುಕೂಲತೆಗಳನ್ನೆಲ್ಲ ವರ್ಣಿಸಿ ಹೇಳಿದೆ. ಅದಕ್ಕೆ ಹೋದರೆ ಬೆಳಗಿನ ೭ ಗಂಟೆಗೆ ಬಾಗಿಲುಕೋಟೆಯಲ್ಲಿ ಇರಬಹುದು ಎಂದೆ. 'ಆಗಲಿ' ಎಂದು ಅವರು ಒಪ್ಪಿಕೊಂಡರು.

ಗದಗ ಸ್ಟೇಶನ್‌ದಲ್ಲಿ, ಟಿಕೀಟು ಪಡೆದುಕೊಂಡು ಆ ಗಾಡಿ ನಿಂತ ಸ್ಥಳಕ್ಕೆ ಧಾವಿಸಿದೆವು. ಹಮಾಲನ ಸಹಾಯವಿಲ್ಲದೆ ಆ ಗಾಡಿಯ ಡಬ್ಬಿಗಳನ್ನು ಕಾಣುವದೇ ಕಠಿಣವಾಗಿತ್ತು. ಯಾವದೋ ಒಂದು ಬೆಳಕು ಇಲ್ಲದ ಸ್ಥಳದ ಮೂಲೆಯಲ್ಲಿ ಅದು ನಿಂತಿತ್ತು. ಯಾರೋ ಒಬ್ಬಿಬ್ಬರು ಗಾಡಿಯಲ್ಲಿ ಮಲಗಿಕೊಂಡು ಕೆಮ್ಮುತ್ತಿದ್ದುದು ಕೇಳಿಬಂತು. ಅವರು ಮಾತ್ರ ಕತ್ತಲಲ್ಲಿ ಕಾಣುತ್ತಿದ್ದಿಲ್ಲ. ಕಾಲಾಡಿಸುತ್ತ, ಕೈಯಾಡಿಸುತ್ತ ಮುಂದುವರಿದು

ಒಂದು ಬೋಗಿಯಲ್ಲಿ ಸೇರಿಕೊಂಡೆವು. ಅಂದ್ಯಾಕೋ ಚಳಿ ಬಹಳವಿತ್ತು. ಕೈಚೀಲದಲ್ಲಿದ್ದ ಚದ್ದರುಗಳನ್ನು ಹೊರತೆಗೆದು ಚೀಲವನ್ನು ತಲೆಗಿಂಬು ಮಾಡಿಕೊಂಡು, ಮೈತುಂಬ ಚದ್ದರ ಹೊದ್ದುಕೊಂಡು ಮಲಗಿಬಿಟ್ಟೆವು. ಆಯಾಸವಾಗಿತ್ತೋ ಏನೋ? ನಿದ್ರೆಯಲ್ಲಿ ಮುಳಗಿಹೋದೆವು. ಗಾಡಿ ಹೊರಟದ್ದೂ ಗೊತ್ತಾಗಲಿಲ್ಲ. ಬಾದಾಮಿ ಸ್ಟೇಶನ್ನಲ್ಲಿ ಹೆಣ್ಣುಮಕ್ಕಳ ತಂಡವೊಂದು ಕಲಕಲ ಗಲಾಟೆ ಮಾಡುತ್ತ ಒಳಗೆ ಬಂತು. ಆಗ ಬೆಳಗಾಗಿರಬೇಕು ಅವರಿಗೆ. ನಾವಿನ್ನೂ ನಿದ್ರೆಯಲ್ಲಿಯೇ ಇದ್ದೆವು. "ಇವರು ಸ್ತ್ರೀಯರ ಡಬ್ಬಿಯನ್ನು ಬಿಟ್ಟು ನಮಲ್ಲೇಕೆ ಬಂದರು ? ಈ ಜನಕ್ಕೆ ಎಂದು ತಿಳಿಯುವುದೋ" ಎಂದುಕೊಂಡು ಹೊರಳಿ ಮಲಗಿದೆ. ಆ ಹೆಣ್ಣುಮಕ್ಕಳು ಜಾಗೆ ಹಿಡಿಯಲೆಂದು ನಮ್ಮನ್ನು ಎಬ್ಬಿಸತೊಡಗಿದರು. "ಇವರ್ಯಾರೋ ಗಂಡಸರು, ಹೆಂಗಸರ ಡಬ್ಬಿಯಲ್ಲಿ ಮಲಗಿದ್ದಾರೆ. ಇವರೆಂಥ ಗಂಡಸೂರ ಯವ್ವಾ" ಎಂದಳು. ಕೆಲಸ ಕೆಟ್ಟಿತೆಂದು ಮುಸುಕು ಹಾಕಿಕೊಂಡೇ ಮೇಲೆದ್ದೆ. ನನ್ನ ಮಿತ್ರರನ್ನೂ ಎಬ್ಬಿಸಿಕೊಂಡು ಮುಂದಿನ ಡಬ್ಬಿಗೆ ಹೋದೆ. ಅಂದಿನ ನಮ್ಮ ಸ್ಥಿತಿ ನಮಗೇ ಗೊತ್ತು. ಇದರಲ್ಲಿ ನಮ್ಮ ತಪ್ಪೇನು ? ಕತ್ತಲು ಮಾಡಿದ ಮೋಸವೆಂದು ಬೇರೆ ಹೇಳಬೇಕೆ ?

ಇಂತಹ ಸರಸ ಘಟನೆಗಳು ನಮ್ಮ ಜೀವನದುದ್ದಕ್ಕೂ ಸಾಕಷ್ಟು ನಡೆದುಹೋದವು. ಅವುಗಳಲ್ಲಿ ಕೆಲವು ಮರೆತರೂ ಮರೆಯುವಂತಿಲ್ಲ. ಉದ್ದಕ್ಕೂ ಶ್ರೀ ಆರ್. ಸಿ. ಹಿರೇಮಠರ ಸಹವಾಸದಲ್ಲಿ ಇದ್ದುದೇ ನನ್ನ ಸೌಭಾಗ್ಯ. ಅವರು ವಿದ್ಯಾರ್ಥಿಯಾಗಿ, ಪ್ರಾಧ್ಯಾಪಕರಾಗಿ, ವಿಭಾಗ ಮುಖ್ಯಸ್ಥರಾಗಿ, ಕುಲಪತಿಗಳಾಗಿ ಬೆಳೆದಂತೆ ಅವರ ಮತ್ತು ನನ್ನ ಸ್ನೇಹ ಗಾಢವಾಗುತ್ತ ನಡೆಯಿತು. ಈ ಒಂದೊಂದು ಘಟ್ಟದಲ್ಲಿಯೂ ನಮ್ಮಿಬ್ಬರಿಂದ ಹಲವಾರು ಮಹತ್ವಪೂರ್ಣ ಘಟನೆಗಳು, ಜೊತೆಗೆ ಇಂಥ ನೂರಾರು ರಸಪ್ರಸಂಗಗಳು ಜರುಗಿವೆ. ಅವುಗಳನ್ನು ನಾನು ಮರೆಯಲಾರೆ; ಅವರೂ ಮರೆಯಲಾರರು.

■ ■

# ಗುರು : ಆರ್. ಸಿ. ಹಿರೇಮಠರು

□ □ □ □ □ □ □ □ □ □ □ □ □ □ □ □ □ □

ಬಿ. ಬಿ. ಹೆಂಡಿ

□ □ □ □ □ □ □ □ □ □ □ □ □ □ □ □ □ □

ಶಾಲೆ, ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಲ್ಲಿಯ ಶಿಕ್ಷಕರನ್ನೂ ಪ್ರಾಧ್ಯಾಪಕರನ್ನೂ 'ಗುರು' ಗಳೆಂದು ಗೌರವದಿಂದ ಕರೆಯುವುದು ಇಂದು ವಾಡಿಕೆಯಾಗಿದೆ. ಬೋಧ್ಯ ಬೋಧಕರ ನಡುವಿನ ಸಂಬಂಧ ತೀರಾ ವ್ಯಾವಹಾರಿಕ, ಹಲವಾರು ಸಲ ಔಪಚಾರಿಕವಾಗುತ್ತ ನಡೆದಿರುವ ಇಂದಿನ ಸಂದರ್ಭದಲ್ಲಿ ಶಿಕ್ಷಕರೆಲ್ಲರನ್ನೂ ಗುರುಸ್ಥಾನಕ್ಕೇರಿಸುವುದು ಎಷ್ಟರ ಮಟ್ಟಿಗೆ ಉಚಿತವೆಂದು ಆತಂಕ ಪಡುವುದೂ ಉಂಟು. ಪ್ರಾಚೀನ ಕಾಲದಲ್ಲಿ ಗುರುವಿಗಿದ್ದ ಗೌರವ ಪೂಜ್ಯತೆಗಳು ಈಗೆಲ್ಲಿವೆ ? ಇನ್ನಿತರ ವೃತ್ತಿಗಳಂತೆ ಇಂದು ಶಿಕ್ಷಕ ಕೆಲಸವೂ ಒಂದು ವೃತ್ತಿಯಾಗಿ ಮಾರ್ಪಡುತ್ತಲಿದೆ. ಇಂದು ಶಿಕ್ಷಕರ ಲಕ್ಷ್ಯವನ್ನು ಹೆಚ್ಚಾಗಿ ಸೆಳೆಯುತ್ತಲಿರುವ ಅಂಶಗಳೆಂದರೆ ಸಂಬಳ ಬಡತಿಗಳು. ನೂರಾರು ಸಂಖ್ಯೆಯ ವರ್ಗದ ವಿದ್ಯಾರ್ಥಿಗಳ ಜೊತೆಗೆ ಶಿಕ್ಷಕರ ವೈಯಕ್ತಿಕ ಸಂಬಂಧವಾದರೂ ಎಷ್ಟು ನಿಕಟವಾದುದು ? ಎಂದು ಮುಂತಾಗಿ ಆಗಾಗ ಕೇಳಿಬರುತ್ತಿರುವ ಟೀಕೆ, ಆಕ್ಷೇಪಣೆಗಳಲ್ಲಿ ಪೂರ್ಣವಲ್ಲದಿದ್ದರೂ ಅರ್ಧಸತ್ಯವಾದರೂ ಇಲ್ಲದಿಲ್ಲ. ಆದರೂ ತಮ್ಮ ಅವ್ಯಾಜ್ಯ ಕರ್ತವ್ಯನಿಷ್ಠೆ ಶುದ್ಧಶೀಲದಿಂದ ವಿದ್ಯಾರ್ಥಿಗಳ ನೈತಿಕ ಹಾಗೂ ಬೌದ್ಧಿಕಜೀವನವನ್ನು ರಚನಾತ್ಮಕವಾಗಿ ರೂಪಿಸುವ ಶಿಕ್ಷಕರೂ ಪ್ರಾಧ್ಯಾಪಕರೂ ಹಲವರಾದರೂ ನಮ್ಮ ಮಧ್ಯದಲ್ಲಿ ಇಂದಿಗೂ ಇದ್ದಾರೆಂಬುವನ್ನು ಮರೆಯುವಂತಿಲ್ಲ. ಪ್ರಾಚೀನ ಗುರುಕುಲದ ಶುಚಿತ್ವವನ್ನೂ ಆಧುನಿಕಯುಗದ ಪ್ರಗತಿಶೀಲತೆಯನ್ನೂ ಮೈಗೂಡಿಸಿಕೊಂಡ ಅಂತಹ ಪ್ರಾಧ್ಯಾಪಕರಲ್ಲಿ ಡಾ. ಆರ್. ಸಿ. ಹಿರೇಮಠ ಅವರು ಒಬ್ಬರು. ನನ್ನ ಅನುಭವದಲ್ಲಿ, ನನ್ನಂತೆ ಅವರ ಶಿಷ್ಯತ್ವದ ಭಾಗ್ಯಪಡೆದ ಸಹಸ್ರಾರು ವಿದ್ಯಾರ್ಥಿಗಳ ಅನುಭವದಲ್ಲಿ, ಅವರು ನಮ್ಮ ನಾಡಿನ ಹಿರಿಯ ವಿದ್ವಾಂಸರಾದ ಪ್ರಾಧ್ಯಾಪಕರೂ ಅಹುದು, ಪ್ರಭಾವಶಾಲಿಗಳಾದ 'ಗುರು'ಗಳೂ ಅಹುದು.

ಡಾ. ಹಿರೇಮಠರೊಡನೆ ನನ್ನ ಸಂಪರ್ಕ ಮೊದಲಾದುದು ೧೯೪೫ ಜೂನ ತಿಂಗಳಿನಿಂದ. ಆಗ, ಅದೇ ತಮ್ಮ ಎಂ. ಎ. ಪರೀಕ್ಷೆ ಮುಗಿಸಿಕೊಂಡು ಅವರು ಬಾಗಿಲುಕೋಟೆಯ ಬಸವೇಶ್ವರ ಕಾಲೇಜಿನಲ್ಲಿ ಕನ್ನಡ ಅಧ್ಯಾಪಕರಾಗಿ ಬಂದಿದ್ದರು. ನಾನು ಎಫ್. ವಾಯ್ (ಈಗಿನ ಮೊದಲನೆಯ ಪಿ. ಯು. ಸಿ.) ವಿದ್ಯಾರ್ಥಿಯಾಗಿ ಹೊಸದಾಗಿ ಕಾಲೇಜು ಕಟ್ಟೆಯನ್ನೇರಿದ್ದೆ. ಅಲ್ಲಿಂದ ಹಿಡಿದು ಇಂದಿನ ವರೆಗೂ ನಾನು ಅವರ ವಿದ್ಯಾರ್ಥಿ. ಅವರನ್ನು ಸಮೀಪದಿಂದ ಕಾಣುವ ಭಾಗ್ಯ ಪಡೆದವರಲ್ಲಿ ನಾನೂ ಒಬ್ಬ. ಅವರ ವಿಷಯದಲ್ಲಿ ನಾನು ಹೊತ್ತಿರುವ ಸವಿನೆನಹುಗಳನೇಕ. ಆದರೆ ಅವುಗಳನ್ನೆಲ್ಲ ಕಥಿಸಲು ನನಗೊಂದು ವಿಧದ ಅಳುಕು : ಗುರುಗಳ ಬಗೆಗೆ ನನ್ನ ಅನಿಸಿಕೆಗಳನ್ನು ಹೇಳುವ ಭರದಲ್ಲಿ ನನ್ನ ವೈಯಕ್ತಿಕಸಂಗತಿಗಳೂ ಸೇರಿ ಎಲ್ಲಿ ಹಾಲಿನಲ್ಲಿ ನೀರಿನ ಕಲಬೆರಕೆಯಾಗುತ್ತದೋ ಎಂಬ ಭಯ. ಮಾಲೆ ಕಟ್ಟುವ ದಾರ ಹೂವನ್ನೇ ಮರೆಮಾಡದಂತೆ ಎಚ್ಚರ ವಹಿಸಬೇಕಾಗಿದೆ.

ನನ್ನ ನೆನಹಿನಲ್ಲಿ ಇಂದಿಗೂ ಹಚ್ಚಹಸುರಾಗಿರುವ, ಅರ್ಥಪೂರ್ಣವೆಂದು ಈಗಲೂ ನನಗೆನ್ನಿಸುವ ಒಂದು ಸಂದರ್ಭ ೧೯೪೫ ರಲ್ಲಿ, ಬಹುಶಃ ಜುಲೈ ತಿಂಗಳಲ್ಲಿ ನಡೆದುದು. ಬಸವೇಶ್ವರ ಕಾಲೇಜಿನ ಸಭಾಗೃಹದಲ್ಲಿ ಪ್ರೊ. ಹಿರೇಮಠ ಅವರನ್ನು ಎಂ. ಎ. ಪ್ರಥಮ ವರ್ಗದಲ್ಲಿ ಉತ್ತೀರ್ಣರಾದುದಕ್ಕಾಗಿ ಸತ್ಕರಿಸಲು ಸಭೆ ನೆರೆದಿದ್ದಿತು. ಯಾರೋ ಒಬ್ಬರು ಅಭಿಮಾನಿಗಳು ಅಭಿನಂದನಪರ ಭಾಷಣ ಮಾಡುತ್ತಿದ್ದರು. ಭಾಷಣ ಅರ್ಧ ಸಾಗಿರಬೇಕು. ಅಷ್ಟರಲ್ಲಿ ಒಬ್ಬ ವಯೋವೃದ್ಧರು—ಅವರನ್ನು ಗುಡೂರು ಶರಣ ಎಂದು ಕರೆಯುತ್ತಿದ್ದರು—ಒಂದು ಕೈಚೀಲದ ತುಂಬ ಬತ್ತಾಸು ತಂದು ಸಭಾಧ್ಯಕ್ಷರ ಎದುರಿನ ಟೇಬಲ್ ಮೇಲೆ ಸುರುವಿ ಶ್ರೋತೃಗಳ ಮಧ್ಯ ಹೋಗಿ ಕುಳಿತರು. ಇದು ನಡೆದುದು ಆಕಸ್ಮಿಕವಾಗಿ. ಗುಡೂರು ಶರಣರಿಗೆ ಆಮಂತ್ರಣವೇನೂ ಹೋಗಿರಲಿಲ್ಲ. ಆ ಶರಣರ ಸ್ವಭಾವದ ಒಂದು ವೈಚಿತ್ರ್ಯವೆಂದರೆ, ಅವರು ತಮ್ಮ ಚಿತ್ತದಲ್ಲಿ ಪ್ರೇರಣೆಯಾದತ್ತ ತಾವೇ ಹೋಗುತ್ತಿದ್ದರು. ಕರೆಯುವ, ಕರೆಯಿಸಿಕೊಳ್ಳುವ ಬಾಹ್ಯ ಉಪಚಾರ ಅವರನ್ನು ಸೋಂಕುತ್ತಿರಲಿಲ್ಲ. ಸಭಾಧ್ಯಕ್ಷತೆ ವಹಿಸಿದ್ದ ಡಾ. ನಂದೀಮಠ ಅವರು, 'ಸಭೆಯ ನಡುವೆ ಹೀಗೆ ಶರಣರು ಆಕಸ್ಮಿಕ ಪ್ರವೇಶಿಸಿ ಸಕ್ಕರೆಯನ್ನು ಎಲ್ಲರಿಗೂ ಹಂಚಲೆಂದು ತಂದು ಇತ್ತುದು ಇಂದಿನ ಒಂದು ವಿಶೇಷ. ಮುಂದೆ ಶ್ರೀ ಹಿರೇಮಠ ಅವರು ಒಳ್ಳೆಯ ಶಿಕ್ಷಕರಾಗಿ, ವಿದ್ವಾಂಸರಾಗಿ, ಸಾಹಿತ್ಯಾರಾಧಕರಾಗಿ ಮಾಡುವ ಕಾರ್ಯ ಸಕ್ಕರೆಯಂತೆ ಎಲ್ಲರಿಗೂ ಪ್ರಿಯವಾದುದಾಗುತ್ತದೆ. ಅವರ ಕೀರ್ತಿ ನಾಡಿನ ನಾಲಗೆಯ ಮೇಲೆ ಸಿಹಿಯನ್ನುಂಟುಮಾಡುತ್ತದೆ ಎಂಬುದರ ಸೂಚನೆ' ಎಂದು ಹೇಳಿದರು. ಡಾ. ನಂದೀಮಠರು ಯಾರ ವಿಷಯದಲ್ಲೂ ಅಗ್ಗದ ಪ್ರಶಂಸೆ ಮಾಡುವಂಥವರಾಗಿರಲಿಲ್ಲ. ಅವರು ಮೌಲ್ಯಮಾಪನ ಮಾಡುತ್ತಿದ್ದ ರೀತಿ ಬಹು ಜೋಕೆ ತೂಕದ್ದು, ಬಿಗುವಿನದು. ಆದರೆ ಅಂದು ಹಸನ್ಮುಖದಿಂದ ಈ ಆಶೀರ್ವಚನ ನುಡಿದರು. ಬಹುಶಃ

ಅದು ಅವರು ಪ್ರೊ. ಹಿರೇಮಠರಲ್ಲಿ ಇಟ್ಟುಕೊಂಡಿದ್ದ ಅಪೇಕ್ಷೆಯೆಂದು ತೋರುತ್ತದೆ. ಇಂದು ಅದು ನಿಜವಾಗಿ ಪರಿಣಮಿಸಿದೆ. ಸನ್ಮಾನಕ್ಕೆ ಉತ್ತರವಾಗಿ ಅಂದು ಪ್ರೊ. ಹಿರೇಮಠರು 'ಎನ್ನವರೊಲಿದು ಹೊನ್ನಶೂಲದಲಿಕ್ಕಿದರೆನ್ನ ಹೊಗಳಿ ಹೊಗಳಿ......ಬೆಳೆಯುದ ಮುನ್ನವೆ ಕೊಯ್ವರೆ?' ಎಂದು ಬಸವಣ್ಣನವರ ಅಮೃತೋಕ್ತಿಗಳನ್ನು ಉದ್ಧರಿಸಿ ವಿನಯದ ನುಡಿಗಳನ್ನಾಡಿದ್ದರು. ಆದರವು ಕೇವಲ ಸಭಾಭೂಷಣ ನುಡಿಗಳಾಗಿರದೆ ಪ್ರಾಮಾಣಿಕ ಹೃದಯದಾಳದಿಂದ ಬಂದುವೆಂದು ಅವರನ್ನು ಸಮೀಪದಿಂದ ಗುರುತಿಸಿಕೊಂಡ ಯಾರಿಗಾದರೂ ಈಗ ಎನ್ನಿಸದಿರದು. ಅಂದಿನಿಂದ ಇಂದಿನ ವರೆಗೆ ಅವರಲ್ಲಿ ಕಾಣುವುದು ಅದೇ ವಿನಯಶ್ರೀ. ೧೯೪೫ ರಿಂದ ಮೊದಲ್ಗೊಂಡು ಇದುವರೆಗೆ ಪ್ರಾಧ್ಯಾಪಕರಾಗಿ, ವಿದ್ವಾಂಸರಾಗಿ, ಕುಲಪತಿಗಳಾಗಿ ಉನ್ನತಿಯಿಂದ ಉನ್ನತಿಗೇರುತ್ತಬಂದಿರುವರಾದರೂ ಅವರ ವ್ಯಕ್ತಿತ್ವದ ಮೂಲಶೀಲ ಮಾತ್ರ ವಿಪರ್ಯಾಸಗೊಂಡಿಲ್ಲ. ಇನ್ನೂ ಹೆಚ್ಚಿನ ಕಾಂತಿ ಪಡೆಯುತ್ತ ನಡೆದಿದೆ. ತಮ್ಮ ವಿದ್ಯಾರ್ಥಿಗಳಿಗೆ, ಸಹೋದ್ಯೋಗಿಗಳಿಗೆ, ಇತರ ಇಷ್ಟಮಿತ್ರರಿಗೆ ಡಾ. ಹಿರೇಮಠರು ಹಿಂದೆ ಒಬ್ಬ ಅಧ್ಯಾಪಕರಾಗಿದ್ದಾಗಿನಷ್ಟೇ ಈಗಲೂ ಸಮೀಪದವರಾಗಿದ್ದಾರೆ; ಆತ್ಮೀಯರಾಗಿದ್ದಾರೆ.

ಗುರುಶಿಷ್ಯರಾಗಿ ನಮ್ಮ ಒಡನಾಟ ಮೂವತ್ತೆರಡುವರುಷ ಅವ್ಯಾಹತವಾಗಿ ನಡೆದು ಬಂದಿದೆ. ಇಷ್ಟು ಸುದೀರ್ಘ ಅವಧಿಯಲ್ಲಿ ನಮ್ಮಲ್ಲಿಯ ಸಂಬಂಧ, ಅಲ್ಪಕಾಲದವರೆಗಾದರೂ ಕಡಿದುಹೋಗುವಂತಹ ಸಂದರ್ಭ ಒಮ್ಮೆಯೂ ಬಂದಿಲ್ಲ. ಇದು ಹೇಗೆ ಸಾಧ್ಯವಾಯಿತು ಎಂದು ಆಲೋಚಿಸುತ್ತಿರುವ ನನಗೀಗ ಹೊಳೆಯುತ್ತಿರುವ ಒಂದು ಕಾರಣವೆಂದರೆ ಶಿಷ್ಯನಾದ ನನ್ನಲ್ಲಾಗಲಿ ಗುರುಗಳಾದ ಅವರಲ್ಲಾಗಲಿ ಸಂಕುಚಿತತೆ ತಲೆಯಿಕ್ಕಲಿಲ್ಲ. ಎಂದರೆ ಏಕಲವ್ಯನಂಥವರ ಬೆರಳನ್ನು ಕತ್ತರಿಸಿ ತಾನೊಬ್ಬನೆ ಲೋಕೈಕವೀರನೆನ್ನಿಸಿಕೊಳ್ಳಬೇಕೆಂಬ ಅರ್ಜುನಮಾದರಿಯ ರಾಜಸವು ವಿದ್ಯಾರ್ಥಿಯಾದ ನನ್ನಲ್ಲಿ ಹುಟ್ಟಲಿಲ್ಲ. ಇದು ನನ್ನ ಸದ್ಗುಣವೆಂದು ನಾನು ಕೊಚ್ಚಿಕೊಳ್ಳಲಾರೆ. ಗುರು ಇತ್ತ ಪ್ರೇರಣೆ ಅಧ್ಯಯನದಲ್ಲಿ ವೈಯಕ್ತಿಕ ಖ್ಯಾತಿಲಾಭಕ್ಕಿಂತ ಪರಿಶುದ್ಧ ನಿಷ್ಠೆ, ಪ್ರಾಮಾಣಿಕ ದುಡಿಮೆ ಶ್ರೇಯಸ್ಕರವಾದುದೆಂಬುದನ್ನು ತಮ್ಮ ಶಿಷ್ಯರಲ್ಲಿ ಅಚ್ಚೊತ್ತಿದ ವ್ಯಕ್ತಿತ್ವ ಗುರು ಡಾ. ಹಿರೇಮಠರದು. ಅವರ ಸ್ವಂತ ಜೀವನವೇ ವಿದ್ಯಾರ್ಥಿಗಳಿಗೊಂದು ಅಂತಹ ನಿದರ್ಶನ. ಬಹುದೊಡ್ಡ ವಿದ್ವತ್ತು ತಮ್ಮದಾಗಿದ್ದರೂ ಅದರಿಂದೆಂದೂ ಅವರು ಬೀಗಿಕೊಂಡವರಲ್ಲ. ಅವರ ನಿರಾಡಂಬರ ಸರಳತೆ, ಸೌಜನ್ಯ ಸಂಪರ್ಕಕ್ಕೆ ಬಂದ ಸಣ್ಣದೊಡ್ಡವರಾರನ್ನೂ ಮಂತ್ರಮುಗ್ಧಗೊಳಿಸುವಂತಹವು. ಸಹಜ ಸಂಭಾಷಣೆಯಲ್ಲೂ ಕೂಡ ಅವರು ತಮ್ಮ ದೊಡ್ಡಸ್ತಿಕೆಯನ್ನು ಎಂದೂ ಎತ್ತಿ ಆಡುವವರಲ್ಲ; ಬೇರೆ ಯಾರಾದರೂ ಹಾಗೆ ಪ್ರಶಂಸೆ ಮಾಡಿದಾಗ ಮನ ಸೋಲುವವರಲ್ಲ. ಹಮ್ಮನ್ನು ಆ ಮಟ್ಟಿಗೆ ತರ್ಗೊತ್ತಿದ ಸಾಧನೆ ಅವರದು.

ಇನ್ನೊಬ್ಬರ ವಿದ್ವತ್ತನ್ನಾಗಲಿ ಸದ್ಗುಣಗಳನ್ನಾಗಲಿ ಗುರುತಿಸುವಲ್ಲಿ ಅವರದು ಉದಾರ ದೃಷ್ಟಿ: ಹಲವಾರು ಸಲ ಅತ್ಯುದಾರದೃಷ್ಟಿಯೂ ಅಹುದು. ವಿದ್ಯಾರ್ಥಿಗಳ ಯೋಗ್ಯತೆಯನ್ನು ಗುರುತಿಸುವಾಗಲೂ ಅವರದು ಇದೇ ಉದಾರದೃಷ್ಟಿ. ತಮ್ಮ ವಿದ್ಯಾರ್ಥಿಗಳು ಉಚ್ಚಮಟ್ಟದ ವಿದ್ವಾಂಸರಾಗಿ ಬೆಳೆದುಬರಬೇಕೆಂದು ಅವರು ಅಪೇಕ್ಷಿಸುವವರಾದರೂ ಅವರ ಸಾಧನೆ ಶಕ್ತಿಗಳನ್ನು ಪರೀಕ್ಷಿಸುವಾಗ ಅವಾಸ್ತವ ಕಠೋರ ಮಾನದಂಡ ಬಳಸುವವರಲ್ಲ. ಬರೆಹದಲ್ಲಿಯ ಕೊಂಬು, ಒತ್ತು, ದೀರ್ಘದಂತಹ ಚಿಕ್ಕಪುಟ್ಟ ಸಂಗತಿಗಳನ್ನು ದೊಡ್ಡದಾಗಿ ಎಣಿಸಿ ವಿದ್ಯಾರ್ಥಿಗಳ ನೈಜಶಕ್ತಿಯನ್ನೇ ಕಡೆಗಣಿಸಿ ಬಿಡುವ ದೋಷೈಕದೃಷ್ಟಿ ಅವರದಲ್ಲ. ಹೊಸತೋ ಸ್ವತಂತ್ರವೋ ಎನ್ನಬಹುದಾದ ಒಂದು ವಿಚಾರ ಅಥವಾ ಸ್ಪಷ್ಟವಾದ ಒಂದು ನಿರೂಪಣೆ ಅಥವಾ ಚಿತ್ತಸೆಳೆಯುವ ಒಂದೆರಡು ಸೌಂದರ್ಯಬಿಂದು—ಯಾವುದೇ ಕಣ್ಣಿಗೆ ಬಿದ್ದರೂ ಸಾಕು ಅವರು ವಿದ್ಯಾರ್ಥಿಯ ಬೆನ್ನುತಟ್ಟಿ ಪ್ರೋತ್ಸಾಹಿಸುತ್ತಿದ್ದರು. ೧೯೪೫ ರಲ್ಲಿ ಬಸವೇಶ್ವರ ಕಾಲೇಜಿನಲ್ಲಿ ಎಫ್. ವಾಯ್ ಆರ್ಟ್ಸ್‌ಗೆ ಸೇರಿದ ನಾವು ಕೇವಲ ಇಪ್ಪತ್ತೈದುಜನ; ಬಿ. ಎ. ಮುಗಿಯುವ ವರೆಗೂ ಸುಮಾರು ಅಷ್ಟೇ ಸಂಖ್ಯೆಯಲ್ಲಿದ್ದೆವು. ಬಹುಮಟ್ಟಿಗೆ ಎಲ್ಲರೂ ಪ್ರೊ. ಹಿರೇಮಠರ ಜೊತೆಗೆ ಆತ್ಮೀಯವಾಗಿಯೇ ಬೆರೆತುಕೊಳ್ಳುತ್ತಿದ್ದೆವು. ಪರೀಕ್ಷೆಗಳಲ್ಲಿ ನಾವು ಉತ್ತೀರ್ಣವಾಗುತ್ತಿದ್ದ ವರ್ಗ ಬೇರೆಬೇರೆಯಾಗಿರುತ್ತಿತ್ತಾದರೂ ಯಾರೂ ತಮ್ಮ ತಮ್ಮ ಬಗೆಗೆ ಹೀನಗಂಡ ತಳೆದವರಾಗಿರಲಿಲ್ಲ. ಪ್ರತಿಯೊಬ್ಬರಲ್ಲಿಯೂ ತಂತಮ್ಮ ವಿಶಿಷ್ಟಯೋಗ್ಯತೆಯ ಬಗೆಗೆ ಆತ್ಮವಿಶ್ವಾಸ ಬೆಳೆದಿದ್ದಿತು. ಪ್ರೊ. ಹಿರೇಮಠರು ನಮ್ಮಲ್ಲಿ ಇದ್ದ ವಿಭಿನ್ನ ಒಲವನ್ನೂ ಶಕ್ತಿಯನ್ನೂ ಪ್ರತ್ಯೇಕವಾಗಿ ಗುರುತಿಸಿ ಮಾರ್ಗದರ್ಶನ ನೀಡುತ್ತಿದ್ದುದೇ ನಮಗೆ ಆತ್ಮವಿಶ್ವಾಸ ಬೆಳೆಸಿಕೊಳ್ಳಲು ಪ್ರೇರಕವಾಗಿತ್ತೆಂದು ನನಗೆನಿಸುತ್ತದೆ.

ಅವರು ಪಾಠ ಹೇಳುವ ಪದ್ಧತಿ ಗಂಭೀರವಾದುದು, ವಿಪುಲವಾದ ವಿಷಯ ಸಾಮಗ್ರಿಯಿಂದ ಕೂಡಿದುದು. ವಿಷಯದ ಸಮಗ್ರ ಹಾಗೂ ಆಳವಾದ ಪರಿಶೀಲನೆ, ಪರಿಶ್ರಮಯುತವಾದ ವಿಷಯ ಸಂಗ್ರಹ, ಬೇಸರರಿಯದ ವಿವೇಚನೆ--ಇವೇ ಅವರ ಪಾಠಕ್ರಮದ ಮುಖ್ಯ ಸತ್ವ. ಅವರ ಉಪನ್ಯಾಸದ ಶೈಲಿ ಅಕೃತಕವಾದುದು. ವಿದ್ಯಾರ್ಥಿಗಳೇ ಇರಲಿ, ಇತರ ಸಾಮಾನ್ಯಶ್ರೋತೃಗಳೇ ಇರಲಿ, ಅವರನ್ನಾಕರ್ಷಿಸಲು ಹಾಸ್ಯ, ವಿಡಂಬನೆ, ನಾಟಕೀಯತೆ, ಕಾವ್ಯಮಯ ಕೃತಕಭಾಷೆ, ಅಪ್ರಕೃತ ಭಾವನಾವೇಶ ಮುಂತಾದ ವೃತ್ತಿಭಾಷಣ ಕಲೆಯ ತಂತ್ರಗಳಿಗೆ ಕೈಯಿಕ್ಕಿದವರಲ್ಲ: ವಿಷಯವನ್ನು ಅಳಕಗೊಳಿಸುವುದು ಅವರ ಜಾಯಮಾನಕ್ಕೆ ಒಗ್ಗದಂತಹುದು. ಅವರ ನಿತ್ಯಜೀವನದಂತೆ ಉಪನ್ಯಾಸ ನೀಡುವ ರೀತಿಯೂ ನಿರಾಭರಣವಾದುದು, ನಿರಾಡಂಬರವಾದುದು. ಹೊರಮೈಯ ಹೊಳಪು, ಲಘುವಾದ ಮನರಂಜನೆಯನ್ನು ಮಾತ್ರ ಅಪೇಕ್ಷಿಸುವ ವಿದ್ಯಾರ್ಥಿಗಳಿಗೆ ಅವರ ಉಪನ್ಯಾಸ ಭಾರವೇ. 'ಬಾಯ ನುಡಿಗಳ ಕೇಳಿ ಕಿವಿಯೊಳ

ಗಾಯೆನುತ ಪರಿಣಮಿಸಿ ಹೋಹ ವಿಡಾಯುವಲ್ಲಿದು' ಎಂಬ ಮಾದರಿ ಅದು. ಅಧ್ಯಯನ ವಿಷಯವನ್ನು ವ್ಯಾಪಕವಾಗಿ ತಲಸ್ಪರ್ಶಿಯಾಗಿ ಅವಗತ ಮಾಡಿಕೊಳ್ಳ ಬೇಕೆಂಬ ಹಸಿವುಳ್ಳವರಿಗೆ ಅಲ್ಲಿ ಸಾಕಷ್ಟು ಸತ್ವಯುತ ಆಹಾರ ದೊರೆತೀತು.

ಪ್ರೊ. ಹಿರೇಮಠರಲ್ಲಿ ಇಂದಿಗೂ ನನ್ನನ್ನು ಅಚ್ಚರಿಗೊಳಿಸುವ ಒಂದು ಅಂಶವೆಂದರೆ ಅವರ ಅಗಾಧವಾದ ಸರ್ವಂಕರ್ಷ ಬುದ್ಧಿಶಕ್ತಿ. ಪ್ರಾಧ್ಯಾಪಕರಲ್ಲಿ ಬಹುತೇಕರು ತಮಗೆ ಪ್ರಿಯವಾದ ಒಂದೋ ಎರಡೋ ವಿಷಯಗಳಲ್ಲಿ ವಿಶೇಷ ಆಸಕ್ತಿವಹಿಸಿ ಅವುಗಳಲ್ಲಿಯೇ ಹೆಚ್ಚಿನ ಪ್ರಾವೀಣ್ಯ ಪಡೆದಿರುವುದು ಸರ್ವೇಸಾಮಾನ್ಯ. ಪ್ರೊ. ಹಿರೇಮಠರದಾದರೊ ಬಹುಮುಖವಾದ ಆಸಕ್ತಿ. ಕನ್ನಡ ಅಧ್ಯಯನಕ್ಕೆ ಸಂಬಂಧಿಸಿದ ಯಾವ ಶಾಖೆಯೂ ಅವರಿಂದ ದೂರವಾದುದಲ್ಲ. ವ್ಯಾಕರಣ, ಭಾಷಾಶಾಸ್ತ್ರ. ಛಂದಸ್ಸು, ಅಲಂಕಾರ ಶಾಸ್ತ್ರ, ಶಾಸನಾಧ್ಯಯನ. ಸಾಹಿತ್ಯಚರಿತ್ರೆ, ಸಾಂಸ್ಕೃತಿಕಚರಿತ್ರೆ, ಜೈನಸಾಹಿತ್ಯ, ವೀರಶೈವಸಾಹಿತ್ಯ, ಗ್ರಂಥಸಂಪಾದನಶಾಸ್ತ್ರ, ಜಾನಪದ—ಈ ಯಾವ ವಿಷಯ ದಲ್ಲಿಯೂ ಅವರ ಆಸಕ್ತಿ ಸದಾ ತೆರೆದಿಟ್ಟುದು. ಗೈದ ಸಾಧನೆ. ಪಡೆದ ವಿದ್ವತ್ತು, ಒಳನೋಟ ಬೆರಗುಗೊಳಿಸುವಂತಹವು. ಚರ್ಚೆಗೆ ಈ ವೇಳೆಗೆ ಇದೇ ವಿಷಯ ಎಂಬ ಕಟ್ಟುಪಾಡೇನೂ ಇಲ್ಲ. ವಿದ್ಯಾರ್ಥಿಗಳು ಯಾವ ವೇಳೆಗೆ ಯಾವ ವಿಷಯ ತೆಗೆದು ಕೊಂಡು ಹೋದರೂ ಪ್ರೊಫೆಸರರು ನೇರವಾಗಿ ವಿವೇಚನೆಗೆ ತೊಡಗಿಬಿಡುವರು. ಅಧ್ಯಯನ ಅಧ್ಯಾಪನಗಳಲ್ಲಿ ಅವರದು ಸದಾ ಸಿದ್ಧಚಿತ್ತ.

ದಣಿವರಿಯದ ದುಡಿಮೆ ಅವರ ಸ್ವಭಾವದ ಇನ್ನೊಂದು ವೈಶಿಷ್ಟ್ಯ. ಅದೇ ಅವರ ಯಶಸ್ಸಿನ ಬಹುದೊಡ್ಡ ಕಾರಣ. ವೇಳೆಯ ಒತ್ತಡ ಹಾಗೂ ಕೈತುಂಬ ಕೆಲಸ ಇದ್ದಾಗಲೇ ಬಹುತರ ಡಾ. ಹಿರೇಮಠರ ಚಿತ್ತಕ್ಕೆ ಸಂತೋಷ. ನಿಸರ್ಗ ಅವರ ಮನಸ್ಸು ಹಾಗೂ ಶರೀರಕ್ಕೆ ನೀಡಿದ ದಣಿವರಿಯದ ಚೈತನ್ಯ ಒಂದು ಅಪೂರ್ವ ವರ ದಾನವಾಗಿದೆ. ಕೆಲಸದಲ್ಲಿದ್ದಾಗ, ನನ್ನ ಗಮನಕ್ಕೆ ಬಂದಂತೆ ಅವರು ಎಂದೂ ಊಟ, ವಿಶ್ರಾಂತಿ, ಮನೆಯ ನೆನಪು ಮಾಡಿಕೊಂಡವರಲ್ಲ. ಗುಣವೋ ದೋಷವೋ ಏಕಕಾಲಕ್ಕೆ ಹತ್ತಾರುವಿಧದ ಕೆಲಸಗಳಲ್ಲಿ ತೊಡಗಿಕೊಂಡಿರುವುದು ಅವರ ನಿತ್ಯದಿನಚರಿ. ಒಂದು ಕೆಲಸದಿಂದ ಇನ್ನೊಂದಕ್ಕೆ ಬದಲಾಯಿಸುವುದೇ ಬಹುತರ ಅವರಿಗೆ ವಿಶ್ರಾಂತಿ. ತಮಗೆ ಲಭ್ಯವಿರುವ ವೇಳೆಯೆಲ್ಲ ಬಹುಮಟ್ಟಿಗೆ ಅಧ್ಯಯನ, ಅಧ್ಯಾಪನ, ಸಂಶೋಧನ, ಕೆಲಸಗಳಿಗೇ ಮೀಸಲು. ತಮ್ಮ ಖಾಸಗಿಜೀವನಕ್ಕೂ ಸ್ವಲ್ಪ ವೇಳೆ ಬೇಕೆಂಬುದು ಎಷ್ಟೋಸಲ ಅವರ ನೆನಪಿನಲ್ಲೇ ಇರುವುದಿಲ್ಲ. ಸ್ವಂತ ಮನೆವಾಳ್ತೆ ಅವರ ಚಿತ್ತ ವೃತ್ತಿಗೆ ಪರಕೀಯವೆಂಬಷ್ಟು ಔಪಚಾರಿಕ, ಪ್ರಾಧ್ಯಾಪಕ ಕೆಲಸ ಕಾರ್ಯಗಳೇ ಸ್ವಂತದವುಗಳಿಗಿಂತ ಅಧಿಕ ಕಾಳಜಿಯವು. ಅಕ್ಷರಶಃ ಅವರು ಪೂರ್ಣಾವಧಿಯ ಪ್ರಾಧ್ಯಾಪಕರು. ದುಡಿಮೆಯ ಕಾಲ ವರ್ಷದ ಹನ್ನೆರಡೂ ತಿಂಗಳು. ದಿನದ ಇಪ್ಪತ್ತು ನಾಲ್ಕುಗಂಟೆ. ಇಂತಹ ತೆರಪಿಲ್ಲದ ಪರಿಶ್ರಮ ಅವರಿಗೆ ವಿದ್ಯಾರ್ಥಿದೆಸೆಯಿಂದಲೆ

ಮೈಗೂಡಿದ್ದು. ಪ್ರಾಧ್ಯಾಪಕರಾದ ಮೇಲೆ ಅದು ಇನ್ನೂ ಹೆಚ್ಚಾಯಿತೆ ವಿನಾ ಕಡಮೆಯಾಗಲಿಲ್ಲ. ೧೯೪೫ ರಿಂದ ಇಂದಿನ ವರೆಗೆ, ಮೂವತ್ತೆರಡು ವರುಷಗಳ ಈ ಸಂತತ ದುಡಿಮೆಯಿಂದ ಅವರಿಂದು ಕನ್ನಡನಾಡಿನ ಅಗ್ರಗಣ್ಯ ವಿದ್ವಾಂಸರಲ್ಲೊಬ್ಬರಾಗಿ ಗೌರವಾನ್ವಿತರಾಗಿದ್ದಾರೆ. ಅವರ ಈ ಸಾಧನೆ ಸ್ವಯಾರ್ಜಿತವಾದುದು (Self made man). ಆದರೆ ಆ ಹಮ್ಮು ಮಾತ್ರ ಅವರ ಕನಸು ಮನಸಿನಲ್ಲೂ ಸುಳಿಯದು. ತಮ್ಮ ಗುರುಗಳ ಬಗೆಗೆ ಅವರಲ್ಲಿರುವ ಶ್ರದ್ಧಾಗೌರವ ಅನನ್ಯವಾದುದು.

ಕನ್ನಡ ಅಧ್ಯಯನದ ಪುರೋಭಿವೃದ್ಧಿಯ ದೃಷ್ಟಿಯಿಂದ ಡಾ. ಹಿರೇಮಠರು ಗೈದ ಸೇವೆ ಮುಂದಿನ ಪೀಳಿಗೆ ಗೌರವದಿಂದ ನೆನೆಯುವಂತಹದು. ಉತ್ತರಕರ್ನಾಟಕದಲ್ಲಿ ಅವರಿಂದ ಕನ್ನಡ ಅಧ್ಯಯನದ ದಿಶೆಯಲ್ಲಿ ಒಂದು ನವೋದಯವೇ ಉಂಟಾಯಿತೆಂದರೆ ಉತ್ಪ್ರೇಕ್ಷೆಯಾಗಲಿಕ್ಕಿಲ್ಲ. ೧೯೫೦ ರ ಹಿಂದೆ ಕೂಡ ಉತ್ತರಕರ್ನಾಟಕದಲ್ಲಿ ಉಚ್ಚ ವಿದ್ವಾಂಸರು ಕನ್ನಡ ವಿದ್ವತ್ಪ್ರಪಂಚದಲ್ಲಿ ಮೌಲಿಕವಾದ ಕಾರ್ಯ ಮಾಡುತ್ತ ಬಂದಿದ್ದರು. ಆದರೆ ಸಂಘಟಿತ ಸಂಸ್ಥೆಗಳ ಬಲ ವ್ಯಾಪಕ ಪ್ರಮಾಣದಲ್ಲಿ ಅವರಿಗಿದ್ದಿರಲಿಲ್ಲ. ಅನಿವಾರ್ಯವಾಗಿ ಅವರು ವೈಯಕ್ತಿಕವಾಗಿ ಪರಿಶ್ರಮಿಸಬೇಕಾದ ಪರಿಸ್ಥಿತಿಯಿದ್ದಿತು. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಆರಂಭವಾದ ಸ್ನಾತಕೋತ್ತರ ಕನ್ನಡ ವಿಭಾಗ ೧೯೫೧ ರಿಂದೀಚೆ ಅಂತಹ ಸಂಘಟಿತ ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿತು. ಡಾ. ಹಿರೇಮಠರು ವಿಭಾಗದ ಮುಖ್ಯಸ್ಥರಾದ ನಂತರ ಕನ್ನಡ ಅಧ್ಯಯನಕ್ಕೆ ಈ ಭಾಗದಲ್ಲಿ ಹೊಸ ಚೈತನ್ಯ, ವ್ಯಾಪ್ತಿ ಬಂದು ಸುಪುಷ್ಟವಾಗಿ ಬೆಳೆಯಲನುವಾಯಿತು ಅವರ ಮಾರ್ಗದರ್ಶನದಲ್ಲಿ ತರಬೇತಿ ಹೊಂದಿದ ನೂರಾರು ಹೊಸಪೀಳಿಗೆಯ ಜನ ಕನ್ನಡ ಅಧ್ಯಾಪನ-ಸಂಶೋಧನ ಕ್ಷೇತ್ರದಲ್ಲಿ ಇಂದು ಪ್ರವೇಶಿಸಿದ್ದಾರೆ. ಉತ್ತರಕರ್ನಾಟಕದ ಕಾಲೇಜುಗಳಲ್ಲಿ ಈಗ ಕನ್ನಡ ಪ್ರಾಧ್ಯಾಪಕರಾಗಿರುವವರಲ್ಲಿ–ಬೆರಳೆಣಿಕೆಯ ಹಲವರನ್ನುಳಿದರೆ-ಎಲ್ಲರೂ ಡಾ. ಹಿರೇಮಠರ ಶಿಷ್ಯರೇ. ಸಂಶೋಧನಾಭ್ಯಾಸ ಮಾಡಿ ಕನ್ನಡದಲ್ಲಿ ಪಿಎಚ್.ಡಿ. ಪದವಿ ಪಡೆದವರಲ್ಲಿ ಇವರ ಶಿಷ್ಯರೇ ಬಹುಸಂಖ್ಯಾಕರು. ಇಷ್ಟೊಂದು ತರುಣಪೀಳಿಗೆಯಲ್ಲಿ ಸಂಶೋಧನಾಧ್ಯಯನದ ಪ್ರಾಮಾಣಿಕನಿಷ್ಠೆಯನ್ನು ತುಂಬಿ ಕಾರ್ಯರಂಗಕ್ಕಿಳಿಸಿದುದರ ಮೌಲ್ಯ ಇನ್ನು ಹತ್ತೆಂಟುವರುಷಗಳಲ್ಲಿ ವ್ಯಾಪಕವಾಗಿ ಪ್ರಕಟವಾಗುವುದರಲ್ಲಿ ಸಂದೇಹವಿಲ್ಲ.

ಮೂಲತಃ ಇಬ್ಬರು ಪ್ರಾಧ್ಯಾಪಕರು ನಾಲ್ಕಾರುಜನ ವಿದ್ಯಾರ್ಥಿಗಳಿಂದ ಪ್ರಾರಂಭವಾದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗ ಇಂದು ವಿಶಾಲವಾಗಿ ಬೆಳೆದು ಅಧ್ಯಯನಪೀಠವಾಗಿ ಮಾರ್ಪಟ್ಟಿದೆ. ವ್ಯಾಪಕವಾದ ಕಾರ್ಯಯೋಜನೆಗಳನ್ನು ಹಾಕಿಕೊಂಡು ಪ್ರಗತಿಪರ ಹೆಜ್ಜೆ ಮುಂದಿಡುತ್ತಲಿದೆ. ಕನ್ನಡ ಸಾಹಿತ್ಯಾಧ್ಯಯನದ ಜೊತೆಗೆ ಭಾಷಾವಿಜ್ಞಾನಾಧ್ಯಯನ, ಶಾಸನಾಧ್ಯಯನ, ಜನಪದಸಾಹಿತ್ಯಾಧ್ಯಯನ, ಪತ್ರ್ಯ ಪುಸ್ತಕ ಪ್ರಕಟನ, ಜೈನ, ಬ್ರಾಹ್ಮಣ, ವೀರಶೈವ ಸಾಹಿತ್ಯ ಸಂಶೋಧನಾದಿ ಕಾರ್ಯ

ಗಳು ಇಂದು ಸುಸಂಘಟಿತವಾಗಿ ಸಾಗುತ್ತಲಿವೆ. ವಚನವಾಙ್ಮಯದ ಸಂಶೋಧನೆ ಸಂಪಾದನೆಗಳ ದಿಶೆಯಲ್ಲಿ ಅಧ್ಯಯನಪೀಠ ಮಾಡಿದ, ಮಾಡುತ್ತಿರುವ ಕಾರ್ಯ ಮಹತ್ತರವಾದುದು. ವಚನಸಾಹಿತ್ಯ ಪಿತಾಮಹ ಫ. ಗು. ಹಳಕಟ್ಟಿಯವರ ನಂತರ ಅವರ ಕಾರ್ಯವನ್ನು ವ್ಯಾಪಕವಾಗಿ ಮತ್ತು ವ್ಯವಸ್ಥಿತ ರೀತಿಯಿಂದ ಮುಂದು ವರಿಸಿದ ಶ್ರೇಯಸ್ಸು ಡಾ. ಹಿರೇಮಠರದಾಗಿದೆ. ಅವರ ಸಮರ್ಥ ಸಂಪಾದನೆಯಲ್ಲಿ ಹೊರಬಂದ ವಚನಗ್ರಂಥಗಳು ಆ ಸಾಹಿತ್ಯದ ವಿವಿಧಮುಖ ಅಭ್ಯಾಸಕ್ಕೆ ಇಂದು ಬುನಾದಿ ಹಾಕಿವೆ ಎನ್ನಬೇಕು. ಮುಂದಿನ ಪೀಳಿಗೆ ಈ ತಳಪಾಯದ ಮೇಲೆ ಭವ್ಯ ವಾದ ಸೌಧವನ್ನು ನಿರ್ಮಿಸಲು ಸಾಧ್ಯವಾಗಿದೆ.

ಹೀಗೆ ಡಾ. ಹಿರೇಮಠರು ಇಂದು ಒಂದು ಸಂಸ್ಥೆಯಾಗಿ ಬೆಳೆದು ನಿಂತಿದ್ದಾರೆ. ಸಮರ್ಥ ಸಂಶೋಧಕರಾಗಿ, ಸಂಘಟಕರಾಗಿ, ಪ್ರಾಧ್ಯಾಪಕರಾಗಿ ಕನ್ನಡ ಅಧ್ಯಯನದ ನಂದಾ ದೀಪವನ್ನು ನೂರಾರು ಎದೆಗಳಲ್ಲಿ ಹೊತ್ತಿಸಿದ್ದಾರೆ; ಸುತ್ತಲೂ ಬೆಳಕು ಹರಡುವಂತೆ ಅನುವು ಮಾಡಿಕೊಟ್ಟಿದ್ದಾರೆ; ಅವರಿತ್ತ ದೀಕ್ಷೆಯನ್ನು ಫಲಪ್ರದವಾಗಿಸುವ ಪವಿತ್ರ ವ್ರತಧಾರಿಗಳಾಗಿ ಅವರ ಶಿಷ್ಯ-ಪ್ರಶಿಷ್ಯರು ಗುರುದಕ್ಷಿಣೆ ಸಲ್ಲಿಸಿ ಕೃತಾರ್ಥರಾಗುವರೆಂದು ಭಾವಿಸಿದ್ದೇನೆ.



# ಡಾ. ಆರ್. ಸಿ. ಹಿರೇಮಠ ಅವರ ವರ್ಗಬೋಧನೆ

ಎಂ. ಎಂ. ಕಲಬುರ್ಗಿ

ಪ್ರಾಥಮಿಕ, ಮಾಧ್ಯಮಿಕ, ಸ್ನಾತಕ ಮತ್ತು ಸ್ನಾತಕೋತ್ತರ—ಈ ಒಂದೊಂದು ಘಟ್ಟದಲ್ಲಿ ಒಬ್ಬೊಬ್ಬರಂತೆ ತಮ್ಮ ವರ್ಗಬೋಧನೆಯ ಮೂಲಕ ನನ್ನ ಮೇಲೆ ಪ್ರಭಾವ ಬೀರಿದವರು ನಾಲ್ಕುಜನ ಪ್ರಾಧ್ಯಾಪಕರು. ಹಾಗೆ ನೋಡಿದರೆ ಇವರಲ್ಲಿ ಒಬ್ಬರು ನನ್ನನ್ನು ಕಟೆದು-ಕಂಡರಿಸಿ, ತಿದ್ದಿ-ತೀಡಿ ಇನ್ನೊಬ್ಬರ ಕೈಗೆ ಒಪ್ಪಿಸುತ್ತ ಬಂದಿದ್ದಾರೆ. ಈ ರೀತಿ ಮೂರು ಕೈಗಳನ್ನು ದಾಟಿಬಂದು ಕೊನೆಯಲ್ಲಿ ಡಾ. ಹಿರೇಮಠ ಅವರ ಕೈಯಲ್ಲಿ ಜೀವಪಡೆದವನು ನಾನು. ಈ ಅರ್ಥದಲ್ಲಿ ಆ ಮೂವರು ನನ್ನ ವ್ಯಕ್ತಿತ್ವ ವಿಗ್ರಹವನ್ನು ಕಂಡರಿಸಿದ ಶಿಲ್ಪಿಗಳಾದರೆ, ಇವರು ಅದರಲ್ಲಿ ಪ್ರಾಣಪ್ರತಿಷ್ಠಾಪನ ಮಾಡಿದವರು. ಈ ಪ್ರಾಣಪ್ರತಿಷ್ಠಾಪನ ಕಾರ್ಯಕ್ಕೋಸುಗ ಅವರು ಬಳಸಿದ ಪರಿಕರಗಳಲ್ಲಿ ವರ್ಗಬೋಧನೆಯೂ ಒಂದು.

೧೯೬೦ ಜೂನ ತಿಂಗಳು. ವಿದ್ಯಾರ್ಥಿಯಾಗಿ ಎಂ. ಎ. ವರ್ಗ ಪ್ರವೇಶ ಮಾಡಿದೆ. ನಾವು ೧೮ ಜನ ವಿದ್ಯಾರ್ಥಿಗಳು. ನಾನು ಯಾವಾಗಲೂ ಕುಳಿತುಕೊಳ್ಳುತ್ತಿದ್ದುದು ಕೊನೆಯ ಸಾಲಿನಲ್ಲಿ, ಕಿಟಕಿಯ ಹತ್ತಿರ. ಉಪನ್ಯಾಸ ಕೇಳುವುದರಲ್ಲಿಯೇ ಮಗ್ನನಾಗುತ್ತಿದ್ದೆ: ಬೇಸರವೆನಿಸಿದರೆ ಮಾತ್ರ ಕಿಟಕಿಯ ಮುಖಾಂತರ ನಿಸರ್ಗ ನಿರೀಕ್ಷಣೆಯಲ್ಲಿ ಮಗ್ನನಾಗುತ್ತಿದ್ದೆ.

ನಮಗೆ ಡಾ. ಆರ್. ಸಿ. ಹಿರೇಮಠ, ಡಾ. ಎಂ. ಎಸ್. ಸುಂಕಾಪುರ, ಪ್ರೊ. ಬಿ. ಎಸ್. ಕುಲಕರ್ಣಿ, ಪ್ರಿನ್ಸಿಪಾಲ್. ಎಸ್. ಎಸ್. ಮಾಳವಾಡ ಪಾಠ ಹೇಳುತ್ತಿದ್ದರು. ಕೊನೆಯ ವರ್ಷ ಪ್ರೊ. ಎಸ್. ಎಂ. ವೃಷಭೇಂದ್ರಸ್ವಾಮಿ ಅವರು ಅಧ್ಯಾಪಕರಾಗಿ ಬಂದರು.

ಈ ಸುಮಾರಿಗಾಗಲೇ ಡಾ. ಹಿರೇಮಠ ಅವರು ವಿಶ್ವವಿದ್ಯಾಲಯದ ಆಡಳಿತಯಂತ್ರದ ಅನಿವಾರ್ಯ ಅಂಗವಾಗತೊಡಗಿದ್ದರು. ಸಿಸೇಟ, ಅಕೆಡೆಮಿಕ್‌ಕೌನ್ಸಿಲ್ ಮೊದಲಾದ ಸಭೆಗಳು ಅವರ ವರ್ಗಬೋಧನೆಗೆ ಅಡ್ಡಿಯನ್ನೊಡ್ಡಲು ಪ್ರಾರಂಭಿಸಿದ್ದವು. ಇಂಥದ ರಲ್ಲಿಯೂ ಅವರು ಹೇಗೋ ಬಿಡುವು ಮಾಡಿಕೊಂಡು ವರ್ಗಕ್ಕೆ ಬರುತ್ತಲಿದ್ದಾರೆ ಎಂದು–ಕೆಲವೊಮ್ಮೆ ೪–೫ ನಿಮಿಷ ತಡವಾಗಿ ಬರುವುದರಿಂದ—ನಮಗೆ ಮನವರಿಕೆಯಾಗುತ್ತ ಲಿದ್ದಿತು (ಮುಂದಿನ ವರ್ಷಗಳಲ್ಲಿ ಆಡಳಿತ ಅನಿವಾರ್ಯವಾಗಿ ಬೆಳೆಯುತ್ತ ನಡೆದು 'ವರ್ಗ ಬೋಧನೆ'ಯ ಲಾಭ ವಿದ್ಯಾರ್ಥಿಗಳಿಗೆ ಕಡಿಮೆಯಾಗುತ್ತ ಹೋದುದು ದೊಡ್ಡ ಹಾನಿ ಯೆಂದೇ ಹೇಳಬೇಕು). ಇದರಿಂದಾಗಿ ಯಾವಾಗಲೂ ತೆಕ್ಕೆಯಲ್ಲಿ ಹತ್ತಾರು ಪುಸ್ತಕ ಹಿಡಿದುಕೊಂಡು ಬರುತ್ತಿದ್ದ ಅವರು, ಕ್ವಚಿತ್ತಾಗಿ ಬರಿಗೈಯಿಂದಲೇ ಬಂದು ತಮ್ಮ ವಿಷಯವನ್ನು ಬೋಧಿಸಬೇಕಾಗುತ್ತಿದ್ದಿತು. ಅವರು ತೆಕ್ಕೆಯ ತುಂಬ ಪುಸ್ತಕ ಹಿಡಿದು ಕೊಂಡು ಬಂದರೆ "ಸಿಡಿಲ ಬಳಗಮನೊಳಕೊಂಡಂತೆ ತಟತಟಿಸಿ ಪೊಳೆವ ಕೆಯ್ದು" ಗಳೊಂದಿಗೆ ಬಂದ ಕರ್ಣನ ನೆನಪು. ಒಂದೆರಡು ತಿಂಗಳು ಕಳೆಯುವಲ್ಲಿ ಡಾ. ಹಿರೇಮಠ ಅವರ ಅಧ್ಯಾಪನ ನನಗೆ ತುಂಬ ಆಪ್ಯಾಯಮಾನವಾಗುತ್ತ ನಡೆಯಿತು. ಅವರು ವರ್ಗವನ್ನು ಪ್ರವೇಶಿಸುವಾಗಲೆಲ್ಲ "ಪ್ರಾಣಂ ಬರ್ಪಾಕೃತಿಯೊಳೆ ಬಾಣಾಸನ ಪಾಣಿ ಕರ್ಣಂ ಬಂದಂ" ಎಂಬಂಥ ಅನುಭವ ನನಗಾಗುತ್ತಲಿದ್ದಿತು.

ಸಾಮಾನ್ಯವಾಗಿ ಪ್ರಿನ್ಸಿಪಾಲ ಮಾಳವಾಡ ಅವರನ್ನು ಬಿಟ್ಟರೆ ಮಿಕ್ಕ ಪ್ರಾಧ್ಯಾಪಕರು ವೇಷಭೂಷಣದ ಕಡೆಗೆ ಅಷ್ಟು ಗಮನಕೊಟ್ಟವರಲ್ಲ. ಡಾ. ಹಿರೇಮಠ ಅವರು ತಪ್ಪದೆ ಸೂಟು, ಟೈ ಧರಿಸಿ ಬರುತ್ತಿದ್ದರೂ ಅವರಿಗೆ ಆ ಕಡೆಗೆ ಗಮನವಿರುತ್ತಿರಲಿಲ್ಲ (ಒಟ್ಟು ಜೀವನದ ಬಗ್ಗೆಯೇ ಅವರದು "ನಿರ್ಲಿಪ್ತ ಮನೋಭಾವ" ಎಂದು ಆಮೇಲೆ ನಾನು ಕಂಡುಕೊಂಡಿದ್ದೇನೆ). ಕ್ವಚಿತ್ತಾಗಿ ಸರಳವೇಷ—ಕೋಟು ಧೋತರ—ಧರಿಸಿಯೂ ಬರುತ್ತಿದ್ದರು. ಒಂದುದಿನವೂ ಅವರು ಆಯಾಸ, ಬೇಜಾರುಗಳಿಂದ ಪಾಠ ಹೇಳ ಲಿಲ್ಲ; ಸೋತು ಖುರ್ಚಿಯಲ್ಲಿ ಕುಳಿತುದನ್ನು ನಾವು ಕಾಣಲಿಲ್ಲ. ಶರವೇಗದಿಂದ ವರ್ಗಕ್ಕೆ ಬಂದವರೇ ಟೇಬಲ್ ಹಿಡಿದುಕೊಂಡು ನಿಂತರೆ ಮುಗಿಯಿತು, ಪ್ರವಚನ ಲೀಲೆಯಲ್ಲಿ ಮುಳುಗಿಬಿಡುತ್ತಿದ್ದರು. ಅವರು ನಮಗೆ ಹೇಳುತ್ತಿದ್ದುದು ಪಂಪಭಾರತ, ಆದಿಪುರಾಣ, ವ್ಯಾಕರಣ, ಇಂಗ್ಲಿಷ ಗೀತಗಳು. ಇವು ಪರಸ್ಪರ ಸಂಬಂಧವಿಲ್ಲದ ಕ್ಷೇತ್ರಗಳು. ಆದರೆ "ಕಲಿತನ ತನಗುಳ್ಳೊಡೆ ಸೂಜಿ ಬಾಳು ಮೊದಲಾಗಿ ಕಾದಬೇಕು" ಎಂಬಂಥದು ಅವರ ಪ್ರವಚನ ಸಮರ. ವೀರಯೋಧನೊಬ್ಬ ಎಲ್ಲ ದಿಕ್ಕುಗಳಿಗೂ ಎದೆಯೊಡ್ಡಿ ಹೋರಾಡುವಂತೆ ಅವರ ಬೋಧನೆ. ಕನ್ನಡ, ಇಂಗ್ಲಿಷ, ಸಂಸ್ಕೃತ ಭಾಷೆ–ಸಾಹಿತ್ಯಗಳ ಆಳವಾದ ಅಭ್ಯಾಸ–ಅನುಭವಗಳ ಪ್ರಭಾವಳಿಯನ್ನು ಕಟ್ಟಿಕೊಂಡು ಅದು ಸಾಗುತ್ತಲಿದ್ದಿತು. ಯಾವುದೇ ವಿಷಯ ಕೈಗೆತ್ತಿಕೊಂಡರೂ ಅದಕ್ಕೆ ಪೂರಕ ವಾಗಿ ವ್ಯಾಕರಣ, ಛಂದಸ್ಸು, ಅಲಂಕಾರ, ಇತಿಹಾಸ, ಲೋಕಾನುಭವ, ತೌಲನಿಕ

ವಿಮರ್ಶೆಗಳನ್ನು ಮೇಳವಿಸಿಕೊಂಡ ಅವರ ಉಪನ್ಯಾಸ, ಗುಡುಗು-ಸಿಡಿಲು-ಮೋಡ-ಮಿಂಚುಗಳ ಬಳಗವನ್ನು ಕಟ್ಟಿಕೊಂಡು ಸುರಿವ ವರ್ಷಾಧಾರೆ. ಆಗ ಒಂದು ಬಗೆಯ ಸರ್ವಜ್ಞತ್ವ ಅವರ ವಾಣಿಯಲ್ಲಿ ಎದ್ದು ಬರುತ್ತಿತ್ತು. ಯಾವುದೇ ವಿಷಯದ ಬಗೆಗೆ, ಶಬ್ದದ ಬಗೆಗೆ ಅವರು ತಡವರಿಸುತ್ತಿರಲಿಲ್ಲ; ತಡಕಾಡುತ್ತಿರಲಿಲ್ಲ. ಆಗ ಸಮಯೋಚಿತವಾಗಿ ಬಳಸುವ ಅನೇಕ ಭಾಷೆಗಳ ಉದ್ಧರಣೆಗಳು ಅವರ ವ್ಯಾಸಂಗದ ವೈಶಾಲ್ಯವನ್ನೂ ಅಗಾಧ ಸ್ಮರಣಶಕ್ತಿಯನ್ನೂ ಬಿಂಬಿಸುತ್ತಿದ್ದವು (ಈ ವಯಸ್ಸಿನಲ್ಲಿಯೂ ಅದು ಬಾಡಿಲ್ಲ; ಬತ್ತಿಲ್ಲ). ಇದು ಕೇವಲ ಶುಕವಾಣಿಯಾಗಿರದೆ ಆಯಾ ಕಾವ್ಯಗಳ ಅಭ್ಯಾಸ ರಕ್ತಗತವಾದುದರ, ಅಸ್ಥಿಗತವಾದುದರ ಕುರುಹಾಗಿದ್ದಿತು. ಹೀಗಾಗಿ ಎರಡು ವರ್ಷಗಳ ಅವಧಿಯಲ್ಲಿ ಅವರು ಒಮ್ಮೆ ಬಳಸಿದ ಉದ್ಧರಣೆಯನ್ನು ಮತ್ತೊಮ್ಮೆ ಬಳಸಲೇ ಇಲ್ಲ. ಏಕೆಂದರೆ ಅವರ ಪಾಠ ಮಾತುಗಳನ್ನು ಜೋಡಿಸಿಕೊಂಡು, ಕಠಿಣಪದಗಳಿಗೆ ಅರ್ಥ ಬರೆದುಕೊಂಡು ವರ್ಗಕ್ಕೆ ಬಂದು ಒಪ್ಪಿಸುವ ವರದಿಯಾಗಿರಲಿಲ್ಲ. “ಇದುಂ ನಿಚ್ಚಂ ಪೊಸತು ಅರ್ಣವಂಬೊಲ್” ಎಂಬಂತೆ ಅದೊಂದು ಸೃಷ್ಟಿಕ್ರಿಯೆಯಾಗಿ ಅಂಕುರಿಸಿ ಅರಳುತ್ತಲಿದ್ದಿತು. ಎಲ್ಲಿಂದಲೋ ಗಿಡವನ್ನು ಕಿತ್ತುತಂದು ವೇದಿಕೆಯ ಮೇಲೆ ನಿಲ್ಲಿಸಿ ವರ್ಣಿಸುವ ರೀತಿಯಲ್ಲ; ವೇದಿಕೆಯ ಮೇಲೆ ತಾನೇ ಬೀಜವಾಗಿ ಊರಿಕೊಂಡು ಸಸಿಯಾಗಿ-ಗಿಡವಾಗಿ-ಮರವಾಗಿ ಬೆಳೆದು ಉಲಿವ ರೀತಿಯಾಗಿದ್ದಿತು. ಯಾವುದನ್ನೇ ಓದಿಸಲಿ, ಅವರು ಶಬ್ದಾರ್ಥ ಪಾತಳಿಯ ಮೇಲೆ ನಿಂತವರೇ ಅಲ್ಲ. ಕ್ರಮವಾಗಿ ವಿಷಯದ ಸ್ಥೂಲ-ಸೂಕ್ಷ್ಮ-ಕಾರಣ ತನುಗಳನ್ನು ತೆರೆದು ತೋರಿಸಿ ಕಾವ್ಯಗವಿಯ ಗುಹೇಶ್ವರನ ದರ್ಶನ ಮಾಡಿಸುವ ಪ್ರಭುಶಕ್ತಿ ಅವರದಾಗಿದ್ದಿತು. ಹೀಗಾಗಿ ನಾವು ಅವರಿಂದ ಓದಿದುದು ಪಂಪಭಾರತವನ್ನಲ್ಲ, ಪಂಪನನ್ನು; ಆದಿಪುರಾಣವನ್ನಲ್ಲ, ಆದಿತೀರ್ಥಂಕರನನ್ನು; ಶಬ್ದಮಣಿದರ್ಪಣವನ್ನಲ್ಲ, ಹಳಗನ್ನಡ ಭಾಷೆಯ ಸೂಕ್ಷ್ಮಸಂವೇದನೆಯನ್ನು.

ಹೀಗೆ ಉಪನ್ಯಾಸಗಳು ವರದಿಯಾಗದಂತೆ ಹರಟೆಯೂ ಆಗುತ್ತಿರಲಿಲ್ಲ. ಲಘುಪ್ರಶಂಸೆಗಾಗಿ (Cheap popularity) ಅವರು ಕವಿ-ಕಾವ್ಯದ ಅಂತಸ್ಸನ್ನಾಗಲೀ, ವೇದಿಕೆಯ ಪಾವಿತ್ರ್ಯವನ್ನಾಗಲೀ, ಪ್ರಾಧ್ಯಾಪಕನ ಘನತೆಯನ್ನಾಗಲೀ ದುರುಪಯೋಗಪಡಿಸಿಕೊಳ್ಳಲಿಲ್ಲ. ಅಪರೂಪಕ್ಕೆ ಸುಂದರ ವಿನೋದಗಳು ಸುರಿಯುತ್ತಿದ್ದರೂ ಒಟ್ಟಿನಲ್ಲಿ ಅವರದು ಒಂದು ಬಗೆಯ ಸೀರಿಯಸ್ ಬೋಧನೆ. ಹೀಗಾಗಿ ಸಾಮಾನ್ಯ ವಿದ್ಯಾರ್ಥಿಗಳಿಗೆ ಅದು ತರಿಘಾರ. ಅಸಕ್ತರಿಗೆ ನೀರು ಗೊಬ್ಬರ ಎನಿಸುತ್ತಲಿದ್ದಿತು.

ಡಾ. ಹಿರೇಮಠರು ಪೂರ್ವಸಿದ್ಧ ಸಣ್ಣ ಟಿಪ್ಪಣಿಗಳನ್ನಾಗಲೀ, ದೊಡ್ಡ ಫೈಲನ್ನಾಗಲೀ ಸಜ್ಜುಮಾಡಿಕೊಂಡು ಕ್ಲಾಸಿಗೆ ಬರುತ್ತಿರಲಿಲ್ಲವಾದುದರಿಂದ ಅವರ ನಿರೂಪಣೆಯಲ್ಲಿ ಕೆಲವೊಮ್ಮೆ ಕ್ರಮ ತಪ್ಪುತ್ತಲಿದೆ ಎಂದು ತೇಲುನೋಟಕ್ಕೆ ಅನಿಸುತ್ತಲಿದ್ದರೂ ಅದು

ಸೈನಿಕರ ಕವಾಯತು ಕ್ರಮವನ್ನು ಮೀರಿ ಯುದ್ಧಕ್ರಮದಂತೆ ಸಂಕೀರ್ಣವೂ ಭೂಮ ದರ್ಶಿಯೂ ಆಗಿರುತ್ತಿತ್ತು. ಹೀಗಾಗಿ ಗಟ್ಟಿ ಹಿನ್ನೆಲೆಯಿಲ್ಲದ ವಿದ್ಯಾರ್ಥಿ ಕಕ್ಕಾವಿಕ್ಕಿ ಯಾಗುತ್ತಿದ್ದರೆ ಗಟ್ಟಿಮುಟ್ಟಾದ ವಿದ್ಯಾರ್ಥಿ ಪೂರ್ಣದಿಂದ ಪೂರ್ಣವನ್ನು ಗಳಿಸಿ ಕೊಳ್ಳುತ್ತಲಿದ್ದ.

"ಮಾತುಗಾರಿಕೆ" ದೃಷ್ಟಿಯಿಂದ ಅವರದು ಅಂಥ ಕಲಾವಂತಿಕೆಯೇನಲ್ಲ: ಧ್ವನಿಯೂ ಅಷ್ಟು ಹಿತವಾದುದಲ್ಲ. ಅಂದರೆ ಅವರು ಮಾತುಗಾರರಲ್ಲ, ಮಾತುವೀರರು. ವ್ಯಾಕ ರಣ ಬದ್ಧವಾದ ವಾಗಾಡಂಬರವೂ ಅಲ್ಲವಾದುದರಿಂದ, ಅದು ಕೃತ್ರಿಮಕಲೆಯೂ ಆಗಿರ ಲಿಲ್ಲ. "ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು" ಎಂಬಂತೆ ದೇಸಿ ಯನ್ನು ಮೈಗೂಡಿಸಿಕೊಂಡು ಮಾರ್ಗಮುಖಿಯಾಗಿ ಮುನ್ನಡೆಯುತ್ತಲಿದ್ದಿತು ಹೀಗಾಗಿ ಅವರ ಉಪನ್ಯಾಸದಲ್ಲಿ ನಾಗರಿಕತೆಗಿಂತ ನೈಸರ್ಗಿಕತೆ ಹೆಚ್ಚು: ತುದಿನಾಲಗೆಯ ನಯ ನಾಜೂಕತೆಗಿಂತ ಗಟ್ಟಿಯಾದ ಹೃದಯವಂತಿಕೆ ಅಧಿಕ. ಈ ಶ್ರೀಮಂತಿಕೆಯಲ್ಲಿ ಮಾತುಗಾರಿಕೆ, ವಿಷಯಗಳಿಗೆ ಸಂಬಂಧಿಸಿದ ಸಣ್ಣ-ಪುಟ್ಟ ದೋಷಗಳು ಮುಚ್ಚಿ ಹೋಗುತ್ತಿದ್ದವು.

ಡಾ. ಹಿರೇಮಠ ಅವರು ಮೂಲತಃ ಹಳ್ಳಿಯವರಾದುದರಿಂದಲೂ ಅವರಲ್ಲಿ ಜಾನಪದ ದಟ್ಟ ಸಂವೇದನೆಗಳು ಇನ್ನೂ ನೆಲೆಯೂರಿರುವದರಿಂದಲೂ ಅವರ ಉಪನ್ಯಾಸದಲ್ಲಿ ವೈಚಾರಿಕತೆಗಿಂತ ಭಾವುಕತೆ ಅಂದರೆ ವಿಮರ್ಶೆಗಿಂತ ಸಹೃದಯತೆ ಒಂದು ಗುಂಜಿ ಅಧಿಕ ವೆಂದೇ ಹೇಳಬೇಕು. ಹೀಗಾಗಿ ಕಾವ್ಯಬೋಧನೆಯ ಸಂದರ್ಭದಲ್ಲಿ ಒಳ್ಳೆಯ ಪ್ರಸಂಗ ಗಳು ಬಂದಾಗಲೆಲ್ಲ ಮಾತು ನಿಂತು "ಇದು ಪಂಪ", "ಇದು ಕಾವ್ಯ" ಎಂದು ನುಡಿದು ರಸಸಮಾಧಿಯಲ್ಲಿ ಮುಳುಗಿಬಿಡುತ್ತಿದ್ದರು. ಒಮ್ಮೆ ಹರಿಶ್ಚಂದ್ರ ಕಾವ್ಯವನ್ನು ಓದಿಸುವ ಪ್ರಸಂಗ : ಚಂದ್ರಮತಿ ವಿಶ್ವಾಮಿತ್ರನ ಕಾಟಕ್ಕೆ ಬೇಸತ್ತು ಕಾಳ್ಕಿಚ್ಚನ್ನು ಪ್ರವೇಶಿಸು ವಾಗ ಹಸುಳೆ ಲೋಹಿತಾಶ್ವ ತಾಯಿಯನ್ನು ತಬ್ಬಿಕೊಂಡು ತಡೆಗಟ್ಟುತ್ತಲಿದ್ದ ಸಂದರ್ಭ ವನ್ನು ಬೋಧಿಸುವಾಗ ಅವರ ಧ್ವನಿ ದುಃಖದಿಂದ ನಡುಗಿತು. ವಿದ್ಯಾರ್ಥಿಗಳಾದ ನಮ್ಮ ಕಣ್ಣಂಚಿನಲ್ಲಿ ನೀರು ಮಿಂಚಿತು. ಇದೇರೀತಿ ಆಗಾಗ ಅವರೊಂದಿಗೆ ನಾವು ಕೃತಿಯಲ್ಲಿ ಕರಗಿ ಹೋಗುತ್ತಲಿದ್ದೆವು.

ಹೀಗೆ ಭಾವನಾಪ್ರಧಾನರಾಗುತ್ತಿದ್ದವರು, ಶಾಸ್ತ್ರಬೋಧೆಯಲ್ಲಿ ಶಾಸ್ತ್ರಬಲ್ಲಿದ ಸಂಶೋ ಧಕರಾಗಿ ಬಿಡುತ್ತಿದ್ದರು. ಭಾಷಾವಿಜ್ಞಾನ, ಅಲಂಕಾರ, ಸಾಹಿತ್ಯಚರಿತ್ರೆ, ಛಂದಸ್ಸು ಏನೇ ಇರಲಿ ಅದರ ಮುಖ್ಯಲಕ್ಷಣಕ್ಕೇ ಕೈಹಾಕಿ ನಮ್ಮ ಮನಸ್ಸು ಒಪ್ಪುವಂತೆ ಸಿದ್ಧಾಂತ ಗಳನ್ನು ಮಂಡಿಸುತ್ತಿದ್ದರು. ದ್ರಾವಿಡ, ಪ್ರಾಕೃತ, ಸಂಸ್ಕೃತ ಭಾಷೆಗಳ ಪರಿವಾರದಲ್ಲಿ ಅದರ ಸಂಬಂಧ ಮತ್ತು ಬೆಳವಣಿಗೆಯ ಹಸ್ತ-ಹೆಜ್ಜೆಗಳನ್ನು ವಿವರಿಸುತ್ತಿದ್ದರು.

ಡಾ. ಹಿರೇಮಠರಲ್ಲಿ ಪಾಂಡಿತ್ಯ, ಪರಿಶ್ರಮಗಳು ಸಮಮಂಡಿಯಾಗಿವೆ. ಯಾವುದು ಹೆಚ್ಚು, ಯಾವುದು ಕಡಿಮೆ ಹೇಳುವಂತಿಲ್ಲ. ಪರೀಕ್ಷೆಗಳು ಸಮೀಪಿಸಿದರೆ ಬಿಡುವಿನ ದಿನಗಳಲ್ಲೂ ಪಾಠ. ಊಟಮಾಡಿ ೧೧ ಗಂಟೆಗೆ ಬಂದು ವರ್ಗದಲ್ಲಿ ನಿಂತರೆ ಮುಗಿಯಿತು ಮತ್ತೆ ಸಂಜೆ ಊಟಕ್ಕೇ ಹೋಗುವುದು. ಮಧ್ಯ ಒಂದೆರಡು ಸಲ, ಟೇಬಲ್ ಮೇಲಿಟ್ಟ ನೀರನ್ನು ಗುಟುಕರಿಸುವುದನ್ನು ಬಿಟ್ಟರೆ ೫-೬ ತಾಸು ನಿರಂತರ ಪಾಠ ಪ್ರವಚನ. ವರ್ಷದ ಕೊನೆಯ ದಿನವಂತೂ ತಮ್ಮ ವಿಷಯವನ್ನಲ್ಲದೆ ಮಿಕ್ಕ ವಿಷಯಗಳನ್ನೂ ಸಿಂಹಾವಲೋಕನ ಮಾಡಿ, ಸರ್ವಸಂದೇಹಗಳಿಗೆ ಪರಿಹಾರ ನೀಡುತ್ತಿದ್ದರು. ಈ ಪ್ರಸಂಗದಲ್ಲಿ ಅವರ ಪಾಂಡಿತ್ಯದ ಅಪಾರ ರಾಶಿ ನಮ್ಮ ಗಮನಕ್ಕೆ ಬರುತ್ತಲಿದ್ದಿತು. ಮುಳ್ಳು ಸರಿಸಿದರೆ ಸಾಕು, ಬೇರೆಬೇರೆ ಸ್ಟೇಶನ್‌ಗಳ ಕಾರ್ಯಕ್ರಮವನ್ನು ಪ್ರಕಟಗೊಳಿಸುವ ರೇಡಿಯೊದಂತೆ ಬೇರೆಬೇರೆ ವಿಷಯ ಸಲೀಸಾಗಿ, ಅಧಿಕೃತವಾಗಿ ವ್ಯಕ್ತವಾಗುತ್ತಲಿದ್ದಿತು (ವಿದ್ಯಾ ವ್ಯಾಸಂಗದಲ್ಲಿ ಇಷ್ಟು ವೈವಿಧ್ಯ, ವೈಶಾಲ್ಯಗಳನ್ನೊಳಗೊಂಡ ಕನ್ನಡ ಪ್ರಾಧ್ಯಾಪಕರು ಇಂದು ಬೇರೊಬ್ಬರಿರುವುದು ನನಗೆ ಸಂದೇಹ). ಅವರ ಒಂದು ಮಾತು, ಒಂದು ಸಮಸ್ಯೆಯನ್ನಲ್ಲ, ಅಂಥ ಸಮಸ್ಯೆಗಳ ಪರಂಪರೆಯನ್ನೇ ಬಿಚ್ಚಿ ತೋರಿಸುತ್ತಲಿದ್ದಿತು. ನಾವೇ ಬೇರೆ ಇಂಥ ಹತ್ತಾರು ಸಮಸ್ಯೆಗಳನ್ನು ಬಿಡಿಸಿಕೊಳ್ಳಲು ದಾರಿ ತೋರುತ್ತಲಿದ್ದಿತು. ಹೀಗಾಗಿ ಅವರು ನಮಗೆ ನೂರಾರು ಕೀಲಿಕೈಗಳನ್ನು ಕೊಡುವುದಕ್ಕಿಂತ ಕೆಲವೇ "ಮಾಸ್ಟರಲಾಕ್‌ಕೀ" ಕೊಟ್ಟರೆನ್ನಬಹುದು. ಅಂದರೆ ಸ್ಪೂನ್‌ಫೀಡಿಂಗ್ ತಪ್ಪಿಸಿ ಕಾವ್ಯವನ್ನು ಓದುವ, ಅರ್ಥೈಸುವ, ಸಂಶೋಧನೆಯನ್ನು ಕೈಕೊಳ್ಳುವ ದೃಷ್ಟಿಯನ್ನು ಬೆಳೆಸಿಕೊಟ್ಟರು.

ಡಾ. ಹಿರೇಮಠ ಅವರಿಗೆ ಪಂಪ, ವಚನಕಾರರು, ಹರಿಹರ ಪ್ರೀತಿಯ ಕವಿಗಳು. ವ್ಯಾಕರಣ, ಧರ್ಮತತ್ತ್ವ ಮೊದಲಾದವು ಪ್ರೀತಿಯ ವಿಷಯಗಳು. ಅವರು ವರ್ಗ ಕೋಣೆಯಲ್ಲಿ ಪಂಪನ "ಒತ್ತಿ ತರುಂಬಿ ನಿಂದ......" ಎಂಬ ಪದ್ಯವನ್ನು ತಿರುತಿರುಗಿ ಓದಿದ, ಓದಿಓದಿ ಮೆಚ್ಚಿದ, ಮತ್ತೆಮತ್ತೆ ಅರ್ಥೈಸಿ ತಣಿದು ತಣಿಸಿದ ಸನ್ನಿವೇಶ ನನ್ನ ಕಣ್ಣಲ್ಲಿ, ಎದೆಯಲ್ಲಿ ಮಾಸದ ಚಿತ್ರವಾಗಿ ಇನ್ನೂ ಉಳಿದಿದೆ. ಇಂದು ಆ ಪದ್ಯವನ್ನು ಓದುವಾಗ, ಓದಿಸುವಾಗಲೆಲ್ಲ ನನಗೆ ಡಾ. ಹಿರೇಮಠರು ವ್ಯಕ್ತಪಡಿಸುತ್ತಿದ್ದ ಭಾವ ಭಂಗಿ ಕಣ್ಣಿಗೆ ಕಾಣಿಸುತ್ತದೆ, ಧ್ವನಿಯ ಏರಿಳಿತ ಕಿವಿಗೆ ಕೇಳಿಸುತ್ತದೆ.

ಡಾ. ಹಿರೇಮಠ ಅವರು ವಿಷಯವನ್ನು ಮಧ್ಯಮಧ್ಯ ಕರಿಹಲಗೆಯ ಮೇಲೆ ಬರೆದು ವಿವರಿಸುತ್ತಿದ್ದರು. ತುಂಬ ಮುದ್ದುಮುದ್ದಾಗಿ ಅವರು ಅಕ್ಷರ ಮೂಡಿಸುತ್ತಿದ್ದಂತೆ "ಗಾಂಧಿಲಿಪಿ" ಯನ್ನು ಬರೆಯುತ್ತಿದ್ದ ನನಗೆ ಒಂದು ಬಗೆಯ ಹೊಟ್ಟೆಕಿಚ್ಚು. ಸ್ಥೈರ್ಯ ಶಕ್ತಿಯನ್ನೆಲ್ಲ ಮುಂಗೈಗೆ ತಂದು ಬರೆವ ರೀತಿಯದು. ಆ ಅಕ್ಷರಗಳಲ್ಲಿ ಅವರ ಅಂತರಂಗದ ತೇಜವೆಲ್ಲ ಇಳಿದುಬರುತ್ತಲಿದ್ದ ಅನುಭವ. ಒಮ್ಮೆ ಒಂದು ಪ್ರಸಂಗ: ಕೊನೆಯ ಪಿರಿಯಡ್. ವಿದ್ಯಾರ್ಥಿಗಳ ವಿಚಾರಸಂಕಿರಣ. ಪ್ರಬಂಧ ಓದಬೇಕಿದ್ದ

ವಿದ್ಯಾರ್ಥಿ, ಅಧ್ಯಕ್ಷತೆ ವಹಿಸಬೇಕಿದ್ದ ವಿದ್ಯಾರ್ಥಿನಿ ವೇದಿಕೆಯ ಮೇಲೆ ಬಂದು ಕುಳಿತರು. ಅವರ ಹಿಂಭಾಗದಲ್ಲಿ, ಕರಿಹಲಗೆಯ ಮೇಲೆ ಹಿಂದಿನ ಪಿರಿಯಡ್‌ದಲ್ಲಿ ಡಾ. ಹಿರೇಮಠರು ಸಮುಚ್ಚಯ ವಿಧಿಯನ್ನು ವಿವರಿಸುತ್ತ ಬರೆದಿದ್ದ "ಒಂದೆಡೆಯೊಳ್ ಕಟ್ಟುವುದೆ ಪುಲಿಯುಮಂ ಕಪಿಲೆಯುಮಂ" ಎಂಬ ವಾಕ್ಯ, ಇವರಿಗಾಗಿಯೇ ಮುದ್ದಾದ ಬೋರ್ಡು ಬರೆದು ಅಂಟಿಸಿದಂತೆ ತೋರುತ್ತಲಿದ್ದಿತು. ಅಂದು ವಿಚಾರ ಸಂಕಿರಣ ಮುಗಿಯುವ ವರೆಗೂ ಈ ಜೋಡಿಗೂ ಆ ಬೋರ್ಡಿಗೂ ಸಂಬಂಧ ಕಲ್ಪಿಸಿ ನಾವೆಲ್ಲ ನಕ್ಕದ್ದೇ ನಕ್ಕದ್ದು. ಸ್ವತಃ ಡಾ. ಹಿರೇಮಠ ಅವರ ಬೋಧನೆ ಗಂಭೀರ ಸ್ವರೂಪದ್ದಾಗಿದ್ದರೂ ಅವರ ಬರವಣಿಗೆ ವಿನೋದಕ್ಕೆ ಅವಕಾಶ ಕಲ್ಪಿಸಿಕೊಟ್ಟ ಈ ಘಟನೆಯನ್ನು ನಾವು ಸ್ನೇಹಿತರು ಸೇರಿದಾಗಲೆಲ್ಲ ಇನ್ನೂ ನೆನಪು ಮಾಡಿಕೊಂಡು ನಗುತ್ತೇವೆ. ಇನ್ನೂ ಒಂದು ಅಂಶವೆಂದರೆ ಅವರು ಉಪನ್ಯಾಸಕ್ಕೆ ತೊಡಗಿದರೆಂದರೆ ಕನ್ನಡದಲ್ಲಿ ಪ್ರಾರಂಭಿಸಿ ಕ್ರಮೇಣ ಇಂಗ್ಲೀಷಕ್ಕೆ ಹೊರಳುವುದು, ಇಂಗ್ಲಿಷದಿಂದ ಮತ್ತೆ ಕನ್ನಡಕ್ಕೆ ಮರಳುವುದು ಉದ್ದಕ್ಕೂ ನಡೆದೇ ಇರುತ್ತಿದ್ದಿತು. ಇದೂ ಒಂದು ಬಗೆಯ ಕನ್ನಡಾಂಗ್ಲ ಮಿಶ್ರಿತ "ಚಂಪೂ ಉಪನ್ಯಾಸ" ಎಂದು ಸ್ವಾರಸ್ಯವಾಗಿ ನಾವು ಮಾತನಾಡಿಕೊಳ್ಳುತ್ತಿದ್ದೆವು.

ಇವೆಲ್ಲವುಗಳಿಗೆ ಮಿಗಿಲಾಗಿ, ಅವರ ಚಾರಿತ್ರ್ಯ ಈ ಗಟ್ಟಿ ಉಪನ್ಯಾಸಕ್ಕೆ ಹಿನ್ನೆಲೆಯಾಗಿ ನಿಂತು, ಅದರ ಪ್ರಭಾವವನ್ನು ನಮ್ಮ ಮೇಲೆ ಇನ್ನೂ ಗಟ್ಟಿಗೊಳಿಸುತ್ತಲಿದ್ದಿತು. ನನ್ನ ಜೀವನಕ್ಕೆ ಬಹು ದೊಡ್ಡ ಆಸ್ತಿಯಾಗಿ ಬಂದ ಆ "ವಚೋಶಕ್ತಿ"ಯ ನೆನಪಾದಾಗಲೆಲ್ಲ ನಾನು ಕೃತಜ್ಞತೆಯಿಂದ ಕರಗಿಹೋಗುತ್ತೇನೆ.



# ಪಿಎಚ್. ಡಿ. ಮಾರ್ಗದರ್ಶಿ : ಆರ್. ಸಿ. ಹಿರೇಮಠರು

□ □ □ □ □ □ □ □ □ □ □ □ □ □ □ □ □ □

ಬಿ. ವ್ಹಿ. ಮಲ್ಲಾಪುರ

□ □ □ □ □ □ □ □ □ □ □ □ □ □ □ □ □ □

ಕಾರಯಿತ್ರೀ ಪ್ರತಿಭೆ, ಅಧ್ಯಯನಶೀಲತೆ, ಸತತಾಭ್ಯಾಸ, ಸಂಶೋಧನಪ್ರವೃತ್ತಿ, ಅಧ್ಯಾಪನ ಕಲೆ ಹಾಗೂ ಸಂಯೋಜನಾಶಕ್ತಿಗಳ ಮೇಳವನ್ನು ಒಬ್ಬ ವ್ಯಕ್ತಿಯಲ್ಲಿ ಕಾಣುವುದು ಅಪರೂಪ ಅಂಥ ಅಪರೂಪ ವ್ಯಕ್ತಿಗಳಲ್ಲಿ ಡಾ. ಆರ್. ಸಿ. ಹಿರೇಮಠ ಅವರು ಒಬ್ಬರು. ಆರಂಭದಲ್ಲಿ ಕೇವಲ ಕನ್ನಡಸಾಹಿತ್ಯದ ಅಧ್ಯಯನ ಮತ್ತು ಅಧ್ಯಾಪನಗಳಿಗೆ ಮಾತ್ರ ಸೀಮಿತವಾಗಿದ್ದ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಕರ್ಣಧಾರತ್ವವನ್ನು ಆರ್. ಸಿ. ಅವರು ವಹಿಸಿಕೊಂಡ ಮೇಲೆ ಅವರ ಪರಿಶ್ರಮ, ಕಾರ್ಯನಿಷ್ಠೆ, ಕರ್ತೃತ್ವಶಕ್ತಿ ಮತ್ತು ಸಂಶೋಧನಾ ಸಾಮರ್ಥ್ಯಗಳ ಫಲವಾಗಿ ಅದು ತನ್ನ ಕಾರ್ಯವ್ಯಾಪ್ತಿಯನ್ನು ವರ್ಷವರ್ಷಕ್ಕೂ ವಿಸ್ತರಿಸಿಕೊಳ್ಳುತ್ತ 'ಕನ್ನಡ ಅಧ್ಯಯನ ಪೀಠ'ವಾಗಿ ಅಭಿವೃದ್ಧಿಗೊಂಡು, ಇದೀಗ ತನ್ನದೇ ಆದ ಒಂದು ಕಟ್ಟಡದಲ್ಲಿ ಕಂಗೊಳಿಸುತ್ತಿದೆ.

ಡಾ. ಪಾವಟೆ ಅವರು ಕರ್ನಾಟಕ ವಿಶ್ವವಿದ್ಯಾಲಯದ ಶಿಲ್ಪಿಯಾದರೆ ಆರ್. ಸಿ. ಅವರು ಕನ್ನಡ ಅಧ್ಯಯನಪೀಠದ ಶಿಲ್ಪಿಯಾಗಿದ್ದಾರೆ. ಕನ್ನಡ ಅಧ್ಯಯನಪೀಠದ ಇತಿಹಾಸದಲ್ಲಿ ಅವರದು ಮರೆಯಲಾಗದ ಹೆಸರು.

ಹೀಗೆ ಕನ್ನಡ ಅಧ್ಯಯನಪೀಠ, ಅವರ ಕರ್ತೃತ್ವಶಕ್ತಿಯ ದ್ಯೋತಕವಾಗಿದ್ದರೆ ಅವರ ಸ್ವತಂತ್ರ ಮತ್ತು ಸಂಪಾದಿತ ಕೃತಿಗಳು ಕಾರಯಿತ್ರೀ ಪ್ರತಿಭೆಯ ಸೂಚಕಗಳಾಗಿವೆ. ಪಿಎಚ್. ಡಿ. ವಿದ್ಯಾರ್ಥಿಗಳಿಗೆ ಮಾರ್ಗದರ್ಶಕರಾಗಿ ಅವರು ಮಾಡಿದ ಕಾರ್ಯವೂ ಗಮನಾರ್ಹವಾಗಿದೆ. ಇಲ್ಲಿಯ ವರೆಗೆ ಅವರ ಮಾರ್ಗದರ್ಶನದಲ್ಲಿ ಮೂವತ್ತೊಂಬತ್ತು

ಜನ ವಿದ್ಯಾರ್ಥಿಗಳು ಸಂಶೋಧನ ಪ್ರಬಂಧಗಳನ್ನು ಬರೆದು, ಪಿಎಚ್. ಡಿ. ಪದವಿ ಪಡೆದಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಅವರ ಸಮಕಾಲೀನ ಯಾವ ಪ್ರೊಫೆಸರರ ಮಾರ್ಗದರ್ಶನದಲ್ಲೂ ಇಷ್ಟು ಜನ ವಿದ್ಯಾರ್ಥಿಗಳು ಪಿಎಚ್. ಡಿ. ಪದವಿ ಪಡೆದಿಲ್ಲ. ೧೯೬೪ರಿಂದ ಈಚಿನ ಅವಧಿಯಲ್ಲಿ ಈ ಪ್ರಬಂಧಗಳು ಸಿದ್ಧಗೊಂಡು ವಿಶ್ವವಿದ್ಯಾನಿಲಯದಿಂದ ಸ್ವೀಕೃತವಾಗಿವೆ. ಆದುದರಿಂದ ನಿಜಕ್ಕೂ ಇದೊಂದು ದಾಖಲೆ. ಸಂಶೋಧನಾಕ್ಷೇತ್ರಕ್ಕೆ ಇದೂ ಕೂಡ, ಒಂದು ದೃಷ್ಟಿಯಿಂದ ಅವರು ಸಲ್ಲಿಸಿದ ಸೇವೆಯೇ ಸರಿ.

ಪಿಎಚ್. ಡಿ. ಮಾರ್ಗದರ್ಶನ ಸುಲಭದ ಕಾರ್ಯವಲ್ಲ. ಅದು ಪ್ರಾಧ್ಯಾಪಕನ ಯೋಗ್ಯತೆಯ ಒರೆಗಲ್ಲು. ವಿಷಯದ ಆಯ್ಕೆಯಿಂದ ಮೊದಲುಗೊಂಡು ಪ್ರಬಂಧದ ಶೀರ್ಷಿಕೆ, ಅದರ ಚೌಕಟ್ಟು, ಅದು ಒಳಗೊಳ್ಳಬೇಕಾದ ಅಂಶಗಳು, ಅವುಗಳ ವರ್ಗೀಕರಣ, ವಿಷಯಕ್ಕೆ ಸಂಬಂಧಿಸಿದಂತೆ ಅವಲೋಕನ ಮಾಡಬೇಕಾದ ಬೇರೆಬೇರೆ ಭಾಷೆಗಳಲ್ಲಿಯ ಗ್ರಂಥ, ಶಾಸನ, ಲೇಖನಗಳು, ವಿಷಯ ಸಂಗ್ರಹಣಾವಿಧಾನ, ಸುಸಂಬದ್ಧವಾಗಿ ಸಂಗ್ರಹವಾಗಿ, ಆದರೆ ಸಮಗ್ರವಾಗಿ ಅವನ್ನು ಜೋಡಿಸಿ ಬರೆಯುವ ರೀತಿ–ಹೀಗೆ ಒಂದೇ ಎರಡೇ ಹಲವಾರು ವಿಧವಾಗಿ ಮಾರ್ಗದರ್ಶನ ನೀಡಬೇಕಾಗುತ್ತದೆ. ಕವಿಚರಿತ್ರೆ, ಸಾಹಿತ್ಯಚರಿತ್ರೆ, ಸಾಂಸ್ಕೃತಿಕ ಕೇಂದ್ರಗಳು, ಭಾಷಾಶಾಸ್ತ್ರ, ವ್ಯಾಕರಣ, ಛಂದಸ್ಸು, ಕಾವ್ಯಮೀಮಾಂಸೆ, ಶಾಸನ, ತತ್ವವಿವೇಚನೆ, ಜನಪದ ಸಾಹಿತ್ಯ—ಇತ್ಯಾದಿ ವಿಷಯಗಳಲ್ಲಿ ತಂತಮ್ಮ ಆಸಕ್ತಿ ಅಭಿರುಚಿಗಳಿಗನುಗುಣವಾಗಿ ವಿದ್ಯಾರ್ಥಿಗಳು ಸಂಶೋಧನ ಪ್ರಬಂಧ ಬರೆಯಲಪೇಕ್ಷಿಸುತ್ತಾರೆ. ಈ ಎಲ್ಲ ವಿಷಯಗಳಲ್ಲೂ ಸಮರ್ಥರೀತಿಯಿಂದ ಮಾರ್ಗದರ್ಶನ ಮಾಡಬಲ್ಲ ಪ್ರಾಧ್ಯಾಪಕರು ಬಹಳ ವಿರಳ. ಅಂಥ ವಿರಳ ಪ್ರಾಧ್ಯಾಪಕರಲ್ಲಿ ಡಾ. ಆರ್. ಸಿ. ಅವರೂ ಒಬ್ಬರು. ಅವರ ಮಾರ್ಗದರ್ಶನದಲ್ಲಿ ಸಿದ್ಧಗೊಂಡು ವಿಶ್ವವಿದ್ಯಾನಿಲಯದಿಂದ ಸ್ವೀಕೃತವಾದ ಸಂಶೋಧನಾ ಪ್ರಬಂಧಗಳಲ್ಲಿ ಸುಮಾರು ಹದಿನಾರು ಪ್ರಬಂಧಗಳು ಕವಿ-ಕಾವ್ಯವನ್ನು ಕುರಿತಾಗಿವೆ. ಜೈನ ವೀರಶೈವ ಬ್ರಾಹ್ಮಣ ಕವಿ-ಕೃತಿಗಳನ್ನು ಕುರಿತ ಪ್ರಬಂಧಗಳವು. ಪೊನ್ನನಿಂದ ಮೊದಲುಗೊಂಡು ಮುಧುರಚೆನ್ನರ ವರೆಗೆ ಅವುಗಳ ಕಾಲವ್ಯಾಪ್ತಿ. ಆ ಕೃತಿಗಳು ಚಂಪೂ, ಷಟ್ಪದಿ, ರಗಳೆ, ಸಾಂಗತ್ಯ, ವಚನ ಹಾಗೂ ಗದ್ಯರೂಪದವು. ಈ ಪ್ರಬಂಧಗಳಲ್ಲಿ ಸುಮಾರು ಐದು ಪ್ರಬಂಧಗಳು, ತೌಲನಿಕ ಅಧ್ಯಯನವನ್ನೊಳಗೊಂಡಿವೆ. ಅವುಗಳಲ್ಲಿ ಕೆಲವು, ಕನ್ನಡ ಕೃತಿಕಾರರನ್ನು ಬೇರೆಬೇರೆ ಭಾಷೆಗಳ ಕೃತಿಕಾರರ ಜೊತೆಗೆ ಹೋಲಿಸಿ ನೋಡಿದ ತೌಲನಿಕ ಅಧ್ಯಯನವನ್ನೊಳಗೊಂಡಿರುವುದೊಂದು ವಿಶೇಷ. ಕವಿ–ಕಾವ್ಯವನ್ನು ಕುರಿತ ಕೆಲವು ಪ್ರಬಂಧಗಳು, ಕವಿಚರಿತ್ರೆ ಕಾವ್ಯವಿಮರ್ಶೆಯ ಜೊತೆಗೆ, ಸಮಕಾಲೀನ ರಾಜಕೀಯ, ಭಾಷಿಕ, ಸಾಮಾಜಿಕ ಮತ್ತು ಧಾರ್ಮಿಕ ವಿಷಯಗಳ ಅಧ್ಯಯನವನ್ನೂ ಒಳಗೊಂಡಿವೆ.

ಕನ್ನಡ ಸಾಹಿತ್ಯಚರಿತ್ರೆಯನ್ನು ಕುರಿತು ಸುಮಾರು ಆರು ಪ್ರಬಂಧಗಳು ಸ್ವೀಕೃತವಾಗಿವೆ. ಕವಿರಾಜಮಾರ್ಗ ಪರಿಸರದ ಕನ್ನಡಸಾಹಿತ್ಯಚರಿತ್ರೆಯಿಂದ ಮೊದಲುಗೊಂಡು, ಹೊಸಗನ್ನಡಸಾಹಿತ್ಯದ ಉದಯಕಾಲದ ಚರಿತ್ರೆಯ ವರೆಗೆ—ಪ್ರೌಢದೇವರಾಯ, ಹೊಯ್ಸಳರು, ಕೆಳದಿ ಮೊದಲಾದ ಅರಸು ಮತ್ತು ಅರಸುಮನೆತನಗಳ ಕಾಲದ ಕನ್ನಡ ಸಾಹಿತ್ಯಚರಿತ್ರೆ, ಈ ಪ್ರಬಂಧಗಳಲ್ಲಿ ಬಂದಿದೆ. ಒಂದು ಪ್ರಬಂಧ ಇಡೀ ಸಾಂಗತ್ಯಸಾಹಿತ್ಯದ ಚರಿತ್ರೆಗೆ ಮೀಸಲಾಗಿದೆ. ಕಾವ್ಯಮೀಮಾಂಸೆಗೆ ಸಂಬಂಧಿಸಿದ ಒಂದು ಪ್ರಬಂಧವೂ ಇದೆ.

ಭಾಷಾಶಾಸ್ತ್ರವನ್ನು ಕುರಿತ ಪ್ರಬಂಧಗಳು ಐದು. ಅವುಗಳಲ್ಲಿ ಒಂದು ಮೈಸೂರು-ಧಾರವಾಡ ಕನ್ನಡಗಳ ತೌಲನಿಕ ಅಧ್ಯಯನವನ್ನೊಳಗೊಂಡಿದ್ದರೆ, ಮೂರರಲ್ಲಿ ಒಂದೊಂದು ಪ್ರದೇಶದ ಕನ್ನಡಭಾಷೆಯ ವೈಲಕ್ಷಣ್ಯ ವಿಶೇಷಗಳ ಕೂಲಂಕಷ ಅಧ್ಯಯನ ಭಾಷಾಶಾಸ್ತ್ರೀಯ ದೃಷ್ಟಿಯಿಂದ ನಡೆದಿದೆ. ಒಂದು ಪ್ರಬಂಧ ಸಂಪೂರ್ಣ ಕೇಶಿರಾಜನ ಶಬ್ದಮಣಿದರ್ಪಣಕ್ಕೆ ಮೀಸಲಾಗಿದೆ.

ವ್ಯಾಕರಣವನ್ನು ಕುರಿತ ಪ್ರಬಂಧಗಳಲ್ಲಿ ಒಂದು ವೈಯಾಕರಣಿ ನಾಗವರ್ಮನ ಬಗೆಗೂ ಇನ್ನೊಂದು ವಚನಸಾಹಿತ್ಯದ ವ್ಯಾಕರಣವನ್ನು ಕುರಿತೂ ಇದ್ದರೆ, ಮೂರನೆಯದರಲ್ಲಿ ಶಬ್ದಮಣಿದರ್ಪಣ ಮತ್ತು ಲೀಲಾತಿಲಕಗಳ ತೌಲನಿಕ ಅಧ್ಯಯನವನ್ನು ಕಾಣುತ್ತೇವೆ.

ಬೇರೆಬೇರೆ ಧರ್ಮಗಳ ಮೂಲಭೂತ ತತ್ವಗಳನ್ನೂ ಅವುಗಳ ತಿರುಳನ್ನೂ ಆರ್. ಸಿ. ಅವರು ಬಹಳ ವ್ಯಾಪಕವಾಗಿ ಮತ್ತು ಆಳವಾಗಿ ಅತ್ಯಂತ ಆಸ್ಥೆಯಿಂದ ಅಭ್ಯಸಿಸಿದ್ದಾರೆ. ಅವುಗಳಲ್ಲಿರುವ ಸೂಕ್ಷ್ಮ ಸಾಮ್ಯ-ವೈಷಮ್ಯಗಳನ್ನೂ ಗ್ರಹಿಸಿದ್ದಾರೆ. ವೀರಶೈವ ತತ್ವ ಸಿದ್ಧಾಂತ ಮತ್ತು ಅದರ ಇತಿಹಾಸವಂತೂ ಅವರಿಗೆ ಕರತಲಾಮಲಕ. ವೀರಶೈವದ ಶಿವಯೋಗ, ವಚನಗಳಲ್ಲಿ ಬರುವ ಶಿವಾನುಭವ-ಲೋಕಾನುಭವ ಇತ್ಯಾದಿಗಳನ್ನು ಪ್ರಬಂಧದ ವಿಷಯವಾಗಿ ಆಯ್ದುಕೊಳ್ಳುವಂತೆ ವಿದ್ಯಾರ್ಥಿಗಳಿಗೆ ಪ್ರೇರಣೆ ಕೊಟ್ಟುದರ ಫಲವಾಗಿ, ಎರಡು ಪ್ರಬಂಧಗಳು ಅವರ ಮಾರ್ಗದರ್ಶನದಲ್ಲಿ ಸಿದ್ಧಗೊಂಡು ವಿಶ್ವ ವಿದ್ಯಾಲಯದಿಂದ ಸ್ವೀಕೃತವಾಗಿವೆ.

ನಾಡಿನ ರಾಜಕೀಯ ಇತಿಹಾಸದ ಜೊತೆಗೆ ಅದರ ಸಾಂಸ್ಕೃತಿಕ, ಸಾಹಿತ್ಯಿಕ ಮತ್ತು ಭಾಷಿಕ ಅಧ್ಯಯನಕ್ಕೆ ಶಾಸನಗಳು ವಿಪುಲ ಸಾಮಗ್ರಿಯನ್ನೊದಗಿಸುತ್ತವೆ. ಆದುದರಿಂದ ಶಾಸನಗಳ ಅಧ್ಯಯನದ ಬಗೆಗೂ ಅವರಿಗೆ ವಿಶೇಷ ಆಸಕ್ತಿ. ಕವಿಚರಿತ್ರೆಯನ್ನು ಬರೆಯುವಾಗ ಇತರ ಆಧಾರಗಳ ಜೊತೆಗೆ ಶಾಸನಾಧಾರಗಳನ್ನು ಒದಗಿಸಬೇಕೆಂದೂ ಅದರಿಂದ ಚರಿತ್ರೆಗೆ ನಿಶ್ಚಯವಾಗಿಯೂ ಒಂದು ಖಚಿತತೆ ಬರುತ್ತದೆಂದೂ ವಿದ್ಯಾರ್ಥಿಗಳಿಗೆ ಅವರು ಯಾವಾಗಲೂ ಒತ್ತುಕೊಟ್ಟು ಹೇಳುತ್ತಿರುತ್ತಾರೆ. ಅಲ್ಲದೆ ಶಾಸನಗಳನ್ನೇ ಮುಖ್ಯವಾಗಿಟ್ಟುಕೊಂಡು ಅವುಗಳ ಭಾಷಿಕ ಮತ್ತು ಸಾಹಿತ್ಯಿಕ ಅಧ್ಯಯನ

ಕೈಕೊಳ್ಳುವಂತೆ, ಅವುಗಳನ್ನೇ ಆಧರಿಸಿ ಧಾರ್ಮಿಕ ಮತ್ತು ಸಾಂಸ್ಕೃತಿಕ ಕೇಂದ್ರಗಳ ಇತಿಹಾಸವನ್ನು ಸಂಶೋಧಿಸುವಂತೆ ವಿದ್ಯಾರ್ಥಿಗಳಿಗೆ ಪ್ರೇರಣೆ ಇತ್ತಿದ್ದಾರೆ. ಅಂಥ ಪ್ರೇರಣೆಯ ಫಲವಾಗಿ ಮೂವರು ಆ ದಿಸೆಯಲ್ಲಿ ಪ್ರಯತ್ನಿಸಿ, ಅವರ ಮಾರ್ಗದರ್ಶನ ದಲ್ಲಿಯೇ ಡಾಕ್ಟರೇಟ ಪದವಿ ಪಡೆದಿದ್ದಾರೆ.

ಜನಪದಸಾಹಿತ್ಯದಲ್ಲಿ ಕಾವ್ಯದ ಸ್ವರ್ಣರೇಖೆಗಳು ಮಿನುಗುತ್ತಿರುವಂತೆ, ಜನಪದ ಜೀವನದ ಮಿಡಿತ-ಬಡಿತ-ತುಡಿತಗಳೂ ನಿಕ್ಷೇಪಗೊಂಡಿವೆ ನಮ್ಮ ನಾಡವರ ಸಾಂಸ್ಕೃತಿಕ ಇತಿಹಾಸದ ಪುನರ್‌ನಿರ್ಮಾಣದಲ್ಲಿ ಅಂಥ ಸಾಹಿತ್ಯದ ವಿವಿಧ ಮುಖಗಳ ಸಶಾಸ್ತ್ರೀಯ ಅಧ್ಯಯನ ಆವಶ್ಯಕ. ಇದನ್ನು ಮನಗಂಡ ಆರ್. ಸಿ. ಅವರು ಜನಪದಸಾಹಿತ್ಯ ಕ್ಷೇತ್ರದಲ್ಲೂ ಸಂಶೋಧನೆ ನಡೆಸಲು ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿದ್ದಾರೆ. ತತ್ಫಲ ವಾಗಿ ಜನಪದ ಒಗಟು, ಸಾಮಾಜಿಕ ಕಥನಗೀತೆಗಳನ್ನು ಕುರಿತ ಪ್ರಬಂಧಗಳಿಗೆ ಡಾಕ್ಟರೇಟ ಪದವಿ ದೊರೆತಿವೆ.

ಡಾ. ಆರ್. ಸಿ. ಅವರ ಮಾರ್ಗದರ್ಶನದಲ್ಲಿ ಸಿದ್ಧಗೊಂಡು, ವಿಶ್ವವಿದ್ಯಾನಿಲಯದಿಂದ ಸ್ವೀಕೃತವಾದ ಪ್ರಬಂಧಗಳನ್ನು ವೀಕ್ಷಿಸಿದಾಗ ಅವರ ಬಹುಮುಖ ಪ್ರತಿಭೆ ಯಾರಿಗಾದರೂ ವೇದ್ಯವಾಗದಿರದು. ಕನ್ನಡಸಾಹಿತ್ಯ, ಶಾಸನಸಾಹಿತ್ಯ, ಜನಪದಸಾಹಿತ್ಯ, ತತ್ತ್ವ ಸಾಹಿತ್ಯ, ಶಾಸ್ತ್ರಸಾಹಿತ್ಯ, ಸಾಹಿತ್ಯ ಚರಿತ್ರೆ, ಭಾಷಾಶಾಸ್ತ್ರ– ಹೀಗೆ ಯಾವುದೇ ಕ್ಷೇತ್ರದಲ್ಲಿ ಸಂಶೋಧನ ಮಾಡಬಯಸುವ ವಿದ್ಯಾರ್ಥಿಗಳಿಗೆ ಅವರು ಸಮರ್ಥರೀತಿಯಲ್ಲಿ ಮಾರ್ಗದರ್ಶನ ಮಾಡಬಲ್ಲರು. ಸಂಶೋಧನೆಯ ವಿಷಯ ಮತ್ತು ಸಂಶೋಧನಾ ವಿಧಾನದ ಬಗೆಗೆ ಅವರು ಕೆಲವು ಅಭಿಪ್ರಾಯ ಹೊಂದಿದ್ದಾರೆ[೧] :

ಕವಿಕೃತಿಯ ಕಾವ್ಯಮೌಲ್ಯವನ್ನು ನಿರ್ಧರಿಸುವ ಸಂದರ್ಭದಲ್ಲಿ ಮತೀಯ ಭಾವನೆಗಳು ಕ್ರಿಯಾಪ್ರವೃತ್ತವಾದರೆ, ನಾವು ಕೊಡುವ ನಿರ್ಣಯ ಸರ್ವಸಮ್ಮತವಾಗದು. ಹಿಂದಿನ ವರ ಅಭಿಪ್ರಾಯಗಳನ್ನು ಸಾರಾಸಗಟು ವಿರೋಧಿಸುವುದೂ ಅವರಿಗೆ ಒಪ್ಪಿತವಲ್ಲ. ವಸ್ತುನಿಷ್ಠ ವಿಮರ್ಶೆಯಿದ್ದಲ್ಲಿ ಒಪ್ಪಿಕೊಳ್ಳಬಹುದು. ಇಂದಿನ ವಿವಿಧ ಬಗೆಯ ಸಮಸ್ಯೆ ಗಳಿಗೆ ಪರಿಹಾರವನ್ನಾಗಲೀ, ಉತ್ತರವನ್ನಾಗಲೀ ಪ್ರಾಚೀನಸಾಹಿತ್ಯದಲ್ಲಿ ಹುಡುಕುವ ಸಂಶೋಧಕನ ಪ್ರಯತ್ನ ಅಪೇಕ್ಷಣೀಯವಾದರೂ ಅಂದಂದಿನ ಜನಜೀವನವನ್ನು ಹಿಡಿದು ನಡೆಸುತ್ತಿದ್ದ ನಂಬಿಕೆಗಳು, ಮೌಲ್ಯಾದರ್ಶಗಳು ಅಂದಂದಿಗೆ ಮಾನ್ಯವಾಗಿದ್ದುದರಿಂದ, ಇಂದಿನ ವಿಚಾರಪ್ರಣಾಲಿ ಮತ್ತು ಧೋರಣೆಗಳಿಗೆ ಅವು ಹೊಂದಿಕೊಳ್ಳದಿರುವ ಸಾಧ್ಯತೆಯಿಲ್ಲದಿಲ್ಲ. ಕೆಲವು ವಿಷಯಗಳ ಬಗೆಗೆ ಹೊಂದಾಣಿಕೆ ಕಂಡುಬರಬಹುದಾದರೂ ಒಟ್ಟಿನಲ್ಲಿ ಸಂಶೋಧಕನಿಗೆ ನಿರಾಶೆಯಾಗಲೂಬಹುದು. ಅದಕ್ಕಾಗಿ ಇಡೀ ಪ್ರಾಚೀನ ಸಾಹಿತ್ಯವನ್ನು ತೆಗಳುವುದು ಸಲ್ಲ. ಅದಕ್ಕಿರುವ ಬೆಲೆ ಅದಕ್ಕಿದ್ದೇ ಇದೆ. ಆದುದರಿಂದ ಸಂಶೋಧನ ವಿದ್ಯಾರ್ಥಿ ಬಹಳ ಎಚ್ಚರಿಕೆಯಿಂದ ಒಂದು ನಿರ್ಣಯಕ್ಕೆ ಬರಬೇಕಾಗುತ್ತದೆ.

೧. ಸ್ವತಃ ಅವರನ್ನು ಭೆಟ್ಟಿಯಾಗಿ ತಿಳಿದುಕೊಂಡ ಮಾತುಗಳಿವು.

ಕೃತಿಕಾರನ ಜೀವನಚರಿತ್ರೆ, ಕೃತಿಯ ಮೌಲ್ಯಮಾಪನ, ಅದು ಗರ್ಭೀಕರಿಸಿಕೊಂಡಿರುವ ಸಮಾಜಚಿತ್ರಣ, ತತ್ತ್ವವಿವೇಚನಾದಿಗಳನ್ನು ಹುಡುಕಿ ಹೊರಗೆಡಹುವುದು ಸಂಶೋಧಕನ ಕರ್ತವ್ಯ, ಆ ದಿಶೆಯಲ್ಲಿ ಕಾರ್ಯ ನಡೆಯಬೇಕು. ಆದರೆ ಅದಕ್ಕಿಂತ ಮುಖ್ಯವಾದುದು ತೌಲನಿಕ ಅಧ್ಯಯನ. ಒಂದೇ ವಸ್ತು ಇಲ್ಲವೆ ವಿಷಯವನ್ನು ಕುರಿತು, ಒಂದೇ ಭಾಷೆಯಲ್ಲಿ ಇಲ್ಲವೆ ಬೇರೆಬೇರೆ ಭಾಷೆಗಳಲ್ಲಿ ಕೃತಿಗಳು ರಚನೆಗೊಂಡಿರುತ್ತವೆ. ಅವುಗಳ ತುಲನಾತ್ಮಕ ಅಧ್ಯಯನ ಕೈಕೊಂಡಾಗ ಆಯಾ ಕೃತಿಕಾರರ ವಿಶೇಷತೆಗಳ, ಧನ-ಋಣಗಳ ನಿಷ್ಕರ್ಷೆ ಸಾಧ್ಯವಾಗುತ್ತದೆ. ಅವರವರ ಹೂರಣ ಹೊರಬೀಳುತ್ತದೆ. ಈ ದಿಶೆಯಲ್ಲಿ ಸಂಶೋಧನೆಗೆ ಇನ್ನೂ ಸಾಕಷ್ಟು ಅವಕಾಶವಿದೆಯೆಂದು ಅವರ ಅಭಿಪ್ರಾಯ. ಈ ಕಾರ್ಯ ಕೈಕೊಳ್ಳಲು ಸಂಶೋಧಕನು ಬಹುಭಾಷೆಗಳನ್ನು ಅದರಲ್ಲೂ ಮುಖ್ಯವಾಗಿ ಸಂಸ್ಕೃತ, ಇಂಗ್ಲಿಷ್ ಮತ್ತು ಪ್ರಮುಖ ದ್ರಾವಿಡಭಾಷೆಗಳನ್ನು ಬಲ್ಲವನಾಗಿರಬೇಕು.

ಸಂಶೋಧನ ಪ್ರಬಂಧಕ್ಕೆ ಬೆಲೆ ಬರುವದು ಅದರ ಗಾತ್ರದಿಂದಲ್ಲ, ಅದು ಒಳಗೊಂಡಿರುವ ತಿರುಳಿನಿಂದ. ಆದುದರಿಂದ ಬೇರೆಯವರ ಅಭಿಪಾಯಗಳನ್ನೇ ಉದ್ದಕ್ಕೂ ಉದ್ಧರಿಸುತ್ತ ಹೋಗದೆ, ಅವರ ನಿರ್ಣಯಗಳನ್ನು ಅಥವಾ ಅವರ ಅಭಿಪ್ರಾಯದ ಸಾರವನ್ನು ಒಂದೆರಡು ವಾಕ್ಯಗಳಲ್ಲಿ ಅಡಕಗೊಳಿಸಿ, ಅಡಿಟಿಪ್ಪಣಿಯಲ್ಲಿ ಗ್ರಂಥದ ಹೆಸರು, ಪುಟ ಮೊದಲಾದವನ್ನು ಸೂಚಿಸಬೇಕು. ಅವರ ನಿರ್ಣಯ ಒಪ್ಪಿತವಾಗಲಿ ಆಗದಿರಲಿ ಎರಡಕ್ಕೂ ಕಾರಣ ಮತ್ತು ಆಧಾರ ಕೊಡಬೇಕು. ಆಗ ಪ್ರಬಂಧಕ್ಕೆ ಸ್ವಂತಿಕೆ ಪ್ರಾಪ್ತವಾಗುವದರ ಜೊತೆಗೆ ಅದರ ಗಾತ್ರವೂ ಕಡಿಮೆಯಾಗಲು ಸಾಧ್ಯವಾಗುತ್ತದೆ. ಒಟ್ಟಿನಲ್ಲಿ ಸ್ವಂತ ಅಭಿಪ್ರಾಯ ಸ್ವಂತ ನಿರ್ಣಯಗಳಿಂದ ಪ್ರಬಂಧದ ಮೌಲಿಕತೆ ಹೆಚ್ಚುತ್ತದೆ. ಇದಕ್ಕೆ ವ್ಯಾಪಕ ಮತ್ತು ಕೂಲಂಕಷ ಅಧ್ಯಯನದ ಜೊತೆಗೆ ನಿರ್ಣಯ ಕೈಕೊಳ್ಳುವ ಕೌಶಲವೂ ಬೇಕು.

ವಿಷಯ ಸಂಗ್ರಹಣೆಗೆ ತೊಡಗಿದ ಸಂಶೋಧನ ವಿದ್ಯಾರ್ಥಿ, ಮೂಲಗ್ರಂಥಗಳನ್ನು ಕೈಮುಟ್ಟಿ ಹಿಡಿದು, ಕಣ್ಮುಟ್ಟಿ ನೋಡಿ ಟಿಪ್ಪಣಿ ಮಾಡಿಕೊಳ್ಳಬೇಕೆಂದು ಅವರು ಒತ್ತಿ ಕೊಟ್ಟು ಹೇಳುತ್ತಾರೆ. ಇನ್ನೊಬ್ಬರ ಉದ್ಧರಣೆಯನ್ನೇ ಪ್ರಮಾಣವಾಗಿ ಭಾವಿಸಿದಾಗ, ಕೆಲವುಸಲ ತಪ್ಪುಗಳಾಗುವುದೂ ಉಂಟು. ಹಾಗಾದುದಕ್ಕೆ ಉದಾಹರಣೆಗಳೂ ಇವೆ. ಆದುದರಿಂದ ಇನ್ನೊಬ್ಬರ ಉದ್ಧರಣೆಗಳನ್ನು ಸ್ವೀಕರಿಸುವಾಗ ಎಚ್ಚರಿಕೆ ಅಗತ್ಯವೆಂದು ಅವರ ಅಭಿಪ್ರಾಯ. ಟಿಪ್ಪಣಿಗಳನ್ನು ಸಂಗ್ರಹಿಸುವಾಗ ತಮಗೆ ಅನುಕೂಲಕರವಾದ ವಿಧಾನವನ್ನು ಅನುಸರಿಸಲು ವಿದ್ಯಾರ್ಥಿಗಳಿಗೆ ಸ್ವಾತಂತ್ರ್ಯವಿದ್ದರೂ ಕಾರ್ಡಸಿಸ್ಟಮ್ ಹೆಚ್ಚು ಉಪಯುಕ್ತವೆಂದು ಅವರ ಭಾವನೆ. ಅದರಿಂದ ಒಂದು ವಿಷಯಕ್ಕೆ ಸಂಬಂಧಿಸಿದ ಅಂಶಗಳೆಲ್ಲ ಒಂದೆಡೆ ದೊರೆತು, ಅವೆಲ್ಲವನ್ನು ವ್ಯವಸ್ಥಿತಗೊಳಿಸಿ ಒಂದು ರೂಪ ಕೊಡಲು ಸುಲಭಸಾಧ್ಯವಾಗುತ್ತದೆ. ಸಮಯದ ಉಳಿತಾಯವೂ ಆಗುತ್ತದೆಂದು ಅವರ ನಂಬಿಕೆ.

ಪಿಎಚ್. ಡಿ. ವಿದ್ಯಾರ್ಥಿಗಳ ಆಯ್ಕೆಯ ಬಗೆಗೂ ಆರ್. ಸಿ. ಅವರು ಕೆಲವು ಅಭಿಪ್ರಾಯಗಳನ್ನು ಹೊಂದಿದ್ದಾರೆ. ಅದೇ ಆಗ ಎಂ. ಎ. ಪದವಿ ಪಡೆದವನನ್ನು ಸಂಶೋಧನ ವಿದ್ಯಾರ್ಥಿಯಾಗಿ ತೆಗೆದುಕೊಳ್ಳುವುದರಲ್ಲಿ ಕೆಲವು ಅನಾನುಕೂಲತೆಗಳಿವೆ. ಅವನು ಎಷ್ಟೇ ಜಾಣನಾಗಿದ್ದರೂ ಅವನಿಗೆ ಸಂಶೋಧನಾವಿಧಾನದ ಪರಿಚಯು ತೀರ ಕಡಿಮೆ. ವಿಷಯ ಸಂಗ್ರಹ ಮಾಡುವ ರೀತಿ, ಟಿಪ್ಪಣಿ ತೆಗೆದುಕೊಳ್ಳುವ ವಿಧಾನ, ಅವುಗಳನ್ನು ಜೋಡಿಸುವ ಬಗೆ, ತದನಂತರ ಅವುಗಳಿಗೊಂದು ರೂಪಕೊಟ್ಟು, ನಿರ್ಣಯ ಕೈಕೊಳ್ಳುವದಕ್ಕೆ ಬೇಕಾಗುವ ಅಭ್ಯಾಸ–ಅನುಭವಗಳ ಬಲ ಅವನಿಗಿರುವುದಿಲ್ಲ. ಇವೆಲ್ಲವುಗಳ ಬಗೆಗೆ ತರಬೇತಿ ಅವಶ್ಯ. ಆದುದರಿಂದ ಎಂ. ಫಿಲ್. ಆದಮೇಲೆ, ಪಿಎಚ್. ಡಿ. ಗಾಗಿ ವಿದ್ಯಾರ್ಥಿಗಳನ್ನು ತೆಗೆದುಕೊಳ್ಳುವುದು ಮೇಲು. ಎಂ. ಎ. ತರಗತಿಯಲ್ಲಿ ಅಭ್ಯಾಸ ಮಾಡುತ್ತಿರುವಾಗಲೇ ಸಂಶೋಧನಾವಿಧಾನಗಳನ್ನು ಕೆಲವು ಜನ ವಿದ್ಯಾರ್ಥಿಗಳು, ತಮ್ಮ ಪ್ರೊಫೆಸರರ ಸಾನಿಧ್ಯ ಸಂಪರ್ಕಗಳಿಂದ ಪಡೆದಿರುವ ಸಾಧ್ಯತೆಯೂ ಇದೆ. ಅಂಥ ಜಾಣ ವಿದ್ಯಾರ್ಥಿಗಳನ್ನು ಎಂ. ಎ. ಪರೀಕ್ಷೆ ಪಾಸಾದ ಕೂಡಲೆ, ಪಿಎಚ್. ಡಿ. ವಿದ್ಯಾರ್ಥಿಯೆಂದು ತೆಗೆದುಕೊಳ್ಳಬಹುದು. ಆದರೆ ಅಂಥವರು ಬಹಳ ವಿರಳ. ನಾಲ್ಕೈರುವರ್ಷ ಕಾಲೇಜು ಇಲ್ಲವೆ ವಿಶ್ವವಿದ್ಯಾನಿಲಯಗಳಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿದ ಪ್ರಾಧ್ಯಾಪಕರ ಅಭ್ಯಾಸವ್ಯಾಪ್ತಿ ವಿಸ್ತಾರಗೊಂಡಿರುತ್ತದೆ, ಸಂಶೋಧನ ಮತ್ತು ವಿಮರ್ಶನ ವಿಧಾನದ ಪರಿಚಯುವೂ ಅವರಿಗಾಗಿರುತ್ತದೆ. ಅಂಥವರನ್ನು ಪಿಎಚ್. ಡಿ. ವಿದ್ಯಾರ್ಥಿಯಾಗಿ ಸ್ವೀಕರಿಸಬಹುದು.

ತಮ್ಮ ಮಾರ್ಗದರ್ಶನದಲ್ಲಿ ಸಂಶೋಧನೆ ಕೈಕೊಂಡ ವಿದ್ಯಾರ್ಥಿಗಳ ಬಗೆಗೆ ಆರ್. ಸಿ. ಅವರು ತೋರುವ ಆಸಕ್ತಿ. ನೀಡುವ ಧೈರ್ಯ, ಕೊಡುವ ಪ್ರೋತ್ಸಾಹ, ಮಾಡುವ ಸಹಾಯಗಳನ್ನು ಅವರ ವಿದ್ಯಾರ್ಥಿಯಾದ ನಾನು ಅನುಭವಿಸಿ ಬಲ್ಲೆ. ಸಂಶೋಧನಾ ಪ್ರಬಂಧದ ಚೌಕಟ್ಟು ಇಂತಿರಬೇಕೆಂದು, ವಿದ್ಯಾರ್ಥಿಯ ಜೊತೆ ಚರ್ಚಿಸಿ ಒಂದು ನಿರ್ಣಯಕ್ಕೆ ಬರುತ್ತಾರೆ. ಆಮೇಲೆ ಪರಿಶೀಲಿಸಬೇಕಾದ ಗ್ರಂಥಗಳ ಒಂದು ಪಟ್ಟಿ ಕೊಟ್ಟು ಅವನ್ನು ಓದಿ ಪ್ರಬಂಧದ ಒಂದು ಭಾಗಕ್ಕೆ ಸಂಬಂಧಿಸಿದಂತೆ ಬರೆದುಕೊಂಡು ಬರಲು ತಿಳಿಸುತ್ತಾರೆ. ವಿದ್ಯಾರ್ಥಿ ಆ ಪ್ರಕಾರ ಬರೆದುಕೊಂಡು ಹೋದಾಗ ಅದನ್ನು ಸ್ವಸ್ಥ ಚಿತ್ತದಿಂದ ಓದಿ ಸೇರಿಸಬೇಕಾದ, ಬಿಡಬೇಕಾದ ಅಂಶಗಳನ್ನು ಸೂಚಿಸುತ್ತಾರೆ. ಹೀಗೆ ಎರಡು ಮೂರು ಸಲ ನೋಡಿ, ವಿದ್ಯಾರ್ಥಿ ಹಾದಿ ಹಿಡಿದಿದ್ದಾನೆ. ಇನ್ನು ಅಡ್ಡಿಯಿಲ್ಲ ಎಂಬುದು ಮನವರಿಕೆಯಾದ ಮೇಲೆ, ಮತ್ತೆಮತ್ತೆ ಅವನಿಗೆ ಬರಲು ಹೇಳದೆ, ಒಂದೊಂದು ಅಧ್ಯಾಯವನ್ನು ಬರೆದು ಮುಗಿಸಿದ ಮೇಲೆ ಕಾಣುವಂತೆ ಹೇಳುತ್ತಾರೆ. ವಿದ್ಯಾರ್ಥಿಗಳನ್ನು ಮನೆಗೆ ಬರುವಂತೆ ತಿಳಿಸುವುದೇ ಹೆಚ್ಚು. ಆಫೀಸಿನ ನೂರೆಂಟು ಕೆಲಸಗಳನ್ನು ಪೂರೈಸಿ ದಣಿದು ಮನೆಗೆ ಬಂದಾಗ, ಅಲ್ಲಿ ತಮ್ಮ ವಿದ್ಯಾರ್ಥಿಯನ್ನು ಕಂಡು ಅವರ ಮುಖದಲ್ಲಿ ನಗೆ ಅರಳುತ್ತದೆ. ವಿದ್ಯಾರ್ಥಿಯ ಭೀತಿ ದೂರವಾಗು

ಪ್ಪವರ ಜೊತೆಗೆ. ಅವರ ದೇವ್ರೂ ಮಾಯವಾಗುತ್ತದೆ. ಹತ್ತು ಹದಿನೈದು ನಿಮಿಷ ಗಳಲ್ಲಿ ಚಹಾಪಾನ ಮುಗಿಸುತ್ತಾರೆ. ವಿದ್ಯಾರ್ಥಿಗೂ ಚಹಾಪಾನದ ಆತಿಥ್ಯ. ಸರಿ, ವಿದ್ಯಾರ್ಥಿ ಬರೆದು ತಂದುದನ್ನು ಓದಲು ಆರಂಭಿಸಿದರೆ ಸಮಯದ ಪ್ರಜ್ಞೆಯೇ ಅವ ರಿಗೆ ಉಳಿಯುವುದಿಲ್ಲ. ರಾತ್ರಿ ಹನ್ನೆರಡರ ವರೆಗೆ, ಪ್ರಬಂಧದ ಬಗೆಗೆ ಚರ್ಚಿಸಿದ ಅನು ಭವ ನನಗಿದೆ. ಹಾಗೆ ಕೂಡುವುದು ಸಾಧ್ಯವಾಗದಿದ್ದರೆ, ಮುಂಜಾನೆ ನಸುಕಿನ ೫ ಗಂಟೆಗೇ ಬರಲು ನನಗೆ ಹೇಳಿದ್ದುಂಟು. ವಿದ್ಯಾರ್ಥಿ, ಹೊಸ ವಿಷಯವೊಂದನ್ನು ಸಂಶೋಧಿಸಿದಾಗ ಅವರಿಗಾಗುವ ಸಂತಸ ವರ್ಣನಾತೀತ. ತಮ್ಮ ವಿದ್ಯಾರ್ಥಿಗಳು ಸಂಶೋಧನಾಕಾರ್ಯದಲ್ಲಿ ಸೋಮಾರಿತನ ತೋರಿದಾಗ, ಸಿಟ್ಟಿಗೆದ್ದು ಗದರುವುದೂ ಉಂಟು. ಆದರೆ ಅದು ಕ್ಷಣಿಕ. ಮರುಕ್ಷಣವೇ ತಿಳಿ ಹೇಳಿ ಬೆನ್ನು ಚಪ್ಪರಿಸಿ, ಕಾರ್ಯ ಪ್ರವೃತ್ತರಾಗಲು ಸೂಚಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಅವರ ಕಳಕಳಿ, ಒಳ್ಳೆಯ ದಾಗಲೆಂಬ ಮಾನವೀಯತೆ ಎದ್ದು ಕಾಣುತ್ತದೆ. ಪಾಂಡಿತ್ಯ–ಮಾನವೀಯತೆಗಳೆರಡೂ ಏಕೀಭವಿಸಿದ ವ್ಯಕ್ತಿತ್ವ, ಅವರದು.

ಡಾ. ಆರ್. ಸಿ. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಗೊಂಡು, ವಿಶ್ವವಿದ್ಯಾ ಲಯದಿಂದ ಸ್ವೀಕೃತವಾದ ಪಿಎಚ್. ಡಿ. ಪ್ರಬಂಧಗಳು :

**ಕವಿ-ಕಾವ್ಯಗಳು :**

ನೇಮಿಚಂದ್ರ : ಕವಿ-ಕಾವ್ಯ ವಿಮರ್ಶೆ — ಬಿ. ಎಸ್. ಕುಲಕರ್ಣಿ ೧೯೬೭
ಕುಮಾರವ್ಯಾಸನ ಪಾತ್ರಸೃಷ್ಟಿ — ಎಲ್. ಆರ್ ಹೆಗಡೆ ೧೯೬೮
ಸಿದ್ಧರಾಮ ಶಿವಯೋಗಿ : ಜೀವನ, ಸಾಹಿತ್ಯ,
ತತ್ತ್ವಜ್ಞಾನಗಳ ವಿಮರ್ಶಾತ್ಮಕ ಅಧ್ಯಯನ — ಎಂ. ಬಿ. ಕೊಟ್ರಶೆಟ್ಟಿ ೧೯೬೮
Vaḍḍārādhane : Study of Religious,
Social, Literary & Linguistic aspects— ಬಿ. ಕೆ. ಖಡಬಡಿ ೧೯೬೯
ಕನಕದಾಸರು ಮತ್ತು ಅವರ ಕೃತಿಗಳು — ಎಸ್. ಎ. ಪುರೋಹಿತ ೧೯೬೯
ಹರಿಹರನ ವ್ಯಕ್ತಿತ್ವ ಹಾಗೂ ಕವಿತ್ವ — ಬಿ. ಬಿ. ಹೆಂಡಿ ೧೯೭೧
ಕವಿಚಕ್ರವರ್ತಿ ಪೊನ್ನ ಮತ್ತು ಅವನ ಕೃತಿಗಳು — ಎಮ್. ಆರ್. ಉಮಾದೇವಿ ೧೯೭೩
ಕನ್ನಡಸಾಹಿತ್ಯದಲ್ಲಿ ಅಲ್ಲಮಪ್ರಭುದೇವ — ಎಸ್. ಎಂ. ವೃಷಭೇಂದ್ರಸ್ವಾಮಿ ೧೯೭೫
ನಯಸೇನ ಮತ್ತು ಅವನ ಕೃತಿಗಳು — ಬಿ. ವ್ಹಿ. ಮಲ್ಲಾಪುರ ೧೯೭೫
ಕುಮಾರವಾಲ್ಮೀಕಿ ವಿರಚಿತ
ತೊರವೆ ರಾಮಾಯಣ — ಎಸ್. ಎಸ್. ಬ್ಯಾತನಾಳ ೧೯೭೫
ಮಧುರಚೆನ್ನರ ಜೀವನ ಹಾಗೂ ಕೃತಿಗಳ ಸಮೀಕ್ಷೆ — ಜಿ. ಎಸ್. ಕಾಪಸೆ ೧೯೭೫

ಗಳಗನಾಥರು ಮತ್ತು ಅವರ ಕಾದಂಬರಿಗಳು — ಕೆ. ಎ. ಕಿತ್ತೂರ ೧೯೭೫
ಹರಿಹರನ ಸ್ತ್ರೀಪಾತ್ರಗಳು — ಬಿ. ಸಿ. ಜವಳಿ ೧೯೭೮

**ತೌಲನಿಕ ಅಧ್ಯಯನ :**

ಮಹಾದೇವಿಯಕ್ಕ ಮತ್ತು ಕಾರಿಕಾಲಮ್ಮೆ :
ತೌಲನಿಕ ವಿವೇಚನೆ — ಎಂ. ಎಸ್. ಲತ್ಮೆ ೧೯೭೯
ವೇಮನ ಮತ್ತು ಸರ್ವಜ್ಞ : ಒಂದು ತುಲನಾತ್ಮಕ
ಅಧ್ಯಯನ — ಜಿ. ಅಪ್ಪಾರಾವ್ ೧೯೭೦
Mahabharata and Variations :
Perundeyanar, Pampa and
Nannayya — ಕೆ. ವೆಂಕಟೇಶ ಆಚಾರ್ಯ ೧೯೭೯
ಅಂಬಿಕಾತನಯದತ್ತರ ಭಾವಗೀತೆಗಳು — ಆರ್. ಕೆ. ಪರ್ವತಿ ೧೯೭೯

**ಕನ್ನಡ ಸಾಹಿತ್ಯಚರಿತ್ರೆ :**

ಕವಿರಾಜಮಾರ್ಗ ಪರಿಸರದ ಕನ್ನಡಸಾಹಿತ್ಯ — ಎಂ. ಎಂ. ಕಲಬುರ್ಗಿ ೧೯೭೦
ಕೆಳದಿಯ ಅರಸರು ಮತ್ತು ಕನ್ನಡಸಾಹಿತ್ಯ — ಎಸ್. ಎಸ್. ಮರುಳಯ್ಯ೧೯೭೦
ಪ್ರೌಢದೇವರಾಯನ ಕಾಲದ ಕನ್ನಡಸಾಹಿತ್ಯ — ಎಸ್. ಜಿ. ವಿರಕ್ತಮಠ ೧೯೭೧
ಹೊಸಗನ್ನಡಸಾಹಿತ್ಯದ ಉದಯಕಾಲ — ಆರ್. ವಾಯ್. ಧಾರವಾಡಕರ
೧೯೭೩
ಹೊಯ್ಸಳರ ಕಾಲದ ಕನ್ನಡಸಾಹಿತ್ಯ — ಜಿ. ಟಿ. ಹಿರೇಮಠ ೧೯೭೪
ಕನ್ನಡದಲ್ಲಿ ಸಾಂಗತ್ಯಸಾಹಿತ್ಯ — ವ್ಹಿ. ಬಿ. ರಾಜೂರ ೧೯೭೭

**ವ್ಯಾಕರಣ, ಭಾಷಾಶಾಸ್ತ್ರ, ಕಾವ್ಯಮೀಮಾಂಸೆ :**

Mysore and Dharwar Kannada :
A Comparative Linguistic Study — ಎಚ್. ಆರ್. ರಂಗನಾಥ ೧೯೬೪
A Grammar of Vachana Literature — ಬಿ ಬಿ. ಪುರೋಹಿತ ೧೯೬೫
Havyaka Dialect of North Kanara — ಕೆ. ಜಿ. ಶಾಸ್ತ್ರಿ ೧೯೬೬
Kesiraja's Sabdamani Darpana :
A Linguistic Analysis — ಜೆ. ಎಸ್. ಕುಳ್ಳಿ ೧೯೭೧
ವೈಯಾಕರಣಿ ಎರಡನೆಯ ನಾಗವರ್ಮ — ಎಸ್. ಎಂ. ಬಿರಾದಾರ ೧೯೭೪
ಶಬ್ದಮಣಿದರ್ಪಣ-ಲೀಲಾತಿಲಕಂ :
ಒಂದು ತೌಲನಿಕ ಅಧ್ಯಯನ — ಬಿ. ಕೆ. ತಿಮ್ಮಪ್ಪ ೧೯೭೬
Christian Konkani of South
Kanara — ವಿಲ್ಯಂ ಮಾಡ್ತಾ ೧೯೭೬

**ವೀರಶೈವ ತತ್ವಸಾಹಿತ್ಯ :**



**ಶಾಸನ, ಸಂಸ್ಕೃತಿ :**



**ಜನಪದಸಾಹಿತ್ಯ :**



■ ■

# ಕನ್ನಡ ಅಧ್ಯಯನಪೀಠದ ಶಿಲ್ಪಿ : ಆರ್. ಸಿ. ಹಿರೇಮಠರು

□□□□□□□□□□□□□□□□□□

ಎಸ್. ಎಂ. ವೃಷಭೇಂದ್ರಸ್ವಾಮಿ

□□□□□□□□□□□□□□□□□□

ಕರ್ನಾಟಕ ವಿಶ್ವವಿದ್ಯಾಲಯ ಕನ್ನಡಿಗರ ದೇಶಾಭಿಮಾನ ಹಾಗೂ ಭಾಷಾಭಿಮಾನದ ಹೆಮ್ಮೆಯ ಸಂಕೇತ. ಕನ್ನಡ ಸಂಸ್ಕೃತಿ, ಧರ್ಮ, ಭಾಷೆ, ಇತಿಹಾಸ, ಸಾಹಿತ್ಯಗಳ ಪುನರುಜ್ಜೀವನವೇ ಪ್ರಮುಖ ಗುರಿಯಾಗಿ ಮೂಡಿಬಂದಿರುವ ಈ ವಿಶ್ವವಿದ್ಯಾಲಯದ ಹೃದಯ ಕನ್ನಡ ಅಧ್ಯಯನಪೀಠ. ಉತ್ತರಕರ್ನಾಟಕದ ಜಿಲ್ಲೆಗಳ ಕನ್ನಡಾಭಿಮಾನ ವಿಕಾಸದ, ಹೋರಾಟದ ಇತಿಹಾಸವೇ ಕನ್ನಡ ಅಧ್ಯಯನಪೀಠದ ಇತಿಹಾಸವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳೆಲ್ಲ ಕನ್ನಡಿಗರು, ಅವರೆಲ್ಲರ ಅಭಿಮಾನದ, ನಿಷ್ಠೆಯ, ಕ್ರಿಯಾಶೀಲತೆಯ ಪರಿಣಾಮ ಈ ವಿಶ್ವವಿದ್ಯಾಲಯ. ಈ ಕನ್ನಡ ಅಧ್ಯಯನಪೀಠ. ಕನ್ನಡಪ್ರಾಚಾರ್ಯ, ಪ್ರಾಧ್ಯಾಪಕರೆಲ್ಲರ ನಿರಂತರ ದುಡಿಮೆ, ಅಭಿಮಾನ. ಆದರ್ಶಗಳು ಈ ಪೀಠದ ಬುನಾದಿ. ಸಾವಿರದ ಸಂಖ್ಯೆಯಲ್ಲಿ ಬೆಳೆದುಬಂದಿರುವ ಕನ್ನಡ ವಿದ್ಯಾರ್ಥಿಗಳ ಪರಂಪರೆ, ಅವರ ಸಾಧನೆಗಳ, ಕನಸುಗಳ ಕೇಂದ್ರ ಈ ಅಧ್ಯಯನ ಪೀಠ. ವಿಶ್ವವಿದ್ಯಾಲಯದಲ್ಲಿಯೇ ಅತಿ ದೊಡ್ಡ ವಿಭಾಗವಾಗಿ, ಧರ್ಮ–ಸಂಸ್ಕೃತಿ–ಸಾಹಿತ್ಯ—ಭಾಷೆ—ಸಂಶೋಧನೆ– ಈ ಅಧ್ಯಯನದ ಪ್ರಾತಿನಿಧಿಕಸಂಸ್ಥೆಯಾಗಿ, ತನ್ನದೇ ಆದ ಭವ್ಯಭವನವನ್ನು ಪಡೆದ ವಿಭಾಗವಾಗಿ, ನಾಡಿನಲ್ಲಿ ಕೀರ್ತಿಯನ್ನು ಸಂಪಾದಿಸಿರುವ ಈ ಕನ್ನಡ ಅಧ್ಯಯನಪೀಠದ ಶಿಲ್ಪಿ ಡಾ. ಆರ್. ಸಿ. ಹಿರೇಮಠ ಅವರು. ಬಾಲ್ಯದಿಂದಲೇ ಇಂಥ ಸಂಸ್ಥೆಯೊಂದರ ಕನಸು ಕಂಡು, ಕನ್ನಡ ಸಾಹಿತ್ಯ–ಸಂಸ್ಕೃತಿಗಳ ಕಟ್ಟಾಭಿಮಾನಿ ಪ್ರಾಚಾರ್ಯರಾಗಿ, ಹೋರಾಟಮಾಡಿ, ಅಪ್ರತಿಹತವಾಗಿ ದುಡಿದು, ಸಮರ್ಥ ಕುಲಪತಿಯಾಗಿ ಕನ್ನಡದ ಸ್ಥಾನ-ಮಾನಗಳನ್ನು ಎತ್ತರಿಸಿ, ಅಭಿಮಾನವನ್ನು ಅರಳಿಸಿ, ಈ ಎಲ್ಲ ಸಾಧನೆಗಳ ಹೆಮ್ಮೆಯ ಸಂಕೇತವಾಗಿರುವ ಕನ್ನಡ ಅಧ್ಯಯನಪೀಠದ ಶಿಲ್ಪಿ ಡಾ. ಆರ್. ಸಿ. ಹಿರೇಮಠ ಅವರು ಎಂಬುದು ಐತಿಹಾಸಿಕಸತ್ಯ. ಕರ್ನಾಟಕ

ವಿಶ್ವವಿದ್ಯಾಲಯವೆಂದ ಕೂಡಲೇ ಅದರ ಮಹಾಶಿಲ್ಪಿ ಡಾ. ಡಿ. ಸಿ. ಪಾವಟೆಯವರ ನೆನಪು ಬರುವಂತೆ, ಡಾ. ಆರ್. ಸಿ. ಹಿರೇಮಠರ ನೆನಪು ಬಂದಾಗಲೆಲ್ಲ ಕನ್ನಡ ಅಧ್ಯಯನ ಪೀಠ ಕಣ್ಣೆದುರಿಗೆ ನಿಲ್ಲುತ್ತದೆ. ಇದು ಡಾ. ಆರ್. ಸಿ. ಅವರ ಸಾಧನೆಗಳಲ್ಲಿ ಮಹತ್ವದ ಸಾಧನೆ.

ಕುಲಪತಿ ಹುದ್ದೆಯಿಂದ ನಿವೃತ್ತರಾಗಿ ಮತ್ತೆ ಕನ್ನಡಪ್ರಾಚಾರ್ಯ ಸ್ಥಾನವನ್ನು ವಹಿಸಿ ಕೊಂಡು ಎಂದಿನಂತೆ ಗ್ರಂಥಸಂಪಾದನೆಯ ಕಾರ್ಯವನ್ನು ಹಮ್ಮಿಕೊಂಡು, ಕಾರ್ಯ ತತ್ಪರರಾಗಿದ್ದರು, ಡಾ. ಆರ್. ಸಿ ಒಂದು ದಿನ ಬೆಳಿಗ್ಗೆ ಅವರನ್ನು ಭೇಟಿಯಾಗಲು ಸಪ್ತಾಪುರದಲ್ಲಿರುವ ಅವರ ಸ್ವಂತ ಮನೆಗೆ ಹೋಗಿದ್ದೆ. ಆಗ ತಾನೇ ಬೆಳಗಿನ ವಾಯು ವಿಹಾರ ಮುಗಿಸಿ ಬಂದಿದ್ದರು. ವಿಶ್ವವಿದ್ಯಾಲಯದ ಅತ್ಯುನ್ನತ ಪದವಿಯಿಂದ ನಿವೃತ್ತರಾದ ಪ್ರೊಫೆಸರರ ಮುಖದ ಮೇಲೆ ತೃಪ್ತಿಯ, ಸಮಭಾವದ ಕಳೆ ಇತ್ತು. ಕುಲಪತಿ ಹುದ್ದೆಯನ್ನು ವಹಿಸಿಕೊಂಡ ಪ್ರಥಮದಿನವೂ ಅವರನ್ನು ಕಂಡಿದ್ದೆ. ಅಂದು ಕಂಡ ಉತ್ಸಾಹದ, ಉಲ್ಲಾಸದ, ಕಾರ್ಯೋನ್ಮುಖತೆಯ ಸಮಚಿತ್ತದ ಮೂರ್ತಿಯನ್ನು ಇಂದೂ ಕಂಡೆ. ಸಹಜವಾಗಿ, ಕುಲಪತಿಯ ಸಾಧನೆಗಳತ್ತ ಮಾತು ಹೊರಳಿತು. ವಿಶ್ವವಿದ್ಯಾಲಯದ ಆಗು–ಹೋಗುಗಳ ಬಗೆಗೆ ಪ್ರಸ್ತಾಪ ಮಾಡುತ್ತಾ "ಕುಲಪತಿ ಯಾಗಿ ಏನೆಲ್ಲ ಸಾಧನೆಗಳನ್ನು ಮಾಡಿದ ತೃಪ್ತಿ ನನಗಿದೆ, ಅವೆಲ್ಲವುಗಳನ್ನು ಮೀರಿಸು ವಂಥ ತೃಪ್ತಿ ನನಗಾಗಿದೆ, ನನ್ನ ಕನ್ನಡ ಅಧ್ಯಯನಪೀಠಕ್ಕಾಗಿಯೇ ನಿರ್ಮಿತವಾದ ಆ ಭವ್ಯಕಟ್ಟಡ; ಕನ್ನಡ ಅಧ್ಯಯನದ ಎಲ್ಲ ವಿಭಾಗಗಳನ್ನು ಒಳಗೊಳ್ಳುವ ಸುಯೋ ಜಿತ, ಸುವ್ಯವಸ್ಥಿತ ಭವನ. ಅದರ ನಿರ್ಮಾಣ ನನ್ನ ಕಾಲದಲ್ಲಿ ಮುಗಿದುದು ಅಭಿ ಮಾನದ ಮೇಲೆ ಅಭಿಮಾನವನ್ನು ತುಂಬುವ ಸಾಧನೆ. ಅಲ್ಲದೆ ವಿಶ್ವವಿದ್ಯಾಲಯದ ಎಲ್ಲ ಹಂತಗಳಲ್ಲಿ ಕನ್ನಡಕ್ಕೆ ದೊರೆತ ಸ್ಥಾನ–ಮಾನದ ಬಗೆಗೂ ನನಗೆ ವಿಶೇಷ ಸಂತೋಷ ವಾಗಿದೆ. ಈ ಸಾಧನೆಗಳ ಬಗೆಗೆ ಇಂದಿನವರು ಏನೇ ಅನ್ನಲಿ, ಇತಿಹಾಸಕಾರ ಮಾತ್ರ ಈ ಸತ್ಯವನ್ನು ತಪ್ಪದೆ ನಮೂದಿಸುತ್ತಾನೆ........" ಎಂಬ ಅವರ ನುಡಿಯಲ್ಲಿ ನಿರ್ಧಾರವಿತ್ತು, ನಿರ್ಣಯವಿತ್ತು. ಕನ್ನಡದ ಅಭಿವೃದ್ಧಿಯ ಸಮಗ್ರಚಿತ್ರ ಅವರ ಮುಖದ ಮೇಲೆ ಕಾಣಿಸಿತು, ಮಾತುಗಳಲ್ಲಿ ಮೂಡಿಬಂದಿತು ಕನ್ನಡ ಅಧ್ಯಯನ ಪೀಠದ ಇತಿಹಾಸ.

"ನೋಡೀ, ಇದು ನನ್ನ ಬಾಲ್ಯದ ಕನಸು, ಗದಗಿನ ಪ್ರೌಢಶಾಲೆಯ ವಿದ್ಯಾರ್ಥಿಯಾಗಿ ದ್ದಾಗಲೇ ನನ್ನಲ್ಲಿ ಮೂಡಿತ್ತು. ಇಂಗ್ಲಿಷ್ ಹಾಗೂ ಮರಾಠಿಯನ್ನು ಕಲಿಸುವವರಿಗೆ, ಕಲಿಯುವವರಿಗೆ ಇದ್ದ ಗೌರವ, ತಾಯಿನುಡಿಯಾದ ಕನ್ನಡಕ್ಕಿಲ್ಲವಲ್ಲ ಎಂದೆನಿಸಿದ್ದಿತು. ಮರಾಠಿಯಲ್ಲಿ ಮಾತನಾಡುವುದೇ ಗೌರವವೆಂಬ ಭಾವದ ಜೊತೆಗೆ, ಕನ್ನಡದ ಬಗೆಗೆ ಕನ್ನಡಿಗರೇ ತೋರುತ್ತಿದ್ದ ನಿರ್ಲಕ್ಷ್ಯ ನನ್ನಲ್ಲಿ ಕನ್ನಡದ ಅಭಿಮಾನದ ಕಿಡಿಮೂಡಿ ಸಿತ್ತು. ಅದೇ ನನ್ನ ಕನ್ನಡಾಭಿಮಾನದ ನಾಂದಿ. ಅದಕ್ಕಾಗಿ 'ಬಡಿದಾಡುವ', ಅದರ

ಉನ್ನತಿಗಾಗಿ "ಹೋರಾಟದ" ಪ್ರವೃತ್ತಿಯೇ ನನ್ನದಾಯಿತು. ಅಲ್ಲದೆ ನಾನು ಬೆಳೆಬೆಳೆ ದಂತೆಲ್ಲ ಈ 'ಆದರ್ಶ' ಪ್ರಖರವಾಗುತ್ತ ಬಂದಿತು. ಉತ್ತರಕರ್ನಾಟಕದ ಜಿಲ್ಲೆಗಳಲ್ಲಿ ಎಲ್ಲ ಕ್ಷೇತ್ರಗಳಲ್ಲಿ ದಟ್ಟವಾಗಿ ಕವಿದಿದ್ದ ಮರಾಠಿಯ ಪ್ರಭಾವ ನನ್ನಲ್ಲಿ ಒಂದು ಬಗೆಯ ಪ್ರತಿಕ್ರಿಯಾತ್ಮಕ ಮನೋಭಾವವನ್ನು ಕೆರಳಿಸಿತ್ತು. ಹರಿದು ಹಂಚಿಹೋಗಿದ್ದ 'ಕರ್ನಾಟಕ'ದ ಬಗೆಗಂತೂ ಚಿಂತೆಯೇ ಮೂಡಿತ್ತು...... ಈ ಹಿನ್ನೆಲೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ, ಕನ್ನಡ ಅಧ್ಯಯನಪೀಠದ ಸಾಧನೆಗಳನ್ನು ಗಮನಿಸಬೇಕು" ಎಂದು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನದ ಇತಿಹಾಸವನ್ನೇ ಸಮೀಕ್ಷಿಸಿದರು. ದಿನಾಂಕ, ಅಂಕಿ-ಸಂಖ್ಯೆಗಳನ್ನು ನಿರ್ದಿಷ್ಟವಾಗಿ ಹೇಳುತ್ತಿದ್ದ ಅವರ ನೆನಪಿನ ಶಕ್ತಿ ಅಚ್ಚರಿಪಡು ವಂಥದು. ಬಾಲ್ಯದಿಂದಲೂ ಅವರಿಗೆ ವರದಾನವಾಗಿ ಬಂದಿರುವ ಈ ಸ್ಮರಣಶಕ್ತಿ ಎಲ್ಲ ಪರೀಕ್ಷೆಯಲ್ಲಿ 'ಪ್ರಥಮ' ಸ್ಥಾನವನ್ನು ಪಡೆಯಲು ಸಹಾಯಕವಾಗಿರಬೇಕು. ತರ ಗತಿಗಳಲ್ಲಿ ಅನೇಕ ಕಾವ್ಯಭಾಗಗಳನ್ನು ನಿರರ್ಗಳವಾಗಿ ಹೇಳುವ ಪ್ರಾಧ್ಯಾಪಕ ಡಾ. ಆರ್. ಸಿ. ಅವರ ಸಾಮರ್ಥ್ಯ ವಿದ್ಯಾರ್ಥಿಗಳನ್ನು ದಂಗುಬಡಿಸುವಂಥದು !

ಮಾತನ್ನು ಮುಂದುವರಿಸುತ್ತಾ, ಡಾ. ಆರ್. ಸಿ. ಅವರು ನೀಡಿದ ಕನ್ನಡ ಸ್ಥಾನ-ಮಾನದ ಪ್ರಗತಿ, ಕನ್ನಡಾಧ್ಯಯನದ ವಿಕಾಸದ ಮುಖ್ಯಾಂಶಗಳಿಷ್ಟು :

ಮುಂಬಯಿಕರ್ನಾಟಕದ ಈ ಅಚ್ಚಕನ್ನಡ ಜಿಲ್ಲೆಗಳನ್ನು 'ದಕ್ಷಿಣ ಮಹಾರಾಷ್ಟ್ರ' ಎಂದು ಕರೆಯುವುದು ವಾಡಿಕೆಯಾಗಿತ್ತು. ಎಲ್ಲ ರೀತಿಯಲ್ಲಿಯೂ ಇವು ಹಿಂದುಳಿದ ಅಥವಾ ನಿರ್ಲಕ್ಷಿತ ಜಿಲ್ಲೆಗಳಾಗಿದ್ದುವು. ಕನ್ನಡಿಗರಿಗೆ ಯೋಗ್ಯವಾದ ಪ್ರಾತಿನಿಧ್ಯ, ಸ್ಥಾನ ಮಾನಗಳಿಲ್ಲದೆ ಅವರು ನಾಲ್ಕನೆಯ ದರ್ಜೆಯ ಪ್ರಜೆಗಳೆಂಬಂತೆ ಬಾಳಬೇಕಾ ಗಿದ್ದಿತ್ತು. ಆಗ ಪ್ರತಿಯೊಂದು ವಿಷಯಕ್ಕೂ ಹೋರಾಟವನ್ನೇ ಮಾಡಬೇಕಾಗಿತ್ತು. ಕನ್ನಡಿಗರ ಸುದೀರ್ಘಕಾಲದ ಬಡಿದಾಟದ ಕಾರಣವಾಗಿಯೇ ಮೂಡಿಬಂದಿತು, ಈ ಕರ್ನಾಟಕ ವಿಶ್ವವಿದ್ಯಾಲಯ. ೧೯೪೯ ರ ಕರ್ನಾಟಕ ವಿಶ್ವವಿದ್ಯಾಲಯ ಕಾಯಿದೆಯ preamble ಇದನ್ನು ಸ್ಪಷ್ಟಪಡಿಸುತ್ತದೆ. ವಿಶ್ವವಿದ್ಯಾಲಯದ ಸ್ಥಾಪನೆಗೆ ಅನೇಕ 'ಮಹನೀಯ ಕನ್ನಡಿಗರು' ಎಲ್ಲ ಹಂತಗಳಲ್ಲಿ ಹೋರಾಡಬೇಕಾಯಿತು. ಮೊದ ಮೊದಲು ಕೆಲವರು ಇದನ್ನು 'ಸಂಶೋಧನೆಯ ವಿಶ್ವವಿದ್ಯಾಲಯ'ವೆಂದಷ್ಟೇ ಮಾಡ ಬೇಕೆಂದು ಪ್ರಯತ್ನಿಸಿದ್ದರು. ಅಂತೂ ಕನ್ನಡಿಗರ ಬಹುದಿನಗಳ ಹಂಬಲದ ಪೂರೈಕೆ ಎನ್ನುವಂತೆ, ಇದು ಪರಿಪೂರ್ಣ ವಿಶ್ವವಿದ್ಯಾಲಯವಾಗಿ ರೂಪುಗೊಂಡಿತು. ಮೊದಲು ಟ್ರೇನಿಂಗ ಕಾಲೇಜಿನ ಕಟ್ಟಡದಲ್ಲಿ ವಿಶ್ವವಿದ್ಯಾಲಯದ ಮೂರು-ನಾಲ್ಕು ವಿಭಾಗಗಳು ಪ್ರಾರಂಭವಾದವು. ಅದರಲ್ಲಿ ಪ್ರಪ್ರಥಮ ವಿಭಾಗ, ಈ ಕನ್ನಡ ವಿಭಾಗ. ೧೯೫೧ ನೆಯ ಸಪ್ಟಂಬರ್ ೨೧ ರಂದು ಡಾ. ಆರ್. ಸಿ. ಅವರು ಕನ್ನಡ ರೀಡರ್ ಎಂದು ವಿಶ್ವವಿದ್ಯಾಲಯಕ್ಕೆ ಬಂದರು. ೧೯೫೨ ರಲ್ಲಿ ತೀನಂಶ್ರೀ ಕನ್ನಡ ಪ್ರಾಚಾರ್ಯ ರಾಗಿ ಬಂದರು. ಕನ್ನಡ ಎಂ. ಎ. ತರಗತಿಯಲ್ಲಿ ಒಬ್ಬನೇ ಒಬ್ಬ ವಿದ್ಯಾರ್ಥಿ! ಆದರೆ



ಸ್ನೇಹಿತರೊಂದಿಗೆ ಜಾನಪದ ವೇಷದಲ್ಲಿ

( ಸಂದರ್ಭ : ೩ನೆಯ ಅಖಿಲ ಕರ್ನಾಟಕ ಜಾನಪದ ಸಮ್ಮೇಲನ )

ಆಗ ಸೀನಿಯರ್ ವಿದ್ಯಾರ್ಥಿಗಳಿಗೆ ಎರಡು, ಜ್ಯೂನಿಯರ್ ವಿದ್ಯಾರ್ಥಿಗಳಿಗೆ ಎರಡು– ಹೀಗೆ ಶಿಷ್ಯವೇತನಗಳಿದ್ದುವಂತೆ ! ವಿದ್ಯಾರ್ಥಿಗಳ ಸಂಖ್ಯೆ ದಿನದಿನಕ್ಕೆ ಹೆಚ್ಚುತ್ತಾ ನಡೆಯಿತು. ಕರ್ನಾಟಕ ಕಾಲೇಜು ಹಾಗೂ ಲಿಂಗರಾಜ ಕಾಲೇಜುಗಳಲ್ಲಿ ವಿದ್ಯಾರ್ಥಿಗಳು ಜನರಲ್ ಬಿ.ಎ. ವರ್ಗದಲ್ಲಿ ಹತ್ತು-ಹನ್ನೆರಡು ಜನ, ಆನರ್ಸವರ್ಗದಲ್ಲಿ ಎರಡು–ಮೂರು ಜನ ಇರುತ್ತಿದ್ದರು. ಇಂಗ್ಲಿಷ್, ಅರ್ಥಶಾಸ್ತ್ರಗಳಿಗಿದ್ದ ಗೌರವದ ಸ್ಥಾನ ಕನ್ನಡಕ್ಕಿರಲಿಲ್ಲ! ಆದರೆ ಪ್ರತಿ ಹಂತದಲ್ಲಿ ಹೋರಾಟವಮಾಡಿ, ಕನ್ನಡಿಗರಲ್ಲಿ ಭಾಷಾಭಿಮಾನವನ್ನು ಕುದುರಿಸಬೇಕಾಯಿತು. ವಿಶ್ವವಿದ್ಯಾಲಯದ ಕನ್ನಡ ವಿಭಾಗವೂ ತ್ವರಿತಗತಿಯಲ್ಲಿ ಬೆಳೆದು, ವಿದ್ಯಾರ್ಥಿಗಳ ಹಾಗೂ ಸಾರ್ವಜನಿಕರ ಗೌರವಾದರಗಳಿಗೆ ಪಾತ್ರವಾಯಿತು. ಸಿನೇಟ್-ಸಿಂಡಿಕೇಟುಗಳಲ್ಲ ಎಸ್. ಎಸ್. ಬಸವನಾಳರು, ಡಾ. ಎಸ್. ಸಿ. ನಂದೀಮಠರು, ಪ್ರೊ. ಎಸ್. ಎಸ್. ಮಾಳವಾಡರು ಮುಂತಾದವರು ವಿಶ್ವವಿದ್ಯಾಲಯದಲ್ಲಿ ಕನ್ನಡದ ಸ್ಥಾನ-ಮಾನಗಳಿಗಾಗಿ ಸತತ ಪ್ರಯತ್ನಶೀಲರಾಗಿದ್ದರು. ಡಾ. ಆರ್. ಸಿ ವಿಶ್ವವಿದ್ಯಾಲಯದಲ್ಲಿ ಈ ಹಿರಿಯರಿಂದ ತೆರವಾದ ಸ್ಥಾನಗಳನ್ನು ತುಂಬಿದರು. ಕನ್ನಡದ ಕೆಲಸ ನಿರಂತರವಾಗುವಂತೆ ಮಾಡಿದರು.

ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ವಿಭಾಗದ ಕರ್ಣಧಾರತ್ವವನ್ನು ಡಾ. ಆರ್. ಸಿ. ಹಿರೇಮಠರು ವಹಿಸಿಕೊಂಡ ಮೇಲೆ ಕನ್ನಡ ಸಾಹಿತ್ಯ, ವ್ಯಾಕರಣ, ಛಂದಸ್ಸು, ವಿಮರ್ಶೆಗಳ ಅಧ್ಯಯನ ಅರ್ಥಪೂರ್ಣವಾಗಿ ನೆಲೆ ನಿಲ್ಲುವಂತಾಯಿತು. ಡಾ. ಆರ್. ಸಿ. ಅವರ ನಿತಾಂತ ಕನ್ನಡಾಭಿಮಾನ, ಸಂಶೋಧನೆಯ ಪ್ರವೃತ್ತಿ, ಕನ್ನಡ ಅಧ್ಯಯನದ ಸಮಗ್ರ ದೃಷ್ಟಿ, 'ಗೆಲುವೆನೆಂಬ ಭಾಷೆ' ಯ ಛಲ, ಅಧ್ಯಯನಪೀಠದ ಅದೃಷ್ಟವನ್ನೇ ರೂಪಿಸಿತು. ಹಳಗನ್ನಡ, ನಡುಗನ್ನಡ, ಹೊಸಗನ್ನಡದ ಸಮಗ್ರ ಅಧ್ಯಯನ ಸಿಲೆಬಸ್‌ನಲ್ಲಿ ಸೇರಿತು. ಇಂಗ್ಲಿಷ, ಸಂಸ್ಕೃತಗಳಿಗಿರುವಂತೆ ಎಂಟು ಪತ್ರಿಕೆಗಳ ಕೋರ್ಸ ಕನ್ನಡಕ್ಕೂ ದೊರೆಯಿತು. Advanced Prosody and Comparative Linguistics ನ ಅಭ್ಯಾಸ ವಿದ್ಯಾರ್ಥಿಗಳಿಗೆ ದೊರೆಯಿತು. 'ಕನ್ನಡ ಸಾಹಿತ್ಯಚರಿತ್ರೆಯ ಯೋಜನೆ' ಯನ್ನು ಕನ್ನಡ ವಿಭಾಗ ರೂಪಿಸಿತು. ಕನ್ನಡ ವಿಶ್ವಕೋಶ, ಕನ್ನಡ ಶಬ್ದಕೋಶಗಳ ವಿಚಾರ ಪ್ರಾರಂಭವಾದುದೂ ಈ 'ಪೀಠ' ದಲ್ಲಿಯೇ ಎನ್ನುತ್ತಾರೆ, ಅಭಿಮಾನ ತುಂಬಿದ ಡಾ. ಆರ್. ಸಿ. ಈ ಯೋಜನೆಗಳು ಮುಂದೆ ಕಾರ್ಯಗತವಾದುದು ಮೈಸೂರು, ಬೆಂಗಳೂರಗಳಲ್ಲಿ. ಅಲ್ಲಿಯೂ ಡಾ. ಆರ್. ಸಿ. ಅವರ ವಿದ್ವತ್ತು, ದುಡಿಮೆ ಮಹತ್ವಪೂರ್ಣವಾದುದು. ಡಾ. ಹಿರೇಮಠ ಅವರ ಯೋಜಕಶಕ್ತಿಯ ಫಲವಾಗಿ ಅಧ್ಯಾಪನದ ಜೊತೆಜೊತೆಯಲ್ಲಿ ಸಂಶೋಧನೆಯ ಕಾರ್ಯವೂ ಪ್ರಾರಂಭವಾಯಿತು. ಕನ್ನಡ ವಿಭಾಗದಲ್ಲಿ ವಿದ್ಯಾರ್ಥಿಗಳ ಸಂಖ್ಯೆ ನೂರಕ್ಕೆ ಏರಿತು; ಅಧ್ಯಾಪಕರ ಸಂಖ್ಯೆಯೂ ತದನುಗುಣವಾಗಿ ಬೆಳೆಯಿತು, ಕಾಲೇಜುಗಳಲ್ಲಿ ಕನ್ನಡ ಮೇಜರ್ ಅಭ್ಯಾಸ ಜನಪ್ರಿಯವಾಯಿತು.

ಡಾ. ಆರ್. ಸಿ. ಅವರ ನೇತೃತ್ವದಲ್ಲಿ ಕನ್ನಡ ಅಧ್ಯಯನಪೀಠ ಅನೇಕ ಸಂಶೋಧನೆಗಳನ್ನು ಕೈಕೊಂಡಿತು. ಸಂಶೋಧನೆ, ಪ್ರಾಧ್ಯಾಪಕ ಡಾ. ಆರ್. ಸಿ. ಅವರ ಉಸಿರು. ಫ. ಗು. ಹಳಕಟ್ಟಿಯವರಿಂದ ಪ್ರಾರಂಭವಾದ ವಚನಸಂಶೋಧನೆಯ ಕಾರ್ಯವನ್ನು ಡಾ. ಆರ್. ಸಿ. ಅವರ ದೂರದೃಷ್ಟಿಯ ನಿರ್ದೇಶನದಲ್ಲಿ ಕನ್ನಡ ಅಧ್ಯಯನಪೀಠ ಮುಂದುವರಿಸಿತು. ನಾಡಿನ ಎಲ್ಲ ಭಾಗಗಳಿಂದ ವಚನ ಓಲೆಕಟ್ಟುಗಳನ್ನು ಸಂಗ್ರಹಿಸಿ, ಅವುಗಳ ಸಂರಕ್ಷಣೆ, ಸಂಪಾದನೆಯನ್ನು ಕೈಕೊಳ್ಳಲು ಡಾ. ಆರ್. ಸಿ. ಅವರ ಸಂಶೋಧನಾಪ್ರಿಯತೆ, ಪ್ರಾಚೀನಸಾಹಿತ್ಯ—ಅದರಲ್ಲೂ ವೀರಶೈವ ವಚನ ಮತ್ತು ಕಾವ್ಯಗಳ ಬಗೆಗಿನ 'ಒಲವರ'—ಕನ್ನಡದ ಕಟ್ಟಾಭಿಮಾನ, ಶಿವಶರಣರ ಬಗೆಗಿನ ಭಕ್ತಿ-ನಿಷ್ಠೆ ಪ್ರೇರಕ ಕಾರಣಗಳಾದವು. ಅತ್ಯಂತ ಹೆಚ್ಚಿನ ಸಂಖ್ಯೆಯ ವಚನ (ಓಲೆ ಗ್ರಂಥಗಳ) ಸಂಗ್ರಹ, ವಿಸ್ತೃತ ರೀತಿಯ ಸಶಾಸ್ತ್ರೀಯವಾದ ಸಂಶೋಧನೆ. ಶಿವಶರಣರ ಧರ್ಮ-ತತ್ತ್ವ-ಸಿದ್ಧಾಂತ-ವ್ಯಾಖ್ಯಾನ-ವಿಶ್ಲೇಷಣೆಗಳಲ್ಲಿ ಡಾ. ಆರ್. ಸಿ. ಅವರ ಪ್ರಭಾವ, ಪ್ರತಿಭೆ, ಪರಿಣತಿ ಆಕಾರಪಡೆದು ನಿಂತಿವೆ. ಈಗಾಗಲೇ ಪ್ರಮುಖ ಶರಣರ ಮೂಲ ವಚನಗಳ ಸಂಪಾದಿತ ಸಂಪುಟಗಳು ಪ್ರಕಟವಾಗಿವೆ. ಇದೇ ಬಗೆಯ ಕಾರ್ಯಗಳನ್ನು ಇನ್ನೂ ಸಮರ್ಥವಾಗಿ, ವಿಸ್ತೃತವಾಗಿ ಕೈಕೊಂಡಿರುವ 'ಬಸವಪೀಠ'ದ ಸ್ಥಾಪನೆ, ಸಮಾಜಬಾಂಧವರ ಮನವೊಲಿಸುವ ಜಾಣ್ಮೆ, ಕಾರ್ಯಕ್ರಮಗಳ ಸಂಯೋಜನೆಗಳಲ್ಲಿ ಡಾ. ಆರ್. ಸಿ. ಅವರ ಶ್ರಮವಿದೆ; ಅವರ ವೈಯಕ್ತಿಕ ಅಭಿನಿವೇಶದ ಮುದ್ರೆಯಿದೆ. ಬಸವಪೀಠ, ವೀರಶೈವ ತತ್ತ್ವ-ಸಾಹಿತ್ಯ-ಸಂಶೋಧನೆಯ ಬಹು ದೊಡ್ಡ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ. ಡಾ. ಆರ್. ಸಿ. ಅವರ ಕನಸನ್ನು ನನಸಾಗಿಸಲು ಈ ಪೀಠ ಕಂಕಣಬದ್ಧವಾಗಿದೆ. ಪ್ರತಿವರ್ಷ 'ಬಸವ ಜಯಂತಿ' ಯಂದು ನಾಡಿನ ಪ್ರಸಿದ್ಧ ವಿದ್ವಾಂಸರು ಭಾಗವಹಿಸುವಂಥ 'ವಿಚಾರ ಸಂಕಿರಣ'ಗಳ ಯೋಜನೆ ಹಾಗೂ ಆ ಉಪನ್ಯಾಸಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುವ ಯೋಜನೆ ಪ್ರಾಧ್ಯಾಪಕ ಆರ್. ಸಿ. ಅವರ ಯೋಜನೆಯೇ ಆಗಿದೆ.

ವೀರಶೈವ ಸಾಹಿತ್ಯದಂತೆ ಜೈನಸಾಹಿತ್ಯ, ಬ್ರಾಹ್ಮಣಸಾಹಿತ್ಯ ಬೋಧನ-ಸಂಶೋಧನ ವಿಭಾಗಗಳನ್ನು ಕನ್ನಡ ಅಧ್ಯಯನಪೀಠದಲ್ಲಿ ಅಳವಡಿಸುವಲ್ಲಿ ಆರ್. ಸಿ. ಅವರ ಉದಾರದೃಷ್ಟಿ, ಸಮನ್ವಯ ಮನೋಭಾವ ವ್ಯಕ್ತವಾಗುತ್ತವೆ. ಈ ವಿಭಾಗಗಳ ಕಾರ್ಯ ವ್ಯಾಪ್ತಿಯನ್ನು ವಿಸ್ತರಿಸುವ ಉದ್ದೇಶದಿಂದ ಮಹಾವೀರಪೀಠ, ರಾಘವೇಂದ್ರಪೀಠಗಳ ಸ್ಥಾಪನೆಯ ಪ್ರಯತ್ನವನ್ನೂ ಮಾಡಿದರು. ಇಷ್ಟರಲ್ಲಿ ಇವು ಅಸ್ತಿತ್ವಕ್ಕೆ ಬರುವ ಲಕ್ಷಣಗಳು ತೋರುತ್ತಿವೆ.

ಭಾಷಾಶಾಸ್ತ್ರ ವಿದ್ವಾಂಸರಾಗಿರುವ, ದೇಶ-ವಿದೇಶಗಳಲ್ಲಿ ಸಂಚರಿಸಿ ಭಾಷಾಶಾಸ್ತ್ರಾಧ್ಯಯನ ಹಾಗೂ ಸಂಶೋಧನೆಯ ವಿಶೇಷಾನುಭವವನ್ನು ಪಡೆದ ಆರ್. ಸಿ. ಕನ್ನಡ ಅಧ್ಯಯನಪೀಠದಲ್ಲಿ ಎಂ. ಎ (ಭಾಷಾಶಾಸ್ತ್ರ), ಡಿಪ್ಲೋಮಾ ಹಾಗೂ ಸರ್ಟಿಫಿಕೇಟ

ಕೋರ್ಸಗಳನ್ನು ಪ್ರಾರಂಭಿಸಿದರು. Language Laboratory ಯನ್ನು ಆಧುನಿಕ ಯಂತ್ರಸಜ್ಜಿಕೆಗಳೊಡನೆ ಸ್ಥಾಪಿಸುವ ವ್ಯವಸ್ಥೆ ಮಾಡಿದ್ದಾರೆ. ಭಾಷಾಶಾಸ್ತ್ರದಲ್ಲಿ ಪಿಎಚ್. ಡಿ ಸಂಶೋಧನೆ ಕಾರ್ಯವೂ ನಿರಂತರವಾಗಿ ಸಾಗುತ್ತಿದೆ. ದೇಶೀಯ ಹಾಗೂ ಅಂತರ್ದೇಶೀಯ ಭಾಷಾವಿಜ್ಞಾನ ಸಮ್ಮೇಲನಗಳು 'ಪೀಠ' ದ ಆಶ್ರಯದಲ್ಲಿ ನೆರವೇರಿದುದು ಈ ವಿಭಾಗದ ಪ್ರಾಮುಖ್ಯತೆಯನ್ನು ತೋರಿಸುತ್ತದೆ. ಈ ವಿಭಾಗಕ್ಕೆ ಅಂಥ ಸ್ಥಾನಮಾನ ಬರುವಂತಾದುದು ಮುಖ್ಯವಾಗಿ ಡಾ. ಆರ್. ಸಿ. ಅವರ ಭಾಷಾಶಾಸ್ತ್ರ ಪರಿಣತಿ, ದೇಶ-ವಿದೇಶದ ಭಾಷಾವಿಜ್ಞಾನಿಗಳ ನಿಕಟಸಂಪರ್ಕದಿಂದ. ದ್ರಾವಿಡ ಭಾಷಾವಿಜ್ಞಾನದ ಸಂಶೋಧನೆಯಲ್ಲಿ ನಿರತವಾಗಿರುವ ಸಂಸ್ಥೆಗಳಲ್ಲಿ ಗಮನಾರ್ಹವಾದುದು, ಈ ಕನ್ನಡ ಅಧ್ಯಯನಪೀಠ.

ಕನ್ನಡ ಅಧ್ಯಯನಪೀಠದ ಪಠ್ಯಪುಸ್ತಕ ನಿರ್ದೇಶನಾಲಯ ಆಧುನಿಕ ಜ್ಞಾನ-ವಿಜ್ಞಾನದ ಪಠ್ಯಪುಸ್ತಕ, ಅನುವಾದ ಹಾಗೂ ಜನಪ್ರಿಯ ಗ್ರಂಥಗಳ ಮೂಲಕ ಕನ್ನಡವನ್ನು ಬೆಳೆಯಿಸುವ, ಸಂಪದ್ಭರಿತಗೊಳಿಸುವ ಕಾರ್ಯದಲ್ಲಿ ನಿರತವಾಗಿದೆ. ಈಗಾಗಲೇ ಇಪ್ಪತ್ತೈದು ಗ್ರಂಥಗಳನ್ನು ಪ್ರಕಟಿಸಿದೆ, ಇನ್ನೂ ನೂರಾರು ಗ್ರಂಥಗಳು ಪ್ರಕಟನೆಗೆ ಅಣಿಯಾಗುತ್ತಿವೆ. 'ಸರ್ವದರ್ಶನ ಸಂಗ್ರಹ', 'ಆಧುನಿಕ ಕನ್ನಡಕಾವ್ಯ' (ಕನ್ನಡ ಮತ್ತು ಇಂಗ್ಲಿಷ ಭಾಷೆಯಲ್ಲಿ), 'ಸಂಗೀತರತ್ನ ಡಾ. ಮಲ್ಲಿಕಾರ್ಜುನ ಮನ್ಸೂರ' ಮುಂತಾದ ಸಾಂಸ್ಕೃತಿಕ ಮಹತ್ವದ ಗ್ರಂಥ ಪ್ರಕಟನೆಯ ಸೂಚನೆಗಳನ್ನು ಮುಂದೆ ಇರಿಸಿದಾಗ, ಅತ್ಯಂತ ಪ್ರೋತ್ಸಾಹಪರ ಮಾತುಗಳನ್ನಾಡಿ, ಪ್ರಕಟನೆಗೆ ಒಪ್ಪಿಗೆ ನೀಡಿದ ಕುಲಪತಿ ಡಾ. ಆರ್. ಸಿ. ಅವರ ಸಂಸ್ಕೃತಿಪ್ರೇಮ, ಕನ್ನಡ ಭಾಷಾಭಿಮಾನಗಳು ಅವಿಸ್ಮರಣೀಯ. ಕನ್ನಡದ ಪ್ರಗತಿಯ ಬಗೆಗೆ ಮಾತನಾಡುವಾಗಲೆಲ್ಲ ಕನ್ನಡ ಅಭಿವೃದ್ಧಿಯ ವಿಶಾಲವಾದ ತಳಹದಿಯನ್ನು ಹಾಕಬೇಕೆಂಬುದೇ ಡಾ. ಆರ್. ಸಿ. ಅವರ ನಿಲುವಾಗಿತ್ತು. 'ಜಗತ್ತಿನ ಯಾವುದೇ ವಿಷಯದ ಬಗೆಗೆ ಒಂದು ಪುಟ್ಟಗ್ರಂಥವಾದರೂ ಕನ್ನಡದಲ್ಲಿ ಇರದಿದ್ದರೆ, ಕನ್ನಡದ ಪ್ರಗತಿ ಸಂಪೂರ್ಣವಲ್ಲ. ಪ್ರತಿಯೊಬ್ಬ ಸುಶಿಕ್ಷಿತ ಕನ್ನಡಿಗನೂ ತಾನು ಕಲಿತ ಅಥವಾ ತನ್ನ ವೈಯಕ್ತಿಕ ಅನುಭವಗಳನ್ನೊಳಗೊಂಡ ವಿಷಯದ ಬಗೆಗೆ ಕನಿಷ್ಟಪಕ್ಷ ಒಂದೊಂದು ಕೃತಿಯನ್ನಾದರೂ ಕನ್ನಡಕ್ಕೆನೀಡಲು ಸಾಧ್ಯವಾಗಬೇಕು. ಆಗ ಮಾತ್ರ ಕನ್ನಡ ಸಾಹಿತ್ಯದ-ಭಾಷೆಯ ಪ್ರಗತಿಯಾಗಿದೆಯೆಂದು ಹೇಳಬಹುದು. ಕಾರಣ ಪಠ್ಯಪುಸ್ತಕ ನಿರ್ದೇಶನಾಲಯ ಈ ಆಧುನಿಕ ಜ್ಞಾನವಾಹಿನಿಯನ್ನು ಕನ್ನಡ ಹೊಲಕ್ಕೆ ಹರಿಯಿಸುವ ಕೆಲಸ ಮಾಡಬೇಕು' ಎಂಬ ಖಚಿತ ನಿಲುವು ಕುಲಪತಿ ಹಾಗೂ ಕನ್ನಡ ಪ್ರಾಧ್ಯಾಪಕ ಡಾ. ಆರ್. ಸಿ. ಅವರದು. ಅವರ ಕನ್ನಡದ ಅಭಿಮಾನ ಬರೀ ಭಾವಾವೇಶದ್ದಲ್ಲ, ನಿರ್ದಿಷ್ಟ ಗುರಿಯನ್ನುಳ್ಳದು ಎಂಬ ಅರಿವು ಹೆಜ್ಜೆಹೆಜ್ಜೆಗೂ ಮೂಡುತ್ತಿತ್ತು.

ಇತ್ತೀಚೆಗೆ ಜಾನಪದವಿಜ್ಞಾನದ ಬೋಧನೆ, ಸಂಶೋಧನೆಯಲ್ಲಿ ನಿರತವಾಗಿದೆ, ಕನ್ನಡ ಅಧ್ಯಯನಪೀಠ. ಅನೇಕ ಜಾನಪದ ಸಾಹಿತ್ಯಗ್ರಂಥಗಳು ಸಂಶೋಧಿತವಾಗಿ ಪ್ರಕಾ

ಶನಗೊಂಡಿವೆ. ಪಿಎಚ್. ಡಿ. ಅಧ್ಯಯನ ಮುಂದುವರಿದಿದೆ. ಅಖಿಲ ಕರ್ನಾಟಕ ಜಾನಪದ ಸಮ್ಮೇಲನ ನಾಡಿನ ಬೇರೆಬೇರೆ ಭಾಗಗಳಲ್ಲಿ ಅರ್ಥಪೂರ್ಣವಾಗಿ ಜರುಗುತ್ತಲಿವೆ. ಜಾನಪದವನ್ನು ಕುರಿತ ರಾಜ್ಯಮಟ್ಟದ ಏಕೈಕ ಕ್ರಿಯಾಶೀಲವೇದಿಕೆ ಇದು. ಇದರ ಅಂಗವಾಗಿ ಪ್ರತಿವರ್ಷ ಪ್ರಕಟವಾಗುತ್ತಿರುವ 'ಜಾನಪದ ಸಾಹಿತ್ಯದರ್ಶನ' ಸಂಪುಟಗಳು ಕರ್ನಾಟಕದ ಜಾನಪದ ಅಧ್ಯಯನಕ್ಕೆ ಗಮನಾರ್ಹ ಕೊಡುಗೆಗಳೆನಿಸಿವೆ. ಕನ್ನಡ ಕೃತಿಗಳನ್ನು ಹಿಂದಿ ಭಾಷೆಗೆ ಅನುವಾದಿಸುವ ಯೋಜನೆಯಡಿಯಲ್ಲಿ ಅನುವಾದ ಕಾರ್ಯ ನಡೆದಿದೆ. ಶರಣರ ವಚನಗಳನ್ನು ಇಂಗ್ಲಿಷಭಾಷೆಗೆ ಭಾಷಾಂತರ ಮಾಡಿಸುವ ಯೋಜನೆಯನ್ನು ಕನ್ನಡ ಅಧ್ಯಯನಪೀಠ ಕೈಗೆತ್ತಿಕೊಂಡಿದೆ. ಸಮಗ್ರ ಐದು ಸಂಪುಟಗಳಲ್ಲಿ ಶೂನ್ಯಸಂಪಾದನೆಯ ಇಂಗ್ಲಿಷ ಅನುವಾದ ಪ್ರಕಟಗೊಂಡುದು, ಅಧ್ಯಯನಪೀಠದ ಒಂದು ವಿಶೇಷ ಸಾಧನೆ. ಡಾ. ಆರ್. ಸಿ. ಅಂಥವರು ಈ ಯೋಜನೆಗಳಿಗೆ ಮುಖ್ಯಸ್ಥರಾಗಿರದಿದ್ದರೆ, ಈ ಯೋಜನೆ-ಸಂಶೋಧನೆಗಳ ದಿಕ್ಕೇ ಬದಲಾಗುತ್ತಿದ್ದಿತು. ಹಾಗೆಯೇ ಸಾಹಿತ್ಯಪ್ರಿಯರಾದ ಡಾ. ಆರ್. ಸಿ. ಅನೇಕ ಮಹತ್ವದ ಹಳಗನ್ನಡ, ನಡುಗನ್ನಡ ಸಾಹಿತ್ಯಗ್ರಂಥಗಳನ್ನು ಸಂಪಾದಿಸಿದರು. ಪಂಡಿತರು ತಲೆದೂಗುವಂಥ ಉಪೋದ್ಘಾತಗಳನ್ನು ಬರೆದು ಪ್ರಕಟಿಸಿದ ಕೀರ್ತಿ ಡಾ. ಆರ್. ಸಿ. ಅವರದು. ಹರಿಹರನಿಂದ ಪ್ರಾರಂಭಿಸಿ ಶಂಕರದೇವನ ವರೆಗಿನ ಸಮಗ್ರ ರಗಳೆಯ ಸಂಪುಟಗಳನ್ನು ಪ್ರಕಟಿಸಿದುದು ಅಧ್ಯಯನಪೀಠದ ಇನ್ನೊಂದು ವ್ಯವಸ್ಥಿತ ಸಾಧನೆಯಾಗಿದೆ.

ಕರ್ನಾಟಕದ ಇತಿಹಾಸದ ಮೇಲೆ ಬೆಳಕು ಚೆಲ್ಲಬಲ್ಲ ಕೈಫಿಯತ್‌ಗಳ ಬಗೆಗಿನ ಸಂಶೋಧನೆಯೂ ಇಲ್ಲಿ ಮುನ್ನಡೆದಿದೆ. ಶಾಸನಗಳ ಶೋಧನೆಗೂ ಅವಕಾಶ ಮಾಡಿಕೊಟ್ಟ ಶಾಸನ ಸೂಚಿ. ಶಾಸನ ಸಂಪುಟಗಳನ್ನು ಪ್ರಕಟಿಸುತ್ತಿರುವುದರ ಹಿಂದೆ ಡಾ. ಆರ್. ಸಿ. ಅವರ ಸ್ಫೂರ್ತಿಯ ಸೆಲೆಯಿದೆ.

ಸಂಶೋಧನಾತ್ಮಕ, ಸೃಜನಾತ್ಮಕ ಬರೆವಣಿಗೆಗೆ ಪ್ರೋತ್ಸಾಹ ನೀಡುವ ಉದ್ದೇಶದಿಂದ 'ಕರ್ನಾಟಕ ಭಾರತಿ', 'ಮಾನವಿಕ ಭಾರತಿ', 'ವಿಜ್ಞಾನ ಭಾರತಿ', 'ವಿದ್ಯಾರ್ಥಿ ಭಾರತಿ' ಗಳೆಂಬ ನಿಯತಕಾಲಿಕೆಗಳ ಸಂಪಾದನ, ಪ್ರಕಟನಕಾರ್ಯ ಚಟುವಟಿಕೆಗಳ ಹಿಂದೆ ಡಾ. ಆರ್. ಸಿ. ಅವರ ಕ್ರಿಯಾಶೀಲ ವ್ಯಕ್ತಿತ್ವ. ಉದಾರದೃಷ್ಟಿ, ಕನ್ನಡಾಭಿಮಾನ, 'ಕನಸನ್ನು ನನಸಾಗಿಸಬಲ್ಲ ಛಲಗಾರಿಕೆ' ಎದ್ದುಕಾಣುತ್ತಿವೆ. ಈ ಸರ್ವ ಚಟುವಟಿಕೆಗಳ ಕೇಂದ್ರವ್ಯಕ್ತಿ, ಶಕ್ತಿ ಡಾ. ಆರ್. ಸಿ. ಹಿರೇಮಠ ಅವರು. ಈ ಎಲ್ಲ ಕಾರ್ಯಕ್ರಮಗಳ ಆಡುಂಬೊಲ, ಅವರು ಕಟ್ಟಿ ನೆಲೆನಿಲ್ಲಿಸಿದ ಈ ಕನ್ನಡ ಅಧ್ಯಯನಪೀಠ. ಸಮಗ್ರ ಜೀವನದೃಷ್ಟಿ, ತುಂಬಿದ ಲೋಕಾನುಭವ, ಕ್ರಿಯಾಶೀಲ ವ್ಯಕ್ತಿತ್ವ ಕಾರಣವಾಗಿ ಆರ್. ಸಿ. ಹಿರೇಮಠರು ಎಲ್ಲಂದದಲ್ಲಿಯೂ ಕನ್ನಡ ಅಧ್ಯಯನಪೀಠದ ಶಿಲ್ಪಿ.

■ ■



# ಕುಲಪತಿ ಡಾ. ಆರ್. ಸಿ. ಹಿರೇಮಠರು

ಕೆ. ಎಸ್. ದೇಶಪಾಂಡೆ

" ಸಣ್ಣವರಾಗಿ ಹುಟ್ಟುವುದು ತಪ್ಪಲ್ಲ; ಸಣ್ಣವರಾಗಿ ಉಳಿಯುವದು ಮಾತ್ರ ತಪ್ಪು" ಎಂಬ ಅನುಭವಿಗಳ ವಾಣಿಗೆ ನಿದರ್ಶನವೆಂಬಂತೆ ಸಾಮಾನ್ಯರಾಗಿ ಜನ್ಮತಳೆದು, ಅಸಾಮಾನ್ಯರಾಗಿ ಬೆಳೆದವರು, ಆರ್. ಸಿ. ಹಿರೇಮಠ ಅವರು. ವಿದ್ಯಾರ್ಥಿಗಳಿರುವಾಗಲೇ ಅವರು ಪಟ್ಟ ಶ್ರಮ, ತೋರಿಸಿದ ಕರ್ತವ್ಯನಿಷ್ಠೆಗಳನ್ನು ಕಂಡ ಜನತೆ—ಅವರಲ್ಲಿ ಬಹಳಷ್ಟು ಆಶೋತ್ತರಗಳನ್ನು ಆಗಲೇ ನಿರೀಕ್ಷಿಸಿತು. ಜನತೆಯ ಈ ಆಶೋತ್ತರಗಳನ್ನು ಅವರು ನಿರಾಶೆಗೊಳಿಸಲಿಲ್ಲ. " ವಿದ್ಯಾರ್ಥಿಯ ಜೀವನವೆಂದರೆ ಒಂದು ತಪಸ್ಸಾಧನೆ: ಪ್ರತಿಯೊಬ್ಬ ವಿದ್ಯಾರ್ಥಿಯೂ ಒಬ್ಬ ಗೌರವತಪಸ್ವಿ; ವಿದ್ಯಾರ್ಜನೆಯ ಸಮಯವೆಂದರೆ ಆತ್ಮಶಕ್ತಿಯ ಸಂಗ್ರಹದ ಕಾಲ " ಎಂಬ ಉಕ್ತಿಯನ್ನು ಅಕ್ಷರಶಃ ನಿಜವಾಗಿಸಿ ತಮ್ಮ ವಿದ್ಯಾರ್ಥಿಜೀವನವನ್ನು ಅದ್ವಿತೀಯವಾಗಿ ನಿರ್ವಹಿಸಿದರು. ಅತ್ಯುಚ್ಚ ಶ್ರೇಣಿಯಲ್ಲಿ ತೇರ್ಗಡೆಹೊಂದಿದ ಮಾತ್ರಕ್ಕೆ ತೃಪ್ತಿಗೊಳ್ಳದೇ ಅವರ ಸಾಧನೆಯ ಗರುಡಪಕ್ಷಿ ಇನ್ನೂ ಅಸೀಮಸಾಹಸೋದ್ಯಮವನ್ನು ಕೈಕೊಂಡು ವಿಶ್ವವಿದ್ಯಾಲಯದ ಮಹಾಮಂದಿರವನ್ನು ಪ್ರವೇಶಿಸಿತು. ವಿಶ್ವವಿದ್ಯಾಲಯದ ಪ್ರಾರಂಭದೆಸೆಯಿಂದ ಇಂದಿನವರೆಗೆ ಅವರು ಸಲ್ಲಿಸಿದ ಸೇವೆಯ ಸಿಂಹಾವಲೋಕನ ಮಾಡಿದಾಗ ಅವರ ಕರ್ತೃತ್ವಶಕ್ತಿಯ ಬಗ್ಗೆ ವಿಂಡಿತವಾಗಿಯೂ ಗೌರವಾದರಗಳು ಮೂಡುತ್ತವೆ. ಅವರು ಸಿನೇಟ ಸದಸ್ಯರೇ ಆಗಿರಲಿ, ಅಕಾಡೆಮಿಕ್‌ಕೌನ್ಸಿಲಿನಲ್ಲಿಯೇ ಇರಲಿ, ವಿಶ್ವವಿದ್ಯಾಲಯ ಲೈಬ್ರರಿ ಕಮೀಟಿಯಲ್ಲಿಯೇ ಇರಲಿ, ಸಿಂಡಿಕೇಟ ಸದಸ್ಯರಾಗಿಯೇ ಇರಲಿ ಇದ್ದೆಡೆಗಳಲ್ಲೆಲ್ಲ ತಮ್ಮ ವೈಯುಕ್ತಿಕತೆಯನ್ನು ಮೆರೆದವರು. ಕನ್ನಡ ಪ್ರಾಧ್ಯಾಪಕರಾಗಿ ವಿದ್ಯಾರ್ಥಿಗಳ ಮನೋಗತಿಯನ್ನು ಕಂಡವರು. ವಿವಿಧ ಸ್ಥಾನಗಳಲ್ಲಿದ್ದು ಆಡಳಿತಯಂತ್ರದ ರೂಪ

ರೇಷೆಯನ್ನು ಬಲ್ಲವರು. ಹೀಗೆ ವಿಶ್ವವಿದ್ಯಾಲಯದ ಎಲ್ಲ ಕ್ಷೇತ್ರಗಳ ಪರಿಚಯವಿದ್ದ ಇವರು ವಿಶ್ವವಿದ್ಯಾಲಯಕ್ಕೆ ಕುಲಪತಿಗಳಾಗಿ ಬಂದುದು ವಿಹಿತವೇ ಸರಿ. ವಿಶ್ವವಿದ್ಯಾಲಯದ ಬಗ್ಗೆ ಕಳಕಳಿ ಇದ್ದವರು. ವಿಶ್ವವಿದ್ಯಾಲಯದ ಯಾವ ಭಾಗದಲ್ಲಿ ಯಾವ ನಾಡಿ ಮಿಡಿಯುತ್ತಿದೆಯೆಂಬುದನ್ನು ಅರಿತವರು ಆಗಿದ್ದುದರಿಂದ ಅವರು ಎಲ್ಲರಿಗೂ ಸಮರ್ಪಕ ಕಾರ್ಯವನ್ನು ವಹಿಸಿಕೊಡಬಲ್ಲವರಾಗಿದ್ದರು. ಸ್ವಭಾವತಃ ಸಂಶೋಧನ ಪ್ರವೃತ್ತಿಯವರಾದುದರಿಂದ ಯಾವುದೇ ವಿಷಯವನ್ನು ವಿವರವಿವರವಾಗಿ ಹಿಂಜಿ ಸಮಸ್ಯೆಯನ್ನು ಬಿಡಿಸಲು ಶಕ್ತರಾಗಿದ್ದರು. ವ್ಯಕ್ತಿವ್ಯಕ್ತಿಗಳಲ್ಲಿ ತಾರತಮ್ಯ, ಭೇದವಿಲ್ಲದೆ ಎಲ್ಲರಿಗೂ ಎಲ್ಲ ಸಮಯದಲ್ಲಿಯೂ ಲಭ್ಯರು. ತಮ್ಮ ಅಧಿಕಾರವ್ಯಾಪ್ತಿಗೊಳಪಟ್ಟ ಯಾವ ಸಹಾಯವನ್ನೂ ಮಾಡಲಿಕ್ಕೆ ಅವರು ಸದಾಸಿದ್ಧರು; ಅವರ ಜನಪ್ರಿಯತೆಗೆ ಮತ್ತೊಂದು ಪ್ರಬಲ ಕಾರಣವೆಂದರೆ ಅವರ ಕ್ಷಮಾಶೀಲ ಸ್ವಭಾವ. ತಪ್ಪು ಮಾಡಿದವರನ್ನು ಕ್ಷಮೆಯಿಂದಲೇ ತಿದ್ದುವ ಅವರ ಸ್ವಭಾವ ಎಲ್ಲರಿಗೂ ಬಹಳ ಅಚ್ಚುಮೆಚ್ಚು.

ಕಚೇರಿಯ ಕೆಲಸವೆಂದರೆ ಅವರಿಗೆ ಶ್ರಮವೆಂಬುದಿಲ್ಲ. ಅಧಿಕಾರದ ಗದಾಪ್ರಹಾರದಿಂದ ಯಾರಿಗೂ ನೋವು ಮಾಡಿದವರಲ್ಲ. ಅವರ ಗುಣಗ್ರಾಹಿತನ, ಶತ್ರುಗಳೂ ಮೆಚ್ಚುವಂಥದ್ದು. ಒಳ್ಳೆಯ ಕಾರ್ಯ ಮಾಡುವವರನ್ನು ಕಂಡರೆ ಇವರಿಗೆ ಪ್ರೀತಿ, ಗೌರವ. ಅಂಥವರ ಬಗ್ಗೆ ಅಭಿಮಾನ ಇಟ್ಟುಕೊಳ್ಳುತ್ತಿದ್ದರು.

ಮಾನವನ ಶ್ರೀಮಂತಿಕೆಯನ್ನು ಅವನ ಹೃದಯವೈಶಾಲ್ಯತೆಯ ಅಳತೆಗೋಲಿನಿಂದ ಅಳೆಯಬೇಕೆಂಬ ಹಿರಿಯ ತತ್ವದಲ್ಲಿ ಅವರು ಅಚಲ ವಿಶ್ವಾಸವುಳ್ಳವರು. ಶಿಕ್ಷಕೇತರ ಸಂಸ್ಥೆಯ ಜೊತೆಯಲ್ಲಾಗಲೀ, ಶಿಕ್ಷಕರ ಸಂಸ್ಥೆಯ ಜೊತೆಯಲ್ಲಾಗಲೀ, ವಿದ್ಯಾರ್ಥಿವೃಂದದ ಜೊತೆಗಾಗಲೀ ಯಾವುದೇ ಪ್ರಶ್ನೆಯನ್ನು ಕುರಿತು ಚರ್ಚಿಸಿದರೂ ಅಲ್ಲಿ ಮುಕ್ತಮನಸ್ಸಿನ ಚರ್ಚೆಗೆ ಸದಾ ಅವಕಾಶ ನೀಡುತ್ತಿದ್ದರು. ಅಧಿಕಾರ, ವ್ಯಕ್ತಿವ್ಯಕ್ತಿಗಳ ತಾರತಮ್ಯ ಇದಾವ ಭೇದಭಾವಗಳಿಗೆ ಅವಕಾಶ ಕೊಡದೆ ಅವರವರ ಸಮಸ್ಯೆಗಳನ್ನು ವಿವರವಾಗಿ ಕೇಳಿ, ತೂಗಿ ಸಮರ್ಪಕ ನಿರ್ಣಯ ತೆಗೆದುಕೊಳ್ಳುವುದರಲ್ಲಿ ಎಂದಿಗೂ ಅವರು ಹಿಂಜರಿದವರಲ್ಲ. ಅವರ ನಿರ್ಣಯಗಳಲ್ಲಿ ಸೌಹಾರ್ದತೆ, ಅನುಕಂಪ, ಅಂತಃಕರಣ ಹಾಗೂ ನ್ಯಾಯನಿಷ್ಠುರತೆ—ಇವೆಲ್ಲವುಗಳ ಸುಂದರಸಮನ್ವಯವನ್ನು ನಾವು ಕಾಣುತ್ತೇವೆ. ಸಮಸ್ಯೆಯನ್ನು ನೇರಮನೋವೃತ್ತಿಯಿಂದ ಪರಿಶೀಲಿಸುವುದರಿಂದ ಯಾವುದೇ ಘಟಕಗಳೊಂದಿಗೆ ಸಾಮರಸ್ಯದಿಂದ ಕಾರ್ಯಗೈಯಲು ಇವರಿಗೆ ಸಾಧ್ಯವಾಗಿದ್ದಿತು.

ಶಿಕ್ಷಣಕ್ಷೇತ್ರದಲ್ಲಿಯೇ ಆಮೂಲಾಗ್ರ ಬದಲಾವಣೆಯನ್ನು ತರಬಹುದಾದ ಸೆಮಿಸ್ಟರ ಪದ್ಧತಿಯನ್ನು ಜಾರಿಗೆ ತಂದಾಗ ಬಹಳ ದೃಢನಿರ್ಧಾರದ ನಿಲುಮೆಯನ್ನು ಇವರು

ತಳೆಯಬೇಕಾಯಿತು. ಈ ಪದ್ಧತಿಯಿಂದ ವಿದ್ಯಾರ್ಥಿಗಳ ಕಲ್ಯಾಣ ಸಾಧ್ಯವೆಂಬುದನ್ನು ಸಂಪೂರ್ಣವಾಗಿ ಖಚಿತಪಡಿಸಿಕೊಂಡ ನಂತರ ತಮ್ಮ ನಿರ್ಧಾರವನ್ನು ಕಾರ್ಯಗತಗೊಳಿಸಲು ಇವರು ಅಣಿಯಾದರು. ಕೆಲ ವಿದ್ಯಾರ್ಥಿಗಳಿಂದ ವಿರೋಧ ವ್ಯಕ್ತಪಟ್ಟಾಗ ಆಯಾ ವಿದ್ಯಾರ್ಥಿಗಳ ಕಾಲೇಜುಗಳಿಗೆ ಹೋಗಿ ಮುಕ್ತಚರ್ಚೆಯಿಂದ ಅವರ ಶಂಕೆಗಳನ್ನು ಮುಕ್ತಗೊಳಿಸಿ, ಅವರಿಗೆ ವಿಷಯದ ಕೂಲಂಕಷ ವಿವರಗಳನ್ನು ಮನದಟ್ಟು ಮಾಡಿಕೊಟ್ಟರು. ಎಂಥ ಸಂದರ್ಭದಲ್ಲೂ ಡಾ. ಹಿರೇಮಠರು ತಮ್ಮ ನಿರ್ಭೀತ ನಿಲುವಿನಿಂದ ಹಿಂದೆ ಸರಿಯುತಕ್ಕವರಲ್ಲ. ಅಸಂಖ್ಯ ವಿದ್ಯಾರ್ಥಿಗಳ ಮಧ್ಯದಲ್ಲಿಯೇ ನುಗ್ಗಿ, ವಿದ್ಯಾರ್ಥಿಗಳ ಮನವೊಲಿಸತಕ್ಕ ಮನೋಧೈರ್ಯ ಇವರದು. ಕೆಲವೊಂದು ಪ್ರಸಂಗಗಳಲ್ಲಿ ಗುರಿಯ ಹಿರಿಮೆಯನ್ನು ಲಕ್ಷ್ಯದಲ್ಲಿರಿಸಿಕೊಂಡು ದುಷ್ಟಶಕ್ತಿಗಳ ದಮನ ಮಾಡಿದ ಪ್ರಸಂಗಗಳೂ ಉಂಟು. ಆದರೆ ಅವು ಬಹಳ ವಿರಳವಾದರೂ ಅವುಗಳನ್ನು ಅರಿತವರ ಮನಸ್ಸಿನಿಂದ ಎಂದೂ ಮಾಸಿಹೋಗಲಾರದಂಥವು. "ವಜ್ರಾದಪಿ ಕಠೋರಾಣಿ ಮೃದೂನಿ ಕುಸುಮಾದಪಿ" ಎಂಬ ಉಕ್ತಿ ಇವರಿಗೆ ತುಂಬ ಅನ್ವಯ.

ನಮ್ಮ ವಿಶ್ವವಿದ್ಯಾಲಯದ ಗ್ರಂಥಾಲಯದ ಬಗ್ಗೆ ಅವರದು ವಿಶೇಷ ಆಸಕ್ತಿ. ಯಾಕೆಂದರೆ "ವಿಶ್ವವಿದ್ಯಾಲಯದ ಹೃದಯವೇ ಅದರ ಗ್ರಂಥಾಲಯ" ವೆಂಬ ಮಾತನ್ನು ಅವರು ಮನಗಂಡವರು. ಗ್ರಂಥಾಲಯದ ಅನೇಕ ಕುಂದುಕೊರತೆಗಳನ್ನು ಅವರು ನಿವಾರಿಸಿ ಅದರ ಪ್ರಗತಿಗೆ ಕಾರಣೀಭೂತರಾಗಿದ್ದಾರೆ. ಅವರು ಅಧಿಕಾರದಲ್ಲಿರುವಾಗಲೇ ವಿಶ್ವವಿದ್ಯಾಲಯ ಗ್ರಂಥಾಲಯದ ಇತಿಹಾಸದಲ್ಲಿಯೇ ಮಹತ್ವಪೂರ್ಣವಾದ ಅಖಿಲಭಾರತ ವಿಶೇಷ ಗ್ರಂಥಾಲಯದ ಸಮ್ಮೇಲನ ಜರುಗಿತು. ಗ್ರಂಥಾಲಯಕ್ಕೆ ತನ್ನದೇ ಆದ ಸ್ವತಂತ್ರಕಟ್ಟಡವೊಂದು ಇದೀಗ ಮೂಡಿಬರುತ್ತಲಿದೆ.

ವಿಶ್ವವಿದ್ಯಾಲಯದ ಕುಲಪತಿ ಸ್ಥಾನದ ಹಿರಿಮೆಯನ್ನು ಕುರಿತು ಡಾ. ಶ್ರೀನಿವಾಸ ಅಯ್ಯಂಗಾರ ಹೇಳುವಂತೆ— ಈಗಿನ ವಿಶ್ವವಿದ್ಯಾಲಯಗಳಿಗೆ ೩ ಜನ ಉಪಕುಲಪತಿಗಳು. ಒಬ್ಬರು ಆಡಳಿತ, ಎರಡನೆಯವರು ಶೈಕ್ಷಣಿಕ ಸಮಸ್ಯೆ, ಮೂರನೆಯವರು ದಿಲ್ಲಿಯಲ್ಲಿದ್ದುಕೊಂಡು ರಾಯಭಾರಿಯಾಗಿ ಹಣ ಸಂದಾಯಿಸುವದು—ಈ ಕಾರ್ಯ ಮಾಡಬೇಕು. ಆದರೆ ಡಾ. ಆರ್. ಸಿ. ಹಿರೇಮಠ ಅವರು ಈ ಮೂರೂ ಪಾತ್ರಗಳನ್ನು ಏಕಾಂಗವೀರರಾಗಿ ನಿರ್ವಹಿಸಿದರು. ಅವರು ಅಧಿಕಾರಕ್ಕೆ ಬಂದಾಗ ವಿಶ್ವವಿದ್ಯಾಲಯದ ಬೆಳ್ಳಿ ಹಬ್ಬದ ಸಂಭ್ರಮದ ಜೊತೆಗೇನೇ ಕಾಮನ್ ಯುನಿವ್ಹರ್ಸಿಟಿ ಆ್ಯಕ್ಟ ಚಲಾವಣೆಯ ಕಾರ್ಯೋನ್ಮುಖವೂ ಮುಂದಿತ್ತು. ಎಲ್ಲವೂ ಅನಿಶ್ಚಿತ. ಹೊಸಹೊಸ ಸಮಸ್ಯೆಗಳು—ಹೊಸಹೊಸ ಕಾಯ್ದೆ; ಹೊಸಹೊಸ ಮುಖಗಳು; ಸಿಂಡಿಕೇಟ ವಿಸರ್ಜನೆ; ಸರಕಾರದ ಪ್ರಭಾವ; ವಿಶ್ವವಿದ್ಯಾಲಯದ ಅಧಿಕಾರ ಮೊಟಕುಗೊಳಿಸುವಿಕೆ— ಈ ಎಲ್ಲ ಸಂದಿಗ್ಧತೆಗಳನ್ನು ಜಾಣಾಕ್ಷತೆಯಿಂದ ಎದುರಿಸಿ ದಕ್ಷತೆಯಿಂದ ಆಡಳಿತ ನಡೆಸಿದರು. ವೈದ್ಯಕೀಯ ಸ್ನಾತಕೋತ್ತರ ವರ್ಗಗಳಿಗೆ ಪ್ರವೇಶ ನೀಡುವ ಅಧಿಕಾರವನ್ನು

ಸರಕಾರ ತಾನು ವಹಿಸಿಕೊಂಡಾಗ ಅದನ್ನು ಬಲವಾಗಿ ಪ್ರತಿಭಟಿಸಿದರು. ವಿದ್ಯಾಕ್ಷೇತ್ರದ ಸ್ವಾತಂತ್ರ್ಯದಲ್ಲಿ ಸರಕಾರ ಹಸ್ತಕ್ಷೇಪ ಮಾಡಕೂಡದೆಂದು ಪ್ರತಿಪಾದಿಸಿದರು.

ಕುಲಪತಿ ಡಾ. ಆರ್. ಸಿ. ಹಿರೇಮಠರವರ ಸಾಧನೆಗಳನ್ನು ಸಮಗ್ರವಾಗಿ ಸಂಗ್ರಹಿಸಿ ಹೇಳಿದಾಗ ಮಾತ್ರ ಅದರ ಕಲ್ಪನೆ ನಮಗೆ ಬರುವುದರಿಂದ ಅವುಗಳನ್ನು ಇಲ್ಲಿ ಗಮನಿಸಬಹುದಾಗಿದೆ :

**೧. ಹೊಸ ವಿಭಾಗಗಳು :** ವಿಶ್ವವಿದ್ಯಾಲಯು ತನ್ನ ಜ್ಞಾನಶಾಖೆಗಳನ್ನು ವಿಸ್ತರಿಸುತ್ತಲೇ ಹೋಗಬೇಕೆಂಬುದು ಡಾ. ಹಿರೇಮಠರವರ ಸಂಪೂರ್ಣ ನಂಬಿಕೆ. ಹೀಗಾಗಿ ಸಂಗೀತವಿಭಾಗ, ಯೋಗಾಧ್ಯಯನ ವಿಭಾಗ, ಬಿಜಿನೆಸ್ ಮ್ಯಾನೇಜಮೆಂಟ ವಿಭಾಗ, ಗಾಂಧಿ ಅಧ್ಯಯನ ವಿಭಾಗ, ಕಂಪ್ಯೂಟರ ಸೆಂಟರ, ಸೆಂಟ್ರಲ್ ಇನ್ಸ್ಟ್ರುಮೆಂಟೇಶನ್ ಪ್ರಯೋಗಶಾಲೆಗಳನ್ನು ತಮ್ಮ ಅಧಿಕಾರಾವಧಿಯಲ್ಲಿ ಪ್ರಾರಂಭಿಸಿದರು.

**೨. ಸಮ್ಮೇಲನ-ಅಧಿಷ್ಠಾನ-ವ್ಯಾಖ್ಯಾನ :** ಪ್ರಾಧ್ಯಾಪಕ ಮತ್ತು ವಿದ್ಯಾರ್ಥಿಗಳ ಗಮನ ಚಳುವಳಿ, ಇತ್ಯಾದಿಗಳಲ್ಲಿ ತೊಡಗದೆ ಯಾವಾಗಲೂ ಶೈಕ್ಷಣಿಕ ಚಟುವಟಿಕೆಗಳತ್ತ ಹರಿಯಬೇಕೆಂದು ಅಖಿಲಭಾರತ ಮಟ್ಟದ ಅನೇಕ ಸಮ್ಮೇಲನಗಳನ್ನು, ವಿಚಾರ ಸಂಕಿರಣಗಳನ್ನು ಈ ಕಾಲದಲ್ಲಿ ಭರದಿಂದ ಜರುಗಿಸಿದರು. ಅಖಿಲಭಾರತ ವಿಶೇಷ ಗ್ರಂಥಾಲಯ ಸಮ್ಮೇಲನ, ಅಖಿಲಭಾರತ ಮಾನಸಶಾಸ್ತ್ರ ಸಮ್ಮೇಲನ, ಅಖಿಲಭಾರತ ಎಪಿಗ್ರಾಫಿ ಸಮ್ಮೇಲನ, ಅಖಿಲಭಾರತ ಸ್ಮಾರಕಶಿಲೆಗಳ ಸಮ್ಮೇಲನ, ಅಖಿಲಭಾರತ ಪ್ರಾಣಿಶಾಸ್ತ್ರ ಸಮ್ಮೇಲನ, ಅಖಿಲಭಾರತ ಮಾನವಶಾಸ್ತ್ರ ಸಮ್ಮೇಲನ, ಜೈನಪೀಠ ಸ್ಥಾಪನೆಯ ಬೀಜಾಂಕುರ, ಮೃತ್ಯುಂಜಯ ಸ್ಮಾರಕ ವ್ಯಾಖ್ಯಾನಮಾಲೆಯ ಪ್ರಾರಂಭ, ಮಹಾದೇವಪ್ಪ ರಾಂಪುರೆ ಸ್ಮಾರಕ ವಿಶೇಷೋಪನ್ಯಾಸಮಾಲೆಯ ಪ್ರಾರಂಭಗಳನ್ನು ಈ ಅವಧಿಯಲ್ಲಿ ಕಾಣುತ್ತೇವೆ.

**೩. ವಿಶೇಷ ಸಾಧನೆಗಳು :** ಡಾ. ಹಿರೇಮಠರದು ಊರ್ಧ್ವಮುಖವ್ಯಕ್ತಿತ್ವ ಹೀಗಾಗಿ ಲಭಿಸಿದ ಅವಕಾಶಗಳಿಗೆ ಅರ್ಥ ತುಂಬುವುದರೊಂದಿಗೆ ಹೊಸಹೊಸ ಅವಕಾಶಗಳನ್ನು ಕುದುರಿಸುವ ಕೆಲಸವೂ ಇವರ ಆಡಳಿತಾವಧಿಯಲ್ಲಿ ಜರುಗಿತು. ವಿಶ್ವವಿದ್ಯಾಲಯದ ರಜತೋತ್ಸವ ಈ ಅವಧಿಯಲ್ಲಿ ಆಗಮಿಸಿದುದೊಂದು ವಿಶೇಷಸಂಗತಿ. ತುಂಬ ವೈಭವಪೂರ್ಣವಾಗಿ, ವೈಶಿಷ್ಟ್ಯಪೂರ್ಣವಾಗಿ ಜರುಗಿದ ಈ ಉತ್ಸವದ ಅಂಗವಾಗಿ ವರ್ಷದುದ್ದಕ್ಕೂ ವಿಶೇಷೋಪನ್ಯಾಸಗಳನ್ನು ಹಮ್ಮಿಕೊಳ್ಳುವುದರೊಂದಿಗೆ ಹಲವಾರು ವಿಶೇಷ ಪ್ರಕಟನೆಗಳನ್ನು ಹೊರತರಲಾಯಿತು. ಮೂರು ಜನಪದ ಸಮ್ಮೇಲನಗಳೂ ಅಖಿಲಭಾರತ ಹಾಕಿ-ಕ್ರಿಕೆಟ್-ಫುಟ್‌ಬಾಲ್ ಮಹೋತ್ಸವಗಳೂ ಈ ಅವಧಿಯಲ್ಲಿ ವಿಜೃಂಭಣೆಯಿಂದ ನಡೆದವು. ಈಗ ವಿಶ್ವವಿದ್ಯಾಲಯದ ಮತ್ತು ಕರ್ನಾಟಕ

ಕಾಲೇಜುಗಳ ಕ್ರೀಡಾಂಗಣಗಳು ವಿಸ್ತಾರಗೊಳ್ಳುವುದರೊಂದಿಗೆ ನಾಲ್ಕು ವರ್ಷಗಳು ಹೆಚ್ಚು ಚೈತನ್ಯದಿಂದ, ಲವಲವಿಕೆಯಿಂದ ಕಂಗೊಳಿಸುತ್ತಿದ್ದವು. ಇದೇ ಅವಧಿಯಲ್ಲಿ ಮಂಜೂರು ಪಡೆದ ಅನೇಕ ಹೊಸ ಪ್ರಾಧ್ಯಾಪಕ ಹುದ್ದೆಗಳು ತುಂಬಲ್ಪಟ್ಟವು. ಹಾಗೆಯೇ ಅನೇಕ ಸಂಶೋಧನ ಸಹಾಯಕರು, ಡೆಮೋನಸ್ಟ್ರೇಟರು ಅಧ್ಯಾಪಕರೆಂದು ಬಡತಿಹೊಂದಿದರು. ಸೆಮಿಸ್ಟರ ಪದ್ಧತಿಯ ಪ್ರಾರಂಭ, ಪರೀಕ್ಷಾಪದ್ಧತಿಯ ಸುಧಾರಣೆ ಮತ್ತು ಅಭ್ಯಾಸಕ್ರಮದ ಪರಿಷ್ಕರಣಗಳು ಈ ಸಮಯದ ಇತರ ಸಾಧನೆಗಳು.

**೪. ಸ್ನಾತಕೋತ್ತರ ಕೇಂದ್ರಗಳು :** ಕಲಬುರ್ಗಿ, ಸಂಡೂರ ಹಾಗೂ ಕಾರವಾರಗಳಲ್ಲಿನ ಸ್ನಾತಕೋತ್ತರ ಕೇಂದ್ರಗಳು ಹೊಸಮುಖಗಳನ್ನು ಮೂಡಿಸಿಕೊಂಡು, ಇನ್ನಷ್ಟು ಸಮೃದ್ಧವಾಗಿ ಬೆಳೆಯುವಲ್ಲಿಯೂ ಡಾ. ಹಿರೇಮಠ ಅವರ ಪಾತ್ರ ವಿಶೇಷವಾಗಿದೆ.

ಅವರ ಹಿರಿತನದಲ್ಲಿ ಕಲಬುರ್ಗಿಕೇಂದ್ರದಲ್ಲಿ ಈ ಹೊಸ ವಿಭಾಗಗಳು ಸ್ಥಾಪಿತಗೊಂಡವು: ಅರ್ಥಶಾಸ್ತ್ರ, ಸಮಾಜಶಾಸ್ತ್ರ, ಮೈಕ್ರೋಬಯಾಲಜಿ, ಅಪ್ಲಾಯಿಡ್ ಇಲೆಕ್ಟ್ರಾನಿಕ್ಸ, ಹಿಂದಿ ಹಾಗೂ ವಾಣಿಜ್ಯಶಾಸ್ತ್ರ.

ಕಾರವಾರದಲ್ಲಿರುವ ಸಾಗರ ಜೀವಶಾಸ್ತ್ರ ವಿಭಾಗವನ್ನು ಅತ್ಯಾಧುನಿಕ ರೀತಿಯಲ್ಲಿ ವಿಸ್ತರಿಸಿ, ಸಮುದ್ರ ಸಂಪತ್ತಿನ ಅಧ್ಯಯನಕ್ಕೋಸುಗ ಸರ್ವ ಅನುಕೂಲತೆಗಳನ್ನು ಒದಗಿಸಿಕೊಡಲಾಯಿತು.

**೫. ನೂತನ ಕಟ್ಟಡಗಳು :** ಛೋಟಾಮಹಾಬಳೇಶ್ವರದ ನಿಸರ್ಗಸೌಂದರ್ಯಕ್ಕೆ ಕಟ್ಟಡಗಳು ಇನ್ನೂ ಹೆಚ್ಚಿನ ರಮಣೀಯತೆಯನ್ನು ಒದಗಿಸಿವೆ. ಡಾ. ಹಿರೇಮಠ ಅವರ ಪಾಲು ಇದರಲ್ಲಿ ಗಮನಾರ್ಹವಾಗಿದೆ. ಪ್ರಾಧ್ಯಾಪಕ ಹಾಗೂ ವಿದ್ಯಾರ್ಥಿವರ್ಗಗಳಿಗೆ ಅತ್ಯಾವಶ್ಯಕವಾಗಿದ್ದ, ಅವರೆಲ್ಲರ ಬಹಳ ವರ್ಷಗಳ ಕನಸಾಗಿದ್ದ ಗ್ರಂಥಾಲಯ ಕಟ್ಟಡ ತಲೆ ಎತ್ತಿ ನಿಲ್ಲುವಂತಾಯಿತು. ಭೌತಶಾಸ್ತ್ರ ವಿಭಾಗದ ಕಟ್ಟಡದ ಕೆಲಸವೂ ಪ್ರಾರಂಭವಾಗಿ ಭರದಿಂದ ಸಾಗಿತು. ಇದಲ್ಲದೆ ಮುಂದಗತಿಯಿಂದ ಸಾಗಿದ್ದ ಕನ್ನಡ ಅಧ್ಯಯನಪೀಠ, ವಿದ್ಯಾರ್ಥಿಧಾಮ, ಭೂಗರ್ಭಶಾಸ್ತ್ರ ಹಾಗೂ ನಾಲ್ಕನೆಯ ದರ್ಜೆಯ ನೌಕರರ ವಸತಿ ಕಟ್ಟಡಗಳ ನಿರ್ಮಾಣಕಾರ್ಯ ತ್ವರಿತಗೊಂಡು ಪೂರ್ಣಗೊಂಡವು.

ಅಪೂರ್ಣಸ್ಥಿತಿಯಲ್ಲಿ ನಿಂತಿದ್ದ ಕಾಯ್ದೆ ಕಾಲೇಜುಕಟ್ಟಡ, ಕರ್ನಾಟಕಕಾಲೇಜ ಆವರಣದಲ್ಲಿಯ ಗ್ರಂಥಾಲಯ ಕಟ್ಟಡಗಳು ಪೂರ್ಣಗೊಂಡು ಆ ಪ್ರದೇಶಕ್ಕೆ ಸೌಧಸೌಂದರ್ಯವನ್ನೊದಗಿಸಿವೆ.

ಕಲಬುರ್ಗಿ ಕೇಂದ್ರದಲ್ಲಿ ಸಮಾಜಶಾಸ್ತ್ರ ಮತ್ತು ಕಲಾ ವಿಭಾಗಗಳ ಕಟ್ಟಡ, ಗ್ರಂಥಾಲಯ ಕಟ್ಟಡ, ವಿದ್ಯಾರ್ಥಿ ವಸತಿಗೃಹ, ಪ್ರಾಧ್ಯಾಪಕ-ಸಿಬ್ಬಂದಿಗಳ ವಸತಿಗೃಹಗಳು,

ರಸ್ತೆಗಳು, ಅತಿಥಿಗೃಹ, ಮೈಕ್ರೊಬಯಾಲಜಿ, ಇಲೆಕ್ಟ್ರಾನಿಕ್ಸ್ ವಿಭಾಗಗಳ ಕಟ್ಟಡಗಳು ರೂಪುಗೊಳ್ಳುವ ಹವಣಿಕೆ ಪಡೆದವು.

ಸಂಡೂರ ಕೇಂದ್ರದಲ್ಲಿ ಮೆಟಲರ್ಜಿ ಕಟ್ಟಡ ಹಾಗೂ ಕೆಮಿಕಲ್ ಇಂಜನಿಯರಿಂಗ್ ಕಟ್ಟಡಗಳ ನಿರ್ಮಾಣದ ವ್ಯವಸ್ಥೆಗಳು ರೂಪುಗೊಂಡವು: ಅಲ್ಲದೆ ಪ್ರಾಧ್ಯಾಪಕ, ಸಿಬ್ಬಂದಿಗಳಿಗಾಗಿ ವಸತಿಗೃಹಗಳು ನಿರ್ಮಾಣವಾದವು.

ಕಾರವಾರ ಕೇಂದ್ರದಲ್ಲಿ ಪ್ರಾಧ್ಯಾಪಕರಿಗಾಗಿ ವಸತಿಗೃಹಗಳು. ಗೃಹನಿರ್ಮಾಣ ಮಂಡಳಿಯಿಂದ ಕೊಂಡುಕೊಳ್ಳಲ್ಪಟ್ಟವು. ಹಾಗೂ ಸಾಗರ ಜೀವವಿಜ್ಞಾನ ವಿಭಾಗದ ಕಟ್ಟಡದ ವಿಸ್ತರಣೆಯಾಯಿತು.

ಒಟ್ಟಿನಲ್ಲಿ ಹಲವು ಬಗೆಯ ಪ್ರಗತಿಯನ್ನು ಏಕಮುಖವಾಗಿ, ಶೀಘ್ರವಾಗಿ ಸಾಧಿಸಿ ವಿಶ್ವವಿದ್ಯಾಲಯದ ಆರ್ಥಿಕ, ಶೈಕ್ಷಣಿಕ ಪ್ರಗತಿಯನ್ನು ಉತ್ತಮಗೊಳಿಸಿದ ಕೀರ್ತಿ ಡಾ. ಆರ್. ಸಿ. ಹಿರೇಮಠರಿಗೆ ಸಲ್ಲುತ್ತದೆ.

■ ■

# ವಚನಸಾಹಿತ್ಯಸಂಪಾದಕ : ಆರ್. ಸಿ. ಹಿರೇಮಠರು

ಎ. ಶಿವಾನಂದ

ಕನ್ನಡ ವಿದ್ವತ್ಪ್ರಪಂಚದಲ್ಲಿ ತಮ್ಮ ಅಪೂರ್ವ ಸಂಶೋಧನೆ ಹಾಗೂ ವಿನೂತನ ಜಿಜ್ಞಾಸುಗಳಿಂದ ಜ್ಞಾನದಿಗಂತವನ್ನು ವಿಸ್ತರಿಸುತ್ತ ಬಂದ ಹಿರಿಯ ವ್ಯಕ್ತಿ ಡಾ. ಆರ್. ಸಿ. ಹಿರೇಮಠರು, ವ್ಯಾವಹಾರಿಕ ಮೌಲ್ಯಗಳಿಗಾಗಿ ಸಾಹಿತ್ಯವನ್ನು ದುಡಿಸಿಕೊಂಡಿದ್ದರೆ ಅತಿ ಹೆಚ್ಚಿನ ಕೀರ್ತಿ, ಲಾಭಗಳನ್ನು ಪಡೆಯಬಹುದಾಗಿದ್ದರೂ ಜನಾಂಗದ ಶಾಶ್ವತ ಮೌಲ್ಯಗಳಿಗಾಗಿ ಹೋರಾಡಿದುದು. ಕರ್ನಾಟಕದ ಆದ್ಯರ ವಚನಸಾಹಿತ್ಯದತ್ತ ತಮ್ಮ ಆದ್ಯ ಗಮನ ಹರಿಸಿದುದು, ಅದನ್ನು ಆಧುನಿಕಮತಿಗಳೊಪ್ಪುವ ಹಾಗೆ ಗ್ರಂಥಸಂಪಾದನೆಯ ಅತ್ಯಾಧುನಿಕ ವೈಜ್ಞಾನಿಕ ಪದ್ಧತಿಯ ಮೇಲೆ ಸಂಸ್ಕರಿಸಿ, ಸಂಪಾದಿಸಿ, ಪ್ರಕಟಿಸಿದುದು, ಆ ವಚನಗ್ರಂಥಗಳಿಗೆ ವಿಸ್ತಾರವಾದ ಪೀಠಿಕೆಗಳನ್ನೊದಗಿಸಿದುದು, ಆಯುಷ್ಯದಲ್ಲಿನ ಆಳವಾದ ಚಿಂತನಪರ ವೇಳೆಯನ್ನು ಈ ಸಾಹಿತ್ಯಸಂಶೋಧನೆಗೆ ಮೀಸಲಿಟ್ಟು ದುಡಿದುದು ಒಬ್ಬ ವ್ಯಕ್ತಿ ಒಂದು ನಾಡಿನ ಜನಾಂಗದ ಅಮೂಲ್ಯಸಾಹಿತ್ಯಭಂಡಾರಕ್ಕೆ ತನ್ನನ್ನು ತಾನು ಹೇಗೆ ಸಮರ್ಪಿಸಿಕೊಳ್ಳಬಲ್ಲನೆಂಬುದಕ್ಕೆ ಉಜ್ವಲ ನಿದರ್ಶನ.

ಕಾಲನ ದವಡೆಯಲ್ಲಿ ಜೀರ್ಣಗೊಳ್ಳುತ್ತ, ಹುಳುಹುಪ್ಪಡಿಗಳಿಗಾಹಾರವಾಗುತ್ತ, ತಲೆಮಾರಿನಿಂದ ತಲೆಮಾರಿಗೆ ಮನೆಮಠಗಳ ಜಗುಲಿಯ ಮೇಲೆ ಪೂಜೆಗೊಳುತ್ತ, ನೀರುಹತ್ತಿ ನಿರ್ನಾಮವಾಗುತ್ತ ನಡೆದಿದ್ದ ಈ ಅಕ್ಷಯಜ್ಞಾನನಿಧಿಯನ್ನು 'ಇದು ನಮ್ಮ ಪೂರ್ವಜರ ಸಂಪತ್ತು, ಆಸ್ತಿ'ಯೆಂದು ಹೇಳಿ ಅದರ ರಕ್ಷಣೆಗಾಗಿ. ಪ್ರಕಟಣೆಗಾಗಿ ತನ್ನ ಜೀವನವನ್ನೇ ಮುಡಿಪಿಟ್ಟು ಮರೆಯಾದ ವ್ಯಕ್ತಿ 'ವಚನಪಿತಾಮಹ' ಹಳಕಟ್ಟಿ. ಮುಖ್ಯವಾಗಿ ಕತ್ತಲೆ ಕವಿದಿದ್ದ ನಾಡಿನಲ್ಲಿ ವಚನಜ್ಯೋತಿಯನ್ನು ಬೆಳಗಿಸುವುದರ ಮೂಲಕ ಅವರು ವಚನಸಂಪಾದನಲೋಕದ ಪ್ರಾಥಮಿಕ ಘಟ್ಟಕ್ಕೆ ನೆಲಗಟ್ಟು ಹಾಕಿದರು.

ವಚನಸಾಹಿತ್ಯವನ್ನು ಗ್ರಂಥಸಂಪಾದನಾ ತತ್ತ್ವಕ್ಕನುಸರಿಸಿ ಪ್ರಕಟಿಸಿದ ಲಿಂ. ಪಿ. ಶಿ. ಬಸವನಾಳರು ಹಳಕಟ್ಟಿಯವರಿಂದ ಮುಂದಿನ ಮಣಿಹವನ್ನು ಕೈಗೆತ್ತಿಕೊಂಡರು. ಆಧುನಿಕ ವಚನಸಂಪಾದನಾ ಭೂಮಿಯನ್ನು ವೈಜ್ಞಾನಿಕವಾಗಿ ಹದಗೊಳಿಸಲು ಮೊದಲಾದರು, ಮಾದರಿಯಾದರು.

ವಚನಸಂಪಾದನೆಯ ಕಿರುದೊರೆ ಹೆದ್ದೊರೆಯಾಗಿ ಹರಿದುಬಂದುದು ಡಾ. ಹಿರೇಮಠ ಅವರ ಕಾಲದಲ್ಲಿ. ವಚನಪಿತಾಮಹ ಡಾ. ಹಳಕಟ್ಟಿ ಹಾಗೂ ಶ್ರೀಬಸವನಾಳರ ತರುವಾಯ ದಲ್ಲಿ ಇವರು ಒಂದು ಪ್ರತ್ಯೇಕ ಆಧುನಿಕ ವಚನಸಂಪಾದನಾ ಸಮಯದ (School of Textual Criticism of Vachana Literature) ಸಂಸ್ಥಾಪಕರಾದರು. ಗ್ರಂಥ ಸಂಪಾದನೆಯ ತಾತ್ವಿಕ, ಆನ್ವಯಿಕ ಸಿದ್ಧಾಂತಗಳ ಹಿನ್ನೆಲೆಯಲ್ಲಿ ಎಲ್ಲ ಸಾಧ್ಯತೆಗಳನ್ನು ಸಾಧ್ಯವಾಗಿಸಿಕೊಂಡು ಪ್ರಾಚೀನ ತಾಳೆಗರಿ, ಕಾಗದಪ್ರತಿಗಳಲ್ಲಿ ಹುದುಗಿದ್ದ ಅಸಂಖ್ಯಾತ ವಚನಕಾರರ ವಚನಗಳನ್ನು ಇವರು ಪರಿಷ್ಕರಿಸಿದರು. ಕೇವಲ ಸಂಪಾದಿಸುವುದಷ್ಟೇ ಅಲ್ಲ; ಅದಕ್ಕೆ ಸಂಬಂಧಪಟ್ಟ ಎಲ್ಲ ಪುರಾವೆಗಳನ್ನೂ ಆಮೂಲಾಗ್ರವಾಗಿ ಸಂಶೋಧಿಸಿ, ಸುಶಿಕ್ಷಿತ ಜನಮನದ ಅಭಿರುಚಿ ವಚನವಾಙ್ಮಯದಲ್ಲಿ ವರ್ಧಿಸುವಂತೆ ಮಾಡಿದರು.

ಡಾ. ಹಿರೇಮಠರ ಸೇವಾವಧಿಯ ಸಂಸ್ಮರಣೀಯ ಒಂದು ಮಹಾಕಾರ್ಯವೆಂದರೆ ಅವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ 'ಸಮಗ್ರ ವಚನವಾಙ್ಮಯ ಸಂಶೋಧನ, ಸಂಸ್ಕರಣ ಮತ್ತು ಪ್ರಕಟನ ಯೋಜನೆ'ಯನ್ನು ಹಮ್ಮಿಕೊಂಡುದು (೧೯೬೨). ಇದನ್ನು ರೂಪಿಸು ವಾಗ ಅವರ ದೃಷ್ಟಿಯಲ್ಲಿದ್ದ ಭಾರತೀಯ ಮಟ್ಟದ ಗ್ರಂಥಸಂಪಾದನಾಲೋಕದ ಮಹ ತ್ತರ ಹೊತ್ತಗೆ, ವಿಧಾನಗಳೆಂದರೆ ಪುಣೆಯ ಭಂಡಾರಕರ ಪ್ರಾಚ್ಯಸಂಶೋಧನಸಂಸ್ಥೆಯಲ್ಲಿ ಪರಿಷ್ಕೃತಗೊಂಡ ವಿ. ಎಸ್. ಸುಂಥಣಕರ ಅವರ ಮಹಾಭಾರತ ಸಂಪುಟಗಳು ಹಾಗೂ ಅಣ್ಣಾಮಲೈ ವಿಶ್ವವಿದ್ಯಾಲಯದ ಕಂಬರಾಮಾಯಣ ಸಂಸ್ಕರಣವಿಧಾನಗಳು. ಈ ವೈಜ್ಞಾನಿಕ ವಿಚಾರಗಳಿಂದ ಪ್ರೇರೇಪಿತರಾದ ಡಾ. ಹಿರೇಮಠರು ವಚನಸಾಹಿತ್ಯವನ್ನು ಬೆಳಕುಗಾಣಿಸುವಲ್ಲಿ ಆ ಎಲ್ಲ ತತ್ತ್ವಗಳನ್ನು ತಮ್ಮ ಸಂಪಾದನಕ್ರಿಯೆಗೆ ಅಳವಡಿಸಿ ಕೊಳ್ಳುತ್ತ ಬಂದರು. ಮತ್ತು ಅವಕ್ಕೆಲ್ಲ ತಮ್ಮದೇ ಆದ ಆಧಾರ, ಅನುಭವ, ವೈಚಾರಿಕ ಪ್ರಣಾಲಿಗಳನ್ನು ಒದಗಿಸಿದರು.

ವಚನಗ್ರಂಥಗಳ ಪ್ರಕಾಶನಕಾರ್ಯಕ್ಕೆ ತೊಡಗಿದಾಗ ಈ ಸಂಪಾದಕರು ಇಟ್ಟುಕೊಂಡ ಉದ್ದೇಶಗಳನ್ನು ತಿಳಿದರೆ ಇವರ ಕಾರ್ಯವ್ಯಾಪ್ತಿಯ ಅರಿವು ನಮಗೆ ಸ್ಪಷ್ಟವಾಗುತ್ತದೆ.

(i) ಉಪಲಬ್ಧ ವಚನಗ್ರಂಥದ ಸಮಸ್ತ ಪ್ರತಿಗಳನ್ನು (ತಾಳೆಯೋಲೆ, ಕೋರಿಕಾಗದ ಇತ್ಯಾದಿ) ಭಕ್ತರ ಮನೆ-ಮಠ. ಗುಡಿ-ಗುಂಡಾರಗಳಿಂದ ಸಂಗ್ರಹಿಸುವದು.

(ii) ಪ್ರಾಚೀನಗ್ರಂಥಗಳನ್ನು ನಾಶವಾಗದಂತೆ ಕ್ರಿಮಿನಾಶಕ ದ್ರವ್ಯದಿಂದ ಅವನ್ನು ಸಂಗ್ರಹಾಲಯದಲ್ಲಿ ಜೋಪಾನವಾಗಿರಿಸುವದು (ಈಗ ಇವರು ಆರಂಭಿಸಿದ

ಇಂದಿನ ವಚನಭಾಂಡಾರದಲ್ಲಿ ಸು. ೫೦೦೦ ಪ್ರಾಚೀನ ಹಸ್ತಪ್ರತಿಗಳು (Manuscripts) ಶೇಖರಣೆಗೊಂಡಿವೆ).

(iii) ಸಂಗ್ರಹಿಸಿದ ಹಸ್ತಪ್ರತಿಗಳನ್ನು ಕಾಲ-ದೇಶ-ಭಾಷಾ ಪ್ರಯೋಗಗಳ ವೈಶಿಷ್ಟ್ಯದ ಮೇಲಿಂದ ವರ್ಗೀಕರಣ ಮಾಡುವುದು.

(iv) ವರ್ಗೀಕರಣ ಮಾಡಿದ ಪ್ರತಿಗಳಲ್ಲಿ ಹೆಚ್ಚು ವಿಶ್ವಸನೀಯವಾದ ಒಂದನ್ನು ಆಧರಿಸಿ ಅವರ ಮೂಲಪಾಠದೊಡನೆ ಉಳಿದೆಲ್ಲ ಪ್ರತಿಗಳ ಪಾಠಗಳನ್ನು ಅಡಿ ಟಿಪ್ಪಣಿಯಾಗಿ ಕೊಡುವದು.

(v) ವಚನಕಾರನ ವ್ಯಕ್ತಿತ್ವ, ಭಾಷೆ, ಅನುಭವ, ಸಿದ್ಧಾಂತಗಳ ಮೇಲಿಂದ ಅವನೇ ಬರೆದಿರಬಹುದಾದಷ್ಟು ಹತ್ತಿರ ಹೋಗಿ ಆಯಾ ವಚನದ ಪ್ರತಿಚರಣವನ್ನು, ಪದವನ್ನು ಆಳವಾಗಿ ಪರಿಶೀಲಿಸಿ ಪಾಠನಿಷ್ಕರ್ಷೆ ಮಾಡಿ ಅದನ್ನು ಸಂಪಾದಿಸುವುದು.

(vi) ವಚನಸಾಹಿತ್ಯದ ಅಮೂಲ್ಯ ಪಾರಿಭಾಷಿಕಪದಗಳ ಪ್ರಯೋಗಕೋಶ (Concordance of Vachana Literature) ವನ್ನು ಸಿದ್ಧಪಡಿಸುವದು.

ಇವರಿಂದ ಹೊರಬಂದ ಸಂಪುಟಗಳು ಡೆಮಿ ೧/೮ ಆಕೃತಿಯಲ್ಲಿದ್ದು, ಪ್ರತಿ ಸಂಪುಟವೂ ಸುಮಾರು ೫೦೦ ರಿಂದ ೧೦೦೦ ಕ್ಕೂ ಹೆಚ್ಚಿನ ಪುಟಸಂಖ್ಯೆಯನ್ನು ಹೊಂದಿದೆ. ಡಾ. ಹಿರೇಮಠರು ೩೦೦ ಪುಟಗಳ ಒಂದು ವಚನ ಸಂಪುಟಕ್ಕೆ ೨೦೦ ಪುಟದಷ್ಟು ಪ್ರಸ್ತಾವನೆ, ಟಿಪ್ಪಣಿ, ಶಬ್ದಕೋಶಗಳನ್ನು ಒದಗಿಸುವ ಯೋಜನೆ ಇಟ್ಟುಕೊಂಡು, ವಚನಗ್ರಂಥಗಳ ಅಧ್ಯಯನ ಕ್ರಮಕ್ಕೊಂದು ಶಾಶ್ವತರೂಪ ಕೊಟ್ಟರು. ಇಷ್ಟು ವ್ಯವಸ್ಥಿತವಾದ ಕಾರ್ಯ ವಚನಸಾಹಿತ್ಯಸಂಪಾದನಾ ಕ್ಷೇತ್ರದಲ್ಲಿ ಈ ಹಿಂದೆ ಯಾವುದೇ ವ್ಯಕ್ತಿ, ಸಂಘ, ಸಂಸ್ಥೆ, ಪರಿಷತ್ತು, ವಿಶ್ವವಿದ್ಯಾಲಯಗಳಿಂದ ನಡೆದಿರಲಿಲ್ಲವೆಂಬುದು ಗಮನಾರ್ಹ. ಇವರು ಸಂಪಾದಿಸಿದ ವಚನಗ್ರಂಥಗಳ ಸಂಪಾದನಾ ವೈಶಿಷ್ಟ್ಯ ಹಾಗೂ ಅವುಗಳ ಮಹತ್ವವನ್ನು ಕುರಿತು ಇಲ್ಲಿ ಸಂಗ್ರಹಾತ್ಮಕವಾಗಿ ಹೇಳಲಾಗಿದೆ.

**ಚೆನ್ನಬಸವಣ್ಣನವರ ವಚನಗಳು :** ಕ. ವಿ. ದ ವಚನವಾಙ್ಮಯ ಶಾಖೆಯಿಂದ ಪ್ರಕಟಿತವಾದ ಈ ಹೆಸ್ರೊತ್ತಿಗೆ ಡಾ. ಹಿರೇಮಠ ಅವರ ಅದ್ವಿತೀಯ ಸಾಹಿತ್ಯ ಸಂಶೋಧನೆ, ಚಾರಿತ್ರಿಕ ದೃಷ್ಟಿ ಹಾಗೂ ಗ್ರಂಥಪರಿಷ್ಕರಣವಿಧಾನಗಳನ್ನೊಳಗೊಂಡ ಅಮರಕೃತಿ. ಕ್ರಿ. ಶ. ೧೯೧೪ ರಲ್ಲಿ ಪ್ರಕಟವಾದ ಬಳ್ಳಾರಿಯ ಕಲ್ಲಚ್ಚಿನ ಅಸ್ತವ್ಯಸ್ತ ಪ್ರತಿ ಹಾಗೂ ಹಳಕಟ್ಟಿಯವರು ಷಟ್‌ಸ್ಥಲಕಟ್ಟಿಗನುಗುಣವಾಗಿ ಪ್ರಕಟಿಸಿದ ಕೇವಲ ೬೮೯ ವಚನಗಳ ಒಂದು ಗ್ರಂಥ, ಇವನ್ನು ಬಿಟ್ಟರೆ ಚೆನ್ನಬಸವಣ್ಣನವರ ವಚನಗಳ ಪರಿಷ್ಕರಣ ಕಾರ್ಯವೇ ನಡೆದಿರಲಿಲ್ಲ. ಹಳಕಟ್ಟಿಯವರು ತಮ್ಮ ವಚನಗ್ರಂಥ ಪ್ರಕಟ

ವಾದ ಮೇಲೆ 'ಶಿವಾನುಭವ' ಪತ್ರಿಕೆಯ ೨೫ನೆಯ ವಾರ್ಷಿಕ ವರದಿಯಲ್ಲಿ ಹೀಗೆ ಬರೆಯುತ್ತಾರೆ. 'ಚೆನ್ನಬಸವಣ್ಣನ ಅನೇಕ ಹೊಸ ವಚನಗಳು ಈಚೆಗೆ ನನಗೆ ಉಪಲಬ್ಧವಾಗಿದ್ದು, ಅವು ಬಹಳ ಮಹತ್ವದವಿರುತ್ತವೆ. ಅವುಗಳನ್ನು ಸಹ ಇದರಲ್ಲಿ ಸಮಾವೇಶಮಾಡುವುದು ಅವಶ್ಯವಿದೆ' (ಪುಟ ೪೪೧). ಅವರ ಈ ಹಂಬಲ ಡಾ. ಹಿರೇಮಠರ ಹೃದ್ಭಿತ್ತಿಯಲ್ಲಿ ಎಷ್ಟೊಂದು ಗಾಢವಾಗಿದ್ದಿತೆಂದರೆ ಪ್ರಾಚೀನವಾದ ೮೦ ಹಸ್ತಪ್ರತಿಗಳ ಆಧಾರದ ಮೇಲೆ ಚೆನ್ನಬಸವಣ್ಣನವರ ೧೫೦೩ ವಚನಗಳನ್ನು ಹುಡುಕಿ, ಅವನ್ನು ಜೋಕೆ ತೂಕಗಳಿಂದ ಮೂಲದ ಷಟ್‌ಸ್ಥಲಕಟ್ಟಿಗೆ ಭಂಗ ಬರದಂತೆ ಸಂಯೋಜಿಸಿ, ವಚನವಾಙ್ಮಯದಲ್ಲಿಯೇ ಅಪೂರ್ವವಾದ ಕೃತಿಯೊಂದನ್ನು ವಿಸ್ತಾರವಾದ ಪೀಠಿಕೆಯಿಂದ ಸಂಪಾದಿಸಿ, ಪ್ರಕಟಿಸಿ ಕನ್ನಡಿಗರ ಕೈಗಿತ್ತರು. ಇಲ್ಲಿನ ಸಂಪಾದನೆಯಲ್ಲಿ ಡಾ. ಹಿರೇಮಠರು ಅನುಸರಿಸಿದ ತತ್ತ್ವಗಳೂ ಅಷ್ಟೇ ಹೊಸವು. ಪ್ರತಿ ವಚನಕ್ಕೂ ಆಯಾ ಪುಟಗಳಲ್ಲಿ ಅಡಿಟಿಪ್ಪಣಿ ರೂಪದಲ್ಲಿ ಬೇರೆ ಪಾಠಗಳನ್ನು ಒದಗಿಸಿದ್ದು, ಪ್ರಸ್ತಾವನೆಯ ಸುಮಾರು ೭೫ ಪುಟಗಳನ್ನು ತಾವು ಆಕರವಾಗಿಟ್ಟುಕೊಂಡ ತಾಳೆಗರಿ ಪ್ರತಿ, ಕೋರಿಕಾಗದದ ಪ್ರತಿ ಹಾಗೂ ಮುದ್ರಣ ಪ್ರತಿಗಳ ಸಾದ್ಯಂತ ವಿವರಗಳಿಗೆ ಮೀಸಲಿಟ್ಟುದು ಇಲ್ಲಿನ ಪದ್ಧತಿಯಾಗಿದೆ.

**ಬಸವಣ್ಣನವರ ವಚನಗಳು :** ಬಸವಣ್ಣನವರ ವಚನಗಳನ್ನು ಈ ಹಿಂದೆ ಕ್ರಿ. ಶ. ೧೮೮೯ ರಲ್ಲಿ ಬ. ಮರಿಶಂಕರದೇವರು, ೧೯೨೬ ರಲ್ಲಿ ಹಳಕಟ್ಟಿಯವರು, ೧೯೬೨ ರಲ್ಲಿ ಶಿ. ಶಿ. ಬಸವನಾಳರು ಪ್ರಕಟಪಡಿಸಿದ್ದರು. ಹಿಂದೆ ಪ್ರಕಟಗೊಂಡಿದ್ದರೂ ಸಹ ಡಾ. ಹಿರೇಮಠರು ತಮ್ಮ ಕಾಲದಲ್ಲಿ ಬೆಳೆದುಬಂದ ಭಾಷಾವಿಜ್ಞಾನ (Linguistics) ಸಾಹಿತ್ಯಶೈಲಿಶಾಸ್ತ್ರ(Stylistics)ಗಳ ಹಾಗೂ ಹಸ್ತಪ್ರತಿಗಳ ವೈಪುಲ್ಯತೆಯ ಆಧಾರದ ಮೇಲೆ ಹೊಸ ಹೊಸ ಅಂಶಗಳನ್ನು ಸೇರಿಸಿಕೊಂಡು ಬಸವಣ್ಣನವರ ವಚನಗಳ ಸಂಪಾದನ ಕಾರ್ಯವನ್ನು ಕೈಗೆತ್ತಿಕೊಂಡರು. ಶಿ, ಶಿ. ಬಸವನಾಳರು ತಮ್ಮ 'ಷಟ್‌ಸ್ಥಲ ವಚನ'ಗಳಲ್ಲಿ ೯೬೧ ವಚನಗಳನ್ನು ಸಂಸ್ಕರಿಸಿಕೊಟ್ಟದ್ದಲ್ಲದೆ, ೩೮೪ ವಚನಗಳನ್ನು 'ಹೆಚ್ಚಿಗೆ ದೊರೆತ ವಚನ'ಗಳೆಂದು ಇದ್ದಕ್ಕಿದ್ದಂತೆ ಆಕರ ಪ್ರಮಾಣವಿಲ್ಲದೆ ಸಂಗ್ರಹ ಮಾಡಿದ್ದರು; ಹಾಗೆ ಸಂಗ್ರಹಿಸಿದ ಹೊಸ ವಚನಗಳ ಸಂಸ್ಕರಣಕಾರ್ಯವೂ ಅಲ್ಲಿ ಅಷ್ಟೊಂದು ಸಮರ್ಪಕವಾಗಿರಲಿಲ್ಲ. ಡಾ. ಹಿರೇಮಠರು ಈ 'ಹೊಸ ವಚನ'ಗಳತ್ತ ತಮ್ಮ ಸಂಶೋಧನಾದೃಷ್ಟಿ ಬೀರಿ, ಅವಕ್ಕೆ ತಲಸ್ಪರ್ಶಿಯಾದ ಆಕರಗ್ರಂಥಪ್ರಮಾಣಗಳನ್ನೊದಗಿಸಿದರು. ಈ ಬೆಳಕಿನಲ್ಲಿ ಅವರು ಬಸನಾಳವರಿಂದ ಸಂಗ್ರಹಗೊಂಡ ೩೮೪ ವಚನಗಳಲ್ಲಿ ೫೭ ವಚನಗಳು ಪುನರುಕ್ತಗೊಂಡವುಗಳೆಂದೂ ಉಗ್ಗಡಿಸುವ ಗಬ್ಬಿದೇವನ ೧ ವಚನ, ಚೆನ್ನಬಸವಣ್ಣನ ೪೭ ವಚನಗಳೆಲ್ಲ ಬಸವಣ್ಣನವರ ಮುದ್ರಿಕೆಯ ಹೆಸರಿನಲ್ಲಿ ಸೇರಿಕೊಂಡ ಪ್ರಕ್ಷಿಪ್ತವಚನಗಳೆಂದೂ ಪರಿವೀಕ್ಷಿಸಿ, ಒಟ್ಟು ೧೦೫ ವಚನಗಳನ್ನು ಕಳೆದು (೩೮೪-೧೦೫) = ೨೭೯ ವಚನಗಳು ಮಾತ್ರ ನಿರ್ವಿವಾದವಾಗಿ ಬಸವಣ್ಣನವರವೆಂದು

ನಿಷ್ಕರ್ಷಿಸಿದರು. ಇದಲ್ಲದೆ ತಮ್ಮ ವಚನಭಂಡಾರದಲ್ಲಿನ ೨೭ ಆಕರಗಳನ್ನು ಹರಡಿಕೊಂಡು, ಅವಕ್ಕೆ ಸಂಬಂಧಿಸಿದ ೧೨೬ ತಾಳೆಯೋಲೆ, ೪೪ ಕಾಗದಪ್ರತಿ ಹಾಗೂ ಮುದ್ರಿತವಾದ ೪೮ – ಹೀಗೆ ಒಟ್ಟು ೨೧೮ ಪ್ರತಿಗಳಲ್ಲಿ ಅವಿತು ಕುಳಿತಿದ್ದ ಬಸವಣ್ಣನವರ ೧೩೩೪ ಹೆಚ್ಚಿನ ವಚನಗಳನ್ನು ಪರಿಶೋಧಿಸಿ ಸಂಸ್ಕರಿಸಿದರು. ಇದರಿಂದ ಬಸವನಾಳರಿಂದ ನಿರ್ಧಾರ್ಯವಾದ ೨೭೯ ವಚನಗಳನ್ನು ಬಿಟ್ಟುಕೊಟ್ಟರೂ, ಹಿರೇಮಠರು ತಮ್ಮ ಗ್ರಂಥಸಂಕಲನದಲ್ಲಿ ಯಾವುದೇ ಪುನರುಕ್ತಿ ಮತ್ತು ಪ್ರಕ್ಷಿಪ್ತತೆಗೊಳಗಾಗದ ೧೫೫೫ ಅಚ್ಚ ಹೊಸ ವಚನಗಳನ್ನು ಅನ್ವೇಷಣೆ ಮಾಡಿದರು. ಹಿಂದಿನವರು ಸೇರಿಸಿದ ಷಟ್‌ಸ್ಥಲ ವಚನಗಳನ್ನು ಕಾಂಡ ೧ರಲ್ಲಿ, ವಿವಿಧ ಆಕರಗಳಿಂದ ತಾವು ಆಯ್ದು ವಚನಗಳನ್ನು ೨ನೆಯ ಕಾಂಡದಲ್ಲಿ, ವಿವಾದಾತ್ಮಕವಾದ ಕೆಲವು ವಚನಗಳನ್ನು ಪರಿಶಿಷ್ಟದಲ್ಲಿ ವಿಂಗಡಿಸಿ ಗ್ರಂಥಸಂಪಾದಕನಲ್ಲಿರಬೇಕಾದ ಹೊಣೆಗಾರಿಕೆ, ಪ್ರಾಮಾಣಿಕತೆ ಹಾಗೂ ಸೂಕ್ಷ್ಮ ಪರಿಶೀಲನೆಗಳನ್ನು ಹೆಚ್ಚು ನಿರ್ವ್ಯಾಜ್ಯವಾಗಿ ತೆರೆದು ತೋರಿದರು. ಪಾಠನಿರ್ಣಯದಲ್ಲೂ ಸಹ ಇವರು ಬಸವನಾಳರಿಗಿಂತ ಕೆಲವು ಹೊಸ ಮಾದರಿಗಳನ್ನು ಮುಂದಿಟ್ಟರು. ವಚನಗ್ರಂಥದಲ್ಲಿ ತಾವು ಆಧರಿಸಿದ ಮೂಲಮಾತೃಕೆಗೆ ಪೂರಕಸಾಮಗ್ರಿಯಾದ ಇತರ ಪ್ರತಿಗಳಲ್ಲಿನ ಪಾಠಾಂತರಗಳನ್ನು ಕೊಟ್ಟಿದ್ದರೂ ಸಹ, ಆ ಆ ಪುಟದಲ್ಲಿ ವಚನಗಳ ಪಾಠವನ್ನು ಮೊದಲು ಕೊಟ್ಟು, ಕೆಳಗೆ ಎರಡು ವಿಭಾಗ ಮಾಡಿಕೊಂಡು ಮೇಲಿನ ವಿಭಾಗದಲ್ಲಿ ಆ ವಚನದ ಪಾಠಾಂತರಗಳನ್ನೂ, ಕೆಳಗಿನ ವಿಭಾಗದಲ್ಲಿ ಆ ವಚನದ ಆಕರಗಳನ್ನೂ ಒದಗಿಸಿದ್ದು ಗ್ರಂಥಸಂಪಾದನೆಯಲ್ಲಿ ಇವರು ತೋರಿದ ನೂತನ ತಂತ್ರವೆನ್ನಬಹುದು.

ಇಷ್ಟೇ ಅಲ್ಲ ಬಸವ, ಚೆನ್ನಬಸವರ ವಚನಮುದ್ರಿಕೆಗಳಾದ 'ಕೂಡಲಸಂಗಮದೇವ' ಹಾಗೂ 'ಕೂಡಲ ಚೆನ್ನಸಂಗಮದೇವ' ಇವುಗಳ ಪಲ್ಲಟ ಸಮಸ್ಯೆಯನ್ನು ಪರಿಹರಿಸುವದಕ್ಕೆ ಇವರು ಆಧರಿಸಿದ ೫ ಪ್ರಮಾಣಸೂತ್ರಗಳಂತೂ ತುಂಬ ಮೌಲಿಕವಾದುವು. ಬಸವಣ್ಣನವರ ವಚನಗಳ ಸ್ಥಲನಿರ್ದೇಶನ ಕ್ರಮ, ಸಂಸ್ಕೃತಶ್ಲೋಕಗಳ ವಿವೇಚನೆ, ವಚನಗಳ ಭಾಷೆಗೆ ಸಂಬಂಧಿಸಿದ ನಡುಗನ್ನಡ ವ್ಯಾಕರಣ ಪ್ರಕ್ರಿಯೆಗಳ ಚರ್ಚೆ, ವಚನೋಕ್ತ ಸಂದರ್ಭಕಥೆಗಳ ವಿವರಣೆ, ಪಾರಿಭಾಷಿಕ ವಚನಪದಕೋಶ, ಕಠಿಣ ಪದ ಕೋಶಗಳೆಲ್ಲವನ್ನು ವ್ಯವಸ್ಥಿತವಾಗಿ ಜೋಡಿಸಿಕೊಟ್ಟ ಕ್ರಮವೂ ಇಲ್ಲಿದೆ. ಹೀಗೆ ವಚನ ಸಾಹಿತ್ಯದಲ್ಲೇ ಅದ್ವಿತೀಯ ಪುರುಷರಾದ ಬಸವಣ್ಣನವರ ಅಧಿಕೃತ ವಚನಸಂಪಾದನ ಹೊತ್ತಿಗೆ ಬಸವನಾಳರ ತರುವಾಯ ವೈಶಿಷ್ಟ್ಯಪೂರ್ಣ ಬೆಳವಣಿಗೆಯನ್ನು ಪಡೆದುದು ಡಾ. ಹಿರೇಮಠರ ಸಂಪಾದನಾಕ್ಷೇತ್ರದ ಪ್ರತಿಭೆ ಹಾಗೂ ಪ್ರಾವೀಣ್ಯತೆಗಳ ಪ್ರತೀಕವಾಗಿದೆ. ಇಂತಹ ಮಹತ್ತರ ಕಾರ್ಯವನ್ನು ಬಸವೇಶ್ವರ ಅಷ್ಟಶತಮಾನೋತ್ಸವದ ಶುಭಸಂದರ್ಭದಲ್ಲಿ ಪೂರೈಸಿಕೊಟ್ಟುದು ಅವರ ಸಾಮಯಿಕ ಕರ್ತವ್ಯಬುದ್ಧಿಯ ದ್ಯೋತಕವೂ ಆಗಿದೆಯೆಂಬುದನ್ನಿಲ್ಲಿ ನೆನೆಯಬೇಕು.

**ಸಿದ್ಧರಾಮೇಶ್ವರ ವಚನಗಳು :** ಸಿದ್ಧರಾಮೇಶ್ವರ ವಚನದ ವಿವಿಧ ಆಕರಗಳನ್ನು ಸಂಗ್ರಹಿಸಿ, ಸಿದ್ಧರಾಮನ ವಚನಗಳ ಮುದ್ರಿಕೆ ಅವನ ಸಾಧನೆಯ ಮೊದಲ ಹಂತದಲ್ಲೂ ಸಾಧಕಾವಸ್ಥೆಯಲ್ಲೂ ಹಾಗೂ ಸಾಧಕ ಜೀವನದ ಪರಿಪಕ್ವ ದೆಸೆಯಲ್ಲೂ ಹೇಗೆ ಪಲ್ಲಟಗೊಂಡಿರಬೇಕೆಂಬ ಬಗೆಗೆ ಸಿದ್ಧರಾಮನ ೨೭ ವಿವಿಧ ಅಂಕಿತಗಳ ಆಧಾರದ ಮೇಲೆ ಸೂಕ್ಷ್ಮ ವಿಮರ್ಶೆ ಮಾಡಿ, ಸಿದ್ಧರಾಮೇಶ್ವರ ವಚನಗಳಲ್ಲಿ ಸೇರಿಕೊಂಡ ಅನ್ಯಕೃತ ವಚನಗಳನ್ನು ತೆಗೆದುಹಾಕಿ, ನಿರ್ದಿಷ್ಟವಾದ ಸಿದ್ಧರಾಮನ ವಚನಗಳನ್ನು ಸಂಶೋಧಿಸಿ, ಸಂಪಾದಿಸಿ, ಪ್ರಕಟಿಸಿದ ಶ್ರೇಯಸ್ಸು ಡಾ. ಹಿರೇಮಠ ಅವರದು. ಸಿದ್ಧರಾಮನ ತ್ರಿವಿಧಿ ಹಾಗೂ ವಚನಗಳಲ್ಲಿನ ಛಂದೋಬದ್ಧಲಯ ಹಾಗೂ ಅವುಗಳ ಪರಸ್ಪರ ಒಡನಾಟ, ಶೂನ್ಯಸಂಪಾದನೆಕಾರರು ಸಿದ್ಧರಾಮನ ವಚನಗಳನ್ನು ಸ್ವೀಕರಿಸಿದ ಬಗೆ ಹಾಗೂ ಶಾಸನೋಕ್ತ ಸಿದ್ಧರಾಮನ ವಚನ ಇವುಗಳ ಮೇಲೆ ಸಂಪಾದಕರು ಆಳವಾದ ಜಿಜ್ಞಾಸೆ ನಡೆಸಿದ್ದಾರೆ.

ಒಂದು ಪ್ರಾಚೀನ ಗ್ರಂಥ ಅಧಿಕೃತ ಹಾಗೂ ನಿರ್ದಿಷ್ಟವೆನ್ನಿಸಬೇಕಾದರೆ ಮೂಲಪಾತ್ರಿಕೆಯ ಪರಿಶೋಧನೆ ಭಗವತ್‌ಸಾಕ್ಷಾತ್ಕಾರದಷ್ಟೇ ಮಹತ್ವದ್ದು. ಎಲ್ಲ ದರ್ಶನ, ಸಿದ್ಧಾಂತಗಳ ಸಾರಸಂಗ್ರಹದಿಂದ ಪೂರ್ಣದರ್ಶನವೊಂದು ಹೊಳೆಯುವಂತೆ ಕಾಲ-ದೇಶ-ಪರಿಸರ ವ್ಯತ್ಯಾಸದಲ್ಲಿ ಚದುರಿಹೋದ ಪ್ರತಿಗಳನ್ನೆಲ್ಲ ಕ್ರೋಢೀಕರಿಸಿ ಅವುಗಳ ಮೂಲಪಾಠದ ನೈಜಾನುಸಂಧಾನ ನಡೆಸಿ ಕರಾರುವಾಕ್ಕಾಗಿ ಮೂಲಕರ್ತೃವಿನ ಗ್ರಂಥವನ್ನು ಕಂಡುಹಿಡಿಯಬೇಕಾಗುತ್ತದೆ. ಸಿದ್ಧರಾಮನ ವಚನಸಂಪಾದನೆಗೆ ಡಾ. ಹಿರೇಮಠರು ೧೩೨ ಪ್ರಾಚೀನ ಆಕರಗಳನ್ನು ಬಳಸಿಕೊಂಡು, ಆ ಆಕರಗಳನ್ನು ೫ ಗುಂಪಾಗಿ ವಿಭಾಗಿಸಿ, ಆ ಆಕರಗಳ ವಿವರ ತಿಳಿಸಿ, ಅವುಗಳ ವರ್ಗೀಕರಣ ಮಾಡಿ, ಕಾಲದ ಉಲ್ಲೇಖವುಳ್ಳ ಪ್ರತಿಗಳ ಅಂತ್ಯಪ್ರಶಸ್ತಿ ಕೊಟ್ಟುದಲ್ಲದೆ, ಸಿದ್ಧರಾಮನ ಒಟ್ಟು ೧೩೭೮ ವಚನಗಳಿಗೆ ೧೦೦ ಪುಟಗಳುದ್ದ ಆಕರವನ್ನು ಹೇಳಿದ್ದು, ಅಲ್ಲದೆ ಸಿದ್ಧರಾಮನ ತ್ರಿವಿಧಿ ಹಾಗೂ ಸಂಕೀರ್ಣ ಸಾಹಿತ್ಯವನ್ನು ಸಹ ಅಷ್ಟೇ ನೂತನವಿಧಾನದಿಂದ ಪರಿಷ್ಕರಿಸಿ ಪ್ರಕಟಿಸಿರುವುದು ಬಹುಶಃ ಗ್ರಂಥಸಂಪಾದನಾಲೋಕದ ಅತ್ಯದ್ಭುತ ಸಾಹಸ ಹಾಗೂ ಸಂಪಾದನಾಶಾಸ್ತ್ರದ ತಂತ್ರಮೌಲ್ಯಗಳ ವಿನೂತನ ಕೊಡುಗೆಯಾಗಿದೆ. ಚೆನ್ನಬಸವಣ್ಣನವರ ವಚನಗಳಲ್ಲಿ ಆಯಾ ವಚನಕ್ಕೆ ಸಂಬಂಧಿಸಿದ ಪಾಠಗಳನ್ನು ಅಡಿಟಿಪ್ಪಣಿಯಾಗಿ ಕಾಣಿಸುವ ಹಾಗೂ ಮುನ್ನುಡಿಯಲ್ಲಿ ವಚನಸಂಸ್ಕರಣಕ್ಕೆ ಬಳಸಿಕೊಂಡ ಪ್ರತಿಗಳ ಆಕರ ಪಟ್ಟಿಯನ್ನು ಕೊಡುವ ಕ್ರಮವಿತ್ತು. ಬಸವಣ್ಣನವರ ವಚನಗಳಲ್ಲಿ ಮೊದಲು ವಚನದ ಪಾಠ ಅದರ ಕೆಳಗೆ ಪಾಠಾಂತರ, ಅದರ ಕೆಳಗೆ ಆಕರ ಗ್ರಂಥಗಳನ್ನು ಉಲ್ಲೇಖಿಸುವ ಕ್ರಮ ಬಂತು. ಇದಾದ ಮೇಲೆ ಸಿದ್ಧರಾಮೇಶ್ವರ ವಚನಗಳನ್ನು ಸಂಪಾದಿಸಿರುವುದರಿಂದ ಮೇಲಿನ ಎರಡೂ ವಚನಗ್ರಂಥಗಳಲ್ಲಿ ಅನುಸರಿಸಿದ ಕ್ರಮಗಳನ್ನು ಇದರಲ್ಲಿ ಒತ್ತಟ್ಟಿಗೆ ಅಳವಡಿಸಿಕೊಂಡಿದ್ದು ಡಾ. ಹಿರೇಮಠರ ಗ್ರಂಥ

ಸಂಪಾದನಾ ತತ್ತ್ವಗಳ ವಿಕಾಸಕ್ರಮವನ್ನು ಹಾಗೂ ಅದರ ಸಮಗ್ರ ಧೋರಣೆಯನ್ನು ಅಭಿವ್ಯಕ್ತ ಮಾಡುತ್ತದೆ.

**ಸಕಲಪುರಾತನರ ವಚನಗಳು :** 'ಸಕಲಪುರಾತನರ ವಚನ' ಅಥವಾ 'ಎಲ್ಲಾ ಪುರಾತನರ ವಚನ'ವೆಂಬ ಹೆಸರಿನ ಕಟ್ಟುಗಳು ಪ್ರಾಯಶಃ ನಮ್ಮ ವಚನಸಂಕಲನ ಪರಂಪರೆಯ ಮೊದಲ ಹೊತ್ತಗೆಗಳಾಗಿವೆ. ಎಂದರೆ ಇವು ಸೃಜನಶೀಲಯುಗದ ಶರಣರ ವಚನಗಳನ್ನು ಸ್ಥಲಕಟ್ಟಿಗೆ ಹೊಂದಿಸುವದಕ್ಕಿಂತ ಮೊದಲು ಒತ್ತಟ್ಟಿಗೆ ಸಂಗ್ರಹಿಸುತ್ತ ಬಂದ ಪ್ರತಿಗಳಾಗಿರಬೇಕು. ಇವುಗಳಲ್ಲಿ ಕೋಲ ಶಾಂತಯ್ಯನಿಂದ ಸತ್ಯಕ್ಕನ ವರೆಗಿರುವ ವಚನದ ಪ್ರತಿಗಳಲ್ಲಿ ೪೦೧೫ ವಚನಗಳು, ಕೋಲ ಶಾಂತಯ್ಯನಿಂದ ಆದಯ್ಯನ ವರೆಗಿರುವ ಪ್ರತಿಯಲ್ಲಿ ೩೨೮೯ ವಚನಗಳು, ಜೇಡರ ದಾಸಿಮಯ್ಯನ ವರೆಗಿರುವ ಪ್ರತಿಯಲ್ಲಿ ೩೨೦೬ ವಚನಗಳು ಇವೆ. ಇದು ಒಂದು ಪುರಾತನ ಕಟ್ಟಿನ ಮಾದರಿ. ಗೊಗ್ಗವ್ವೆ–ಪಲೇಶ್ವರ ಕೇತಯ್ಯನ ವರೆಗಿರುವ ಪ್ರತಿಯಲ್ಲಿನ ವಚನಸಂಖ್ಯೆ ೫೯. ಗೊಗ್ಗವ್ವೆ-ಕೋತಾರದ ಸೋಮಣ್ಣನ ವರೆಗಿರುವ ಪ್ರತಿಯಲ್ಲಿ ವಚನಸಂಖ್ಯೆ ೪೭. ಇದು ಮತ್ತೊಂದು ಮಾದರಿ. ಬಸವಣ್ಣನವರಿಂದ ಆರಂಭಿಸಿ ಆದಯ್ಯನ ವರೆಗಿರುವ ಪ್ರತಿಯಲ್ಲಿನ ವಚನ ಸಂಖ್ಯೆ ೧೦೬೫. ಇದು ಇನ್ನೂ ಒಂದು ಮಾದರಿ. ಹೀಗೆ ಇವು ಬೇರೆಬೇರೆ ಮೂಲಗಳಲ್ಲಿ ದೊರೆಯುತ್ತಿದ್ದು, ಇವು ವಚನಗಳ ಸಂಖ್ಯಾನುಕ್ರಮಣಿಕೆ ಯಿಂದಲೇ ಪ್ರಸಿದ್ಧವಾಗಿರುವ ಕಟ್ಟುಗಳಾಗಿವೆ. ಡಾ. ಹಿರೇಮಠರು ಈ ಗ್ರಂಥವನ್ನು ಎರಡು ಸಂಪುಟಗಳಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ. ಮೊದಲ ಸಂಪುಟದಲ್ಲಿ ಕೋಲ ಶಾಂತಯ್ಯನಿಂದ ಮೋಳಿಗೆ ಮಾರಯ್ಯನ ವರೆಗೆ ೧೬ ಜನ ವಚನಕಾರರಿದ್ದು ಅವರು ಹೆಚ್ಚು ಅಜ್ಞಾತದೆಸೆಯಲ್ಲಿದ್ದವರಾಗಿದ್ದಾರೆ. ಈ ಸಂಪುಟದಲ್ಲಿ ೨೯೮೩ ವಚನಗಳಿವೆ. ಅದೇರೀತಿ ೨ನೆಯ ಸಂಪುಟದಲ್ಲಿ ೨೪ ಜನ ಶರಣರ ೨೦೮೯ ವಚನಗಳಿವೆ. ಇದು ಸಕಲ ಪುರಾತನರ ಹಿಂದಿನ ಮಾದರಿಯ ಗ್ರಂಥವಾಗಿರದೆ 'ಆ ಆ ವಚನಗಳನ್ನು ಹೊಂದಿರುವ ವಿವಿಧ ಗುಂಪಿನ ಕಟ್ಟುಗಳ ಮೇಲೆ ನಿಂತ ಹೊಸದೊಂದು ಗ್ರಂಥ'ವೆಂದು ಹೇಳಿದ್ದು (ಪು. iii ಮುನ್ನುಡಿ) ಸಂಪಾದಕರ ಇಲ್ಲಿನ ಪರಿಷ್ಕರಣ ವಿಧಾನದ ಮೇಲೆ ಹೆಚ್ಚಿನ ಬೆಳಕು ಚೆಲ್ಲುತ್ತದೆ. ಇಲ್ಲಿ 'ಸಕಲಪುರಾತನರು' ಎಂಬಲ್ಲಿನ ಪದಪ್ರಯೋಗ ಶರಣ ಸಂದೋಹವನ್ನು ಒತ್ತಟ್ಟಿಗೆ ನೆನೆಯುವ ಮಂತ್ರಸದೃಶವಾಗಿದೆ.

**ಶೂನ್ಯಸಂಪಾದನೆಗಳು :** ೧೫ನೆಯ ಶತಮಾನ, ವಚನವಾಙ್ಮಯದ ಚರಿತ್ರೆಯಲ್ಲಿ ಸೃಜನಯುಗವಲ್ಲ. ಅದರೆ ಬಹುಮುಖ್ಯವಾದ ವಿಮರ್ಶಾಯುಗ. ಈ ಯುಗದ ಮಹತ್ತರ ಕಾಣಿಕೆಗಳೆಂದರೆ ಶೂನ್ಯಸಂಪಾದನೆ ಗ್ರಂಥಗಳು. ಡಾ. ಆರ್. ಸಿ. ಹಿರೇ ಮಠರು ಈ ಹೆಸರಿನ ಐದು ಗ್ರಂಥಗಳ ಕರ್ತೃ-ಸ್ಥಳ-ಕಾಲವಿಚಾರಗಳನ್ನು ಹೆಚ್ಚು ವಿಸ್ತಾರವಾಗಿ ಹೇಳಿದ್ದಾರೆ. ಅದು ಹೀಗಿದೆ :

(೧) ಶಿವಗಣಪ್ರಸಾದಿ ಮಹಾದೇವಯ್ಯಗಳ ಶೂನ್ಯಸಂಪಾದನೆ ಕಾಲ ಕ್ರಿ.ಶ. ೧೪೭೦

(೨) ಕೆಂಚವೀರಣ್ಣೊಡೆಯರ ಶೂನ್ಯಸಂಪಾದನೆ ,, ,, ೧೪೯೫

(೩) ಗುಮ್ಮಳಾಪುರ ಸಿದ್ಧವೀರಣಾಚಾರ್ಯರ ಶೂನ್ಯಸಂಪಾದನೆ ,, ,, ೧೫೦೦

(೪) ಗೂಳೂರು ಸಿದ್ಧವೀರಣ್ಣೊಡೆಯರ ಶೂನ್ಯಸಂಪಾದನೆ ,, ,, ೧೫೧೦

(೫) ಹಲಗೆದೇವರ ಶೂನ್ಯಸಂಪಾದನೆ ,, ,, ೧೫೨೦

ಇವುಗಳಲ್ಲಿ ಶಿವಗಣಪ್ರಸಾದಿ ಮಹಾದೇವಯ್ಯಗಳ ಮೊದಲ ಶೂನ್ಯಸಂಪಾದನೆಯನ್ನು ಹಾಗೂ ಮೂರನೆಯದಾದ ಗುಮ್ಮಳಾಪುರದವರ ಶೂನ್ಯಸಂಪಾದನೆಯನ್ನು ಇವರು ಸಂಪಾದಿಸಿದ್ದಾರೆ. ಶೂನ್ಯಸಂಪಾದನಕಾರರ ಕಾಲ-ದೇಶ-ಪರಿಸರಗಳ ಬಗೆಗೆ ವಿವೇಚಿಸುತ್ತ "ಗುಮ್ಮಳಾಪುರ ೧೫ನೆಯ ಶತಮಾನದ ವೀರಶೈವರ ಒಂದು ಮಹತ್ವದ ಕೇಂದ್ರ. ಇದು ಸಿದ್ಧಲಿಂಗದೇವರ ಸ್ಥಳವಷ್ಟೇ ಅಲ್ಲ: ಶಿವಗಣಪ್ರಸಾದಿ ಕೂಡ ಇದೇ ಸ್ಥಳದವನು. ೪ನೆಯ ಸಂಪಾದನೆಯ ಕರ್ತೃವಾದ ಸಿದ್ಧವೀರಣ್ಣೊಡೆಯನ ಗೂಳೂರು ಸಹ ಗುಮ್ಮಳಾಪುರಕ್ಕೆ ಹತ್ತಿರ. ಆದುದರಿಂದ ಇವರು ಮೂವರೂ ಹೆಚ್ಚುಕಡಿಮೆ ಸಮಕಾಲೀನರಾಗಿ ಬಾಳಿ, ಶಿವಾನುಭವಗೋಷ್ಠಿ ನಡೆಸಿ ಮುಂದಿನವರು ಹಿಂದಿನವರಿಗೆ ಕೃತಜ್ಞತೆಗಳನ್ನರ್ಪಿಸುತ್ತ, ಒಡಲು ಹಲವಾದರೂ ಆತ್ಮ ಒಂದೇ ಆಗಿ, ಪಂಥ ಒಂದೇ ಆಗಿ ಒಬ್ಬರು ಬರೆದುದನ್ನು ಇನ್ನೊಬ್ಬರು ತಮ್ಮದೆಂದೇ ಸ್ವೀಕರಿಸಿ ಶೂನ್ಯಸಂಪಾದನೆಗಳನ್ನು ರಚಿಸಿರುವರು"ಎಂದು ಹೇಳಿರುವರು. ಈ ಹೇಳಿಕೆ ಡಾ. ಹಿರೇಮಠರ ಶೂನ್ಯಸಂಪಾದನಾಗ್ರಂಥನಿರ್ಮಾಣದಲ್ಲಿನ ಸಮಷ್ಟಿದೃಷ್ಟಿಯನ್ನು ಅತ್ಯಂತ ಔಚಿತ್ಯಪೂರ್ಣವಾಗಿ ಧ್ವನಿಸುತ್ತದೆ. ಇವರ ಪ್ರಕಟಣೆಯಲ್ಲಿಯ, ಈಗ ಅಧಿಕೃತವಾಗಿ ಗೊತ್ತಾದ ನಾಲ್ಕೂ ಶೂನ್ಯಸಂಪಾದನೆಗಳ ತೌಲನಿಕ ದರ್ಶನದ ಪಟ್ಟಿಕೆ ತುಂಬ ವಿಶೇಷವಾಗಿದೆ. ಪ್ರಥಮೋಪದೇಶದಿಂದ ಎಲ್ಲ ಗಣಂಗಳ ಐಕ್ಯದ ವರೆಗಿನ ೨೦ ಅಧ್ಯಾಯಗಳಲ್ಲಿ ಉಕ್ತವಾಗಿರುವ ವಚನಕಾರರ ವಚನ ಮತ್ತು ಪದಗಳ ವಿವರಗಳನ್ನು. ಆಯಾ ಸಂಪಾದನೆಗಳ ವೈಶಿಷ್ಟ್ಯ ಹಾಗೂ ವಿನೂತನ ಸಂಗತಿಗಳನ್ನು ಈ ಪಟ್ಟಿಯಲ್ಲಿ ಉಲ್ಲೇಖಿಸಲಾಗಿದೆ. ಈ ಭಾಗ, ಹಲವು ಗ್ರಂಥಗಳ ತೌಲನಿಕ ಅಧ್ಯಯನ ಕೈಕೊಳ್ಳುವವರಿಗೆ ಸಂಶೋಧನ ಪದ್ಧತಿ-ಪ್ರಣಾಲಿಕೆ ( Research Methodology) ಗಳನ್ನೂ ಸೂಚ್ಯವಾಗಿ ತಿಳಿಸುವಲ್ಲಿ ಸಮರ್ಥವಾಗಿದೆ. ಶೂನ್ಯಸಂಪಾದನೆಗಳನ್ನು ಹಿಂದೆ ಹಳಕಟ್ಟಿಯವರು, ಈಚೆಗೆ ಡಾ. ಎಲ್. ಬಸವರಾಜು ಹಾಗೂ ಸಂ. ಶಿ. ಭೂಸನೂರಮಠರು ಪ್ರಕಟಿಸಿರುವರಾದರೂ ಈ ಕಾರ್ಯವನ್ನು 'ಸಮಗ್ರ ವಚನವಾಙ್ಮಯ ವಿಭಾಗ'ದಿಂದ ಡಾ. ಹಿರೇಮಠರು ತಮ್ಮ ಯೋಜನೆಯಲ್ಲಿ ಮೊದಲೇ ರೂಪಿಸಿಕೊಂಡಿದ್ದರೆಂದು ಗೊತ್ತಾಗುತ್ತದೆ.

**ಸೈದ್ಧಾಂತಿಕ ವಚನಗ್ರಂಥಗಳು :** ವಚನಸಾಹಿತ್ಯವನ್ನು ಪರಿಶೋಧಿಸಿದ ಹಳಕಟ್ಟಿ ಯವರು ತಮ್ಮ ಕಾಲದಲ್ಲಿ ಶೂನ್ಯಸಂಪಾದನೆ ಏಕೋತ್ತರಶತಸ್ಥಲಗಳಂತಹ ಕೆಲವು ಸೈದ್ಧಾಂತಿಕ ಹೊತ್ತಗೆಗಳ ಮೇಲೆ ಬೆಳಕುಬೀರಿದರು. ಆದರೆ ಡಾ. ಆರ್. ಸಿ. ಹಿರೇಮಠರು ಆ ದಿಸೆಯಲ್ಲಿ ಇನ್ನೂ ಹಲವು ಹೊಸಗ್ರಂಥಗಳ ಶೋಧಕಾರ್ಯ ಕೈಕೊಂಡು ವಚನವಾಙ್ಮಯದ ವೈವಿಧ್ಯ-ವಿಸ್ತಾರದ ಬೃಹತ್‌ಕಲ್ಪನೆಯನ್ನು ಮುಂದಿಟ್ಟರು. ವಚನಸಾಹಿತ್ಯದಲ್ಲಿ ಷಟ್‌ಸ್ಥಲಗಳು ಸಾಧಕನ ಮನೋವಿಕಾಸದ ಮೆಟ್ಟಿಲುಗಳಾಗಿರುವುದರಿಂದ ತರುವಾಯದ ವೀರಶೈವ ಅನುಭಾವಿಗಳೂ ಸಂಕಲನಕಾರರೂ ಈ ಮನಃಪ್ರಕ್ರಿಯೆಯಲ್ಲಿ ಕಾಣುವ ಇನ್ನೂ ಹಲವು ಸೂಕ್ಷ್ಮ ಅವಾಂತರಸ್ಥಲಗಳನ್ನು ಅವರವರ ಅರಿವು, ಆಚರಣೆ, ಅನುಸಂಧಾನಗಳ ಮೇಲಿಂದ ಹೆಚ್ಚಿಸಿಕೊಂಡಿದ್ದಾರೆ. ಹೀಗಾಗಿ ಅಂಗಸ್ಥಲ-ಲಿಂಗಸ್ಥಲಗಳೆರಡರಲ್ಲಿ ಇನ್ನೂ ಹಲವು ಪ್ರಭೇದಗಳು ಕಾಣಿಸಿಕೊಳ್ಳುತ್ತವೆ. ಆದರೆ ಈ ವಿಭಿನ್ನಸ್ಥಲಗಳೆಲ್ಲವನ್ನು ಹೆಚ್ಚಾಗಿ ಷಟ್‌ಸ್ಥಲದಲ್ಲಿಯೇ ಅಂತರ್ಗತ ಮಾಡಿರುವದು, ಆ ದರ್ಶನದ ಘನತೆಯನ್ನು ಹೇಳುತ್ತದೆ. ಡಾ. ಆರ್. ಸಿ. ಹಿರೇಮಠರು ಸಂಪಾದಿಸಿದ ಇಂತಹ ಭಿನ್ನಭಿನ್ನ ಸ್ಥಲಕಟ್ಟಿನ ವಚನಗ್ರಂಥಗಳನ್ನಿಲ್ಲಿ ಕೊಟ್ಟಿದೆ :

(೧) **ವಿಶೇಷಾನುಭವ ಷಟ್‌ಸ್ಥಲ :** ಸ್ಥಲಕಟ್ಟುಗಳು : ೧. ವಸ್ತುನಿರ್ದೇಶನಸ್ಥಲ ೨. ವಿಶ್ವವಿಲಾಸಸ್ಥಲ ೩. ಪಿಂಡಸ್ಥಲ ೪. ಪಿಂಡಜ್ಞಾನಸ್ಥಲ ೫. ಮಾಯಾವಿಲಾಸವಿಡಂಬನಸ್ಥಲ ೬. ಸಂಸಾರಹೇಯಸ್ಥಲ ೭. ಗುರುಕರುಣಸ್ಥಲ ೮. ಲಿಂಗಧಾರಣಸ್ಥಲ ೯. ಅಷ್ಟಾವರಣಪ್ರದೀಪಿಕಾಸ್ಥಲ ೧೦. ಭಕ್ತಜ್ಞಾನಿಸ್ಥಲ ೧೧. ಮಾಹೇಶ್ವರಸ್ಥಲ ೧೨. ಪ್ರಸಾದಿಸ್ಥಲ ೧೩. ಪ್ರಾಣಲಿಂಗಿಸ್ಥಲ ೧೪. ಶರಣಸ್ಥಲ ೧೫. ಐಕ್ಯಸ್ಥಲ ೧೬. ಶೂನ್ಯಸ್ಥಲ.

(೨) **ಮುಕ್ತಿಕಂಠಾಭರಣ :** ಸ್ಥಲಕಟ್ಟುಗಳು : ೧. ಗುರುಪ್ರಶಂಸಾಸ್ಥಲ ೨. ಗುರುಪಾದೋದಕ ಪ್ರಶಂಸಾಸ್ಥಲ ೩. ಲಿಂಗಧಾರಣ ಪ್ರಶಂಸಾಸ್ಥಲ ೪. ಆಚಾರಪ್ರಶಂಸಾಸ್ಥಲ.

(೩) **ವೀರಶೈವ ಚಿಂತಾಮಣಿ :** ಸ್ಥಲಕಟ್ಟುಗಳು : ೧. ಗುರುಮಹಾತ್ಮ್ಯ ೨. ಲಿಂಗಮಹಾತ್ಮ್ಯ ೩. ಜಂಗಮಮಹಾತ್ಮ್ಯ ೪. ಪಾದೋದಕ ಮಹಾತ್ಮ್ಯ ೫. ಪ್ರಸಾದ ಮಹಾತ್ಮ್ಯ ೬. ವಿಭೂತಿ ಮಹಾತ್ಮ್ಯ ೭. ರುದ್ರಾಕ್ಷಿ ಮಹಾತ್ಮ್ಯ ೮. ಮಂತ್ರಮಹಾತ್ಮ್ಯ.

(೪) **ಬ್ರಹ್ಮಾದ್ವೈತಸಿದ್ಧಾಂತ ಷಟ್‌ಸ್ಥಲಾಭರಣ :** ಸ್ಥಲಕಟ್ಟುಗಳು :

( i ) ಉಪದೇಶಕ್ರಮ : ಮಹಾಶೂನ್ಯದಿಂದ ಜ್ಞಾನಕ್ರಿಯಾಪಿಶ್ವಾಸದ ವರೆಗೆ ೨೫ ಸ್ಥಲಗಳು.

(ii) ಭಕ್ತಸ್ಥಲ : ಭಕ್ತಸ್ಥಲದಿಂದ ಜಂಗಮಪಾದೋದಕಪ್ರಸಾದವಿಶ್ವಾಸದ ವರೆಗೆ ೬ ಸ್ಥಲಗಳು.

(iii) ಮಾಹೇಶ್ವರಸ್ಥಲದಿಂದ ಶಿವಲೋಕಭ್ರಾಂತಿನಿರಸನ ಸ್ಥಲದ ವರೆಗೆ ೬ ಸ್ಥಲಗಳು.

(iv) ಪ್ರಸಾದಿಸ್ಥಲದಿಂದ ಅರ್ಪಿತಾನರ್ಪಿತನಾಸ್ತಿಯಾದ ಅಭಿನ್ನಲಿಂಗಾರ್ಪಣದ ವರೆಗೆ ೬ ಸ್ಥಲಗಳು.

(v) ಪ್ರಾಣಲಿಂಗಿಸ್ಥಲದಿಂದ ಮನೋಭ್ರಾಂತಿ ನಿರಸನಸ್ಥಲದ ವರೆಗೆ ೬ ಸ್ಥಲಗಳು.

(vi) ಶರಣಸ್ಥಲದಿಂದ ಬಂಧಮೋಕ್ಷ ನಿರಸನಸ್ಥಲದ ವರೆಗೆ ೬ ಸ್ಥಲಗಳು.

(vii) ಐಕ್ಯಸ್ಥಲದಿಂದ ಸರ್ವಶೂನ್ಯಸ್ಥಲದ ವರೆಗೆ ೬ ಸ್ಥಲಗಳು.

(viii) ಸಂಗ್ರಹ ಮಹಾತ್ಮೆ.

ಒಟ್ಟು ಸ್ಥಲಗಳು ೬೧.

ಮೇಲಿನ ಸ್ಥಲಕಟ್ಟುಗಳು ಅನುಭಾವ ಮತ್ತು ಆಚರಣೆಗಳ ಉಭಯದೃಷ್ಟಿಯಿಂದಲೂ ಮಹತ್ವದ್ದಾಗಿವೆ. ವೀರಶೈವ ಷಟ್‌ಸ್ಥಲತತ್ತ್ವಜ್ಞಾನದಲ್ಲಿ ಸಾಧಕನ ಮನೋವಿಜ್ಞಾನವನ್ನೂ ಕೂಡ ಅಭ್ಯಸಿಸಿ, ಅವರ ಆ ಮಾನಸಿಕ ಭೇದಗಳನ್ನು ವಿಂಗಡಿಸಿ ಹೇಳಿರುವುದು ಪ್ರತಿಯೊಬ್ಬ ಸಂಕಲನಕಾರನ ವೈಶಿಷ್ಟ್ಯವಾಗಿದೆ. ಕೆಲವರು ಸ್ಥೂಲಾಚರಣೆಯಲ್ಲಿನ ಕ್ರಿಯಾದಿಗಳ ಭೇದಗಳನ್ನು ವಿವರಿಸಿದರೆ, ಸಾಧಕನ ಸೂಕ್ಷ್ಮ-ಕಾರಣ ತನುವಿನಲ್ಲುಂಟಾಗುವ ಜ್ಞಾನಕ್ರಿಯೆಗಳ ಸಾಮರಸ್ಯ–ಅನುಭವ–ಅನುಭಾವ–ಅನುಭೂತಿಗಳ ಬಗೆಗೆ ಕೆಲವರು ವಿವೇಚಿಸಿದ್ದಾರೆ. ಹೀಗಾಗಿ ಷಟ್‌ಸ್ಥಲತತ್ತ್ವಜ್ಞಾನವು ನೈಜಾಚರಣೆಯ ಜೀವನಮಾರ್ಗವೂ ಅಲ್ಲದೆ ಸರ್ವದರ್ಶನಗಳ ಸಾರಸಂಗ್ರಹವೂ ಆಗಿರುವದನ್ನು ಈ ಗ್ರಂಥಗಳು ಪ್ರತಿಪಾದಿಸುತ್ತವೆ.

ವೀರಶೈವ ಷಟ್‌ಸ್ಥಲ ಶಿವಯೋಗ ಮಾರ್ಗಪ್ರತಿಷ್ಠಾಪನಾಚಾರ್ಯನೆನ್ನಿಸಿದ ಚೆನ್ನವೀರಾರ್ಯನು ಶಿವಲಿಂಗದೇವರಿಗೆ ಬೋಧಿಸಿದ ವಚನತತ್ತ್ವಗ್ರಂಥವೇ 'ವಿಶೇಷಾನುಭವ ಷಟ್‌ಸ್ಥಲ'. ಇದರಲ್ಲಿ ತೋಂಟದ ಸಿದ್ಧಲಿಂಗರ ವಚನಗಳೂ ಸೇರಿವೆಯಾದ್ದರಿಂದ ಇದರ ರಚನಾ ಕಾಲ ೧೬ನೆಯ ಶತಮಾನವೆಂದು ಸಂಪಾದಕರು ನಿರ್ಣಯಿಸಿದ್ದಾರೆ. ಇದರಲ್ಲಿ ३೬ ವಚನಕಾರರ ಒಟ್ಟು ೭೦೪ ವಚನಗಳಿವೆ. ಇಲ್ಲಿನ ವಚನಗಳಿಗೆ ಟೀಕೆಯಿದೆ. ಸ್ಥಲಸೂತ್ರಗಳೂ ಇವೆ. ಇದು ಷಟ್‌ಸ್ಥಲ ಕಟ್ಟಿನಲ್ಲಿದ್ದರೂ ಭಕ್ತಸ್ಥಲಕ್ಕೆ ಪೂರ್ವದಲ್ಲಿ ವಸ್ತುನಿರ್ದೇಶಸ್ಥಲ, ಐಕ್ಯಸ್ಥಲವಾದ ಮೇಲೆ ಹೇಳಿರುವ ಶೂನ್ಯ ಅಥವಾ ನಿರವಯಸ್ಥಲಗಳು ಇಲ್ಲಿನ ಷಟ್‌ಸ್ಥಲತತ್ತ್ವವನ್ನು ವಿಶೇಷ ಅನುಭವ ಸ್ತರಗಳಿಗೆ ಹೊಂದಿಸಿವೆ. ಕಾರಣ ಇದು ತತ್ತ್ವಾನುಸಂಧಾನದಲ್ಲಿ ಷೋಡಶ ಸ್ಥಲಕಟ್ಟಿನ ಲಿಂಗಲೀಲಾವಿಲಾಸಚಾರಿತ್ರ್ಯ ಹಾಗೂ ಶೂನ್ಯಸಂಪಾದನಾ ಗ್ರಂಥಗಳ ಶ್ರೇಣಿಯಲ್ಲಿ ಬರುತ್ತದೆ. ಶರಣರ ಅನುಭಾವದ ದೃಷ್ಟಿಯಿಂದ 'ವಿಶೇಷ'ವೆನ್ನಿಸಿರುವ ಈ

ವಿಶೇಷಾನುಭವಷಟ್‌ಸ್ಥಲ ಗ್ರಂಥವನ್ನು ಡಾ. ಹಿರೇಮಠರು ಲಭ್ಯವಾದ ೨ ಪ್ರತಿಗಳ ಆಧಾರದ ಮೇಲೆ ಪರಿಶೋಧಿಸಿದ್ದಾರೆ.

'ಮುಕ್ತಿಕಂಠಾಭರಣ' ಕೆಲವು ಚಾರಿತ್ರಿಕ ಸಂಗತಿಗಳಿಂದ ಕೂಡಿದೆ. ಇಲ್ಲಿನ ಗುರು, ಗುರುಪಾದೋದಕ ಹಾಗೂ ಲಿಂಗಧಾರಣ ಪ್ರಶಂಸೆಯ ವಚನಗಳು ಮುಖ್ಯವಾಗಿ ಸಿದ್ಧರಾಮನು ಶೈವಕ್ರಿಯಾದಿಗಳನ್ನು ಬಿಟ್ಟು ಇಷ್ಟಲಿಂಗಧಾರಿಯಾಗುವುದನ್ನು ಸಮರ್ಥಿಸುವಲ್ಲಿ ಯಶಸ್ವಿಯಾಗಿವೆ. ಇಲ್ಲಿನ ಕೆಲವು ವಚನಗಳು ರೇವಣಸಿದ್ಧೇಶ್ವರ ಮತ್ತು ಆತನ ಮುನ್ನೂರು ಕನ್ನೆಯರು, ಬಾಲಸಂಗಯ್ಯರ ಜೀವನದ ಮೇಲೂ, ವೇದಕಂಚುಕಿ, ಆಗಮಮೋಹಿನಿ, ಶಾಂಭವಿ ಮೊದಲಾದ ಹೊಸ ವಚನಕಾರ್ತಿಯರ ಬಗೆಗೂ ಬೆಳಕು ಚೆಲ್ಲಿವೆ. ಇದರಲ್ಲಿ ಒಟ್ಟು ೩೦೦ ವಚನಗಳಿವೆ. ವಚನಗಳ ಜೊತೆಗೆ ವಚನಕಾರನ ನಾಮನಿರ್ದೇಶನಮಾಡಿರುವುದು ಈ ಗ್ರಂಥದ ಹಸ್ತಪ್ರತಿಯ ವೈಶಿಷ್ಟ್ಯವಾಗಿದೆ. ಇದಕ್ಕೆ 'ಮುಕ್ತಿಕಂಠಾಭರಣ'ವೆಂಬ ಹೆಸರಿದ್ದು ವೀರಶೈವ ಲಿಂಗಾಂಗಸಾಮರಸ್ಯತತ್ತ್ವವೇ ಮುಕ್ತಿಯೆಂಬ ವಿಚಾರ ಇಲ್ಲಿದೆ. ಇದರ ಪ್ರತಿ ಅಪೂರ್ಣವಿದ್ದರೂ ಏಕೈಕ ಲಭ್ಯವಾದ ಪ್ರತಿಯಲ್ಲಿನ ಸಾಹಿತ್ಯವಾದರೂ ಉಳಿಯಲೆಂಬ ಉದ್ದೇಶದಿಂದ ಡಾ. ಹಿರೇಮಠರು ಇದನ್ನು ಸಂಪಾದಿಸಿದ್ದಾರೆ. ಕಾಲ ಗತಿಸಿದಂತೆ ಇಲ್ಲಿನ ವಚನಗಳ ಭಾಷೆ ಪ್ರತಿಕಾರರ ಕೈಯಲ್ಲಿ ಗ್ರಾಮ್ಯಶೈಲಿಗಿಳಿದಿದೆ. ಎಷ್ಟೋ ವಚನಗಳಲ್ಲಿ ಪ್ರಕ್ಷಿಪ್ತತೆಯ ಸಮಸ್ಯೆಯಿದ್ದರೂ ಇದರ ಅನ್ಯಪ್ರತಿಗಳು ದೊರಕಿ ಹಾಗೂ ಪೂರ್ಣಗ್ರಂಥ ಲಭ್ಯವಾದಾಗ ವಚನವಾಙ್ಮಯದಲ್ಲಿ ಇದಕ್ಕಿರುವ ಮಹತ್ವವನ್ನು ಹೇಳಲು ಸಾಧ್ಯವಾಗುತ್ತದೆ.

ಮಹದೇವಯೋಗಿ ವಿರಚಿತ 'ವೀರಶೈವ ಚಿಂತಾಮಣಿ'ಯಲ್ಲಿ ಅಷ್ಟಾವರಣದ ಸ್ವರೂಪವನ್ನು ವಿವರಿಸಲಾಗಿದೆ. ಇದು ೧೭ ನೆಯ ಶತಮಾನದ್ದೆಂದು ಸಂಪಾದಕರು ತರ್ಕಿಸಿದ್ದಾರೆ. ಕೇವಲ ಮತೀಯ ಆಚಾರಗಳ ಕಟ್ಟುನಿಟ್ಟುಗಳನ್ನು ಹೇಳುತ್ತಿದ್ದರೂ ಈ ಗ್ರಂಥದ ಶೈಲಿಯಲ್ಲಿ ವೈವಿಧ್ಯತೆಯಿದೆ. ೬೯೦ ವಚನಗಳು, ವೇದಾಗಮಗಳಿಂದ ಉದ್ಧರಿಸಿದ ಶ್ಲೋಕಗಳು ೨೫೦, ರಾಗಸಹಿತವಾದ ಸ್ವರವಚನಗಳು ೪೫ ಇರುವದರಿಂದ ಇದು ಹೆಚ್ಚು ಸ್ವಾರಸ್ಯಪೂರ್ಣ ಸಾಧಾರಯುಕ್ತ ಗ್ರಂಥವಾಗಿದೆ. ಸಂಪಾದಕರು ಉಪಲಬ್ಧವಿದ್ದ ಎರಡು ಪ್ರತಿಗಳ ಆಧಾರದ ಮೇಲೆ ಇದರ ಪರಿಷ್ಕರಣ ಮಾಡಿದ್ದಾರೆ. ಕೊನೆಯಲ್ಲಿ ಕೊಟ್ಟ ಕಠಿಣ ಪದಕೋಶ, ಪಾರಿಭಾಷಿಕ ಪದಕೋಶ, ಶ್ಲೋಕಗಳ ಅಕಾರಾದಿ, ವಚನ ಪದಗಳ ಅಕಾರಾದಿ ಸೂಚೀ ಮುಂತಾದ ಅನುಬಂಧಗಳು ಇಂಥ ಶಾಸ್ತ್ರಗ್ರಂಥದ ಓದನ್ನು ಹೆಚ್ಚು ಸುಲಭವಾಗಿಸುತ್ತವೆ.

'ಬ್ರಹ್ಮಾದ್ವೈತಸಿದ್ಧಾಂತಷಟ್‌ಸ್ಥಲಾಭರಣ'ವೆಂಬ ವಿನೂತನ ಕೃತಿಯ ಕರ್ತೃ ಕರಸ್ಥಲದ ಮಲ್ಲಿಕಾರ್ಜುನ ಒಡೆಯ. ೧೫–೧೬ ನೇ ಶತಮಾನದ ಆಚೀಚೆ ಇದ್ದಿರಬಹುದಾದ ವ್ಯಕ್ತಿಯೀತ. ಇವನ ಕೃತಿಯನ್ನು ಡಾ. ಹಿರೇಮಠರು ಪ್ರಪ್ರಥಮವಾಗಿ

ಸಂಪಾದಿಸಿ ವೀರಶೈವದರ್ಶನಭಂಡಾರವನ್ನು ವಿಪುಲವಾಗಿಸಿದ್ದಾರೆ. ಇಲ್ಲಿನ 'ಬ್ರಹ್ಮಾದ್ವೈತ' ಎಂಬ ವಿಶೇಷಣವು ಶಿವಾದ್ವೈತಕ್ಕೆ ಪರ್ಯಾಯಸಾಮವೇ ಆಗಿದೆ. ಜ್ಞಾನ-ಕ್ರಿಯೆಗಳೆರಡನ್ನೂ ಅಭಿನ್ನವಾಗಿಸುತ್ತದೆ, ವೀರಶೈವ ಷಟ್‌ಸ್ಥಲ. ಆದ್ದರಿಂದ ಇದು ಅದ್ವೈತಕ್ಕಿಂತ ವಿಶಿಷ್ಟವಾದ ನಿಲುವು. ವೇದಾಗಮ, ಪುರಾಣ, ಆದ್ಯರ ವಚನಗಳ ಸಾರ ಸಾರಾಯವನ್ನು ಸಾಧಕನ ಆದಿಮಧ್ಯಾಂತವೆಂಬ ಮೂರು ಘಟ್ಟಗಳಲ್ಲಿ ವಿವರಿಸುವುದು ಇಲ್ಲಿಯ ವೈಶಿಷ್ಟ. ಬ್ರಹ್ಮಜ್ಞಾನದಲ್ಲಿ ಬ್ರಹ್ಮಾದ್ವೈತವನ್ನು ತಿಳಿದು ಬ್ರಹ್ಮಾನಂದದಲ್ಲಿ ಓಲಾಡುವವರೇ 'ಷಟ್‌ಸ್ಥಲಬ್ರಹ್ಮಿ' ಎಂದು ಇಲ್ಲಿನ ದರ್ಶನ ಸಾರುತ್ತದೆ. ಈ ದೃಷ್ಟಿಯಿಂದ ಇದು ಷಟ್‌ಸ್ಥಲಶಾಸ್ತ್ರಕ್ಕೆ ವೇದಾಂತದ ಭದ್ರ ನೆಲಗಟ್ಟನ್ನು ಹಾಕಿ ವಚನ ಸಾಹಿತ್ಯವನ್ನು ಹೆಚ್ಚು ಜನಪ್ರಿಯಗೊಳಿಸಿದೆ. ಈ ಗ್ರಂಥದ ಪ್ರಸ್ತಾವನೆಯಲ್ಲಿ, ವಚನ ಸಂಕಲನಗ್ರಂಥಗಳಲ್ಲಿ ಈ ವರೆಗೆ ಉಪಲಬ್ಧವಾದ ಎಲ್ಲ ಸ್ಥಲಕಟ್ಟುಗಳನ್ನು ಉಲ್ಲೇಖಿಸಲಾಗಿದೆ. ಇದು ಸಂಕಲನಸಾಹಿತ್ಯದ ಅಧ್ಯಯನ ಕೈಕೊಳ್ಳುವವರಿಗೆ ಕೈದೀವಿಗೆಯಾಗಿದೆ. ವೀರಶೈವ ಆಗಮಗಳಿಗಿರುವ ಮಹತ್ವ ಕನ್ನಡದ ಈ ವಚನಗ್ರಂಥಕ್ಕೆ ಪ್ರಾಪ್ತವಾಗಿದೆ. ಈ ದೃಷ್ಟಿಯಿಂದ ಇದರ ಪ್ರಕಟಣೆ ಅತ್ಯಂತ ಮೌಲಿಕವೆನ್ನಿಸಿದೆ.

ಈಗ ಡಾ. ಹಿರೇಮಠರು ಸಂಪಾದಿಸಿದ ಒಟ್ಟು ಗ್ರಂಥಗಳ ವೈವಿಧ್ಯತೆಯ ಬಗೆಗೆ ಸಂಗ್ರಹಿಸಿ ಹೇಳಬಹುದು. ಡಾ. ಹಿರೇಮಠರಿಂದ ಸಂಪಾದಿತವಾದ ಪ್ರಾಚೀನ ವಚನ ಗ್ರಂಥಗಳು ವೈವಿಧ್ಯಪೂರ್ಣವಾಗಿದೆ. ಇವನ್ನು (೧) ಸಾಮಾನ್ಯ ವಚನ ಸಂಕಲನಗಳು (೨) ಶಾಸ್ತ್ರೀಯ ವಚನಸಂಕಲನಗಳು (೩) ದಾರ್ಶನಿಕ ವಚನಸಂಕಲನಗಳು (೪) ಷಟ್‌ಸ್ಥಲ ಕಟ್ಟಿನ ವಚನಗಳು (೫) ಇತರ ಸ್ಥಲಕಟ್ಟಿನ ವಚನಗಳು (೬) ಆಚರಣೆಯ ಸಂಬಂಧದ ವಚನಗಳು (೭) ಸಿದ್ಧಾಂತದ ವಚನಗಳು (೮) ಶರಣೆಯರ ವಚನಗಳು ಎಂದು ಮುಂತಾಗಿ ವರ್ಗೀಕರಿಸಬಹುದು. ಇವಕ್ಕೆಲ್ಲ ಕ್ರಮಾನುಗತವಾಗಿ ಮಾದರಿಯಾಗುವ ಗ್ರಂಥಗಳೆಂದರೆ ಸಕಲಪುರಾತರನ ವಚನಗಳು, ವಿಶೇಷಾನುಭವ ಷಟ್‌ಸ್ಥಲ, ಶೂನ್ಯಸಂಪಾದನೆಗಳು, ಬಸವ–ಚೆನ್ನಬಸವ–ಸಿದ್ಧರಾಮ–ತೋಂಟದ ಸಿದ್ಧಲಿಂಗರ ವಚನಗಳು, ಬ್ರಹ್ಮಾದ್ವೈತಸಿದ್ಧಾಂತ ಷಟ್‌ಸ್ಥಲಾಭರಣ, ವೀರಶೈವ ಚಿಂತಾಮಣಿ, ಮುಕ್ತಿಕಂಠಾಭರಣ ಹಾಗೂ ಇಪ್ಪತ್ತೇಳು ಶಿವಶರಣೆಯರ ವಚನಗಳು ಇತ್ಯಾದಿ.

ಇವರ ಸಂಪಾದನೆಯ ವೈಶಿಷ್ಟ್ಯಗಳ ಬಗೆಗೆ ಕೆಲವೊಂದು ವಿನೂತನ ಸಂಗತಿಗಳನ್ನಿಲ್ಲಿ ಗಮನಿಸಬಹುದು.

(೧) ಮೊದಲು ಪ್ರಕಟವಾದ ವಚನಗ್ರಂಥಗಳನ್ನು ಹೆಚ್ಚು ಪ್ರತಿಗಳ ಆಧಾರದಿಂದ ವಿನೂತನವಾಗಿ ಪರಿಷ್ಕರಿಸಿ ಹೊಸ ಸಂಗತಿಗಳನ್ನು ಗುರುತಿಸಿ ಹೇಳಿದ್ದು.

(೨) ಮೊದಲು ಪ್ರಕಟವಾಗದ ಅಚ್ಚ ಹೊಸ ಗ್ರಂಥಗಳನ್ನು ಬಹಳಷ್ಟು ಪ್ರತಿಗಳ ಬೆಳಕಿನಲ್ಲಿ ಸಂಪಾದಿಸಿ ಪ್ರಕಟಿಸಿದ್ದು.

(೩) ಮೊದಲು ಪ್ರಕಟವಾಗದ ಮತ್ತು ಪ್ರತಿಗಳು ದೊರಕದ ವಚನಗ್ರಂಥಗಳನ್ನು ಆಧುನಿಕ ಪದ್ಧತಿಯಲ್ಲಿ ಪರಿಷ್ಕರಿಸಿ ಪ್ರಕಟಿಸಿದ್ದು.

(೪) ಕೇವಲ ನೂತನ ಗ್ರಂಥಸಂಪಾದನಾಜ್ಞಾನವಷ್ಟೇ ಅಲ್ಲದೆ ಸಂಶೋಧನಾತ್ಮಕ, ಸಾಮಾಜಿಕ, ಸಾಂಸ್ಕೃತಿಕ, ಸಾಹಿತ್ಯಿಕ, ವಿಮರ್ಶಾತ್ಮಕ, ಹಾಗೂ ಭಾಷಾಶಾಸ್ತ್ರಜ್ಞಾನಗಳ ವಿಪುಲ ವಿದ್ವತ್ತನ್ನು ಬೆರಸಿ, ಹೊಸ ಹೊಸ ತಾಂತ್ರಿಕ ವಿಧಾನಗಳಿಂದ ಸಂಪಾದನಾ ಕಾರ್ಯವನ್ನು ಶುಷ್ಕಶಾಸ್ತ್ರವಾಗಿಸದೆ ಸೃಜನಶೀಲ ಕಲೆಯಾಗಿಸಿದ್ದು.

(೫) ಅಪೂರ್ವ ಪೀಠಿಕೆ, ಪ್ರಸ್ತಾವನೆ ಹಾಗೂ ಸಂಪಾದನಾಸಾಮಗ್ರಿಗಳನ್ನು ವಚನ ಸಾಹಿತ್ಯಕ್ಕೆ ಒದಗಿಸಿ ಹಿಂದೆಂದೂ ಕಾಣದ ವಚನವಾಙ್ಮಯ ವಿಸ್ತಾರವನ್ನು ಕನ್ನಡಿಗರಿಗೆ ದಿಗ್ದರ್ಶಿಸಿದ್ದು. (ಇವರ ಚೆನ್ನಬಸವಣ್ಣ ಹಾಗೂ ತೋಂಟದ ಸಿದ್ಧಲಿಂಗರ ವಚನಗ್ರಂಥಗಳ ಪೀಠಿಕೆಗಳು ಇಲ್ಲಿ ಉಲ್ಲೇಖನಾರ್ಹವಾದುವು).

ಮೇಲಿನ ಸಂಗತಿಗಳನ್ನು ಗಮನಿಸಿದರೆ ವಚನಸಾಹಿತ್ಯದಲ್ಲಿ ಬಸವಾದಿ ಪ್ರಮಥರ ಕಾಲವನ್ನು ಸೃಜನಯುಗವೆಂದೂ, ೧೫ನೆಯ ಶತಮಾನದ ನೂರೊಂದು ವಿರಕ್ತರ ಹಾಗೂ ತೋಂಟದ ಸಿದ್ಧಲಿಂಗರ ಕಾಲವನ್ನು ವಚನ ಸಾಹಿತ್ಯದ ಸಂಕಲನ ವ್ಯಾಖ್ಯಾನ ಯುಗವೆಂದೂ, ಡಾ. ಆರ್. ಸಿ. ಹಿರೇಮಠರ ಕಾಲವನ್ನು ವಚನಗ್ರಂಥಗಳ ಸಂಸ್ಕರಣ-ಸಂಪಾದನೆಗಳ ವೈಜ್ಞಾನಿಕ ಯುಗವೆಂದೂ ಕರೆದರೆ ತಪ್ಪಲ್ಲ. ಬಸವಯುಗದ ವಚನಗಳನ್ನು ಸಂಕಲನ ಮಾಡಿದ ೧೫ನೆಯ ಶತಮಾನದ ಶರಣರಿಗೆ ೩೦೦ ವರುಷಗಳ ಅಂತರವಿದ್ದರೆ ಆಧುನಿಕ ರೀತಿಯಲ್ಲಿ ಗ್ರಂಥಸಂಪಾದನೆಗೆ ಹೊರಟ ಡಾ. ಹಿರೇಮಠರ ಕಾಲಕ್ಕೂ ಹಿಂದಿನ ವಚನಕಾರರ ಕಾಲಕ್ಕೂ ೮೦೦ ವರ್ಷಗಳ ಮಹಾಗಡುವು (Gulf) ಏರ್ಪಟ್ಟಿದೆ. ಈ ಅಂತರ ಹೆಚ್ಚಾದಷ್ಟೂ ಸಂಪಾದಕನ ಹೊಣೆಗಾರಿಕೆ ಹೆಚ್ಚುತ್ತದೆ. 'ವಿದ್ವಾಂಶ್ಚ ಪ್ರಬಂಧಂ ಅನೇಕಾದರ್ಶಗತಂ ಕುರ್ಯಾತ್' ಎಂದು ರಾಜಶೇಖರನು ಹೇಳುವಂತೆ, ಒಂದು ಗ್ರಂಥವನ್ನು ಮತ್ತೆ ಮತ್ತೆ ಬರೆದಾಗ, ಅಥವ ಬೇರೊಬ್ಬರು ಪ್ರತಿ ಮಾಡಿದಾಗ, ಅದೇ ರೀತಿ ಬೇರೆ ಬೇರೆ ಸ್ಥಳಗಳಲ್ಲಿ ಅದರ ಪ್ರತಿಗಳು ನಿರ್ಮಾಣಗೊಳ್ಳುತ್ತ ನಡೆದಾಗ, ಅದರ ರೂಪ, ಅರ್ಥ, ವ್ಯಾಖ್ಯಾನ ಪ್ರಕ್ರಿಯೆಗಳಲ್ಲಿ ವ್ಯತ್ಯಾಸ ಹೆಚ್ಚುತ್ತಲೇ ಹೋಗುತ್ತದೆ.' ಪಾಠಗಳ ಸಮಸ್ಯೆ, ಪಾಠಾಂತರಗಳ ಸಮಸ್ಯೆಯಂತೂ ಅನಿಯಂತ್ರಿತವಾಗುತ್ತದೆ ಇಷ್ಟೊಂದು ಕಾಲ–ದೇಶ–ಪರಿಸರದ ವ್ಯತ್ಯಯಗಳನ್ನು ಎದುರಿಟ್ಟುಕೊಂಡು ಗ್ರಂಥಸಂಪಾದಕ ಮೂಲಗ್ರಂಥದ ಸತ್ಯಸಂಶೋಧನೆಗೆ ಹೊರಟ ಒಬ್ಬ ವ್ರತಸಾಧಕನಾಗುತ್ತಾನೆ. "To know a word is to know the truth" ಎಂಬುದು ಗ್ರಂಥಸಂಪಾದಕನ ಧೋರಣೆಯಾಗುತ್ತದೆ. ಡಾ. ಹಿರೇಮಠರು ಈ ದಿಸೆಯಲ್ಲಿ ಅದ್ವಿತೀಯರಾಗಿ ಮುನ್ನಡೆದಿದ್ದಾರೆ. ಶ್ರೀ ಹಳಕಟ್ಟಿ ಹಾಗೂ ಬಸವನಾಳರ ತರುವಾಯದಲ್ಲಿ ವಚನವಾಙ್ಮಯ ವಾರಿಧಿಯಲ್ಲಿ ಮುಳುಗಿ ಅನರ್ಘ್ಯ ವಚನಗ್ರಂಥರತ್ನಗಳನ್ನು ಹೊರಗಾಣಿಸಿದ ಪ್ರತಿಭೆ ಹಾಗೂ ವಿನೂತನಮಾರ್ಗ ಅವರದಾಗಿದೆ. ■ ■

# ಕಾವ್ಯಸಂಪಾದಕ : ಆರ್. ಸಿ. ಹಿರೇಮಠರು

□ □ □ □ □ □ □ □ □ □ □ □ □ □ □ □ □ □

ಎನ್. ಬಸವಾರಾಧ್ಯ

□ □ □ □ □ □ □ □ □ □ □ □ □ □ □ □ □ □

ಕನ್ನಡವನ್ನು ಉದ್ಧರಿಸಿದವರು ಕೆಲವರು. ಕನ್ನಡವನ್ನು ಪ್ರಸಿದ್ಧಿಪಡಿಸಿದವರು ಮತ್ತೆ ಕೆಲವರು. ಕನ್ನಡವನ್ನು ಉದ್ಧರಿಸಿ ಪ್ರಸಿದ್ಧಿಪಡಿಸಿದವರು ಅತ್ಯಂತ ವಿರಳ. ಈ ವಿರಳಪಂಕ್ತಿಗೆ ಸೇರಿದವರು ಡಾ. ಆರ್. ಸಿ. ಅವರು. ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಗೆ ಶ್ರೀಯುತರು ಸಲ್ಲಿಸಿರುವ ಸಲ್ಲಿಸುತ್ತಿರುವ ಸೇವೆ ಅವಿಸ್ಮರಣೀಯವಾದುದು. ವಚನಪಿತಾಮಹ ಡಾ. ಫ. ಗು. ಹಳಕಟ್ಟಿ ಅವರಾದ ಮೇಲೆ ವಚನವಾಙ್ಮಯದ ಸುವರ್ಣಯುಗವನ್ನು ಕಾಣುತ್ತಿರುವುದು ಡಾ. ಆರ್. ಸಿ. ಅವರ ಕಾಲದಲ್ಲಿ. ಸಾಹಿತ್ಯಕ್ಷೇತ್ರದ ಕೆಲವು ಪ್ರಕಾರಗಳಲ್ಲಿ ಕೃಷಿಗೈದಿರುವವರನ್ನು ಕಾಣಬಹುದು. ಆದರೆ ಸಾಹಿತ್ಯಕ್ಷೇತ್ರದ ಎಲ್ಲ ಪ್ರಕಾರಗಳಲ್ಲಿಯೂ ಕೃಷಿಗೈದಿರುವವರನ್ನು ಕಾಣುವುದು ತೀರ ಅಪರೂಪ. ಈ ವರ್ಗಕ್ಕೆ ಸೇರಿದವರು ಡಾ. ಆರ್. ಸಿ. ಅವರು. ನಿರಂತರವಾದ ಚಿಂತನ, ಮಂಥನ, ಆಲೋಚನಗಳಿಂದ ಸಾಹಿತ್ಯಪ್ರಕಾರದ ಯಾವುದೇ ತೆರನಾದ ಕೃತಿಗಳನ್ನಾಗಲಿ, (ಅವು ಶಾಸ್ತ್ರೀಯ ಕೃತಿಗಳಾಗಿರಲಿ, ಕಾವ್ಯಗಳಾಗಿರಲಿ, ಧಾರ್ಮಿಕ ಗ್ರಂಥಗಳಾಗಿರಲಿ, ಲೌಕಿಕ ಗ್ರಂಥಗಳಾಗಿರಲಿ) ಶಾಸ್ತ್ರೀಯವಾಗಿ ಸಂಶೋಧಿಸಿ ಸಂಪಾದಿಸಿ ಪ್ರಕಟಿಸಬಹುದೆಂಬುದನ್ನು ಡಾ. ಆರ್. ಸಿ. ಅವರು ತೋರಿಸಿಕೊಟ್ಟಿದ್ದಾರೆ.

ಪ್ರಾಚೀನಕಾವ್ಯಸಂಪಾದನೆ ಒಂದು ದೃಷ್ಟಿಯಲ್ಲಿ ಸ್ವತಂತ್ರವಾದ ಕಾವ್ಯರಚನೆಗಿಂತ ದುಸ್ತರವಾದುದು. ದುರ್ಗಮವಾದುದು. ಪ್ರತಿಭೆ, ವಿದ್ವತ್ತು ಮೇಳವಿಸಿರುವ ವಿದ್ವಾಂಸರು ಕೈಕೊಳ್ಳಬಹುದಾದ ಕಾರ್ಯ ಇದು. ನಮ್ಮ ಪೂರ್ವಜರು ನಮಗೆ ಬಿಟ್ಟುಹೋಗಿರುವ ಅಮೌಲ್ಯ ಆಸ್ತಿ, ಈ ಪ್ರಾಚೀನ ಕಾವ್ಯಗಳು. ಈ ಪ್ರಾಚೀನ ಮಹಾಸೌಧದ ಸುವರ್ಣಕವಾಟವನ್ನು ತೆರೆದು ತೋರಿಸುವುದು ಈ ಕಾವ್ಯಸಂಪಾದಕನ

ಕರ್ತವ್ಯ. ಈ ಸಂಪಾದನೆಗಳ ಪರಿಶೀಲನದಿಂದ ಪಾರಾಯಣದಿಂದ ತುಷ್ಟಿ ಪುಷ್ಟಿ ಆತ್ಮೋದ್ಧಾರವನ್ನು ಕಂಡುಕೊಳ್ಳುವುದು ಜನತೆಯ ಕರ್ತವ್ಯ.

ಪ್ರಾಚೀನಗ್ರಂಥಸಂಪಾದನ ಕಾರ್ಯ ಇಂದಿನ ಸುಕುಮಾರಯುಗದ ಜನಕ್ಕೆ ತುಂಬ ಕಷ್ಟಕರವಾದ ಕಾರ್ಯ. ಆಳವಾದ ವ್ಯಾಸಂಗ, ಶ್ರದ್ಧೆ, ನಿಷ್ಠೆ, ತಾಳ್ಮೆ ಇವು ಈ ಕಾರ್ಯಕ್ಕೆ ಅತ್ಯವಶ್ಯವಾದ ಅಂಗಗಳು. ಕವಿಯ ಮೂಲಕೃತಿಯನ್ನು ಯಥಾವತ್ತಾಗಿ ಸಂಪಾದಿಸುವುದು ಸಂಪಾದಕನ ಕರ್ತವ್ಯವಷ್ಟೇ ಅಲ್ಲದೆ ಜವಾಬ್ದಾರಿಯೂ ಹೌದು. ಸಂಪಾದಕನ ಕಾರ್ಯದಲ್ಲಿ ಲೋಪ ಕಂಡುಬಂದರೆ ಸಾಚಾ ನಾಣ್ಯಗಳಿಗೆ ಬದಲಾಗಿ ಖೋಟಾ ನಾಣ್ಯಗಳನ್ನು ಚಲಾವಣೆಗೆ ಬಿಟ್ಟಂತಾಗುತ್ತದೆ. ಪ್ರಾಚೀನ ಕಾವ್ಯಸಂಪಾದನೆ ಒಂದು ಪುಣ್ಯ ಕಾರ್ಯ. ಡಾ. ಆರ್. ಸಿ. ಅವರು ಈ ಪುಣ್ಯಕಾರ್ಯವನ್ನು ಸಾಕಷ್ಟು ಮಾಡಿ ಕೃತಾರ್ಥರಾಗಿದ್ದಾರೆ

ಪ್ರಸ್ತುತ ಲೇಖನದಲ್ಲಿ ಡಾ. ಆರ್. ಸಿ. ಅವರು ಸಂಪಾದಿಸಿರುವ ಕಾವ್ಯಗಳ ಒಂದು ಸ್ಥೂಲ ಸಮೀಕ್ಷೆಯನ್ನು ಮಾಡಿಕೊಡಲು ಯತ್ನಿಸಲಾಗಿದೆ.

**೧. ಭೀಮಕವಿ ವಿರಚಿತ ಬಸವಪುರಾಣ :** ವೀರಶೈವರಿಗೆ ಪರಮಪೂಜ್ಯವಾದ ಬಸವಪುರಾಣದ ಪರಿಷ್ಕೃತ ಮುದ್ರಣಗಳು ಉಪಲಬ್ಧವಿರಲಿಲ್ಲ. ಅಲ್ಲದೆ ಈ ಕಾವ್ಯ ನಾಡಿನ ಹಲವಾರೆಡೆಗಳಲ್ಲಿ ಪಾರಾಯಣಗೊಳ್ಳುತ್ತಿದೆ. ಅಷ್ಟೇ ಅಲ್ಲ, ಈ ಪುರಾಣ ಪ್ರವಚನದೊಂದಿಗೆ ಇದರ ವ್ಯಾಖ್ಯಾನಕಾರ್ಯವೂ ನಡೆಯುತ್ತಿದೆ. ಇವೆಲ್ಲಕ್ಕಿಂತ ಮಿಗಿಲಾಗಿ ಡಾ. ಆರ್.ಸಿ. ಅವರಿಗೆ ಪ್ರಾಣದಾನಮಾಡಿದ ಪುರಾಣ ಬಸವಪುರಾಣ. ಇದು ಜನಜನಿತವಾಗಿರುವ ಸಂಗತಿ. ಬಸವೇಶ್ವರನ ಚರಿತ್ರೆಯ ಜೊತೆಗೆ ಹಲವಾರು ಶಿವಶರಣರ ಚರಿತ್ರೆಯನ್ನು ಚಿತ್ರಿಸುವ ಈ ಕಾವ್ಯ ಕನ್ನಡಸಾಹಿತ್ಯದಲ್ಲಿ ಗಣನೀಯವಾದುದು. ಈ ಕಾವ್ಯದ ಕರ್ತೃ ಭೀಮಕವಿ, ಅತ್ಯಂತ ಸಮರ್ಥನಾದ ಕವಿ. ಪಾಲ್ಕುರಿಕೆ ಸೋಮನಾಥನ ತೆಲುಗು ಬಸವಪುರಾಣವನ್ನು ಆಧರಿಸಿ ಕನ್ನಡದಲ್ಲಿ ಭಾಮಿನಿಷಟ್ಪದಿಯಲ್ಲಿ ಭೀಮಕವಿ ಕ್ರಿ. ಶ. ೧೩೬೯ರಲ್ಲಿ ರಚಿಸಿದನು. ಹರಿಹರನ ತರುವಾಯ ಬಸವಣ್ಣನ ಜೀವನಸಂಗತಿಗಳನ್ನು ಕನ್ನಡದಲ್ಲಿ ನಿರೂಪಿಸಿದವರಲ್ಲಿ ಭೀಮಕವಿಯೇ ಪ್ರಸಿದ್ಧನು. ಎಂಟು ಕಾಂಡಗಳಲ್ಲಿಯೂ ಅರವತ್ತು ಸಂಧಿಗಳಲ್ಲಿಯೂ ಮೂರು ಸಾವಿರದ ಐದುನೂರ ಇಪ್ಪತ್ತೈದು ಪದ್ಯಗಳಲ್ಲಿಯೂ ಹರಡಿಕೊಂಡಿರುವ ಈ ಬೃಹತ್ ಪುರಾಣ ಕನ್ನಡಸಾಹಿತ್ಯದ ಒಂದು ಮಹಾಕೃತಿ. ಬಸವಪುರಾಣಕ್ಕೆ ಬರೆದಿರುವ ಪ್ರಸ್ತಾವನೆ ತುಂಬ ಅಧಿಕೃತವೂ ಹಲವಾರು ವಿಷಯಗಳಿಂದ ಪರಿಪ್ಲುತವೂ ಆಗಿದೆ. ಈ ಪುರಾಣದಲ್ಲಿ ಬರುವ ಎಲ್ಲ ಶಿವಶರಣರ ಕಥೆಗಳನ್ನು ಪ್ರಸ್ತಾವನೆಯ ಕಥಾಸಾರದಲ್ಲಿ ಅತ್ಯಂತ ಸ್ವಾರಸ್ಯವಾಗಿ ಜನಸಾಮಾನ್ಯಕ್ಕೂ ಉಪಯುಕ್ತವಾಗುವಂತೆ ನಿರೂಪಿಸಲಾಗಿದೆ. ಈ ಪುರಾಣದ ಸಂಪಾದನೆಯಲ್ಲಿ ಸಂಪಾದಕರ ಭಕ್ತಿ, ಶ್ರದ್ಧೆ, ನಿಷ್ಠೆಗಳು ಅಡಿಗಡಿಗೂ

ಗೋಚರವಾಗುತ್ತವೆ. ಈ ವಿಸ್ತಾರವಾದ ಪ್ರಸ್ತಾವನೆ ಸಂಪಾದಕರ ಆಳವಾದ ವ್ಯಾಸಂಗಕ್ಕೆ ಅಪರಿಮಿತವಾದ ಪಾಂಡಿತ್ಯಕ್ಕೆ ದ್ಯೋತಕವಾಗಿದೆ. ಈ ಪುರಾಣದ ಕೊನೆಯಲ್ಲಿ ಕೊಟ್ಟಿರುವ ಸಮಗ್ರವಾದ ಶಬ್ದಕೋಶ, ವಿಶಿಷ್ಟಪದಗಳ ಸೂಚಿ, ವ್ಯಕ್ತಿವಾಚಕ ಪದಗಳ ಸೂಚಿ ಸಂಶೋಧಕರಿಗೂ ವಿದ್ವಾಂಸರಿಗೂ ಅತ್ಯಂತ ಉಪಯುಕ್ತವಾಗಿವೆ. ಸರ್ವಾಂಗಸುಂದರವಾಗಿ ಸಮಸ್ತಪರಿಕರಗಳೊಡನೆ ಧಾರವಾಡ ಮುರುಘಾಮಠದಿಂದ ಪ್ರಕಟವಾಗಿರುವ ಬಸವಪುರಾಣ ಡಾ. ಆರ್. ಸಿ. ಅವರ ಮಹತ್ಸಾಧನೆ, ಸಿದ್ಧಿಗಳಲ್ಲಿ ಒಂದಾಗಿದೆ.

೨. **ಮಹಲಿಂಗಲೀಲೆ :** ೧೯ನೆಯ ಶತಮಾನದ ಮಧ್ಯಭಾಗದಲ್ಲಿ ಬಾಳಿದ ಬಸವ ಕವಿಯ ಈ ಕೃತಿಯನ್ನು ಡಾ. ಆರ್. ಸಿ. ಅವರು ೧೯೬೪ ರಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಧಾರವಾಡದ ಮುರುಘಾಮಠದಲ್ಲಿ ಸ್ಥಾಪಿತವಾದ ಬಾಲಲೀಲಾಮಹಾಂತ ಶಿವಯೋಗೀಶ್ವರ ಗ್ರಂಥಮಾಲೆಯಲ್ಲಿ ೧೨ನೆಯ ಕೃತಿಯಾಗಿ ಇದು ಪ್ರಕಟವಾಗಿದೆ. ಮಹಲಿಂಗದೇವ ಈ ಕೃತಿಯ ಕಥಾನಾಯಕ. ಈತ ಮುಧೋಳ ಸಂಸ್ಥಾನದ ಅಧಿಪತಿ. ಮಾಲೋಜಿ ರಾಜನಿಂದ ಪೂಜೆವಡೆದ ಒಬ್ಬ ಐತಿಹಾಸಿಕ ವ್ಯಕ್ತಿ. ಈತನು ಮೆರೆದ ಪವಾಡ, ಮಾಡಿದ ಮಹತ್ಕಾರ್ಯ, ಬೀರಿದ ಪ್ರಭಾವ, ಸಿದ್ಧಿ-ಪ್ರಸಿದ್ಧಿಗಳನ್ನು ಕವಿ ಹೃದಯಂಗಮವಾಗಿ ವರ್ಣಿಸಿದ್ದಾನೆ. ಮೂಲಚರಿತ್ರೆಗೆ ಹೊಂದಿಕೊಂಡು ಅನೇಕ ಉಪಕಥೆಗಳು ಹೆಣೆದುಕೊಂಡು ಕಾವ್ಯ ೪೨ ಸಂಧಿಗಳ ವರೆಗೆ ವಿಸ್ತಾರಗೊಂಡಿದೆ. ವಾರ್ಧಕಷಟ್ಪದಿಯಲ್ಲಿ ರಚಿತವಾದ ಇದನ್ನು ಡಾ. ಆರ್. ಸಿ. ಹಿರೇಮಠ ಅವರು ಎರಡು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಿದ್ದಾರೆ. ವಿವರವಾದ ಪ್ರಸ್ತಾವನೆಯಲ್ಲಿ ಕವಿಯ ಕಾಲದೇಶಮತಗಳ ಸಮಗ್ರವಿವರಣೆ, ಕೃತಿಯ ವಿಮರ್ಶೆ, ಕಥಾಸಾರ, ಕಥನಕಲೆ ಇತ್ಯಾದಿ ವಿಷಯಗಳ ವಿವೇಚನೆಯನ್ನು ಸಮರ್ಪಕವಾಗಿ ಮಾಡಿ ಕೃತಿಯ ಬೆಲೆಯನ್ನು ಹೆಚ್ಚಿಸಿದ್ದಾರೆ.

೩. **ಪದ್ಮಣಾಂಕಕವಿಕೃತ ಪದ್ಮರಾಜಪುರಾಣ :** ವಚನಕಾರರಲ್ಲಿ ಪ್ರಾಚೀನನೂ ಪ್ರಸಿದ್ಧನೂ ಆದ ಸಕಲೇಶಮಾದರಸನ ವಂಶಜನಾದ ಪದ್ಮಣಾಂಕ ತನ್ನ ಪೂರ್ವಜನಾದ ಕೆರೆಯ ಪದ್ಮರಸನನ್ನು ಕುರಿತು ಪದ್ಮರಾಜಪುರಾಣವನ್ನು ಬರೆದಿದ್ದಾನೆ. ಈ ಪದ್ಮಣಾಂಕನ ಪೂರ್ವಜರೆಲ್ಲ ಸತ್ಯಶರಣರು, ನಿತ್ಯಶಿವಾನುಭಾವಿಗಳು, ಲಿಂಗಾಂಗ ಸಾಮರಸ್ಯ ಸುಖಿಗಳು, ಸರಸಸಾಹಿತ್ಯಜ್ಞರು, ನಿರುಪಮ ಪಾಂಡಿತ್ಯವನ್ನು ಸಂಪಾದಿಸಿದವರು, ಕಾಶೀವಿಶ್ವನಾಥನ ನಿಸ್ಸೀಮಭಕ್ತರು, ಲೌಕಿಕದಲ್ಲಿದ್ದೂ ಪಾರಮಾರ್ಥವನ್ನು ಸಾಧಿಸಿದ ಪರಮವೀರಶೈವರು. ಪದ್ಮಣಾಂಕ ತನ್ನ ವಂಶಜರ ಈ ಎಲ್ಲ ಗುಣಗಳನ್ನೂ ಗರ್ಭೀಕರಿಸಿಕೊಂಡು ಪದ್ಮರಾಜಪುರಾಣವೆಂಬ ಪ್ರೌಢಕಾವ್ಯವನ್ನು ಬರೆದಿದ್ದಾನೆ. ಈ

ಪ್ರೌಢಕಾವ್ಯವನ್ನು ಡಾ. ಆರ್. ಸಿ. ಅತ್ಯಂತ ಸಮರ್ಥರೀತಿಯಿಂದ ಸಂಪಾದಿಸಿದ್ದಾರೆ. ಪದ್ಮರಾಜನ ಕಾಲನಿರ್ಣಯವನ್ನು ಹಲವಾರು ಆಧಾರಗಳಿಂದ ಸಾದರಪಡಿಸಿದ್ದಾರೆ. ನೂರಾರು ಪುಟಗಳ ಪ್ರಸ್ತಾವನೆಯಲ್ಲಿ ಪದ್ಮರಾಜಪುರಾಣದಲ್ಲಿನ ಎಲ್ಲ ಅಂಶಗಳನ್ನೂ ವಿಶ್ಲೇಷಿಸಿದ್ದಾರೆ. ಜೊತೆಗೆ ಈ ಕಾವ್ಯದ ಸಮಗ್ರಕಥಾಸಾರವನ್ನೂ ಕೊಟ್ಟಿದ್ದಾರೆ. ಕವಿಕಾವ್ಯವಿಚಾರವನ್ನು ಒಳಗೊಂಡಿರುವ ಪ್ರಸ್ತಾವನೆಯೇ ಒಂದು ಸ್ವತಂತ್ರಗ್ರಂಥವಾಗಿ ನಿಲ್ಲಬಲ್ಲುದು. ಪದ್ಮರಾಜಪುರಾಣ ಅತ್ಯಂತ ಸಂಸ್ಕೃತಭೂಯಿಷ್ಠವಾಗಿದ್ದು ಅದರ ಸಂಪಾದನಕಾರ್ಯ ತುಂಬ ಕಠಿನತರವಾದುದು. ಈ ಕಾರ್ಯಕ್ಕೆ ವಿಶೇಷವಾದ ಸಂಸ್ಕೃತಪರಿಜ್ಞಾನವೂ ಪಾಂಡಿತ್ಯವೂ ಅವಶ್ಯವೆನಿಸಿವೆ. ಡಾ. ಆರ್. ಸಿ. ಅವರಂಥ ಸಮರ್ಥರು ಮಾತ್ರ ಈ ತೆರನ ಪುರಾಣಗಳನ್ನು ಸಂಪಾದಿಸಬಲ್ಲರು ಎಂಬುದನ್ನು ತೋರಿಸಿ ಕೊಟ್ಟಿದ್ದಾರೆ. ಮೂರು ಪ್ರತಿಗಳ ಆಧಾರದಿಂದ ಶಾಸ್ತ್ರೀಯವಾಗಿ ಸಂಪಾದಿಸಿರುವ ಈ ಪುರಾಣಕ್ಕೆ ಅತ್ಯಂತ ಸಂಶೋಧನಾತ್ಮಕವೂ ವಿಮರ್ಶಾತ್ಮಕ ದೃಷ್ಟಿಯಿಂದ ಬಹಳ ಬೆಲೆಯುಳ್ಳದ್ದೂ ಆದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಈ ಪ್ರೌಢಕೃತಿ ಧಾರವಾಡದ ಮುರುಘಾಮಠದ ವತಿಯಿಂದ ೧೯೫೮ ರಲ್ಲಿ ಪ್ರಕಟವಾಗಿದೆ.

೪. **ರಾಜಶೇಖರವಿಳಾಸ (ಸಂಗ್ರಹ) :** ಈ ಸಂಗ್ರಹವನ್ನು ಡಾ. ಆರ್. ಸಿ. ಅವರೂ ಡಾ. ಎಂ. ಎಸ್. ಸುಂಕಾಪುರ ಅವರೂ ಸಿದ್ಧಪಡಿಸಿದ್ದಾರೆ. ಪ್ರಾಚೀನ ಕಾವ್ಯಗಳ ಅಭ್ಯಾಸದ ಅನುಕೂಲತೆಗಾಗಿ ಸಂಗ್ರಹಿಸಲ್ಪಟ್ಟಿರುವ ಈ ಕಾವ್ಯ ವಿದ್ಯಾರ್ಥಿಗಳಿಗೆ ಮಾತ್ರವಲ್ಲದೆ ಇತರರಿಗೂ ಉಪಯುಕ್ತವಾಗಬಲ್ಲುದು. ವಿದ್ಯಾರ್ಥಿಗಳ ವ್ಯಾಸಂಗದ ದೃಷ್ಟಿಯಿಂದ ಇದು ಒಂದು ಅತ್ಯಂತ ಉಪಯುಕ್ತ ಪಠ್ಯಗ್ರಂಥವಾಗಿದೆ. ಇದು ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನೆ.

೫. **ರಾಘವಾಂಕ ವಿರಚಿತ ಸೋಮನಾಥ ಚಾರಿತ್ರ :** ಡಾ. ಆರ್. ಸಿ. ಹಿರೇಮಠ ಅವರು ರಾಘವಾಂಕನ ಬಗೆಗೆ ವಿಶೇಷವಾದ ಸಂಶೋಧನೆ ನಡೆಸಿದ್ದಾರೆ. ಆದುದರಿಂದ ರಾಘವಾಂಕನ ಎಲ್ಲ ಕೃತಿಗಳೂ ಎಲ್ಲ ಮಾಹಿತಿಗಳೂ ಡಾ. ಆರ್. ಸಿ. ಅವರಿಗೆ ಕರತಲಾಮಲಕ. ಸೋಮನಾಥಚಾರಿತ್ರಕ್ಕೆ ಅವರು ಬರೆದಿರುವ ಸುದೀರ್ಘವಾದ ಪ್ರಸ್ತಾವನೆಯಲ್ಲಿ ರಾಘವಾಂಕನ ಕಾಲದೇಶ ವರ್ತಮಾನಗಳನ್ನಷ್ಟೇ ಅಲ್ಲದೆ ಅವನ ಎಲ್ಲ ಕಾವ್ಯಗಳ ಸಾರಸರ್ವಸ್ವವನ್ನು ಘಟ್ಟಿಯಿಳಿಸಿ ಕೊಟ್ಟಿದ್ದಾರೆ. ನಾಲ್ಕು ಹಸ್ತಪ್ರತಿಗಳ ನೆರವಿನಿಂದ ಸಂಪಾದಿತವಾಗಿರುವ ಈ ಕೃತಿ ಆಧುನಿಕ ಗ್ರಂಥಸಂಪಾದನ ಶಾಸ್ತ್ರಗಳ ನಿಯಮಗಳಿಗೆ ಅನುಸಾರವಾಗಿದೆ. ರಾಘವಾಂಕನ ಬಗೆಗೆ ಅಧಿಕೃತವಾಗಿ ಮಾತನಾಡಬಲ್ಲ ಡಾ. ಆರ್. ಸಿ. ಅವರು ಡಾ. ಎಂ. ಎಸ್. ಸುಂಕಾಪುರ ಅವರ ಸಹಸಂಪಾದಕತ್ವದಲ್ಲಿ ಈ ಸೋಮನಾಥಚಾರಿತ್ರವನ್ನು ಸಂಪಾದಿಸಿದ್ದಾರೆ. ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೬೧ ರಲ್ಲಿ ಪ್ರಕಟವಾದ ಈ ಕೃತಿ ೧೯೬೭ ರಲ್ಲಿ ಪರಿಷ್ಕೃತ

ದ್ವಿತೀಯ ಮುದ್ರಣವನ್ನೂ ಕಂಡಿದೆ. ಒಟ್ಟಿನಲ್ಲಿ ಕನ್ನಡ ಲೋಕಕ್ಕೆ ರಾಘವಾಂಕನ ದರ್ಶನ ಮಾಡಿಸಿಕೊಟ್ಟವರು ಡಾ. ಆರ್.ಸಿ. ಅವರು.

**೬. ಕೊಟ್ಟೂರ ಬಸವೇಶ್ವರ ಚಾರಿತ್ರ್ಯ :** ೧೬ನೆಯ ಶತಮಾನದಲ್ಲಿ ಅಕಬರನ ಸಮಕಾಲೀನನಾಗಿದ್ದು ತನ್ನ ಘನವ್ಯಕ್ತಿತ್ವ, ಕರ್ತೃತ್ವಶಕ್ತಿಗಳಿಂದ ಅತ್ಯಂತ ಪ್ರಭಾವೀ ಮಹಾಪುರುಷನಾಗಿ ಅಂದಿನಿಂದ ಇಂದಿನ ವರೆಗೆ ಪೂಜೆಗೊಳ್ಳುತ್ತಿರುವ ಕೊಟ್ಟೂರ ಬಸವೇಶ್ವರನ ಜೀವನಚರಿತ್ರೆಯನ್ನು ೧೭ನೆಯ ಶತಮಾನದ ಬಸವಲಿಂಗನೆಂಬ ಕವಿ ಭಕ್ತಿಭರಿತನಾಗಿ ಬಣ್ಣಿಸಿದ್ದಾನೆ. ಈ ಕೃತಿಯನ್ನು ಡಾ. ಆರ್. ಸಿ. ಅವರು ೧೯೬೧ ರಲ್ಲಿ ಸಂಪಾದಿಸಿಕೊಟ್ಟಿದ್ದಾರೆ. ಕರ್ಜಗಿ ವಿರಕ್ತಮಠದಲ್ಲಿ ಸ್ಥಾಪಿತವಾದ ಶ್ರೀ ಗುರು ಮೃತ್ಯುಂಜಯ ಗ್ರಂಥಮಾಲೆಯ ಮೂರನೆಯ ಗ್ರಂಥವಾಗಿ ಇದು ಪ್ರಕಟವಾಗಿದೆ. ಗ್ರಂಥಸಂಪಾದನೆಗಾಗಿ ನಾಲ್ಕು ಹಸ್ತಪ್ರತಿಗಳನ್ನು ಬಳಸಿಕೊಳ್ಳಲಾಗಿದೆ. ಸಂಕ್ಷಿಪ್ತವಾದ ಹಾಗೂ ಸಮರ್ಪಕವಾದ ಪ್ರಸ್ತಾವನೆಯಲ್ಲಿ ಕವಿಯ ಕಾಲ, ದೇಶ, ಮತವಿಚಾರ, ಕಥಾನಾಯಕನ ಕಾಲ, ದೇಶ, ವ್ಯಕ್ತಿತ್ವ, ಪ್ರಭಾವ, ಕವಿಯ ಶೈಲಿ, ಹಸ್ತಪ್ರತಿಗಳ ವಿವರವಿದೆ. ಮುಂದೆ ಸಾದ್ಯಂತವಾದ ಕಥಾಸಾರವನ್ನು ಕೊಡಲಾಗಿದೆ. ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣವನ್ನು ತನ್ನ ಜೀವನದ ಗುರಿಯನ್ನಾಗಿಟ್ಟುಕೊಂಡು ಸಾಗಿದ ಮಹಿಮಾನ್ವಿತ ವ್ಯಕ್ತಿಚರಿತ್ರೆಯನ್ನು ಕವಿ ಎಷ್ಟು ತನ್ಮಯವಾಗಿ ಬರೆದಿದ್ದಾನೋ ಅಷ್ಟೇ ವ್ಯವಸ್ಥಿತವಾಗಿ ಡಾ. ಆರ್. ಸಿ. ಅವರು ಈ ಕೃತಿಯನ್ನು ಸಂಪಾದಿಸಿಕೊಟ್ಟಿದ್ದಾರೆ.

**೭. ಮಹಾಕವಿ ಷಡಕ್ಷರದೇವವಿರಚಿತ ರಾಜಶೇಖರವಿಳಾಸಂ :** ಡಾ. ಆರ್. ಸಿ. ಅವರ ಅಚ್ಚುಮೆಚ್ಚಿನ ಕವಿಗಳಲ್ಲಿ ಷಡಕ್ಷರದೇವನೂ ಒಬ್ಬ. ಕಣ್ಮರೆಯಾಗುತ್ತಿದ್ದ ಪ್ರೌಢ ಚಂಪೂಸಂಪ್ರದಾಯವನ್ನು ಪುನರುತ್ಥಾನಗೊಳಿಸಿದವರಲ್ಲಿ ಈತನೇ ಅಗ್ರಗಣ್ಯ. ರಾಜಶೇಖರವಿಳಾಸ, ಶಬರಶಂಕರವಿಳಾಸ, ವೃಷಭೇಂದ್ರವಿಜಯಗಳನ್ನು ಪ್ರೌಢ ಚಂಪೂಶೈಲಿಯಲ್ಲೇ ಬರೆದ ಪ್ರತಿಭಾವಂತ ಷಡಕ್ಷರಿ. ಕರ್ಣಾಟಕ ಕೃತಿಗೆ ಸೀಮಾಪುರುಷನಾದ ಷಡಕ್ಷರಿ ಚಂಪೂ ಸಂಪ್ರದಾಯದ ಕವಿಗಳಲ್ಲಿ ಕೊನೆಯವನು. ಈತನ ಪ್ರಭಾವಮುದ್ರೆ ತರುವಾಯದ ಹಲವಾರು ಕವಿಗಳ ಮೇಲೆ ಆಗಿರುವುದನ್ನು ನಿಚ್ಚಳವಾಗಿ ಗುರುತಿಸಬಹುದಾಗಿದೆ. ರಾಜಶೇಖರವಿಳಾಸ ಸಂಸ್ಕೃತಭೂಯಿಷ್ಠವಾದುದು. ಆದುದರಿಂದಲೇ ಇದಕ್ಕೆ ಹಲವಾರು ವ್ಯಾಖ್ಯಾನಗಳೂ ಹುಟ್ಟಿಕೊಂಡಿವೆ. ಷಡಕ್ಷರ ಮಂತ್ರಮಹಿಮೆಯನ್ನು ಬಿತ್ತರಿಸುವ ಈ ಕಾವ್ಯ ಇಂದಿಗೂ ಪಾರಾಯಣಗೊಳ್ಳುತ್ತಿದೆ. ಈ ರಸವತ್ಕಾವ್ಯವನ್ನು ಒಂಬತ್ತು ಹಸ್ತಪ್ರತಿಗಳಿಂದ ಸಂಪಾದಿಸಲಾಗಿದೆ. ಶಾಸ್ತ್ರೀಯವಾಗಿ ಸಂಪಾದಿತವಾದ ಈ ಕೃತಿಯಲ್ಲಿ ಸಂಪಾದಕರ ಅಗಾಧವಾದ ಪರಿಶ್ರಮವನ್ನು ಕಾಣಬಹುದಾಗಿದೆ. ವಿಸ್ತೃತವಾದ ಪ್ರಸ್ತಾವನೆಯಲ್ಲಿ ಷಡಕ್ಷರದೇವನ ಜೀವನ ಚರಿತ್ರೆ. ಜನ್ಮಕಾಲ, ಜನ್ಮಸ್ಥಳ, ವಾಸಸ್ಥಳ, ಇಳಾಪತಿಪೂಜತ್ವ, ಗುರುಪರಂಪರೆ, ಪೂರ್ವಕವಿಸ್ತವನ, ಸ್ವಕೃತಿಗಳು, ಕೃತಿರಚನೆಯ ಕಾಲ, ಕವಿಪ್ರಶಸ್ತಿ— ಇವೇ

ಮೊದಲಾದ ವಿಷಯಗಳನ್ನು ಕೂಲಂಕಷವಾಗಿ ವಿವೇಚಿಸಲಾಗಿದೆ. ಒಟ್ಟಿನಲ್ಲಿ ಪಾತ್ರಾವಿದೇಶಾ ದರ್ಶನವನ್ನು ಮಾಡಿಕೊಡಲಾಗಿದೆ. ಈ ಮಹಾಕಾವ್ಯ ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೭೧ರಲ್ಲಿ ಪರಿಷ್ಕೃತ ಮುದ್ರಣವನ್ನು ಕಂಡಿದೆ. ಡಾ. ಆರ್.ಸಿ. ಅವರ ಪಾಂಡಿತ್ಯ-ಪಾಂಡಿತ್ಯವನ್ನು ಇದರಲ್ಲಿ ಗುರುತಿಸಬಹುದಾಗಿದೆ. ಈ ಕಾವ್ಯದ ಸಹ ಸಂಪಾದಕರು ಡಾ. ಎಂ. ಎಸ್. ಸುಂಕಾಪುರ ಅವರು.

೮. **ಕವಿ ರಾಘವಾಂಕ ವಿರಚಿತ ಸೋಮನಾಥಚಾರಿತ್ರ ಸಂಗ್ರಹ :** ವಿದ್ಯಾರ್ಥಿಗಳ ಪಠ್ಯಪುಸ್ತಕ ದೃಷ್ಟಿಯಿಂದ ಸಿದ್ಧಪಡಿಸಿರುವ ಈ ಸಂಗ್ರಹದಲ್ಲಿ ಇಂದಿನ ಕಾಲಕ್ಕೆ ಅನ್ವಯವಾಗುವಂತಹ ಭಾಗಗಳನ್ನು ಮಾತ್ರ ಆರಿಸಿಕೊಂಡಿದ್ದಾರೆ. ಮೂಲಕಾವ್ಯದಲ್ಲಿ ಬರುವ ಮತೀಯ ಘರ್ಷಣೆಗಳನ್ನೆಲ್ಲಾ ಕೈಬಿಟ್ಟು ಸಮಕಾಲೀನ ಶಾಶ್ವತ ಕಾವ್ಯ ಧರ್ಮವೇ ವ್ಯಕ್ತವಾಗುತ್ತಿರುವ ಭಾಗವನ್ನು ಸಂಗ್ರಹಿಸಿದ್ದಾರೆ. ಇದರಿಂದ ರಾಘವಾಂಕನ ಪಾಂಡಿತ್ಯವನ್ನು ನೇರವಾಗಿ ವಿದ್ಯಾರ್ಥಿಗಳಿಗೆ ತೋರಿಸಿಕೊಟ್ಟಂತಾಗಿದೆ. ಈ ಸಂಗ್ರಹವನ್ನು ಡಾ. ಆರ್. ಸಿ. ಅವರು ಮತ್ತು ಡಾ. ಎಂ. ಎಸ್. ಸುಂಕಾಪುರ ಅವರು ಕೂಡಿ ಮಾಡಿದ್ದಾರೆ.

೯. **ಶಾಂತಲಿಂಗ ದೇಶಿಕಕೃತ ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ :** ಇದು ಪ್ರಥಮ ಬಾರಿಗೆ ಪ್ರಕಟಗೊಂಡಿರುವ ಒಂದು ಗದ್ಯಗ್ರಂಥ. ಈ ಕವಿಯ ಕಾಲ ಕ್ರಿ. ಶ. ೧೬೭೨. ಇದು ಅನೇಕ ವೀರಶೈವಕವಿಗಳ ಮತ್ತು ಅವರ ಗ್ರಂಥಗಳ ಇತಿಹಾಸಗಳನ್ನು ಒಳಗೊಂಡಿರುವುದರಿಂದ ತುಂಬ ಉಪಯುಕ್ತವಾಗಿದೆ. ಕವಿಗಳ ಮತ್ತು ಅವರ ಕೃತಿಗಳ ಕಾಲನಿರ್ಣಯಕ್ಕೆ ಈ ಗ್ರಂಥದಿಂದ ಬಹಳ ಪ್ರಯೋಜನವಾಗುತ್ತದೆ. ಹಲವಾರು ಪ್ರಾಚೀನಕಾವ್ಯಪುರಾಣಗಳಿಂದ ವಿಷಯಗಳನ್ನು ಸಂಗ್ರಹಿಸಿರುವುದಾಗಿ ಕವಿಯೇ ಹೇಳಿಕೊಂಡಿದ್ದಾನೆ. ಇದರಲ್ಲಿ ಶಿವನ ಪಂಚವಿಂಶತಿ ಲೀಲೆಗಳು, ಶೈವಾಚಾರ್ಯರ ಮತ್ತು ಶಿವಶರಣರ ಪವಾಡಗಳು, ಅವರ ಕೃತಿಗಳ ಮಹಿಮೆ ವರ್ಣಿತವಾಗಿದೆ. ಇದು ಒಂದು ಆಕರಗ್ರಂಥವಾಗಿದೆ. ಹಲವಾರು ದೃಷ್ಟಿಗಳಿಂದ ಅತ್ಯಂತ ಉಪಯುಕ್ತವಾಗಿರುವ ಈ ಗದ್ಯಗ್ರಂಥವನ್ನು ಸುಮಾರು ಹನ್ನೊಂದು ಹಸ್ತಪ್ರತಿಗಳ ನೆರವಿನಿಂದ ಸಂಪಾದಿಸಲಾಗಿದೆ. ಎರಡು ಭಾಗಗಳಲ್ಲಿ ಪ್ರಕಟವಾಗಿರುವ ಈ ಕೃತಿಯಲ್ಲಿ ನೂರಾರು ಶಿವಶರಣರ ಚರಿತ್ರೆಗೆ ಸಂಬಂಧಿಸಿದ ಮಾಹಿತಿಗಳು ದೊರೆತಂತಾಗಿದೆ. ಸಮರ್ಪಕವಾದ ಪ್ರಸ್ತಾವನೆಯೊಂದಿಗೆ ಸರ್ವಾಂಗ ಸುಂದರವಾಗಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಈ ಕೃತಿ ಪ್ರಕಟವಾಗಿದೆ. ಡಾ. ಆರ್. ಸಿ. ಅವರೂ ಡಾ. ಎಂ. ಎಸ್. ಸುಂಕಾಪುರ ಅವರೂ ಈ ಗ್ರಂಥದ ಸಂಪಾದನಕಾರ್ಯವನ್ನು ಸಮರ್ಥವಾಗಿ ಮಾಡಿಕೊಟ್ಟಿದ್ದಾರೆ.

೧೦. **ಕವಿಚಕ್ರವರ್ತಿ ಸುರಂಗಕವಿಕೃತ ತ್ರಿಷಷ್ಟಿಪುರಾತನ ಚಾರಿತ್ರಂ :** ಅರುವತ್ತುಮೂರು ಪುರಾತನರ ಚರಿತ್ರೆಯನ್ನು ವಿಸ್ತಾರವಾಗಿ ಪ್ರಸ್ತಾಪಿಸಿರುವ ಕನ್ನಡ ಕವಿ

ಗಳಲ್ಲಿ ಕ್ರಿ. ಶ. ಸು. ೧೫೦೦ರಲ್ಲಿದ್ದ ಸುರಂಗಕವಿಯೇ ಮೊದಲಿಗನೆನ್ನಬಹುದು. ಈ ಬೃಹತ್ ಪ್ರಮಾಣದ ಚಂಪೂಕಾವ್ಯ ಕನ್ನಡ ಸಾಹಿತ್ಯಚರಿತ್ರೆಯಲ್ಲಿ ವಿಶಿಷ್ಟವಾದುದು. ಈ ಕಾವ್ಯದ ಸಂಪಾದನಾಕಾರ್ಯವೂ ಇದೇ ರೀತಿ ವಿಶಿಷ್ಟವಾದುದು. ಹತ್ತಾರು ವರ್ಷಗಳ ನಿರಂತರ ಪರಿಶ್ರಮದಿಂದ ಪ್ರಕಟವಾಗಿರುವ ಈ ಕಾವ್ಯ ಅತ್ಯಮೂಲ್ಯವಾದುದು. ಉಪಲಬ್ಧ ಮೂರು ಹಸ್ತಪ್ರತಿಗಳಿಂದಲೇ ಮಹತ್ತರವಾಗಿ ಸಂಪಾದಿತವಾಗಿರುವ ಕಾವ್ಯ ಇದು. ಸುಮಾರು ೩೩೭ ಪುಟಗಳ ಪ್ರಸ್ತಾವನೆಯಲ್ಲಿ ಮೂರು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ತ್ರಿಷಷ್ಟಿಪುರಾತನರ ಕಾಲವಿಚಾರ, ಸ್ಥಳ, ವೃತ್ತಿ, ಕಾಲನಿರ್ದೇಶ, ಧಾರ್ಮಿಕ-ಸಾಮಾಜಿಕ ಪರಿಸ್ಥಿತಿ, ಪುನರುತ್ಥಾನ. ಸಂದೇಶ ಮತ್ತು ಪ್ರಭಾವ ಮುದ್ರೆಗಳನ್ನು ವಿವೇಚಿಸಲಾಗಿದೆ. ಎರಡನೆಯ ಭಾಗದಲ್ಲಿ ಕವಿ-ಕಾಲ. ಕಾವ್ಯವಸ್ತು, ಕಾವ್ಯನಿರೂಪಣೆ. ಕಾವ್ಯವಿಮರ್ಶೆಗಳನ್ನು ಪ್ರಸ್ತಾಪಿಸಲಾಗಿದೆ. ಮೂರನೆಯ ಭಾಗದಲ್ಲಿ ಸುರಂಗ, ಹರಿಹರ, ಶೇಕ್ಕಿಳಾರರ ಅನ್ವಯ ಕಥಾಸಾರವನ್ನು ನೀಡಲಾಗಿದೆ. ಅರುವತ್ತುಮೂರು ಪುರಾತನರ ಚರಿತ್ರೆಗೆ ಸಂಬಂಧಿಸಿದ ಒಂದು ತೌಲನಿಕ ಅಧ್ಯಯನವನ್ನು ಪ್ರಸ್ತಾವನೆಯಲ್ಲಿ ಕಾಣಬಹುದಾಗಿದೆ. ತ್ರಿಷಷ್ಟಿಪುರಾತನರ ಬಗೆಗೆ ವಿಶೇಷ ಮಾಹಿತಿಯನ್ನು ನೀಡಬಲ್ಲ ಒಂದು ಅಧಿಕೃತ ಆಕರಗ್ರಂಥ. ಕನ್ನಡ, ಸಂಸ್ಕೃತ, ತಮಿಳು ಮತ್ತು ಇಂಗ್ಲಿಷಿನ ಹಲವಾರು ಗ್ರಂಥಗಳನ್ನು ಪರಿಶೀಲಿಸಲಾಗಿದೆ, ಪ್ರಸ್ತಾಪಿಸಲಾಗಿದೆ. ಅವುಗಳ ಸಂಪೂರ್ಣ ಉಪಯೋಗವನ್ನು ಪಡೆದುಕೊಳ್ಳಲಾಗಿದೆ. ಪ್ರಾಚೀನ ಕನ್ನಡ ಕಾವ್ಯಪ್ರಪಂಚದಲ್ಲಿ ಶಾಶ್ವತವಾಗಿ ತೊಳಗಿ ಬೆಳಗುವ ಕೃತಿ ತ್ರಿಷಷ್ಟಿಪುರಾತನ ಚಾರಿತ್ರ. ಈ ಅಮೂಲ್ಯ ಪ್ರಕಟನೆಯಿಂದ ಕರ್ನಾಟಕ ವಿಶ್ವವಿದ್ಯಾಲಯದವರು ಕನ್ನಡ ಸಾರಸ್ವತ ಪ್ರಪಂಚಕ್ಕೆ ಮಹದುಪಕಾರವನ್ನು ಮಾಡಿದ್ದಾರೆ. ಡಾ. ಆರ್. ಸಿ. ಬಹುಮುಖವಾದ ಪಾಂಡಿತ್ಯಕ್ಕೆ ರನ್ನಗನ್ನಡಿಯನ್ನು ಹಿಡಿದಂತಿದೆ ಈ ಕೃತಿ.

**೧೧. ಬಸವರಾಜವಿಜಯಂ :** ಡಾ. ಆರ್. ಸಿ. ಅವರ ಸಮರ್ಥ ಸಂಪಾದಕತ್ವದಲ್ಲಿ ಹೊರಬಂದ ಮತ್ತೊಂದು ಕೃತಿ ವೃಷಭೇಂದ್ರವಿಜಯ ಅಥವಾ ಬಸವರಾಜ ವಿಜಯಂ. ಇದು ಷಡಕ್ಷರದೇವನ ದ್ವಿತೀಯ ಪ್ರೌಢಚಂಪೂಕಾವ್ಯ. ಬಸವಣ್ಣನವರ ಚರಿತ್ರೆ, ಜೊತೆಗೆ ಅನೇಕ ಶಿವಶರಣರ ಉಪಕಥೆಗಳನ್ನೊಳಗೊಂಡು ೪೨ ಆಶ್ವಾಸಗಳಲ್ಲಿ ಹಬ್ಬಿನಿಂತ ಈ ಬೃಹತ್ಕೃತಿಯನ್ನು ಡಾ. ಹಿರೇಮಠರು ಆರು ಹಸ್ತಪ್ರತಿಗಳ ಸಹಾಯದಿಂದ ಶಾಸ್ತ್ರೀಯವಾಗಿ ಸಂಪಾದಿಸಿದ್ದಾರೆ. ವಿಸ್ತಾರವಾದ ಪಾಂಡಿತ್ಯಪೂರ್ಣ ಪ್ರಸ್ತಾವನೆಯಲ್ಲಿ ಕವಿಚರಿತ್ರೆ ಮತ್ತು ಬಸವಣ್ಣನವರ ಸಮಗ್ರ ಚರಿತ್ರೆ, ವ್ಯಕ್ತಿತ್ವ, ಕರ್ತೃತ್ವಶಕ್ತಿಗಳ ವಿವರಣೆ, ವಿಶ್ಲೇಷಣೆಯನ್ನು ಇತರ ಕವಿಕೃತ ಬಸವಚರಿತ್ರೆಗಳ ಜೊತೆ ತೌಲನಿಕವಾಗಿ ನಡೆಸಿ, ಈ ಕೃತಿಯ ಸ್ಥಾನಮಾನವನ್ನು ಸಮರ್ಪಕವಾಗಿ ಗುರುತಿಸಿದ್ದಾರೆ. ಡಾ. ಹಿರೇಮಠರ ಪ್ರತಿಭೆ. ಪಾಂಡಿತ್ಯ. ಪರಿಶ್ರಮ. ಸೂಕ್ಷ್ಮ ಶಾಸ್ತ್ರೀಯ ದೃಷ್ಟಿ, ಗ್ರಂಥಸಂಪಾದನ ಪರಿಣತಿ ಈ ಕೃತಿಸಂಪಾದನೆಯಲ್ಲಿ ಎದ್ದು ಕಾಣುತ್ತವೆ.

ಒಟ್ಟಿನಲ್ಲಿ ಷಡಕ್ಷರದೇವನ ಸಮಗ್ರ ಕನ್ನಡಕೃತಿಗಳನ್ನು ವ್ಯವಸ್ಥಿತವಾಗಿ ಸಂಪಾದಿಸಿ ಕನ್ನಡ ಸಾಹಿತ್ಯಪ್ರಪಂಚಕ್ಕೆ ಅರ್ಪಿಸಿದ ಕೀರ್ತಿ ಡಾ. ಆರ್. ಸಿ. ಹಿರೇಮಠರಿಗೆ ಸಲ್ಲುತ್ತದೆ. ಈ ಕೃತಿ ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೬೮ ರಲ್ಲಿ ಪ್ರಥಮ ಮುದ್ರಣ ಮತ್ತು ೧೯೭೫ ರಲ್ಲಿ ಪರಿಷ್ಕೃತ ದ್ವಿತೀಯ ಮುದ್ರಣವನ್ನು ಕಂಡಿದೆ.

**೧೨. ಹರಿಹರದೇವಕೃತ ಪುರಾತನರ ಆರು ರಗಳೆಗಳು :** ಅರುವತ್ತುಮೂವರು ಪುರಾತನರಲ್ಲಿ ಪರಿಗಣಿತರಾದ ತಿರುನೀಲಕಂಠದೇವ ಇಹಪಗೆಯಾಂಡ, ಇಳೆಯಾಂಡ ಗುಡಿಮಾರ, ಸೇದಿರಾಜ, ಮುರಿಯಂಡದೇವ, ಅಮರನೀತಿ- ಈ ಆರು ಜನರ ರಗಳೆಗಳು ಈ ಸಂಕಲನದಲ್ಲಿ ಸೇರಿವೆ. ಸಮುಚಿತವಾದ ಪ್ರಸ್ತಾವನೆ ಅರ್ಥಕೋಶ ಗಳೊಂದಿಗೆ ೧೯೭೪ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಪ್ರಕಟವಾಗಿರುವ ಈ ಸಂಕಲನ ವಿದ್ಯಾರ್ಥಿಗಳ ಪಠ್ಯಗ್ರಂಥದ ದೃಷ್ಟಿಯಿಂದ ಕೂಡಿದುದಾಗಿದೆ.

**೧೩. ಮಹಾಕವಿ ಹಂಪೆಯ ಹರಿಹರದೇವಕೃತ ಪುರಾತನರ ರಗಳೆಗಳು :** ಹಂಪೆಯ ಹರಿಹರ ಡಾ. ಆರ್. ಸಿ. ಅವರಿಗೆ ಅತ್ಯಂತಪ್ರಿಯನಾದ ಕವಿಗಳಲ್ಲಿ ಅಗ್ರಗಣ್ಯ. ಹರಿಹರ ಮತ್ತು ರಾಘವಾಂಕರು ಕನ್ನಡದ ಕ್ರಾಂತಿಕಾರಕ ಕವಿಗಳೆಂದು ಕರೆಸಿ ಕೊಂಡಿದ್ದಾರೆ. ಸಾಹಿತ್ಯಕ್ಷೇತ್ರದಲ್ಲಿ ಒಂದು ಹೊಸ ಜಾಡನ್ನು ತೆರೆದು ತೋರಿಸಿದ ಧೀಮಂತ ಕವಿಗಳಿವರು. ಹರಿಹರನ ಬಗೆಗಂತೂ ಅಪಾರವಾದ ಸಾಹಿತ್ಯ ಸೃಷ್ಟಿ ಯಾಗಿದೆ. ಹರಿಹರನ ರಗಳೆಗಳ ಸಂಖ್ಯೆ ಎಷ್ಟು ಎಂಬ ಬಗೆಗೇ ನಿಬಂಧಗಳು ಹುಟ್ಟಿಕೊಂಡಿವೆ. ಹರಿಹರ ಪುರಾತನರು ಮತ್ತು ನೂತನರನ್ನು ಕುರಿತು ರಗಳೆಗಳನ್ನು ಬರೆದಿರುವುದು ಸರಿಯಷ್ಟೆ. ಈ ಪುರಾತನರು ನೂತನರು ಯಾರು ಯಾರು, ಅವರ ಕಾಲ, ಮೂಲ ಮೊದಲಾದ ವಿಷಯಗಳ ಬಗ್ಗೆಯೂ ತುಂಬ ಜಿಜ್ಞಾಸೆ ನಡೆದಿದೆ. ಈ ಎಲ್ಲ ವಿಷಯಗಳನ್ನು ಈ ಗ್ರಂಥದ ಪ್ರಸ್ತಾವನೆಯಲ್ಲಿ ಡಾ. ಆರ್. ಸಿ. ಕೂಲಂ-ಕಷವಾಗಿ ಚರ್ಚಿಸಿ, ಸಾಧಾರವಾಗಿ ವಿವೇಚಿಸಿದ್ದಾರೆ. ಹರಿಹರನ ಕಾಲ ವಿಚಾರವೇ ತುಂಬ ಜಟಿಲವಾದುದು. ಹಲವಾರು ಆಂತರಿಕ ಮತ್ತು ಬಾಹ್ಯಪ್ರಮಾಣಗಳಿಂದ ಈತನ ಕಾಲವನ್ನು ಕ್ರಿ. ಶ. ೧೨೦೦ ರಿಂದ ೧೨೫೦ ಎಂದು ನಿರ್ಧರಿಸಿದ್ದಾರೆ.

ಪ್ರಸ್ತುತ ಸಂಪುಟದಲ್ಲಿ ೪೮ ಜನ ಪುರಾತನರ ರಗಳೆಗಳು ಮಾತ್ರ ಸಮಾವೇಶಗೊಂಡಿವೆ. ಒಟ್ಟು ಏಳು ಪ್ರತಿಗಳ ನೆರವಿನಿಂದ ಈ ರಗಳೆಗಳನ್ನು ಸಂಪಾದಿಸಲಾಗಿದೆ. ಸಂದರ್ಭೋ-ಚಿತ ಪಾಠಾಂತರಗಳೊಂದಿಗೆ ಕರ್ನಾಟಕ ವಿಶ್ವವಿದ್ಯಾಲಯದ ಪರಿಯಿಂದ ೧೯೭೬ ರಲ್ಲಿ ಪ್ರಕಟವಾಗಿದೆ. "ಹರಿಹರನಿಗೆ ಜೀವನವೇ ಒಂದು ಕಾವ್ಯವಾಗಿದೆ. ಲೋಕವೆ ಒಂದು ಮಹಾಕಾವ್ಯವಾಗಿದೆ. ಸುಖ, ದುಃಖ, ಸಂಸಾರ, ಸ್ವರ್ಗಲೋಕಕ್ಕೆ ತುಂಬುವ ಜೀವನದ ಅನಂತ ಅನುಭವ, ಸೂಕ್ಷ್ಮ ನಿರೀಕ್ಷಣೆ, ಅಭಿವ್ಯಕ್ತಿ, ಉತ್ಸಾಹಗಳಿಂದ ಹರಿಹರನ ರಗಳೆಗಳು ಶಾಶ್ವತಕಾವ್ಯಗಳಾಗಿವೆ" ಎಂಬುದು ನಿರ್ವಿವಾದವಾದುದು.

**೧೪. ಕನಕದಾಸರ ಮೋಹನತರಂಗಿಣಿ :** ಕರ್ನಾಟಕದ ದಾಸಪಂಥದಲ್ಲಿ ಅತ್ಯಂತ ಜನಪ್ರಿಯನಾದವನು ಕನಕದಾಸ, ಕಾಗಿನೆಲೆ ಆದಿಕೇಶವನ ಭಕ್ತನಾದ ಈತ ಹಲವಾರು ಕೀರ್ತನೆಗಳನ್ನು ಹಾಡಿದ್ದಾನೆ. ಆದಿಕೇಶವನನ್ನು ಸಾಕ್ಷಾತ್ಕಾರಮಾಡಿಕೊಂಡ ಭಕ್ತ ಶಿರೋಮಣಿ. ಇಂದಿಗೂ ಈತನ ಕೀರ್ತನೆಗಳು ಜನದ ನಾಲಗೆಯ ಮೇಲೆ ನಲಿದಾಡುತ್ತಿವೆ. ಈತನ ಕೃತಿಗಳಲ್ಲಿ ಮೋಹನತರಂಗಿಣಿಯೂ ಒಂದು. ಕ್ರಿ. ಶ. ೧೫೦೦ ರಲ್ಲಿದ್ದಿರಬಹುದಾದ ಕನಕದಾಸ ಸಾಂಗತ್ಯದಲ್ಲಿ ಈ ಕೃತಿಯನ್ನು ರಚಿಸಿದ್ದಾನೆ. ವರ್ಣನಾ ಪ್ರಧಾನವಾದ ಈ ಕಾವ್ಯದಲ್ಲಿ ಭಕ್ತಿ-ಶೃಂಗಾರಗಳ ನಿರೂಪಣೆಯನ್ನು ಮನಗಾಣಬಹುದಾಗಿದೆ. ಈ ಸಾಂಗತ್ಯಕೃತಿಯಲ್ಲಿ ದೇಶಿ ಪುಂಖಾನುಪುಂಖವಾಗಿ ಹರಿದಿರುವುದನ್ನು ಕಾಣಬಹುದು. ಇದು ಪಂಡಿತ-ಪಾಮರರಿಗೂ ಮೆಚ್ಚುಗೆತಕ್ಕ ಕಾವ್ಯ. ಈ ಸಾಂಗತ್ಯ ಕೃತಿಯನ್ನು ಏಳು ಪ್ರತಿಗಳ ಆಧಾರದಿಂದ ಸಂಪಾದಿಸಲಾಗಿದೆ. ಈ ಕಾವ್ಯ ಕರ್ನಾಟಕ ವಿಶ್ವವಿದ್ಯಾಲಯದಿಂದ ೧೯೭೬ರಲ್ಲಿ ಪ್ರಕಟವಾಗಿದೆ. ಡಾ. ಆರ್. ಸಿ. ಅವರು ಚಿಕ್ಕದಾದರೂ ಚೊಕ್ಕವಾದ ಪೀಠಿಕೆಯನ್ನು ಬರೆದು ಈ ಕೃತಿಯನ್ನು ಸಂಪಾದಿಸಿ ಕೊಟ್ಟಿದ್ದಾರೆ.

**೧೫. ಚಾಮರಸನ ಪ್ರಭುಲಿಂಗಲೀಲೆ :** ವೀರಶೈವಕಾವ್ಯಗಳಲ್ಲಿ ಚಾಮರಸನ ಪ್ರಭುಲಿಂಗಲೀಲೆಗೆ ಒಂದು ಉನ್ನತವಾದ ವಿಶಿಷ್ಟಸ್ಥಾನವಿದೆ. ವೀರವಿರಾಗಿ ಅಲ್ಲಮ ಪ್ರಭುದೇವನ ಚರಿತ್ರೆಯನ್ನೊಳಗೊಂಡ ಇದು ವಸ್ತು, ಪಾತ್ರ, ಕಥನಕಲೆ, ಶೈಲಿ. ರಸ ಪ್ರತಿಪಾದನೆ– ಎಲ್ಲ ದೃಷ್ಟಿಯಿಂದಲೂ ಗಮನಾರ್ಹವಾಗಿ ಓದುಗರ ಮನವನ್ನು ಸೂರೆಗೊಂಡ ಜನಪ್ರಿಯ ದಾರ್ಶನಿಕಕಾವ್ಯ. ಇದನ್ನು ಪ್ರೊ. ಶಿ. ಶಿ. ಬಸವನಾಳ ಅವರು ಕೆಲವು ಹಸ್ತಪ್ರತಿಗಳ ಆಧಾರದಿಂದ ಮೊದಲು ಪರಿಷ್ಕರಿಸಿ ಬೆಳಕಿಗೆ ತಂದರು. ತರುವಾಯ ಡಾ. ಆರ್. ಸಿ. ಅವರು ಡಾ. ಸುಂಕಾಪುರ ಅವರ ಜೊತೆಗೂಡಿ ಇತ್ತೀಚೆಗೆ ದೊರೆತ ಹೆಚ್ಚಿನ ಹಸ್ತಪ್ರತಿಗಳ ಸಹಾಯದಿಂದ ವ್ಯವಸ್ಥಿತವಾಗಿ, ಹೆಚ್ಚು ಶಾಸ್ತ್ರೀಯವಾಗಿ ಮತ್ತೊಮ್ಮೆ ಸಂಪಾದಿಸಿಕೊಟ್ಟಿದ್ದಾರೆ. ಈ ಕೃತಿಯ ಸಂಪಾದನೆಗೆ ಇವರು ೨೦ ಹಸ್ತಪ್ರತಿಗಳನ್ನು ಬಳಸಿಕೊಂಡಿದ್ದಾರೆ. ಕಾವ್ಯ ಎರಡು ಭಾಗದಲ್ಲಿ ಹೊರ ಬಂದರೆ ಒಳಿತೆಂದು ಭಾವಿಸಿ ಮೊದಲನೆಯ ಭಾಗವನ್ನು ೧೯೭೬ರಲ್ಲಿ ಪ್ರಕಟಿಸಿದ್ದಾರೆ. ಇದರಲ್ಲಿ ಮಾಯಾಕೋಲಾಹಲದ ವರೆಗಿನ ೭ ಗತಿಗಳು ಅಳವಟ್ಟಿವೆ. ಪ್ರಸ್ತಾವನೆ ಸಂಕ್ಷಿಪ್ತವಾಗಿದ್ದರೂ ಅಭ್ಯಾಸಪೂರ್ಣವಾಗಿದೆ. ಹೆಚ್ಚು ಹಸ್ತಪ್ರತಿಗಳಿಂದ ಶುದ್ಧ ಪಾಠವನ್ನು ನಿರ್ಣಯಿಸುವಲ್ಲಿ ಸಂಪಾದಕರು ತೋರಿದ ಜಾಣ್ಮೆ, ವಹಿಸಿದ ತಾಳ್ಮೆ ಹಿರಿದಾದುದು. ಉತ್ತಮ ಸಂಪಾದನೆಗೆ ಇದೊಂದು ಮಾದರಿಯಾಗಿದೆ.

**೧೬. ನಾಗಚಂದ್ರವಿರಚಿತ ರಾಮಚಂದ್ರಚರಿತಪುರಾಣಂ :** ಅಭಿನವಪಂಪನೆಂದು ಪ್ರಖ್ಯಾತನಾದ ಕನ್ನಡದ ಶ್ರೇಷ್ಠ ಕವಿಗಳಲ್ಲಿ ಒಬ್ಬನಾದ ಈತ ಕ್ರಿ.ಶ. ೧೦೪೦ರಲ್ಲಿ ಜೀವಿಸಿದ್ದನೆಂದು ಆತನ ಇತ್ತೀಚೆ ಲಭಿಸಿದ ವರ್ಧಮಾನ ಪುರಾಣದಿಂದ ಗೊತ್ತಾಗುತ್ತದೆ.

ಈತನ ರಾಮಚಂದ್ರ ಚರಿತಪುರಾಣ ಪಂಪರಾಮಾಯಣವೆಂದೇ ಸುಪ್ರಸಿದ್ಧವಾಗಿದೆ. ಈ ಕಾವ್ಯವನ್ನು ಒಂದು ಮುದ್ರಿತಪ್ರತಿ ಮತ್ತೊಂದು ಹಸ್ತಪ್ರತಿಯಿಂದ ಸಂಪಾದಿಸಲಾಗಿದೆ. ಗ್ರಂಥಸಂಪಾದನ ನಿಯಮಗಳಿಗನುಸಾರವಾಗಿ ಸಂಪಾದಿತವಾಗಿರುವ ಕೃತಿಗೆ ಪಾಠಾಂತರಗಳ ಜೊತೆಗೆ ಕನ್ನಡ ಅನುವಾದವನ್ನೂ ಕೊಡಲಾಗಿದೆ. ಗ್ರಂಥದ ಈ ಪೀಠಿಕೆಯಲ್ಲಿ ನಾಗಚಂದ್ರನ ಕಾಲ, ಕೃತಿಗಳ ವಿವೇಚನೆಯನ್ನು ಸಂಪೂರ್ಣವಾಗಿ ಮಾಡಲಾಗಿದೆ. ಈ ಕಾವ್ಯದ ಕಡೆಯಲ್ಲಿ ಸುದೀರ್ಘವಾದ ಸಮಗ್ರವಾದ ಅರ್ಥಕೋಶವನ್ನು ಕೊಡಲಾಗಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ನಾಗಚಂದ್ರನ ಬಗೆಗೆ ಈ ವರೆಗೆ ಉಪಲಬ್ಧವಿದ್ದ ಎಲ್ಲ ಸಾರಸಂಗತಿಗಳನ್ನೂ ಇಲ್ಲಿ ನೀಡಲಾಗಿದೆ. ಪ್ರಾಚೀನ ಪ್ರೌಢ ಚಂಪೂಕಾವ್ಯಗಳನ್ನು ಅನುವಾದಮಾಡುವ ಕಾರ್ಯ ತುಂಬ ಪರಿಶ್ರಮಪೂರ್ವಕವಾದುದು. ಡಾ. ಆರ್. ಸಿ. ಅವರು ಈ ಕಾರ್ಯವನ್ನು ಅತ್ಯಂತ ಸಮರ್ಥರೀತಿಯಿಂದ ಮಾಡಿಕೊಟ್ಟಿದ್ದಾರೆ. ಈ ಸಂದರ್ಭದಲ್ಲಿ ಭಾರತೀಯ ಜ್ಞಾನಪೀಠ ಪ್ರಕಾಶನದ ಜೈನಗ್ರಂಥಮಾಲೆಯ ಸಂಪಾದಕರಾದ ಡಾ. ಆ. ನೇ. ಉಪಾಧ್ಯೆ ಅವರು ಈ ಗ್ರಂಥದ ಪೀಠಿಕೆಯಲ್ಲಿ ಹೇಳಿರುವ : In Dr. Hiremath, we have a mature master of Kannada language and literature. He is an experienced teacher of classical Kannada having been a professor of Kannada in Karnatak University, Dharwad, for the last many years. Naturally, his Kannada translation is of immense guidance to those who want to study PR* critically. Nagachandra is not an easy author. He needed therefore, a learned professor like Dr. R.C. Hiremath to render his RCP* into modern Kannada. • ಈ ಮಾತುಗಳು ಯಥಾರ್ಥವಾದುವು. ಸಂಶೋಧನಾತ್ಮಕ ರೀತಿಯಿಂದ ಪರಿಷ್ಕೃತ ಮೂಲಪಾಠಾಂತರ ಮತ್ತು ಹೊಸಗನ್ನಡಅನುವಾದಗಳೊಂದಿಗೆ ಈ ಗ್ರಂಥ ಭಾರತೀಯ ಜ್ಞಾನಪೀಠ ಪ್ರಕಾಶನದಿಂದ ಕ್ರಿ. ಶ. ೧೯೭೫ ರಲ್ಲಿ ಹೊರಬಂದಿದೆ.

ಈ ಮೇಲಿನ ಕೃತಿಗಳ ಅವಲೋಕನದಿಂದ ಡಾ. ಆರ್. ಸಿ. ಕಾವ್ಯಸಂಪಾದನಕ್ಷೇತ್ರಕ್ಕೆ ಸಲ್ಲಿಸಿರುವ ಅಮೋಘ ಸೇವೆಯ ಒಂದು ಸ್ಪಷ್ಟಚಿತ್ರ ಕಣ್ಣುಮುಂದೆ ಮೂಡಿ ನಿಲ್ಲುತ್ತದೆ. ಪ್ರಾಚೀನಕಾವ್ಯಗಳ ಸಂಪಾದನೆಗೆ ಹಲವಾರು ಶಾಸ್ತ್ರಪ್ರಕಾರಗಳ ಸರ್ವಂಕಷವಾದ ಜ್ಞಾನ ಅತ್ಯವಶ್ಯವೆಂಬುದು ಬಲ್ಲವರ ಅಭಿಮತ. ನಿರಂತರವಾದ ಕಾವ್ಯವ್ಯಾಸಂಗ, ಅಮಿತವಾದ ಶ್ರದ್ಧೆ, ಅಪಾರವಾದ ತಾಳ್ಮೆ ಈ ಸಂಪಾದನಕಾರ್ಯಕ್ಕೆ ಅತ್ಯವಶ್ಯ ಅಂಗಗಳು ಎಂಬುದು ವಿದಿತವಾಗುತ್ತದೆ. ಯಾವೊಬ್ಬ ವ್ಯಕ್ತಿ ತನ್ನನ್ನೇ ಸಂಪೂರ್ಣವಾಗಿ ಸಾಹಿತ್ಯಕ್ಷೇತ್ರಕ್ಕೆ ಮೀಸಲಾಗಿರಿಸಿಕೊಳ್ಳುತ್ತಾನೋ ಆತನು ಏನನ್ನು ಸಾಧಿಸಿ ತೋರಿಸ

* PR - ಪಂಪರಾಮಾಯಣ, RCP - ರಾಮಚಂದ್ರಚರಿತಪುರಾಣ.

ಬಲ್ಲನೆಂಬುದನ್ನು ಡಾ. ಆರ್. ಸಿ. ಅವರು ತೋರಿಸಿಕೊಟ್ಟಿದ್ದಾರೆ. ಹತ್ತಾರು ಜನ ವಿದ್ವಾಂಸರ ನೆರವಿನಿಂದ ಸಂಘಸಂಸ್ಥೆಗಳು ಮಾಡಬಹುದಾದ ಕಾರ್ಯವನ್ನು ಡಾ. ಆರ್. ಸಿ. ಅವರು ಏಕಾಂಗಸಾಹಸಿಗಳಾಗಿ ಮಾಡಿದ್ದಾರೆ. ಶಾಸ್ತ್ರಗ್ರಂಥವಾಗಲಿ, ಸಾಹಿತ್ಯಗ್ರಂಥವಾಗಲಿ, ಪದ್ಯಗ್ರಂಥವಾಗಲಿ, ಗದ್ಯಗ್ರಂಥವಾಗಲಿ, ಲೌಕಿಕಕಾವ್ಯವಾಗಲಿ, ಧಾರ್ಮಿಕಕಾವ್ಯವಾಗಲಿ ಈ ಎಲ್ಲವನ್ನೂ ಲೀಲಾಜಾಲವಾಗಿ ಸಂಪಾದಿಸುವ ಸಾಮರ್ಥ್ಯವನ್ನು ದೈವಕೃಪೆಯಿಂದ ನಿರಂತರವಾದ ನಿಷ್ಠೆಯಿಂದ ಸಾಧಿಸಿ ತೋರಿಸಿದ್ದಾರೆ. ಶ್ರೀಯುತರು ಕನ್ನಡಸಾಹಿತ್ಯಪ್ರಪಂಚಕ್ಕೆ ಅದರಲ್ಲೂ ಸಂಪಾದನಕ್ಷೇತ್ರಕ್ಕೆ ಸಲ್ಲಿಸಿರುವ ಸೇವೆ ಶಾಶ್ವತವಾಗಿ ನಿಲ್ಲುವಂತಹದು. ಡಾ. ಆರ್. ಸಿ. ಅವರ ಕಾವ್ಯಸೌಧಕ್ಕೆ ಅವರ ಸಂಪಾದನಕಾರ್ಯ ಸುವರ್ಣಕಲಶವಿಟ್ಟಂತಿದೆ. ಈ ದೃಷ್ಟಿಯಿಂದ ಶ್ರೀಯುತರ ಹೆಸರು ಕಾವ್ಯಸಂಪಾದನಕ್ಷೇತ್ರದಲ್ಲಿ ಅಜರಾಮರವಾಗಿ ನಿಲ್ಲುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ. ಆಧುನಿಕ ಕನ್ನಡಸಾಹಿತ್ಯದ ಅಧ್ವರ್ಯುಗಳಲ್ಲಿ ಡಾ. ಆರ್. ಸಿ. ಅಗ್ರಗಣ್ಯರಾಗಿದ್ದಾರೆ. ಕನ್ನಡಸಾಹಿತ್ಯದ ಸರ್ವಾಂಗೀಣ ಪ್ರಗತಿಗೆ ಶ್ರೀಯುತರು ಸಲ್ಲಿಸಿರುವ ಮತ್ತು ಸಲ್ಲಿಸುತ್ತಿರುವ ಸೇವೆ ಪ್ರತಿಯೊಬ್ಬ ಕನ್ನಡಿಗನ ಆದರಕ್ಕೆ ಪಾತ್ರವಾಗುವುದರಲ್ಲಿ ಸಂದೇಹವಿಲ್ಲ.

■ ■

# ಭಾಷಾವಿಜ್ಞಾನಿ : ಆರ್. ಸಿ. ಹಿರೇಮಠರು

ಬಿ. ಬಿ. ರಾಜಪುರೋಹಿತ

ಕನ್ನಡ ಪರಂಪರೆಯ ವ್ಯಾಕರಣವು ಇತ್ತೀಚಿನ ಕೆಲವು ದಶಕಗಳಲ್ಲಿ ತನ್ನ ಜಾಡನ್ನು ಕ್ರಮೇಣ ಭಾಷಾಶಾಸ್ತ್ರದ ಕಡೆಗೆ ತಿರುಗಿಸಿತು. ಭಾಷಾವಿಜ್ಞಾನ, ಅದರಲ್ಲೂ ವರ್ಣನಾತ್ಮಕ ವಿಶ್ಲೇಷಣೆ ಕನ್ನಡದಲ್ಲಿ ತನ್ನ ಪ್ರಸ್ಥಾನವನ್ನು ಹೇಗೆ ಹಬ್ಬಿಸಿಕೊಂಡಿತೆಂಬುದನ್ನು ನೆನೆದುಕೊಂಡರೆ ಆರ್.ಸಿ. ಅವರ ಹೆಸರು ಪ್ರಮುಖವಾಗಿ ಕಾಣುತ್ತದೆ. ಅವರ ಕೈಕೆಳಗೆ ಪೂರ್ಣಾವಧಿ ಸಂಶೋಧನ ವಿದ್ಯಾರ್ಥಿಯಾಗಿ ಭಾಷಾಶಾಸ್ತ್ರವನ್ನು ಅಭ್ಯಸಿಸುವ ಯೋಗ ನನಗೆ ದೊರೆತದ್ದರಿಂದ ಅವರ ಭಾಷಾಶಾಸ್ತ್ರಾಧ್ಯಯನದ ನಿಕಟಪರಿಚಯವುಂಟಾಯಿತು.

ಹಾಗೆ ನೋಡಿದರೆ ಭಾಷಾವಿಜ್ಞಾನದ ಬಗೆಗೆ, ಭಾಷಾವಿಶ್ಲೇಷಣೆಯ ಬಗೆಗೆ ಶಾಸ್ತ್ರೀಯ ವಿವರಣೆಯನ್ನು ಆರ್. ಸಿ. ಅವರು ನೀಡುತ್ತಿದ್ದುದು ಬಹಳ ಕಡಿಮೆ. IPA ಬಗ್ಗೆ, Phoneme ಬಗ್ಗೆ, Morphology ಬಗ್ಗೆ ಎಂ.ಎ. ಕ್ಲಾಸುಗಳಲ್ಲೇ ಹೇಳುತ್ತಿದ್ದರು. ಆದರೆ ಹೇಳುವಾಗ ವಿಜ್ಞಾನದ ಬೀಜಮಾತುಗಳನ್ನು ಅರಗಿಸಿಕೊಂಡು ಒಂದೂ ತಾಂತ್ರಿಕ ಪದವಿಲ್ಲದೇ ಹೇಳುತ್ತಿದ್ದುದರಿಂದ ನಮಗೆ 'ಜಾರ್ಗನ್' ಇಲ್ಲದ ನೇರ ಅರ್ಥ ಸಿಕ್ಕುತ್ತಿತ್ತು. ಡಾ. ಹಿರೇಮಠರ ಬಳಿ ಭಾಷಾವಿಜ್ಞಾನದಲ್ಲಿ ಪಿಎಚ್.ಡಿ.ಗಾಗಿ ಸೇರಿದವರಲ್ಲಿ ಎಂ. ಆರ್. ರಂಗನಾಥ, ನಾನು ಮತ್ತು ಕೆ. ಜಿ. ಶಾಸ್ತ್ರಿ ಅವರು ಪ್ರಥಮರು. ನಮಗೆ ಅನುಕ್ರಮವಾಗಿ ೬೪, ೬೫, ೬೬ ರಲ್ಲಿ ಪಿಎಚ್. ಡಿ. ಬಂತು. ಆರ್. ಸಿ. ಅವರು ನಮಗೆ ಶಾಸ್ತ್ರ ಕಲಿಸುವದಕ್ಕಿಂತ ಹೆಚ್ಚಾಗಿ ನಮ್ಮೊಡನೆ ಸಾಮಗ್ರಿಯ ವಿಶ್ಲೇಷಣೆಗೆ ಕೂಡುತ್ತಿದ್ದರು. ಅದರಿಂದ ನಿರ್ಣಯಗಳಷ್ಟೇ ಅಲ್ಲದೆ ವಿಶ್ಲೇಷಣಾವಿಧಾನಗಳೂ ಸ್ಪಷ್ಟವಾಗುತ್ತಿದ್ದವು. ಅಂತಿಮವಾಗಿ ವಿಶ್ಲೇಷಣೆ ಸಮಾಧಾನ ನೀಡುವ ವರೆಗೆ ಪುನಃಪುನಃ ವಿವಿಧರೀತಿಯಲ್ಲಿ ವಿಶ್ಲೇಷಿಸಿ ನೋಡಬೇಕಾಗುತ್ತಿತ್ತು. ವಚನಗಳ

ವ್ಯಾಕರಣವನ್ನು ನಾನು ಬರೆಯುತ್ತಿದ್ದಾಗ noun morphologyಯನ್ನು ಐದು ರೀತಿಯ ಭಿನ್ನವಿಶ್ಲೇಷಣೆಯಲ್ಲಿ ಬರೆಯಬೇಕಾಯಿತು. ಕೊನೆಗೆ ಸಾಧ್ಯವಾದ ಮಟ್ಟಿಗೆ ನಿರ್ದುಷ್ಟವಾದ ವಿಶ್ಲೇಷಣೆ ಕೈಗೆ ಬಂತು. ಅಲ್ಲದೆ ಅದು Structure of Kannadaದ ಆ ಪ್ರಕರಣಕ್ಕಿಂತ ತೀರಾ ಭಿನ್ನವೂ ಆಗಿತ್ತು. Structure of Kannadaದ model ಏ ಸರಿ ಅಥವಾ ಸರ್ವಶ್ರೇಷ್ಠವೆಂದು ಆರ್. ಸಿ. ಅವರು ಭಾವಿಸಿದ್ದಾರೆ. ಇದು ಘಟಿಸುತ್ತಿರಲಿಲ್ಲ.

೧೯೫೩ ರಿಂದ ೫೭ರ ವರೆಗೆ ನಾವು ಕರ್ನಾಟಕ ಕಾಲೇಜಿನಲ್ಲಿ ಓದುತ್ತಿದ್ದಾಗ ಡಾ. ಹಿರೇಮಠರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಕನ್ನಡ ರೀಡರ ಆಗಿ ಆದೇ ತಾನೇ ಬಂದಿದ್ದರು. ಆವರ ಬಗ್ಗೆ ಕೇಳಿದ್ದೆವಾದರೂ ಅವರನ್ನು ಮಾತಾಡಿಸಲು ಅದೇನೋ ಭಯ. ಕನ್ನಡ ಆನರ್ಸಗೆ ಸೇರಿದ ಮೇಲಂತೂ ನಮ್ಮ ಸೀನಿಯರ ಗೆಳೆಯರೊಡನೆ ಅವರ ಕ್ಲಾಸುಗಳಲ್ಲಿ ಕುಳಿತುದೂ ಉಂಟು. ರಾಘವಾಂಕನ ಬಗ್ಗೆ ಕೇಳಿದರೆ ಇವರ ಬಾಯಿಂದ ಕೇಳಬೇಕು ಎಂದೆನಿಸಿದ್ದೂ ಉಂಟು. ೫೫ ರಿಂದ ೫೭ರಲ್ಲಿ ನಡೆದ ಭಾಷಾವಿಜ್ಞಾನದ ಬೇಸಿಗೆ ಶಾಲೆಗಳ ಬಗ್ಗೆ ಡಾ. ಎ. ಎಂ. ಘಾಟಗೆ ಅವರು ತಮ್ಮ ಸಂಸ್ಕೃತ ಕ್ಲಾಸಿನಲ್ಲಿ ನಮಗೆ ಹೇಳುತ್ತಿದ್ದುದುಂಟು. ಅದರಿಂದ ನಮಗೆ ಏನೂ ಕಲ್ಪನೆಯುಂಟಾಗುತ್ತಿರಲಿಲ್ಲ. ಬಹುಶಃ ಓದೆಲ್ಲ ಮುಗಿದ ಮೇಲೆ, 'ಪ್ರೊಫೆಸರ್' ಆದಾಗಲೇ ತಿಳಿದುಕೊಳ್ಳಬಹುದಾದ ವಿಷಯಗಳವು ಎಂದೆನ್ನಿಸುತ್ತಿತ್ತು. ಕನ್ನಡದ ವಿದ್ಯಾರ್ಥಿಯಾಗಿ ವ್ಯಾಕರಣವನ್ನು ಮ. ಪ್ರ. ಪೂಜಾರರ ಜಾಡಿನಲ್ಲಿ ಓದಿದ ನನಗೂ ಭಾಷಾಶಾಸ್ತ್ರವೆಂಬ ಹೊಸ ದೃಷ್ಟಿಕೋನವಿದೆಯೆಂಬುದು ಅರಿವಾದುದು ತುಂಬ ತಡವಾಗಿ. 'ಪಂಡಿತ' ಎಂದರೆ ವ್ಯಾಕರಣವನ್ನು ಚೆನ್ನಾಗಿ ಬಲ್ಲವನು; ಅವನಿಗೇ 'ದೋಷಜ್ಞಃ' ಎಂಬ ಇನ್ನೊಂದು ಹೆಸರೂ ಇರುವದರಿಂದ ಭಾಷೆಯಲ್ಲಿ ಜರುಗುವ ದೋಷಗಳನ್ನು ತಿದ್ದಿ, ವ್ಯಾಕರಣಕಾರ 'ಶಿಕ್ಷಾ' ವಿಧಿಸಬೇಕು ಎಂಬ ಕಲ್ಪನೆ ನಮ್ಮಲ್ಲಿ ಬೇರೂರಿತ್ತು. 'ಪ್ರಯೋಗ ಶರಣಾಃ ವೈಯಾಕರಣಾಃ' ಎಂದಿದ್ದರೂ ಬಹುಜನಪ್ರಯೋಗವೇ ಪ್ರಯೋಗವೆನಿಸುತ್ತಿತ್ತು.

೧೯೫೮ರಲ್ಲಿ ನಾವು ಸೀನಿಯರ್ ಎಂ. ಎ ಓದುತ್ತಿದ್ದಾಗ ಡಾ. ಹಿರೇಮಠರನ್ನು ಭಾಷಾವಿಜ್ಞಾನದ ಅಭ್ಯಾಸಕ್ಕಾಗಿ ಅಮೇರಿಕೆಗೆ ಬೀಳ್ಕೊಟ್ಟೆವು. ಆದರೆ ಅವರು ಅಲ್ಲಿ ಏನು ಓದಲಿದ್ದರೆಂಬುದರ ಕಲ್ಪನೆ ನಮಗಿರಲಿಲ್ಲ. ಪಿಎಚ್.ಡಿ.ಗೆ ಸೇರಿದ ಮೇಲೆ, ೬೦ರ ಬೇಸಿಗೆಯಲ್ಲಿ ಪುಣೆ ಭಾಷಾವಿಜ್ಞಾನಶಾಲೆಗೆ ಹೋಗಿ ಬಂದ ಮೇಲೆ ವಿಷಯ ಪ್ರವೇಶವಾಯಿತು. ಅಲ್ಲಿಯೇ ದ್ರಾವಿಡಭಾಷಾವಿಜ್ಞಾನದ ಮೇಲೆ ತೀ.ನಂ.ಶ್ರೀ ಅವರ ಭಾಷಣಗಳನ್ನು ಕೇಳಿದೆವು.

ಆ ಹೊತ್ತಿಗಾಗಲೇ ಡೆಕ್ಕನ್ ಕಾಲೇಜಿನಲ್ಲಿ ಬಿಳಿಗಿರಿಯವರು ಪ್ರಾಧ್ಯಾಪಕರಾಗಿದ್ದರು. Indian Linguisticsದಲ್ಲಿ ಅದೇ ತಾನೇ ಪ್ರಕಟವಾದ ಅವರ Kannada verb–

two models ಲೇಖನದ ಬಗೆಗೆ ಚರ್ಚೆ ನಡೆಯುತ್ತಿತ್ತು. ಒಡಿಯಾ ಭಾಷೆಯ ಮೇಲೆ ಅವರು ಕೆಲಸ ಮಾಡುತ್ತಿದ್ದರು. ಅಲ್ಲಿಯೇ ಎಂ. ಆರ್. ರಂಗನಾಥರು ತೀ. ನಂ.ಶ್ರೀ ನಿರ್ದೇಶಿಸುತ್ತಿದ್ದ ಧ್ವನಿಮಾ. ಆಕೃತಿಮಾ ಲೆಕ್ಕದ ಮೇಲೆ ಕೆಲಸ ಮಾಡು ತ್ತಿದ್ದರು. ಡಿ. ಎನ್. ಶಂಕರಭಟ್ಟರೂ ಪಿಎಚ್. ಡಿ. ಅಧ್ಯಯನ ನಡೆಸಿದ್ದರು. ಎಚ್. ಎಸ್. ಅನಂತನಾರಾಯಣ, ದೊರೆಸ್ವಾಮಿ ಅವರ ಹೆಸರುಗಳೂ ಪದೇ ಪದೇ ಕೇಳಿಬರುತ್ತಿದ್ದವು. ವಿಲಿಯಂ ಬ್ರೈಟನ "Outline of Colloquial Kannada" ಅದೇ ತಾನೇ ಪ್ರಕಟವಾಗಿತ್ತು. (ಡೆಕ್ಕನ್ ಕಾಲೇಜಿನವರು ಅದನ್ನು ನಮಗೆ ಅರ್ಧ ಬೆಲೆಗೆ ಅಂದರೆ ಮೂರು ರೂಪಾಯಿಗೆ ಕೊಡುತ್ತಿದ್ದರು). ವಿಲಿಯಂ ಮೆಕಾರ್ಮಿಕ್ ಧಾರವಾಡ ಕನ್ನಡದ ಬಗೆಗೆ ಪಾಠಗಳನ್ನು ರಚಿಸಿದ್ದರು. ಹಾ. ಮಾ. ನಾಯಕರು ಭಾಷಾಭ್ಯಾಸಕ್ಕಾಗಿ ಕಲಕತ್ತೆಗೆ ತೆರಳಿದ್ದರು. ಮುಂದೆ ಇಂಡಿಯಾನಾಕ್ಕೆ ಹೋದರು. ಹೀಗೆ ೫೦ರ ದಶಕದ ಉತ್ತರಭಾಗದಲ್ಲಿ ಕನ್ನಡವೂ ಬೆರಳ ಮೇಲೆ ಎಣಿಸುವಷ್ಟು ಜನರೊಂದಿಗೆ ತನ್ನ ಭಾಷಾಶಾಸ್ತ್ರದ ಅಭ್ಯಾಸವನ್ನು ಪ್ರಾರಂಭಿಸಿತು.

ಕನ್ನಡದ ಬಗ್ಗೆ ಎಲ್ಲವನ್ನೂ ನಮ್ಮ ಕೇಶಿರಾಜಾದಿಗಳು ಹೇಳಿಯೇ ಬಿಟ್ಟಿದ್ದಾರೆ. ಅದನ್ನೇ ಸ್ವಲ್ಪ ಭಾಷಾಶಾಸ್ತ್ರಕ್ಕೆ ಪರಿವರ್ತಿಸಿ ಹೇಳಿದರಾಯಿತು ಎಂಬ ಭಾವನೆ ಭಾಷಾವಿಜ್ಞಾನ ದಲ್ಲಿ ಹೊಸದಾಗಿ ಹೊಕ್ಕ ಕನ್ನಡ ವಿದ್ಯಾರ್ಥಿಗಳಿಗೆ ಇದ್ದಿರಬಹುದು. ಇದಕ್ಕೆ ಕಾರಣವೂ ಇದೆ. ಕೇಶಿರಾಜ ಸ್ವಲ್ಪಮಟ್ಟಿಗಾದರೂ ಭಾಷಾವಿಜ್ಞಾನಿಯ ವರ್ಣನಾತ್ಮಕತೆಯನ್ನು ತೋರಿಸುತ್ತಾನೆ. ಆದರೆ 'ಶಿಕ್ಷಾ' ಪ್ರವೃತ್ತಿ ಅವನಲ್ಲೂ ಕಂಡುಬರುವದರಿಂದ ಅವನು ವೈಯಾಕರಣನಾದನೇ ಹೊರತು ಭಾಷಾವಿಜ್ಞಾನಿಯಾಗಲಿಲ್ಲ.

ಆಧುನಿಕ ಭಾಷಾವಿಜ್ಞಾನ ಹುಟ್ಟುವ ಮೊದಲು ವ್ಯಾಕರಣದಿಂದ ಫಿಲಾಲಜಿ ಹುಟ್ಟಿ ಬಂದಿತ್ತು. ವ್ಯಾಕರಣಕಾರನ ಕಟ್ಟು ಕಟ್ಟಳೆಗಳು ಸಡಿಲವಾಗುತ್ತಬಂದು ಪ್ರಯೋಗ ಶರಣತೆಯೇ ಪ್ರಮುಖವಾಯಿತು. ಆದರೆ ಅಲ್ಲಿಯೂ ಕೆಲವೇ ಉದಾಹರಣೆಗಳನ್ನು ಆಧರಿಸಿ ನಿರ್ಣಯಗಳನ್ನು ಎಳೆಯುವ ಪ್ರವೃತ್ತಿ ಹೆಚ್ಚಾಯಿತು. ಇದರಿಂದ ಊಹಾಪರ ಕವಿಪ್ರವೃತ್ತಿ ಹೆಚ್ಚಿ ಫಿಲಾಲಜಿಯೂ ಒಂದು ಸೃಜನಶೀಲ ಕಾರ್ಯವೆನಿಸತೊಡಗಿತು. ಇವರ ಹಿಂದೆ 'ಸತ್ಯ' ಮರೆಯಾಗುತ್ತ ನಡೆಯಿತು. ಆದುದರಿಂದ ಭಾಷಾವಿಜ್ಞಾನಿ ಆ ಸತ್ಯಶೋಧಕನಾಗಿ ತಲೆಯೆತ್ತಿ ಬಂದ. ಮೊದಲು ಭಾಷೆಯ ವಿವಿಧ ಅವಸ್ಥೆಗಳನ್ನು, ವಿವಿಧಮಾರ್ಗಗಳನ್ನು ವಿವಿಧರೀತಿಯ ಉಪಯೋಗಗಳನ್ನು ಇದ್ದಕ್ಕಿದ್ದಂತೆ ಪ್ರತಿಕೃತಿಸ ಬೇಕು ಎಂಬ ಧೋರಣೆಯಿಂದ ವರ್ಣನಾತ್ಮಕ ಭಾಷಾವಿಜ್ಞಾನ ಜನಿಸಿತು. ವರ್ಣನಾತ್ಮಕ ಭಾಷಾವಿಜ್ಞಾನದ ಶೋಧಗಳನ್ನು ಕಾಲಕ್ರಮದಲ್ಲಿ ಇಟ್ಟು ನೋಡುವ, ಬದಲಾವಣೆಗಳ ಸೂತ್ರ ಕಂಡುಹಿಡಿಯುವ, ಇತರ ಜ್ಞಾತಿ ಭಾಷೆಗಳೊಡನೆ ಹೋಲಿಸಿನೋಡುವ ಕಾರ್ಯ ಕ್ಕಾಗಿ ಐತಿಹಾಸಿಕ ಮತ್ತು ತೌಲನಿಕ ಭಾಷಾವಿಜ್ಞಾನಗಳು ಹುಟ್ಟಿದವು. ಆದರೆ ವರ್ಣನಾತ್ಮಕ ಭಾಷಾವಿಜ್ಞಾನ ಮಾತ್ರ ತನ್ನ ನಿರ್ಣಯಗಳನ್ನು ಕೇವಲ ಆಕರ ಸಾಕ್ಷ್ಯಗಳ

ಮೇಲೆಯೇ ಕಟ್ಟಿತು. ಆಕರಗಳನ್ನು ಕೊಟ್ಟರೆ ಅದರಿಂದ ಹೊರಡುವ ನಿಯಮ ಸ್ವತಃ ಸಿದ್ಧವಾಗುತ್ತದೆ. ಈ ಅರ್ಥದಲ್ಲಿ ಭಾಷಾವಿಜ್ಞಾನಿಯ ನಿರ್ಣಯಗಳೆಲ್ಲ ಆಕರಗಳು ಹೇಳುವ ಸತ್ಯದ ಪುನರುಕ್ತಿ ಎನ್ನಬಹುದು.

ಡಾ. ಹಿರೇಮಠರ Structure of Kannada (೬೧) ಚಾಚೂ ತಪ್ಪದ ಅಂಥ ಒಂದು ವರ್ಣನಾತ್ಮಕ ವಿಶ್ಲೇಷಣೆ. ಇದು ಅವರು ಅಮೇರಿಕೆಯಲ್ಲಿ ನಡೆಸಿದ ಭಾಷಾ ವೈಜ್ಞಾನಿಕ ಕನ್ನಡ ಅಧ್ಯಯನದ ಫಲ. ಯಾವ ವಿಶ್ಲೇಷಣೆಯೂ ನಿರ್ದುಷ್ಟವಲ್ಲ ಎಂಬ ಮಾತನ್ನು ಒಪ್ಪಿಕೊಂಡರೂ ಧಾರವಾಡದ ಬ್ರಾಹ್ಮಣೇತರರು ಮಾತನಾಡುವ ಭಾಷೆಯ ಬಗೆಗೆ ವಿವರಗಳು ಬೇಕಾದಲ್ಲಿ ಈ ಗ್ರಂಥಕ್ಕೇ ಹೋಗಬೇಕು. ಬ್ರೈಟರ Outline ದಲ್ಲಿ ಮೈಸೂರಿನವರು (ಮುಖ್ಯವಾಗಿ ಬ್ರಾಹ್ಮಣರು) ಆಡುವ ಮಾತಿನ ವಿಶ್ಲೇಷಣೆಯಿದೆ. ಡಿ. ಎನ್. ಶಂಕರಭಟ್ಟರು ಸಂಪಾದಿಸಿದ Linguistic Survey ಪುಸ್ತಕಮಾಲೆಯಲ್ಲಿ ಬೇರೆ ಬೇರೆ ಭಾಗಗಳ ಕನ್ನಡಗಳ ವರ್ಣನೆ ಸಿಗುವದುಂಟು. ರಂಗನಾಥರ ಪ್ರಬಂಧದಲ್ಲೂ ಮೈಸೂರು ಧಾರವಾಡ ಕನ್ನಡಗಳ ತುಲನೆಯಿದೆ. ಇವೆಲ್ಲಕ್ಕಿಂತ ಮೊದಲು, ೧೭ ವರ್ಷ ಹಿಂದೆ ಡಾ. ಹಿರೇಮಠರು ಧಾರವಾಡದ ಭಾಷೆಯನ್ನು ವರ್ಣಿಸಿದ್ದಾರೆ.

Structure of Kannada ದಲ್ಲಿ ಧ್ವನಿಮಾ, ಆಕೃತಿಮಾ ಮತ್ತು ವಾಕ್ಯವಿಶ್ಲೇಷಣೆಗಳು ಎಂಬ ಮೂರು ಮುಖ್ಯ ವಿಭಾಗಗಳಿವೆ. ಮೊದಲನೆಯ ಧ್ವನಿಮಾ ವಿಭಾಗದಲ್ಲಿ ಸ್ವರ ಮತ್ತು ವ್ಯಂಜನ ಧ್ವನಿಮಾಗಳ ವಿವರಣೆ ಬಂದು ಧ್ವನಿಗಳ ಪರಿಮಿತ ಹಾಗೂ ಸಂಧಿಯ ವಿವರಗಳು ಹೇಳಲ್ಪಟ್ಟಿವೆ. ಎರಡನೆಯ ವಿಭಾಗದಲ್ಲಿ ನಾಮಪದ ಮತ್ತು ಕ್ರಿಯಾಪದಗಳ ಆಕೃತಿಮಾ ವಿವರಣೆ ಇದೆ. ನಾಮ ಹಾಗೂ ಕ್ರಿಯೆಯ ವ್ಯುತ್ಪತ್ತಿಗಳೂ ಚರ್ಚಿಸಲ್ಪಟ್ಟಿವೆ. ಮೂರನೆಯ ಭಾಗದಲ್ಲಿ ವಾಕ್ಯರಚನೆಯ ಚರ್ಚೆ ಇದೆ. ವಾಕ್ಯ ಬೋಧೆಯ ಪ್ರಕಾರಗಳು, ಶಬ್ದಾನುಕ್ರಮ, ವಾಕ್ಯಖಂಡಗಳ ರಚನೆ, ವಿಭಕ್ತಿಪಲ್ಲಟಗಳೇ ಅಲ್ಲದೆ ಧಾರವಾಡದವೇ ಆದ ಕೆಲವು ಪ್ರಯೋಗಗಳ ಚರ್ಚೆ ಇದೆ.

ವರ್ಣನಾತ್ಮಕ ಭಾಷಾವಿಜ್ಞಾನಿಯಾಗಿ ಧಾರವಾಡ ಕನ್ನಡದ ಬಗ್ಗೆ ಡಾ. ಹಿರೇಮಠರು ಗುರುತಿಸಿದ ಹೊಸಮಾತುಗಳನ್ನು ಇಲ್ಲಿ ಸಂಗ್ರಹವಾಗಿ ಹೇಳಬಹುದು :

ಹ್ರಸ್ವ [æ] ಹಾಗೂ ದೀರ್ಘ [æ :]ಗಳ ವಿಭೇದ, ಅದೇ ರೀತಿ [ɔ ] ಮತ್ತು [ɔ:]ಗಳ ವಿಭೇದ.

ಅನುನಾಸಿಕವು ನಿರನುನಾಸಿಕದ ಜೊತೆಗೆ ತೋರುವ ವಿಭೇದ.

ಅಂಗಳ = ಮನೆಯ ಮುಂದಿನ ಬಯಲು, ಅಂಗಳ = ಬಾಯಿಯ ಮೇಲ್ಭಾಗ. ಈ ಶಬ್ದಗಳಲ್ಲಿ ತೋರುವ ಆಕಾರ ಉಚ್ಚಾರಭೇದವನ್ನು ಮ. ಪ್ರ. ಪೂಜಾರರು ಗುರುತಿಸಿದ್ದರೂ, ಅವಕ್ಕೆ ಸ್ವತಂತ್ರ ಧ್ವನಿಮಾಸ್ಥಾನ ಕಲ್ಪಿಸಿ ಕೊಟ್ಟುದು / ɔ /, / a /.

ಅಂತ್ಯ ಎ ಕಾರವು ಇಕಾರವಾದಾಗ (ಮನೆ → ಮನಿ) ಉಪಾಂತ್ಯ ವರ್ಣದಲ್ಲಿಯ ಏ ಕಾರವು ಆ್ಯಕಾರವಾಯಿತು. (ಬೇಳೆ→ಬ್ಯಾಳಿ)

ಐತಿಹಾಸಿಕ ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ್ದರೂ ವಿಶ್ಲೇಷಣೆಯ ಸಾರ್ಥಕತೆಯನ್ನು ಸೂಚಿಸಲು ಏ ಕಾರವು ವಿಭಜನೆಗೊಂಡು ಏ ಮತ್ತು ಆ್ಯ ಆದದ್ದು, ಓ ಕಾರವು ವಿಭಜನೆಗೊಂಡು ಓ ಮತ್ತು ಆ್ಯ ಆದದ್ದು ಹೇಗೆಂಬುದನ್ನು ಸಾಕರವಾಗಿ ತೋರಿಸಿದುದು. ಅಲ್ಲದೆ ವಿಭಜನೆ ಪೂರ್ಣವಾಗಿದೆಯೆಂದು ತೋರಿಸಲು ಅವುಗಳ ವಿಭೇದಯುಗ್ಮಗಳನ್ನು ಸೂಚಿಸಿದುದು.

ಧ್ವನಿಮಾ ಅಥವಾ ವರ್ಣಗಳಷ್ಟೇ ಅವುಗಳು ಹೊತ್ತು ತರುವ ಕಾಕುಸ್ವರಗಳೂ ಪ್ರಧಾನ. ನಾಲ್ಕು ಸ್ವರಗಳ ಧ್ವನಿ. ಉಕ್ತಿಮುಕ್ತಾಯ. ಸಂಧಿಸ್ಥಾನಗಳು ಇವುಗಳ ಬಗೆಗೆ ವಿವರಣೆ.

ಆಡು ಭಾಷೆಯಲ್ಲಿ ಕಂಡುಬರುವ ವಿಶೇಷ ಸಂಧಿನಿಯಮಗಳು.
(ಹುಡುಗಿ + ರ್ + ಉ → ಹುಡಿಗ್ಯಾರು).

ನಾಮಗಳ ವಿಭಜನೆಯನ್ನು (ಅ) ಬಹುವಚನವಾಗದವು (ಬ) ಬಹುವಚನವಾಗುವಂಥವು ಎಂದೂ: (ಅ)ದಲ್ಲಿ (೧) ಏಕವಚನ ಬಹುವಚನಗಳಿಗೆ ಒಂದೇ ಪ್ರಕೃತಿರೂಪವುಳ್ಳವು (೨) ಭಿನ್ನಪ್ರಕೃತಿ ರೂಪವುಳ್ಳವು ಎಂದೂ; (ಬ)ದಲ್ಲಿ (೧) ಪ್ರಾಣಿವಾಚೀ (೨) ತದ್ಭಿನ್ನ ಹೀಗೆ ವಿಭಾಗಿಸಿದುದು. ಹೀಗೆ ಅರ್ಧ structural, ಅರ್ಧ semantic ಆಧಾರದ ಮೇಲೆ ವಿಭಾಗಿಸಿದುದು.

ಕ್ರಿಯೆಯ ಕಾಲ ಹಾಗೂ ವಿಧಾನವನ್ನು ಗಮನಿಸಿ ೧೮ ಪ್ರಕಾರದ ಧಾತುಕಾಂಡಗಳನ್ನು ಗುರುತಿಸಿದುದು.

ವಿಶೇಷಣಗಳನ್ನು, ಕ್ರಿಯಾವಿಶೇಷಣಗಳನ್ನು, ಕೃದಂತಗಳನ್ನು, ನಿಪಾತಗಳನ್ನು ಅವ್ಯಯಗಳಲ್ಲಿ ಸಮಾವೇಶಗೊಳಿಸಿ ಹೇಳಿದುದು.

ತದ್ಧಿತಗಳನ್ನೂ ಸಮಾಸಗಳನ್ನೂ ನಾಮವ್ಯುತ್ಪತ್ತಿಯಲ್ಲಿ ಹೇಳಿದುದು.

ವಿಸ್ತರಣಾಪದ್ಧತಿಯಂತೆ ಕನಿಷ್ಠತಮವಾಕ್ಯವು ವಿಸ್ತಾರವಾಗುವ ಬಗೆಯನ್ನು ವಾಕ್ಯರಚನೆಯಲ್ಲಿ ಚರ್ಚಿಸಿದುದು.

ಮೇಲ್ಮೈಗೆ (surface structure) ಒಂದು ವಿಭಕ್ತಿಸಂಬಂಧ ತೋರಿದರೂ ಒಳಮೈಗೆ (Deep structure) ಇನ್ನೊಂದು ವಿಭಕ್ತ್ಯರ್ಥ ಕೊಡುವ ವಿಶಿಷ್ಟೋಕ್ತಿಗಳ ವಿಶ್ಲೇಷಣೆ.

ಯಾವುದೇ ಕ್ರಮದಲ್ಲಿ ಶಬ್ದಗಳು ಬರಬಹುದೆಂದು ಹೇಳಿದರೂ ಸಾಮಾನ್ಯಪ್ರಯೋಗದಲ್ಲಿ ಅವು ಬರುವದೂ ಒಂದು ಕ್ರಮದಲ್ಲಿ ಎಂದು ತಿಳಿಸಿದುದು.

ಎರಡು ಅಥವಾ ಹೆಚ್ಚು ವಾಕ್ಯಗಳಿಂದುಂಟಾಗುವ ಮಿಶ್ರವಾಕ್ಯದ ರಚನೆ.

ಹೀಗೆ ನೋಡಿದಾಗ ಅನೇಕ ಮಾತುಗಳು ಧಾರವಾಡ ಕನ್ನಡದ ಬಗೆಗೆ ಮೊದಲಸೆಯ ಬಾರಿಗೆ ಹೇಳಲ್ಪಟ್ಟಿವೆ ಎಂದೆನಿಸುತ್ತದೆ.

ಡಾ. ಹಿರೇಮಠರು ರಚಿಸಿದ, ಸಂಪಾದಿಸಿದ ಕನ್ನಡ ಪುಸ್ತಕಗಳನ್ನು ನೋಡಿದರೆ ಅವರ ಅರಿವೆಯು ಗರಿಮೆ ತಾನಾಗಿಯೇ ವೇದ್ಯವಾಗುತ್ತದೆ. ಆದರೆ ಅವರ ಭಾಷಾವೈಜ್ಞಾನಿಕ ಮುಖ ಕೆಲವೇ ಜನ ಅವರ ವಿದ್ಯಾರ್ಥಿಗಳಿಗೆ ಪರಿಚಿತವಾಗಿದೆ. ೬೦ರ ದಶಕದ ಉತ್ತರಾರ್ಧದಲ್ಲಿ ಭಾಷಾವಿಜ್ಞಾನದಲ್ಲಿ ಎಂ. ಎ. ವರ್ಗವನ್ನು ವಿಶ್ವವಿದ್ಯಾಲಯದಲ್ಲಿ ಪ್ರಾರಂಭಿಸಿದ ಮೇಲೆ ಆರ್. ಸಿ. ಅವರ ಆ ಮುಖಕ್ಕೆ ಒಂದು ಕ್ಷೇತ್ರ ಒದಗಿ ಬಂತು.

ಡಾ. ಹಿರೇಮಠರ ಭಾಷಾವೈಜ್ಞಾನಿಕ ಕೃತಿಗಳು ಬಹಳ ಇರಲಿಕ್ಕಿಲ್ಲ. ಆದರೆ ಅವರು ನಿರ್ಮಿಸಿದ ಸಜೀವಕೃತಿಗಳು ಕಾರ್ಯಶೀಲವಾಗಿ ಕನ್ನಡ ಭಾಷಾಶಾಸ್ತ್ರವನ್ನು ಮುಂದುವರಿಸಿವೆ.

■ ■



## ಸಂಶೋಧಕ : ಆರ್. ಸಿ. ಹಿರೇಮಠರು

□ □ □ □ □ □ □ □ □ □ □ □ □ □ □ □ □ □

ಎಂ. ಬಿ. ಭೋಯಿ

□ □ □ □ □ □ □ □ □ □ □ □ □ □ □ □ □ □

ಕನ್ನಡ ಸಂಶೋಧಕ ವಿದ್ವಾಂಸರಲ್ಲಿ ಆರ್. ಸಿ. ಅವರ ಹೆಸರು ಎದ್ದು ಕಾಣುವಂತಹದು. ಮೂವತ್ತು ವರ್ಷಗಳಿಂದ ಅವಿರತವಾಗಿ ಅವರು ಸಂಶೋಧನಾಕ್ಷೇತ್ರಗಳಲ್ಲಿ ದುಡಿಯುತ್ತ ಬಂದಿದ್ದಾರೆ. ತಾವು ಸ್ವಂತಕ್ಕೆ ಹಲವಾರು ನಿಟ್ಟಿನ ಸಂಶೋಧನೆ ಮಾಡಿರುವುದಲ್ಲದೆ ಈ ವರೆಗೆ ಸುಮಾರು ೪೦ ರಷ್ಟು ಪಿಎಚ್. ಡಿ ಮಹಾಪ್ರಬಂಧ ಬರೆವಣಿಗೆಗೆ ಮಾರ್ಗದರ್ಶಕರಾಗಿ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಷೇತ್ರಗಳಿಗೆ ಬಹು ದೊಡ್ಡ ಸೇವೆ ಸಲ್ಲಿಸಿದ್ದಾರೆ. ಅವರ ಮಾರ್ಗದರ್ಶನದಲ್ಲಿ ಪ್ರಕಟವಾದ ಪ್ರಬಂಧಗಳು ಮತ್ತು ಲೇಖನಗಳು ಕನ್ನಡ ವಿದ್ವಲ್ಲೋಕದ ಪ್ರಶಂಸೆಗೆ ಪಾತ್ರವಾಗಿವೆ. ಸಂಶೋಧಕನಿಗಿರಬೇಕಾದ ಪೂರ್ವಗ್ರಹಮುಕ್ತವಾದ ವೈಜ್ಞಾನಿಕ ಮನೋಭಾವ, ಸತ್ಯನಿಷ್ಠೆ. ಬಹುಶ್ರುತತ್ವ ಹಾಗೂ ದಣಿವರಿಯದ ಸತತೋದ್ಯೋಗ ಇವೆಲ್ಲ ಮೌಲ್ಯಗಳನ್ನು ಅವರ ಯಾವುದೇ ಕೃತಿಯಲ್ಲಿ ನಾವು ಕಾಣಬಹುದು.

ಪ್ರಸ್ತುತ ಕನ್ನಡ ಭಾಷೆ ಮತ್ತು ಸಾಹಿತ್ಯಕ್ಷೇತ್ರಗಳಿಗೆ ಅವರಿಂದ ಸಂದ ಸಂಶೋಧನಪರ ಕಾಣಿಕೆಗಳೇನೆಂಬುದನ್ನು ಅರಿಯಲು ಅವರು ಬರೆದಿರುವ ಮಹಾಕವಿ ರಾಘವಾಂಕ, Linguist investigation of Some Problems on the relationship of Indo-Aryan and Dravidian Languages (ಪಿಎಚ್. ಡಿ. ಮಹಾಪ್ರಬಂಧ), The Structure of Kannada— ಈ ಮೊದಲಾದ ಗ್ರಂಥಗಳು, ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳಲ್ಲಿ ಬರೆದ ಹಲವಾರು ಲೇಖನಗಳು, ಅಲ್ಲದೆ ಅವರು ಸಂಪಾದಿಸಿ ಪ್ರಕಟಿಸಿದ ಸುಮಾರು ಮೂವತ್ತರಷ್ಟು ಗ್ರಂಥಗಳಿಗೆ ಬರೆದ

ಪೀಠಿಕೆಗಳು–ಈ ಸಾಮಗ್ರಿಯನ್ನು ನೋಡಬೇಕು. ಈ ಎಲ್ಲ ಬರಹಗಳ ಪಟ್ಟಿಯನ್ನಷ್ಟೆ ನೋಡಿದರೂ ಸಾಕು, ಅವರ ಕಾರ್ಯವ್ಯಾಪ್ತಿ ಎಂಥದೆಂಬ ಕಲ್ಪನೆ ಬರುತ್ತದೆ. ಹೀಗೆ ಬಹುಮುಖವಾಗಿ ನಡೆದಿರುವ ಅವರ ಸಂಶೋಧನೆಯನ್ನು ನಮ್ಮ ತಿಳುವಳಿಕೆಯ ಅನುಕೂಲಕ್ಕಾಗಿ :ಭಾಷಾವಿಜ್ಞಾನ, ಸಾಹಿತ್ಯಚರಿತ್ರೆ ಮತ್ತು ವೀರಶೈವವಿವೇಚನೆ ಎಂದು ಮೂರು ವರ್ಗಗಳಲ್ಲಿ ಹಂಚಿಹಾಕಬಹುದು.

ಪ್ರಥಮತಃ ಅವರ ಭಾಷಾಶಾಸ್ತ್ರೀಯ ಬರಹಗಳನ್ನು ನಾವು ನೋಡಬಹುದು. ಡಾ. ಹಿರೇಮಠರು ಕನ್ನಡ ಸಾರಸ್ವತ ಪ್ರಪಂಚಕ್ಕೆ ಅಡಿಯಿಟ್ಟುದು ಭಾಷಾಶಾಸ್ತ್ರಜ್ಞರೆಂದಲ್ಲದಿದ್ದರೂ ಕರ್ನಾಟಕದ ಭಾಷಾವಿಜ್ಞಾನಿಗಳ ಮೊದಲ ತಲೆಮಾರಿಗೆ ಅವರೂ ಸೇರಿದ್ದಾರೆಂಬ ಸಂಗತಿಯನ್ನು ಲಕ್ಷಿಸಬೇಕು ಮತ್ತು ಅವರಿಗೆ ಅಚ್ಚುಮೆಚ್ಚಾಗಿದ್ದ ವಿಷಯಗಳಲ್ಲಿ ಭಾಷಾವಿಜ್ಞಾನವೂ ಮುಖ್ಯವಾದದ್ದೆಂಬುದನ್ನು ನೆನೆಯಬೇಕು. ಶಬ್ದಮಣಿದರ್ಪಣದ ಬಗೆಗೆ ಅವರು ಈ ವರೆಗೆ ಲೇಖನಗಳನ್ನು ಪ್ರಕಟಿಸಿಲ್ಲವಾದರೂ ಅದರ ಮೇಲೆ ಅವರಿಗಿರುವ ಆಸಕ್ತಿ ಮತ್ತು ಅಧಿಕಾರವಾಣಿ ಅವರ ವಿದ್ಯಾರ್ಥಿಲೋಕಕ್ಕೆಲ್ಲ ಪರಿಚಿತವಾಗಿವೆ.

ಭಾಷಾವಿಜ್ಞಾನವನ್ನು ಕುರಿತ ಅವರ ಬರಹಗಳು ಅವರ ಪಿಎಚ್. ಡಿ. ಮಹಾಪ್ರಬಂಧ ‹Linguistic investigation of some problems on the relationship of Indo-Aryan and Dravidian Languages’ದಿಂದಲೇ ಆರಂಭಗೊಳ್ಳುತ್ತವೆ. ದ್ರಾವಿಡ ಮತ್ತು ಆರ್ಯಭಾಷೆಗಳನ್ನು ಭಾಷಾರಚನೆಯ ಎಲ್ಲ ಅಂಶಗಳಲ್ಲೂ ಹೋಲಿಸಿ ನೋಡಿದ್ದು ಈ ಪ್ರಬಂಧದ ಮುಖ್ಯ ವೈಶಿಷ್ಟ್ಯ; ಒಂದು ರೀತಿಯಲ್ಲಿ ಸಾಹಸವೂ ಅಹುದು. ಕಾರಣವೇದರೆ ಪರಂಪರೆಯ ದೀರ್ಘತೆ ಮತ್ತು ದತ್ತಸಾಮಗ್ರಿಯ ವ್ಯಾಪಕತೆಗಳು ಇವೆರಡೂ ವರ್ಗದ ಭಾಷೆಗಳಿಗೆ ಇರುವುದು ಸರ್ವವಿದಿತ. ಅಂಥವರಲ್ಲಿ ಇವೆರಡೂ ವರ್ಗಗಳನ್ನು ಹೋಲಿಸಿನೋಡಿ ನಿರ್ಣಯಕ್ಕೆ ಬರಬೇಕೆಂದರೆ ಅದು ಸಾಹಸದ ಮಾತೇ. ಡಾ. ಹಿರೇಮಠ ಅವರು ಪ್ರಬಂಧದ ಅಪೇಕ್ಷೆಯಂತೆ ಎಲ್ಲ ಅಂಶಗಳಲ್ಲೂ ಈ ಎರಡೂ ವರ್ಗದ ಭಾಷೆಗಳನ್ನು ಪರಸ್ಪರ ಹೋಲಿಸಿ ನೋಡಿದ್ದಾರೆ

ಪ್ರಬಂಧದ ಪ್ರಾರಂಭದಲ್ಲಿ ವ್ಯಾಕರಣಶಾಸ್ತ್ರ ಮತ್ತು ಭಾಷಾವಿಜ್ಞಾನಗಳ ಚಾರಿತ್ರಿಕ ವಿವರಣೆ, ವೇದಭಾಷೆಯಿಂದಾರಂಭಗೊಂಡ ಸಂಸ್ಕೃತ ಮತ್ತು ತೊಲ್ಕಾಪ್ಪಿಯಂ ಕಾಲದಿಂದಾರಂಭಗೊಂಡ ದ್ರಾವಿಡಭಾಷೆಗಳ ಸ್ವರ-ವ್ಯಂಜನಗಳು, ನಾಮ-ಸರ್ವನಾಮ-ಸಂಖ್ಯಾವಾಚಕಗಳು, ಸಂಧಿ-ಸಮಾಸಗಳು, ಲಿಂಗ-ವಚನಗಳು, ವಿಭಕ್ತಿಗಳ ಸಂಖ್ಯೆ-ಪ್ರತ್ಯಯಗಳು, ಕ್ರಿಯಾಪ್ರಕೃತಿ–ಪ್ರತ್ಯಯಗಳು, ಪ್ರಯೋಗ, ವಾಕ್ಯರಚನಾವಿಧಾನ— ಹೀಗೆ ಭಾಷಾರಚನೆಯ ಪ್ರತಿಯೊಂದು ಅಂಶವನ್ನೂ ಕೂಲಂಕಷವಾಗಿ ಚರ್ಚಿಸಿದ್ದಾರೆ. ವೈದಿಕ ಸಂಸ್ಕೃತದಲ್ಲಿಯ ಟಕಾರ ( ಳಕಾರ ? ), ಹ್ರಸ್ವಗಳಾದ

ಪಿ. ಸಿ. ಮತ್ತು ಪ್ರತಿವೇಷ್ಟಿತಗಳು ಮುಖ್ಯವಾಗಿ ದ್ರಾವಿಡಭಾಷೆಗಳ ಪ್ರಭಾವವೆಂಬ ಅಂಶವನ್ನು ಎತ್ತಿತೋರಿಸಿದ್ದಾರೆ. ಜೊತೆಗೆ ಇಂದಿನ ಉತ್ತರಕರ್ನಾಟಕದ ಆಡುಭಾಷೆಯಲ್ಲಿ ತೋರುವ (ಹ್ರಸ್ವ) ಎಕಾರ, ಒಕಾರ, ಅನುನಾಸಿಕೀಕರಣ ಮುಂತಾದ ವಿಷಯಗಳನ್ನು ಎತ್ತಿಕೊಂಡು ಚರ್ಚಿಸಿದ್ದಾರೆ. ದ್ರಾವಿಡ ಹಾಗೂ ಇಂಡೋ-ಆರ್ಯನ್ ಭಾಷೆಗಳಲ್ಲಿ ಶಾಬ್ದಿಕ ಮಟ್ಟದಲ್ಲೂ ವಿಪುಲವಾದ ಕೊಡುಕೊಳ್ಳುವಿಕೆ ನಡೆದಿದೆಯಷ್ಟೇ? ಈ ದಿಶೆಯಲ್ಲಿ. ಡಾ. ಕಾಲ್ಡ್‌ವೆಲ್. ಗುಂಡರ್ಟ್. ಕಿಟೆಲ್ಲ ಈ ಮಹನೀಯರು ಎತ್ತಿತೋರಿಸಿದ ದ್ರಾವಿಡಮೂಲದ ಪದಗಳ ಜೊತೆಗೆ ಡಾ. ಹಿರೇಮಠರೂ ಈ ಕ್ಷೇತ್ರಕ್ಕೆ ತಮ್ಮ ಕಾಣಿಕೆಯನ್ನಿತ್ತಿದ್ದಾರೆ. ಕೂಟ. ಕುಟ್ಟಿಮ ಮುಂತಾದ ಸುಮಾರು ೮೯ ಶಬ್ದಗಳ ವ್ಯುತ್ಪತ್ತಿಯನ್ನು ಚರ್ಚಿಸಿ ಅವು ದ್ರಾವಿಡ ಮೂಲದಿಂದಲೇ ಬಂದವುಗಳೆಂದು ನಿರ್ಣಯಿಸಿದ್ದಾರೆ. ಇದಲ್ಲದೆ ಕಿಟೆಲ್ ಕೋಶದ ಶಬ್ದಸಂಗ್ರಹವನ್ನು ತತ್ಸಮ, ತದ್ಭವ, ದೇಶ್ಯವೆಂದು ವಿಂಗಡಿಸಿ ಹೇಳಿದ್ದಾರೆ. ಅಲ್ಲಲ್ಲಿಯೇ ಬೇರೆ ವಿದ್ವಾಂಸರು ಈ ಕ್ಷೇತ್ರದಲ್ಲಿ ಮಂಡಿಸಿದ ವಿಚಾರಗಳನ್ನು ವಿಮರ್ಶಿಸಿದ್ದಾರೆ. ಉದಾಹರಣಾರ್ಥವಾಗಿ ಕಾಲ್ಡ್‌ವೆಲ್‌ರು ಹೇಳಿದ ಚ-ಜ ಗಳ ಉಚ್ಚಾರ, ಸ್ವಾಮಿನಾಥ ಅಯ್ಯರ್‌ರ ದರ್ಶಕಸರ್ವನಾಮಗಳ ವಿಚಾರ ಮೊದಲಾದುವನ್ನು ನೋಡಬಹುದು. ಕನ್ನಡದಲ್ಲಿಯ 'ಚ-ಜ'ಗಳ ಉಚ್ಚಾರದ ವೈಶಿಷ್ಟ್ಯವನ್ನು ಕಾಲ್ಡ್‌ವೆಲ್‌ರಿಗಿಂತ ಖಚಿತವಾದ ರೀತಿಯಲ್ಲಿ ವರ್ಣಿಸಿದ್ದಾರೆ ಮತ್ತು ದ್ರಾವಿಡಭಾಷೆಗಳ ದರ್ಶಕಸರ್ವನಾಮಗಳ ಬಗೆಗಿನ ಸ್ವಾಮಿನಾಥ ಅಯ್ಯರ್‌ರ ವಿಚಾರವನ್ನು ಅಲ್ಲಗಳೆದಿದ್ದಾರೆ.

ಆಧುನಿಕ ಕನ್ನಡಗಳ ವರ್ಣನಾತ್ಮಕ ಭಾಷಾವಿಜ್ಞಾನಕ್ಷೇತ್ರಕ್ಕೆ 'The Structure of Kannada' ಗ್ರಂಥವು ಒಂದು ಮಹತ್ವದ ಕೊಡುಗೆಯಾಗಿದೆ. ಡಾ. ಹಿರೇಮಠರು ಧಾರವಾಡ ಕನ್ನಡವನ್ನು ಇದರಲ್ಲಿ ವಿಶ್ಲೇಷಿಸಿದ್ದಾರೆ. ಇದರಲ್ಲಿ ಧ್ವನಿಮಾ, ಸಂಧಿಪ್ರಕ್ರಿಯೆ, ಆಕೃತಿಮಾ ಮತ್ತು ವಾಕ್ಯರಚನಾವಿಧಾನ ಇವುಗಳ ಚರ್ಚೆ ಬಂದಿದೆ. ಉತ್ತರ ಕರ್ನಾಟಕದ ಹಲವಾರು ಪ್ರಭೇದಗಳ ವೈಶಿಷ್ಟ್ಯಗಳನ್ನು ಇಲ್ಲಿ ಪ್ರಥಮಬಾರಿಗೆ ಬೆಳಕಿಗೆ ತಂದಿದ್ದಾರೆ. ಅದರಲ್ಲೂ ಕನ್ನಡದಲ್ಲಿಯ ವಿರಾಮ, ಆಘಾತಗಳ ವ್ಯವಸ್ಥೆ, ಎ, ಐ ಮತ್ತು ಒ ಸ್ವರಗಳು, ಅನುನಾಸಿಕೀಕರಣ ಈ ವಿಷಯಗಳನ್ನು ಸಮಗ್ರವಾಗಿ ಈ ಗ್ರಂಥದಲ್ಲಿ ಚರ್ಚಿಸಲಾಗಿದೆ. ಜೊತೆಗೆ ಧಾರವಾಡ ಕನ್ನಡದ ಅಭ್ಯಾಸಕ್ಕೆ ಬೇಕಾಗುವ ವಿಪುಲವಾದ ದತ್ತಸಾಮಗ್ರಿಯೂ ಇದರಲ್ಲಿ ಸಂಗ್ರಹಿಸಲ್ಪಟ್ಟಿದೆ.

The Structure of Kannada ಗ್ರಂಥದಲ್ಲಿ ವ್ಯಕ್ತವಾದ ಧ್ವನಿಮಾ ವಿಷಯಕ ಚರ್ಚೆಯ ಇನ್ನೊಂದು ಸ್ವರೂಪ 'An Adumbration of some problems in Kannada Graphemics' ಎಂಬ ಅವರ (ಪ್ರೊ. A. C. ಹೆನ್ರಿಕ್ ಅವರ ಜತೆಗೂಡಿ ಬರೆದ) ಲೇಖನದಲ್ಲಿ ಬಂದಿದೆಯೆಂದು ಹೇಳಬಹುದು. ಇದರಲ್ಲಿ ವಿಶೇಷವಾಗಿ ಇಂದಿನ ಕನ್ನಡಭಾಷೆಯ ಚಾಕ್ಷುಷವರ್ಣಗಳ ಆಕಾರ, ಮುದ್ರಣ ಮತ್ತು

ವೇಗದ ಬರಹಕ್ಕೆ ಅವುಗಳಿಂದಾಗುವ ಅನಾನುಕೂಲಗಳು, ಶ್ರಾವಣರೂಪಗಳನ್ನು ಅವು ಎಷ್ಟರಮಟ್ಟಿಗೆ ಪ್ರತಿನಿಧಿಸುತ್ತವೆ ಇತ್ಯಾದಿ ಸಮಸ್ಯೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಭಾಷಾವಿಜ್ಞಾನಕ್ಕೆ ಸಂಬಂಧಿಸಿದಂತೆ ಅವರು ಬರೆದ ಇನ್ನೂ ಕೆಲವು ಲೇಖನಗಳು ಅಲ್ಲಲ್ಲಿ ಪ್ರಕಟಗೊಂಡಿವೆ. ಉದಾಹರಣೆಗೆ 'Place Names in Karnataka', 'Compound Verbs in Kannada' ಈ ಮುಂತಾದವುಗಳನ್ನು ನೋಡ ಬಹುದು. ಈ ಎರಡರಲ್ಲಿ ಮೊದಲಿನ ಲೇಖನ ಕರ್ನಾಟಕದ ಶಾಸನಗಳಲ್ಲಿ ದೊರೆ ಯುವ ನೂರಾರು ಸ್ಥಳವಾಚಕಗಳನ್ನು, ಭಾಷಾವೈಜ್ಞಾನಿಕ ಹಾಗೂ ಸಾಂಸ್ಕೃತಿಕ ದೃಷ್ಟಿಕೋನಗಳಿಂದ ನಡೆಸಿದ ವಿಶ್ಲೇಷಣೆಯಾಗಿದೆ. ಹಾಗೂ ಅವರ ವಿಶ್ಲೇಷಣಾ ಸಾಮರ್ಥ್ಯಕ್ಕೆ ಒಂದು ಮಾದರಿಯಾಗಿದೆ. ಎರಡನೆಯದರಲ್ಲಿ ಕನ್ನಡ ಕ್ರಿಯಾಸಮಾಸ ಮತ್ತು ಇನ್ನಿತರ ರೀತಿಯ ಸಂಯುಕ್ತಕ್ರಿಯಾಪ್ರಕೃತಿಗಳ ರಚನೆಯನ್ನು ಕುರಿತು ನಡೆಸಿದ ವಿಸ್ತೃತವಿಶ್ಲೇಷಣೆ ದೊರೆಯುತ್ತದೆ.

ಭಾಷಿಕ ವಿಚಾರಗಳನ್ನು ಪರಾಂಬರಿಸಿದ ತರುವಾಯ ವೀರಶೈವಮತ ಮತ್ತು ಅದರ ತತ್ವಜ್ಞಾನಕ್ಕೆ ಸಂಬಂಧಿಸಿದ ಬರಹಗಳನ್ನು ನೋಡಬಹುದು. ವೀರಶೈವದ ವಿಕಾಸದಲ್ಲಿ ತೋರುವ ಹಲವಾರು ಹಂತಗಳನ್ನು ಮತ್ತು ಅದರ ಪರಿಭಾಷೆಯನ್ನು ತಾವು ಸಂಪಾದಿಸಿದ ಹಲವು ಗ್ರಂಥಗಳ ಪೀಠಿಕೆಗಳಲ್ಲಿ ಅಲ್ಲಲ್ಲಿಯೇ ಚರ್ಚಿಸಿದ್ದಾರೆ. ಆದರೆ ಅದರ ಸಮಗ್ರಸ್ವರೂಪದ ಚರ್ಚೆಯನ್ನು ನಾವು ಅವರ 'ಷಟ್‌ಸ್ಥಲಪ್ರಭೆ'ಯಲ್ಲಿ ಕಾಣಬಹುದು. ಷಟ್‌ಸ್ಥಲಸಿದ್ಧಾಂತದ ವಿವರಗಳು ಅನೇಕ ಜನ ಶರಣರ ವಚನಗಳಲ್ಲಿ ಕವಿ–ಲೇಖಕರ ಕೃತಿಗಳಲ್ಲಿ ಅಲ್ಲಲ್ಲಿಯೆ ಕಂಡುಬರುತ್ತಿದ್ದರೂ ಅವು ಚೆನ್ನಬಸವಣ್ಣ ಮತ್ತು ತೋಂಟದ ಸಿದ್ಧಲಿಂಗಯತಿಗಳಲ್ಲಿ, ಅದರಲ್ಲೂ ವಿಶೇಷವಾಗಿ ಚೆನ್ನಬಸವಣ್ಣ ನವರಲ್ಲಿ ತೋರಿಬಂದಂತೆ ಬೇರೆ ಯಾರಲ್ಲಿಯೂ ತೋರಿಬರುವುದಿಲ್ಲವೆಂಬ ಸಂಗತಿ ಸುವಿದಿತವಾದುದು. ಅದನ್ನೇ ಈ ಗ್ರಂಥದಲ್ಲಿ ಸಕ್ರಮವಾಗಿ ವಿವೇಚಿಸಲಾಗಿದೆ. ಹಾಗೂ ಬಸವ ಮತ್ತು ಚೆನ್ನಬಸವರು ಷಟ್‌ಸ್ಥಲದ 'ಪೂರ್ವಾಚಾರ್ಯರು–ಸ್ಥಾಪನಾ ಚಾರ್ಯರು' ಎಂಬ ಹೇಳಿಕೆಗಳ ಆಶಯವೇನೆಂಬುದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

ಇದರಲ್ಲಿ ಚೆನ್ನಬಸವ ಮತ್ತು ತೋಂಟದ ಸಿದ್ಧಲಿಂಗಯತಿಯ ಚರಿತ್ರೆ, ಹಿನ್ನೆಲೆಯಾಗಿ ಅಂದಂದಿನ ರಾಜಕೀಯ ಸಾಮಾಜಿಕ ಧಾರ್ಮಿಕ ಸ್ಥಿತಿಗತಿಗಳು ಇವೇ ಮುಂತಾದ ಆವಶ್ಯಕ ಸಂಗತಿಗಳನ್ನು ವಿವರಿಸಿದ್ದಾರೆ. ಅಲ್ಲದೆ ಶೈವಮತಗಳ ಪ್ರಾಚೀನ ಇತಿಹಾಸ, ಶೈವಾಗಮಗಳು, ಅವುಗಳಲ್ಲಿ ತೋರುವ ಶೈವಪ್ರಭೇದಗಳು. ಅವುಗಳ ಸಾಮಾನ್ಯ ಸ್ವರೂಪ ಇತ್ಯಾದಿ ಸಂಗತಿಗಳು ತಕ್ಕಷ್ಟು ವಿವರವಾಗಿಯೇ ಬಂದಿವೆ. ಅದರೊಟ್ಟಿಗೆ ಹನ್ನೆರಡನೆಯ ಶತಮಾನ, ಅನಂತರ ಕಾಲ ಮತ್ತು ಹದಿನೈದನೆಯ ಶತಮಾನದ

ತರುವಾಯ ವೀರಶೈವದಲ್ಲಿ ಆಗಿರಬಹುದಾದ ಸುಧಾರಣೆಗಳ ಒಂದು ಸ್ಥೂಲ ವಿವರಣೆಯೂ ಬಂದಿದೆ. ಹಾಗೂ ವೀರಶೈವದ ವೈಶಿಷ್ಟ್ಯಗಳಾದ ಷಟ್‌ಸ್ಥಲ, ಇಷ್ಟಲಿಂಗ, ಗುರುಲಿಂಗಜಂಗಮಾದಿ ಆವರಣಗಳು ಇವೇ ಮುಂತಾದ ತಾತ್ವಿಕ ಪರಿಕಲ್ಪನೆಗಳು ಶೈವಾಗಮಗಳಲ್ಲಿ ಎಲ್ಲೆಲ್ಲಿ, ಯಾವಯಾವ ರೀತಿಯಲ್ಲಿ ಚರ್ಚಿತವಾಗಿವೆ ಎಂಬುದನ್ನು ಸಾಧಾರವಾಗಿ ಎತ್ತಿತೋರಿಸಿದ್ದಾರೆ.

ವೀರಶೈವತತ್ವಜ್ಞಾನದ ನಿಲವನ್ನು ಅರಿಯುವುದಕ್ಕೆ ಹಿನ್ನೆಲೆಯಾಗಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತಾದಿ ಮತಗಳು ಮತ್ತು ಶೂನ್ಯದ ಪ್ರಸಕ್ತಿಯಿರುವ ಬೌದ್ಧ, ಸಾಂಖ್ಯಾದಿ ಮತಗಳು ತಾಳಿರುವ ನಿಲವುಗಳನ್ನು ವಿವರವಾಗಿ, ತರ್ಕಬದ್ಧವಾಗಿ ಚರ್ಚಿಸಿ, ವೀರಶೈವದ ದೃಷ್ಟಿಕೋನವನ್ನು ತೌಲನಿಕವಾದ ರೀತಿಯಲ್ಲಿ ಪ್ರಕಾಶಪಡಿಸಿದ್ದಾರೆ.

ವೀರಶೈವಸಿದ್ಧಾಂತದ ಬಹುಮುಖ್ಯ ಅಂಶವಾಗಿರುವ ಷಟ್‌ಸ್ಥಲ ಮತ್ತು ಅವುಗಳ ಅವಾಂತರ ಸ್ಥಲಗಳ ಲಕ್ಷಣಗಳನ್ನು ಚರ್ಚಿಸುತ್ತ ಪ್ರಧಾನವಾದ ಈ ಆರು ಸ್ಥಲಗಳ ಸೂಕ್ಷ್ಮಸ್ವರೂಪವೇನೆಂಬುದನ್ನು ವಿವರಿಸಿ, ಕೊನೆಯಲ್ಲಿ ಷಟ್‌ಸ್ಥಲಮಾರ್ಗದ ಒಟ್ಟು ಆರು ವೈಶಿಷ್ಟ್ಯಗಳನ್ನು ಕ್ರೋಢೀಕರಿಸಿದ್ದಾರೆ. ಈ ಆರು ವೈಶಿಷ್ಟ್ಯಗಳನ್ನು ಅವಲೋಕಿಸಿದರೆ ಸಾಕು, ವೀರಶೈವದ ಸಾರವೇನೆಂಬ ಕಲ್ಪನೆ ಯಾರಿಗಾದರೂ ಸ್ಫುಟವಾಗುತ್ತದೆ.

ಇದಾದ ತರುವಾಯ ಚೆನ್ನಬಸವಣ್ಣನವರ ವಚನಗಳ ಆಧಾರದಿಂದಲೇ ವೀರಶೈವದ ಆಚಾರ ಮತ್ತು ಯೋಗಗಳನ್ನು ಕುರಿತ ಪರಾಮರ್ಶೆ ಪ್ರತ್ಯೇಕವಾಗಿಯೆ ಬಂದಿದೆ. ಈ 'ಆಚಾರನಿರ್ಣಯ' ಮತ್ತು 'ಶಿವಯೋಗನಿರ್ಣಯ'ಗಳಿಂದಾಗಿ ಒಟ್ಟು ವೀರಶೈವದ ಸಮಗ್ರವರ್ಣನೆ ಈ ಗ್ರಂಥದಿಂದ ಅಭ್ಯಾಸಿಗಳಿಗೆ ಒದಗಿಬಂದಂತಾಗಿದೆ. ವೀರಶೈವಕ್ಕೆ ಚೆನ್ನಬಸವಣ್ಣನವರಿತ್ತ ಕಾಣಿಕೆ ಎಂಥದೆಂಬ ಸ್ಪಷ್ಟಕಲ್ಪನೆಯುಂಟಾಗುವುದಲ್ಲದೆ ಅವರು ವೀರಶೈವಕ್ಕೆ ತತ್ವಪ್ರತಿಷ್ಠಾಪನಾಚಾರ್ಯರೆಂಬ ಹೇಳಿಕೆಗೆ ಸಮರ್ಥನೆ ದೊರೆತಂತಾಗಿದೆ.

ಇದೇ ರೀತಿ ತೋಂಟದ ಸಿದ್ಧಲಿಂಗಶಿವಯೋಗಿಗಳು ಷಟ್‌ಸ್ಥಲಗಳು, ಸಾದಾಖ್ಯಗಳು, ಶಿವಯೋಗ ಮುಂತಾದ ವಿಷಯಗಳ ಬಗೆಗೆ ತಮ್ಮ ವಚನಗಳಲ್ಲಿ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ವಿವರಿಸಿದ್ದಾರೆ. ಈ ಚರ್ಚೆಯಿಂದಾಗಿ ಬಸವಾದಿ ಶರಣರು ವ್ಯಕ್ತಪಡಿಸಿದ ವಿಚಾರಗಳಿಗೆ ಸಿದ್ಧಲಿಂಗಶಿವಯೋಗಿಗಳಿಂದ ದೊರೆಯುವ ಸಮರ್ಥನೆ ಮತ್ತು ಅಭಿಪ್ರಾಯಭೇದಗಳು ಯಾವವು ? ಎಂಬ ಸಂಗತಿಗಳು ನಮಗೆ ತಿಳಿದು ಬರುತ್ತವೆ. ಹೀಗೆ ಈ ಗ್ರಂಥದಿಂದಾಗಿ ವೀರಶೈವಸಿದ್ಧಾಂತವನ್ನು ಅಧಿಕಾರವಾಣಿಯಿಂದ ವಿವರಿಸಬಲ್ಲ ತೀರ ಕೆಲವೇ ಜನ ವಿದ್ವಾಂಸರ ಅಗ್ರಪಂಕ್ತಿಗೆ ಡಾ. ಹಿರೇಮಠರ ಹೆಸರು ಸೇರುವಂತಾಗಿದೆ.

ಇನ್ನು ವೀರಶೈವಸಾಹಿತ್ಯಚರಿತ್ರೆಗೆ, ಆಮೂಲಕ ಕನ್ನಡ ಸಾಹಿತ್ಯಚರಿತ್ರೆಗೆ ಡಾ. ಹಿರೇಮಠರಿಂದ ಸಂದ ಕಾಣಿಕೆ ಎಂಥದೆಂಬುದನ್ನು ನೋಡಬಹುದು. ವೀರಶೈವ ಶರಣರು, ಕವಿಗಳು ಮತ್ತು ಅವರ ಕೃತಿಗಳ ಚಾರಿತ್ರಿಕ ವಿಷಯಗಳನ್ನು ಡಾ. ಹಿರೇಮಠರು ತಾವು ಸಂಪಾದಿಸಿದ ಹಲವಾರು ಗ್ರಂಥಗಳ ಪೀಠಿಕೆಗಳಲ್ಲಿ ಚರ್ಚಿಸಿದ್ದಾರೆ. ಈ ತರಹದ ಪೀಠಿಕೆಗಳಲ್ಲಿಯಷ್ಟೇ ಅಲ್ಲದೆ 'ಮಹಾಕವಿ ರಾಘವಾಂಕ' ಮತ್ತು 'ಷಟ್‌ಸ್ಥಲಪ್ರಭೆ' ಈ ಗ್ರಂಥಗಳಲ್ಲೂ ಬಹುಮುಖ್ಯವಾದ ಚಾರಿತ್ರಿಕ ವಿಷಯಗಳ ಚರ್ಚೆ ಅವರಿಂದ ನಡೆದಿದೆ. ಅವುಗಳಲ್ಲಿ 'ಮಹಾಕವಿ ರಾಘವಾಂಕ' ಕೃತಿ ಬಹು ಗಮನಾರ್ಹವಾದುದು. ಪ್ರಸ್ತುತ ಕವಿಯನ್ನು ಕುರಿತ ಅವರ ಸಮಗ್ರಚಿಂತನೆಯ ಫಲ ಈ ಗ್ರಂಥವೆಂದೂ ಹೇಳಬಹುದು. ಕವಿಯ ಜೀವನಕಾಲ, ಆತನ ಕೃತಿಗಳ ಸಂಖ್ಯೆ. ಅವುಗಳ ಕಾಲಾನುಕ್ರಮ, ದೊರೆತ ಹಾಗೂ ದೊರೆಯದೇ ಇರುವ ಗ್ರಂಥಗಳ ಸ್ವರೂಪ ಅವುಗಳ ಮೌಲ್ಯಮಾಪನ, ಕನ್ನಡ ಸಾಹಿತ್ಯದಲ್ಲಿ ರಾಘವಾಂಕನಿಗಿರುವ ಸ್ಥಾನ, ಆತನ ಪ್ರಭಾವ, ಈ ಮುಂತಾದ ದೃಷ್ಟಿಕೋನಗಳಿಂದ ಒಡಗೂಡಿದ ಒಂದು ಸಂಪೂರ್ಣತೆ ಈ ಕೃತಿಯಲ್ಲಿ ಮೂಡಿ ಬಂದಿದೆ. ಹಾಗೂ ಯಾವ ಕಾಲಕ್ಕೂ ರಾಘವಾಂಕನ ಅಧ್ಯಯನಕ್ಕೆ ಆಧಾರಭೂತವಾಗಿ ನಿಲ್ಲುವ ಮೌಲಿಕ ಕೃತಿ ಇದಾಗಿದೆ.

ಬಸವೇಶ್ವರರ ಜೀವಿತಕಾಲ ಹಾಗೂ ಅವರ ಜೀವನದಲ್ಲಿ ಜರುಗಿದ ಮುಖ್ಯ ಸಂಗತಿಗಳ ನಿರ್ಧಾರಕ್ಕೆ ಬಸವಚರಿತಾವತಾರ, Basaveshwara biography, ಷಟ್‌ಸ್ಥಲ ಪ್ರಭೆ ಈ ಮೊದಲಾದ ಲೇಖನ ಮತ್ತು ಕೃತಿಗಳಲ್ಲಿ ತಕ್ಕಷ್ಟು ದೀರ್ಘವಾಗಿಯೇ ಚರ್ಚಿಸಿದ್ದಾರೆ. ಸಿಂಗಿರಾಜನು ಬಸವಣ್ಣನವರ ಚರಿತ್ರೆಯನ್ನು ಬರೆಯುವಲ್ಲಿ ಇನ್ನುಳಿದ ಚರಿತ್ರೆಕಾರರ ದಾರಿಯನ್ನು ತುಳಿಯದೆ ಪಾರಂಪರಿಕ ಐತಿಹ್ಯಗಳ ಜೊತೆಗೆ ಶರಣರ ವಚನಗಳನ್ನೂ ಮೂಲಸಾಮಗ್ರಿಯನ್ನಾಗಿ ಬಳಸಿಕೊಂಡಿದ್ದಾನೆ; ಆತನು ಹೇಳುವ ಬಸವಚರಿತ್ರೆ ಪೂರ್ಣ ಐತಿಹಾಸಿಕವಲ್ಲದಿದ್ದರೂ ಆತನಲ್ಲಿ ಬಂದಿರುವ ಚೆನ್ನ-ಬಸವಣ್ಣನವರ ತಂದೆಯ ಉಲ್ಲೇಖ, ನೀಲಲೋಚನೆಯ ತಂದೆಯ ಉಲ್ಲೇಖ, ಪರುಷಪಟ್ಟಣದ ಉಲ್ಲೇಖ, ಆರಂಭಕಾಲದಲ್ಲಿ ಬಸವನಿಗೆ ಬಂದ ವೃಥಾಪವಾದಗಳು, ಶಿವಲಿಖಿತ ಪವಾಡ, ಈ ಸಂಗತಿಗಳೆಲ್ಲ ಸತ್ಯಕ್ಕೆ ಸಮೀಪತಮ ಘಟನೆಗಳಾಗಿರಬೇಕೆಂಬುದನ್ನು ಎತ್ತಿ ತೋರಿಸಿದ್ದಾರೆ. ಜೀವಿತ ಕಾಲಾವಧಿಯ ಬಗೆಗೆ ತೋರಿರುವ ವಿಭಿನ್ನ ಅಭಿಪ್ರಾಯಗಳನ್ನು ತೂಗಿನೋಡಿ ಬಸವಣ್ಣನವರ ಕಾರಣಿಕ ಜೀವನ ಬಿಜ್ಜಳನ ಮರಣಾನಂತರ ಅತ್ಯಲ್ಪ ಕಾಲದಲ್ಲಿಯೆ ಕೊನೆಗೊಂಡಿರಬೇಕೆಂಬ ನಿರ್ಧಾರಕ್ಕೆ ಬಂದಿದ್ದಾರೆ.

'ಷಟ್‌ಸ್ಥಲಪ್ರಭೆ'ಯಲ್ಲಿ ಬಸವೇಶ್ವರರ ಜೀವನ-ವಿಷಯಗಳ ಚರ್ಚೆ ಚನ್ನಬಸವಣ್ಣನವರ ಜೀವನ-ಕಾಲಗಳ ಚರ್ಚೆಯಲ್ಲಿ ಆನುಷಂಗಿಕವಾಗಿ ಬಂದಿದೆ. ಏಂವರೆ ಚನ್ನಬಸವಣ್ಣನವರ ಜೀವನಚರಿತ್ರೆಯ ನಿರ್ಧಾರಕ್ಕೋಸುಗ ಬಸವಣ್ಣನವರ ಚರಿತ್ರೆಯು ತಳಹದಿ

ಯಾಗಿದೆ. ಒಂದು ರೀತಿಯಲ್ಲಿ ಅದು ಅವಶ್ಯಕವೂ ಅಹುದು. ಚೆನ್ನಬಸವಣ್ಣನವರ ಜೀವನ ವಿಷಯಕ ಸಮಸ್ಯೆಗಳಲ್ಲಿ ಅವರ ತಂದೆ ಯಾರೆಂಬುದು ಬಹು ಮುಖ್ಯವಾದದು. ಇದು ನಿಜವಾಗಿ ಸಮಸ್ಯೆಯಾಗಿ ಪರಿಣಮಿಸಿದ್ದು ಸಂಪ್ರದಾಯದ ಮೌಢ್ಯದಿಂದಾಗಿ. ಮಹಾಪುರುಷರ ಜನನ ಅಲೌಕಿಕವಾಗಿರಬೇಕೆಂಬ ಪೂರ್ವಗ್ರಹವೇ ಇದಕ್ಕೆ ಕಾರಣವೆಂಬುದು ಸ್ಪಷ್ಟ. ಇಂಥ ನಂಬಿಕೆ-ಭಾವನೆಗಳನ್ನು ಶರಣರು ಸ್ಪಷ್ಟವಾದ ಶಬ್ದಗಳಲ್ಲಿ ಖಂಡಿಸಿದ್ದರೂ ಪರಂಪರೆಯ ಕುರುಡುತನ ಮಾತ್ರ ದೂರಾಗಲಿಲ್ಲ. ಇಂಥ ಪರಿಸ್ಥಿತಿಯಲ್ಲೂ ಸಿಂಗಿರಾಜ ಪುರಾಣವು ಸೂಚಿಸುವ ಶಿವದೇವನೆಂಬವನು ಚೆನ್ನಬಸವಣ್ಣನವರ ತಂದೆಯೆಂಬ ಸಂಗತಿ ಅಸತ್ಯವಾಗಿರಲಾರದು ಎಂದು ಡಾ ಹಿರೇಮಠರು ತೀರ್ಮಾನಿಸಿದ್ದಾರೆ. ಇದು ತರ್ಕಸಮ್ಮತವಾಗಿದೆಯೆಂದು ಹೇಳಬಹುದು.

ಚೆನ್ನಬಸವಣ್ಣನವರ ಜೀವನದ ಕೊನೆ ಬಹು ಹೋರಾಟಮಯವಾಗಿದ್ದಂತೆ ತೋರುತ್ತದೆ. ಕಲ್ಯಾಣಕ್ರಾಂತಿಯ ತರುವಾಯ ಶರಣರು ತಮ್ಮ ತಮ್ಮ ಗುರಿಗಳತ್ತ ಚದರುತ್ತಿರುವಲ್ಲಿ ಚೆನ್ನಬಸವಣ್ಣನವರ ಮುಖಂಡತ್ವದಲ್ಲಿ ಒಂದು ಗುಂಪು ಉಳಿವೆಯ ಕಡೆಗೆ ಬಂದಿತೆಂಬುದು ಪರಂಪರಾಗತವಾದ ಗ್ರಹಿಕೆ. ಅವರು ಆ ಸಂದರ್ಭದಲ್ಲಿ ಚರಿಸಿದ ಮಾರ್ಗವನ್ನು ಕುರಿತು ಹಲವೆಡೆ ಉಲ್ಲೇಖಗಳು ಬಂದಿವೆ. ಡಾ. ಹಿರೇಮಠರು ಹಲವು ಆಧಾರಗಳ ಸಹಾಯದಿಂದ ಈ ಮಾರ್ಗಕ್ರಮಣದ ದಿಶೆಯನ್ನು ನಿರ್ಧರಿಸಿದ್ದಾರೆ.

ಚೆನ್ನಬಸವಣ್ಣನವರ ಜೀವನ ಚರ್ಚೆಯಲ್ಲಿ ಸಿದ್ಧರಾಮನ ದೀಕ್ಷಾ ವಿಷಯವೂ ಸಮಸ್ಯೆಯಾಗಿ ಬೆಳೆದುಕೊಂಡಿದೆ. ಇದು ಕೆಲವು ಕಾಲ ವಿದ್ವಾಂಸರಲ್ಲಿ ಬಹು ಆಸಕ್ತಿಯಿಂದ ಚರ್ಚಿತವಾದ ಸಮಸ್ಯೆ. ಇದನ್ನು ದೀರ್ಘವಾಗಿ ಚರ್ಚಿಸಿದ ಡಿ. ಎಲ್‌, ಎನ್‌. ಅವರು ತಮ್ಮ ನಿಲುವಿನಿಂದ ಹಿಂದೆ ಸರಿದುದು ಮೇಲು ನೋಟಕ್ಕೆ ಸಮಸ್ಯೆಯನ್ನು ಬಗೆಹರಿಸಿದಂತೆ ಕಂಡುಬಂದರೂ ಒಂದು ರೀತಿಯ ಸಂಶಯ ಉಳಿದುಕೊಳ್ಳುವಂತೆ ಮಾಡಿತ್ತು. ಇದನ್ನು ಮನಗಂಡ ಡಾ. ಹಿರೇಮಠ ಅವರು ಈ ಸಮಸ್ಯೆಯ ನಿಜವಾದ ಪರಿಹಾರಕ್ಕೆ 'ಮಹಾಕವಿ ರಾಘವಾಂಕ' ಮತ್ತು 'ಷಟ್‌ಸ್ಥಲ ಪ್ರಭೆ' ಗ್ರಂಥಗಳಲ್ಲಿ ವಿವರ ಚರ್ಚಿಸಿದ್ದಾರೆ. ಸಮಸ್ಯೆಯನ್ನು ಹಲವಾರು ಮುಖಗಳಿಂದ ನಿರುಕಿಸಿ [illegible]. ವಿಶೇಷವಾಗಿ ಸಿದ್ಧರಾಮಚರಿತೆಯ ಆಂತರಿಕ ಪ್ರಮಾಣಗಳನ್ನು ಸ್ಪಷ್ಟವಾದ ರೀತಿಯಲ್ಲಿ ವಿಂಗಡಿಸಿ ತೋರಿಸಿದ್ದಾರೆ. ಇದರಿಂದಾಗಿ ಸಿದ್ಧರಾಮನ ಶಿಷ್ಯತ್ವವನ್ನು ಶಂಕಿಸಲು ಕಾರಣವೇ ಇಲ್ಲದಂತಾಗಿದೆ. ಇದರ ಜೊತೆಯಲ್ಲಿಯೇ ಸಿದ್ಧರಾಮಚರಿತೆಯು ಹಲವು ರೀತಿಯ ಪ್ರಕ್ಷೇಪಗಳಿಗೆ ಗುರಿಯಾಗಿರಬೇಕೆಂದು ಸಾಧಾರವಾಗಿ ನಿರೂಪಿಸಿದ್ದಾರೆ.

ಕನ್ನಡ ಸಾಹಿತ್ಯಚರಿತ್ರೆಯಲ್ಲಿ ಹರಿಹರ-ರಾಘವಾಂಕ-ಕೆರೆಯ ಪದ್ಮರಸರ ಕಾಲನಿರ್ಣಯ ವಿಷಯಕವಾದ ಚರ್ಚೆ ಬಹುಜನ ವಿದ್ವಾಂಸರಿಂದ ನಡೆದಿದೆ. ಈ ಮೂವರ ಕಾಲ

ನಿರ್ಧಾರದಲ್ಲಿ ಹಲವಾರು ಪ್ರಮುಖ ಸಂಗತಿಗಳ ನಿರ್ಧಾರ ಸಾಧ್ಯವಾಗುತ್ತದೆ. ಆದುದರಿಂದ ಡಾ. ಹಿರೇಮಠರೂ ಈ ಸಮಸ್ಯೆಯನ್ನು ಹಲವಾರು ಸಂದರ್ಭಗಳಲ್ಲಿ ಚರ್ಚಿಸಿದ್ದಾರೆ. ಹರಿಹರನ ಮೇಲ್ಗಡುವನ್ನು ನಿಗದಿಪಡಿಸುವ ಸೂಕ್ತಿಸುಧಾರ್ಣವ ಮತ್ತು ಶಬ್ದಮಣಿದರ್ಪಣಕಾರರ ಕಾಲ ಹಾಗೂ ಈ ಎರಡೂ ಕೃತಿಗಳಲ್ಲಿಯ ಗಿರಿಜಾಕಲ್ಯಾಣದ ಉದ್ಧೃತಿಗಳ ಸಾಧುತ್ವವನ್ನು ಸರ್ವಜನಗ್ರಾಹ್ಯವಾದ ರೀತಿಯಲ್ಲಿ ಸ್ಥಾಪಿಸಿದ್ದಾರೆ. ಹಾಗೂ ಇವುಗಳ ಸಹಾಯದಿಂದ ಹರಿಹರ–ರಾಘವಾಂಕರು ಹದಿಮೂರನೆಯ ಶತಮಾನದ ಬಹುಭಾಗದಲ್ಲಿ ಜೀವಿಸಿದ್ದು ಕ್ರಿ. ಶ. ೧೨೫೦ ರ ಕಾಲಕ್ಕಾಗಲೇ ತಮ್ಮ ಮಹತ್ವದ ಕೃತಿಗಳನ್ನು ಪೂರ್ಣಗೊಳಿಸಿರಬೇಕೆಂಬ ನಿರ್ಣಯಕ್ಕೆ ಬಂದಿದ್ದಾರೆ.

ಇದೇ ರೀತಿ ಹರಿಹರನ ರಗಳೆಗಳ ಸಂಖ್ಯಾನಿರ್ಣಯ ಒಂದು ಕ್ಲಿಷ್ಟಸಮಸ್ಯೆಯೇ ಸೈ. ಆತನ ಕಾವ್ಯಜೀವನದ ಮುಖ್ಯ ಕೊಡುಗೆ ಹಾಗೂ ಅವನು ತುಳಿದ ನೂತನಮಾರ್ಗದ ಸಂಕೇತ ಈ ರಗಳೆಗಳು. ಡಾ. ಹಿರೇಮಲ್ಲೂರ ಈಶ್ವರನ್, ಶ್ರೀ ಎಚ್. ದೇವೀರಪ್ಪ ಮುಂತಾದ ವಿದ್ವಾಂಸರು ಈ ಕುರಿತು ದೀರ್ಘವಾಗಿ ಚರ್ಚಿಸಿದ್ದಾರೆ. ಮಾನ್ಯ ದೇವೀರಪ್ಪನವರು ಇಟ್ಟುಕೊಂಡ ಮಾರ್ಗದರ್ಶಕ ಸೂತ್ರಗಳನ್ನು ವಿಶ್ಲೇಷಿಸಿ ಅವೆಲ್ಲ ಹರಿಹರನ ರಗಳೆಗಳ ಸಂಖ್ಯಾನಿರ್ಣಯದಲ್ಲಿ ಒಂದು ಮಟ್ಟದ ವರೆಗೆ ಮಾತ್ರ ಸ್ವೀಕಾರಾರ್ಹವಾದವುಗಳು ಎಂದು ಸ್ಪಷ್ಟಪಡಿಸಿದ್ದಾರೆ. ಅಂತೆಯೆ ದೇವೀರಪ್ಪನವರಿಂದ ಬಿಡಲ್ಪಟ್ಟ ಕೆಲವು ರಗಳೆಗಳು ಹರಿಹರಕೃತವೆಂದು ನಿರ್ಧರಿಸಿ ಸ್ವೀಕರಿಸಿದ್ದಾರೆ.

ಹದಿನೈದನೆಯ ಶತಮಾನದ ಅನಂತರ, ಬಹುಶಃ ಹದಿನಾರನೆಯ ಶತಮಾನದಲ್ಲಿ ಬಾಳಿದ ನೂರೊಂದು ವಿರಕ್ತರು ವೀರಶೈವಪರಂಪರೆಯನ್ನು ಉಳಿಸಿ ಪುನರುಜ್ಜೀವನಗೊಳಿಸಿದಂಥ ಕಾರ್ಯಸಾಧನೆ ಗೈದವರು. ಆದುದರಿಂದ ಇವರನ್ನು ಕುರಿತ ನಿಖರವಾದ ತಿಳುವಳಿಕೆ ನಮಗಿರಬೇಕಾದುದು ಅವಶ್ಯಕ. ಈ ದೃಷ್ಟಿಯಿಂದ ಈ ನೂರೊಂದು ವ್ಯಕ್ತಿಗಳ ಜೀವನ, ಕಾಲ, ಕಾರ್ಯ, ಕೃತಿರಚನೆ ಮುಂತಾದ ಸಂಗತಿಗಳು ಸಂಶೋಧನೆಗೆ ಅರ್ಹವಾಗಿವೆ. ಡಾ. ಹಿರೇಮಠರು ಇವರ ಹೆಸರುಗಳನ್ನು ಸಂಗ್ರಹಿಸಿ, ನಿಷ್ಕರ್ಷಿಸಿದ್ದಲ್ಲದೆ, ಕಲ್ಲುಮಠದ ಪ್ರಭುದೇವ, ಚಾಮರಸ ಈ ಕೆಲವರು ನೂರೊಂದು ವಿರಕ್ತರಲ್ಲಿ ಸಮಾವಿಷ್ಟರಾಗುವುದಿಲ್ಲವೆಂಬ ಅಂಶವನ್ನು ಸಾಧಾರವಾಗಿ ಮಂಡಿಸಿದ್ದಾರೆ. ಈ ನೂರೊಂದು ವಿರಕ್ತರಂತೆಯೆ ಗಣಸಹಸ್ರರಲ್ಲಿ ಸಮಾವೇಶಗೊಳ್ಳುವ ಇತರ ಸಂಖ್ಯೆ ಮತ್ತು ಹೆಸರುಗಳನ್ನೂ ನಿರ್ಧರಿಸುವ ಪ್ರಯತ್ನ ಮಾಡಿದ್ದಾರೆ. ಹೀಗೆಯೇ ಅರವತ್ತು ಮೂವರು ಪುರಾತನರ ಚರಿತ್ರೆ. ಕನ್ನಡ ಸಾಹಿತ್ಯದಲ್ಲಿ ಅವರನ್ನು ಕುರಿತಿರುವ ಕಾವ್ಯಗಳು ಮತ್ತು ಉಲ್ಲೇಖಗಳು, ಅವುಗಳಲ್ಲಿ ತೋರುವ ಸಾಮ್ಯ-ವೈಷಮ್ಯಗಳು ಈ ಮುಂತಾದ ಸಂಗತಿಗಳ ಸಮ್ಯಗ್ದರ್ಶನವನ್ನು ತ್ರಿಷಷ್ಠಿ ಪುರಾತನ ಚಾರಿತ್ರ (ಸುರಂಗ ಕವಿಕೃತ)ದ ಪೀಠಿಕೆಯಲ್ಲಿ ಮಾಡಿಕೊಟ್ಟಿದ್ದಾರೆ.

ಹನ್ನೆರಡನೆಯ ಶತಮಾನದ ವೀರಶೈವ ಆಂದೋಲನವು ಮೊದಮೊದಲಿಗೆ ಕಲ್ಯಾಣ ಮತ್ತು ಸೊನ್ನಲಿಗೆಗಳನ್ನು ಕೇಂದ್ರವಾಗಿಟ್ಟುಕೊಂಡು ಇಬ್ಬಗೆಯಾಗಿ ಬೆಳೆಯುತ್ತಿದ್ದಂತೆ ತೋರುತ್ತದೆ. ಇದರ ಧ್ವನಿ ವೀರಶೈವಸಾಹಿತ್ಯದಲ್ಲಿ ಕ್ಷೀಣವಾಗಿಯಾದರೂ ಅಲ್ಲಲ್ಲಿಯೆ ಕೇಳಿಬರುತ್ತದೆ. ಅಂತೆಯೇ ಇವೆರಡನ್ನು ಒಂದುಗೂಡಿಸುವ ಪ್ರಯತ್ನ ಅಲ್ಲಮಪ್ರಭುವಿನಿಂದ ನಡೆದಂತೆ ಕಾಣುತ್ತದೆ. ಇಂದು ದೊರೆಯುವ ವಚನಕಾರರ ಅಂಕಿತಗಳನ್ನು ಸೂಕ್ಷ್ಮವಾಗಿ ನಿರುಕಿಸಿದರೆ 'ಕೂಡಲಸಂಗಮ ದೇವ' ಮತ್ತು 'ಮಲ್ಲಿಕಾರ್ಜುನ' ಈ ಎರಡು ಅಂಕಿತಗಳು ಆ ರಾಶಿಯಲ್ಲಿ ಬಹು ಪ್ರಾಮುಖ್ಯ ಪಡೆದಿದ್ದವೆಂಬ ವಿಷಯ ಗಮನಾರ್ಹವಾಗಿದೆ. ಆದುದರಿಂದಲೇ ಅಲ್ಪಸ್ವಲ್ಪ ವ್ಯತ್ಯಾಸಗೊಂಡ ಅನೇಕ ಅಂಕಿತಗಳು ಸೃಷ್ಟಿಗೊಂಡಿವೆ. ಹೀಗೆ ಸೃಷ್ಟಿಗೊಂಡ ಅಂಕಿತಗಳ ಸ್ವರೂಪ ಅನೇಕವೇಳೆ ವಚನಸಾಹಿತ್ಯಸಂಪಾದಕರಿಗೆ ಸವಾಲಾಗಿ ನಿಂತಿವೆ. ಎಷ್ಟೋವೇಳೆ ಯಾವ ವಚನ ಯಾವ ವಚನಕಾರನದೆಂಬುದು ಸಮಸ್ಯೆಯಾಗುತ್ತದೆ. ಪ್ರಸ್ತುತ ಸಮಸ್ಯೆಯ ವಿವೇಚನೆ ಡಾ. ಹಿರೇಮಠರಿಂದ 'ಸಕಲಪುರಾತನರ ವಚನಗಳು' 'ಅಲ್ಲಮ ಪ್ರಭುವಿನ ವಚನಗಳು' 'ಸಿದ್ಧರಾಮೇಶ್ವರ ವಚನಗಳು'—ಈ ಗ್ರಂಥಗಳ ಪೀಠಿಕೆಗಳಲ್ಲಿ ಬಂದಿದೆ. ಈ ಸಮಸ್ಯಾತ್ಮಕ ವಚನಗಳಲ್ಲಿ ಯಾವ ವಚನ ಯಾವ ವಚನಕಾರನದೆಂಬ ವಿಷಯವನ್ನು ಅಲ್ಲಿ ನಿರ್ಣಯಿಸಿದ್ದಾರೆ. ಅಲ್ಲದೆ ಈ ವರೆಗೆ ತಿಳಿದುಬಂದ ನೂರ ಅಯ್ವತ್ತೆರಡು ವಚನಕಾರರನ್ನು ಪಟ್ಟಿಮಾಡಿ ಕೊಟ್ಟಿದ್ದಾರೆ.

'ಷಟ್‌ಸ್ಥಲಜ್ಞಾನಸಾರಾಮೃತ'ದ ಪೀಠಿಕೆಯಲ್ಲಿ ತೋಂಟದ ಸಿದ್ಧಲಿಂಗ ಶಿವಯೋಗಿಗಳ ಚರಿತ್ರೆ ಹಾಗೂ ಅವರ ಧಾರ್ಮಿಕ ಮತ್ತು ಸಾಹಿತ್ಯಿಕ ಸಾಧನೆಗಳನ್ನು ಸವಿವರವಾಗಿ ಚರ್ಚಿಸಿದ್ದಾರೆ. ವೀರಶೈವ ಪರಿಭಾಷೆಯ ಹಲವಾರು ತೊಡಕುಗಳಿಗೆ ಸಿದ್ಧಲಿಂಗ ಯತಿಗಳಲ್ಲಿ ದೊರಕುವ ವಿವರಣೆಗಳನ್ನು ಎತ್ತಿತೋರಿಸಿದ್ದಾರೆ. ಒಟ್ಟಿನಲ್ಲಿ ಅವರಿಂದ ಹಾಗೂ ಅವರ ಶಿಷ್ಯಪರಂಪರೆಯಿಂದ ವೀರಶೈವದ ಸರ್ವತೋಮುಖ ಪುನರುಜ್ಜೀವನ ಕಾರ್ಯ ಹೇಗೆ ನಡೆಯಿತು ? ಅವರ ಶಿಷ್ಯ–ಪ್ರಶಿಷ್ಯ ಪರಂಪರೆ ತಾನು ಬೆಳೆದು ಬರುವುದಲ್ಲದೆ ವೀರಶೈವ ಸಾಹಿತ್ಯ ಹಾಗೂ ಪರಂಪರೆಗಳನ್ನು ಆಧುನಿಕಕಾಲದ ವರೆಗೂ ಯಾವ ರೀತಿ ಮುನ್ನಡೆಸಿಕೊಂಡು ಬಂದಿದೆ ? ಇತ್ಯಾದಿ ವಿಷಯಗಳನ್ನು ಈ ಗ್ರಂಥದಲ್ಲಿ ಕಾಣಬಹುದಾಗಿದೆ. ಕೊನೆಯಲ್ಲಿ ಸಿದ್ಧಲಿಂಗಯತಿಯನ್ನು ಕೇಂದ್ರವಾಗಿಟ್ಟುಕೊಂಡು ಸ್ತುತಿಸಿದ, ಕೃತಿರಚಿಸಿದ ಲೇಖಕರ ಪಟ್ಟಿಯನ್ನೂ ಶಾಸನಗಳನ್ನೂ ಎತ್ತಿ ತೋರಿಸಿದ್ದಾರೆ.

ಇದೇ ರೀತಿಯಾಗಿ ನಾಲ್ಕು ಶೂನ್ಯಸಂಪಾದನೆಗಳ ಕಾಲಾನುಕ್ರಮ ಅವುಗಳ, ಪರಸ್ಪರ ಸಾದೃಶ್ಯ–ವೈದೃಶ್ಯ ವಿವೇಚನೆ, ಪದ್ಮಣಾಂಕ, ಕಲ್ಲುಮಠದ ಪ್ರಭುದೇವ, ಸುರಂಗಕವಿ, ಮುಪ್ಪಿನ ಷಡಕ್ಷರಿ ... ಬಾಲಲೀಲಾ ಮಹಾಂತ ಶಿವಯೋಗಿಗಳು, ಇತ್ತೀಚಿನ ಜನವಕವಿ ಮೊದಲಾದವರ ಕಾಲಕೃತಿಗಳ ಚರ್ಚೆ, ಭೈರವೇಶ್ವರನ ಐತಿಹಾಸಿಕತೆ

ಮುಂತಾದ ಸಂಗತಿಗಳನ್ನು ಸಾಂದರ್ಭಿಕವಾಗಿ ಪರಾಮರ್ಶಿಸಿ, ವಿದ್ವಾಂಸರ ಅಭಿಪ್ರಾಯ ಗಳನ್ನು ಚರ್ಚಿಸಿ, ಹಲವುಸಲ ಹೊಸದಾಗಿ ನಿಷ್ಕರ್ಷಿಸಿ ತಮ್ಮ ನಿರ್ಣಯಗಳನ್ನಿತ್ತಿದ್ದಾರೆ.

ಹೀಗೆ ಡಾ. ಹಿರೇಮಠರು ವೀರಶೈವ ಮತ ಹಾಗೂ ಸಾಹಿತ್ಯಗಳ ಎಲ್ಲ ಮುಖಗಳನ್ನು ಸಮಗ್ರವಾಗಿ ಅವಲೋಕಿಸಿದ್ದಾರೆ ಅಥವಾ ವೀರಶೈವ ಧಾರ್ಮಿಕ ಮತ್ತು ಸಾಹಿತ್ಯಿಕ ಚರಿತ್ರೆಯನ್ನು ಅವರು ಬರೆದಿದ್ದಾರೆಂದು ಹೇಳಬಹುದು. ಒಟ್ಟಿನಲ್ಲಿ ವೀರಶೈವಕ್ಕೆ ಸಂಬಂಧಿಸಿದ ಯಾವ ಸಮಸ್ಯೆಯೇ ಇರಲಿ ಅದರ ಬಗೆಗಿನ ಕೂಲಂಕಷವಾದ ಪರಾಮರ್ಶೆ ಡಾ. ಹಿರೇಮಠರಿಂದ ನಡೆದಿದೆಯೆಂದು ನಿಸ್ಸಂಕೋಚವಾಗಿ ಹೇಳಬಹುದು.



# ಕವಿ : ಆರ್. ಸಿ. ಹಿರೇಮಠರು

ಸಿದ್ಧಯ್ಯ ಪುರಾಣಿಕ

ಮೂವತ್ತು ವರ್ಷಗಳು ಕಳೆದರೂ ಮಾಸದ ಚಿತ್ರವೊಂದು ಮುಂದೆ ನಿಂತಿದೆ : ಕಲಬುರ್ಗಿಯಲ್ಲಿ ೧೯೪೯ ರಲ್ಲಿ ಜರುಗಲಿದ್ದ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷ ಪದವನ್ನು ಸ್ವೀಕರಿಸುವಂತೆ ಡಾ. ಎಸ್. ಸಿ. ನಂದೀಮಠರ ಮನವೊಲಿಸಲು ಸ್ವಾಗತಾಧ್ಯಕ್ಷನಾಗಿದ್ದ ನಾನೂ. ಆಗ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ತಿ. ತಾ. ಶರ್ಮರೂ ಬಾಗಲಕೋಟೆಗೆ ಹೋದಾಗಿನ ಚಿತ್ರ! ಮಾನ್ಯ ಡಾ. ನಂದೀಮಠರು ಡಿ. ಉತ್ತಂಗಿ ಚೆನ್ನಪ್ಪನವರೇ ಅಧ್ಯಕ್ಷರಾಗಲೆಂದು ಒತ್ತಿಹೇಳಿ ತಾವು ತಮ್ಮ ಹೆಸರನ್ನು ಹಿಂದೆಗೆದುಕೊಂಡು ಬಿಟ್ಟರು! ಕೀರ್ತಿಶೇಷ ತಿ. ತಾ. ಶರ್ಮರು ಬೆಂಗಳೂರಿಗೆ ಹೊರಟರು; ನಾನು ನಿಧಿ ಸಂಗ್ರಹಣೆಗಾಗಿ ನಿಂತೆ.

ಆಗ ಬಾಗಲಕೋಟೆಯ ಬಸವೇಶ್ವರ ಕಾಲೇಜಿನ ವಾರ್ಷಿಕೋತ್ಸವ ವೈಭವೋತ್ಸಾಹಗಳೊಡನೆ ನಡೆದಿದ್ದಿತು. ನನ್ನನ್ನೂ ಆ ಉತ್ಸವಕ್ಕೆ ಎಳೆದೊಯ್ದವರು ಆಗ ಅಲ್ಲಿ ಕನ್ನಡ ಪ್ರಾಧ್ಯಾಪಕರಾಗಿದ್ದ ಆರ್. ಸಿ. ಹಿರೇಮಠರು. ಕಡ್ಡಿಯಂಚಿನ ಪಂಜೆ, ಕೆನೆಯ ಬಣ್ಣದ ಕೋಟು, ಕಂದು ಬಣ್ಣದ ಜೆಸ್ಟರ್ ಟೊಪ್ಪಿಗೆ, ಯೌವನದ ಉತ್ಸಾಹ, ಬಿಡುವಿಲ್ಲದ ಕೆಲಸ-ಇವುಗಳಿಂದ ಅಂದು ಒಮ್ಮೆಗೇ ನನ್ನನ್ನು ಆಕರ್ಷಿಸಿದ 'ಆರ್.ಸಿ.' ಅವರು ಇಂದಿಗೂ ನನ್ನ 'ಆರಿಸಿ'ದ ಗೆಳೆಯರಲ್ಲಿ ಒಬ್ಬರಾಗಿದ್ದಾರೆ. ಅಂದು ವಿಶೇಷ ಅತಿಥಿಗಳಾಗಿ ಆಗಮಿಸಿದ್ದ ವಿಖ್ಯಾತ ಸಾಹಿತಿ 'ಪೀ.ಕೀ.' ಅವರು ತುಂಬಿದ ಸಭೆಯಲ್ಲಿ 'ಆರ್.ಸಿ.' ಅವರ ಹೆಸರುಗೊಂಡು ಅವರ ವೈದುಷ್ಯ, ವಿನಯ, ಕಾರ್ಯನಿಷ್ಠೆ ಇತ್ಯಾದಿಗಳನ್ನು ಶ್ಲಾಘಿಸಿದಾಗ ನನಗೆ ಹಿಡಿಸಲಾರದಷ್ಟು ಹಿಗ್ಗೆನಿಸಿತು.

ಆವಾಗಲೇ ವಿದ್ವತ್ತು, ಕವಿತ್ವ, ವಿಮರ್ಶೆ, ಸಂಶೋಧನೆಗಳು ಅವರ ಸಮಾನ ಗಮನವನ್ನು ಸೆಳೆದಿದ್ದವು. ಇವುಗಳಲ್ಲಿ ಯಾವುದರ ಕೈ ಮೇಲಾಗುವುದೋ ಎಂದು ಕುತೂ

ಹಲದಿಂದ ಕಾದಿದ್ದ ನನಗೆ ಕ್ರಮಕ್ರಮವಾಗಿ ಸಂಶೋಧನೆ, ಭಾಷಾಶಾಸ್ತ್ರ, ಸಾಹಿತ್ಯ ಶಾಸ್ತ್ರ, ಶಿಕ್ಷಣಶಾಸ್ತ್ರ, ಕೊನೆಗೆ ಆಡಳಿತ ಇವುಗಳ ಮೇಲುಗೈಯಾಗಿ ಕವಿತೆ ಹಿಂದೆ ಬಿದ್ದುದು ಸ್ವಲ್ಪ ನಿರಾಶೆಯನ್ನೇ ಉಂಟುಮಾಡಿತು. ನನಗೇಕೆ, ಅವರಿಗೂ ಈ ಬಗ್ಗೆ ಖತಿಯಾಗಿದೆಯೆಂಬುದಕ್ಕೆ ಅವರ ಎರಡನೆಯ ಕವನ ಸಂಗ್ರಹ 'ಮೌನಸ್ಪಂದನ'ದ ಈ ಕವಿತೆ ಸಾಕ್ಷಿ :

"ಹತ್ತು ವರುಷಗಳಾಯ್ತು
ಎತ್ತಿ ಮೈದಡವಿಲ್ಲ;
ಮುತ್ತನಿಡು ತಾಯೆ ನಾ ಪರದೇಶಿಯೆ ?
ಎತ್ತ ಸುಳಿದರು ನಿನ್ನ
ಹತ್ತಿರವೆ ನಾನಿದ್ದೆ:
ಸುತ್ತಿ ಶಾಸ್ತ್ರದ ಗಿರಿಯನೇರುತಿರಲು !"

ಅವರ ಚೊಚ್ಚಲ ಕವನಸಂಗ್ರಹ 'ಸುಮಾಂಜಲಿ' ಪ್ರಕಟವಾದುದು ೧೯೪೮ ರಲ್ಲಿ. ಅಲ್ಲಿಂದ ಹತ್ತು ವರ್ಷಗಳವರೆಗೆ ಕಾವ್ಯಮಾತೆ ಅವರನ್ನು 'ಎತ್ತಿ ಮೈದಡವಿ'ರಲಿಲ್ಲ. ಆದರೂ 'ಎತ್ತ ಸುಳಿದರು ಅವಳ ಹತ್ತಿರವೆ' ಇರುತ್ತಿದ್ದುದರಿಂದಲೋ ಏನೋ ಭಾಷಾ ಶಾಸ್ತ್ರಾಧ್ಯಯನಕ್ಕಾಗಿ ೧೯೫೮ ರಲ್ಲಿ ವಿದೇಶಕ್ಕೆ ಹೋದಾಗ, ಅಲ್ಲಿಯ ನಿಸರ್ಗ ರಮಣೀಯತೆಯಲ್ಲಿ 'ಮೌನಸ್ಪಂದನದಲ್ಲಿ ಚಿಚ್ಛಕ್ತಿ ಚಿಗುರೊಡೆ'ದಾಗ, 'ಗಿಡಗಂಟಿ ಬುವಿ ಬಾನು ನಡುಹಗಲು ಬಿರಿಪಂತ ಕನ್ನಡಂ ಕನ್ನಡಂ ಕನ್ನಡಂ ಎನುತಿರು'ವುದನ್ನು ಆಲಿಸಿದಾಗ, 'ತಂತಾನ ಗಾನ ಸವಿಜೇನು ಆಗಿ ಹೊರಹೊಮ್ಮಿ ಬಂದ' ಹಾಗೆ ಮತ್ತೆ ಕವನಸೃಷ್ಟಿಗೆ ಆರಂಭವಾಗುತ್ತದೆ.

'ಕನಸಿನಲಿ ಕನವರಿಸೆ ಕನ್ನಡ
    ಕೇಳುವವರೇ ಇಲ್ಲಲಾ !
ಹೆತ್ತತಾಯಿಯ ನುಡಿಯ ಬೆಡಗನು
    ಎತ್ತೊ ಮರೆವಂತಾಯ್ತಲಾ !

ಕೇಳುವವರೇ ಇಲ್ಲದಿದ್ದರೇನು ? ಹೆತ್ತತಾಯಿಯ ನುಡಿಯ ಬೆಡಗನು ಎತ್ತೊ ಮರೆಯದಂತೆ ಉಳಿಸಿಕೊಳ್ಳಲೇಬೇಕು ! ಏನು ಮಾಡಬೇಕು ?

'ದೂರ ಬೆಟ್ಟವ ಸೇರಿ ಕನ್ನಡ
    ರಾಗವನು ನಾ ಹಾಡಲೇ ?
ಮಂದಿಯಿಲ್ಲದಿರೇನು ಮುಗಿಲೇ
    ಕೇಳಿ ಸಿರಿದಲೆ ತೂಗಲೇ !'

ನದಿ, ಬೆಟ್ಟಕ್ಕೆ, ಸೃಷ್ಟಿಗೆ, ಸಾಗರಕ್ಕೆ, ಸಮೀರಣಕ್ಕೆ ಕನ್ನಡ ಹಾಡು ಕೇಳಿಸುವ ಕಾಯಕ ಪ್ರಾರಂಭವಾಗುತ್ತದೆ; 'ಕುಸುಮದಲಿ ಮಲಗಿಹ ಪರಾಗ ಎಚ್ಚರವಾಗಿ ಕನ್ನಡದ ನರುಗಂಪ ಹೀರಿ ಸುತ್ತುಲೋಕಕ್ಕೆ ಬೀರ'ತೊಡಗುತ್ತದೆ! 'ಸುಮಾಂಜಲಿ'ಯ ಆರಂಭದಲ್ಲಿಯೇ

"ಗುರುಕುಲವಿದು ಭಾರತಕೀ ನಾಡು ಮೋಹನ
ಅರುಹಿನ ತೊರೆ ನೀರನುಣಿಸಲಾಯ್ತು ಪಾವನ
ಮೆರೆವ ಧರ್ಮ ತರುಗಳೆಲ್ಲ ಬೆಳೆದ ನಂದನ
ಧರೆಗೆ ಅಮೃತ ಫಲವನಿತ್ತ ನಾಡು ಚಂದನ !"

ಎಂದು ಉದ್ಗರಿಸಿದ್ದ ಈ ಕನ್ನಡ ನಾಡುನುಡಿಗಳ ಭಕ್ತ

"ಹೂವನಲ್ಲದೆ ಹುಲ್ಲ ತಾರೆನು
ನಾಡದೇವಿಯ ಮುಡಿಗೆ ನಾ !
ಹುಲ್ಲ ತಂದರು ಹೂವ ಕಾಣುವ
ತಾಯ್ಗೆ ಹರಣವೆ ಅರುಪಣಾ !"

ಎಂದು ಉದ್ಘೋಷಿಸಿದುದು ಸಹಜವೇ ಆಗಿದ್ದಿತು. ಆದರೆ 'ಸುಮಾಂಜಲಿ'ಯ 'ಆತ್ಮಗೀತೆ'ಯಲ್ಲಿ ಒಡಮೂಡಿರುವ ಕಡುಬಡತನದ ಕರುಳುಕೊರೆಯುವ ಚಿತ್ರಗಳನ್ನು ಕಂಡವರು 'ಸಾಗರದ ತೆರೆಯಾಗಿ ಸಿರಿ ಹರಿವ' ದೇಶದಲ್ಲಿ "ಸಹಸ್ರ ಕುಸುಮಸಾಗರ, ಸಹಸ್ರ ತೇರಿಸಾಗರ, ಸಹಸ್ರಶೀರ್ಷ ತೆರೆತೆರೆ, ಸಹಸ್ರಾಕ್ಷಿ ನೊರೆನೊರೆ, ಸಾಗುತಿಹುದು ತೇಲುತಿಹುದು ಸಹಸ್ರಪುರುಷ ಸಾಗರ' ಎಂದೆನಿಸಿದ್ದ 'ರೋಜ ಬೌಲ ಪರೇಡ' ಕಂಡಾಗ ಅವರಲ್ಲಿ ಉದ್ಭವಿಸಿದ ಅನಿಸಿಕೆಗಳೇನು ?

ಅಲ್ಲಿಯ ಸಿರಿಗೆ ಸಾಟಿಯಾಗಿ ಇಲ್ಲಿ ಬಡತನ, ಅಲ್ಲಿಯ ಚಿಗುರೊಡೆದ ಚೇತನಕ್ಕೆ ಸಮನಾಗಿ ಇಲ್ಲಿ ಪ್ರೇತತನ, ಅಲ್ಲಿಯ ಸದ್ದು ಇಲ್ಲದೆ ದೊಡ್ಡದಾಗುವ ದುಡಿಮೆಗೆ ಸರಿಯಾಗಿ ಇಲ್ಲಿ ಹದ್ದು ಕಾಗೆಗಳಂತೆ ಹರಿದು ತಿನ್ನುವ ಹೀನತನ ಎದ್ದುಕಂಡಾಗ

'ಒಳಗೊಳಗೆ ನೆನೆನೆನೆದು
ನಮ್ಮ ಬಾಳನೆ ಹಳಿದು
ಕಳವಳಿಸಿ ಕಣ್ಣೀರು
ಕತಕತನೆ ಕುದಿಯುವುದು !'

ಇವರ ಪರಿಣಾಮವಾಗಿ ಒಟ್ಟು ಭಾರತದೃಷ್ಟಿ ಒಡಮೂಡುತ್ತದೆ ಕವಿಯಲ್ಲಿ ನ್ಯೂಯಾರ್ಕ ನಲ್ಲಿದ್ದಾಗ. ಅದು ಅಭಿವ್ಯಕ್ತವಾಗುತ್ತದೆ, ಈ ಉಜ್ವಲ ಪದಪುಂಜದಲ್ಲಿ :

ಇಲ್ಲಿ ತೊರೆದಿಹೆ ನುಡಿಯ ಗಡಣವ
ಕುಟ್ಟುತಲೆ ಕುಲಗೋತ್ರವ

ಹೊಟ್ಟು ಮಾಡಿಯೆ ಹಾಡುತಿಹೆನೀ
ಒಟ್ಟು ಭಾರತ ಸೂತ್ರವ !

ಈ ಒಟ್ಟು ಭಾರತ ಸೂತ್ರವನ್ನೇ ಆಧರಿಸಿ ಹುಟ್ಟಿದೆ 'ಭಾರತದರ್ಶನ'ವೆಂಬ ನೀಳ್ಗವಿತೆ. 'ಭಾರತಕ್ಕೆ ಹೊರಟು ನಿಂತ ಅಮೇರಿಕೆಯ ಸಹೋದರಿಗೆ ಭಾವಯಾತ್ರೆಯಲ್ಲಿ ಭಾರತದ ತೀರ್ಥಯಾತ್ರೆ' ಮಾಡಿಸಲೆಂದು ಹುಟ್ಟಿದ ಈ ಕವಿತೆ ನಿಜವಾಗಿಯೂ ಸಮಗ್ರಭಾರತದ ಭಾವಯಾತ್ರೆಯಂತಿದೆ. ಅನಿವಾರ್ಯವಾಗಿ ವಿವರಣಾತ್ಮಕವಾಗಿರುವ ಈ ಸುದೀರ್ಘ ಕವನ ರಮಣೀಯತೆಯನ್ನೂ ಉಳಿಸಿಕೊಂಡು ಮೈದಾಳಿರುವುದು ಮೆಚ್ಚಬೇಕಾದುದೇ.

"ಹೋಗಿ ಬಾರೌ ತಾಯೆ
ಭಾರತಕೆ ನೀನಿಂದೆ;
ಬಾಗುವೆನು ನಿನಗಿದೋ ಭಕುತಿಯಿಂದೆ !"

ಎಂಬ ಪಲ್ಲವಿಯೊಡನೆ ಒಂದು ಮಹತ್ತಿನ ನೆಲೆಯಿಂದ ಇನ್ನೊಂದು ಮಹತ್ತಿನ ನೆಲೆಯತ್ತ ಜಿಗಿಯುತ್ತ ಸಾಗುವ ಈ 'ಭಾರತದರ್ಶನ'ದಲ್ಲಿ ಕನ್ನಡನಾಡಿನ ಹಿರಿಮೆಯ ಸ್ಥಳಗಳಿಗೆ, ಹಿರಿಯ ಕವಿಗಳಿಗೆ, ಹಿರಿಯ ಚೇತನಗಳಿಗೆ ಹೆಚ್ಚು ಸ್ಥಳ, ಆಸಕ್ತಿ, ಕಲೆಗಾರಿಕೆಗಳು ಮೀಸಲಾಗಿರುವುದು ಸಹಜವೇ, ಸ್ವಾಭಾವಿಕವೇ. ವಿವರಣೆಯ, ಛಂದದ, ಬಂಧದ ಏಕತಾನತೆಯನ್ನು ಮರೆಸಲು, ವೈವಿಧ್ಯವನ್ನು ಮೆರೆಸಲು ಸಾಧ್ಯವಿರುವೆಡೆಗಳಲ್ಲಿ ಜಾನಪದ ಶಯ್ಯೆಗಳನ್ನು ಅಳವಡಿಸಿಕೊಂಡಿರುವುದು ಈ ನೀಳ್ಗವಿತೆಯ ಚೆಲುವನ್ನು ಹೆಚ್ಚಿಸಿದೆ. ಉದಾಹರಣೆಗೆ

'ಸಾಗರ ಸಾಗಿತು ವೇಮಯ್ಯ, ಪರ
ದಾಗರವಾಯಿತು ಭೀಮಯ್ಯ
ಹೇ ಲಾಲಿಲೋ ಹೇ ಲಾಲಿಲೋ !
ಒಡಲಿನ ಹುಟ್ಟನು ಹಾರೋಣ, ನುಡಿ
ಗಡಣದ ಗುಟ್ಟನು ತಿಳಿಯೋಣ;
..............................
ಬಾಳಿನ ನೌಕೆಯ ನೂಕೋಣ
ಮಹದಾಳದ ಸಾಗರ ದಾಟೋಣ !'

ಎಂಬ ಭಾಗವನ್ನಾಗಲೀ,

"ವಿಜಾಪುರಕ ಮಂದಿ
ಮಜಾಕ ಹೊಂಟಾರ
ನಾವೂ ಹೋಗೋಣ ಬನ್ನಿ"

ಎಂಬ ಭಾಗವನ್ನಾಗಲೀ ಗಮನಿಸಬಹುದು.

'ಭಾರತದರ್ಶನ'ದ ನೆಯ್ಗೆಯೊಂದು ತೆರನಾದರೆ 'ಕೋಗಿಲೆ'ಯ ಬಗೆ ಇನ್ನೊಂದು ತೆರನಾದುದು. 'ರೋಮನಗರದ ಕೋಟೆಯೊಂದರಲ್ಲಿ ಕೇಳಿದ ಕೋಗಿಲೆಯ ಕತೆ' ಎಂದು ಈ ಕವಿತೆಯ ಸಂದರ್ಭಸೂಚನೆ ಸಾರುತ್ತದೆ. 'ಕಲೆಗೆ ಬಲೆಯಿದು ಸೇರದಕಟಾ!' ಎಂಬ ತಥ್ಯವನ್ನು ಚಿತ್ರಿಸುವ ಈ ಕವನ, ಹೊರದೇಶದ ಕತೆಯೊಂದಕ್ಕೆ ಕನ್ನಡ ಶರೀರವನ್ನಿತ್ತು ಕಮನೀಯವಾಗಿದೆ. ದೊರೆಯ ಒತ್ತಾಯಕ್ಕೆ ಹಾಡಲು ನಿರಾಕರಿಸಿದ ಕೋಗಿಲೆಯನ್ನು ಕುರಿತು ಬರೆಯುತ್ತ

'ಆಶೆ ಆಮಿಷಗಳಿಗೆ
ಬಲೆ ಬೀಳಲೇನು ಅವು
ಮಾನವರ ಮರಿಗಳೇ ?'

ಎಂದು ಕೇಳಿರುವುದು ಮನೋಜ್ಞವಾಗಿದೆ. ಇದನ್ನು ತಿಳಿಯದೆಯೆ, ಒತ್ತಾಯಕ್ಕೆ ಮಣಿಯಲೊಲ್ಲದ ಕೋಗಿಲೆಯನ್ನು ತನ್ನ ಮಲಗುವ ಕೋಣೆಯಲ್ಲಿ ಕಟ್ಟಿಸಿದ ದೊರೆಯ ಬಗ್ಗೆ

'ಹಳ್ಳಿಯ ಹಜಾಮ ತ
ನ್ನಾ ಮಣೆಯ ತಾ ತಂದು
ತಾನೆ ಕೂಡ್ರುತೆ ತನ್ನ
ಗೌರವಿಸುತಿಹ ತೆರದಿ'

ಎಂದು ಬರೆದಿರುವುದು ಒಂದು ವಾಸ್ತವವೂ ವಿನೋದಪೂರ್ಣವೂ ಆದ ವ್ಯಕ್ತಿಚಿತ್ರಣವಾಗಿದೆ.

'ಕಾನನದ ಕತೆ' 'ಹೊಸ ವರುಷ' 'ಬೆಳಗು ಬೆಳಗೋ ಬೆಳಗು' 'ಸಂಜೆ' 'ಹುಚ್ಚು ಹಾಡು' ಇತ್ಯಾದಿ ಪ್ರಕೃತಿ ಕವನಗಳಲ್ಲಿ ಸೃಷ್ಟಿಯ ಅನಾದ್ಯಂತ ಸೊಬಗಿನ ಕಿಂಚಿದ್ಭಾಗವನ್ನು ಸೆರೆಹಿಡಿವ ಸಫಲ ಪ್ರಯತ್ನ ನಡೆದಿದ್ದರೆ, 'ಗುರಿಯ ನಿರಾಶೆಯಲ್ಲಿ' 'ಕಲ್ಲಾಗು ಎಲೆ ಮನದ' 'ಗೆಲುವೆನೆಂಬುವ ಭಾಷೆ' 'ಗೋಳಗುಮುಟ' 'ಕಷ್ಟ ನಮ್ಮಿಂದ ದೂರs ಬಹು ದೂರs' 'ಜೀಕು ಜೀಕಲೆ ಜೀವ' ಇತ್ಯಾದಿ ಕವಿತೆಗಳಲ್ಲಿ ಕಷ್ಟಗಳ ಕಡಲನ್ನೇ ಈಸಿ ಜೈಸಬೇಕೆನ್ನುವ ಹಂಬಲದ, ಛಲದ, ಕಲಿತನದ ಕೆಚ್ಚು ಕೊನರಿದೆ. ಇದಕ್ಕೆ ಕಾರಣ :

'ಚೆಲುವು ಬಂದು ಒಲಿದು ನಿಂದು
ಕುಣಿದು ತಣಿಸ ಹತ್ತಿದೆ
ಒಲವು ನನ್ನನೆತ್ತಿ ತಂದು
ನಕ್ಕು ನಲಿಯ ಹತ್ತಿದೆ' —ಭಾವಗೀತೆ

ಎಂದು ಹಿಗ್ಗಿ ಹಾಡಿದ ಈ ಕವಿಗೆ

'ಮುಂದೆ ಮಾವಿನ ಕೊನರು
ಹಿಂದೆ ಬೇವಿನ ಚಿಗುರು
ಬೆರಸಿ ಬೇರಿಲ್ಲದಂತೆರಡೊಂದಮಾಡಿ
ತಂದೇ ನೀ ನಾಂಟಿರುವ
ಲೋಕ ವೃಕ್ಷದ ಫಲವು!'

ಎಂಬುದರ ಅರಿವಿದೆ, ಅನುಭವವಿದೆ. ಆದುದರಿಂದಲೇ ಈ ಕವಿ ದೃಷ್ಟಿಗೆ 'ಕುಡುಕನ ಕೊರಗೂ' ಕಂಡಿದೆ; 'ದುಡಿವರೊಬ್ಬರು. ಫಲವ ಪಡೆಯುವವರೊಬ್ಬರೇ ! ಇದುವೆ ಈ ಜಗದೊಳಗೆ ಮೆರೆಯುತಿಪ ನ್ಯಾಯ !' ಎಂಬ ಕಠೋರ ತಥ್ಯವೂ ಕಂಡಿದೆ; 'ಬಾಳ ಬಳ್ಳಿಗೆ ಅರಳಿರುವ ಮಂದಾರಪುಷ್ಪ' ಗಳಂತಹ ಮಕ್ಕಳ ನೋಟ, ಆಟ, ಕೂಟ. ಮಾಟಗಳೂ ಕಂಡಿವೆ: ಅಂಬುಧಿಯಲ್ಲಿ 'ಅಂಜಿಕಾತನಯದತ್ತ' 'ಹರಿದೇವ'ರೂ ಕಂಡಿದ್ದಾರೆ. 'ಕಂಡ ಕನ್ನೆ' 'ಕಾಣದ ಕನ್ನೆ' ಯರ ಚೆಲುವು ಒಲವುಗಳೂ ಕಂಡಿವೆ; ಕೊನೆಗೆ

'ಓಂ–ಭಾವ ಬತ್ತಲೇ
ನೀ ಲಿಂಗದತ್ತಲೇ.
ಬೆರಿಸಿ ಬೇರೆ, ಇರಿಸದಾಗು, ಸಚ್ಚಿದಾನಂದವೇ'

ಎಂಬ ಸ್ಥಿತಿಯೂ ಕಂಡಿದೆ !

ಡಾ. ಆರ್. ಸಿ. ಹಿರೇಮಠರ ಇದುವರೆಗಿನ ಕಾವ್ಯಸೃಷ್ಟಿ ಅವರೊಬ್ಬ ಒಳ್ಳೆಯ ಕವಿಗಳೂ ಅಹುದೆಂಬುದನ್ನು ಸ್ಥಿರೀಕರಿಸಲು ಸಾಕಾಗುವುದಾಗಲಿ ಆ ಕ್ಷೇತ್ರದ ಅಗ್ರಗಣ್ಯರಲ್ಲಿ ಒಬ್ಬರೆಂದು ಸಿದ್ಧಪಡಿಸಲು ಸಾಕಾಗಲಿಕ್ಕಿಲ್ಲ. ಅವರಲ್ಲಿ ಕವಿಹೃದಯವಿದೆ. ಆಳವಾದ ಜೀವನಾನುಭವವಿದೆ, ಭಾವಶ್ರೀ ಇದೆ, ಭಾಷಾಪ್ರಭುತ್ವವಿದೆ, ನಿರೂಪಣಾ ನೈಪುಣ್ಯವಿದೆ, ಪ್ರಯೋಗಶೀಲತೆಯಿದೆ. ಇನ್ನೇನು ಬೇಕು ? ಅವರು ಆಡಳಿತದ, ಪಾಂಡಿತ್ಯದ, ಸಂಶೋಧನೆಯ. ಭಾಷಾಶಾಸ್ತ್ರದ, ಸಂಪಾದನೆಯ, ಶಿಕ್ಷಣದ, ಸ್ವಾಧ್ಯಾಯದ ಏಳು ಸುತ್ತಿನ ಕೋಟೆಯೊಳಗಿಂದ ಆಗಾಗ ಹೊರಗೆ ಬಂದು ಕಾವ್ಯಾನುಭವದ ಮಂದಾನಿಲಕ್ಕೆ ಮೈಯೊಡ್ಡಿದರೆ, ಜನಜೀವನ ಜಾಹ್ನವಿಯಲ್ಲಿ ಅವಗಾಹನ ಮಾಡಿದರೆ ಅವರಿಂದ ಇದುವರೆಗೆ ರಚಿತವಾದ ಕವಿತೆಗಳಿಗಿಂತಲೂ ಮೇಲ್ಮಟ್ಟದ ಕವಿತೆಗಳನ್ನು ನಿರೀಕ್ಷಿಸಬಹುದು. ಹಾಗಾದಲ್ಲಿ ಹೊಸಗನ್ನಡದ ಕಾವ್ಯಾಕಾಶದ ತೇಜಃಪುಂಜ ತಾರಕೆಗಳಲ್ಲಿ ಅವರೂ ಒಬ್ಬರಾಗುವರು. ಈಗಲೂ ನಕ್ಷತ್ರವಾಗಿಯೇ ಹೊಳೆಯುತ್ತಲಿದ್ದಾರೆ: ಆಗ ತೇಜಃಪುಂಜರಂಜಿತ ನಕ್ಷತ್ರವಾಗುವರು. ಹಾಗಾಗಲಿಯೆಂದು ಹಾರೈಸುವವರಲ್ಲಿ ನಾನೊಬ್ಬ. ಕನ್ನಡತಾಯಿ ಅವರಿಗಿನ್ನೂ ಅರ್ಧಶತಮಾನದ ಆಯುಷ್ಯ ಕೊಟ್ಟು ಇದನ್ನು ಸಾಧ್ಯವಾಗಿಸಲೆಂದು ಪ್ರಾರ್ಥಿಸುತ್ತೇನೆ.

■ ■

## ವಿಮರ್ಶಕ : ಆರ್. ಸಿ. ಹಿರೇಮಠರು

□ □ □ □ □ □ □ □ □ □ □ □ □ □ □ □ □ □

ಗೌರೀಶ ಕಾಯ್ಕಿಣಿ

□ □ □ □ □ □ □ □ □ □ □ □ □ □ □ □ □ □

ಕವಿಯು ಕಾವ್ಯವನ್ನು ರಚಿಸುತ್ತಾನೆ. ಅದರ ರಸವನ್ನು ಪಂಡಿತರು ಅರಿಯುತ್ತಾರೆ. ಇದೊಂದು ಸಾಮಾನ್ಯ ಸುಸಂಸ್ಕೃತರ ತಿಳುವಳಿಕೆ. ಆದರೆ ಸಾಹಿತ್ಯಪ್ರಪಂಚದಲ್ಲಿ ಕವಿ-ಪಂಡಿತರೆಂಬ ಈ ಭೇದವನ್ನು ಆಡು-ಕುರಿಗಳನ್ನು ಬೇರ್ಪಡಿಸುವಂತೆ ವರ್ಗೀಕರಿಸುವದು ಸುಲಭವಲ್ಲ. ಇದೇನು ಬಸಿರೆ-ಬಂಜೆಯರಲ್ಲಿ ಭೇದ ಕಲ್ಪಿಸಿದಂತೆ ಅಲ್ಲ. ಬಂಜೆಗೆ ಬಸಿರೆಯ ಬೆಸನ ಬೇಸರಗಳೇನು ಗೊತ್ತು ? ಎಂದಿದೆ ಸುಭಾಷಿತ. ಆದರೆ ಬಂಜೆಗೂ ಬಸಿರೆಯ ಸುಖದುಃಖಗಳ ಕಲ್ಪನೆ ಇದ್ದೇ ಇರುತ್ತದೆ. ಅವಳಿಗೆ ಪ್ರತ್ಯಕ್ಷ ಹೆರಿಗೆಯ ಯಾತನೆ ವೇದನೆಗಳ ಅನುಭವ ಇರಲಿಕ್ಕಿಲ್ಲ. ಹಾಗೆಯೇ ಪಂಡಿತನಿಗೆ ಕವಿಯು ನಿರ್ಮಿತಿಯ ಒಳತೋಟಿ-ಒಳತೋಡರು, ತಿಕ್ಕಾಟ, ತಲ್ಲಣ, ತಳಮಳಗಳ ಒಳನೋಟವಿರಲಿಕ್ಕಿಲ್ಲ. ಆದರೆ ತಟಸ್ಥನಾಗಿ ಕಾವ್ಯದ ರಸನಿಷ್ಕರ್ಷ-ನಿಷ್ಪತ್ತಿಗಳ ಇತ್ಯರ್ಥ ಆತ ಮಾಡಬಲ್ಲ. ತಾತ್ಪರ್ಯವೆಂದರೆ, ಇಂಥ ಸೂಕ್ತಿ-ಸುಭಾಷಿತಗಳನ್ನು ಪರಮ ತಥ್ಯದವೆಂದು ಪರಿಗ್ರಹಿಸುವ ಮೊದಲು ತುಸು ವಿಚಾರಿಸಬೇಕು.

ಆದರೆ ಕವಿಯೇ ಪಂಡಿತನಾಗಿದ್ದರೆ, ಪಂಡಿತನೇ ಕವಿಯೂ ಆಗಿದ್ದಾಗ ಈ ರಸ ಪರಿಜ್ಞಾನ-ಪರಾಮರ್ಶೆಗಳ ಬಗೆಗೆ ಎಂಥ ಭೂಮಿಕೆ ತಾಳಬೇಕು ? ಕವಿಯು ಪಂಡಿತನೂ ಆಗಿದ್ದರೆ ಅವನ ಕಾವ್ಯಪ್ರತಿಭೆ ಆ ಮಟ್ಟಿಗೆ ತುಸು ಸ್ತಿಮಿತ ( inhibited ) ಆಗಬಹುದೆ ? ಅವನಲ್ಲಿ ಸ್ವಯಂ ವಿಮರ್ಶೆಯ ಪ್ರಜ್ಞೆ ಸದಾ ಜಾಗೃತವಾಗಿ ಒಂದೆಡೆಗೆ ಕೆಲಸ ಮಾಡುತ್ತ ಅದರದೇ ಮೇಲುಗೈ ಆದಾಗ ಆ ಮಟ್ಟಿಗೆ ಕಾವ್ಯಸ್ಫೂರ್ತಿಯು ಕುಪಿಳಿದು ಹೊರೆ ಅರಿ ಅದರಲ್ಲಿಯ ಉತ್ಸಾಹ ಕುಗ್ಗಬಹುದೇ ? ಇದಕ್ಕೆ ವಿರುದ್ಧವಾಗಿ ಪಂಡಿತನಿಗೆ ಕಾವ್ಯಪ್ರತಿಭೆ ಅಂತರ್ಯದಲ್ಲಿ ಜಾಗೃತವಾಗಿಯೇ ಇದ್ದರೆ ಆತನ ರಸವಿಮರ್ಶೆ

ಕಾವ್ಯಸಮೀಕ್ಷೆಯು ಎಂಥ ಗಾಢ ಗಂಭೀರ ವಿವೇಚನೆ ಪ್ರತಿಪಾದನೆಗಳಲ್ಲಿಯೂ ತನ್ನದೇ ಆದ 'ಭಣಿತ ಭಂಗಿಮೆ'ಯ ಸೊಗಸು ಲಾಸ್ಯವಾಡುತ್ತದೆ: ವಿಲಿಯಂ ಹೆಝಲಿಟ್‌ನ ವಿಮರ್ಶಾ ಪ್ರಬಂಧಗಳಲ್ಲಿಯಂತೆ (ಅದೇ, ಟಿ. ಎಸ್. ಈಲಿಯಟ್‌ನ ಕಾವ್ಯವೂ ಒಂದು ಜಗತ್ ಜೀವನವಿಮರ್ಶೆಯ ವಿಚಕ್ಷಣೆಯ ಸಂಕೀರ್ಣ ಪ್ರಬಂಧದಂತೆ ನಮ್ಮ ಬುದ್ಧಿ ಪರೀಕ್ಷೆಗೆ ಆಹ್ವಾನವಾಗಿ ನಿಲ್ಲುತ್ತದೆ !).

ಡಾ. ಆರ್. ಸಿ. ಹಿರೇಮಠರನ್ನು ವಿಮರ್ಶಕರೆಂದು ಪರಿಶೀಲಿಸುವಾಗ ಮೇಲಿನ ಈ ತಾರತಮ್ಯದ ಅರಿವು ಉಂಟಾಗುತ್ತದೆ. ಅವರು ಪಂಡಿತರೂ ಅಹುದು, ಕವಿಗಳೂ ಅಹುದು. ಅವರ ಎರಡು ಕವನಸಂಗ್ರಹಗಳು ಪ್ರಕಟವಾಗಿವೆ. ಆ ಮಾನದಲ್ಲಿ ಪಾಂಡಿತ್ಯದ ಕೃತಿಗಳೇ ನಾಲ್ವತ್ತಕ್ಕೂ ಮಿಕ್ಕಿ ಬೇರೆಬೇರೆ ರೂಪದಲ್ಲಿ ಬೆಳಕುಕಂಡಿವೆ. ಅವರು ಆ ದೃಷ್ಟಿಯಲ್ಲಿ ಕವಿಹೃದಯದ ಪಂಡಿತರು, ಹೊರತು ಪಂಡಿತಕವಿಗಳಲ್ಲ. "ರಸಂ ಜಾನಾತಿ ಪಂಡಿತಃ" ಎಂಬಂತೆ ರಸಜ್ಞಪಂಡಿತರು ಹೊರತು ಶುಷ್ಕ ಅಭ್ಯಾಸಜಡ ಕನ್ನಡ ಪಂಡಿತರಲ್ಲ. ಪಾಠಾಂತರದ ವಚನಗಳ ಪಾಠ ಒಪ್ಪಿಸುವ 'ಪಂಡಿತವಕ್ಕಿ'ಯೂ ಅಲ್ಲ. ಮೇಲೆ ಉದಾಹರಿಸಿದ ಉಕ್ತಿಯ ಸ್ವಾರಸ್ಯವೆಂದರೆ ಕವಿಕೃತಿಯ ಕಾವ್ಯಸೌಂದರ್ಯವನ್ನು ಸಹೃದಯನೂ ರಸಿಕನೂ ಸಹಜವಾಗಿಯೇ ಸವಿಯುತ್ತಾನೆ. ಅದೂ ಏನು ? ಹೇಗೆ ? ಏಕೆ ? ಎಂಬ ಸಾಕೂತವಾದ ವಿಚಿಕಿತ್ಸೆ ಅವನದಲ್ಲ. ಅವನಿಗೆ ಅದು ಸಲ್ಲ. ಆದರೆ ಈ ರಸಗ್ರಹಣದ ಮರ್ಮ ಅದರ 'ರಸಾಯನಶಾಸ್ತ್ರ' ಪಂಡಿತನಾದ ವಿಮರ್ಶಕನೇ ಚೆನ್ನಾಗಿ ಮಾಡಬಲ್ಲ. ಆದ್ದರಿಂದಲೇ ಆತ 'ರಸಂ ಜಾನಾತಿ' ಹೊರತು ಬರೆ 'ಗೃಣ್ಹಾತಿ' ಅಥವಾ 'ಅನುಭವತಿ'ಅಲ್ಲ. ಡಾ. ಹಿರೇಮಠರು ಈ ದೃಷ್ಟಿಯಿಂದ ಹೊಸಗನ್ನಡದ ಅತ್ಯಂತ ಸಮರ್ಥರಾದ "ಕಾವ್ಯಪ್ರಯೋಗ ಪರಿಣತಮತಿ" ಗಳಾದ ಸಾಹಿತ್ಯಸಮೀಕ್ಷಕರಲ್ಲಿ ಒಬ್ಬರು. R. C. ಇವೆರಡು ಆದ್ಯಕ್ಷರಗಳು Research ಮತ್ತು Criticism ಇವೆರಡರ ಮೂಲಾಕ್ಷರಗಳೆನಿಸುವಂತಿವೆ. ಇಲ್ಲವೆ ಡಾ. ಹಿರೇಮಠರು Robust Critic ಎಂದರೂ ತಪ್ಪಾಗದು.

ಡಾ. ಆರ್. ಸಿ. ಯವರ ವಿಮರ್ಶಾಲೇಖನಪ್ರಪಂಚದಲ್ಲಿ ಎದ್ದುಕಾಣುವ ಕೆಲವು ಲಕ್ಷಣಗಳನ್ನು ಹೀಗೆ ಕ್ರೋಢೀಕರಿಸಬಹುದು :

ಅವರು ಮಾತಿನ ಮರ್ಮಜ್ಞರು. ಇದು ಅವರ ತಲಸ್ಪರ್ಶಿಯಾದ ಸಮಾಲೋಚನೆಯ ತರ್ಕಶುದ್ಧ ಶಾಸ್ತ್ರಸಿದ್ಧ ದೃಷ್ಟಿಗೆ ರಸದ ಒಳಲೇಪವನ್ನು ಕೊಡುವ ಕವಿಹೃದಯದ ಔಚಿತ್ಯಪ್ರಜ್ಞೆಯ ಅನಿವಾರ್ಯಪರಿಣಾಮ. ಯಾವುದೇ ಕವಿಯ ಯಾವುದೇ ಕಾವ್ಯ, ಯಾವುದೇ ಕೃತಿಸಂದರ್ಭವನ್ನೆತ್ತಿಕೊಂಡು ಅವರು ಚರ್ಚಿಸುತ್ತಿರಲಿ ಆ ಚರ್ಚೆ ಚರ್ವಿತಚರ್ವಣವಾಗುವದಿಲ್ಲ. ವೃಥಾಪಲ್ಲವವೆನಿಸುವದಿಲ್ಲ. ಅಲ್ಲಿಯ ತಥ್ಯದ ಬಗೆಗೆ ಹೇಳತಕ್ಕದ್ದೆಲ್ಲವನ್ನು ಅವರು ಹೇಳಿ ಅಲ್ಲಿಗೇ ಆ ವಿಷಯವನ್ನು ಸಾಂಗ್ಯವಾಗಿ ಮುಗಿಸಿಬಿಡು

ತ್ತಾರೆ. ಅವರ ಅಭಿಪ್ರಾಯ ಎಷ್ಟು ನಿರ್ದಿಷ್ಟವೋ ಅಷ್ಟೇ ನಿರ್ದುಷ್ಟ. ಅವರ ವ್ಯಕ್ತನೆ ಎಷ್ಟು ಸುಸ್ಪಷ್ಟವೋ ಅಷ್ಟೇ ಸುಶ್ಲಿಷ್ಟ (ಡಾ. ಹಿರೇಮಠರ ಈ ಒಕ್ಕಣಿಕೆಯ ವಿಶಿಷ್ಟತೆಯನ್ನು ಅವರ ಹತ್ತಿರದ ಸುಜ್ಞ ಪ್ರಾಧ್ಯಾಪಕರೂ ಮೆಚ್ಚಿ ಪ್ರಶಂಸಿಸಿದ್ದುಂಟು. ಡಾ. ಕೆ. ಜಿ. ಶಾಸ್ತ್ರಿಗಳು ಒಮ್ಮೆ ನನಗೆ ಹೇಳಿದ್ದರು : 'ಡಾ. ಹಿರೇಮಠರ drafting ಮಾತ್ರ perfect, ಯಾವದೇ ವಿಷಯಸಂದರ್ಭವಿರಲಿ, ಅವರು ಎಷ್ಟೇ ಅವಸರದಲ್ಲಿರಲಿ ನೇರವಾಗಿ dictate ಮಾಡಿದ ವಕ್ತವ್ಯ ಯಾವಾಗಲೂ ಅವ್ಯಂಗವಾಗಿರುತ್ತದೆ. ಅವರ ಶೈಲಿ-ಸರಣಿ-ಸೌಷ್ಟವ-ಪದಪ್ರಯೋಗದ ಔಚಿತ್ಯ– ಎಲ್ಲ ಖಚಿತ ತಿದ್ದಿ ತೀಡಿದ್ದು. It needs no improvement – ಹಾಗೆಯೇ ಅಚ್ಚಿಗೋ ಅಂಚೆಗೋ ಹೋಗಬಹುದು). ಶೈಲಿಯ ಈ ಸುಭಗತೆ ಡಾ. ಆರ್. ಸಿ. ಯವರ ಸಾಮಾನ್ಯ ಎಲ್ಲ ಬರವಣಿಗೆಯದೇ ಒಂದು ನಿತ್ಯಲಕ್ಷಣವೆಂದಮೇಲೆ ಅವರು ಕಾವ್ಯವಿಮರ್ಶೆಗಾಗಿಯೇ ಕೂತು ಪರಿಶ್ರಮಿಸಿ ಬರೆದ ಪ್ರಬಂಧಗಳ ಭಾಷಾಬಂಧದ ಬಗೆಗೆ ಬೇರೆ ಹೇಳಬೇಕೇ ?

"ಹಿತಂ ಚ ಸಾರಂ ಚ ವಚೋಹಿ ವಾಗ್ಮಿತಾ" ಎಂಬ ವ್ಯಾಖ್ಯೆ ಡಾ. ಹಿರೇಮಠರ ಈ ವಾಗ್ಮಿತೆಗೂ ಅನ್ವಯಿಸುತ್ತದೆ. ಈ ಸಂದರ್ಭದಲ್ಲಿ ಇದೇರೀತಿ ವೈಚಾರಿಕ ಗದ್ಯದ ಪ್ರಸನ್ನಶೈಲಿಯ ಮಟ್ಟಿಗೆ ಪ್ರಾ. ಮಾಳವಾಡ ಮತ್ತು ಪ್ರಾ. ಜವರೇಗೌಡರನ್ನು ಇಲ್ಲಿ ಸ್ಮರಿಸಬಹುದು. ಅಡಕವಾಗಿ ಅಚ್ಚುಕಟ್ಟಾಗಿ ಹುರಿಕಟ್ಟಾಗಿ ನೇರ್ಪು ನುಣುಪುಗಳಿಂದ, ವಿಶೇಷ ಒನಪು ತೋರ್ಪಡಿಸದೆ ಇವರ ಗದ್ಯಸರಣಿ ಉದ್ಬೋಧಕವಾಗಿ ಅಕುಂಠಿತವಾಗಿ ಸಾಗುತ್ತದೆ.

ಈ ಮಾತಿನ ಮಾರ್ಮಿಕತೆಯು ಹಲವು ವಿಧವಾಗಿ ವ್ಯಕ್ತವಾಗುತ್ತದೆ. ಅದು ಸಮರ್ಪಕ ವಿಶೇಷಣಗಳಲ್ಲಿ ವಾಕ್ಯವಿಷಯದ ಮುಖ್ಯ ಹಾಗೂ ವ್ಯವಚ್ಛೇದಕ ಗುಣಲಕ್ಷಣಗಳನ್ನು ನಿರೂಪಿಸುವದು. ವಿಷಯದ ಕುರಿತ ಮತಭೇದವನ್ನು ಇತರ ಸಮಾಲೋಚಕರಿಂದ, ತತ್ಸಮ ಕವಿಗಳಿಂದ ಪ್ರತ್ಯೇಕತೆಯನ್ನು ನಿಖರವಾಗಿ ನಮೂದಿಸುವದು, ಕೃತಿಯ ಇಲ್ಲವೆ ಕೃತಿಕಾರನ ಮೌಲ್ಯಮಾಪನದಲ್ಲಿ ತೂಕ ಅಳತೆ ತಪ್ಪದಂತೆ ಒರೆ-ಗೆರೆ ಬಣ್ಣ-ಹೋಳ್ವುಗಳಿಗೆ ಮೋಸವಾಗದಂತೆ ಬಣ್ಣಿಸುವದು, ಎಂಥ ತೀವ್ರ ಭಿನ್ನಮತವನ್ನೂ ದೃಢವಾಗಿ ಅಷ್ಟೇ ಮೃದುವಾಗಿ ಪ್ರತಿಪಾದಿಸುವದು, ಬಿಂಕುಕೊಂಕುಗಳಿಲ್ಲದ ಕರ್ಮಠ ವಾದವಿರದ ಅಭಿಪ್ರಾಯವ್ಯಕ್ತನೆಗೆ ಡಾ. ಹಿರೇಮಠರು ಮಾದರಿಯಾಗಿ ನಿಲ್ಲಬಲ್ಲರು. ಅಟ್ಟಹಾಸವಿಲ್ಲದ ಆತ್ಮವಿಶ್ವಾಸ, ಹಗೆತವಿಲ್ಲದ ಮೊನಚು, ಹಟವಿಲ್ಲದ ದಿಟ, ದಾಕ್ಷಿಣ್ಯ ಮೆರೆಸದ ದಿಟ್ಟತನ, ಸಂದಿಗ್ಧತೆಗೆ ಇಂಬುಗೊಡದ ವಿದಗ್ಧತೆ, ತನ್ನ ವಿಧಾನಗಳಿಗೆ ಹೇರಳವಾದ ಆಧಾರಗಳನ್ನು ಅವರ ವಿಭಿನ್ನ ಆಕರಗಳಿಂದ, ಸುದೂರದ ಸಾಧನಗಳನ್ನು ಪರಿಪುಷ್ಟವಾಗಿ ಬಳಸುವ ಔಚಿತ್ಯ ತಪ್ಪದ ಔದಾರ್ಯ, ಬರೆದುದರ ಹಿಂದೆ ಬರೆಯಬಹುದಾದುದರ ಬಾಹುಲ್ಯವನ್ನು ಸೂಚಿಸಬಲ್ಲ ಸತ್ವದ ಸ್ವತ್ವ ಅವರದು.

ಡಾ. ಡಿ. ಎಲ್. ನರಸಿಂಹಾಚಾರ್ಯರ್, ಪ್ರಾ. ವೆಂಕಟಸುಬ್ಬಯ್ಯ ಪ್ರಭೃತಿಗಳ ಕೆಲವೊಂದು ಸಿದ್ಧಾಂತರದ ಮತ ಮಂತವ್ಯಗಳನ್ನು ಅಷ್ಟೇ ನಿರ್ಣಯವಾಗಿ ನಿರ್ದಾಕ್ಷಿಣ್ಯವಾಗಿ ಖಂಡಿಸಿ ನಿರಾಕರಿಸುವ ಪ್ರತಿಪಾದನೆಯಲ್ಲಿ ಡಾ. ಹಿರೇಮಠರ ಈ ವಾದಪಟುತ್ವದ ಹಿರಿಮೆ ಧಾರಾಳವಾಗಿ ಪ್ರಕಟವಾಗಿದೆ. ಅಲ್ಲಿಯೂ ಅವರ ವಿದ್ವತ್ತು ವಿನಯವನ್ನು ಬಿಟ್ಟಿಲ್ಲ. ಆಗ್ರಹದಲ್ಲಿಯೂ ಆರ್ಜವಕ್ಕೆ ಚ್ಯುತಿ ಆಗಿಲ್ಲ. ಆಧಾರವಿಲ್ಲದ ನಿರೂಪಣೆಯೂ ಇಲ್ಲ. ನಿರಾಕರಣೆಯೂ ಇಲ್ಲ. ತನ್ನ ಪ್ರತಿಪಾದನೆಯ ಹರಿತವೂ ಹದನವೂ ಆದ ಅಲಗನ್ನು ಅವರು ಹಿಡಿಕೆಮಟ್ಟ (to the hilt) ನೂಕುತ್ತಾರೆ, ಎಂತಹದೇ ಪ್ರತಿಪಾದ್ಯ ಪ್ರಮೇಯದಲ್ಲಿ. ಆದರೆ ಅಲ್ಲಿಯೂ ಅವರ ಯುಕ್ತಿವಾದಗಳು ಅತಿ ಅನಿಸುವದಿಲ್ಲ. ವಿವೇಚನೆಗೆ ಅದು ಭಾರಭೂತ ಇಲ್ಲವೇ ಭೂತಭಾರವೆನಿಸುವದಿಲ್ಲ. ಉದಾಹರಣೆಗೆ ರಾಘವಾಂಕನ ಕಾಲನಿರ್ಣಯ, ಅವನ ಮತವಿಚಾರ ಮುಂತಾದ ಪ್ರಶ್ನೆಗಳ ಪರಾಮರ್ಶೆಯಲ್ಲಿ ಡಾ. ಹಿರೇಮಠರು ಇತರ ವಿದ್ವಾಂಸರು ಮಂಡಿಸಿದ ವಿಧಾನಗಳನ್ನು ಸಯುಕ್ತಿಕವಾಗಿ ಖಂಡಿಸಿ ಲಘುವಾಗಿ ಅಲ್ಲದಿದ್ದರೂ ಹಗುರಾಗಿ ತೆಗೆದುಹಾಕಿದ ಕೆಲವು ಮಹತ್ವದ ಸಂದರ್ಭಗಳಲ್ಲಿ ಅವರ ಅಭಿಪ್ರಾಯಗಳನ್ನು ಅಷ್ಟೇ ಸುಲಭವಾಗಿ ಅಲ್ಲಗಳೆಯುವಂತೆ ಇಲ್ಲ. You can agree with him or not, you can't ignore him –ಹೀಗಿದೆ ಅವರ ವಿಮರ್ಶಾವೈಖರಿ.

ಈ ಮಾತಿನ ಮಾರ್ಮಿಕತೆ ಇನ್ನೊಂದು ರೀತಿಯಲ್ಲಿಯೂ ಪ್ರಕಟವಾಗಿದೆ. ಅದು ಅವರ ನಿರಾಯಾಸವಾದ ಸಲೀಲವೂ ಸುಲಲಿತವೂ ಆದ ಪಾಂಡಿತ್ಯಪ್ರದರ್ಶನದಲ್ಲಿ (ಇಲ್ಲಿ 'ಪ್ರದರ್ಶನ'ವೆಂಬ ಮಾತನ್ನು ಬಳಸುವದೇ ಅಷ್ಟೊಂದು ಮಾರ್ಮಿಕವಲ್ಲವೇನೋ!). ಒಂದೆಡೆಗೆ ಅವರಿಗೆ ವಾಗರ್ಥ ಪ್ರತಿಪತ್ತಿಗೆ ಸಮರ್ಪಕ ಮಾತಿನ ಕೊರತೆ ಎಂದೂ ಕಾಡುವದಿಲ್ಲ. ಯಾವುದು ಮಹಾಕಾವ್ಯ ಯಾವುದು ಪುರಾಣ ಯಾವುದು ಕಥನಕಾವ್ಯ ಎಂಬುದರ ರೂಪರೇಷೆ ಈ ವಿಮರ್ಶಕರು ನಿಖರವಾಗಿ ನೀಡುತ್ತಾರೆ. ಜತೆಗೆ ಅಲ್ಲಲ್ಲಿ ಅವರು ಉದಾಹರಿಸುವ ವಿವಿಧ ಅವತರಣಿಕೆಗಳು ಅವರ ವಿಶಾಲ ವಿದ್ವತ್ತೆಯನ್ನು ಕೃತಾರ್ಥಗೊಳಿಸುತ್ತವೆ. ಆನಂದವರ್ಧನನಿಂದ ಅರವಿಂದರ ತನಕ, ಮಮ್ಮಟನಿಂದ ಕುರ್ತಕೋಟಿಯ ತನಕ, ಅರಿಸ್ಟಾಟಲ್‌ನಿಂದ ಆನಂದಕುಮಾರಸ್ವಾಮಿಯ ತನಕ ಆಯುಕಟ್ಟಿನ ಆಯ್ದ ಉಕ್ತಿಗಳನ್ನು ಎತ್ತಿ ಕೊಡುವಲ್ಲಿ ಅವರ ಹದ ಹಿತಮಿತ ಕೌತುಕಾಸ್ಪದವಿದ್ದಷ್ಟೇ ಭೂಷಣಾಸ್ಪದವಿದೆ. ಅಂಥ ಉದ್ಧರಣೆಗಳೆಲ್ಲ ಈ ವಿಮರ್ಶಕರ ಮತಪುಷ್ಟಿಗಾಗಿಯೇ ಹೊರತು 'ವಿದ್ಯಾಪರಿಣತರ ಅಲಂಕಾರ'ವೆಂದು ಮೆರೆಯಿಸಲಿಕ್ಕೆ ತಂದವು ಬಂದವು ಅಲ್ಲ. ಅಭಿನಿವೇಶವೆನಿಸದ ಅಭಿಮಾನದಿಂದ ಆಢ್ಯತೆಯ ದರ್ಪಸೋಸದ ಪ್ರೌಢಿಮೆಯಿಂದ ಡಾ. ಹಿರೇಮಠರು ಇಂಥ ಆಧಾರ ವಚನಗಳನ್ನು ಉದಾಹರಿಸುತ್ತಾರೆ. ಅವನ್ನೇ ಶಬ್ದಪ್ರಾಮಾಣ್ಯಕ್ಕಾಗಿ ಇಟ್ಟುಕೊಂಡು ತಮ್ಮ ಮೌಲ್ಯಮಾಪನಕ್ಕೆ ತೂಕದ ಕಲ್ಲಾಗಿ, ಒರೆಗಲ್ಲಾಗಿ ಬಳಸುವುದಿಲ್ಲ. ಕವಿಕೃತಿ ಕಾಲನಿರ್ಣಯ ಕಲಾಗುಣ ಇತ್ಯಾದಿಗಳ ಕುರಿತ

ಇವರ ತರ್ಕ, ವಿಚಾರ, ನಿರ್ಣಯ ಮತ್ತು ಪರಿಷ್ಕಾರ ಕೇವಲ ಇವರದೇ ಸೋಪಜ್ಞತೆಯ ನಿರಂಕುಶವೂ ಸರ್ವಂಕಷವೂ ಆದ "ಭಾವಯಿತ್ರೀ ಪ್ರತಿಭೆ"ಯ ವಿನ್ಯಾಸ. ಅದು ಈ ಪೌರ್ವಾತ್ಯ ಪಾಶ್ಚಾತ್ಯ ಅಭಿಪಾತ್ರಗಳಿಂದ ಹೆಚ್ಚಿನ ಪುಷ್ಟಿಯನ್ನು ಹೊಂದುತ್ತದೆ.

ಇದೇ ಮಾರ್ಮಿಕತೆ ಅವರು ತಮ್ಮ ತಾತ್ಪರ್ಯ ತೀರ್ಮಾನಗಳಿಗೆ ಆಧಾರವಾಗಿ ಎತ್ತಿಕೊಡುವ ಕಾವ್ಯಸಂದರ್ಭಗಳ, ಅವತರಣಿಕೆಗಳ ಆಯ್ಕೆಯಲ್ಲಿಯೂ ಸ್ಫುಟವಾಗುತ್ತದೆ. ನಿಜವಾಗಿಯೂ ಅವರು ಎತ್ತಿಕೊಟ್ಟ ಅನೇಕ ವಿಧದ ಹಾಗೂ ವಿಪುಲ ಅವತರಣಿಕೆಗಳಿಂದಲೇ, ಯಾವ ಟೀಕೆ ಟಿಪ್ಪಣಿಗಳ ಅಗತ್ಯ ಬೀಳದೆ, ಆಯಾ ಕವಿಯ ಭಾವ, ಧ್ವನಿ, ಚಿತ್ರಕಶಕ್ತಿಯು ಸಮ್ಯಕ್‌ಪರಿಚಯವಾಗಿಬಿಡುವಂತೆ ಇರುತ್ತದೆ. ಇದು ಈ ವಿಚಕ್ಷಣ ವಿಮರ್ಶಕರ ಕವಿಹೃದಯಕ್ಕೂ ಪರಿಚಯವಾಗಿದೆ. ಇದಕ್ಕೆ ಕೆಲವು ಮಾದರಿಗಳನ್ನು ನೋಡಬಹುದು :

"ಎಸೆವ ಭಕ್ತಿಜ್ಞಾನ ವೈರಾಗ್ಯ ಒಡಲಾಯ್ತೋ
ಮಸೆದು ಪುಟವಿಟ್ಟ ಪುಣ್ಯಂ ಪುರುಷನಾಯ್ತೊ ಶೋ
ಧಿಸಿದ ಬೆಳದಿಂಗಳಂಗಂಬಡೆದುದೋ"

—ಇದು ಸೋಮನಾಥ ಚರಿತ್ರೆಯ ನಾರದನ ಚಿತ್ರಣ.

"ಸಂದು ಕಾಸಲು ಕರಗಿ ಕಬ್ಬುನಂಕಾ ಹೇರು
ವಂದದಿಂ ರವಿ ತನ್ನ ಕಿರಣ ಕಿಚ್ಚಿಂ ಕಾಸೆ
ಬೆಂದ ಕತ್ತಲೆ ಕಾದು ಕರಗಿ ಕೆಂಗಲಿಸಿ ತಕ್ಕಿಲ್ಲದೊಡೆ ಬಡ ಬಿಸಿಲಲಿ :"

— ಸೋಮನಾಥ ಚರಿತ್ರೆಯ ಬೇಸಿಗೆಯ ವರ್ಣನೆಯಿದು.

"ಕೆಸರ ಕೊರತೆಗ ಕತ್ತುರಿಯನೈದಿಸುವ ತೆಱದಿ
ಮಸಿಯ ಕೊರತೆಗೆ ಮಣಿಕುವನು......
ಹುಸಿಯ ಕೊರತೆಗೆ ಸತ್ಯವ ಕೊಟ್ಟು ಕೆಡಿಸುವಂತೆ......"

—ಇದು ಸೋಮನಾಥ ಚರಿತ್ರೆಯ ಪದ್ಯಭಾಗ.

"ಸಂಧ್ಯಾವನಿತೆ ಹೊಳೆಮೆಟ್ಟಿ ಹೊದೆದ ಕಾರ್ಗಂಬಳಿಯೊ"
"ಇದು ಮಾಗಿಯನು ಹೆತ್ತ ತವರ್ಮನೆಯೊ"
"ಪೊಡವಿಯೊಡೆಯನು ನೋಳ್ಪ ಗಗನರಂಧ್ರವೊ"
"ಅಲುಗಗೊಡದಂತೆ ಕೀಲಿಸಿದ ವಜ್ರದ ಮೊಳೆಯೊ"
"ನಭಲತೆ ಹಬ್ಬಿ ಒಗೆದ ನನೆಯೊ"

—ಇದು ಸೋಮನಾಥ ಚರಿತ್ರೆಯಲ್ಲಿ ಬರುವ
ಕತ್ತಲೆ ತಾರಾವಳಿಗಳ ಚಿತ್ರಣ.

ಶಿವನ ಕೋಪಾಟೋಪದ ಈ ಪರಿಣಾಮ ನೋಡಿರಿ :

"ಜಡೆಯೊಳ್ ಗಂಗೆಯು ಮಡುವುಕ್ಕುತ್ತೆ-ಸರಿರಿಡೆ ಮೂಗ
ಲೆಡೆಗಾಣದೆ ಸಸಿ ಬೆವರಿಳಿದುಱೆ ಚುಯ್ಯೆನೆ ದನಿ
ಗೊಡುವ ಸುಧಾಬಿಂದುವನೊತ್ತಿ ಪಿಡಿದನೆಲೆಲೆ ವೀರಕುಲಾಧೀಶ್ವರನು"

ಭವ್ಯತೆಯೇ ಭಯಾನಕವಾಗಿ ಜೀಕುಬಿಟ್ಟ ಈ ಚಿತ್ರಣ :

"ಕುಲಗಿರಿಗಳ ಕೈಚೆಂಡುಗಳ ಬ್ರಹ್ಮಾಂಡಂ
ಗಳ ಹೊಡೆಸೆಂಡುಗಳ ದಿಶಾಕರಿಗಳ ದಂತಂ
ಗಳ ಚಿಲ್ಲಣಿಗೆಗಳ ಮಹಾಕಾಲನ ಕೋಣನ ಕೋಡಿನ ಹೊಸಬಡಿಗೆಗಳ
ಕುಳಿಕನ ಕಡ್ಡಣಿಗೆಯ ಶಶಿ ರವಿಗಳ ತಾಳಂ
ಗಳ ಧರೆಗಗನಂಗಳ ಪಲ್ಲಟಿಸುವ ಬಲಯುತ
ಬಲದಿಂ ಗಣಕುಲ ನಡೆದುದು ವೀರೇಶನ ಕೆಲಬಲದಲಿ ಜಗದಗಲದೊಳು"

—ವೀರೇಶಚರಿತ್ರೆ

"......... ತನ್ನ ದಶಶತಕರದಿ ಗಗನವೆಂ
ದೆಂಬ ಜೇಗಟೆಯಿಂದ ಧರೆಗೆ ಡಂಗುರವೊಯ್ಯಲೆಂದು ನಿಂದಿರ್ದನೋ
ಎಂಬಂತೆ ರವಿಯುದಯ ಗಿರಿಗೆ ಬಂದಂ" — ಸಿದ್ಧರಾಮ ಚಾರಿತ್ರ

ಹೀಗೆ ನೂರಾರು ಮಾದರಿಯ ಉತ್ತಮ ನುಡಿಗಳನ್ನು ಆಯ್ದುಕೊಡುವಲ್ಲಿ ಡಾ. ಹಿರೇಮಠರು ತಮ್ಮ ವಿಮರ್ಶಾದೃಷ್ಟಿಯ ಹಿಂದಿನ ರಸಿಕತೆಯ ಜೀವಾಳವನ್ನೇ ಅಬಾಧಿತವಾಗಿ ವ್ಯಕ್ತಪಡಿಸಿದ್ದಾರೆ. ನಾನು ಇಲ್ಲಿ ವಿಶೇಷ ಪ್ರಯಾಸ ಪಡದೆ ಕೈಗೆ ಸಿಕ್ಕ ಮಾದರಿಗಳನ್ನು ಕೇವಲ ಸ್ಯಾಂಪಲ್ಲಿಗಾಗಿ ಎತ್ತಿಕೊಟ್ಟಿದ್ದೇನೆ. ವಿಮರ್ಶೆಗೆ ಎತ್ತಿಕೊಂಡ ಕವಿಯ ಅದ್ಭುತ ಪ್ರತಿಮಾಸೃಷ್ಟಿಯ ವಿತಾನ, ರೂಪಕ ವಿಧಾನ, ಉತ್ಪ್ರೇಕ್ಷೆಯ ಉಡ್ಡಾಣ, ಸೂಕ್ಷ್ಮದರ್ಶನ, ಅಂತಃಸೌಂದರ್ಯಗಳ ನುಡಿಗೆ ನಿಲುಕಿದ ಧ್ವನಿಗಳತ್ತ ನಮ್ಮ ಗಮನವನ್ನು ಸೆಳೆಯುವ ಅಸ್ಖಲಿತ ಕೌಶಲ್ಯವನ್ನು ಸಹಜರೀತಿಯಲ್ಲಿ ಪ್ರಕಟಿಸುತ್ತ ಇನ್ನೂ ಆಳದ ಆಲೋಚನೆಗೆ ಇಣುಕುತ್ತದೆ, ಅವರ ಸಮಾಲೋಚನೆಯ ಶೈಲಿ. "ಆಹತಕ್ಕಿಂತ ಅನಾಹತನಾದವು ಹೆಚ್ಚು ಸತ್ವಯುತ"ವೆಂಬುದನ್ನು ಕವಿಯುಕ್ತಿಗಳಿಂದ ವ್ಯಕ್ತಗೊಳಿಸುತ್ತಲೇ ಈ ವಿಮರ್ಶಕರು ಆ ಅನಾಹತವನ್ನು ಆಹತನಾದದಷ್ಟೇ ಇಂಪಾಗಿ ಮಿಡಿದು ನುಡಿಸುತ್ತಾರೆ (ಕೀಟ್ಸ್ ಕವಿಯ Heard melodies are sweet, but those unheard are sweeter ಎಂಬ ಈ ಅಮರ ನುಡಿಯನ್ನು ಡಾ. ಹಿರೇಮಠರು 'ಆಹತ-ಅನಾಹತ'ಗಳ ನಮ್ಮ ಯೋಗಶಾಸ್ತ್ರೀಯ ಪರಿಭಾಷೆಯಲ್ಲಿ ಎಷ್ಟು ಅಂದವಾಗಿ ಇನ್ನಷ್ಟು ಗಂಭೀರವಾಗಿ ಕನ್ನಡಿಸಿದ್ದಾರೆ ! ).

ಕಾವ್ಯಸತ್ವ, ಅರ್ಥಸೌಂದರ್ಯ ಅದು ವ್ಯಂಜನಗೊಳಿಸುವ ವಸ್ತುಧ್ವನಿ, ರಸಧ್ವನಿ ಕವಿಯ ಅಂತರ್ದರ್ಶನ, ಪಾತ್ರಪರಿಪೋಷಣೆಯ ಅಂಗೋಪಾಂಗ, ಸಹಜವರ್ಣನೆ

ಗಳೊಳಗಿನ ಸೂಕ್ಷ್ಮದೃಷ್ಟಿ, ಸ್ಫೂರ್ತಿ, ನೈಜತೆಯೊಡಮೂಡಿಸುವ ಜೀವಂತಚಿತ್ರಣ, ನಾಟಕೀಯ ಸಂವಾದಸಂಕಥನ, ಮತವನ್ನು ಮೀರುವ ಕವಿಯ ಮಾನವ್ಯದ ನವ್ಯ ಅವಾಹನೆ ಇವೆಲ್ಲವನ್ನು ಆತ್ಯಂತಿಕವಾಗಿ ಏಕಾಂತಿಕವಾಗಿ ಅಂತರಂಗ ಬಹಿರಂಗ ಪ್ರಮಾಣ ಪರಿಮಾಣಗಳಿಂದ ಅಳೆದು ಬೆಲೆಕಟ್ಟುವ ಜಾಗೃತರಸಪ್ರಜ್ಞೆ ವಿಮರ್ಶಕ ಹಿರೇಮಠರ ಇಂಥ ಲೇಖನದ ಸ್ಥಾಯೀಭಾವ.

ಈ ಪ್ರಜ್ಞೆಯ ವ್ಯಾಪಾರ ಇಲ್ಲಿ ಒಂದಕ್ಕಿಂತ ಹೆಚ್ಚು ಮೊಗ ಪಡೆದು ಅಷ್ಟಪೈಲವಾಗಿ ನಡೆಯುತ್ತದೆ. ಅವರ ಇಂಥ ಸಮಾಲೋಚನೆ ಅಗತ್ಯಕಂಡಲ್ಲಿ ತೌಲನಿಕ ವಿಮರ್ಶೆ (Comparative Criticism)ಯಾಗಿ ಶ್ರೀಮಂತಿಕೆಯನ್ನು ತಾಳುತ್ತದೆ. ಒಂದು ಉದಾಹರಣೆ ಬೇಕೆಂದರೆ 'ಸೋಮನಾಥ ಚಾರಿತ್ರ'ದ ಪ್ರಾಸ್ತಾವಿಕ ಸಂದರ್ಭದಲ್ಲಿಯ ನಾರದನ ಪ್ರವೇಶವನ್ನು ಕುರಿತು ಚರ್ಚಿಸುವಾಗ ಅವರಿಗೆ ನೇರವಾಗಿ 'ಶಿಶುಪಾಲವಧ' ದಲ್ಲಿ ಬರುವ ನಾರದನ ಪಾತ್ರ ನೆನಪಾಗುತ್ತದೆ. ನಾರದನ ಪಾತ್ರಚಿತ್ರಣದಲ್ಲಿ ಮಾಘನ ಮತ್ತು ರಾಘವಾಂಕನ ಕಾವ್ಯಶಕ್ತಿಯ ವಿನ್ಯಾಸವನ್ನು ತುಲನೆ ಮಾಡಿ ನಮ್ಮ ಕನ್ನಡ ಕವಿಯೇ ಆ ಸಂಸ್ಕೃತ ಕವಿಗಿಂತ ಲೇಸೆಂದು ತೀರ್ಮಾನಿಸಿದ್ದಾರೆ. ಮತ್ತು ಆ ತೀರ್ಮಾನಕ್ಕೆ ಕೇವಲ ವಸ್ತುನಿಷ್ಠವಾಗಿ ತತ್ವನಿಷ್ಠುರವಾಗಿಯೇ ಅವರು ತಲಪುತ್ತಾರೆ. ಮಾಘಕವಿಕೃತ ನಾರದ ವರ್ಣನೆಯ ಶ್ರೇಷ್ಠತೆಯನ್ನು ನಮ್ಮ ಆದಿಕವಿ ಪಂಪನೂ ಒಪ್ಪಿ ತನ್ನ ನಾರದ ವರ್ಣನೆಯಲ್ಲಿ "ಮಾಘನ ಸಂಸ್ಕೃತ ಶ್ಲೋಕಗಳನ್ನೇ ಕನ್ನಡಿಸಿ ಕೃತಾರ್ಥನಾಗಿರುವನು." ಆದರೆ ರಾಘವಾಂಕನೋ "ಪರೋಕ್ತಿಗಳರ್ಥಮಂ (ಬರೆ ಉಕ್ತಿಗಳನ್ನೇ ಅಲ್ಲ!) ಕಳ್ವುದಧಮತನಂ" ಎಂದು ಭಾವಿಸಿದವನು. ಅವನು ಮಾಡಿದ ನಾರದನ ಶುಭ್ರದೇಹದ ವರ್ಣನೆ (ಇದನ್ನು ಹಿಂದೆಯೇ ಉದ್ಧೃತ ಮಾಡಲಾಗಿದೆ) ಯನ್ನು ಕೊಟ್ಟು ಅಲ್ಲಿಯ ಕಲೆಯ ನಯವನ್ನು ಔಚಿತ್ಯವನ್ನು ನಮ್ಮ ಡಾಕ್ಟರರು ತಜ್ಞ ನಾಡಿಪರೀಕ್ಷಕರಂತೆ ಗುರುತಿಸಿದ್ದಾರೆ (ಮಾತ್ರವಲ್ಲ. ಈ ಸಂದರ್ಭದಲ್ಲಿ ರಾಘವಾಂಕನು ಒಂದರ್ಥದಲ್ಲಿ ಪಂಪನಿಗಿಂತಲೂ ಮಿಗಿಲೆಂಬುದನ್ನು ಪರ್ಯಾಯವಾಗಿ ಸೂಚಿಸಿದಂತೆ ಆಗಿದೆ!). ನಾರದನ ದೇಹವೊಂದನ್ನೇ ಬಣ್ಣಿಸಲು ಮಾಘನು ಏಳು-ಎಂಟು ಶ್ಲೋಕಗಳನ್ನು ಬರೆದಲ್ಲಿ ರಾಘವಾಂಕನು ಒಂದೆರಡು ಪದ್ಯಗಳಲ್ಲಿಯೇ ಆ ದೇವಮುನಿಯ ಆಂತರಿಕ ಹಾಗೂ ಬಾಹ್ಯಸ್ವರೂಪವನ್ನು ಸತ್ವಯುತವಾಗಿ ರೂಪಿಸಿದ್ದನ್ನು ನಮಗೆ ಮನವರಿಕೆ ಮಾಡಿಕೊಡುವರು.

ಅದೇ ರೀತಿಯ ತೌಲನಿಕ ಪರಿಶೀಲನೆಯನ್ನು ರಾಘವಾಂಕನ ನಾಟ್ಯಪ್ರತಿಭೆಯ ಪರಿಚಯದಲ್ಲಿಯೂ ಕಾಣಬಹುದು. ಇಲ್ಲಿ ಈ ವಿದ್ವಾನ್ ವಿಮರ್ಶಕರು ಗ್ರೀಕ ರುದ್ರನಾಟಕ ತತ್ವದ ಒರೆಗಲ್ಲಿಗೆ ರಾಘವಾಂಕನ ನಾಟ್ಯಪ್ರತಿಭೆಯನ್ನು ಹಚ್ಚಿ ಅದರ ಚಿನ್ನದ ಬೆಲೆ ಕಟ್ಟಿದ್ದಾರೆ. ವಿಶೇಷತಃ 'ಹರಿಶ್ಚಂದ್ರ ಕಾವ್ಯ'ದಲ್ಲಿಯ ನಾಯಕ ಪ್ರತಿನಾಯಕರ

ಘರ್ಷಣೆ, ಪಾತ್ರಪೋಷಣೆ, ದೃಶ್ಯಗಳ ನಿರ್ಮಾಣದ ಉತ್ಕಟತೆಯ ಆಕರ್ಷಣೆ, ಸಮಸ್ಯೆಗಳ ನಿರೂಪಣೆ-ನಿವಾರಣೆ ಇತ್ಯಾದಿಗಳಲ್ಲಿ ಅರಿಸ್ಟಾಟಲ್ ಪ್ರತಿಪಾದಿಸಿದ ರುದ್ರ ನಾಟಕದ ಲಕ್ಷಣಗಳು ರಾಘವಾಂಕನ ಈ ನಾಟಕೀಯ ಕಾವ್ಯಕ್ಕೆ ಹೇಗೆ ಸಮರ್ಪಕವಾಗಿ ಅನ್ವಯಿಸುವವೆಂದು ವಿವೇಚಿಸಿದ್ದು ತುಂಬ ಹೃದಯಂಗಮವಾಗಿದೆ. ಈ ಕುರಿತು ಅರಿಸ್ಟಾಟಲ್‌ನ ತತ್ವದ ಒಂದು ದೀರ್ಘ ಅವತರಣಿಕೆಯನ್ನೇ ಕೊಟ್ಟು ರಾಘವಾಂಕನು ಅದನ್ನೇ ಅನುಸರಿಸಿದಂತೆ ಕಾಣುವದೆಂದು ಹೇಳಿದ್ದಾರೆ. ಅಂದರೆ ಅವರು ಆಯ್ದುಕೊಂಡ ಆ ಅವತರಣಿಕೆ— ಪೌರಾಣಿಕ ಕಥೆ ತೆಗೆದುಕೊಂಡು ಅದನ್ನು ನಾಟಕದ ವಸ್ತುವಾಗಿ ಅಳವಡಿಸಿಕೊಳ್ಳುವವರಿಗೆ ಆ ದಾರ್ಶನಿಕನಿತ್ತ ಸೂಚನೆ— ಈ ಸಂದರ್ಭಕ್ಕಾಗಿಯೇ ಬರೆದಂತೆ ಅಷ್ಟು ಹೊಂದಾಣಿಕೆಯಾಗುತ್ತದೆ.

ಇಂಥ ಆಧಾರ ಪ್ರಮಾಣಗಳ ಉದ್ಧರಣದಲ್ಲಿಯೂ ಡಾ. ಆರ್. ಸಿ. Right ಮತ್ತು Correct ಇರುತ್ತಾರೆ. "ನಾ ಮೂಲಂ ಲಿಖ್ಯತೇ ಕ್ವಚಿತ್" ಎಂಬ ಪಂಥ ಇವರಿಗೂ ಸಲ್ಲುತ್ತದೆ.

ಹರಿಶ್ಚಂದ್ರಕಾವ್ಯದ ನಾಟಕೀಯತೆಯನ್ನು ಕುರಿತು ಡಾ. ರಂ. ಶ್ರೀ. ಮುಗಳಿಯವರು ಬರೆದ ಒಂದು ಪ್ರಬಂಧ ಹಲವು ವರ್ಷಗಳ ಹಿಂದೆಯೇ ನಾನು ಓದಿದ್ದು ನೆನಪು. ಆದರೆ ಇಲ್ಲಿ ಡಾ ಹಿರೇಮಠರು ಈ ನಾಟಕೀಯತೆಯನ್ನು 'ಹರಿಶ್ಚಂದ್ರ ಕಾವ್ಯ'ದಲ್ಲಿ ಮಾತ್ರವಲ್ಲ, ಅವನ ನಾಲ್ಕೂ ಕಾವ್ಯಗಳಲ್ಲಿ ಹಲಕೆಲವು ಅನುಕೂಲ ಸನ್ನಿವೇಶಗಳಲ್ಲಿ ಹೇಗೆ ಒಡೆದೆದ್ದು ಒಡಮೂಡಿದೆ ಎಂಬುದನ್ನು ಪರಿಷ್ಕಾರವಾಗಿ ತೋರಿಸಿಕೊಟ್ಟಿದ್ದಾರೆ. ಸಂಭಾಷಣೆಗಳ ಮುಖಾಂತರ, ದೃಶ್ಯದ ಮೇಲೆ ದೃಶ್ಯ ತೋರಿಸಿ ಆ ಮೂಲಕ ಪಾತ್ರಗಳ ಮಾನವಸ್ವಭಾವವನ್ನು ಅರಳಿಸಿ ತೋರಿಸುವುದೇ ನಾಟಕೀಯತೆಯ ಲಕ್ಷಣವೆಂಬುದನ್ನು ಅವರು ಪ್ರಸ್ತಾಪಿಸಿ ರಾಘವಾಂಕನಿಗೆ ಇಂಥ ಸಂಭಾಷಣೆಗಳೇ ಮುಖ್ಯ ಪ್ರಾಣ. ಕಾವ್ಯದಿಂದ ಕಾವ್ಯಕ್ಕೆ ಅವನ ಈ ನಾಟಕೀಯತೆ ಪ್ರಬಲವಾಗುತ್ತ ನಡೆದಿದೆ. ಸೋಮನಾಥಚರಿತ್ರೆಯಲ್ಲಿಯೇ ಅದರ ಬೇರು. ಅದರ ಪರಿಣತ ಪರಿಪಕ್ವ ಫಲ ಹರಿಶ್ಚಂದ್ರಕಾವ್ಯದಲ್ಲಿ– ಎಂಬುದನ್ನು ಆಯಾ ಕಾವ್ಯದಲ್ಲಿಯ ಸಮರ್ಪಕ ಪ್ರಸಂಗಗಳನ್ನು ಸಮರ್ಥವಾಗಿ ನಿರ್ದೇಶಿಸಿ ಕೃತಾರ್ಥರಾಗಿದ್ದಾರೆ. "ಒಟ್ಟಿನಲ್ಲಿ ನಾಟಕದ ದರ್ಶನದಿಂದ ಸಾಮಾಜಿಕರಿಗೆ ರಸಾನುಭವವಾಗಿ ಚಿತ್ತಶುದ್ಧಿಯಾಗಬೇಕು. ಅನುಭವ ಅರಳಬೇಕು" ಎಂಬುದನ್ನು "ಜನ ಬದುಕಬೇಕು" ಕಾವ್ಯ ಬರೆದ ರಾಘವಾಂಕ ಹೇಗೆ ತನ್ನ ನಾಟ್ಯಪ್ರತಿಭೆಯ ಜಾಗೃತಪ್ರಜ್ಞೆಯಾಗಿ ಕಾಪಾಡಿಕೊಂಡು ಬಂದಿದ್ದನೆಂಬುದನ್ನು ಅವರು ನಿರ್ವಿವಾದವಾಗಿ ನಿದರ್ಶಿಸಿದ್ದಾರೆ.

ಆದರೆ ಇಲ್ಲಿ ಈ ತೌಲನಿಕ ವಿಮರ್ಶೆಯ ತಜ್ಞರಾದ ಡಾ. ಹಿರೇಮಠರು ಹತ್ತನೆಯ ಶತಮಾನದ ಕ್ಷೇಮೇಶ್ವರ ಕವಿಯ "ಚಂಡಕೌಶಿಕ"ವೆಂಬ ಸಂಸ್ಕೃತ ನಾಟಕವನ್ನು ಎತ್ತಿ

ಹೇಳಿದರೂ ಅದರೊಂದಿಗೆ "ಹರಿಶ್ಚಂದ್ರ ಕಾವ್ಯ"ವನ್ನು ತೂಗಿ ನೋಡುವ ಗೋಜಿಗೆ ಹೋಗದಿದ್ದುದೂ ಒಂದು ಸೋಜಿಗ. ರನ್ನನ 'ಗದಾಯುದ್ಧ'ದ ಮೇಲೆ ಭಟ್ಟನಾರಾಯಣನ "ವೇಣಿಸಂಹಾರ"ದ ನಿಬಿಡವಾದ ಛಾಯೆ ಬಿದ್ದಂತೆ, ಕ್ಷೇಮೇಶ್ವರನಿಂದ ಕೇವಲ ಎರಡು ಶತಮಾನಗಳ ಅಂತರದಲ್ಲಿ ಬಾಳಿದ ರಾಘವಾಂಕನ ಕೃತಿಗಳ ವಸ್ತು, ಪಾತ್ರ ಸೃಷ್ಟಿಯ ಮೇಲೆ ಆತನ ಪ್ರಭಾವ ಬಿದ್ದಿರಲಾರದೆಂದು ಹೇಳುವದು ಬಿಗಿಯೇ. ಪರರ ಉಕ್ತಿಗಳ ಅರ್ಥವನ್ನು ಕಳುವುದು ಅಧಮವೆಂದು ನಂಬಿದ ಈ ಕವಿ "ಚಂಡಕೌಶಿಕ"ದಿಂದ ಪ್ರೇರಣೆ ಪಡೆದೂ ಅದನ್ನು ರೀತಿ ಗುಣದಲ್ಲಿ, ರಚನೆಯಲ್ಲಿ, ವಿವರಗಳಲ್ಲಿ ಮೀರಿಯೂ ಇರಬಹುದು. ಆದರೂ ಆ ಕುರಿತು ವಿಮರ್ಶೆಯು ಒಂದೆರಡು ಪರಿಚ್ಛೇದಗಳು ವ್ಯಯವಾಗಿದ್ದರೆ ತಪ್ಪಾಗುತ್ತಿದ್ದಿಲ್ಲ. ಆದರೆ ಹೀಗೆ ಕೈಬಿಟ್ಟ ಲೋಪವನ್ನು ಕೈಗಾರಿಕೆಯ ದೋಷವೆಂದು ಹೇಳುವಂತೆಯೂ ಇಲ್ಲ.

ಈ ಉಭಯಕೃತಿಗಳ ಹೋಲಿಕೆಯ ವಿಚಾರ ಇಲ್ಲಿ ತೋಚಿದ್ದು, ಈ ವಿಮರ್ಶಕರು ತುಂಬ ಪರಿಣಾಮಕಾರಿಯಾಗಿ ಬೇರೊಂದು ಪ್ರಬಂಧದಲ್ಲಿ ಇದೇ ಬಗೆಯ ನಾಟಕ ವಿಮರ್ಶೆಯನ್ನು ತೌಲನಿಕವಾಗಿ ಮಾಡಿದುದನ್ನು ನಾನು ಮೆಚ್ಚಿಕೊಂಡದ್ದರಿಂದ ಅದು ಕಾಲಿದಾಸನ 'ಶಾಕುಂತಲ' ಮತ್ತು ಅಭಿನವ ಕಾಲಿದಾಸ ಶ್ರೀ ಬಸವಪ್ಪ ಶಾಸ್ತ್ರಿಗಳು ಮಾಡಿದ ಅವರ ಕನ್ನಡಾನುವಾದ ಕೃತಿಗಳ ತುಲನಾತ್ಮಕ ವಿಮರ್ಶೆ ("ಸಾಹಿತ್ಯ ಸೃಷ್ಟಿ" ಯಲ್ಲಿ ಎರಡನೆಯ ಪ್ರಬಂಧ). ಒಂದೇ ವಸ್ತುವನ್ನು ಕುರಿತು ಇಬ್ಬರು ಶ್ರೇಷ್ಠ ಕವಿಗಳು ಎರಡು ವಿಭಿನ್ನ ಭಾಷೆಗಳಲ್ಲಿ ಶತಮಾನಗಳ ಅಂತರದಿಂದ ರಚಿಸಿದ ರೂಪಕಗಳು ಬಿಂಬ-ಪ್ರತಿಬಿಂಬರೂಪದಲ್ಲಿ ಇದ್ದರೂ ಸಾದೃಶ್ಯ-ಸಾಧರ್ಮ್ಯಗಳನ್ನು ತುಲನಾತ್ಮಕವಾಗಿ ತೂಗಿ ಹೇಳುವಲ್ಲಿ ಈ ಪ್ರಬಂಧ ಒಂದು ಬೆಲೆಯುಳ್ಳ ಕಾಣಿಕೆ. ಈ ತುಲನೆ ಮತ್ತು ಸಮಾಲೋಚನೆ ಮಾಡಲು ಡಾ. ಹಿರೇಮಠರು ಸರ್ವಥೈವ ಸಮರ್ಥರು. ಏಕೆಂದರೆ ಅವರು ಕನ್ನಡದಷ್ಟೇ ಸಂಸ್ಕೃತದಲ್ಲಿಯೂ ಪಾರಂಗತರು. ಅವರೇ ಒಮ್ಮೆ ನನಗೆ ಹೇಳಿದ್ದುಂಟು : "ನಾನು ಕರ್ನಾಟಕ ಕಾಲೇಜಿನಲ್ಲಿ ಓದುತ್ತಿದ್ದಾಗ ಸಂಸ್ಕೃತದಲ್ಲಿ ಪ್ರಾ. ಆರ್. ವಿ. ಜಹಗೀರದಾರರ ಅಚ್ಚುಮೆಚ್ಚಿನ ವಿದ್ಯಾರ್ಥಿಯಾಗಿದ್ದೆ. ಆಗ ಒಮ್ಮೆ ನನ್ನ ಬರಹವನ್ನು ಮೆಚ್ಚಿಕೊಂಡು ಪ್ರಾ. ಜಹಗೀರದಾರರು ನನ್ನನ್ನು ಅವರ ಸ್ಟಾಫ್ ಕ್ಲಬ್ಬಿಗೆ ಕರೆದೊಯ್ದು ತಮ್ಮ ವಿಭಾಗದ ವರಿಷ್ಠ ಡಾ. ವಿ. ಜಿ. ಭಟ್ಟರ ಎದುರು ನಿಲ್ಲಿಸಿ "ನೋಡಿರಿ. ಈ ಹುಡುಗ, ಲಿಂಗಾಯತ ವಿದ್ಯಾರ್ಥಿ, ಬ್ರಾಹ್ಮಣೇತರ, ಬಡವ. ಆದರೂ ಇವನ ಸಂಸ್ಕೃತ ಪ್ರೌಢಿಮೆ ನೋಡಿ. ಸಂಸ್ಕೃತದಲ್ಲಿ ಉತ್ತಮ ಪ್ರಗತಿ ಸಾಧಿಸಿದ್ದಾನೆ "

ಅಂದು ಗಳಿಸಿದ ಸಂಸ್ಕೃತ ಪರಿಜ್ಞಾನ ಅವರಲ್ಲಿ ಅಚ್ಚಳಿಯದ ಸಂಸ್ಕಾರವಾಗಿ ಉಳಿದು, ಅವರ ಕನ್ನಡಶೈಲಿಗೆ ವಿಶಿಷ್ಟ ಕೆಚ್ಚನ್ನು ಕಾಂತಿಯನ್ನು ಕಟ್ಟುನಿಟ್ಟನ್ನು ಕೊಟ್ಟಿದೆ. ಮಾತ್ರವಲ್ಲ. ವಿಮರ್ಶೆಯಲ್ಲಿಯೂ ಭಾರತೀಯ ಲಕ್ಷಣಗ್ರಂಥಗಳಿಂದಲೇ ಆಧಾರಗಳನ್ನು ಅವರು ಸಲೀಸಾಗಿ ಬಳಸುತ್ತಾರೆ.

ಸಂಸ್ಕೃತ-ಕನ್ನಡ ಶಾಕುಂತಲಗಳ ತುಲನೆ ವಿಶೇಷ ವ್ಯಾಪಕವೂ ಆಳವೂ ಆಗಿಲ್ಲ. ಆದಾಗ್ಯೂ ತನ್ನ ಪರಿಮಿತಿಯಲ್ಲಿ ಅದು ಪರಿಣಾಮಕಾರಿಯಾಗಿದೆ. ನಾಟಕದ ಸಂವಿಧಾನ ಮತ್ತು ಸಂಭಾಷಣೆಗಳ ಮಾರ್ಪಾಟು-ಬೇರ್ಪಾಟುಗಳಲ್ಲಿ ಅವರು ಸೂಕ್ಷ್ಮ ವಿಚಿಕಿತ್ಸೆಗೆ ಇಳಿಯದಿದ್ದರೂ ಉಭಯ ಕವಿಗಳ ಶ್ಲೋಕ-ಪದ್ಯಗಳ ಸರಿ ಮಿಗಿಲಿನ ಸಮೀಕ್ಷೆಯನ್ನು ಸಮೀಚೀನವಾಗಿ ಮಾಡಿದ್ದಾರೆ. ಹಳಗನ್ನಡ ಸಾಹಿತ್ಯದಲ್ಲಿ ಕಾಳಿದಾಸನ ಪ್ರಭಾವ ಕಂಡುಬಂದರೂ ಆಗ 'ಶಾಕುಂತಲ'ದ ಅನುವಾದವಿಲ್ಲದುದನ್ನು ಅವರು ಉಲ್ಲೇಖಿಸಿದ್ದಾರೆ. "ಅದು ಉಪೇಕ್ಷೆಯೋ ಕಾಲ ಮಹಿಮೆಯೋ ಯಾವುದೆಂದು ತಿಳಿಯುವಂತಿಲ್ಲ" ಎಂದಿದ್ದಾರೆ.

ಆದರೆ ಹತ್ತೊಂಬತ್ತನೆಯ ಶತಮಾನದಲ್ಲಿ ಅದೇಕೋ ಒಮ್ಮೆಲೆ ಹತ್ತಾರು ಭಾಷಾಂತರ ರೂಪಾಂತರ ಟೀಕೆಗಳು ಹೊರಬಂದವು (ಇದಕ್ಕೆ ಅಂಥ ಆಗಂತುಕ ಪ್ರೇರಣೆ ಏನೋ!) ಅವುಗಳಲ್ಲಿ ಶ್ರೀ ತುರಮರಿಯವರದೂ ಶ್ರೀ ಬಸವಪ್ಪ ಶಾಸ್ತ್ರಿಗಳದೂ —ಇವೆರಡು ಕನ್ನಡ ಅನುವಾದಗಳು ಕ್ರಮವಾಗಿ ಉತ್ತರ-ದಕ್ಷಿಣ ಕರ್ನಾಟಕಗಳಲ್ಲಿ–ಪ್ರಕಟವಾದ ಮುಖ್ಯ ಅನುವಾದಗಳು. ಮೈಸೂರಿನಲ್ಲಿ ರಾಜಾಶ್ರಯವಿದ್ದು ಮುಂದೆ ಶ್ರೀ ವರದಾಚಾರ್ಯರಂಥ ಶ್ರೇಷ್ಠ ನಟರ ನಾಟಕ ಮಂಡಳಿಯು ರಂಗದಲ್ಲಿ ಜನಪ್ರಿಯಗೊಳಿಸಿದ್ದರಿಂದಾಗಿ ಬಸವಪ್ಪ ಶಾಸ್ತ್ರಿಗಳು "ಅಭಿನವ ಕಾಳಿದಾಸ"ರಾದರು (ಈ ಅನುಕೂಲ ಶ್ರೀ ತುರಮರಿಯವರಿಗೆ ಇದ್ದಿಲ್ಲ !)

ಕಾಳಿದಾಸನ ಧ್ವನಿಪೂರ್ಣ ಕಾವ್ಯವನ್ನು ಕನ್ನಡಿಸಲು ಅಪ್ರತಿಮ ಪ್ರತಿಭೆ ಅವಶ್ಯ. ಅಂಥ ಕಾವ್ಯ ಭಾಷಾಂತರಕ್ಕೆ ಅತೀತವೆಂಬ ಭಯದಿಂದಲೋ ಏನೋ ಅನೇಕ ಶತಮಾನಗಳ ತನಕವೂ ಕನ್ನಡ ಕವಿಗಳು ಆ ಕಾರ್ಯಕ್ಕೆ ಕೈಹಾಕಿರಲಿಕ್ಕಿಲ್ಲವೆಂದು ಡಾ. ಹಿರೇಮಠರದೊಂದು ಊಹೆ. ಆದರೆ ಅದೇಕೋ ಸಮಂಜಸವೆನಿಸುವದಿಲ್ಲ. ಒಟ್ಟಾರೆ ನಮ್ಮ ಹಳೆಯ ಕವಿಗಳ ಪ್ರತಿಭೆ ನಾಟಕಗಳ ಅನುವಾದಕ್ಕೆ– ಪ್ರಯೋಗಪ್ರಧಾನ ದೃಶ್ಯಕಾವ್ಯಗಳ ಅನುವಾದಕ್ಕೇ ಪ್ರತಿಕೂಲವಿದ್ದಿರಬೇಕು. ('ರತ್ನಾವಲಿ'ಯನ್ನು ಕನ್ನಡಿಸಿದ ಸಿಂಗರಾರ್ಯನೂ ಮೈಸೂರ ಅರಮನೆಯ ಮಂತ್ರಿ ಪರಿವಾರದವನೇ ಆಗಿದ್ದನು— ಬಸವಪ್ಪ ಶಾಸ್ತ್ರಿಗಳಂತೆ ಅವನೂ ಅಲ್ಲಿಯ ಒಬ್ಬ ಆಸ್ಥಾನ ವಿದ್ವಾನ !).

ತಮ್ಮ ಪ್ರಬಂಧದಲ್ಲಿ, ಶಾಸ್ತ್ರಿಗಳ ಕವಿಹೃದಯವನ್ನರಿಯುವ ಶಕ್ತಿ, ಉಭಯಭಾಷಾ ಪ್ರಭುತ್ವ, ಭಾಷಾಂತರದ ಕಲೆ ಇವುಗಳನ್ನು ಪರಿಶೀಲಿಸುವುದೇ ಇವರ ಗುರಿಯಾಗಿದೆ. ಮೂಲದ ಸ್ಫೂರ್ತಿ ಕೆಡದಂತೆ ಶಾಸ್ತ್ರಿಗಳು ಕಾಳಿದಾಸನ ಶ್ಲೋಕಗಳನ್ನು ಹೇಗೆ ಮಾರ್ಮಿಕವಾಗಿ ಕನ್ನಡಕ್ಕೆ ಇಳಿಸಿರುವರೆಂದು ಅನೇಕ ಸಮ ಶ್ಲೋಕ ಉದಾಹರಣೆಗಳಿಂದ ಅವರು ತೋರಿಸಿದ್ದಾರೆ. ಮಿತಾಕ್ಷರಿ ಕಾಳಿದಾಸ ಕಿರಿದರಲ್ಲಿ ಹಿರಿದನ್ನು ಹೇಳುವ ನುಡಿಗಳನ್ನು ಮೂಲಕ್ಕಿಂತಲೂ ಕಡಿಮೆ ಶಬ್ದಗಳಲ್ಲಿ ಕನ್ನಡದ ಸೊಲ್ಲಿಗೆ ಸಲ್ಲುವಂತೆ ಶಾಸ್ತ್ರಿಗಳು ಬಿಡ

ಮೂಡಿಸಿದ ಪರಿಯು ಸೊಗಸನ್ನು ಹಲವಾರು ಉದಾಹರಣೆಗಳಿಂದ ಅವರು ಸಿದ್ಧಪಡಿಸಿದ್ದಾರೆ. ಕೆಲವೆಡೆ ಕಾಲಿದಾಸನ ಸ್ನಿಗ್ಧ ಗಂಭೀರಶೈಲಿಯನ್ನು ಕನ್ನಡಿಸುವಲ್ಲಿ ಶಾಸ್ತ್ರಿಗಳಿಗೆ ಮೂಲಕ್ಕಿಂತ ಹೆಚ್ಚು ಶಬ್ದಗಳನ್ನು ಬಳಸುವ ಪ್ರಸಂಗ ಬಂದದ್ದನ್ನು ಅವರು ನಿರ್ಭಿಡೆಯಿಂದ ಕಾಣಿಸಿದ್ದಾರೆ

ಈ ಬಗೆಯ ಸ್ಪಷ್ಟೋಕ್ತಿ ಈ ವಿಮರ್ಶಕರ ವಾದಸರಣಿಯ ಒಂದು ಭೂಷಣ. ರಾಘವಾಂಕನ ಸೋಮನಾಥಚಾರಿತ್ರದಲ್ಲಿಯ ರಸೋತ್ಕಟಸ್ಥಾನಗಳನ್ನು ವರ್ಣಿಸುವಾಗಲೇ ಅವರು ಅಲ್ಲಿಯ ಔಚಿತ್ಯಗೆಟ್ಟ ವರ್ಣನೆಗಳ ಬಗೆಗೆ ಆಕ್ಷೇಪಿಸಿ ಹರಿಹರ ತನ್ನ ಈ ಸೋದರಳಿಯನ ಹಲ್ಲು ಮುರಿದಿದ್ದರೆ ಹರಿಶ್ಚಂದ್ರಕಾವ್ಯಕ್ಕಿಂತ ಇಂಥ ಔಚಿತ್ಯಗೆಟ್ಟ ಕೆಲಸಕ್ಕಾಗಿಯೇ ಇರಬೇಕಿತ್ತು ---ಎಂದು ದಿಟ್ಟನುಡಿಯಲ್ಲಿ ಟೀಕಿಸಿದ್ದುಂಟು.

ಹಾಗೆಯೇ ಬಸವಪ್ಪಶಾಸ್ತ್ರಿಗಳ ಪದ್ಯಗಳಲ್ಲಿ ಕಾಣುವ ಮೆರಗು ಅವರ ಗದ್ಯದಲ್ಲಿ ತೋರದಾಗಿದೆಯೆಂಬುದನ್ನು ವಿಮರ್ಶಕರು ಒತ್ತಿಹೇಳಲು ಹಿಂಜರಿಯಲಿಲ್ಲ. ಆದರೆ ಈ ದೋಷಕ್ಕೆ ಅಂದು ಕನ್ನಡ ಗದ್ಯದ ಬೆಳವಣಿಗೆ ಆಗದಿದ್ದುದೇ ಕಾರಣವೆಂದೂ ಸಮಾಧಾನ ಹೇಳಿದ್ದಾರೆ. ಆ ಕಾಲದ ಪ್ರಯೋಗಾವಸ್ಥೆಯಲ್ಲಿಯ ಗದ್ಯವೇ ಈ ನಾಟಕದಲ್ಲಿ ಕಂಡುಬರುವುದೆಂದು ಅವರ ಸ್ಪಷ್ಟೀಕರಣ. ಇದರಿಂದ ಒಂದು ಮಾತು ಸ್ಪಷ್ಟವಾಗುತ್ತದೆ : ಡಾ. ಹಿರೇಮಠರಿಂದ ಅವರು ವಿಮರ್ಶಿಸಲು ಎತ್ತಿಕೊಂಡ ಕವಿಗೂ ಕೃತಿಗೂ ಅನ್ಯಾಯವಾಗುವ ಸಂಭವ ಕಡಿಮೆ. ತಮ್ಮ ಅಭಿಪ್ರಾಯಗಳಲ್ಲಿ ಅವರು ಶಕ್ಯವಿದ್ದಷ್ಟು ಸಮತೋಲವನ್ನೇ ಸಮಂಜಸ ಧೋರಣೆಯನ್ನೇ ಕಾಪಾಡಿಕೊಳ್ಳುತ್ತಾರೆ.

ಡಾ. ಹಿರೇಮಠರು ಶ್ರೀ ತುರಮರಿಯವರ 'ಶಾಕುಂತಲ'ವನ್ನು ಶಾಸ್ತ್ರಿಗಳ ಕೃತಿ ಯೊಂದಿಗೆ ತುಲನಾತ್ಮಕವಾಗಿ ಚರ್ಚಿಸಲು ಹೊರಟರೆ, ಶ್ರೀ ತುರಮರಿಯವರು ತನ್ನಂಥ ಕನ್ನಡ ಭಾಷಾಂತರ ಬೇರೊಂದು ಬಂದರೆ "ಕವಿತೆಗೆ ಗಂಡುಮೆಟ್ಟು ಕರುನಾಟಕ ಬಿಟ್ಟು ತೆರಳ್ದು ಪೋಗುವೆಂ" ಎಂದು ಪಣತೊಟ್ಟು ಬರೆಯಲು ಹೊರಟವರು. ಆದರೆ ಬಸವಪ್ಪಶಾಸ್ತ್ರಿಗಳ 'ಶಾಕುಂತಲ' ಅದನ್ನು 'ಎಲ್ಲಂದದಿಂದಲೂ ಮೀರಿಸುವಂತೆ' ಅನುವಾದಗೊಂಡಿದೆ ಎಂದು ಡಾ. ಹಿರೇಮಠರು ಒಪ್ಪಿಕೊಂಡಿದ್ದಾರೆ. ಅಂದಾಗ ಈ ತೀರ್ಮಾನವನ್ನು ಸಮರ್ಥಿಸುವಂತೆ ತುರಮರಿಯವರ ಅನುವಾದವನ್ನೂ ಶಾಸ್ತ್ರಿಗಳ ಅನುವಾದದೊಂದಿಗೆ ಪರಾಮರ್ಶಿಸಬಹುದಾಗಿತ್ತು.

ಆದರೆ ಹಾಗೆ ಆಗಲಿಲ್ಲವೇಕೆ ? ಇದಕ್ಕೆ ನನ್ನದೊಂದು ಊಹೆ : ಡಾ. ಹಿರೇಮಠರಂಥ ಕಾರ್ಯತತ್ಪರ ಪ್ರಾಧ್ಯಾಪಕರ ಲೇಖನ ಹೆಚ್ಚಾಗಿ ಅವರ ಕಾರ್ಯಕ್ಷೇತ್ರಕ್ಕೆ ವಿಧೇಯ. ಅವರ ಪಾಠ-ಪ್ರವಚನಗಳ ಅಗತ್ಯ-ಸಾಂಗತ್ಯದಿಂದಾಗಿ ನೈಮಿತ್ತಿಕವಾಗಿ ಇಂಥ ವಿಮರ್ಶಾತ್ಮಕ ಬರಹ, ಇಂಥ ವಿದ್ವಾಂಸರಿಂದ ಘಟಿಸುತ್ತದೆ. ಬಸವಪ್ಪಶಾಸ್ತ್ರಿಗಳ 'ಶಾಕುಂತಲ'

ದಂತೆ ತುರಮುರಿಯುವರ ಶಾಕುಂತಲವೂ ಪಠ್ಯಪುಸ್ತಕವಾಗಿರುವ ಸಂಭವ ಕಡಿಮೆ. ಕಾಲಿದಾಸನ ಮೂಲಕೃತಿ ಯಾವಾಗಲೂ ಪಠ್ಯವಾಗಿ ಇರಬಹುದಾದದ್ದೇ. ಆದ್ದರಿಂದ ಈ ತುಲನಾತ್ಮಕ ವಿಮರ್ಶೆ ತ್ರಿಕೋಣರೂಪ ತಾಳಿರಲಿಕ್ಕಿಲ್ಲ.

ಕಾಲಿದಾಸನ 'ಋತುಸಂಹಾರ'ದ ಅಪರ ವಿಮರ್ಶೆ ಉತ್ಕೃಷ್ಟವಾಗಿ ಬಂದಿದೆ. ಪಂಡಿತ ಲಿಜಮಿಧುರಕುಲರ ಒಂದು ವ್ಯಾಖ್ಯಾನದ ಅವತರಣಿಕೆಯೊಂದಿಗೆ ಆರಂಭವಾಗುವ ಈ ಪ್ರಬಂಧ ಜಾನ್‌ಸನ್‌ನ ಪ್ರತಿಕೂಲ ಟೀಕೆ, ಅರವಿಂದ ಘೋಷರ ಪ್ರಶಂಸಾತ್ಮಕ ಟಿಪ್ಪಣಿಗಳಿಂದೊಡಗೂಡಿದ ಆಂಗ್ಲಕವಿ ಥಾಮ್ಸನ್‌ನ 'ಸೀಝನ್ಸ್' ಕಾವ್ಯದೊಂದಿಗೆ 'ಋತುಸಂಹಾರ'ವನ್ನು ಹೋಲಿಸಿ ಕಾಲಿದಾಸನ ಅಸಂದಿಗ್ಧ ಹಿರಿಮೆಯನ್ನು ಡಾ. ಹಿರೇಮಠರು ಸಪ್ರಮಾಣ ಪ್ರತಿಪಾದಿಸಿದ್ದಾರೆ. ವಿಪುಲ ಉದಾಹರಣೆಗಳೊಂದಿಗೆ ಕಾಲಿದಾಸನ ಕಾವ್ಯ ಸೌಂದರ್ಯವನ್ನು ಸವಿಯಲು ಹೊರಟಾಗಲೇ ಈ ಕೃತಿಯ ಬಗೆಗೆ ಅವರು ತೀರ ತೆರೆದ ಕಣ್ಣಿನಿಂದಲೇ ನೋಡಿ ಬರೆಯುತ್ತಿದ್ದುದು ಕಾಣುತ್ತದೆ. "ಋತುಸಂಹಾರ" ಈ ಕವಿಯ ಕೃತಿಯು ಹೌದೇ ? ಎಂಬ ಶಂಕೆಯೊಂದಿಗೆ ಈ ರಸಪರಿಚಯ ಆರಂಭವಾಗುತ್ತದೆ. ಅದು ಹೌದೆಂದು ಒಪ್ಪಿಕೊಂಡೇ ಅದು ಮುಂದರಿಯುತ್ತದೆ.

ಕಾಲಿದಾಸನನ್ನು, ಅವನ ಈ ಖಂಡಕಾವ್ಯವನ್ನು ಮೆಚ್ಚಿಕೊಂಡೂ ವಿಮರ್ಶಕರು ನಿಚ್ಚಳವಾಗಿ ಒಪ್ಪಿಕೊಳ್ಳುತ್ತಾರೆ— ಆರಂಭದ ಗ್ರೀಷ್ಮವರ್ಣನೆಯಲ್ಲಿ ತುಂಬಿದ ಸ್ಫೂರ್ತಿ ಕಲ್ಪನೆ ಚಿತ್ರಕಶಕ್ತಿ ಮುಂತಾದ ಕಾವ್ಯಗುಣಗಳ ಅಸದೃಶ ಮಹೋನ್ನತ ರೀತಿಯು ಕೊನೆಯ ವರೆಗೂ ಕಾದುಬರುವದಿಲ್ಲ: ಕವಿಯ ಕಾವ್ಯಶಕ್ತಿ ಕ್ರಮೇಣ ಕಡಿಮೆ ಆಗಿದೆ. ಆದರೂ ಗಾಂಭೀರ್ಯ ಔಚಿತ್ಯ ಏಕಸೂತ್ರತೆ ಮತ್ತು ಭಾವನೆಗಳ ನಿಯಂತ್ರಣ ಮುಂದೆ ಹೆಚ್ಚಾಗಿದೆ ಎಂದೂ ಅವರು ಒಪ್ಪಿಕೊಳ್ಳುತ್ತಾರೆ. ಪ್ರಾರಂಭದ ಕಾವ್ಯಶಕ್ತಿಯಿಂದ ಮುಗಿತಾಯ ಮಾಡಬೇಕೆಂದು ಹವಣಿಸಿದರೂ ಕವಿಗೆ ಅದು ಸಾಧಿಸಲಿಲ್ಲ ಎನ್ನುತ್ತಾರೆ.

ಹೀಗೆ ಕಾಲಿದಾಸನ ಬಗೆಗೆ ಎಷ್ಟೇ ಪ್ರೀತಿ ಇದ್ದರೂ ಕುರುಡು ಹೆಮ್ಮೆ ಇಲ್ಲದೆ ಅವರು ಸ್ಪಷ್ಟವಾಗಿಯೇ ಹೇಳುತ್ತಾರೆ : "ಮಾನವಜೀವನ ಪ್ರಕೃತಿಗಳ ಸಂಬಂಧ ಕಾಲಿದಾಸನಿಗೆ ತಿಳಿದಿದ್ದರೂ ಶೇಕ್ಸಪಿಯರನಂತೆ ಆತನಿಗೂ ಪ್ರಕೃತಿಯು ಭಾವನೆ ಬುದ್ಧಿಗಳಿಗೆ ಮಾತ್ರ ಪ್ರಚೋದಕಶಕ್ತಿಯಾಗಿದೆ. ಇಂದ್ರಜಾಲಶಕ್ತಿಯಿಂದ ಪ್ರಕೃತಿಯನ್ನು ನೋಡುವ ವಾಲ್ಮೀಕಿಯ ಒಳಗಣ್ಣಾಗಲೀ, ಅಧ್ಯಾತ್ಮಿಕ ಅಧಿಷ್ಠಾನವೆಂದು ಕಾಣುವ ವರ್ಡ್ಸ್‌ವರ್ಥನ ಅಂತರ್ದೃಷ್ಟಿಯಾಗಲೀ ಕಾಲಿದಾಸನಿಗೆ ಇಲ್ಲ. ಇವನ ವರ್ಣನೆ ಪ್ರಕೃತಿಯ ಒಳ ಸೇರುತ್ತದೆ. ಆದರೂ ಅಷ್ಟು ದೂರ ಹೋಗಿ ತೀರ ಮುಟ್ಟುವದಿಲ್ಲ ಎಂದು ಖಂಡಿತವಾದಿಯಾಗಿ ಸಾರುವಾಗ ಈ ಕವಿವಿಮರ್ಶಕರು ನಿಜವಾಗಿಯೂ ಅಭಿನಂದನೀಯ ಮನೋಧೈರ್ಯವನ್ನು ವ್ಯಕ್ತಪಡಿಸಿದ್ದಾರೆ. ಕಾಲಿದಾಸನನ್ನು ಕುರಿತು ಇಂಥ ಮಾತು ಕನ್ನಡವಿಮರ್ಶಾಪ್ರಪಂಚದಲ್ಲಿ ಇಷ್ಟು ನಿಚ್ಚಳವಾಗಿ ನಿಶ್ಚಯವಾಗಿ ಬಂದದ್ದು — ಅದೂ

ಮಹರ್ಷಿ ಅರವಿಂದರಂತೆಯೇ ಆ ಕವಿಕುಲಗುರುವನ್ನು ಮನಸಾ ಮೆಚ್ಚಿಕೊಂಡವರಿಂದ ಪ್ರಕಟವಾದದ್ದು ಇದೇ ಮೊದಲು ಎಂದರೂ ತಪ್ಪಾಗಲಾರದು.

ವಿಮರ್ಶೆಯ ಕ್ಷೇತ್ರ ಕಾವ್ಯವಿರಲಿ ತತ್ವಜ್ಞಾನವಿರಲಿ ಡಾ. ಹಿರೇಮಠರು ಅದೇ ಏಕಾಗ್ರ ದೃಷ್ಟಿ ಸಮಗ್ರಧೋರಣೆಯ ಸಮನ್ವಯವನ್ನು ತಪ್ಪದೇ ಸಾಧಿಸುತ್ತಾರೆ. ಇದಕ್ಕೆ ಅವರು ಬರೆದ "ಹಿಂದೂ ಧರ್ಮದಲ್ಲಿ ಕರ್ಮದ ಕಲ್ಪನೆ" ಮತ್ತು "ಕರ್ಮಯೋಗ" ಇವೆರಡು ಲೇಖನಗಳೇ ಸಾಕ್ಷಿ (ಸಾಹಿತ್ಯ ಸಂಸ್ಕೃತಿ ೫, ೬ ಪ್ರಬಂಧಗಳು). ವಿಶಾಲ ಉನ್ನತಪೀಠದ ಮೇಲೆ ಸರ್ವಾಂಗಸುಂದರ ಪ್ರತಿಮಾಶಿಲ್ಪ ನಿಲ್ಲುವಂತೆ ಅವರ ಎಲ್ಲ ಪ್ರಬಂಧಗಳಲ್ಲಿಯಂತೆ ಇಲ್ಲಿಯೂ ಪೀಠಿಕೆಯಿಂದ ಪ್ರಮೇಯ ಪ್ರತಿಪಾದನೆಗೆ ಸುಸಂಗತ ಪ್ರಸ್ತಾಪವೆಸಗಲಾಗಿದೆ. ಕರ್ಮಕಲ್ಪನೆಯ ಮೀಮಾಂಸೆಯ ಆನುಪೂರ್ವಿಯಾಗಿ ಅವರು ನೀಡಿದ ಪ್ರಚಲಿತ ಧರ್ಮಗ್ಲಾನಿಯ ಚಿತ್ರಣ ಸಾಕಷ್ಟು ಪ್ರಭಾವಿಯಾಗಿದೆ. ನಮ್ಮ ಧರ್ಮದಲ್ಲಿಯ ಕರ್ಮದ Concept, ಅದರ ವಿಕಾಸ, ವಿಪರ್ಯಾಸ ಮತ್ತು ಇತ್ಯರ್ಥಗಳನ್ನು ತುಂಬ ಅಧಿಕಾರವಾಣಿಯಿಂದ ವಿಮರ್ಶಕರು ಮಾಡಿದ್ದಾರೆ. ಕರ್ಮಸಿದ್ಧಾಂತದ ಬಗೆಗೆ ಜನಸಾಮಾನ್ಯರಲ್ಲಿ ತಪ್ಪು ತಿಳುವಳಿಕೆ ಹೇಗೆ ಉಂಟಾಯಿತು ? ವ್ಯಕ್ತಿ ಕರ್ಮದ ಕೈಗೊಂಬೆ, ವ್ಯಕ್ತಿಗೆ ಆತ್ಮಸ್ವಾತಂತ್ರ್ಯವಿಲ್ಲ, ಭಕ್ತಿಯೊಂದೇ ಇದರಿಂದ ಪಾರಾಗುವ ಮಾರ್ಗ– ಎಂಬ ನಿರಾಶೆ ನಿರ್ವಿಣ್ಣತೆಯ ಭಾವನೆಯೂ ವಿಚಾರಪ್ರಣಾಲಿಯೂ ರೂಢವಾಯಿತು.

"ಮಾನವನ ಕ್ರಿಯೆಗೆ ತಪ್ಪದೇ ಪರಿಣಾಮವುಂಟೆಂದು ಮಾತ್ರ ಕರ್ಮವಾದವು ವಿವರಿಸುತ್ತದೆ. ಆದರೆ ಮಾನವನ ಇಂದಿನ ನಡೆವಳಿ ಜೀವನಕ್ರಮ ಹೀಗೆಯೇ ಇರಬೇಕೆಂದು ಕರ್ಮ ನಿರ್ಧರಿಸುವದಿಲ್ಲ. ಇಲ್ಲಿಯೇ ಜನಸಾಮಾನ್ಯರಿಗೆ ತಪ್ಪು ತಿಳುವಳಿಕೆಯಾಗಿದೆ." ಎಂದು ಡಾಕ್ಟರರು ಬೆರಳಿಟ್ಟು ತೋರಿಸಿದ್ದಾರೆ. "ಇಂತಹ ಕರ್ಮಕ್ಕೆ ಇದು ಕಟ್ಟಿಟ್ಟ ಫಲ ಎಂದು ಕರ್ಮವಾದ ಹೇಳಿದ ಮಾತ್ರಕ್ಕೆ ಅದು ವ್ಯಕ್ತಿಯ ಕ್ರಿಯೆ ಹೀಗೆಯೇ ಸಾಗಬೇಕೆಂದು ಕಟ್ಟನ್ನು ಹಾಕುತ್ತದೆಂದು ಹೇಳಿದಂತೆ ಆಗುವದಿಲ್ಲ." "ಕರ್ಮಫಲವನ್ನು ಅನುಭೋಗಿಸುವದೂ ತನ್ನ ಕ್ರಿಯೆಯ ರೀತಿನೀತಿಗಳನ್ನು ನಿರ್ಧರಿಸಿಕೊಳ್ಳುವದೂ ಬೇರೆಯೇ."– ಈ ಸೂಕ್ಷ್ಮವನ್ನು ಎತ್ತಿತೋರಿಸಿ ವಿಮರ್ಶಕರು "ಕರ್ಮಣೋ ಗಹನಾಗತಿಃ" ಎಂಬ ಮಾತಿನ ಹುದುವಿನಿಂದ ದಿಗಿಲಿನಿಂದ ನಮ್ಮನ್ನು ಬಿಡಿಸಿ ಮೇಲಕ್ಕೆ ಎತ್ತಿದ್ದಾರೆ. ಭಾರತದಲ್ಲಿ ಉದಯವಾದ ಎಲ್ಲ ಧರ್ಮಗಳಲ್ಲಿಯೂ ಕರ್ಮದ ವಿಚಾರ ಕೇಂದ್ರೀಯವಾಗಿದ್ದರಿಂದ, ಹೊಸಯುಗದಲ್ಲಿ ಹಳೆಯ ಧರ್ಮವಿಚಾರಗಳ ಪುನರ್ವಿಮರ್ಶೆಯಾಗದೆ ನಮ್ಮ ಜೀವನಕ್ಕೆ ಪ್ರಗತಿಯಿಲ್ಲ. ಕರ್ಮದ ನೈಜಕಲ್ಪನೆಯಾಗುವ ವರೆಗೂ ಜನಜೀವನದ ಉದ್ಧಾರವಾಗುವಂತಿಲ್ಲ. ಆದ್ದರಿಂದ ಈ ಕುರಿತು ಎಲ್ಲರೂ ಹೆಚ್ಚು ವಿಚಾರಿಸಬೇಕೆಂದು ಡಾ. ಹಿರೇಮಠರು ಬಿನ್ನವಿಸಿಕೊಂಡಿದ್ದಾರೆ. ತಮ್ಮ ಎಂದಿನ ಕೌಶಲ್ಯದಿಂದ ಅವರು ಲೇಖನದ ಕೊನೆಗೆ ಗುರುದೇವ

ರವೀಂದ್ರರ ಈ ಒಂದು ಉಕ್ತಿಯನ್ನು ಸೂಕ್ತವಾಗಿ ಉದಾಹರಿಸಿದ್ದಾರೆ : " Every religion that begins as a liberating agency ends as a vast prison-house ".

ಕರ್ಮಕಲ್ಪನೆಯ ಮೀಮಾಂಸೆಯಿಂದ ಡಾ. ಹಿರೇಮಠರು ಭಗವದ್ಗೀತೆಯ 'ಕರ್ಮ-ಯೋಗ'ಕ್ಕೆ ಬಂದಿದ್ದಾರೆ ( ಆದರೆ ಪುಸ್ತಕದಲ್ಲಿ ಕ್ರಮ ಬದಲಾಗಿದೆ ! ). ಈ ಲೇಖನ ಒಳ್ಳೆಯ ಆವೇಶದಿಂದ ನಾಟಕೀಯವಾಗಿಯೇ ಆರಂಭವಾಗುತ್ತದೆ. ಕರ್ಮಯೋಗವನ್ನು ಅದರ ಉಪನಿಷತ್ ಮೂಲದಿಂದಲೇ ಲೇಖಕರು ವ್ಯಾಖ್ಯಾನಿಸುತ್ತಾರೆ. ಭಗವದ್ಗೀತೆಯಲ್ಲಿಯ ಕರ್ಮಯೋಗದ ಇಷ್ಟು ಸಂಗ್ರಹವಾದ ವಿವರಣೆ ನಾನು ಇದುವರೆಗೆ ಬೇರೆಡೆಗೆ ಕಂಡಿಲ್ಲ. ಸಮಗ್ರ ವಿವೇಚನೆಯಲ್ಲಿ ಈ ವಿದ್ವಾನ್ ಲೇಖಕರು ಗೀತೆಯ ತತ್ತ್ವ ಪರಿಭಾಷೆಯ ಮೇಲೆ ಉತ್ತಮ ಹಿಡಿತವನ್ನು ಕಾಣಿಸಿದ್ದು ಗೀತೋಕ್ತವಾದ ಕರ್ಮದ ವ್ಯಾಪ್ತಿ, ಸ್ವರೂಪ, ಯೋಗದ ವಿವೇಚನೆ - ಇದೆಲ್ಲವನ್ನು ಆಡಕವಾಗಿ ಅಷ್ಟೇ ಸುಗಮವಾಗಿ ನಿರೂಪಿಸಿದ್ದಾರೆ. ಇದಕ್ಕೆ ಬೌದ್ಧಧರ್ಮದ ವಚನಗಳಿಂದಲೂ ಉಚಿತ ಪುಷ್ಟಿ ತುಂಬಿದ್ದಾರೆ. ಕರ್ಮಫಲತ್ಯಾಗ, ಕೃಷ್ಣಾರ್ಪಣ ಸ್ಥಿತಪ್ರಜ್ಞತೆ, ಬ್ರಾಹ್ಮೀಸ್ಥಿತಿ— ಎಲ್ಲವನ್ನೂ ಅವರು ಕ್ರೋಢೀಕರಿಸಿ ಈ ಒಂದು ಪುಟ್ಟ ಲೇಖನದಲ್ಲಿ ಭಟ್ಟಿ ಇಳಿಸಿದ್ದಾರೆ. ಭಗವದ್ಗೀತೆಯ ಸಾರಸರ್ವಸ್ವವನ್ನೇ ಅವರು ಇಲ್ಲಿ ಹಿತಮಿತವಾದ "ಸುಲಿದ ಬಾಳೆಯಹಣ್ಣಿನಂದದಿ" ರೀತಿಯಾಗಿ ತಿಳಿಸಿ ಹೇಳಿದ್ದಾರೆ. ತತ್ತ್ವ ಬೋಧನೆಯ ಒಂದು ಉತ್ತಮ ಮಾದರಿಯಾಗಿ ಈ ಲೇಖನ ಎಂದಿಗೂ ನಿಲ್ಲಬಲ್ಲ ಕೃತಿ. ಇದೇ ಸಮನ್ವಯದ ಸಮೀಕ್ಷಾ ಪ್ರತಿಭೆ, ಅವರು ಪಲ್ಲವರ ಶಿಲ್ಪದ ಬಗೆಗೆ ಬರೆದ ಲೇಖದಲ್ಲಿಯೂ ಪ್ರಸನ್ನಶೈಲಿಯಲ್ಲಿ ಬೆಳಗಿದೆ. ಉತ್ತರದಿಂದ ದಕ್ಷಿಣಕ್ಕೆ ಬಂದ ಈ "ಪಲ್ಲವ"ರ ಕಾಲವೇ ಭಕ್ತಿಪಂಥಗಳ ಅಭ್ಯುದಯದ ಯುಗವೆಂಬುದನ್ನು ವಿವರಿಸಿ ಲೇಖಕರು ಅವರ ಕಾಲದ ವಾಸ್ತು - ಮೂರ್ತಿಶಿಲ್ಪಗಳ ಅವಶೇಷಗಳ ಪರಾಮರ್ಶೆ, ಮಾಮಲ್ಲಪುರಂ, ಅಮರಾವತಿ, ಬಾದಾಮಿ ಮುಂತಾದ ಕಡೆಯ ಮಾದರಿಗಳ ವರ್ಣನೆಯೊಂದಿಗೆ ಚೆನ್ನಾಗಿಯೇ ಮನವರಿಕೆ ಮಾಡಿಕೊಟ್ಟಿದ್ದಾರೆ.

"ಕಲಾದೃಷ್ಟಿಯಿಂದ ಪಲ್ಲವರ ಶಿಲ್ಪ ಪರಿಪೂರ್ಣಸ್ಥಿತಿಯನ್ನು ಮುಟ್ಟಿದೆಯೆಂದು ಹೇಳಲು ಬರುವಂತಿಲ್ಲ." ಆದರೆ "ಕಲೆಯು ಜನಾಂಗದ ಆಶೆ-ಆಕಾಂಕ್ಷೆ-ಆದರ್ಶಗಳ ಮೂರ್ತಸ್ವರೂಪ" (ಎಂದು ಹೇಳುವಲ್ಲಿ ಈ ವಿಮರ್ಶಕರ ಜಾಗೃತ ತಾಟಸ್ಥ್ಯ ಸೂಚಿತವಾಗುತ್ತದೆ ). "ಪಲ್ಲವರ ಶಿಲ್ಪವನ್ನು ಸೂಕ್ಷ್ಮದೃಷ್ಟಿಯಿಂದ ಅವಲೋಕಿಸಿದರೆ ಆರಂಭದ ಜನತೆಯ ಆದರ್ಶ ಸ್ಪಷ್ಟವಾಗಿ ಕಂಡುಬರುತ್ತದೆ" ಎಂದು ಆ ಕಾಲದ ಗುಹಾ ಮಂದಿರಗಳಿಂದ "ಅವರ ಜೀವನದ ಆದರ್ಶವೇ ಬೆಟ್ಟದಷ್ಟು ದೊಡ್ಡದಾಗಿರಬಹುದೆ"ಂದು ಲೇಖಕರು ಊಹಿಸಿದ್ದಾರೆ. "ಭವ್ಯತೆಯಲ್ಲಿ ಜಗವನ್ನು ಕಾಣುವ ಕಣ್ಣು ಆ ಕಾಲದ ಶಿಲ್ಪಗಳದು". ಇದಕ್ಕೆ ಕಾರಣ ಆ ಕಾಲದ ಜನರ ಉತ್ಕಟಭಕ್ತಿ ಎಂಬ ತೀರ್ಮಾನಕ್ಕೆ ಅವರು ನೇರವಾಗಿ ಬಂದಿದ್ದಾರೆ.

ಈ ಬರಹದ ಪುಟ್ಟ ಪರಿಮಿತಿಯಲ್ಲಿಯೂ ಲೇಖಕರ ತೌಲನಿಕದೃಷ್ಟಿ ಕೆಲಸ ಮಾಡಿದೆ. ಪ್ರಸಿದ್ಧ ಇತಿಹಾಸಕಾರ ಹಾವೆಲ್ಲರ ಆಧಾರ ನೀಡಿ ಈ ಏಳನೆಯ ಶತಮಾನದ ಬೆಟ್ಟದ ಗವಿಗಳ ಗುಡಿಗಳ ಭವ್ಯಶಿಲ್ಪ ಗ್ರೀಸ ತತ್ಸಮಕೃತಿಗಳನ್ನು ಸ್ಪರ್ಧಿಸುವದೆಂದು ಹೇಳಿ. ಈ ಶಿಲ್ಪಕ್ಕೆ ಇಜಿಪ್ತ ಪರ್ಶಿಯಾಗಳಲ್ಲಿಯ ಅಂಥ ಶಿಲ್ಪ ಮೂಲಪ್ರೇರಣೆ ಯೆಂಬುದಕ್ಕೆ ಶ್ರೀ ಬ್ಯಾನರ್ಜಿಯವರ ದಾಖಲೆಯನ್ನು ಕೊಡಲು ಮರೆತಿಲ್ಲ.

ಹೀಗೆ ಡಾ. ಹಿರೇಮಠರ ಯಾವದೇ ವಿಮರ್ಶಾತ್ಮಕ ಬರಹಕ್ಕೆ ಊಹೆಯೊಂದೇ ಬಲವಲ್ಲ. ಅದಕ್ಕೆ ಅವಷ್ಟಂಭಕವಾಗಿ ಅವರು ಅನೇಕಾನೇಕ ವ್ಯಾಪಕವೂ ಸಮರ್ಪಕವೂ ಸಯುಕ್ತಿಕವೂ ಆದ ಆಧಾರಪ್ರಮಾಣಗಳನ್ನು ವಿಭಿನ್ನಮೂಲಗಳಿಂದ ಕೊಡಲು ತಪ್ಪುವದಿಲ್ಲ. ಇದಕ್ಕೆ ಒಂದು ಒಳ್ಳೆಯ ಉದಾಹರಣೆ : ಅವರು ವೀರೇಶಚರಿತೆಯ ಹಿನ್ನೆಲೆಯನ್ನು ವಿವರಿಸಿದ್ದು. ದಕ್ಷಾಧ್ವರಧ್ವಂಸದ ಈ ವೀರಕಥೆಯನ್ನು ಈ ವಿದ್ವಾನ್ ವಿಮರ್ಶಕರು ಒಮ್ಮೆಲಿ ಆರ್ಯ - ದ್ರಾವಿಡ ಸಂಸ್ಕೃತಿಗಳ ನಡುವಿನ ಹೋರಾಟದ ಚಿತ್ರವೆಂಬ ಊಹೆಯನ್ನು ಮುಂದಿಟ್ಟಿದ್ದಾರೆ. ಅದಕ್ಕೆ ಪೋಷಕವಾಗಿ ವೀರಶೈವ ಪಂಥವು ಮೂಲದ್ರಾವಿಡ ಧರ್ಮದ ಅವಶೇಷಗಳನ್ನು ಅಳವಡಿಸಿಕೊಂಡಿದೆಯೆಂಬುದನ್ನು ಎತ್ತಿ ಹೇಳಿದ್ದಾರೆ. ಇದೆಲ್ಲದಕ್ಕೆ ಅವರು ಮೊಹೆಂಜೊದಾರೊ ಹರಪ್ಪಾ ಸಂಸ್ಕೃತಿಯ ಬಗೆಗಿನ ಆಂಗ್ಲ ಮತ್ತು ಫ್ರೆಂಚ ಇತಿಹಾಸ ಗ್ರಂಥಗಳ ದಾಖಲೆಗಳನೂ ಡಾ. ಭಂಡಾರಕರ ಗ್ರಂಥದಲ್ಲಿಯ ಆಧಾರವನ್ನೂ ಉದಾಹರಿಸಿದ್ದಾರೆ.

ಇಲ್ಲಿಯೂ ಲೇಖಕರು ರಾಘವಾಂಕನ ಈ ಕೃತಿಯನ್ನು ಹರಿಹರನ "ವೀರಭದ್ರದೇವರ ರಗಳೆ"ಯೊಂದಿಗೆ ಹೋಲಿಸಿ ವ್ಯತ್ಯಾಸಗಳನ್ನು ಗುರುತಿಸಿ ಈ 'ವೀರೇಶಚರಿತೆ' ಅದಕ್ಕಿಂತ ಉತ್ತಮ ಕಥನಕಾವ್ಯವಾಗಿದೆಯೆಂಬುದನ್ನು ಪ್ರಮಾಣಿಸಿದ್ದಾರೆ; ಮಾತ್ರವಲ್ಲ. ರುದ್ರಭಯಾನಕ ಭವ್ಯತೆಯೇ ಈ ಕಾವ್ಯದಲ್ಲಿ ಹೇಗೆ ಬೀಡುಬಿಟ್ಟಿದೆಯೆಂಬುದನ್ನು ನಿರಪವಾದವಾಗಿ ನಿರೂಪಿಸಿದ್ದಾರೆ.

ಈ ಸಂದರ್ಭದಲ್ಲಿ ಲೇಖಕರು ಮಹಾಕವಿಗಳ ಕಾರ್ಯ ಒಂದು ಪ್ರಯೋಗಶಾಲೆಯೆಂದು ಪ್ರತಿಪಾದಿಸಿದ್ದಾರೆ. ಇದಕ್ಕೆ ಈ ಎರಡೇ ಸಂಧಿಗಳ ವೀರಕಥನಕಾವ್ಯವೇ ಸಾಕ್ಷಿ ಮಾತ್ರವಲ್ಲ. ಇಲ್ಲಿಯ ಪ್ರಯೋಗಶೀಲತೆ ಕಾವ್ಯದ ಆತ್ಮದಲ್ಲಿ ಮಾತ್ರವಲ್ಲ ಶರೀರವಾದ ಛಂದೋಬಂಧದಲ್ಲಿಯೂ ಹೇಗೆ ಪ್ರಕಟವಾಗಿದೆಯೆಂಬುದನ್ನೂ ಎತ್ತಿ ಹೇಳಲು ಮರೆತಿಲ್ಲ. ವಾರ್ಧಕಷಟ್ಪದಿಯ ಐದು ಮಾತ್ರೆಯ ನಾಲ್ಕು ಗಣಗಳ ಬದಲಾಗಿ ನಾಲ್ಕು ಮಾತ್ರೆಯ ಐದು ಗಣಗಳನ್ನು ಪ್ರತಿ ಚರಣದಲ್ಲಿ ರೂಪಿಸಿದ ಈ 'ಮೀಸಲುಗವಿತೆ'ಯ ನಾವೀನ್ಯ ಪ್ರಾವೀಣ್ಯಗಳನ್ನು ಮನ್ನಿಸಿದ್ದಾರೆ.

ಕ್ರಾಂತಿಕಾರಿ ಕವಿಯ ಲಕ್ಷಣವೇನು ? ತುಳಿದ ಹಾದಿಯನ್ನು ತುಳಿಯದಿರುವದು, ತನ್ನ ಕಾವ್ಯಜೀವನವನ್ನು ಒಂದು ಪ್ರಯೋಗಶಾಲೆಯನ್ನಾಗಿ ಮಾಡುವದು. ತನ್ನ ಕಾವ್ಯದ

ಪಡಿಯುಚ್ಚು ಒಂದರಂತೆ ಒಂದಾಗದಂತೆ ಮಾಡಿ ಒಂದೊಂದು ನಿಟ್ಟಿನಲ್ಲಿ ಅವು ಆದರ್ಶ ಕೃತಿಗಳಾಗಿ ನಿಲ್ಲಬೇಕೆಂದು ಅಂಥ ಕವಿಯು ಆಶಯ.

ಮಹಾಕವಿಯ ಪ್ರತಿಭೆಯ ಲಕ್ಷಣವೇನು ? ಯಾವುದನ್ನಾದರೂ ಇದಕ್ಕಿಂತ ಅಧಿಕವಾಗಿ ಚಿತ್ರಿಸುವದು ಸಾಧ್ಯವಿಲ್ಲವೆಂಬಂತೆ ಚಿತ್ರಿಸುವದು. ಮಹಾಕವಿಯ ಪಾತ್ರಸೃಷ್ಟಿಯಲ್ಲಿ ಮಾಡಬೇಕಾದ ಕಾರ್ಯವೇನು ? ಅವನು ನಿರ್ಮಿಸುವ ವ್ಯಕ್ತಿಗಳೆಲ್ಲ ನಮ್ಮಿಂದ ಬಹು ದೂರ ಹಿಡಿದು ಅಲೌಕಿಕರಾಗಿ ನಿಂತರೆ ಅವರ ಏಳು-ಬೀಳು ಆಗು-ಹೋಗುಗಳ ಬಗೆಗೆ ನಾವು ಅಷ್ಟು ಗಮನ ಕೊಡುವದಿಲ್ಲ. ನಮ್ಮ ಹೃದಯಗಳನ್ನು ಅವರ ನಡೆನುಡಿಗಳು ಅಷ್ಟಾಗಿ ತಟ್ಟುವದಿಲ್ಲ. ಆದರೆ ಮಾನವೀಯತೆಯು ಕರಗಿ ದೇವತ್ವದಲ್ಲಿ ಪರ್ಯಾವ ಸಾನ ಹೊಂದುವ ನಿಮಿಷ ಒಂದು ಬಂದೇ ಬರುತ್ತದೆ. "ಆದರೆ ಕಾರಣಿಕನಾದರೇನು? ಕಾಲ್ಪನಿಕನಾದರೇನು ? ಮಾನವಭೂಮಿಯಲ್ಲಿ ಹುಟ್ಟಿ ಬಂದ ಮೇಲೆ ತನುಗುಣಗಳಿಗೆ ತಕ್ಕಂತೆ ನಡೆಯಲೇಬೇಕಾಗುತ್ತದೆ. ಹಾಗೆ ನಡೆವುದರಿಂದಲೇ ಲೋಕಕ್ಕೆ ಅವರ ನಡೆ-ನುಡಿ-ಸ್ವಭಾವ ತೀರ ಸನಿಹವಾಗಿ ತೋರುತ್ತವೆ. ಅವನೂ ತಮ್ಮಲ್ಲಿಯೇ ಒಬ್ಬ ನೆಂದು ಬಗೆದು ಅವನ ವಿಷಯವಾಗಿ ಜನತೆ ಅನುಕಂಪ ಸಹಾನುಭೂತಿಗಳನ್ನು ತಳೆಯುತ್ತಾರೆ. ಕವಿ ಮಾಡಬೇಕಾದ ಕಾರ್ಯದಲ್ಲಿ ಇದು ಬಹು ಮಹತ್ವದ್ದು" ಎಂದಾಗ ಡಾ. ಹಿರೇಮಠರು ಆದಯ್ಯನ ಪಾತ್ರದ ಬಗೆಗೆ ಅಷ್ಟೇ ಅಲ್ಲ ಮಹಾಕಾವ್ಯ ಗಳಲ್ಲಿಯ ಪಾತ್ರ ನಿರ್ಮಿತಿಯ ವೈಶಿಷ್ಟ್ಯದ ಬಗೆಗೂ ಅಧಿಕಾರವಾಣಿಯಿಂದ ಹೇಳಿ ದಂತಿದೆ. ಅವರ ಇಂಥ obiter dieta (ಪ್ರಾಸಂಗಿಕವಾಗಿ ಮೂಮ್ಮಿದ ನ್ಯಾಯ ವಿಧಾನ)ಗಳನ್ನು ಸಂಗ್ರಹಿಸಿಕೊಟ್ಟರೆ ಅದುವೇ ಈ ಹಿರಿಯ ವಿಮರ್ಶಕನು ತನ್ನ ದಿಕ್‌ಸೂಚಿಯಾಗಿ ಇಟ್ಟುಕೊಂಡ ವಿಮರ್ಶೆಯ ತತ್ವಪ್ರಣಾಲಿಯು ತಾನಾಗಿಯೇ ನಿಷ್ಪನ್ನವಾಗುವುದು.

ನಾನು ಇಲ್ಲಿ ಮಾಡಹೊರಟದ್ದು ಅದನ್ನೇ. ಡಾ. ಹಿರೇಮಠರು ರಾಘವಾಂಕನ ಅಥವಾ ಇನ್ನಿತರ ಕವಿಗಳ ಯಾವ ಯಾವ ಕೃತಿಯ ಬಗೆಗೆ ಏನೇನು ವಿಮರ್ಶೆ ಮಾಡಿದರೆಂಬು ದರ ವರದಿ ಒಪ್ಪಿಸುವ ತಾಳ್ಮೆ ಆಗಲಿ ತವಕ ಆಗಲಿ ನನ್ನಲ್ಲಿ ಇಲ್ಲ. ಅವರ ಒಂದೆರಡು ವಿಮರ್ಶಾಗ್ರಂಥಗಳಿಂದ ವ್ಯಕ್ತವಾಗುವ ಅವರ ವಿಮರ್ಶಾಸರಣಿಯ ತತ್ವ-ತಂತ್ರಗಳ ತಥ್ಯವನ್ನಷ್ಟೇ ತಾತ್ಪರ್ಯರೂಪದಲ್ಲಿ ನಿರೂಪಿಸಲು ಯತ್ನಿಸಿದ್ದೇನೆ. ಆ ದಾರಿಯಲ್ಲಿ ಅವರ ವಿಮರ್ಶೆಯ ಇನ್ನೂ ಒಂದೆರಡು ಸಲ್ಲಕ್ಷಣಗಳ ವಿವರಗಳನ್ನು ಇಲ್ಲಿ ಮೊದಲು ಸಲ್ಲಿಸಬೇಕು.

ತುಲನಾತ್ಮಕ ವಿಮರ್ಶೆಯಷ್ಟೇ ಪಾಠಾಂತರದ ವಿಮರ್ಶೆ (Textual Criticism) ಯಲ್ಲಿ ಡಾ. ಹಿರೇಮಠರು ಸಿದ್ಧಹಸ್ತರು. ಒಂದು ಅರ್ಥದಲ್ಲಿ ಇದುವೇ ಅವರ 'ಸ್ವಸ್ಥಾನ' (forte). ವಿಮರ್ಶೆಗೆ ವಿಷಯನಾದ ಕವಿಯ ಚರಿತ್ರೆ, ಸ್ಥಳ, ಕಾ

ನಿರ್ಣಯ, ಅವನ ಮತವಿಚಾರ, ಕೃತಿವಿಚಾರ ಮುಂತಾದ ಜೀವಾಳದ ಅಂಶಗಳಲ್ಲಿ ಈ ವಿಮರ್ಶಕರು ಸಾಧಿಸುವ ಸಾಂಗೋಪಾಂಗವೂ ಅವ್ಯಂಗವೂ ಆದ ಪ್ರತಿಪಾದನೆಯಲ್ಲಿ ಕಂಡುಬರುವ ತಜ್ಞತೆ, ದಕ್ಷತೆ, ಸಮಗ್ರತೆ, ಸಯುಕ್ತಿಕತೆ ಮತ್ತು ಸುವಿಹಿತ ವಾಗ್ವ್ಯವಸ್ಥಿತಿ ನಿಜವಾಗಿಯೂ ನ್ಯಾಯವಾಗಿಯೂ ಪರಿಣಾಮಕಾರಿಯಾಗಿದೆ. ಕವಿ ಕೃತಿಗಳ ಸ್ಥಿತಿಗತಿಗಳ ವಿಚಾರವಾಗಿ ವಿವಿಧ ಹಾಗೂ ವಿಪುಲ ಮೂಲಗಳಿಂದ ಪ್ರಮಾಣಗಳನ್ನು ಎತ್ತಿಕೊಟ್ಟು ತಮ್ಮ ಪ್ರತಿಪಾದನೆಯನ್ನು ಪ್ರಬಲವೂ ಪ್ರಗಲ್ಭವೂ ಗೊಳಿಸುವ ಇವರ ವೈಖರಿ ತುಂಬ ಬೋಧಕವಿದ್ದಷ್ಟೇ ವೇಧಕವೂ ಆಗಿದೆ. ನರಸಿಂಹಬಲ್ಲಾಳನೆಂದರೆ ಯಾರು ? ರಾಘವಾಂಕ ವೀರಶೈವನೇ ? ಸಿದ್ಧರಾಮನು ಶೈವನೇ ? ಮುಂತಾದ ಪ್ರಮೇಯಗಳ ಚರ್ಚೆ ಅಸಂದಿಗ್ಧ ಅಧಿಕಾರದ ವಿದ್ವತ್ತೆಯನ್ನೂ ವಾದಪಟುತ್ವವನ್ನೂ ಪ್ರಕಟಿಸುತ್ತದೆ. "ಒಂದು ವಿಚಾರ"ದಲ್ಲಿ ಆದಯ್ಯ ನಿಜವಾಗಿಯೂ ಸೌರಾಷ್ಟ್ರದಿಂದ ಬಂದಿರುವುದೇ ಎಂಬ ವಾದವನ್ನು ಬಲು ಚಾತುರ್ಯದಿಂದ ಲೇಖಕರು ಇತ್ಯರ್ಥಗೊಳಿಸಿದ್ದಾರೆ. ಆದಯ್ಯ ಕರ್ನಾಟಕದಿಂದ ಬಹುದೂರದ ಸೌರಾಷ್ಟ್ರದಿಂದ ಬಂದವನಾಗಿರದೆ ಪುಲಿಗೆರೆ-ಲಕ್ಷ್ಮೇಶ್ವರಗಳ ಸಮೀಪದ ಸೊರಟೂರದವನಿದ್ದಿರಬೇಕೆಂಬ ವಾದವನ್ನು ಅವರು ತೊಡೆದುಹಾಕಲು ಯತ್ನಿಸಿದ್ದಾರೆ. ಒಟ್ಟಾರೆ ಮತೀಯ ಸಾಂಪ್ರದಾಯಿಕ ಆಖ್ಯಾಯಿಕೆಗೆ ಭಂಗತರಲು ಅವರು ಒಪ್ಪಿಲ್ಲ. ಆದರೂ ಅವರಲ್ಲಿಯ ನ್ಯಾಯನಿಷ್ಠ ವಿಮರ್ಶಕನು ಆದಯ್ಯನ ವಚನಗಳ ಸಹಜಶೈಲಿ, ಜೀವದ್ಭಾಷೆಗಳು ಆತ ಸೌರಾಷ್ಟ್ರದವನಾಗಿದ್ದು ಮನೆತನದಿಂದ ಕನ್ನಡವನ್ನು ಬಾಲ್ಯದಿಂದಲೇ ಕಲಿತಿರಬೇಕು ಅಥವಾ ಪ್ರೌಢನಾದ ಮೇಲೆ ಕನ್ನಡನಾಡಿಗೆ ಬಂದು ನೆಲೆಸಿದ ನಂತರ ಅದನ್ನು ಕಲಿತಿರಬೇಕು— ಎಂಬ ವಾದಕ್ಕೆ ಪುಷ್ಟಿಕೊಡುವದಿಲ್ಲವೆಂದೂ ನಡುವೆ ಸ್ಪಷ್ಟವಾಗಿಯೇ ಹೇಳಿ ಮುಂದುವರಿದಿದ್ದಾರೆ !

ಹೀಗೆ ಸೋಮನಾಥಚಾರಿತ್ರ, ಸಿದ್ಧರಾಮಚಾರಿತ್ರಗಳಲ್ಲಿಯ ಕಥಾನಾಯಕರಾದ ಲೋಕೋತ್ತರ ಪಾತ್ರಗಳ ಐತಿಹಾಸಿಕ ಸತ್ಯತೆಯನ್ನು ಸ್ಥಾಪಿಸುವಲ್ಲಿ ಡಾ. ಹಿರೇಮಠರ ಸಂಶೋಧಕ ಪ್ರತಿಭೆಯೂ ಪಾಂಡಿತ್ಯದ ಪ್ರೌಢಿಮೆಯೂ ಕೃತಕೃತ್ಯವಾಗಿದೆ. ಉತ್ತಮ ಅಪ್ಪೃತಶಿಲೆಯ ಸರ್ವಾಂಗಸುಂದರ ಪ್ರತಿಮೆಗೆ ಭದ್ರವೂ ಪ್ರಶಸ್ತವೂ ಆದ ಪೀಠವನ್ನು ಕಟ್ಟಿದಂತೆ ಈ ವಿದಗ್ಧ ವಿಮರ್ಶಕರು ಕಾವ್ಯಾನಂದ ರಸಾಸ್ವಾದನೆಯ ಬೀಬಕ್ಕೆ ಸಂಶೋಧನಾತ್ಮಕ ಕವಿ-ಕೃತಿಗಳ ವಿಚಾರದ ಶಾಸ್ತ್ರೀಯ ವಿಚಿಕಿತ್ಸೆಯ ಸುಭದ್ರವೂ ಸಮರ್ಥವೂ ಆದ ತಳಪಾಯವನ್ನು ಕಟ್ಟಿಕೊಟ್ಟಿದ್ದಾರೆ. ಹೀಗೆ ಇವರ ವಿಮರ್ಶೆಯ ಪ್ರಬಂಧಗಳಲ್ಲಿ ಪಾಂಡಿತ್ಯ ಮತ್ತು ರಸಿಕತೆ, ಪ್ರಾಜ್ಞತೆ ಮತ್ತು ಕಾವ್ಯಪ್ರಜ್ಞೆ ಇವುಗಳ ಅಪರೂಪದ ಸಮನ್ವಯ ಸಂಪನ್ನವಾಗಿದೆ.

ವ್ಯುತ್ಪತ್ತಿ, ಸ್ವಂತದ ಕಾವ್ಯಪ್ರವೃತ್ತಿ, ಆಧುನಿಕಪ್ರಜ್ಞೆ, ವಿಚಿಕಿತ್ಸೆಯ ನಿರಂಕುಶಗತಿ, ತರ್ಕಶುದ್ಧವಾದ ವ್ಯವಸ್ಥಿತಿ— ಇದೆಲ್ಲ ಸಾಧನಸಂಪತ್ತು ಇದ್ದರೂ ಪ್ರಕೃತಿಯಿಂದ

ಮನೋಧರ್ಮದಿಂದ, ಸಂಸ್ಕಾರಬಲದಿಂದ ಈ ವಿಮರ್ಶಕರು ತೀರ ಆಧುನಿಕತೆಗೆ ಒಲಿದವರಲ್ಲ. ಸಂಸ್ಕೃತ ಕನ್ನಡ ಮತ್ತು ಪಾಶ್ಚಾತ್ಯ ಪ್ರಾಚೀನಮಾರ್ಗೀಯ ಕಾವ್ಯಗಳ ಆಸ್ವಾದ-ಅಭ್ಯಾಸ-ಅನುಸಂಧಾನಗಳಲ್ಲಿಯೇ ಪಳಗಿದವರು. ಅಭಿಜಾತ ಕಾವ್ಯಸಂಪ್ರದಾಯದ ಹಾಗೂ ಲಕ್ಷಣಗ್ರಂಥಗಳ ನಾಭಿನಾಳದಿಂದ ಪೂರ್ತಿ ಬಿಡುಗಡೆ ಹೊಂದಿದವರಲ್ಲ— ಹೊಂದಲು ಬಯಸಿದವರೂ ಅಲ್ಲ. ಆದ್ದರಿಂದ ಇವರ ವಿಮರ್ಶಾಪದ್ಧತಿಯು ಕರ್ಮಠಕಾರ್ಪಣ್ಯದಿಂದ ದೂರವಿದ್ದರೂ ಮಾರ್ಗೀಯ ಮರ್ಯಾದೆಯನ್ನು ಮೀರಿ ಸ್ವಚ್ಛಂದವಾಗಿಲ್ಲ. "Bonds of freedom made wider yet" ಎಂಬ ಟೆನಿಸನ್ ಕವಿಯ ಉಕ್ತಿಯಂತೆ ಇದರ ಹಿತಮಿತ ಸ್ವಾತಂತ್ರ್ಯ. ಪ್ರಾಚೀನ ಕಾವ್ಯಗಳನ್ನು ಅತ್ಯಾಧುನಿಕ ದೃಷ್ಟಿಯಿಂದ, ಸಾಹಿತ್ಯೇತರ ಮನಃಶಾಸ್ತ್ರೀಯ ಚಿಕಿತ್ಸೆಯಿಂದ ನೋಡಿ ವಿಶ್ಲೇಷಿಸುವುದು ಇವರ ಜಾಯಮಾನವೇ ಅಲ್ಲ. ವಿಮರ್ಶೆಯ ಇಂಥ ಹೊಚ್ಚಹೊಸ ದಾರಿ ಬಹುಶಃ ಡಾ. ಕೀರ್ತಿನಾಥ ಕುರ್ತಕೋಟಿಯವರಿಂದ ಆರಂಭವಾಯಿತೇನೋ. ಆ ದೃಷ್ಟಿಯಿಂದ ಡಾ. ಹಿರೇಮಠರು ತೀ. ನಂ. ಶ್ರೀಕಂಠಯ್ಯ, ಡಾ. ರಂ. ಶ್ರೀ. ಮುಗಳಿ ಮುಂತಾದವರ ಪರಂಪರೆಯವರೆಂದು ಹೇಳಬಹುದು. ಅದೇನೇ ಇರಲಿ. ಈ ಶತಮಾನದ ಎರಡು ಮಹಾಯುದ್ಧಗಳ ನಡುವಿನ ಕನ್ನಡಸಾಹಿತ್ಯಯುಗದ ಉತ್ತಮ ವಿಮರ್ಶಾಪದ್ಧತಿಗೆ ಡಾ. ಹಿರೇಮಠರು ಒಂದು ಅಭಿನಂದನೀಯ ಮಾದರಿ.

"ಕನ್ನಡಸಾಹಿತ್ಯದಲ್ಲಿ ವಿಮರ್ಶೆ" ಬೆಳೆದುಬಂದ ರೀತಿಯನ್ನು ಡಾ. ಹಿರೇಮಠರು ತಮ್ಮ ಒಂದು ಪ್ರಬಂಧದಲ್ಲಿ (ಸಾಹಿತ್ಯ ಸಂಸ್ಕೃತಿ ಲೇಖ ೭) ಬಿಚ್ಚುಮಾತಿನಲ್ಲಿ ಅಚ್ಚುಕಟ್ಟಾಗಿ ನಿರೂಪಿಸಿದ್ದಾರೆ. ಕನ್ನಡಿಗರು "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿ"ಗಳೆಂದು ಸಾರಿದ ಕವಿರಾಜಮಾರ್ಗವೇ ಉತ್ತಮ ವಿಮರ್ಶಕರು ಕನ್ನಡದಲ್ಲಿ ಇಲ್ಲವೆಂದು ಧ್ವನಿಯಿಂದ ಹೇಳುತ್ತದೆ ಎಂದು ಡಾಕ್ಟರರ ನಿಧಾನ. ಆಶ್ರಯದಾತದೊರೆಯ ಆಸ್ಥಾನದಲ್ಲಿಯ ಪಂಡಿತರು "ಭಲೇ" ಎಂದು "ತಗುಳ್ದು ಬಿಚ್ಚಳಿಸೆ" "ಪಂಪನಂಥ ಕವೀಶ್ವರನು ಬೇರೆಯಿಲ್ಲ"ವೆಂದು ಭಾಪಿಸುವ ಆ ಕಾಲದಲ್ಲಿ ವಿದ್ವತ್ ಪರಿತೋಷವೇ ಒಂದು ಕೃತಿ ಸಾಧುವೆಂದು ಭಾವಿಸಲು ಒಂದೇ ಒಂದು ಮಾನದಂಡವಾಗಿತ್ತು. ರನ್ನನ ಕೃತಿರತ್ನವನ್ನು ಪರೀಕ್ಷಿಸುವಂಗೆ ಎಂಟೆರ್ದೆಯೋ ? ಎಂದು ಗದರಿಸಿದ ರನ್ನನ ಗದಾಯುದ್ಧವನ್ನು ದಂಡನಾಯಕ ಕೇಶಿಯು "ತಿರ್ದೆ ಪೇಳ್ದ"ನಂತೆ. ಅಂದಾಗ ಆಗಿನ ರಾಜಾಸ್ಥಾನದ ಪಂಡಿತರು ತಮ್ಮ ಪಟ್ಟಿಗೆ ಸಮರ್ಥ ವಿಮರ್ಶಕರೇ ಆಗಿದ್ದಿರಬೇಕು. ಅದೇರೀತಿ ತನಗಿಲ್ಲದೆ ಸಾರಕವಿತ್ವಮಂ ಅನ್ಯಕಾವ್ಯರುಚಿರ ಪದ್ಯಮಂ ಪಠಿಸಿ ಸತ್ಯವಿನಿರ್ಮಿತ ಪದ್ಯಂ ಇಂತಿವಕ್ಕೆ ಬರೆಯೆ ಎಂದು ಕೇಳ್ದಡೆ ಅವನಂ ಬಲ್ಲ ಸಜ್ಜನರು ನಗದಿರ್ಪರೆ ? ಎಂದು ಷಡಕ್ಷರದೇವನಂಥ ಉದ್ದಾಮಪಂಡಿತಕವಿ ಜರೆದದ್ದು ಉಂಟು.

ಆದರೂ ಸೋಮದೇವಸೂರಿಯ ಮತವನ್ನು ಮುಂದೆಮಾಡಿ ಡಾ. ಹಿರೇಮಠರು, ಅವಜ್ಞಾವಾದರೂ ಸ್ವಯಂಲೋಕವೇ ಕಾವ್ಯಪರೀಕ್ಷಕವಾಗಲಿ. ರಸಪಾಕದಲ್ಲಿ ಅನಭಿಜ್ಞ

ಯಾವನಾದರೂ ರಸವನ್ನು ಭೋಗಿಸಿ ಅದರ ರುಚಿಯನ್ನು ಅರಿಯಲಾರನೇ ? ಎಂದು ವಾದಿಸುತ್ತಾರೆ (ಅದಕ್ಕಾಗಿ ಸವಿ ಅರಿಯಲು ಅಡಿಗೆಭಟ್ಟನೇ ಬೇಕೇ ? ಎಂಬುದು ಅವರ ಈ ವಾದ). ಆದಾಗ್ಯೂ ಪ್ರಾಚೀನಕಾಲದಲ್ಲಿ—ಹಳಗನ್ನಡದ ಜಾಯಮಾನ ದಲ್ಲಿ—ಪಂಡಿತರೂ ವಿವಿಧ ಕಲಾಪಂಡಿತರೂ ಕಾಲಕಾಲಕ್ಕೆ ಎಸಗಿದ ವಿಮರ್ಶೆಯ ವಿಷಯ ನಮಗೆ ಇಂದು ಸಿಗುವದಿಲ್ಲ. 'ಕುಕವಿನಿಂದೆ'ಯಂತೆ ಸದ್ವಿಮರ್ಶಕರ ಶ್ಲಾಘನೆ ಅಂದಿನ ಹಿರಿಯ ಕವಿಗಳು ಮಾಡಿಲ್ಲ. ಕುವಿಮರ್ಶಕರನ್ನು ಖಂಡಿಸಿದ್ದೂ ಇಲ್ಲ.

ಅಂದಾಗ ಅಂಥ ವಿಮರ್ಶೆ-ವಿಮರ್ಶಕರಿಂದ ಕನ್ನಡಸಾಹಿತ್ಯಕ್ಕೆ ಆದ ಲಾಭ ತೀರ ಕಡಿಮೆ ಎಂದೇ ಈ ವಿಮರ್ಶಕರ ಅಭಿಮತ. ಪ್ರಯೋಗಕ್ಕಿಂತ ಪರಂಪರೆ, ಸ್ಫೂರ್ತಿ ಗಿಂತ ಲಕ್ಷಣಶಾಸ್ತ್ರದ ಅವಲಂಬನೆಯೇ ಕವಿಗಳ ರಾಜಮಾರ್ಗವಾದಾಗಿನ ಆ ಕಾಲದಲ್ಲಿ ಒಂದು ರೀತಿ ಕುಕವಿನಿಂದೆ ಸತ್ಕವಿಸ್ತವನ ಆತ್ಮಶ್ಲಾಘನೆ ಮಾಡುವ ಉದ್ದಾಮಕವಿಗಳೇ ಪರ್ಯಾಯವಾಗಿ ಕಾವ್ಯವಿಮರ್ಶೆಯ ತತ್ವಗಳನ್ನು ಪ್ರತಿಕ್ರಿಯೆಗಳನ್ನು ಅಲ್ಲಲ್ಲಿ ಒಡ ಮೂಡಿಸಿ ತಾವೇ ವಿಮರ್ಶಕರಾಗಿ ವರ್ತಿಸಿದರೆಂದು ಈ ವಿದ್ವಾಂಸರ ಅಭಿಪ್ರಾಯ.

ಅಂದಿನ ಸ್ಥಿತಿಗತಿ ಏನೇ ಇದ್ದರೂ ಆಧುನಿಕ ಕನ್ನಡಸಾಹಿತ್ಯದಲ್ಲಿ "ಜೊಳ್ಳನ್ನು ತೂರಿ ಕಾಳನ್ನು ತೆಗೆದುಕೊಳ್ಳುವ" ವಿಮರ್ಶೆ ಆರಂಭವಾಗಿದೆಯೇ ? ಎಂಬ ಪ್ರಶ್ನೆಯನ್ನೆತ್ತಿ ಕೊಂಡು ಡಾ. ಹಿರೇಮಠರು ಅದು ಆಗಿಲ್ಲವೆಂದೇ ವ್ಯಸನಪಟ್ಟಿದ್ದಾರೆ. ಕಾಲು ಶತಮಾನದ ಹಿಂದೆ ಕನ್ನಡದಲ್ಲಿ ಯಾರೇ ಏನೇ ಬರೆದರೆ ಸಾಕು ಎಂಬ ಅವಸ್ಥೆಯಲ್ಲಿ ಉತ್ಸಾಹ ಪ್ರೋತ್ಸಾಹಗಳ ಆವಶ್ಯಕತೆಯೇ ಮಿಗಿಲಾಗಿತ್ತು. ಆದರೆ ಇಂದು ಈ 'ಉತ್ಸಾಹ ರಗಳೆ'ಯ ಯುಗ ಕಳೆದು ಕಾವ್ಯದೀಕ್ಷೆಯ ಯುಗ ನಡೆಯುತ್ತಿದೆ. ಈಗಲೂ ಪ್ರಶಂಸೆ-ಪ್ರಶಸ್ತಿಗಳನ್ನೇ ಮುಂದುವರಿಸಿದರೆ ಸಲ್ಲದು. ಆ ಕವಿಪ್ರಶಸ್ತಿ ಈ ಕವಿಪ್ರಶಸ್ತಿ ಅವರಿವರ ಸಂಸ್ಮರಣ. ಸಂಭಾವನಾಗ್ರಂಥಗಳಲ್ಲಿ ಗುಣೈಕದೃಷ್ಟಿಯ ಕೊಂಡಾಟಕ್ಕೇ ಅನುವುಮಾಡಿಕೊಟ್ಟಂತೆ ಇಂದಿಗೂ ನಡೆಯಬಾರದೆಂದು ಅವರು ಎಚ್ಚರಿಕೆ ನೀಡುತ್ತಾರೆ. "ಮನೆಯ ದೀಪವೆಂದು ಮುದ್ದು ಕೊಡಬಾರದು" ಎನ್ನುತ್ತಾರೆ; ಈ ರೀತಿ ನೈಜ ಪ್ರಪಂಚ – ನೈಜ ವಿಮರ್ಶೆಯ ದೃಷ್ಟಿಯಿಂದ ಅಹಿತಕಾರಿ ಎಂದು ತೀವ್ರವಾಗಿಯೇ ಖಂಡಿಸುತ್ತಾರೆ. ಪ್ರಕೃತಿವರ್ಣನೆಯಲ್ಲಿ ಮುದ್ದಣನು ಕಾಲಿದಾಸನನ್ನು ಶೇಕ್ಸಪಿಯರ ನನ್ನು ಮೀರಬಲ್ಲನೆಂದರೆ, ಕುಮಾರವ್ಯಾಸನ ಕೈಯಲ್ಲಿ ಕನ್ನಡ ಬಾವುಟ ಕೊಟ್ಟು ಆತ ಜಗತ್ತಿನ ಯಾವ ದೊಡ್ಡ ಕವಿಯನ್ನೂ ಎದುರಿಸಬಲ್ಲನೆಂದು ಸಾರಿದರೆ ಅದನ್ನು ಯಾರು ಒಪ್ಪಬೇಕು ? ಎಂದು ಅವರ ನೇರ ನಿರ್ಭಿಡೆಯ ಸವಾಲು.

ಅಂದರೇನು ? "ನೈಜ ವಿಮರ್ಶೆ ಸಾಕಷ್ಟು ತೃಪ್ತಿಕರವಾಗಿ ಬೆಳೆದುಬಂದಿಲ್ಲ." "ಉತ್ತಮ ವಿಮರ್ಶೆ ಬೆಳೆಯದೆ ಉನ್ನತಕಾವ್ಯ ಹುಟ್ಟುವುದಿಲ್ಲ." "ಕನ್ನಡ ಸಾಹಿತ್ಯಕ್ಕೆ ಸಾಕಷ್ಟು ಪುರಾತನತೆ ಇದ್ದರೂ ವಿಮರ್ಶೆ ಇನ್ನೂ ಇಲ್ಲಿ ದಟ್ಟಡಿ ಇಡುತ್ತಿದೆ.

ಸಾಹಿತ್ಯಾಭಿವೃದ್ಧಿಯ ದೃಷ್ಟಿಯಿಂದ ಇದು ಶುಭ ಸೂಚನೆಯಲ್ಲವೆಂದು ಬಲ್ಲವರ ಮಾತು" ಎಂದು ನಯವೆಂದು ತೋರಿದರೂ ನಿಬ್ಬರದ ನುಡಿಯಲ್ಲಿಯೇ ಅವರು ಹೇಳಿದ್ದಾರೆ "ಪುರಾತನ ಸಾಹಿತ್ಯದ ನಿಷ್ಪಕ್ಷಪಾತವಾದ ದೃಷ್ಟಿಯಿಂದ ನಿಚ್ಚಳ ವಿಮರ್ಶೆ ನಮ್ಮಲ್ಲಿ ಹುಟ್ಟಿದಷ್ಟು ಸಾಹಿತ್ಯ ಅಂದವಾಗುತ್ತದೆ. ಅಭಿವೃದ್ಧಿಹೊಂದುತ್ತದೆ" ಎಂದು ಹೇಳುತ್ತಲೇ ಅವರು ಈ ಮಾತನ್ನು ಇನ್ನೊಂದೆಡೆಯಲ್ಲಿ ಅಷ್ಟೇ ನಿಷ್ಠುರವಾಗಿ ಆಡಿದ್ದಾರೆ: "ಪ್ರಾಚೀನ ಕಾವ್ಯವಿಮರ್ಶೆ ಎಂತಾದರೂ ಅದನ್ನು ಸರಿಪಡಿಸಬಹುದು. ಗಟ್ಟಿಗ ವಿಮರ್ಶಕರು ಆ ಕಾರ್ಯವನ್ನು ದಿಟ್ಟತನದಿಂದ ಮುಂದೆ ಮಾಡಬಹುದು. ಆದರೆ ಕಾವ್ಯದೀಕ್ಷೆಯ ಯುಗ ಪ್ರಾರಂಭವಾದಾಗ, ವಿಮರ್ಶೆ ಸಾಹಿತ್ಯದ ಒರೆಗಲ್ಲು ಅದರ ಬೆಳವಣಿಗೆಗೆ ಅವಶ್ಯವಾದ ಸಾಧನವೆಂದು ನಂಬಿದಾಗ, ತುಂಬಿ ಹರಿಯುತ್ತಿರುವ ಕನ್ನಡ ಕಾವ್ಯಕಾವೇರಿಗೆ ಉತ್ತಮಪಾತ್ರದ ಅವಶ್ಯಕತೆ ಅನಿಸಿದಾಗ, ನಮ್ಮ ವಿಮರ್ಶನ ಸಾಹಿತ್ಯವು ಪ್ರಶಸ್ತಿಯಿಂದ ಪಾರಂಭವಾಗಿ ಪ್ರಶಸ್ತಿಯಲ್ಲಿಯೇ ಕೊನೆಗೊಳ್ಳುವದು ವಿಹಿತವೇ ?" ಅವರ ಈ ಸವಾಲಿಗೆ ಇನ್ನೂ ಸಮರ್ಪಕ ಉತ್ತರ ಕೊಟ್ಟವರಿಲ್ಲ. ಅವರು ಅನ್ನುವಂತೆ "ಕನ್ನಡ ಸಾಹಿತ್ಯದೇವಿಯ ಅಡಿಸೇವೆಗೆ ನಿಂತಾಗ, ಎಲ್ಲರೂ ಕನ್ನಡ ಕುಲದವರೆಂದು ನೆರೆನಂಬಿ. ಜಾತಿ ಮತಪಂಥಪ್ರದೇಶಗಳ ಕೀಳುಭಾವನೆಗೆ ಎಡೆಕೊಡದೆ ನಿಜದೃಷ್ಟಿ ನಿರ್ಭಿಡೆಗಳ ವಿಮರ್ಶೆ ಕನ್ನಡದಲ್ಲಿ ಎಷ್ಟಿದೆ ಎಂಬುದನ್ನು ಬಲ್ಲವರೇ ಊಹಿಸಿಕೊಳ್ಳಲಿ. ನಮಗೆ ನಾವು ಕವೀಂದ್ರರೆಂದೋ ರವೀಂದ್ರರೆಂದೋ ಕರೆದುಕೊಳ್ಳುವದು ವಿಮರ್ಶೆಯಲ್ಲ: ಎತ್ತಿಹಿಡಿಯುವ ಉತ್ತಮ ಹಾದಿ."

"ಮುಚ್ಚಿಡುವದಕ್ಕಿಂತ ನಿಚ್ಚಳವಾಗಿ ನುಡಿದರೆ ನಿಜದೃಷ್ಟಿಯುಳ್ಳವರು ಕೋಪಿಸರೆಂದು ಅವರ ನಂಬಿಗೆ. ಕನ್ನಡನಾಡಿನ ಸರ್ವತೋಮುಖ ಅಭಿವೃದ್ಧಿಗೆ ತಡೆತಂದ ಜಾತೀಯ ಕಲಹ ಸಾಹಿತ್ಯದಲ್ಲಿ ಒಮ್ಮೊಮ್ಮೆ ನಿಚ್ಚಳವಾಗಿ ಒಮ್ಮೆ ಮಸುಮಸುಕಾಗಿ ಕಾಣುತ್ತದೆ. ವಿಶ್ವಸರಕಾರ, ವಿಶ್ವಧರ್ಮ, ವಿಶ್ವಬಾಂಧವ್ಯಗಳನ್ನು ಸ್ಥಾಪಿಸಲು ಮಹತ್ತೋಮಹಿಮರು ಹೆಣಗುತ್ತಿರುವಾಗ ನಾವು ಅಣೋರಣೀಯರಾಗಬೇಕೇ ? ನಮ್ಮ ವಿಮರ್ಶೆ ಸಾಹಿತ್ಯದ ಬಹುಭಾಗ ಈ ಬಗೆಯ ಬಣ್ಣ ಪಡೆದುಬಂದಿರುವುದು, ಬರುತ್ತಿರುವುದು ಶುಭಸೂಚನೆಯಲ್ಲ. ನಿರ್ಲಿಪ್ತಮನದಿಂದ ವಿಮರ್ಶಿಸಿ ಜಗತ್ತಿಗೆ ನಮ್ಮ ಕವಿಗಳ ಸಾರಸುಂದರ ರೂಪವನ್ನು ತೋರಿಸಿಕೊಡಬೇಕಾಗಿದೆ."

ಜತೆಗೇ. "ಕನ್ನಡ ಸಾಹಿತ್ಯವಾಹಿನಿಯ ದಿಕ್ಕು ಬದಲಾಯಿಸುವುದು ಇದೀಗ ಅತ್ಯವಶ್ಯವೆನಿಸಿದೆ" (೧೯೫೧ ರ ಹಿಂದೆಯೇ ಅವರು ಅರಿತುಕೊಂಡ ಅವಶ್ಯಕತೆ ಇದು !). ಇದುವರೆಗೆ ಮಂದಗತಿಯಿಂದ ಬಂದ ಸಾಹಿತ್ಯ ಇನ್ನುಮುಂದೆ ಪ್ರಗತಿಯಿಂದ ಸಾಗಬೇಕು. ಹಾಗೆ ಮಾಡುವ ಮುನ್ನ ಪ್ರಗತಿಶೀಲಸಾಹಿತ್ಯದ ಗೊತ್ತುಗುರಿಗಳೇನು ? ಅದು ಕೊನೆಯ ವರೆಗೂ ಬಾಳಬಲ್ಲದೇ ? ಎಂಬಿವೇ ಮೊದಲಾದ ವಿಷಯಗಳನ್ನು ಕೂಲಂಕಷವಾಗಿ ವಿಮರ್ಶಾತ್ಮಕದೃಷ್ಟಿಯಿಂದ ವಿವೇಚಿಸುವದು ವಿಹಿತ. ಅಂಧಶ್ರದ್ಧೆ ಅಧಿಕತಮ ಮಂದಗತಿಗೆ ಕಾರಣವಾಗುವುದು.

ವಿಮರ್ಶೆಯ ಗುರಿ ಸ್ವಾತಂತ್ರ್ಯ, ಸಹಜತೆ, ಸಾಹಿತ್ಯಾಭಿವೃದ್ಧಿ, ಮಾರ್ಗದರ್ಶನ–ಇವೇ ಆಗಿರಬೇಕು. ಆದರೆ "ನಮ್ಮ ವಿಮರ್ಶಕರು ತಮ್ಮ 'ವಿಮರ್ಶೆ'ಯಲ್ಲಿ ತೋರುತ್ತಿರುವ ದಾಸ್ಯ, ಅನುಕರಣ, ಕೃತ್ರಿಮತೆಗಳನ್ನು ಕಂಡರೆ ಆಶ್ಚರ್ಯವೆನಿಸುತ್ತದೆ, ವಿಷಾದವಾಗುತ್ತದೆ " ಎಂದಿದ್ದಾರೆ. ಮುಂದುವರಿದು "ಹೊಗಳಿಕೆ ತೆಗಳಿಕೆಗಳ ಬಣ್ಣ ತಳೆದು ವಿಮರ್ಶೆ ಒಂದೆಡೆಗೆ ಬರುತ್ತಿದ್ದರೆ, ಇನ್ನೊಂದೆಡೆಗೆ ಹುರುಳಿಲ್ಲದ ಅನುಕರಣಾತ್ಮಕ ವಿಮರ್ಶೆ ಹೊರಹೊಮ್ಮುತ್ತಿದೆ." "ಸಜಾತೀಯರ ಕೃತಿಗಳನ್ನು ಮೇಲಕ್ಕೇರಿಸಿ ವಿಜಾತೀಯರನ್ನು ರಸಾತಳಕ್ಕಿಳಿಸಿ ಕೃತಾರ್ಥತೆಯನ್ನೈದುವ ಪತ್ರಿಕೆಗಳೂ ಉಂಟು. ಸಂಕುಚಿತಭಾವನೆ, ಸಹೃದಯತೆಯ ಕೊರತೆ, ಅಭ್ಯಾಸದ ಅಭಾವ, ವಿಮರ್ಶಾತತ್ವಗಳ ಬಗೆಗೆ ಅಜ್ಞಾನ ಇವೇ ನಮ್ಮ ಇಂದಿನ ವಿಮರ್ಶಾ ಸಾಹಿತ್ಯದ ಅಧೋಗತಿಗೆ ಕಾರಣವಾಗಿವೆ."

ಡಾ. ಹಿರೇಮಠರ ಈ ಮೇಲಿನ ಉದ್ಗಾರಗಳನ್ನು ಓದಿದಾಗ ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಪಾಶ್ಚಾತ್ಯ ಪತ್ರಿಕಾಸಮೀಕ್ಷೆ ( Review ) ಗಳ ಬಗೆಗೆ ಖ್ಯಾತ ಸಾಹಿತ್ಯಿಕ ವಿಲಿಯಂ ಜೇಮ್ಸ್‌ನ್ ಅಂದದ್ದು ನೆನಪಾಗುತ್ತದೆ; ೧೮೯೩ರಲ್ಲಿ ಆತ ಬರೆದಿದ್ದ : Reviewing is a practice, that in general has nothing in common with the art of criticism... The vulgarity, the erudity, the stupidity, this cherished combination of offhand review and of our wonderful system of publicity have put into circulation on so vast a scale, may be represented as an unprecedented invention... The signs of this catastrophe will not be found too subtle to be pointed out – the failure of distinction, the failure of style, the failure of knowledge and the failure of thought.

ಹಾಗಾದರೆ ಪತ್ರಿಕಾಸಮೀಕ್ಷೆಯಿಂದ ಬೇರೆಯಾದ ಈ ವಿಮರ್ಶೆ ಸಾಧಿಸಬೇಕಾದ ಕಾರ್ಯವೇನು ? "ಸಹೃದಯರ ಅಭಿರುಚಿಯನ್ನು ಸಂಸ್ಕರಿಸಿ ಓದುಗರ ವೃಂದ ಹೆಚ್ಚಾಗುವಂತೆಯೂ ಸುಸಂಸ್ಕೃತವಾಗುವಂತೆಯೂ ಮಾಡುವ ಮಹತ್ವದ ಕಾರ್ಯವನ್ನು ವಿಮರ್ಶಕರು ಮಾಡಬೇಕಾಗಿದೆ." ಟಿ. ಎಸ್. ಇಲಿಯಟ್ ಹೇಳುವದೂ ಇವನ್ನೇ. ಅವನ ಅತಿಪ್ರಖ್ಯಾತ ಪ್ರಬಂಧ " The Function of Criticism " ದಲ್ಲಿ ಆತ ನಮೂದಿಸಿದಂತೆ ವಿಮರ್ಶೆಯು ಕಣ್ಮುಂದೆ ಇಟ್ಟುಕೊಳ್ಳಬೇಕಾದ ಗುರಿ, ಸ್ಥೂಲವಾಗಿ : " Elucidation of the works of art " ಮತ್ತು "Correction of taste" "The critic if he is to justify his existence should endeavour to discipline his personal prejudice and cranks and compose his difference with as many of his fellows as possible in common pursuit of true judgement".

ಒಳಗೆ ಅಭಿರುಚಿಯ ಸಂಸ್ಕರಣ. ವಸ್ತುನಿಷ್ಠವಾದ ಪರಿಷ್ಕರಣ. ಅದಕ್ಕೆ ಪೋಷಕವಾಗುವಂತೆ ಕಲಾಕೃತಿಗಳ ರಸಪರಿಚಯ ನಿಜವಾದ ವಿಮರ್ಶೆಯ ಕಾರ್ಯ. ಅಂದಾಗ ಈ ನಿಟ್ಟಿನಲ್ಲಿ ವಿಮರ್ಶಕನು ಸಾಧಿಸಬೇಕಾದದ್ದೇನು ? "ಮೂಲ ಕೃತಿಯನ್ನು ಸಹೃದಯತೆಯಿಂದಲೂ ತುಲನಾತ್ಮಕದೃಷ್ಟಿಯಿಂದಲೂ ಆಳವಾಗಿ ಅಭ್ಯಸಿಸಿ ಕವಿಹೃದಯದ ಅಂತರಾಳದಿಂದ ನೆಗೆವ ಭಾವನೆಗಳಾವವು ? ಅವುಗಳ ನಿರೂಪಣಾ ಕ್ರಮದೊಳಗಣ ಗುಣದೋಷಗಳಾವವು ? ಆತನ ಕೃತಿಯಲ್ಲಿ ಕಾಣುವ ದೇವವಾಣಿಯ ಸೊಬಗು ಎಷ್ಟು ? ಸಾಹಿತ್ಯಸೃಷ್ಟಿಯಲ್ಲಿ ಆತನ ಸ್ಥಾನಮಾನಗಳೇನು ? ಇವೇ ಮೊದಲಾದ ವಿಷಯಗಳನ್ನು ಭಿಡೆ ಮುರವತ್ತುಗಳಿಲ್ಲದೆ ವಿಚಾರಿಸುವ ವಿಮರ್ಶಕರು ನಮಗಿಂದು ಬೇಕಾಗಿರುವರು."

ಇದು ಪ್ರಾಯೋಗಿಕಮಟ್ಟದ ಮಾತಾಯಿತು. ತಾತ್ವಿಕಮಟ್ಟದಲ್ಲಿ ಉನ್ನತ ವಿಮರ್ಶೆಯಲ್ಲಿ ಡಾ. ಹಿರೇಮಠರು ಅಪೇಕ್ಷಿಸುವುದು ಪಾಶ್ಚಾತ್ಯ ಪೌರ್ವಾತ್ಯ ವಿಮರ್ಶಾ ತತ್ವಗಳ ಸಮನ್ವಯ. ರಸಧ್ವನಿ ಲಕ್ಷಣಗಳ ಸಿದ್ಧಾಂತಗಳನ್ನು ಸತ್ಯ-ಸೌಂದರ್ಯ ತತ್ವಗಳೊಂದಿಗೆ ಸಮನ್ವಯ ಮಾಡಬಲ್ಲ ಪೌರಸ್ತ್ಯ, ಪಾಶ್ಚಾತ್ಯ ವಿಮರ್ಶಾ ಶಾಸ್ತ್ರಗಳ ಸಾರವನ್ನು ಅರಗಿಸಿಕೊಂಡ ಹೊಸಸಿದ್ಧಾಂತಗ್ರಂಥವು ನಮಗೆ ಬೇಕಾಗಿದೆ. ಕ್ರಾಂತಿಯ ನೆಪದಲ್ಲಿ ತಲೆಹಾಕುವ ಅನಿಷ್ಟಪ್ರವೃತ್ತಿ, ಸಂಪ್ರದಾಯದ ಹೆಸರಿನಲ್ಲಿ ಬರುವ ಕರುಣೆ ಅನುಸರಣೆ ಇವೆರಡನ್ನು ಅದು ತೊಡೆದುಹಾಕಬೇಕು.

"ಸಾಹಿತ್ಯ ಪ್ರಕೃತಿ, ವಿಮರ್ಶೆ ಸಂಸ್ಕೃತಿ" ಅಂದಿದ್ದಾರೆ ಕವಿವರ್ಯ ಬೇಂದ್ರೆ. ಡಾ. ಹಿರೇಮಠರು ಇದಕ್ಕೂ ಮುಂದೆ ಹೋಗಿ ಸಾಹಿತ್ಯ ಸೃಷ್ಟಿ, ವಿಮರ್ಶೆ ಸಂಸೃಷ್ಟಿ ಅಂದಿದ್ದಾರೆ. ಸಾಹಿತ್ಯಸೃಷ್ಟಿಗೆ ಬ್ರಹ್ಮಸೃಷ್ಟಿ ಆಧಾರ. ಆದರೆ ಈ ವಿಮರ್ಶೆಯೆಂಬ ಸಂ(ಸಮ್ಯಕ್)ಸೃಷ್ಟಿಗೆ ಸಾಹಿತ್ಯಸೃಷ್ಟಿಯೇ ಆಧಾರ.

ಈ ವಿಮರ್ಶಕರ ಅಭಿಮತದಂತೆ ಸಾಹಿತ್ಯ ಸಾಮ್ರಾಜ್ಯದಲ್ಲಿ ತ್ರಿದಲಶಾಸನ : ಕವಿ, ಸಹೃದಯ ಮತ್ತು ಅವರ ನಡುವಿನ ವಿಮರ್ಶಕ. ಈ ಮುಮ್ಮಡಿ ಆಡಳಿತದಲ್ಲಿ ಈ ಸಾಮ್ರಾಜ್ಯದ ಎತ್ತರ ಬಿತ್ತರ ಉತ್ತರೋತ್ತರ ಬೆಳೆಯುತ್ತಿರುತ್ತದೆ. ಈ ಮೂರೂ ಶಕ್ತಿಗಳ ಸಹಕಾರದಲ್ಲಿ ಯಾವುದೊಂದು ಊನವಾದರೂ ಸಾಹಿತ್ಯದ ಚರಿತಾರ್ಥ ಸುಗಮವಾಗದು. ಸಹೃದಯನು ಮೂಕ ಕವಿ ಮಾತ್ರವಲ್ಲ, ತನ್ನಲ್ಲಿಯ ರಸಗ್ರಹಣ ಸಾಮರ್ಥ್ಯವನ್ನು ಆತ ಸಾಮಾನ್ಯವಾಗಿ ಅರಿಯನು. ಅವನಿಗೆ ಆ ಅರಿವು ಉಂಟುಮಾಡಿಕೊಡುವ 'ಪುರೋಹಿತ' ವಿಮರ್ಶಕ. ಅದು ಹೇಗೆ ?

ಡಾ. ಹಿರೇಮಠರನ್ನೇ ಕೇಳಿರಿ : "ಸಾಹಿತ್ಯ ರಸಸೃಷ್ಟಿ ಧ್ವನಿಪೂರಿತವಾದುದು. ರಸಾಭಿವ್ಯಂಜನಶಕ್ತಿ ಧ್ವನಿಯಲ್ಲಿ ಅಡಕವಾಗಿರುವುದರಿಂದ ಧ್ವನಿಯು ಅರ್ಥವಾಗದೆ ರಸಾನುಭವವಾಗುವಂತಿಲ್ಲ. ಅದು ಕಾರಣ ಕಲಾಕೃತಿಯ ಧ್ವನಿಯನ್ನು ತಿಳಿಸಿ ಗುಣ-

ದೋಷಗಳನ್ನು ವಿವರಿಸುವ ಹೊಸಸೃಷ್ಟಿ ಆರಂಭವಾಯ್ತು. ಈ ವಿಮರ್ಶನ ಸೃಷ್ಟಿ ಯನ್ನೇ ಸಾಹಿತ್ಯದ ಸಂಸೃಷ್ಟಿ ಎಂದು ಕರೆಯುವುದು." ಈ ಸೃಷ್ಟಿಯೂ ಸಾರ್ಥಕ ವಾಗಬೇಕಾದರೆ ವಿಮರ್ಶೆಯು ಭಾರತೀಯ ಮತ್ತು ಪಾಶ್ಚಾತ್ಯ ತತ್ವಗಳ ಸಮನ್ವಯದ ಅಗತ್ಯವನ್ನು ಡಾ. ಹಿರೇಮಠರು ಮತ್ತೆಮತ್ತೆ ಒತ್ತಿ ಹೇಳುತ್ತಾರೆ. ಅಂಥ ಸಮನ್ವಯವನ್ನು ಅವರ ಇತಿಹಾಸ ವಿವೇಚನೆಗಳನ್ನು ಒಳಗೊಂಡ ಒಂದು ಪ್ರಬಂಧ ಅವರ ಕೈಯಿಂದ ಹೊರಬರಲಿತ್ತು- ಇನ್ನೂ ಬರಬಹುದು, ಬರಬೇಕು. ಭಾರತೀಯ ಸಾಹಿತ್ಯವಿಮರ್ಶೆಯಲ್ಲಿ ಬರುವ ರಸ-ಧ್ವನಿ-ರೀತಿ-ಅಲಂಕಾರ-ಶಬ್ದಾರ್ಥ ಪ್ರತಿಪತ್ತಿ ಇತ್ಯಾದಿಗಳೊಂದಿಗೆ ಸತ್ಯ-ಸೌಂದರ್ಯ-ಯುಗಧರ್ಮ-ಆದರ್ಶ-ವಾಸ್ತವತೆ ಇತ್ಯಾದಿ ಪಾಶ್ಚಾತ್ಯ ವಿಮರ್ಶಾ ತಥ್ಯಗಳನ್ನು ಸಮ್ಯಕ್‌ವ್ಯವಸ್ಥೆಯಲ್ಲಿ ಅಳವಡಿಸಿ ಹೊಸದೊಂದು ರಸಸೌಂದರ್ಯ ಮೀಮಾಂಸೆ ಸಂಪನ್ನವಾದಾಗಲೇ ಈ ಸಂಸೃಷ್ಟಿ ಪೂರ್ತಿ ಆಗುವುದು. ತೌಲನಿಕ ಭಾಷಾಶಾಸ್ತ್ರಜ್ಞರೂ ಸಾಹಿತ್ಯಪಂಡಿತರೂ ಕನ್ನಡಭಾಷೆಯ ಕಟ್ಟುಪಾಡನ್ನೇ ವ್ಯಾಖ್ಯಾನಿಸಿದ ಹೊಸ ನಿರುಕ್ತಕಾರರೂ ವಿಶಾಲವ್ಯಾಸಂಗದಿಂದ ತೇಜಸ್ವಿಯಾದ ವಿಮರ್ಶಕ ಪ್ರಜ್ಞೆ ಪಳಗಿಸಿಕೊಂಡವರೂ ಆದ ಡಾ. ಹಿರೇಮಠರು ವಿಮರ್ಶೆಯಲ್ಲಿ ಸಮಗ್ರತೆಯ ಹಾಗೂ ಸಮನ್ವಯದ ಮಾರ್ಗವನ್ನು ತಮ್ಮ ಅಕ್ಷುಣ್ಣಪ್ರತಿಭೆಯಿಂದಲೂ ಪ್ರಸನ್ನಶೈಲಿಯಿಂದಲೂ ಬೆಳಗಬೇಕು.

ಶೈಲಿಯ ಬಗೆಗೆ ಅವರ ಅಭಿಪ್ರಾಯಗಳು ನಿಜವಾಗಿಯೂ ಉಲ್ಲೇಖನೀಯವಾಗಿವೆ :

"ಸಹೃದಯರಿಗೆ ರಸಸಮಾಧಿಯನ್ನು ನೀಡಿ ಕವಿ ಕಂಡ ದರ್ಶನದ ಸಾಕ್ಷಾತ್ಕಾರಪಡಿಸುವ ಶಬ್ದಶಕ್ತಿಯನ್ನೇ ಕಾವ್ಯಶೈಲಿಯೆಂದು ಕರೆಯಬಹುದು." ತನ್ನ ಈ ವ್ಯಾಖ್ಯೆಗೆ ಅವರು ವಾಗೀಶ್ವರನ ಶ್ಲೋಕಾರ್ಧವನ್ನೊಂದು ಪ್ರಮಾಣವಾಗಿ ನೀಡಿದ್ದಾರೆ : "ಚಿತ್ತಪ್ರಸುಪ್ತ-ಸಂಸ್ಕಾರಬೋಧಿನೀ ಮೋದದಾಯಿನೀ" ಶೈಲಿಯು ಕವಿಯ ಶೀಲವನ್ನೂ ಮನೋ-ಧರ್ಮವನ್ನೂ ಕನ್ನಡಿಸುತ್ತದೆ. ("ಶೀಲಸ್ಯ ಇಯಂ ಶೈಲೀ") "Style is the man." "ಶೈಲಿಯೆಂದರೆ ಕೇವಲ ಶಬ್ದಾಲಂಕಾರವಲ್ಲ, ಕವಿಸಮಯವಲ್ಲ, ಗುಣವಲ್ಲ, ರೀತಿಯಲ್ಲ. ಬಿಡಿಯಲ್ಲಿ ಯಾವುದೂ ಅಲ್ಲ. ಇಡಿಯಲ್ಲಿ ಎಲ್ಲವೂ ಅಹುದು. ರಸಸೃಷ್ಟಿ ಯನ್ನು ಹೊಸಸೃಷ್ಟಿಯನ್ನು ನಿರ್ಮಾಣ ಮಾಡುವ ಕವಿಯ ಇಂದ್ರಜಾಲವೆಲ್ಲ ಈ ಶೈಲಿಯಲ್ಲಿಯೇ ಅಡಕವಾಗಿರುವದು" ಎಂದ ಈ ಮರ್ಮಜ್ಞರು ಕೊನೆಗೆ 'ಅತ್ಯತಿಷ್ಠ ದ್ದಶಾಂಗುಲಂ' ಎಂಬಂತೆ ಶೈಲಿಯೆಂಬುವದು ಎಲ್ಲ ವ್ಯಾಖ್ಯೆಗಳನ್ನು ಮೀರಿ ಆಚೆಗೆ ನಿಲ್ಲುತ್ತದೆಂದು ಹೇಳಿ ಅದಕ್ಕೂ ವಿದ್ಯಾವಾಗೀಶ್ವರನ ಇನ್ನೊಂದು ಶ್ಲೋಕಾರ್ಧವನ್ನು ಉದಾಹರಿಸುತ್ತಾರೆ : "ವಿಲಕ್ಷಣಾಹಿ ಸಾ ಶೈಲೀ ಕವೀಂದ್ರಮತಿಕಲ್ಪಿತಾ."

ಅವಂತಿಸುಂದರಿ ಎಂಬ ಲಾಕ್ಷಣಿಕ ವಿದುಷಿಯು 'ಶೈಲಿಯನ್ನು' 'ವಿದಗ್ಧಭಣಿತ ಭಂಗಿಮೇ' ಎಂದು ಕರೆದಿದ್ದಾಳೆ. ಆದರೆ ಆ ಭಂಗಿಮೆಯ ಸ್ವರೂಪವೇನೆಂದು ಹೇಳಲಿಲ್ಲ.

'Style is subduing matter to form' ಎಂಬುದೂ ವ್ಯಾಪ್ತಿ ಇದೆ. ಸ್ವವಿಚಾರಗಳನ್ನೆಲ್ಲ ರಮಣೀಯರೂಪವಾಗಿ ಮಾರ್ಪಡಿಸುವ ಕೌಶಲ್ಯವೇ ಶೈಲಿ. ಅದು ಒಂದು ರೀತಿ ಅನಿರ್ವಚನೀಯ: ಆದರೂ ಅನುಭವ ವೇದ್ಯ (ಎಲ್ಲ ಆಳವಾದ ಅನುಭವವೂ ಅನಿರ್ವಚನೀಯವೇ ಸರಿ). ಯಾವ ಕವಿಯು ಕಾವ್ಯವನ್ನೋದಿದರೂ ಅಲ್ಲಿಯ ವಸ್ತು, ಪಾತ್ರ, ಸನ್ನಿವೇಶ, ಸಮಯ ಮತ್ತು ಕವಿಯ ಮನೋಧರ್ಮ ಇವುಗಳಿಗೆ ಅನುಗುಣವಾಗಿ ಒಂದು ವಿಶಿಷ್ಟಶೈಲಿಯ ಅನುಭವ ನಮಗಾಗುತ್ತದೆ. ಹೀಗೆ ವ್ಯಕ್ತಿಗತವೂ ಆಗಿದೆ ಕಾಮರೂಪಿ ಶೈಲಿ.

ಇಲ್ಲಿ ಡಾ ಹಿರೇಮಠರು ಇನ್ನೊಂದು ವಿಧಾನವನ್ನು ಮಾಡಿದ್ದಾರೆ. "ದರ್ಶನಶಕ್ತಿಯನ್ನು ಸ್ವಲ್ಪ ಹೆಚ್ಚು ಕಡಿಮೆ ಎಲ್ಲ ಮಾನವರೂ ಪಡೆದಿರುತ್ತಾರೆ". ಇಲ್ಲಿ ಕವಿ ಕುವೆಂಪು ಅವರ ಮಾತನ್ನೇ ಬಳಸಿ ಅವರು ಹೀಗೆನ್ನುತ್ತಾರೆ : "ಅಂತೆಯೇ ಸೂರ್ಯೋದಯ ಚಂದ್ರೋದಯಗಳ ಸೊಬಗನ್ನು ಸವಿಯಲು ದೇವರ ದಯೆ ಎಲ್ಲರಿಗೂ ಇದೆ." ಇಲ್ಲಿ ಅವರು ದರ್ಶನಶಕ್ತಿಯನ್ನು ಸೌಂದರ್ಯಾನುಭೂತಿಯ ಶಕ್ತಿಯೊಂದಿಗೆ ಒಂದಾಗಿಸಿದ್ದಾರೆ. ಕಲ್ಪನೆ ಊಹೆ ಉತ್ಪ್ರೇಕ್ಷೆ, ಪ್ರಸ್ತುತದಲ್ಲಿ ಅಪ್ರಸ್ತುತವನ್ನು ನೆನೆಯುವ, ಲೌಕಿಕದಲ್ಲಿ ಅಲೌಕಿಕವನ್ನು ಕಾಣುವ ಒಂದು ವಿಶಿಷ್ಟವೋ ವಿಲಕ್ಷಣವೋ ಆದ ಮನೋವ್ಯಾಪಾರವೆಂದು ಅದನ್ನು ಪರಿಮಿತವಾಗಿ ಗುರುತಿಸಿಲ್ಲ.

ಹೀಗೆ ದರ್ಶನಶಕ್ತಿಯನ್ನು ಎಲ್ಲ ಮಾನವರು ಪಡೆದಿದ್ದರೂ ತಾವು ಕಂಡ ದರ್ಶನವನ್ನು ಪ್ರದರ್ಶಿಸುವ ಸಾಮರ್ಥ್ಯ ಮಾತ್ರ ಕೆಲವರಿಗೇ ಮೀಸಲಾಗಿರುತ್ತದೆ. ಇಂಥವರನ್ನೇ ಕಲಾವಿದರು ಕವಿಗಳು ಎಂದು ಕರೆಯುವುದು. ಈ ಸಾಮರ್ಥ್ಯವು ಅವರಿಗೆ ಹೃದಯ ಸಂಸ್ಕಾರರೂಪವಾಗಿ ಬಂದಿರುತ್ತದೆ. ಇದುವೇ ಶೈಲಿ. ಇದಕ್ಕೆ ಅವರು ಕ್ವಿಲರಕೂಚ್‌ನ ಮಾತನ್ನೇ ಪುಷ್ಟಿಗಾಗಿ ಕೊಡುತ್ತಾರೆ.

ಈ ಶಕ್ತಿ (ಶೈಲಿ)ಯಿಂದಲೇ ಯಾವ ಭಾವವೇ ಆಗಲಿ, ವಿಚಾರವೇ ಆಗಲಿ ಅದನ್ನು ಪ್ರದರ್ಶಿಸುವಲ್ಲಿ ಇದೇ ಕೊನೆಯ ರೀತಿಯೆಂದೆನ್ನುವಂತೆ ಹೇಳುವ 'ಕೈಗುಣ' ಪಳಗುತ್ತ ಇಂಥ ಶೈಲಿಯಿಂದ ಕವಿವಾಣಿಗೆ ಜನವಾಣಿ ಜಾಣ್ಣುಡಿಯನ್ನು ತುಂಬಿದರೆ, ಜನವಾಣಿಗೆ ಕವಿವಾಣಿ ನಾಣ್ಣುಡಿಯನ್ನು ಪೂರೈಸುತ್ತದೆ. ಇಂಥ ಮಹಾಶೈಲಿಯಲ್ಲಿ ಭಾವಭಾಷೆಗಳ ಸರಸಸಂಬಂಧವನ್ನು ಕಾಣುತ್ತೇವೆ. ತನ್ನ ದರ್ಶನದ ಪ್ರದರ್ಶನಕ್ಕೆ ಇಷ್ಟು ಒಂದೇ ಸಾಧನ. ವಸ್ತು ಸನ್ನಿವೇಶ ಪಾತ್ರ, ಭಾವಗಳಿಗೆ ತಕ್ಕಂತೆ ಪದಪ್ರಯೋಗ ಮಾಡುವುದು ಘನಶೈಲಿಯ ಲಕ್ಷಣ. ಹೀಗೆ ತಾರತಮ್ಯದಿಂದ ಭಾಷೆಯನ್ನು ಉಪಯೋಗಿಸುವುದು ಮಹಾಕವಿಗಳಿಗೆ ಮಾತ್ರ ಸಾಧ್ಯ. ಅದಕ್ಕಾಗಿಯೇ ಕಾಳಿದಾಸನು ವಾಗರ್ಥ ಸಂಪೃಕ್ತಿಯಲ್ಲಿ ಪಾರ್ವತಿ ಪರಮೇಶ್ವರರನ್ನು ಕಂಡು ವಾಗರ್ಥಪ್ರತಿಪತ್ತಿಯನ್ನು ಪ್ರಾರ್ಥಿಸಿದನು. ಭಾಷೆಯಿಂದ ಭಾವನೆಗೆ ಅದನ್ನು ಚಿತ್ರಿಸುವ ಕವಿಶೈಲಿಯಲ್ಲಿಯೂ ಸೂಕ್ತ

ಬದಲಾವಣೆ ಆಗಬೇಕು. ಇಂಥ ಶಬ್ದಾರ್ಥಸಂಯೋಗದಿಂದಲೇ ಶೈಲಿಗೆ ಕಳೆ ಏರುತ್ತದೆ ಎಂಬುದನ್ನು ಈ ಹಿರಿಯ ವಿಮರ್ಶಕರು ನೂರಾರು ಸಮರ್ಪಕ ಹಾಗೂ ಸಂದರ್ಭೋಚಿತ ಕಾವ್ಯಪಂಕ್ತಿಗಳ ಉದಾಹರಣೆಗಳಿಂದ ಅತ್ಯಂತ ಪರಿಣಾಮಕಾರಿಯಾಗಿ ದಿಟಗೊಳಿಸಿದ್ದಾರೆ.

ಇಂಥ ಶೈಲಿಯ ಔಚಿತ್ಯ ಔನ್ನತ್ಯಗಳೊಂದಿಗೆ ಸಹೃದಯತೆಯ ಔದಾರ್ಯವನ್ನು ಸಮಪಾಕವಾಗಿ ಬೆರೆಸಿ ಡಾ. ಹಿರೇಮಠರು ತಮ್ಮ ವಿಮರ್ಶಾಗದ್ಯದ ಶೈಲಿಯನ್ನು ಎರಕ ಹೊಯ್ದಿದ್ದಾರೆ. ಇವರ ವಿಮರ್ಶಾಶಕ್ತಿಯ ಮೇಲ್ಮೆಗೆ ಇವರ 'ರಾಘವಾಂಕ' ಗ್ರಂಥ ಒಂದೇ ಧ್ವನ್ಯದ್ಯೋತಕ. ಕವಿ ರಾಘವಾಂಕನಂತೆಯೇ ಇವರೂ ತಮ್ಮ ಆಳವಾದ ಅಳವು ಮೀರದ ಪಾಂಡಿತ್ಯವನ್ನು ಮೆರೆಯಿಸಲು ಹೊರಟವರಲ್ಲ. ಆದರೂ ಅದರ ಪ್ರಭಾವ ಅವರ ವಿಮರ್ಶೆಯ ಪ್ರತಿಯೊಂದು ಪ್ರಬಂಧದಲ್ಲಿಯೂ ಅದರ ವಿವಿಧ ವಿಚಾರಕ್ಷೇತ್ರಗಳಲ್ಲಿಯೂ ಕಂಗೊಳಿಸದೇ ಹೋಗುವುದಿಲ್ಲ. ಸಂಶೋಧನೆ, ಕೃತಿವಿಮರ್ಶೆ, ಕಾವ್ಯಾಂಗ ವಿವೇಚನೆ ಮತ್ತು ಪರಂಪರೆಯಲ್ಲಿ ಕವಿಯ ಸ್ಥಾನಮಾನ ಹಾಗೂ ಜೀವನದರ್ಶನದ ಮೌಲ್ಯಮಾಪನೆ —ಇವೆಲ್ಲ ಅಂಗಗಳಲ್ಲಿಯೂ ಅವರ ತರ್ಕಸಂಗತಿ ವಾಗ್ವ್ಯವಸ್ಥಿತಿ ಮತ್ತು ಅಕುಂಠಿತಮತಿ ಕೂಲಂಕಷವಾಗಿ, ಸರ್ವಂಕಶವಾಗಿ ವಿಶ್ವಾಸದಿಂದ ಅಷ್ಟೇ ವಿಕ್ರಮದಿಂದ ಸಂಚರಿಸುತ್ತದೆ. ಪ್ರಭುತ್ವದ ಭಾಷೆಯೊಂದಿಗೆ ಕೂಡಿದ ಅವರ ಭಾಷೆಯ ಪ್ರಭುತ್ವ ಅವರೇ ಪ್ರತಿಪಾದಿಸಿದ ಶೈಲಿಯ ಸುಭಗತೆಗೂ ಪ್ರೌಢಿಮೆಗೂ ಮಾದರಿ. ಕ್ವಿಲರಕೂಚ್ ನಿರ್ದೇಶಿಸಿದ ease, grace ಮತ್ತು precision ಡಾ. ಹಿರೇಮಠರ ವಿಮರ್ಶಾಶೈಲಿಯ ಒಡೆದೆದ್ದು ಕಾಣುವ ಗುಣ. ಅವರದೇ ಮಾತುಗಳಲ್ಲಿ ಹೇಳುವದಾದರೆ, ಕವಿಹೃದಯದ ವಿಮರ್ಶಕಶಕ್ತಿ, ಸಾಮಾಜಿಕ ಹೃದಯದ ಕಾವ್ಯಶಕ್ತಿ ಇವೆರಡೂ ಬಲಗೊಳ್ಳಬೇಕಾದರೆ, ಅತ್ಯಾವಶ್ಯಕವಾದ ವಿಮರ್ಶೆಗೆ ಇವರ ವಿಮರ್ಶಾಲೇಖನದ ಸತ್ವ-ಸ್ವತ್ವ ಶೋಭೆಗಳೇ ಉತ್ತಮ ಸಾಕ್ಷಿ. ಈ ವಿಮರ್ಶಕನೂ ಸಾಹಿತ್ಯನಂದನವನ್ನು ಹಸನಗೈಯುವ ಕಾಯಕವನ್ನು ಒಂದು ಕೈಯಿಂದ ಮಾಡಿದರೆ ಇನ್ನೊಂದು ಕೈಯಿಂದ ಆ ನಂದನದ ಫಲಗಳನ್ನು ಸಹೃದಯಿಕೆಗಾಗಿ ಸಾಧ್ಯಗೊಳಿಸುತ್ತಾನೆ. ವಿಮರ್ಶಕನ ಕ್ರಿಯಾಸಿದ್ಧಿಯ ಸಾಫಲ್ಯ ಇದಕ್ಕಿಂತ ಬೇರೆ ಇನ್ನೇನು ?

ಕ್ರಾಂತಿಕಾರಿ ಮಹಾಕವಿಯಾದ ರಾಘವಾಂಕನಿಂದ "ಕ್ರಾಂತಿಯ ಹೆಸರಿನಲ್ಲಿ ಕಡೆಗಣಿಸಿಬಿಟ್ಟ ಅರ್ವಾಚೀನ ಚೆನ್ನಕವಿ"ಗಳ ವರೆಗಿನವರನ್ನು ಇವರು ಸಮದರ್ಶಿಯಾದ ಗುಣಗ್ರಾಹಕತೆಯಿಂದ ನೋಡಿ ಮೆಚ್ಚಿ ಪರೀಕ್ಷಿಸುವ ಹೃದಯದ ವೈಶಾಲ್ಯವೂ ತತ್ವಾನ್ವೇಷಣೆಯ ಲವಲವಿಕೆಯೂ ನಿಜವಾದ ಪ್ರಾಜ್ಞತೆಯ ಕರ್ತವ್ಯಪ್ರಜ್ಞೆಯೂ ಅತ್ಯಂತ ಕೌತುಕಾಸ್ಪದವೆಂದರೆ ತಪ್ಪಾಗಲಾರದು.

■ ■

# ಡಾ. ಆರ್. ಸಿ. ಹಿರೇಮಠ ಅವರ ಗದ್ಯಶೈಲಿ

ವರದರಾಜ ಹುಯಿಲಗೋಳ

“ಪದ್ಯಂ ವದ್ಯಂ, ಗದ್ಯಂ ಹೃದ್ಯಂ, ಹೃದ್ಯಮಪ್ಪ ಗದ್ಯದೊಳೆ ಪೇಳ್ವುದು”—ರಾಮಾಶ್ವಮೇಧದಲ್ಲಿ ಮನೋರಮೆ ಮುದ್ದಣನಿಗೆ ಹೇಳಿದ ಈ ಮಾತು, ಆಧುನಿಕಸಾಹಿತ್ಯಕ್ಕೆ ಭವಿಷ್ಯವಾಣಿಯಾಗಿಯೇ ಪರಿಣಮಿಸಿದೆ; ಮುದ್ದಣನ ರಾಮಾಶ್ವಮೇಧದ ಕಾಲದ ವರೆಗೂ ಸಹಸ್ರಾರು ವರುಷಗಳಿಂದ ಬೆಳೆದುಬಂದ ಕನ್ನಡಸಾಹಿತ್ಯದಲ್ಲಿ ಹೆಚ್ಚಾಗಿ ಪದ್ಯಕ್ಕೆ ರಾಜಕಿರೀಟವಿದೆ. ಚಂಪುಕೃತಿಗಳಲ್ಲಿ ನುಸುಳಿಬಂದ ಗದ್ಯ, ವಡ್ಡಾರಾಧನೆ ಪಂಚತಂತ್ರ ಮುಂತಾದವುಗಳಲ್ಲಿರುವ ಗದ್ಯ, ವಚನಸಾಹಿತ್ಯದಲ್ಲಿಯ ಗದ್ಯ ಇವೆಲ್ಲವೂ ಉಸುಬಿನಲ್ಲಿ ಹಸಿರು ನೆಲೆಗಳು ಇದ್ದ ಹಾಗೆ. ಆದರೆ ೨೦ ನೆಯ ಶತಮಾನದ ಆದಿ ಕಾಲದಿಂದಲೂ ಕನ್ನಡಸಾಹಿತ್ಯದಲ್ಲಿ ಗದ್ಯದ ಸಿರಿವಂತಿಕೆ ಬೆಳೆದಿದೆ.

ಈ ಗದ್ಯ ಅಭಿವೃದ್ಧಿ ಪಡೆದ ರೀತಿಯೂ ಅನುಪಮ. ಕತೆ, ಕಾದಂಬರಿ. ನಾಟಕ, ಪ್ರಬಂಧ. ಲಲಿತಪ್ರಬಂಧ— ಈ ವಿವಿಧ ಸಾಹಿತ್ಯಪ್ರಕಾರಗಳ ಮಾಧ್ಯಮ ಗದ್ಯವೇ ಆಗಿದೆ. ಸಾಹಿತ್ಯದ ಈ ಹೊಸರೂಪಗಳು ಕನ್ನಡದಲ್ಲಿ ಕಂಡುಬಂದುದು ಈ ಶತಮಾನದ ಪೂರ್ವಾರ್ಧದಲ್ಲಿ. ಪಾಶ್ಚಿಮಾತ್ಯರ ಪ್ರಭಾವದಿಂದ ನಮ್ಮ ಸಾಹಿತ್ಯ ಎಷ್ಟೋ ವರುಷ ಒಂದೆಡೆಗೇ ನಿಂತ ನೆಲೆಯನ್ನು ತೊರೆದು, ಹರುಷದಿಂದ ಹೊಸಪ್ರದೇಶಗಳಲ್ಲಿ ಹರಿಯಿತು. ಇಂಥ ಹೊಸತನದಲ್ಲಿ ಕನ್ನಡ ಗದ್ಯವೂ ವಿಶಿಷ್ಟರೀತಿಯಲ್ಲಿ ಜೀವ ಪಡೆಯಿತು, ಇನ್ನೂ ಪಡೆಯುತ್ತಿದೆ.

ಗದ್ಯಶೈಲಿ ಎಂದರೆ ಪದ್ಯವನ್ನು ಬಿಟ್ಟು ಉಳಿದ ಸಾಹಿತ್ಯಪ್ರಕಾರಗಳಾದ ಕತೆ, ಕಾದಂಬರಿ, ಲಲಿತಪ್ರಬಂಧ, ನಾಟಕ ಇವೆಲ್ಲವುಗಳಲ್ಲಿರುವ ಶೈಲಿ ಎಂದೇ ಅರ್ಥವಾಗು

ತ್ತವೆ. ಆದರೆ ಡಾ. ಆರ್. ಸಿ. ಹಿರೇಮಠ ಅವರು ಗದ್ಯದಲ್ಲಿ ಕತೆ, ಕಾದಂಬರಿ ಮುಂತಾದವುಗಳನ್ನು ಏನಲ್ಲಿ ರಚಿಸಿದ್ದಾರೆ ? ಎಂದೂ ಪ್ರಶ್ನಿಸಬಹುದು. ಇಂಥವರು ಡಾ. ಆರ್. ಸಿ. ಹಿರೇಮಠ ಅವರು ಬರೆದ, ಸುಗ್ಗಿಯ ದಿನಗಳಲ್ಲಿ ಬಾಗಿದ ತೆನೆಗಳಂತಿರುವ. ಅವರ ವಿಪುಲವಾದ ವೈವಿಧ್ಯಪೂರ್ಣ ಪ್ರಬಂಧಗಳನ್ನು ಪರಿಶೀಲಿಸಬೇಕು.

ಡಾ. ಆರ್. ಸಿ, ಹಿರೇಮಠ ಅವರ ಗದ್ಯಶೈಲಿಯನ್ನು ನಾವು ಮೂರು ರೀತಿಗಳಲ್ಲಿ ವಿಂಗಡಿಸಿ ಪರಿಶೀಲಿಸಬಹುದು : ೧. ಈಗಾಗಲೇ ಪ್ರತ್ಯೇಕವಾಗಿ ಪ್ರಕಟಗೊಂಡ ಗದ್ಯ ಗ್ರಂಥಗಳು— 'ಸಾಹಿತ್ಯಸಂಸ್ಕೃಷ್ಟಿ', 'ಮಹಾಕವಿ ರಾಘವಾಂಕ' 'ಷಟ್‌ಸ್ಥಲ ಪ್ರಭೆ'. ೨. ವಿವಿಧ ಗ್ರಂಥಗಳಲ್ಲಿ ಪ್ರಕಟಗೊಂಡ ಮುನ್ನುಡಿಗಳು. ೩. ಅಲ್ಲಲ್ಲಿ ಮುದ್ರಿತವಾದ ಬಿಡಿ ಲೇಖನಗಳು.

'ಗದ್ಯಶೈಲಿ'ಯ ವಿವೇಚನೆ ಬಹು ಕಷ್ಟದಾಯಕವಾದುದು. ತಮ್ಮ ಇತ್ತೀಚಿನ 'ಗದ್ಯ ಶೈಲಿ' ಗ್ರಂಥದಲ್ಲಿ ಶೈಲಿಯನ್ನು ಕುರಿತು ದೇಜಗೌ ಅವರು ಹೇಳಿದುದು ಹೀಗಿದೆ : "ಶೈಲಿ ಮುಷ್ಟಿಗ್ರಾಹ್ಯವಲ್ಲದ ಅಮೂರ್ತವೂ ಅಪೂರ್ವವೂ ಆದ ಶಕ್ತಿ ಅಥವಾ ವಸ್ತು. ಅದರ ಜಾಡು ಹುಡುಕುವುದು ಮೀನಿನ ಹೆಜ್ಜೆ ತಡಕುವಷ್ಟೇ ಕಷ್ಟ. ಅದರ ಸ್ವರೂಪ ಕಂಡೂಕಾಣದಂತೆ ಮಿಂಚಿ ಮಾಯವಾಗುತ್ತದೆ. ಅದರೊಡನೆಯ ಸೆಣಸಾಟ ಗಾಳಿ ಗುದ್ದಾಟವಾಗುತ್ತದೆ; ಅದನ್ನು ಸೂತ್ರಗಳಿಂದ ಬಂಧಿಸುವುದೆಂದರೆ ಗಾಳಿಯನ್ನು ಸೆರೆ ಹಿಡಿದಂತಾಗುತ್ತದೆ; ಕೆರೆಯ ಮೀನನ್ನೇ, ಎಣ್ಣೆಹಚ್ಚಿಕೊಂಡು ಬಂದ ಜಟ್ಟಿಯನ್ನೇ ಹಿಡಿದಂತಾಗುತ್ತದೆ. ಜಾಡು ನುಣುಚುಗಳೇ ಅದರ ಸ್ವಾಭಾವಿಕ ಲಕ್ಷಣಗಳು. ಆದ್ದರಿಂದಲೇ ಅದರ ಬಗ್ಗೆ ಏಕಾಭಿಪ್ರಾಯ ಸಂಘಟನೆ ಸಾಧ್ಯವಾಗುವುದಿಲ್ಲ". ಅನೇಕ ವಿದ್ವಾಂಸರ ಅಭಿಪ್ರಾಯಗಳೂ ಹೀಗೆಯೇ ವ್ಯಕ್ತವಾಗಿವೆ. ಏನೇ ಇದ್ದರೂ ಶೈಲಿ ಅದೊಂದು ಶಕ್ತಿ. ಹೃದಯದೊಳಗಿರುವ ಭಾವನೆಗಳಿಗೆ, ಮನದೊಳಗಿರುವ ವಿಚಾರಗಳಿಗೆ ಅವು ವ್ಯಕ್ತವಾಗುವಂತೆ ಒಂದು ವಿಶಿಷ್ಟರೂಪವನ್ನು ಕೊಡುತ್ತದೆ ಶೈಲಿ ; ಅಮೂರ್ತಸ್ವರೂಪದಲ್ಲಿದ್ದ ಭಾವನೆಗಳಿಗೆ ಮೂರ್ತಸ್ವರೂಪ ಕೊಡುತ್ತದೆ ಆ ಶೈಲಿ.

ತಮ್ಮ ಅಭಿವ್ಯಕ್ತಿಗೆ ಡಾ. ಆರ್. ಸಿ. ಹಿರೇಮಠ ಅವರು ವಿಮರ್ಶಾತ್ಮಕ ಪ್ರಬಂಧಗಳ ಸಾಹಿತ್ಯಪ್ರಕಾರವನ್ನೇ ಆಯ್ಕೆಮಾಡಿಕೊಂಡಿದ್ದರೆಂದು ಹೇಳಬೇಕು. ಅವರ ಶೈಲಿ ಸಾಧನೆಯು ಇಂಥ ಸಾಹಿತ್ಯದ ಗದ್ಯದಲ್ಲಿಯೇ ಇದೆಯೆಂಬುದು ಸ್ಪಷ್ಟವಿದೆ.

ವ್ಯಕ್ತಿಯ ವ್ಯಕ್ತಿತ್ವವನ್ನು ತಿಳಿದುಕೊಂಡರೆ, ಅವರ ಶೈಲಿಯೂ ವಿದಿತವಾಗುತ್ತದೆ ಎನ್ನುತ್ತಾರೆ. 'Style is the man' ಎಂಬ ಇಂಗ್ಲೀಷ ಹೇಳಿಕೆಯುಂಟು. ಡಾ. ಆರ್. ಸಿ. ಹಿರೇಮಠ ಅವರು ಕನ್ನಡ ಹಾಗೂ ಸಂಸ್ಕೃತಗಳಲ್ಲಿ ವಿದ್ವಾಂಸರು. ಇವೇ ವಿಷಯಗಳಲ್ಲಿ ಅವರು ಅಪೂರ್ವ ಪಾಂಡಿತ್ಯ ಪಡೆದು ಉನ್ನತಪದವೀಧರರಾಗಿ

ದ್ದಾರೆ. ಅಂದರೆ ಸಂಸ್ಕೃತ ಭಾಷೆಯ ಪ್ರಭಾವವೂ ಅವರ ಕನ್ನಡ ಗದ್ಯಶೈಲಿಯಲ್ಲಿ ಇರಬೇಕೆಂಬುದನ್ನು ಸಹಜವಾಗಿ ತರ್ಕಮಾಡಬಹುದು. ಇದರ ಜೊತೆಗೆ ಡಾ. ಆರ್. ಸಿ. ಹಿರೇಮಠರದು ಕವಿಹೃದಯವೆಂಬುದನ್ನು ನೆನೆಯಬೇಕು. ಹದಿನಾಲ್ಕು ವರುಷದವರಿದ್ದಾಗಲೇ, ಅವರು ಕವನಗಳನ್ನು ಬರೆಯಲು ಪ್ರಾರಂಭಿಸಿ. ೧೯೪೮ ರಲ್ಲಿ 'ಸುಮಾಂಜಲಿ' ಎಂಬ ತಮ್ಮ ಮೊದಲ ಕವನ ಸಂಗ್ರಹವನ್ನು ಪ್ರಕಟಿಸಿದರು. ಅವರ ಪ್ರಥಮ ಕೃತಿ ಕಾವ್ಯವಾದರೂ ಅನಂತರದ ಬರೆಹಗಳೆಲ್ಲವೂ ವಿಮರ್ಶಾತ್ಮಕ ಪ್ರಬಂಧಗಳೇ ಆಗಿವೆ. ಭೀಮಕವಿಯ 'ಬಸವ ಪುರಾಣ'. ಪದ್ಮಣಾಂಕನ 'ಪದ್ಮರಾಜ ಪುರಾಣ', ರಾಘವಾಂಕನ 'ಸೋಮನಾಥ ಚಾರಿತ್ರ' ಷಡಕ್ಷರದೇವನ 'ರಾಜಶೇಖರ ವಿಳಾಸ', ಸುರಂಗಕವಿಯ 'ತ್ರಿಷಷ್ಟಿ ಪುರಾತನ ಚಾರಿತ್ರ', 'ಮಹಾದೇವಿಯಕ್ಕನ ವಚನಗಳು'—ಹೀಗೆ ಅನೇಕ ಗ್ರಂಥಗಳನ್ನು ಪರಿಷ್ಕರಿಸಿ ಅವುಗಳಿಗೆ ಟೀಕೆ. ಟಿಪ್ಪಣಿಗಳಲ್ಲದೆ ಪಾಂಡಿತ್ಯಪೂರ್ಣ ಮುನ್ನುಡಿಗಳನ್ನು ಬರೆದಿರುವರು. ಸಂಸ್ಕೃತ ಕನ್ನಡ ಹೀಗೆ ಉಭಯ ಭಾಷೆಗಳ ಪಾಂಡಿತ್ಯ, ಕವಿಹೃದಯ, ವಿಮರ್ಶಕನ ತೀಕ್ಷ್ಣತೆ ಇವು ಡಾ. ಆರ್. ಸಿ. ಹಿರೇಮಠರ ಗದ್ಯಶೈಲಿಯಲ್ಲಿ ಕಾಣಬೇಕಾದ ಲಕ್ಷಣಗಳಾಗಿವೆ.

ಆದರೆ ಡಾ. ಆರ್. ಸಿ. ಹಿರೇಮಠರ ಗದ್ಯದಲ್ಲಿ ಸಂಸ್ಕೃತಕ್ಕೆ ಪ್ರಾಧಾನ್ಯವೇ ಇಲ್ಲ. ಅವರ ಶೈಲಿಯಲ್ಲಿ ಸಂಸ್ಕೃತ ಶಬ್ದಗಳ ಬಳಕೆಯೂ ಕಡಿಮೆ. ಸಂಸ್ಕೃತ ಕವಿಗಳ ವಾಕ್ಯಗಳನ್ನು ಉದ್ಧರಿಸುವುದೂ ವಿರಳ. 'ಮಹಾಕವಿ ರಾಘವಾಂಕ' ಗ್ರಂಥದಲ್ಲಿ ಶೈಲಿಯ ಬಗ್ಗೆ ವಿವೇಚಿಸುವಾಗ ಕೆಳಗಿನ ವಾಕ್ಯಗಳಿವೆ (ಪುಟ ೨೦೧) :

"ಚಿತ್ತಪ್ರಸುಪ್ತ ಸಂಸ್ಕಾರಬೋಧಿನೀ ಮೋದದಾಯಿನೀ" ಎಂದು ವಿದ್ಯಾವಾಗೀಶ್ವರನು ಶೈಲಿಯ ವ್ಯಾಖ್ಯೆಯನ್ನು ಕಟ್ಟುವುದು ಈ ಅರ್ಥದಲ್ಲಿಯೆ... "ಶೀಲಸ್ಯೇಯಂ ಶೈಲೀ" ...ಎಂಬುದರ ಮಥಿತಾರ್ಥ ಇದೇ ಎಂದು ಹೇಳಬಹುದು... ಆದರೆ 'ಅತ್ಯತಿಷ್ಠತ್ ದಶಾಂಗುಲಮ್' ಎಂಬಂತೆ ಶೈಲಿಯೆಂಬುದು ಎಲ್ಲ ವ್ಯಾಖ್ಯೆಗಳನ್ನು ಮೀರಿ ಆಚೆಗೆ ನಿಲ್ಲುತ್ತದೆ. ಆದುದರಿಂದಲೇ ವಿದ್ಯಾವಾಗೀಶ್ವರನು "ವಿಲಕ್ಷಣಾ ಹಿ ಸಾ ಶೈಲೀ ಕವೀಂದ್ರಮತಿ ಕಲ್ಪಿತಾ" ಎಂದು ಹೇಳಿ ಸುಮ್ಮನಾಗುವನು. ಕವೀಂದ್ರಮತಿ ಕಲ್ಪಿತವಾದ ಈ ಶೈಲಿಯು ಅನಿರ್ವಚನೀಯವೇನೋ ನಿಜ; ಆದರೆ ಅನುಭವವೇದ್ಯವಾದುದು."

ಈ ಪುಟದಲ್ಲಿ ಸಂಸ್ಕೃತದ ಪ್ರಭಾವ ಒಡೆದು ಕಾಣುತ್ತದೆ: ಸಂಸ್ಕೃತದ ಉದ್ಧೃತ ವಾಕ್ಯಗಳೂ ತುಂಬಿಕೊಂಡಿವೆ. ಆದರೆ ಅದೇ ಗ್ರಂಥದಲ್ಲಿ ಇಂಥ ಗದ್ಯಶೈಲಿಯ ಪುಟಗಳು ಬೆರಳಿನ ಮೇಲೆ ಎಣಿಸುವಷ್ಟು ! ಅವರ ಇನ್ನುಳಿದ ಗ್ರಂಥಗಳಲ್ಲಿಯೂ ಮುನ್ನುಡಿಗಳಲ್ಲಿಯೂ ಬಿಡಿಲೇಖನಗಳಲ್ಲಿಯೂ ಈ ಲಕ್ಷಣವನ್ನೇ ಕಾಣುತ್ತೇವೆ. ಕನ್ನಡತನಕ್ಕೆ ಮಾರುಹೋದ ಜೀವ ಡಾ. ಆರ್. ಸಿ. ಹಿರೇಮಠರದು. ಅವರೇ ಪಂಪಕವಿಯನ್ನು

ಕುರಿತು "ವರದಾ ಪುಣ್ಯಾಂಬು ಕನ್ನಡದ ಮಹಾಕವಿಯ ದೃಷ್ಟಿಯಲ್ಲಿ ಗಂಗಾ, ಸಿಂಧು, ಸರಸ್ವತೀ ಸಲಿಲಕ್ಕೆ ಸಮಾನವಾಗಿದೆ" (ಧಾರವಾಡ ಜಿಲ್ಲೆ ಕನ್ನಡ ಸಾಹಿತ್ಯ ಸಮ್ಮೇಲನ–೧೯೭೧. ಅಧ್ಯಕ್ಷ ಭಾಷಣ) ಎಂದು ಹೇಳಿದ ಮಾತನ್ನು, ಡಾ. ಆರ್. ಸಿ. ಹಿರೇಮಠರ ಕನ್ನಡತನಕ್ಕೂ ಅನ್ವಯಿಸಬಹುದು. ಅವರ ಕನ್ನಡದ ವ್ಯಾಮೋಹ, ಸಂಸ್ಕೃತದ ಪ್ರಭಾವವನ್ನು ಹಿಂಬದಿಗೆ ಸರಿಸಿ ನಿಂತಿದೆ.

ಸ್ಪಷ್ಟತೆ ಹಾಗೂ ನಿಕೃಷ್ಟತೆ ವಿಮರ್ಶಾತ್ಮಕ ಗದ್ಯಶೈಲಿಯ ಮುಖ್ಯ ಲಕ್ಷಣಗಳಾಗಿದ್ದು, ಡಾ. ಆರ್. ಸಿ. ಹಿರೇಮಠ ಅವರ ಗದ್ಯದಲ್ಲಿ ಈ ಗುಣಗಳನ್ನು ನಿಚ್ಚಳವಾಗಿ ಗುರುತಿಸಬಹುದು. ಏನೇನೋ ಅಸಂಖ್ಯ ಅಭಿಪ್ರಾಯಗಳನ್ನು ಮಂಡಿಸಿ, ಓದುಗರನ್ನು ಗೊಂಡಾರಣ್ಯದಲ್ಲಿ ನೂಕಿಬಿಡುವ ವಿಮರ್ಶಾತ್ಮಕ ಲೇಖನಗಳೂ ಇರುತ್ತವೆ. ಇಂಥ ಪಾಂಡಿತ್ಯಪೂರ್ಣ ಬರೆಹಗಳಲ್ಲಿ ಸಂಶೋಧಕರ ನಿರ್ಣಯವೇನು ಎಂಬುದು ತಿಳಿಯದೆ, ಓದುಗ ದಿಕ್ಕುಗಾಣದಂತಾದರೂ ಲೇಖಕರ ವಿದ್ವತ್ತಿಗೆ ಸ್ತಂಭೀಭೂತನಾಗಿರುತ್ತಾನೆ. ಇಂಥ ಪ್ರಬಂಧಗಳ ಗದ್ಯಶೈಲಿಯ ರೀತಿಯೇ ಬೇರೆ. ಡಾ. ಆರ್. ಸಿ. ಹಿರೇಮಠ ಅವರು ಈ ವರ್ಗದವರಲ್ಲ. ವಿಮರ್ಶಕರಾಗಿ, ವಿದ್ವಾಂಸರಾಗಿ ತಮ್ಮ ಅಭಿಪ್ರಾಯವನ್ನು ಮಂಡಿಸುವಲ್ಲಿ ಅವರು ಚಾಣಾಕ್ಷರು. ಇಂಥ ಚಾಣಾಕ್ಷತೆ ಅವರ ಗದ್ಯಶೈಲಿಯಲ್ಲಿ ವ್ಯಕ್ತವಾಗಿದೆ. ಗೊಂದಲಕ್ಕೀಡುಮಾಡದ ಸರಳ ಹಾಗೂ ಸ್ಪಷ್ಟ ವಿವರಗಳನ್ನು ಇಲ್ಲಿ ಕಾಣಬಹುದು.

'ಮಹಾದೇವಿಯಕ್ಕನ ವಚನಗಳು' ಗ್ರಂಥಕ್ಕೆ ಮುನ್ನುಡಿಯನ್ನು ಬರೆಯುವಾಗ, ಅಕ್ಕಮಹಾದೇವಿಯ ವಿವಾಹದ ಸಮಸ್ಯೆಯ ಚರ್ಚೆ ಬಂದಿದೆ. ಮಹಾದೇವಿಯಕ್ಕನ ಮದುವೆಯ ಬಗೆಗೆ ಪ್ರಾಚೀನ ಕವಿಗಳಲ್ಲಿ ಭಿನ್ನಾಭಿಪ್ರಾಯವಿರುವುದನ್ನು ಅವರು ಮೊದಲು ತಿಳಿಸುತ್ತಾರೆ ; ಆಧುನಿಕರಲ್ಲಿಯೂ ಒಮ್ಮತವಿಲ್ಲವೆಂದು ಹೇಳಿ, ವಿವಾಹವಾಗಿದ್ದಿತೆಂದು ಅಭಿಪ್ರಾಯಪಡುವ ಆಧುನಿಕ ಲೇಖಕರನ್ನು ಸಾಲಾಗಿ ಹೆಸರಿಸುತ್ತಾರೆ. ಅನಂತರ ತಾವು ಕೊಡುವ ಕಾರಣಗಳಿಷ್ಟು ಎಂದು ಸ್ಪಷ್ಟವಾಗಿ ಎರಡು ಮಾತುಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ಅದೇ ಪ್ರಕಾರ ಮಹಾದೇವಿಯಕ್ಕನ ಮದುವೆಯಾಗಿರಲಿಲ್ಲವೆಂದು ಅಭಿಪ್ರಾಯಪಡುವ ಆಧುನಿಕ ಲೇಖಕರನ್ನು ಹೆಸರಿಸುತ್ತಾ, ಅವರು ಕೊಡುವ ವಾದಗಳನ್ನು ಸಂಗ್ರಹಿಸಿ, ಒಂದು ಎರಡು ಹೀಗೆ ನಿರ್ದಿಷ್ಟವಾದ ವಿಚಾರಗಳನ್ನು ಬರೆಯುತ್ತಾರೆ. 'ಈ ಸಮಸ್ಯೆಯ ಜಟಿಲತೆ ಇದರಿಂದ ಸ್ಪಷ್ಟವಾಗುತ್ತದೆ' ಎಂದು ಕೊನೆಗೆ ಹೇಳುತ್ತಾರೆ (ಮಹಾದೇವಿಯಕ್ಕನ ವಚನಗಳು : ಪುಟ XXXV) ಇದು ಡಾ. ಹಿರೇಮಠರು ವಿಷಯ ಮಂಡಿಸುವ ರೀತಿ.

ಈ ಭಾಗದ ಗದ್ಯದಲ್ಲಿ ವಾಕ್ಯಗಳು ಚಿಕ್ಕವಾಗಿವೆ. ಈ ವಾಕ್ಯಗಳಲ್ಲಿ ವಿಚಾರ ಅತ್ಯಂತ ಸ್ಫುಟವಾಗಿ ವ್ಯಕ್ತವಾಗಿದೆ. ತರ್ಕಬದ್ಧವಾಗಿ ಎಲ್ಲವೂ ಬಂದಿವೆ. ವಿವಿಧ ಲೇಖಕರ

ವಿಚಾರಗಳನ್ನು ಸಂಗ್ರಹಿಸಿ ಹೇಳುವಲ್ಲಿ ಜಾಣಾಕ್ಷತೆಯೂ ಇದೆ. ಇದರಿಂದ ಓದುಗರಿಗೆ ನಿಜವಾದ ಸಮಸ್ಯೆಯ ಅರಿವು ಉಂಟಾಗುತ್ತದೆ. ವಿಮರ್ಶಾತ್ಮಕ ಪ್ರಬಂಧಗಳಲ್ಲಿ ಇಂಥ ಗದ್ಯಶೈಲಿಯೇ ಉಚಿತವಾದುದು. ಡಾ. ಆರ್. ಸಿ. ಹಿರೇಮಠ ಅವರ ಅನೇಕ ಪ್ರಬಂಧಗಳಲ್ಲಿ ಈ ವಿಶಿಷ್ಟಲಕ್ಷಣದ ಗದ್ಯಶೈಲಿಯನ್ನು ಕಾಣಬಹುದು. ಒಂದೇ ಒಂದು ಉದಾಹರಣೆಯನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

ವಿಮರ್ಶಕ ಸ್ಪಷ್ಟವಾಗಿ ಅಭಿಪ್ರಾಯವನ್ನು ಮಂಡಿಸುವಾಗ, ನ್ಯಾಯನಿಷ್ಠುರತೆಯೂ ಅವನಲ್ಲಿರಬೇಕಾಗುತ್ತದೆ. ಗೋಡೆಯ ಮೇಲಿಟ್ಟ ದೀಪದಂತೆ ಅವನ ಅಭಿಪ್ರಾಯ ವಾಗಿರಕೂಡದು: ಒಂದು ನಿರ್ಣಯಕ್ಕೆ ಅಂಟಿಕೊಳ್ಳುವ ಮುನ್ನ, ತನ್ನ ಮಾತಿಗೆ ಸಾಧಾರಗಳನ್ನು ಕೊಡುವುದು ಅವಶ್ಯವಾಗಿದೆ. ಅಂದರೇನೇ ವಿಮರ್ಶಕನ ನಿರ್ಣಯ ನ್ಯಾಯಬಾಹಿರವಲ್ಲ ಎಂಬುದು ಮನದಟ್ಟಾಗುವುದು. ಖಂಡನೆ, ಮಂಡನೆ ಇವೆರಡೂ ವಿಮರ್ಶಾಪದ್ಧತಿಯಲ್ಲಿ ಇರತಕ್ಕವೆ. ಖಂಡನೆ, ಮಂಡನೆ ಇವು ಬೇರೆಬೇರೆ ಕಣ್ಣುಗಳಾದರೂ ಇವೆರಡರ ದೃಷ್ಟಿ ಮಾತ್ರ ಒಂದೇ. ಅದೇ ನ್ಯಾಯದೃಷ್ಟಿ! ಡಾ. ಆರ್. ಸಿ. ಹಿರೇಮಠ ಅವರು ಹಲವೆಡೆ ಭಾವನಾಪರವಶರಾಗಿ ತಮ್ಮ ವಿಚಾರಗಳನ್ನು ಮಂಡಿಸುವಂತೆ ಕಂಡುಬಂದರೂ ಅದರ ತಳದಲ್ಲಿ ವಸ್ತುಸತ್ಯದ ಎಳೆ ತಪ್ಪದೇ ಇರುತ್ತದೆ.

ರಾಘವಾಂಕನದು ಮಹಾಶೈಲಿ ಎಂದು ವಿವರಿಸುತ್ತ, ಡಾ. ಹಿರೇಮಠರು ಅನೇಕ ಆಧಾರಗಳನ್ನು ಕೊಟ್ಟಿದ್ದಾರೆ. ಮಹಾಶೈಲಿಯ ಲಕ್ಷಣಗಳೆನಿಸಿದ ಧ್ವನಿ, ದೈವೀ ಪ್ರೇರಣೆಯ ಪದಪ್ರಯೋಗ, ತೇಜಸ್ವಿನ ವೈಖರಿ ಇವೆಲ್ಲ ರಾಘವಾಂಕನ ಶೈಲಿಯಲ್ಲಿವೆ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ. ಇದೇ ಸಮಯಕ್ಕೆ ರಾಘವಾಂಕನ ಶೈಲಿಯನ್ನು ಕುರಿತ ಎಸ್. ವಿ. ರಂಗಣ್ಣನವರ ಅಭಿಪ್ರಾಯವನ್ನೂ ಉದ್ಧರಿಸಿದ್ದಾರೆ. "ರಾಘವಾಂಕನ ಶೈಲಿ ಐವತ್ತಕ್ಕೆ ಏಳದೆ ಅಯ್ವತ್ತಕ್ಕೆ ಇಳಿಯದೆ... 'ಮಧ್ಯಮ ತರಗತಿ'ಯದಾಗಿದೆ" ಎಂಬುದು ಎಸ್. ವಿ. ರಂಗಣ್ಣನವರ ಮತ. ಎಸ್. ವಿ. ರಂಗಣ್ಣನವರ ವಿಚಾರ ದಲ್ಲಿ ನಿರ್ದಿಷ್ಟತೆ ಇಲ್ಲ; ಆ ಗದ್ಯಶೈಲಿಯೂ ಹೇಗೋ ತೊನೆದಾಡಿದೆ. ವಿಮರ್ಶೆ ಯಿರುವ ಗದ್ಯದಲ್ಲಿ ಈ ರೀತಿಯಾಗಿ ಬರುವುದು ಹಿತಕರವಲ್ಲ. ನುಡಿವ ಮಾತುಗಳಲ್ಲಿ ಸ್ಪಷ್ಟತೆ ಇರಬೇಕಾಗುತ್ತದೆ. ಡಾ. ಆರ್. ಸಿ. ಹಿರೇಮಠರು ರಾಘವಾಂಕನ ಮಹಾ ಶೈಲಿಯ ಬಗ್ಗೆ, ತಮ್ಮ ಅಭಿಪ್ರಾಯವನ್ನೇ ಸಮರ್ಥಿಸುತ್ತ, ಎಸ್. ವಿ. ರಂಗಣ್ಣ ನವರ 'ನುಡಿಯನ್ನು ಖಂಡಿಸಲೇಬೇಕಾಗುವುದು. ಹೀಗೆ ನುಡಿವಲ್ಲಿ ನ್ಯಾಯದೃಷ್ಟಿ ಕಡಿಮೆಯಾಗಿದೆಯೆಂದು ಹೇಳಬೇಕಾಗುವುದು' ಎಂದು ಸ್ಪಷ್ಟವಾಗಿ ನುಡಿದಿರುವರು (ಮಹಾಕವಿ ರಾಘವಾಂಕ : ಪುಟ ೨೩೬).

ಪ್ರಾಚೀನ ಗ್ರಂಥಗಳನ್ನು ಪರಿಷ್ಕರಿಸುವಾಗ, ಕಾವ್ಯಗಳ ಕಥಾಸಾರವನ್ನು ಕೊಡುವುದು ಪರಿಪಾಠ. ಇಂಥ ಕಥಾಸಾರವನ್ನು ಬರೆಯುವಾಗ, ಬೇರೊಂದು ರೀತಿಯ ಗದ್ಯಶೈಲಿ

ತಾನಾಗಿಯೇ ನಿರ್ಮಾಣವಾಗತೊಡಗಿದೆಯೆಂಬುದು ಅನೇಕರ ಗಮನಕ್ಕೆ ಬಂದಂತಿಲ್ಲ. ಮುಳಿಯ ತಿಮ್ಮಪ್ಪಯ್ಯನವರ 'ನಾಡೋಜ ಪಂಪ' (ಪಂಪ ಮಹಾಕವಿಯ 'ಆದಿ ಪುರಾಣ'ದ ಕಥಾಸಾರ), ಗಮಕವಿದ್ವಾನ್ ಬಿಂದೂರಾಯರ 'ಭಾರತ ಸಾರೋದ್ಧಾರ'. ಕನ್ನಡ ಸಾಹಿತ್ಯಪರಿಷತ್ತಿನವರು ಪ್ರಕಟಿಸಿದ ವಿವಿಧ ಪ್ರಾಚೀನ ಕನ್ನಡಗ್ರಂಥಗಳ ಗದ್ಯಾನುವಾದ ಈ ಮೊದಲಾದ ಗ್ರಂಥಗಳನ್ನು ತುಲನಾತ್ಮಕವಾಗಿ ಪರಿಶೀಲಿಸಬೇಕು ಇಂಥ ಗ್ರಂಥಗಳಲ್ಲಿ ಕವಿಯ ಮಾತುಗಳು. ನಡೆನುಡಿಗಳು ಹೊಸಗನ್ನಡ ಗದ್ಯಶೈಲಿ ಯಲ್ಲಿ ಹೇಗೆ ಹಾಸುಹೊಕ್ಕಾಗಿ ಹೆಣೆದುಕೊಂಡಿವೆಯೆಂಬುದರ ಅರಿವಾಗುವುದು. ಡಾ. ಆರ್. ಸಿ. ಹಿರೇಮಠರ ಗದ್ಯಶೈಲಿಯನ್ನು ಈ ದೃಷ್ಟಿಯಿಂದಲೂ ಪರಿಶೀಲಿಸಬೇಕು. ಪದ್ಮಣಾಂಕ ಕವಿಕೃತ 'ಪದ್ಮರಾಜ ಪುರಾಣ'ವನ್ನು ಡಾ. ಆರ್. ಸಿ. ಹಿರೇಮಠರು ಸಂಪಾದಿಸಿದ್ದು. ಅದರಲ್ಲಿರುವ ಈ ನುಡಿ ಹಾಗೂ ವಿವರಗಳನ್ನು ನೋಡಿ :

"ವಿಸ್ತರಿಪನಾವನಾ ಭೂಪಾಲ ಸಭೆಯನಾ
ಪ್ರಸ್ತುತದೊಳೊರ್ವರುಂ ಬಾಯ್ಮಿಡುಕದಂದದಿಂ
ಶಸ್ತರಮಾಗಿ ಕಟ್ಟಿಗೆಕಾಱರೆಲ್ಲರುಲಿಪಂ ಮಾಣಿಸಲ್ಕಂತದು
ನಿಸ್ತರಂಗಾಯ ಮಾನಾಬ್ಧಿಯಂತೆಸೆಯೆ ತತ್
ಪ್ರಸ್ತಾವದೊಳ್ ವಾದಿಯೆಂದನೆಲೆಯ ನೃಪತಿ ಪರ
ವಸ್ತು ಹರಿಯೆಂದು ಬರೆದಾಂ ಕಟ್ಟಿದೋಲೆಯನಿವಂ ಪರಕಿಸದೆ ಬಿಡಿಸಿದಂ
—ಪದ್ಮರಾಜ ಪುರಾಣ : ಪು. ೧೭೫

ಈ ನುಡಿಯಲ್ಲಿ ಹಾಗೂ ಮುಂದಿನ ನುಡಿಯಲ್ಲಿ ಬರುವ ವಿಚಾರಗಳನ್ನು ಡಾ. ಆರ್. ಸಿ ಹಿರೇಮಠರು ತಮ್ಮ ಕಥಾಸಾರದಲ್ಲಿ ಕೊಡುವುದು ಹೀಗಿದೆ :

ನೃಪನ ಸಭೆ ಕಿಕ್ಕಿರಿದು ತುಂಬಿದ್ದಿತು. ಕಟ್ಟಿಗೆಕಾರರು ಎಲ್ಲರ ಸದ್ದನ್ನು ಪ್ರತಿಬಂಧಿಸಲು ಅದು ತೆರೆಗಳಿಲ್ಲದ ಸಮುದ್ರದಂತೆ ಶೋಭಿಸುತ್ತಿತ್ತು. ಆ ಸಮಯದಲ್ಲಿ ವಾದಿಯಾದ ತ್ರಿಭುವನತಾತನು ಎದ್ದು—"ಹರಿಯು ಪರವಸ್ತುವೆಂಬ ನಾನು ಬರೆದು ಕಟ್ಟಿಸಿದ ಓಲೆ ಯನ್ನು ಈತನು ಪರೀಕ್ಷಿಸದೆ ಬಿಡಿಸಿದನು. ಹೆಬ್ಬಾಗಿಲಲ್ಲಿ ತಡೆದರೆ ಸಭಾಮಧ್ಯದಲ್ಲಿ ವಿವರಿಸುವೆನೆಂದು ಬಂದಿರುವನು. ಆತನ ಗರ್ವವೆಷ್ಟೆಂಬುದನ್ನು ಅರಿಯುವೆನು. ವಾದ ದಲ್ಲಿ ಸೋತವನು ಸೊಕ್ಕನ್ನುಡುಗಿ ತನ್ನ ಮತವನ್ನು ಬಿಟ್ಟು, ಗೆದ್ದವನಿಗೆ ಶಿಷ್ಯನಾಗು ವಂತೆ. ಉಭಯರ ಒಪ್ಪಿಗೆಯಿಂದ ಈ ಭಾಷೆಯನ್ನು ಬರೆಯಿಸಬೇಕು" ಎಂದು ನುಡಿ ದನು (ಪದ್ಮರಾಜ ಪುರಾಣ : ಪು. ೭೭).

ಮೂಲಕಾವ್ಯವನ್ನು ಓದುವುದಕ್ಕಿಂತ ಇಂಥ ಗದ್ಯವನ್ನೇ ಓದುತ್ತ ಹೋಗಬೇಕು ಎನ್ನುವಷ್ಟು ಸುಂದರವಾಗಿದೆ: ಕಥಾನಿರೂಪಣೆಗೆ ಅವಶ್ಯವಾದ ಲಕ್ಷಣಗಳನ್ನು ಒಳ ಗೊಂಡಿದೆ. ಈ ಗದ್ಯಶೈಲಿ. ಸರಳವಾದ, ಸುಲಲಿತವಾದ ವಾಕ್ಯಗಳು: ಕಥಾಭಾಗ

ದಲ್ಲಿರುವ ಭಾವನೆಗಳನ್ನು ಸರಿಯಾಗಿ ಶಕ್ತಿಯುತವಾಗಿ ವ್ಯಕ್ತಪಡಿಸುವ ಶಬ್ದಗಳ ಜೋಡಣೆ; ವಾಕ್ಯಗಳ ಓಟದಲ್ಲಿ ಲಾಲಿತ್ಯ ಇವೆಲ್ಲವುಗಳಿಂದ ಈ ಗದ್ಯಶೈಲಿ ಬಹು ಆಕರ್ಷಕವಾಗಿದೆ. ಪ್ರಾಚೀನ ಕಾವ್ಯಗಳಿಗೆ ಕಥಾಸಾರವನ್ನು ಕೊಟ್ಟಲ್ಲೆಲ್ಲ. ಇಂಥದೇ ಗದ್ಯಶೈಲಿ ಕಂಡುಬಂದಿದೆ. ಡಾ. ಆರ್. ಸಿ. ಹಿರೇಮಠರು ಪ್ರಾಚೀನ ಕಾವ್ಯದ ಕಥಾ ವಸ್ತುವಿನಲ್ಲಿ ತಾದಾತ್ಮ್ಯ ಹೊಂದುತ್ತಾರೆ; ತಮ್ಮದೇ ಆದ ಲಾಲಿತ್ಯಪೂರ್ಣವಾದ ಕಥನ ಶೈಲಿಯಲ್ಲಿ ಆ ಕಥಾಭಾಗವನ್ನು ಕೊಡುತ್ತಾರೆ. ಇಂಥ ಶೈಲಿಯಲ್ಲಿ ಲೇಖಕನ ವಿದ್ವತ್ತಿಗೆ ವಿಶೇಷ ಸ್ಥಾನವಿರದೆ, ಕಥಾನಿರೂಪಣೆಗೆ ಮಹತ್ವವಿದೆ. ಡಾ. ಆರ್. ಸಿ. ಹಿರೇಮಠರ ಗದ್ಯಶೈಲಿ ಇಂಥ ಸಂದರ್ಭಗಳಲ್ಲಿ ಅವರು ಕಥಾನಿರೂಪಣೆಯನ್ನು ಚೆನ್ನಾಗಿ ಮಾಡ ಬಲ್ಲರು ಎಂಬುದನ್ನು ತೋರಿಸಿಕೊಡುತ್ತದೆ.

ಮೂಲಕಾವ್ಯದಲ್ಲಿರುವ ನುಡಿಗಳಿಗೆ. ಶಿವಭಕ್ತರ ವಚನಗಳಿಗೆ ಟೀಕೆ ಟಿಪ್ಪಣಿ ಕೊಡು ವಾಗಲೂ ಬರುವ ಗದ್ಯಶೈಲಿಯನ್ನು ನಿರೀಕ್ಷಿಸುವಂತಿದೆ. ಮೂಲಗ್ರಂಥದ ನುಡಿಗಳಿಗೆ ಹಾಗೂ ವಿವಿಧ ಉಕ್ತಿಗಳ ಅರ್ಥಕ್ಕೆ ಮಹತ್ವಕೊಟ್ಟು ಅಭ್ಯಸಿಸುವಾಗ, ಸಂಪಾದಕನ ಟೀಕೆ ಟಿಪ್ಪಣಿಗಳಲ್ಲಿರುವ ಗದ್ಯಶೈಲಿಯ ಕಡೆಗೆ ಅಭ್ಯಾಸಿಗಳ ಗಮನವೇ ಇರುವುದಿಲ್ಲ. ಡಾ. ಆರ್. ಸಿ. ಹಿರೇಮಠರ ಶಕ್ತಿಯುತವಾದ ಗದ್ಯಶೈಲಿ ಅವರ ಟೀಕೆ ಟಿಪ್ಪಣಿಗಳಲ್ಲಿ ಸ್ಫುಟವಾಗಿದೆ. ಅವರು ಕಾವ್ಯದಲ್ಲಿ ಬರುವ ನುಡಿಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಶಿವಶರಣರ ವಚನಗಳನ್ನು ವಿಮರ್ಶಿಸಿ ಹಲವಾರು ಮಾತುಗಳನ್ನು ಬರೆದಿದ್ದಾರೆ.

'ಷಟ್‌ಸ್ಥಲ ಪ್ರಭೆ'ಯಲ್ಲಿ (ಪುಟ ೨೨೬) ಬರುವ ಚನ್ನಬಸವಣ್ಣನವರ ವಚನಗಳನ್ನು ಕುರಿತಾಗಿರುವ ಈ ಕೆಳಗಿನ ವಾಕ್ಯಗಳನ್ನು ನಿರೀಕ್ಷಿಸಬಹುದು :

ಮರ ಮರ ಮಥಿಸಿ ಜ್ಯೋತಿ ಹುಟ್ಟುವಂತೆ, ಮಾತು ಮಾತು ಹಳಚಿ ಜ್ಯೋತಿ ಹುಟ್ಟು ತ್ತದೆ. ಈ ಜ್ಯೋತಿ ಶರಣ ಸಂಗದಿಂದ, ಶಿವಾನುಭವ ಸದ್ಗೋಷ್ಠಿಯಿಂದ ಹುಟ್ಟುತ್ತದೆ. ವೀರಶೈವಧರ್ಮ ವೈಯಕ್ತಿಕವಾಗಿರದೆ ಸಾಮೂಹಿಕ ತತ್ತ್ವವನ್ನು ಎತ್ತಿ ಹಿಡಿಯುವು ದರಿಂದ ಶರಣಸಂಗಕ್ಕೆ ಅಲ್ಲಿ ವಿಶೇಷ ಮಹತ್ವವುಂಟು. ಶರಣಸಂಗವಿಲ್ಲದೆ ವೈಯುಕ್ತಿಕ ಕಾರ್ಯಕಲಾಪಗಳಿಂದ ಅದ್ಭುತವಾದ ಕ್ರಾಂತಿ ತಲೆದೋರುವಂತಿರಲಿಲ್ಲ. ಪ್ರಭು, ಬಸವಣ್ಣನವರಂತಹ ದಿವ್ಯ ಮಹಾನುಭಾವಿಗಳು ನಡೆದುದು ಮಾರ್ಗವಾಗಿದೆ: ನುಡಿ ದುದು ಮಂತ್ರವಾಗಿದೆ: ಮುಟ್ಟಿದುದು ಲಿಂಗವಾಗಿದೆ..."

ಈ ಗದ್ಯದಲ್ಲಿ ತರ್ಕಬದ್ಧ ವಿಚಾರಸರಣಿಯ ಜೊತೆಗೆ ಒಂದು ರೀತಿಯ ತಾಳಲಯವಿದೆ. ಮುಖ್ಯವಾಗಿ ಕೊನೆಯ ಮೂರು ಸಾಲುಗಳು ಗದ್ಯವು ಪದ್ಯವೇ ಆಗಿದೆ ಎನ್ನುವಂತೆ ಇವೆ. ಈ ಹೃದ್ಯವಾದ ಗದ್ಯವು ಪದ್ಯಾತ್ಮಕ ಗದ್ಯವೇ. ಗದ್ಯಪದ್ಯ ಭೇದದ ಚರ್ಚೆ ಯಲ್ಲಿ ಒಮ್ಮೆ ಡಾ. ವಿ. ಕೃ. ಗೋಕಾಕರು ಬರೆದುದು ಹೀಗಿದೆ : "ಗದ್ಯದ ಪ್ರಾಂತ

ದಲ್ಲಿ ಕಾಲಿಡಲು ಪದ್ಯವು ಅನೇಕಸಲ ಹವಣಿಸುವುದುಂಟು; ಅದರಂತೆ 'ಕಾವ್ಯ'ವನ್ನು ಒಡಮೂಡಿಸಲು ಗದ್ಯವು ಮೇಲಿಂದ ಮೇಲೆ ಪ್ರಯತ್ನಪಡುತ್ತದೆ." ಗದ್ಯದಲ್ಲಿಯೂ ಕಾವ್ಯಶಕ್ತಿಯನ್ನು ತುಂಬಿದುದು ಡಾ. ಆರ್. ಸಿ. ಹಿರೇಮಠ ಅವರ ಗದ್ಯಶೈಲಿಯ ಲಕ್ಷಣಗಳಲ್ಲಿ ಒಂದಾಗಿದೆ. ಅವರ ಪ್ರಥಮಕೃತಿಯೇ ಕಾವ್ಯವಾಗಿರುವಾಗ, ಆ ಕವಿ ಹೃದಯ ಗದ್ಯದಲ್ಲಿ ಅಭಿವ್ಯಕ್ತಿಸಿದುದು ಸಹಜವೇ ಆಗಿದೆ. "ಪ್ರಜಾತಂತ್ರದ ಇಂದಿನ ಯುಗದಲ್ಲಿ ಸಾಮಾನ್ಯಪ್ರಜೆಯ ಭಾಷೆಗೆ ಕಾವ್ಯೋನ್ನತಿಯ ಸ್ಥಾನವನ್ನು ಕೊಡುವುದು ವಿಹಿತ. ಆದರೆ ಏನೆಲ್ಲ ಮಾಡಿದರೂ ಅದು ಸಮಾಜಕ್ಕೆ ಹಿತಕರವಾಗಬೇಕು"—ಡಾ. ಆರ್. ಸಿ. ಹಿರೇಮಠ ಅವರೇ ಒಂದು ಭಾಷಣದಲ್ಲಿ ಹೇಳಿದ ಈ ಅಭಿಪ್ರಾಯ ವನ್ನು ಅವರ ಗದ್ಯಶೈಲಿಗೂ ಅನ್ವಯಿಸಬೇಕು.

ಡಾ. ಆರ್. ಸಿ. ಹಿರೇಮಠರದು ಸುಸಂಸ್ಕೃತ ಹೃದಯ. ಎಲ್ಲರಿಗೂ ಹಿತವಾಗ ಬೇಕೆಂಬುದು ಅವರ ಮನಸ್ಸು. ಅಂತೆಯೇ ಅವರ ಶೈಲಿಯಲ್ಲಿ ಉದ್ವೇಗ, ಆಡಂಬರ, ಆಕ್ರೋಶ, ವಿಡಂಬನೆ ಇವು ಯಾವವೂ ಕಂಡುಬರುವುದಿಲ್ಲ. ವ್ಯಾಕರಣ, ಅಲಂಕಾರ ಶಾಸ್ತ್ರಗಳನ್ನು ಅರಗಿಸಿ ನೀರು ಕುಡಿದಿದ್ದರೂ ತಮ್ಮ ಗದ್ಯಶೈಲಿಯಲ್ಲಿ ಅಲಂಕಾರಗಳನ್ನು ವಿಶೇಷವಾಗಿ ಬಳಸಿಲ್ಲ. "ಶೈಲಿಯೆಂದರೆ ಕೇವಲ ಶಬ್ದವಲ್ಲ, ಅಲಂಕಾರವಲ್ಲ, ಕವಿ ಸಮಯವಲ್ಲ, ಗುಣವಲ್ಲ, ರೀತಿಯಲ್ಲ, ಬಿಡಿಯಲ್ಲಿ ಯಾವುದೂ ಅಲ್ಲ, ಇಡಿಯಲ್ಲಿ ಎಲ್ಲವೂ ಅಹುದು"—ಇದು ಡಾ. ಆರ್. ಸಿ. ಹಿರೇಮಠ ಅವರ ಶೈಲಿಯ ವ್ಯಾಖ್ಯೆ. ಅವರ ಗದ್ಯಶೈಲಿ ಈ ಅರಿವಿನಲ್ಲಿ ಹುಟ್ಟಿಬಂದಿದ್ದು ಅಲ್ಲಿ ಸುಸಂಸ್ಕೃತ ಹೃದಯದ ತಿಳಿಯಾದ, ಸರಳವಾದ ಆದರೂ ಉನ್ನತವಾದ ಭಾವನೆಗಳ ಅಭಿವ್ಯಕ್ತಿಯಿದೆಯೆಂದು ಹೇಳಬೇಕು. ಈಗಿನ ಸಾಹಿತ್ಯದಲ್ಲಿ ಗದ್ಯಕ್ಕೆ ವಿಶೇಷ ಮಹತ್ವವಿದೆ. ಈ ಶತಮಾನದ ಎಂಬತ್ತು ವರ್ಷಗಳಲ್ಲಿ ಗದ್ಯವು ವಿವಿಧವಾಗಿ ಬೆಳೆದುಬಂದಿದ್ದು, ಅದರ ಶಾಸ್ತ್ರೋಕ್ತ ಅಭ್ಯಾಸ ಅವಶ್ಯವಾಗಿದೆ. "ಕನ್ನಡ ಗದ್ಯದ ವರ್ಣವೈಭವ ಗರಿಗೆದರುವುದು, ಸಮಸ್ಯೆಗಳನ್ನು ತಂದೊಡ್ಡುವುದು ಆಧುನಿಕಯುಗದಲ್ಲಿಯೇ. ನಮಗೆ ತೀರ ಹತ್ತಿರವಾಗಿರುವುದು, ವಿವರವಾದ ವಿಶ್ಲೇಷಣೆಯನ್ನು ಬೇಡುತ್ತಿರುವುದು ಅದೇ..." (ಗ್ರಂಥಲೋಕ; ಸಂಪುಟ ೩, ಸಂ. ೩, ಪುಟ ೧೦) ಡಾ. ಹಾ. ಮಾ. ನಾಯಕರು ಗದ್ಯಶೈಲಿಯನ್ನು ಕುರಿತು ಈ ಹೇಳಿಕೆ ನೀಡಿದ್ದಾರೆ. ಡಾ. ಆರ್. ಸಿ. ಹಿರೇಮಠ ಅವರ ಪ್ರಬಂಧಗಳನ್ನೆಲ್ಲ ಪರಿಶೀಲಿಸುವಾಗ, ಕನ್ನಡ ಗದ್ಯಶೈಲಿ ಹೇಗೆ ಗರಿದೆರೆದು ನಿಂತಿದೆ ಎಂಬುದರ ಅರಿವು ಆಗುತ್ತದೆ. ಇಂಥ ಶೈಲಿಯನ್ನು ವಿಶ್ಲೇಷಿಸಲು ಇದೊಂದು ಸಣ್ಣ ಪ್ರಯತ್ನ.

"ಸಾಹಿತ್ಯವ ನಿರ್ಮಿಸುವರೆ ಸೌಂದರ್ಯಾನುಭವ ಮೊದಲು. ಆ ಅನುಭವ ಇಲ್ಲದಿದ್ದರೆ ಸಾಹಿತ್ಯ ಹುಟ್ಟಲಾರದು; ಹುಟ್ಟಬಾರದು. ಅನುಭವದ ಅಂತರಾಳದಿಂದ ನೆಗೆದ ಅನಂತ ಭಾವನೆಗಳು, ಕಲ್ಪನೆಗಳು, ಆಲೋಚನೆಗಳು ಶಬ್ದದೇಹವನ್ನು ಪಡೆದು ಸಾಹಿತ್ಯ ಕ್ಷೇತ್ರದಲ್ಲಿ ಚಿರಕಾಲ ಬಾಳುತ್ತವೆ; ಲೋಕದ ಬಾಳನ್ನು ಬೆಳಗುತ್ತವೆ..." (ಷಟ್‌ಸ್ಥಲ

ಪ್ರಭೆ, ಪುಟ ೪೨೧). ಡಾ. ಆರ್. ಸಿ. ಹಿರೇಮಠ ಅವರು ಸಾಹಿತ್ಯ ಹಾಗೂ ಶೈಲಿಯ ಬಗ್ಗೆ ಸೂಕ್ಷ್ಮವಾಗಿ ಈ ವಾಕ್ಯಗಳಲ್ಲಿ ವಿವರಿಸಿದ್ದಾರೆ; ಇದಕ್ಕೆ ತಾವೇ ನಿದರ್ಶನವಾಗಿದ್ದಾರೆ.

ಮುನ್ನುಡಿಗಳನ್ನು, ಬಿಡಿ ಲೇಖನಗಳನ್ನು ಸಂಗ್ರಹಿಸಿ ಅನೇಕ ಸಂಪುಟಗಳಲ್ಲಿ ಪ್ರಸಿದ್ಧಿಸುವುದು ಇಂದು ರೂಢಿಯಾಗಿದೆ; ಏಕೆಂದರೆ ಅವರು ವ್ಯಕ್ತಪಡಿಸಿದ ಪ್ರತಿಯೊಂದು ಅಭಿಪ್ರಾಯಕ್ಕೂ ಅಷ್ಟು ಬೆಲೆಯಿರುತ್ತದೆ. ಒಂದು ವಿಶ್ವವಿದ್ಯಾಲಯದ ಉನ್ನತಮಟ್ಟದ ಕುಲಪತಿಯ ಸ್ಥಾನದಲ್ಲಿದ್ದ ಡಾ. ಆರ್. ಸಿ. ಹಿರೇಮಠ ಅವರು ಇಂಥ ಸಂಪುಟಗಳ ಪ್ರಕಟನೆಯ ಕಾರ್ಯಕ್ಕೆ, ಅಂಥ ಸಾಹಸಕ್ಕೆ ಕೈಹಾಕದಿರುವುದು ಕನ್ನಡ ಜನತೆಗೇ ನಷ್ಟ ! ಡಾ. ಆರ್. ಸಿ. ಹಿರೇಮಠ ಅವರ ಈ ಮುನ್ನುಡಿಗಳು ಒಂದೆರಡು ಸಂಪುಟಗಳಲ್ಲಿ ಮುದ್ರಿತವಾದರೆ, ಅವು ಕನ್ನಡ ಸಾಹಿತ್ಯಚರಿತ್ರೆಗೆ ವಿಶೇಷ ಕೊಡುಗೆಗಳಾಗುವುದರಲ್ಲಿ ಸಂದೇಹವಿಲ್ಲ. ಸಾಹಿತ್ಯಚರಿತ್ರೆಕಾರರಿಗೂ ಇಲ್ಲಿ ವಿಚಾರ ವಿಮರ್ಶೆಗೆ ಹೊಸವಸ್ತು ಲಭಿಸುವುದೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.



# ಗಾಥಾಸಪ್ತಶತಿ : ಒಂದು ವಿವೇಚನೆ

ಸಾ. ಶಿ. ಮರುಳಯ್ಯ

ಗಾಥಾಸಪ್ತಶತಿಯ ಕರ್ತೃ ಹಾಲ ಎಂಬುದು ಸ್ಪಷ್ಟ. ಏಕೆಂದರೆ ಉಪಲಬ್ಧ ಕೃತಿಯ ಪ್ರಥಮ ಶತಕದ ಮೂರನೆಯ ಗಾಥಾದಲ್ಲೂ ಮತ್ತು ಗ್ರಂಥಾತ್ಯದಲ್ಲೂ ಹಾಲ ವಿರಚಿತ ಕೃತಿಯಿದು ಎಂಬ ಸ್ಪಷ್ಟ ಉಲ್ಲೇಖವಿದೆ. ಆದರೆ ಈ ಹಾಲ ಯಾರು ? ಎಂಬುದೇ ನಮ್ಮ ಮುಂದಿನ ಪ್ರಶ್ನೆ.

ಪ್ರಾಕೃತದ ಹಾಲ ಸಂಸ್ಕೃತದಲ್ಲಿ ಶಾಲ ಎಂದಾಗುತ್ತದೆ. ಇದು ಹಾಲಾಹಣ > ಸಾಲಾಹಣ > ಸಾಲವಾಹನ > ಶಾಲವಾಹನ > ಶಾತವಾಹನ ಎಂಬ ಪರಿವರ್ತನೆಯನ್ನು ಪಡೆಯುವುದರಿಂದ ಸಾಲನಿಗೆ ಸಾಲ, ಸಾಲವಾಹನ ಮೊದಲಾದ ಅನೇಕ ಹೆಸರುಗಳಿವೆ ಎಂದು ಹೈಮಕೋಶವು ಸಾರುವುದರಿಂದ ಗಾಥಾಸಪ್ತಶತಿಯ ಕರ್ತೃವಾದ ಹಾಲ ಓರ್ವ ಸಾಲಿವಾಹನ ಅಥವಾ ಶಾತವಾಹನ ಎಂಬ ಪರಿಣಾಮಕ್ಕೆ ಕಾರಣನಾಗಿದ್ದಾನೆ. ಇದಕ್ಕೆ ಪೋಷಕವಾಗಿ ಇದೇ ಗಾಥಾಸಪ್ತಶತಿಯ ಬೇರೊಂದು ಹಸ್ತಪ್ರತಿಯಲ್ಲಿ 'ಶಾಲೀವಾಹನ ವಿರಚಿತ ಕೋಶಃ' ಎಂಬ ಹೇಳಿಕೆ ದೊರೆಯುತ್ತದೆ. ಹೀಗೆ ಗಾಥಾಸಪ್ತಶತಿಯ ಒಂದು ಪ್ರತಿಯಲ್ಲಿ 'ಇತಿ ಶ್ರೀ ಹಾಲ ವಿರಚಿತೇ ಪ್ರಾಕೃತ ಕಾವ್ಯೇ ಸಪ್ತಶತೇ...' ಎಂತಲೂ ಮತ್ತೊಂದು ಪ್ರತಿಯಲ್ಲಿ 'ಶ್ರೀ ಶಾಲೀವಾಹನ ವಿರಚಿತ ಕೋಶಃ' ಎಂತಲೂ ಇರುವುದರಿಂದ ಪ್ರಾಕೃತದ ಹಾಲ ಎಂಬುದು ಸಾಲ ಅಥವಾ ಶಾಲವಾಹನ, ಶಾಲೀವಾಹನ, ಶಾತವಾಹನ ಎಂದು ಸಂಸ್ಕೃತೀಕರಣ ಆಗಿದೆ ಎಂದು ಹೇಳುವುದಕ್ಕೆ ಯಾವ ಬಾಧೆಯೂ ಒರುವುದಿಲ್ಲ. ಮಹಾಕವಿ ಬಾಣನು ತನ್ನ ಹರ್ಷಚರಿತದ ಪೀಠಿಕೆಯಲ್ಲಿ

ಈತನನ್ನು 'ತ್ರಿಸಮುದ್ರಾಧಿಪತಿ' ಎಂದು ಕರೆದಿದ್ದಾರೆ. ಅನೇಕ ಸಂಸ್ಕೃತ ಪ್ರಾಕೃತ ಗ್ರಂಥಗಳು ದಾನಿ, ಧರ್ಮಾತ್ಮ, ಪರಾಕ್ರಮಿ, ಲೋಕಹಿತೈಷಿ, ವಿದ್ಯಾಸುರಾಗಿ— ಎಂದು ಮೊದಲಾಗಿ ಮುಕ್ತಕಂಠದಿಂದ ಹೊಗಳಿವೆ. ಇಷ್ಟೆಲ್ಲಾ ಪ್ರಶಂಸೆಗಳಿಗೆ ಪಾತ್ರನಾದ ಈ ರಾಜನ ಬಗೆಗೆ ಮತ್ತೂ ಮಾಹಿತಿ ದೊರೆಯುತ್ತದೆ. ಮೊದಲನೆಯದಾಗಿ, ಕಥಾಸರಿತ್ಸಾಗರದ ಷಷ್ಠ ತರಂಗದ ಒಂದು ಕಥೆಯಲ್ಲಿ ಹೀಗೆ ಬರುತ್ತದೆ :

ದೀಪಕರ್ಣಿಯ ಮಗನಾದ ಶಾತವಾಹನನೆಂಬ ಓರ್ವ ಪಂಡಿತನಾದ ರಾಜನು ಪ್ರತಿಷ್ಠಾನ ಪುರದಲ್ಲಿದ್ದನು. ಬೃಹತ್ಕಥೆಯ ಗುಣಾಢ್ಯ, ಕಾಲಾಪ ವ್ಯಾಕರಣದ ಕರ್ತೃ ಶರ್ವವರ್ಮ— ಈ ಮೊದಲಾದ ವಿದ್ವಾಂಸರು ಅವನ ಆಸ್ಥಾನದಲ್ಲಿದ್ದರು, ಎಂದು. ಎರಡನೆಯದಾಗಿ ವಾತ್ಸಾಯನನು ತನ್ನ ಕಾಮಸೂತ್ರದಲ್ಲಿ

> ಕರ್ತಾರ್ಯ ಕುಂತಲಃ ಶಾತಕರ್ಣಿಃ
> ಶಾತವಾಹನೋ ಮಹಾದೇವೀಂ ಮಲಯವತೀಂ ಜಘಾನ ॥[೨]

ಎಂದಿದ್ದಾನೆ. ಮೂರನೆಯದಾಗಿ— ಬಹು ಮುಖ್ಯವಾಗಿ—ಪೀಟರ್‌ಸನ್‌ರವರು ಬುಂದೀನರೇಂದ್ರನ (ಬರೋಡರಾಜನ) ಗ್ರಂಥಾಲಯದಿಂದ ತಂದ 'ಸಪ್ತಶತೀ' ಹಸ್ತಪ್ರತಿಯಲ್ಲಿ ಈ ಶ್ಲೋಕ ಇದೆ :

> ರಾಏಣ ವಿರಇ ಆ ವಿ ಕುಂತಲ ಜಣವ ಆಇಣೇನ ಹಾಲೇನ
> ಸತ್ತಸ ಈ ಅಸಮತ್ತಂ ಸತ್ತಮ ಮಜ್ಝಾಸ ಅಾ ವಿ ಅಂ ॥

ಮುಂದುವರಿದು ಸಂಸ್ಕೃತದಲ್ಲಿ ಹೀಗಿದೆ :

ಶ್ರೀಮತ್ ಕುಂತಲ ಜನಪದೇಶ್ವರ, ಪ್ರತಿಷ್ಠಾನ ಪತ್ತನಾಧೀಶ ಶತಕರ್ಣೋಪನಾಮಕ ದ್ವೀಪಿಕರ್ಣಾತ್ಮಜ, ಮಲಯವತೀ ಪ್ರಾಣಪ್ರಿಯ, ಕಾಲಾಪ ಪ್ರವರ್ತಕ, ಶರ್ವವರ್ಮಾಧೀಸಖ, ಮಲಯವತ್ಯುಪದೇಶ, ಪಂಡಿತೀಭೂತತ್ಯಕ್ತ ಭಾಷಾತ್ರಯ ಸ್ವೀಕೃತ ಪೈಶಾಚಿಕ ಪಂಡಿತರಾಜ ಗುಣಾಢ್ಯನಿರ್ಮಿತ ಭಸ್ಮೀ ಭವತ್ ಬೃಹತ್ಕಥಾವಶಿಷ್ಟ ಸಪ್ತಮಾಂಶಾವಲೋಕನ, ಪ್ರಾಕೃತಾದಿ ವಾಕ್ಪಂಚಕ (?)ಮಿತ್ರ, ಕವಿವತ್ಸಲ, ಹಾಲಾದ್ಯುಪನಾಮಕ, ಶ್ರೀ ಸಾತವಾಹನ ನರೇಂದ್ರ ನಿರ್ಮಿತಾ ವಿವಿಧಾನ್ಯೋಕ್ತಿಮಯ ಪ್ರಾಕೃತ ಗೀರ್ಗುಂಫಿತಾ ಶುಚಿರಸ ಪ್ರಧಾನ ಕಾವ್ಯೋತ್ತಮಾ ಸಪ್ತ ಶತ್ಯವ ಸಾನಮಗಾತ್ ॥

ಮೇಲಿನ ಮೂರು ಪ್ರವರಗಳ ತಾತ್ಪರ್ಯ ಇಷ್ಟು :

ದೀಪಕರ್ಣಿಯ ಮಗ ಶಾತಕರ್ಣಿ ಅಥವಾ ಶಾತವಾಹನ, 'ಹಾಲ' ಎಂಬುದು ಅವನಿಗಿದ್ದ ಮತ್ತೊಂದು ಉಪನಾಮ. ಆತ ಕುಂತಲದ ಅರಸು, ಮಲಯವತಿಯ ಪತಿ,

೨. ವಾತ್ಸಾಯನ, ಕಾಮಸೂತ್ರ : ೧೨ನೆಯ ಅಧ್ಯಾಯದ ಅಂತ್ಯ.

ಕವಿಜನ ವತ್ಸಲನಾಗಿದ್ದರಿಂದ ಗುಣಾಢ್ಯ, ಶರ್ವವರ್ಮ ಮೊದಲಾದ ಕವಿಗಳಿಗೆ ಆಶ್ರಯ ಕೊಟ್ಟಿದ್ದನು ಸ್ವಯಂ ಕಲಾವಿದನಾದ್ದರಿಂದ ಪ್ರಾಕೃತ ಕೃತಿಯನ್ನಿತ್ತಿದ್ದಾನೆ— ಇತ್ಯಾದಿ. ಈ ಅಂಶಗಳ ಆಧಾರದಿಂದ ಗ್ರಂಥಕರ್ತನಾದ ರಾಜ ಮತ್ತು ಅವನ ಕಾಲ ಇತ್ಯಾದಿಗಳನ್ನು ಗುರುತಿಸಬಹುದು. ಗುಣಾಢ್ಯನ ಕಾಲ ಕ್ರಿ. ಶ. ೧ ನೆಯ ಶತಮಾನ. ಅವನಿದ್ದುದು ಶಾತವಾಹನರ ಆಸ್ಥಾನದಲ್ಲಿ. ಈಗ ಆಳುತ್ತಿದ್ದ ಶಾತವಾಹನ ರಾಜನೆಂದರೆ 'ಹಾಲ', ಆತ ಸಪ್ತಶತಿ ಕರ್ತೃ ಎಂಬುದು ಸ್ಪಷ್ಟ. ಆದ್ದರಿಂದ ಈ ಗ್ರಂಥ ಕ್ರಿ. ಶ. ೧ನೆಯ ಶತಮಾನದ್ದು, ಕರ್ತೃ ಶಾತವಾಹನ ರಾಜ 'ಹಾಲ' ಎಂಬುದು ನಿರ್ವಿವಾದ.

ಈ ಶಾತವಾಹನ ಸಾರ್ವಭೌಮ ನಮ್ಮ ಶಕಪುರುಷ ಶಾಲೀವಾಹನನೇ ಆಗಿದ್ದಾನೆ. ಇದಕ್ಕೆ ಹೈಮಕೋಶಾದಿ ಗ್ರಂಥಗಳಿಂದ ಪ್ರಮಾಣ ಒದಗುತ್ತದೆ. ಆದರೆ ಶ್ರೀ ಕೋಟ ವೆಂಕಟಾಚಲಂ ಪಂಡಿತರು ಹಾಲರಾಜನ ಪೂರ್ವೋತ್ತರಗಳನ್ನು ಚರ್ಚಿಸುತ್ತ ಹಾಲನು ಯುಗಪ್ರವರ್ತಕ ವಿಕ್ರಮನಿಗೆ ಮೊಮ್ಮಗ ಅಥವಾ ಮರಿಮಗನಾಗಬೇಕೆಂತಲೂ ಆತ ಅಗ್ನಿವಂಶಕ್ಕೆ ಸೇರಿದ 'ಪನ್ವಾರ' ಸಂತತಿಯವನೆಂತಲೂ ಹೇಳುವ ಮಾತುಗಳನ್ನು ಉದ್ಧರಿಸಿ, ಶಾತವಾಹನನು ಚಂದ್ರವಂಶದ ಯಯಾತಿಕುಲದ ೩೩ ಜನ ಆಂಧ್ರ ಚಕ್ರವರ್ತಿಗಳ ಪರಂಪರೆಯಲ್ಲಿ ೧೯ನೆಯವನೆಂತಲೂ ಅವನ ಕಾಲ ಕ್ರಿ. ಪೂ. ೪೯೪–೪೮೧ ಎಂತಲೂ ತಿಳಿಸುತ್ತಾರೆ.[೩] ಆದರೆ ಇದೂ ಸಹ ಆಧಾರರಹಿತವಾದ ಹೇಳಿಕೆ. ಶ್ರೀ ರಾಳ್ಳಪಲ್ಲಿ ಅನಂತಕೃಷ್ಣಶರ್ಮರು ಕೋಟ ವೆಂಕಟಾಚಲ ಪಂಡಿತರನ್ನು ಸಾಧಾರಪೂರ್ವಕ ಖಂಡಿಸಿದ್ದಾರೆ.[೪] ಹಾಲನೆಂಬ ಉಪಮಾನವುಳ್ಳ ಸಾತವಾಹನ ವಂಶೀಯನಾದ ಈ ಅರಸನೇ ಶಕಪ್ರವರ್ತಕನಾದ (ಕ್ರಿ. ಶ. ೭೮) ಪ್ರಸಿದ್ಧ "ಶಾಲೀ ವಾಹನನೆಂದು ನನಗೆ ತೋರುತ್ತದೆ" ಎಂದಿದ್ದಾರೆ ರಾಷ್ಟ್ರಕವಿ ಗೋವಿಂದ ಪೈ.[೫] ಒಟ್ಟಿನಲ್ಲಿ ಗಾಥಾಸಪ್ತಶತಿಯ ಕರ್ತೃವಾದ ಹಾಲರಾಜ ಶಕಪುರುಷ ಶಾಲಿವಾಹನನೇ ಆಗಿದ್ದಾನೆ: ಅವನ ಕಾಲ ಕ್ರಿ. ಶ. ೧ನೆಯ ಶತಮಾನ ಎಂದು ಹೇಳಬಹುದು.

ಇಲ್ಲಿ ಒಂದೆರಡು ಪ್ರಶ್ನೆಗಳಿಗೆ ಉತ್ತರ ನೀಡದೆ ನಾವು ಮುಂದೆ ಹೋಗುವಂತಿಲ್ಲ. ಒಂದು : ಹಾಲ, ಗಾಥಾಸಪ್ತಶತಿಯ ಸಂಕಲನಕಾರ ಅಷ್ಟೇ: ಅಲ್ಲಿನ ಗಾಥಾಗಳೆಲ್ಲವೂ ಅವನ ಸ್ವಂತ ರಚನೆಗಳಲ್ಲ;

ಎರಡು : ಅವನು ಸಂಕಲನಕಾರನೂ ಅಲ್ಲ, ಸಂಗ್ರಹಕಾರನೂ ಅಲ್ಲ. ಯಾವನೋ ಅವನ ಆಸ್ಥಾನ ಕವಿಯೊಬ್ಬನು ಸಂಕಲಿಸಿ ಅವನ ಕೊರಳಿಗೆ ಕಟ್ಟಿದ್ದಾನೆ: ಈ ಎರಡೂ

೩. (ಅ) The History of Vikramaditya and Salivahana.
(ಬ) ಆಂಧ್ರುಲ ಪುಟ್ಟುಪೂರ್ವೋತ್ತಮುಲು —ಶ್ರೀ ಕೋಟ ವೆಂಕಟಾಚಲ ಪಂಡಿತರು

೪. 'ಗಾಥಾಸಪ್ತಶತಿ ಸಾರಮು' ರಾಳ್ಳಪಲ್ಲಿ ಅನಂತಕೃಷ್ಣಶರ್ಮ — ಮುನ್ನುಡಿ ನೋಡಿ

೫. ಕನ್ನಡ ಸಾಹಿತ್ಯದ ಪ್ರಾಚೀನತೆ, ಉದಯ ಭಾರತ,(ವಿಭವ–ಶ್ರಾವಣ) (೧೯೨೮) ಪು. ೧೧೬.

ವಾದಗಳಲ್ಲಿ ಯಾವುದು ಸತ್ಯ ಹೇಳುವುದು ಕಷ್ಟ. ಮೊದಲ ವಾದದಂತೆ ಹಾಲ ಒಬ್ಬ ಸಂಕಲನಕಾರ; ಗಾಥಾಸಪ್ತಶತಿಯಲ್ಲಿ

ಹಲವು ಅಲಂಕಾರಗಳಿಂದೊಪ್ಪುವ ಕೋಟಿಗಾಥೆಗಳ ಮಧ್ಯದಲ್ಲಿ
ಏಳುನೂರನಾಯ್ದೊಂದೆಡೆ ಕೊಟ್ಟಿಹನಾ ಕವಿವತ್ಸಲ ಹಾಲಕವಿ ॥[೬]

ಎಂದಿದ್ದಾನೆ. ಅದರಂತೆ ಜಾಣ ಮಾಲೆಗಾರನಾದ ಹಾಲನು ತನ್ನ ಕಾಲದಲ್ಲಿ ಸಿಗುತ್ತಿದ್ದ ಕೋಟಿ ಗಾಥಾಗಳಲ್ಲಿ ಕೇವಲ ಏಳುನೂರು ಕುಸುಮಗಳನ್ನು ಆಯ್ದು ಮಾಲೆಕಟ್ಟಿದ್ದಾನೆ. ಆದರೆ ಅವೆಲ್ಲಕ್ಕೂ ಅವನೊಬ್ಬನೇ ಒಡೆಯನಲ್ಲ. ಅವಕ್ಕೆ ಅನೇಕರು ಯಜಮಾನರಿದ್ದಾರೆ. ಭುವನಪಾದನೆಂಬ ವ್ಯಾಖ್ಯಾನಕಾರನು ಸುಮಾರು ೩೮೦ ಜನರನ್ನು ಗುರುತಿಸಿದ್ದಾನಂತೆ. ೧, ೨. ೩, ೪, ೫. ೬ ನೂರರ ಅಂತ್ಯದಲ್ಲೂ ಕವಿವತ್ಸಲ ಮೊದಲಾದ ಕವಿಗಳ ಹೆಸರುಗಳು ೪ರ ಕಡೆಯಲ್ಲಿ ಹೆಸರಿಲ್ಲದ ಸಮಾಪ್ತಿ ಗಾಥಾ ಇದೆ. ೭ರಲ್ಲಿ ಇತಿ ಶ್ರೀಹಾಲ ವಿರಚಿತೇ ಪ್ರಾಕೃತಕಾವ್ಯೇ ಸಪ್ತಶತೇ ಎಂದಿದೆ. ಹಸ್ತಪ್ರತಿಯೊಂದರಲ್ಲಿ "ಶಾಲೀವಾಹನ ವಿರಚಿತ ಕೋಶಃ" ಎಂದಿದೆ. ಉಪಲಬ್ಧವಿರುವ ಏಳು ಪ್ರತಿಗಳಲ್ಲಿ, ಕೆಲವರಲ್ಲಿ ೪-೧೨ ರ ವರೆಗೆ ಗಾಥೆಯ ಮೊದಲು ಆಯಾಯ ಗಾಥೆಯ ಕರ್ತೃಗಳ ಹೆಸರುಗಳಿವೆ. ಅವು ಹೀಗಿವೆ : ಹಾಲ, ಓಡಿಸಸ್ಸ, ಚುಲ್ಲೋಹ, ಮಅರಂದ ಸೇಣ(ಮಕರಂದಸೇನ). ಅಮರರಾಅ(ಅಮರರಾಜ), ಕುಮಾರಿಲ, ಸಿರಿರಾಅ(ಸಿರಿರಾಜ), ಭೀಮಸ್ಸಾಮಿ(ಭೀಮಸ್ವಾಮಿ) ಇತ್ಯಾದಿ. ಈ ಕವಿಗಳಷ್ಟೇ ಅಲ್ಲದೆ ಕವಿಯತ್ರಿಯರೂ ಅನೇಕ ಜನರಿದ್ದಾರೆ:[೭] ಗಾಥಾಗಳನ್ನು ರಚಿಸಿದ್ದಾರೆ. ಆದರೆ ಏಳೂ ಹಸ್ತಪ್ರತಿಗಳಲ್ಲಿ ಸಂಕಲಿತ ಗಾಥಾಗಳಲ್ಲಿ ಏಕರೂಪತೆ ಇಲ್ಲ. ಮೊದಲ ೪೩೦ ಗಾಥಾಗಳಲ್ಲಿ ಸಮಾನತೆ ಇದೆ. ಉಳಿದ ೨೭೦ ಬೇರೆಬೇರೆ ಇವೆ. ಹೇಗೇ ಇದ್ದರೂ ಈ ಗ್ರಂಥ ಏಳುನೂರು ಗಾಥಾಗಳ ಒಂದು ಸಂಕಲನ. ಸಂಕಲಿಸಿದವನು ಹಾಲ.

---

೬. ಗಾಥಾಸಪ್ತಶತಿ: I–೩.

೭. i. ಅಣುಲಚ್ಛಿ (೨ ಗಾಥಾ) ೩–೨೮ (೧೮೨) : ೩–೬೩ (೨೦೦) (ಪುರುಷ ಹೇಗೇ ಇದ್ದರೂ ಸ್ತ್ರೀ ತನ್ನ ಗಂಡನನ್ನು ಬಿಟ್ಟು ಹೋಗುವುದಿಲ್ಲ).
ii. ಅಸುಲದ್ಧಿ (೨ ಗಾಥಾ) ೨–೭೭ (೧೩೯); ೨–೭೮ (೧೪೦).
iii. ಪಹಯಿ (೧ ಗಾಥಾ) ೧–೮೬ (೬೫) (ಸ್ತ್ರೀ ಸಹನಾಶೀಲೆ).
iv. ಬೇಜ್ಝಾ (೧ ಗಾಥಾ) ೬–೮೪ (೪೩೯).
v. ಮಾಧವಿ (೧ ಗಾಥಾ) ೧–೯೧ (೬೯).
vi. ರೇವಾ (೨ ಗಾಥಾ) ೧–೨೭ (೬೬) (ಸ್ತ್ರೀ ಇಂಗಿತಜ್ಞಳು); ೧–೯೦ (೬೮).
vii. ರೋಹಾ (೨ ಗಾಥಾ) ೨–೬೩ (೧೨೬); ೭–೨೪ (೪೬೬).
viii. ವದ್ಮಾವಹೀ (೧ ಗಾಥಾ) ೧–೭೦ (೫೨).
ix. ವೋಹಾ (ಗಾಥಾ) ೭–೩೦ (೪೬೯).
x. ಸಸಿಪ್ಪಹಾ (೧ ಗಾಥಾ) ೪–೪ (೨೩೭) (ಸ್ತ್ರೀ ಪವಿತ್ರ ಪ್ರೇಮ ಉಳ್ಳವಳು).

ಆದರೆ ಹಾಲನೇ ಈ ಸಂಕಲನ ಕಾರ್ಯವನ್ನು ಮಾಡಿರಲಿಕ್ಕಿಲ್ಲ ಎಂಬುದು ಎರಡನೆಯ ವಾದ. ಅದಕ್ಕೂ ಈ ಗ್ರಂಥದಲ್ಲಿ ಸಾಕಷ್ಟು ಆಧಾರ ಇದೆ. 'ತನ್ನ ಗುಣಗಳನ್ನು ಹೊಗಳುವುದರಿಂದ ಸಂತುಷ್ಟನಾದ ಶಾತವಾಹನ ನರೇಂದ್ರನು ನನಗೆ ಹೆಚ್ಚು ದ್ರವ್ಯ ಗೌರವಾದಿಗಳನ್ನು ಕೊಡಬಹುದು' ಎಂದು ಸಂಕಲನಕಾರ ತನ್ನ ಬಯಕೆಯನ್ನು ಗ್ರಂಥದಲ್ಲಿ ಮುಂದಿಟ್ಟಿರುವುದರಿಂದ ಇದನ್ನು ಸಂಕಲಿಸಿದವನು ಆಸ್ಥಾನಕವಿಯೇ ಹೊರತು ರಾಜನಲ್ಲ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಈ ಸಂಗ್ರಹಕಾರನು ರಾಜನನ್ನು ಅಲ್ಲಲ್ಲಿ ಬಣ್ಣಿಸಿರುವುದೂ ಉಂಟು, ಸಂಬೋಧಿಸಿರುವುದೂ ಉಂಟು.[೮] ಒಂದೆಡೆಯಲ್ಲಿ ಹೀಗೆ ಹೇಳಿದ್ದಾನೆ :

ಅಪಸ್ಮಾರಾದವರ ಕುಲವನುದ್ಧರಿಸುವಲಿ ಇಬ್ಬರೇ ಸಂಬುದ್ಧರಿಹರು :
ಒಬ್ಬ ಶಿವಶಂಕರನು, ಗೌರೀ ಮನೋಹರನು ಮತ್ತೊಬ್ಬ
ನರಪತಿಯು ಶಾಲಿವಾಹನನು ॥[೯]

ಎಂತಹ ಸಾಧಾರಣ ರಾಜನೂ ಹೀಗೆ ತನ್ನ ಗುಣಗಳನ್ನು ತಾನೇ ಹೊಗಳಿಕೊಳ್ಳಲಾರನು. ಅಲ್ಲದೇ ಶ್ರೀಮಾತ್ ಅಭಿನಂದ ಎಂಬ ಕವಿಯು ರಚಿಸಿದ 'ರಾಮಚರಿತ' ಮಹಾಕಾವ್ಯದ ೩೨ನೆಯ ಸರ್ಗ ಸಮಾಪ್ತಿಯಲ್ಲಿ ಹೀಗೆ ಹೇಳಿದ್ದಾನೆ :

ಹಾಲೇನೋತ್ತಮ ಪೂಜಯಾ ಕವಿವೃಷಃ ಶ್ರೀ ಪಾಲಿತೋ ಲಾಲಿತಃ
ಖ್ಯಾತಿಂ ಕಾಮಪಿ ಕಾಲಿದಾಸ ಕವಯಃ ನೀತಾಃ ಶಕಾರಾ ತಿನಾ ।
ಶ್ರೀ ಹರ್ಷೋ ವಿತತಾರ ಗದ್ಯ ಕವಯೇ ಬಾಣಾಯ ವಾಣೀ ಫಲಂ ।
ಸದ್ಯಃ ಸತ್ಕ್ರಿಯೆ ಯಾಭಿನಂದಮಪಿ ಚ ಶ್ರೀ ಹಾರವರ್ಷೋ ಗ್ರಹೀತ್ ॥

(ಹಾಲನೆಂಬವನ ಉತ್ತಮ ಪೂಜೆಯಿಂದ ಕವಿಶ್ರೇಷ್ಠನಾದ ಶ್ರೀ ಪಾಲಿತನು ಪೋಷಿಸಲ್ಪಟ್ಟನು: ಶಕಾರಿಯಿಂದ ಕಾಳಿದಾಸ ಮೊದಲಾದ ಕವಿಗಳು ಖ್ಯಾತರಾದರು. ಗದ್ಯ ಕವಿಯಾದ ಬಾಣನಿಗೆ ಶ್ರೀಹರ್ಷನು ವಾಣೀ ಫಲವನ್ನೇ ಕೊಟ್ಟನು: ಶ್ರೀಹಾರವರ್ಷನು ಸದ್ಯದಲ್ಲಿ ಸತ್ಕ್ರಿಯೆಯಿಂದ "ಅಭಿನಂದ"ನಾದ ನನ್ನನ್ನು ಸ್ವೀಕರಿಸಿದನು.)

ಇದರಿಂದ ಹಲವರು ಊಹಿಸುತ್ತಾರೆ : ಹಾಲರಾಜನಿಂದ ಪೂಜಿಸಲ್ಪಟ್ಟ, ಅವನ ಆಸ್ಥಾನ ಕವಿ ಶ್ರೀಪಾಲಿತ ಅಥವಾ ಪಾದಲಿಪ್ತ ಅಥವಾ ಪಾದಲಿಪ್ತಾಚಾರ್ಯನೇ ತನ್ನ ಸಮಕಾಲೀನರ ಅಥವಾ ಪೂರ್ವಜರ ಕೋಟಿ ಗಾಥಾಗಳಲ್ಲಿ ೭೦೦ನ್ನು ಆಯ್ದು, ತನ್ನ ಆಶ್ರಯದಾತನಾದ ಹಾಲನ ಹೆಸರಿನಲ್ಲಿ ಪ್ರಕಟಿಸಿರಬಹುದು, ಎಂದು.

---

೮. ಗಾಥಾಸ IV–೬೪, V–೭೧, VI–೯೫.

೯. ಅದೇ V–೬೭.

ಒಟ್ಟಿನಲ್ಲಿ ಎರಡೂ ಹೇಳಿಕೆಗಳೂ ಸತ್ಯ. ಸದ್ಯದಲ್ಲಿ ಹಾಲನ ಹೆಸರಿನಲ್ಲೇ ಗ್ರಂಥ ಪ್ರಚುರಗೊಂಡಿರುವುದರಿಂದ ಹಾಲನೇ ಇದರ ಸಂಗ್ರಹಕಾರನೆಂದು ಇಟ್ಟುಕೊಳ್ಳಲಾಗಿದೆ.

**ಒಂದು ಮೈಲಿಗಲ್ಲು :** ಶಕಪುರುಷ ಶಾಲಿವಾಹನನಿಂದ ಸಂಕಲಿತವಾದ ಗಾಥಾಸಪ್ತ ಶತಿ ರೂಪುಗೊಂಡದ್ದು ಅವನ ಆಳ್ವಿಕೆಯ ಅದ್ಭೂರಿ ದಿನಗಳಲ್ಲಿ: ನಾಡಿನಲ್ಲಿ ಸುಭಿಕ್ಷ ವೇರ್ಪಟ್ಟು, ಜನತೆಯಲ್ಲಿ ಸಂತೃಪ್ತಿ ತುಂಬಿದ್ದ ಕಾಲದಲ್ಲಿ ಜನಜೀವನದ ಗತಿಯ ಗುರು ತನ್ನು ಅಂದಿನ ಪ್ರಾತಿನಿಧಿಕ ಕಾವ್ಯವಾದ ಗಾಥಾಸಪ್ತಶತಿಯಲ್ಲಿ ಕಾಣಬಹುದು. ಹೇಳಿ ಕೇಳಿ ಗಾಥಾಸಪ್ತಶತಿ ಶೃಂಗಾರಕಾವ್ಯ. ಅದರಲ್ಲಿ ಪ್ರೇಮವೂ ಇದೆ, ಪೂಜೆಯೂ ಇದೆ. ಬದುಕಿನ ಬಹುಮುಖಗಳ ದರ್ಶನ ಓದುಗರಿಗಾಗುತ್ತದೆ. ಆ ದಿನದ ಆ ಜನದ ಉಲ್ಲಾಸಜೀವನ ಅಲ್ಲಿ ಸುವ್ಯಕ್ತವಾಗಿದೆ. ರಾಜಕೀಯ ವ್ಯವಸ್ಥೆ ಸರಿಹೋಗಿ, ಆರ್ಥಿಕ ವ್ಯವಸ್ಥೆ ಸುಧಾರಿಸಿ, ಸಾಮಾಜಿಕಜೀವನದಲ್ಲಿ ಸುಖ-ಶಾಂತಿಗಳು ನೆಲೆಸಿದ್ದು ರಿಂದಲೇ ಅಂತಹ ಶೃಂಗಾರರಸಭರಿತ ಕಾವ್ಯ ಹೊರಬರಲು ಕಾರಣವಾಯಿತು.

ಅಂದಿನ ಆಡಳಿತಭಾಷೆ ಪ್ರಾಕೃತ. ಅದು ಶಾತವಾಹನರ ಅರಮನೆ, ಅಂತಃಪುರ, ಅಗ್ರಹಾರಗಳ ಭಾಷೆಯೂ ಆಗಿತ್ತು.

ಪ್ರಾಕೃತೇತಿ ಸಕಲ ಜಗಜ್ಜಂತೂನಾಂ ವ್ಯಾಕರಣಾದಿಭಿರನಾಹಿತ
ಸಂಸಾರಃ ಸಹಜ ವಚನೋ ವ್ಯಾಪಾರಃ ಪ್ರಕೃತಿಃ ।
ತತ್ರ ಭವಂ ಸೈವನಾ ಪ್ರಾಕೃತಮ್ ॥

ಎಂದು ಕಾವ್ಯಾಲಂಕಾರ ಟೀಕಾಕಾರನಾದ ನಮಿಸಾಧು (ಕ್ರಿ. ಶ. ೧೦೬೮) ವ್ಯಾಖ್ಯಾನಿ ಸಿರುವುದರಿಂದ ಪ್ರಾಕೃತ ಶ್ರೀಸಾಮಾನ್ಯನ ಆಡುಭಾಷೆಯಾಗಿತ್ತೆಂದು ತಿಳಿಯಬಹು ದಾಗಿದೆ. ಬಹುಶಃ ಸಂಸ್ಕೃತ ವ್ಯಾಕರಣ ನಿಯಮಗಳು ಕಠಿಣವಾಗತೊಡಗಿ ಅದು ಜನಪ್ರಿಯತೆಯನ್ನು ಕಳೆದುಕೊಂಡಂತೆ ಪ್ರಾಕೃತಿ ಜನಾದರಣೆಯನ್ನು ಗಳಿಸುತ್ತಾ ಬಂದಿರಬೇಕು. ಹೀಗಾಗಿ ಅಂದಿಗೆ ಪ್ರಾಕೃತ ರಾಜ್ಯದ ಆಡಳಿತಭಾಷೆಯೂ, ಶಿಕ್ಷಣ ಮಾಧ್ಯಮವೂ ಆಗಿದ್ದಿರಬೇಕು. ಇಂತಹ ಪ್ರಚುರ ಭಾಷೆ ತಮ್ಮ ಧರ್ಮಪ್ರಚಾರಕ್ಕೆ ಉತ್ತಮ ಸಾಧನವಾಗಬಹುದೆಂದು ಭಾವಿಸಿದ್ದರಿಂದಲೇ ಜೈನರೂ ಬೌದ್ಧರೂ ಈ ಭಾಷೆಯಲ್ಲಿ ಹಲವಾರು ಧಾರ್ಮಿಕ ಕೃತಿಗಳನ್ನು ರಚಿಸಿದರೆಂದು ತೋರುತ್ತದೆ. ಶಾತ ವಾಹನರ ಕಾಲದಲ್ಲಿ ಶಾಸನಗಳೂ ಪ್ರಾಕೃತದಲ್ಲಿದ್ದುವೆಂದು ಸಾಹಿತ್ಯಗೋಷ್ಠಿಗಳು ಸಾರು ತ್ತಿವೆ. ಸರಸ್ವತೀ ಕಂಠಾಭರಣದ ಟೀಕಾಕಾರನಾದ ರತ್ನೇಶ್ವರಮಿತ್ರನು ಒಂದೆಡೆಯಲ್ಲಿ ಹೀಗೆ ಹೇಳಿದ್ದಾನೆ :

ಕೇನಾಸನ್ನಾಢ್ಯ ರಾಜ್ಯಸ್ಯ ರಾಜ್ಯೇ ಪ್ರಾಕೃತ ಭಾಷಿಣಾ ।
ಕಾಲೇ ಶ್ರೀ ಸಾಹಸಾಂಕಸ್ಯ ಕೇನ ಸಂಸ್ಕೃತ ಭಾಷಿಣಃ ॥

ಆಢ್ಯರಾಜನ ಕಾಲದಲ್ಲಿ ಪ್ರಾಕೃತವನ್ನು ಎಲ್ಲರೂ ತಿಳಿದಿದ್ದರು: ವಿಕ್ರಮಾಂಕನ ಕಾಲದಲ್ಲಿ ಸಂಸ್ಕೃತ ಎಲ್ಲರಿಗೂ ಗೊತ್ತಿತ್ತು ಎಂಬುದಾಗಿ ಹೇಳುತ್ತಾನೆ. ಆದರೆ ಪ್ರಾಕೃತ ಪ್ರೇಮಿಯಾದ ಹಾಲನು ಸಂಸ್ಕೃತವನ್ನು ಕಲಿತದ್ದು ಒಂದು ಪವಾಡವೇ ಆಗಿದೆ. ಅದಕ್ಕೆ ಸಂಬಂಧಿಸಿದ ಒಂದು ದಂತಕಥೆಯೂ ಇದೆ :

ಶ್ರೀಮತ್ ಕುಂತಲ ಜನಪದೇಶ್ವರನೂ, ಪ್ರತಿಷ್ಠಾನ ಪಟ್ಟಣಾಧೀಶನೂ, ಮಲಯವತೀ ಪ್ರಾಣಪ್ರಿಯನೂ ಆದ ಹಾಲದ್ಯುಪನಾಮಕ ಶ್ರೀ ಶಾತವಾಹನನು ಸಂಸ್ಕೃತದ ಪ್ರಕಾಂಡಪಂಡಿತನಾದ ಶರ್ವವರ್ಮನ ಆತ್ಮೀಯ ಮಿತ್ರನಾಗಿದ್ದರೂ ಸಂಸ್ಕೃತ ಬಲ್ಲವನಾಗಿರಲಿಲ್ಲವಂತೆ. ಆದರೆ ಅವನ ಹೆಂಡತಿ ಮಲಯವತಿಯು ಸಂಸ್ಕೃತದಲ್ಲಿ ಸಾಕಷ್ಟು ಪರಿಣತಳಿದ್ದಳಂತೆ. ಒಂದುದಿನ ಸತಿ-ಪತಿಗಳೀರ್ವರೂ ಜಲಕ್ರೀಡೆಯಾಡುವಾಗ ಮಲಯವತಿ ತನ್ನ ಗಂಡನನ್ನು ಕುರಿತು, 'ಮೋದಕೈಸ್ತಾಡಯ' (ಮಾ ಉದಕೈಃ ತಾಡಯ– ಅಂದರೆ ನೀರಿನಿಂದ ನನ್ನನ್ನು ಹೊಡೆಯಬೇಡ) ಎಂದಳಂತೆ. ಸಂಧಿಯ ಸ್ವರೂಪವನ್ನೇ ಅರಿಯದ ಅರಸ ಮೋದಕ ಎಂದರೆ ಕಡಬು ಎಂದು ಅರ್ಥೈಸಿಕೊಂಡು ಕಡಬುಗಳನ್ನು ತರಲು ಆಜ್ಞೆಮಾಡಿದನಂತೆ ! ಆಗ ಅವಳು ಪರಿಹಾಸ ಮಾಡುತ್ತಾಳೆ. ಅದರಿಂದ ನಾಚಿದ ಶಾತವಾಹನನು ತನ್ನ ಆಸ್ಥಾನದಲ್ಲಿಯೇ ಇದ್ದ ಗುಣಾಢ್ಯನನ್ನು ವ್ಯಾಕರಣ ಕಲಿಸಲು ಕೇಳಿದಾಗ ಅವನು ಒಪ್ಪಲಿಲ್ಲ. ಆದರೆ ಗುಣಾಢ್ಯನ ಪ್ರತಿಸ್ಪರ್ಧಿಯಾದ ಶರ್ವವರ್ಮನು ತಾನು ಆರು ತಿಂಗಳಲ್ಲಿಯೇ ರಾಜನಿಗೆ ವ್ಯಾಕರಣವನ್ನು ಕಲಿಸುವುದಾಗಿ ಪ್ರತಿಜ್ಞೆ ಮಾಡುತ್ತಾನೆ. ಆಗ ಪಂಡಿತನಾದ ಗುಣಾಢ್ಯನು ಅಷ್ಟು ಅವಧಿಯಲ್ಲಿ ವ್ಯಾಕರಣವನ್ನು ಕಲಿಸುವುದು ಸಾಧ್ಯವೇ ಇಲ್ಲವೆಂದು ಭಾವಿಸಿ "ನೀನು ಆ ಅವಧಿಯಲ್ಲಿ ಕಲಿಸಿದ್ದೇ ಆದರೆ (ಅಂದು) ಪ್ರಚಲಿತವಿರುವ ಭಾಷೆ(ಸಂಸ್ಕೃತ)ಯಲ್ಲಿ ನಾನು ಮಾತನಾಡುವುದಿಲ್ಲ !" ಎಂದು ಪ್ರತಿಜ್ಞೆ ಮಾಡುತ್ತಾನೆ. ಶರ್ವವರ್ಮನು ಪಂಥ ಹೂಡುತ್ತಾನೆ, ಸ್ಪರ್ಧೆ ಪ್ರಾರಂಭವಾಗುತ್ತದೆ. ಆದರೆ ಶರ್ವವರ್ಮನು ಕಾರ್ತಿಕೇಯನ (ಷಣ್ಮುಖನ) ವರಪ್ರಸಾದದಿಂದ ಹೇಳಿದ ಅವಧಿಯಲ್ಲೇ ಶಾತವಾಹನನಿಗೆ ವ್ಯಾಕರಣವನ್ನು ಕಲಿಸುತ್ತಾನೆ. ಆಗ ಗುಣಾಢ್ಯನು ಪ್ರೈತಣವನ್ನು ತೊರೆದು ಕಾಡಿಗೆ ಹೋಗಿ ಅಲ್ಲಿ ಪೈಶಾಚಿಭಾಷೆಯಲ್ಲಿ ಬೃಹತ್ಕಥೆಯನ್ನು ರಚಿಸುತ್ತಾನೆ. ಪ್ರೀತನಾದ ಶಾತವಾಹನನು ಶರ್ವವರ್ಮನಿಗೆ 'ಭರುಕಚ್ಛ' ಎಂಬ ಭೂಭಾಗವನ್ನಿತ್ತು, ಅಲ್ಲಿಗೆ ಅವನನ್ನು ಅಧಿಪತಿಯನ್ನಾಗಿ ಮಾಡುತ್ತಾನೆ.

ಈ ದಂತಕಥೆಯ ಅಂತರಾರ್ಥ ಇಷ್ಟೆ : ಅಂದು ಪ್ರಾಕೃತ-ಸಂಸ್ಕೃತಗಳೆರಡೂ ಕುಂತಲದಲ್ಲಿ ಹೆಚ್ಚು ಜನಪ್ರಿಯತೆಯನ್ನು ಗಳಿಸಿಕೊಂಡಿದ್ದುವು. ಎರಡನೆಯದಾಗಿ ಶಾತವಾಹನನ ಅರಮನೆ-ಅಂತಃಪುರಗಳಲ್ಲೂ ಪಂಡಿತೆಯರ ತಂಡ ಇತ್ತು. ಪುರುಷರಿಗೆ ಸಮಾನಸ್ಕಂದರಾಗಿ ಸ್ತ್ರೀಯರೂ ಅವನ ಆಸ್ಥಾನದಲ್ಲಿ ಕಾವ್ಯ ರಚಿಸಿ ಖ್ಯಾತ ಕವಯಿತ್ರಿಯರಾಗಿದ್ದರು. ಸಹೃದಯನಾದ ಹಾಲರಾಜನು ಉಭಯಭಾಷಾಪಂಡಿತರಿಗೂ ಆಶ್ರಯ ನೀಡಿದ್ದನು.

ಅವನ ಆಸ್ಥಾನದಲ್ಲಿ ಸಂಸ್ಕೃತಕ್ಕೂ ಪ್ರಾಕೃತಕ್ಕೂ ಸಮಾನವಾದ ಪ್ರೋತ್ಸಾಹವಿತ್ತು. ಸ್ವಯಂ ಕವಿಯಾದ ಆತನು 'ಕಲ್ಪವೃಕ್ಷ'ದಂತೆ ಕವಿಜನಾಶ್ರಯನೂ ಆಗಿದ್ದನು. ತನ್ನ ಆಸ್ಥಾನದಲ್ಲಿ ಆಗಾಗ ನಡೆಯುತ್ತಿದ್ದ ಕವಿಗೋಷ್ಠಿಗಳಲ್ಲಿ ಚಮತ್ಕಾರ ಯುಕ್ತವಾದ ಕವಿತೆಗಳನ್ನು ಓಲೆಗಳ ಮೇಲೆ ಬರೆಯಿಸಿ ಇಡುತ್ತಿದ್ದಿರಬೇಕು. ಅವು ಗಳನ್ನೇ ಒಂದೆಡೆ ಸಂಕಲಿಸಿರುವುದಾಗಿ ಪ್ರಥಮ ಶತಕದ ಮೂರನೆಯ ಗಾಥಾದಲ್ಲಿ ತಿಳಿಸಿದ್ದಾನೆ. ಅಂತೆಯೇ ಅವನು ಎಂತಹ ಕಲಾಪ್ರೇಮಿ ಎಂಬುದಕ್ಕೆ ಮತ್ತೊಂದು ಕಥೆ ಇದೆ. ಮೇರುತುಂಗಾಚಾರ್ಯನು ತನ್ನ ಪ್ರಬಂಧಚಿಂತಾಮಣಿಯಲ್ಲಿ ಈ ಶಾತವಾಹನ ಚಕ್ರವರ್ತಿಗೆ ಸಂಬಂಧಿಸಿದಂತೆ 'ಸಾತವಾಹನ ಪ್ರಬಂಧ' ಎಂಬುದೊಂದು ಪ್ರಬಂಧವನ್ನು ರಚಿಸಿದ್ದಾನೆ. ಅದರಲ್ಲಿ ಹೀಗಿದೆ :

ಸಾತ ಅಥವಾ ಮಹಾರಾತನು ಕವಿ ಪಂಡಿತರನ್ನು ತನ್ನ ಆಸ್ಥಾನದಲ್ಲಿ ಪೋಷಿಸುತ್ತಿದ್ದ ನಷ್ಟೆ. ಆಗ ಯಾರೋ ಬರೆದಿದ್ದ ನಾಲ್ಕೂ ಗಾಥಾಗಳನ್ನು ನಾಲ್ಕು ಲಕ್ಷ ಚಿನ್ನದ ನಾಣ್ಯಗಳನ್ನು ಕೊಟ್ಟು ಕೊಂಡುಕೊಂಡು ತನ್ನ ಏಳುನೂರು ಗಾಥಾಗಳ ಸಂಕಲನದಲ್ಲಿ ಸೇರಿಸಿ, 'ಗಾಥಾಕೋಶ'ವನ್ನು ಸಿದ್ಧಪಡಿಸಿ, ಬಹಳ ಕಾಲ ರಾಜ್ಯವಾಳಿದ. ಬೆಲೆ ಕೊಟ್ಟು ಕೊಂಡ ನಾಲ್ಕು ಗಾಥಾಗಳು[೧೦] ಇವು—

೧. ಮಗ್ಗಂಚಿಯ ಅಲಹಂತೋ ಹಾರೋ ಪೀಣುಣ್ಣಯಾನ ಥಣಯಾನಂ
ಉಬ್ಬಿಂಬೋ ಭಮಇ ಉರೇ ಜಮುಣಾನಇ ಫೇಣ ಪುಂಜವ್ವ ॥
೨. ಕಸಿಣುಜ್ಜ ಲೋಯರೇಹಇ ವೇಣೀದಂಡೋ ಣಿಯಂಬ ಬಿಂಬಮ್ಮಿ
ತುಹ ಸುಂದರಿ ಸುರಯ ಮಹಾಣಿಹಾಣ ರಖ್ಖಾ ಭುಯಂಗವ್ವ ॥
೩. ಪರಿಓಸ ಸುಂದರಾ ಇಂಸುರ ಏಜಾಯಂತಿ ಜಾಯ್ಯಿ ಸುಖ್ಖಾಇ
ವಿರಹಾಮ್ಮಿ ತಾಣ್ಣಿ ಪಿಯಸಹಿ ಖಿಟ್ಟುಗ್ಗಲಿಯಾಣ್ಣಿ ಕೀರಂತಿ ॥
೪. ಮಾಜಾನ ಖೀರ ಜಹ ಚಂಚುಲಾಲಿಯಂ ಪಡಇ ಪಕ್ಕಮಾ ಇಂದಂ
ಜರಥತ್ತಣ ದುಲ್ಲಲಿಯಂ ಉಭ್ಭಯ ತಾಲಾಹಲಂ ಪಿಯಂ ॥

೧೦ i. ಮಾರ್ಗವಿವ ಅಲಭಮಾನಃ ಹಾರಃ ಪೀನೋನ್ನತಪಯೋಃ ಸ್ತನಯೋಃ
ಉದ್ವಿಂಬೋಭ್ರಮತ್ಯುರಸಿ ಯಮುನಾ ನದೀಫೇನ ಪುಂಜ ಇವ ॥
ii. ಕೃಷ್ಣೋಜ್ವಲಶ್ಚ ರಾಜತೇ ವೇಣೀದಂಡೋ ನಿತಂಬ ಬಿಂಬೇ ತವ ಸುಂದರಿ
ಸುರತ ಮಹಾನಿಧಾನ ರಕ್ಷಾಭುಜಂಗ ಇವ ॥
iii. ಪರಿತೋಷ ಸುಂದರಾಣಿ ಸುರತೇ ಜಾಯಂತೇ ಯಾನಿ ಸೌಖ್ಯಾನಿ
ವಿರಹೇತಾನಿ ಪ್ರಿಯಸಖಿ ಖಾದಿತೋದ್ಗಲಿತಾನಿ ಕುರ್ವಂತಿ ॥
iv. ಮಾಜಾನೇಃ ಖೀರ ಯಥಾ ಚಂಚುಲಾಲಿತಂ ಪತತಿಪಕ್ಷ ಮಾಕಂದಂ
ಜರಠತ್ವ ದುರ್ಲಲಿತಂ ಉದ್ಭುಜ ತಾಲಫಲ ಏತತ್ ॥

ಗಂಗಾಧರ ವ್ಯಾಖ್ಯಾನ ಮೂಲದಲ್ಲಿ ಈ ಮೇಲಿನ ೧ ಮತ್ತು ೩ ಗಾಥಾಗಳು ೭ನೆಯ ಶತಕದ ೬೯ ಮತ್ತು ೬೮ ಸಂಖ್ಯೆಗಳೊಡನೆ ಕ್ರಮವಾಗಿ ಇವೆ. ಸಪ್ತಶತಿಯ ಇತರ ಮೂಲಪಾಠಗಳಲ್ಲಿ ಮಿಕ್ಕ ಎರಡು ಗಾಥಾಗಳು ಇದ್ದರೂ ಇರಬಹುದು ಎನ್ನುತ್ತಾರೆ, ಶ್ರೀ ರಾಳ್ಲಪಲ್ಲಿ.

—ನೋಡಿ. ಸಪ್ತಶತೀಸಾರಮು : ಪುಟ ೨೦

ಈ ರೀತಿ ಸಾಹಿತ್ಯಕಲೆಗೆ ಪ್ರೋತ್ಸಾಹವಿದ್ದ, ಪ್ರಾಕೃತ ಪ್ರಚಲಿತವಿದ್ದ ಕಾಲದಲ್ಲಿ ಗಾಥಾಸಪ್ತಶತಿ ಜನ್ಮತಾಳಿತು. ಆದ್ದರಿಂದಲೇ ಅದು ಪ್ರಾಕೃತ ಸಾಹಿತ್ಯಕ್ಷೇತ್ರದಲ್ಲಿ ಒಂದು ಮೈಲಿಗಲ್ಲಾಗಿ ನಿಂತಿದೆ.

**ಸ್ವರ್ಣಯುಗದ ಸೀಮಂತರತ್ನ :** ಹಾಲರಾಜನು ಹೊನ್ನುಕೊಟ್ಟು ಕೊಂಡು ಕೊಂಡ ಗಾಥಾಚತುಷ್ಟಯಗಳ ಮಾರುಕಟ್ಟೆಯ ಮೌಲ್ಯ ನಾಲ್ಕು ಲಕ್ಷ ಸ್ವರ್ಣಮುದ್ರೆಗಳೆಂದರೆ ಆಶ್ಚರ್ಯವಾಗಬಹುದು ಆದರೆ ಇದು ಮುಕ್ತಕಗಳಿಗಿತ್ತ ಬೆಲೆಯೆಂದರ್ಥವಲ್ಲ, ಹಾಲರಾಜನ ಅಮಿತವಾದ ಕಲಾಪ್ರೇಮಕ್ಕೆ ಹಿಡಿದ ಕನ್ನಡಿ: ಅವನಿಗಿದ್ದ 'ಕವಿವತ್ಸಲ' ಎಂಬ ಬಿರುದಿಗೆ ಎತ್ತಿದ ಪತಾಕೆ ! ಪ್ರಕಾಂಡಪಂಡಿತೆಯಾದ ಪತ್ನಿ, ಪ್ರತಿಭಾಸಂಪನ್ನರಾದ ಕವಿಪುಂಗವರು–ಇವರ ಪರಿಸರದಲ್ಲಿ ಪ್ರಬುದ್ಧಮಾನಕ್ಕೆ ಬಂದ ಶಕಪುರುಷ ಶಾಲಿವಾಹನ ಸ್ವಯಂಕವಿಯೂ ಆಗಿದ್ದಿರಬಹುದು. ಆದರೆ ಗಾಥಾಸಪ್ತಶತಿಯ ಈ ಸಂಕಲನದಲ್ಲಿ ಅವನವೇ ಎಂದು ಬೆರಳಿಟ್ಟು ತೋರಿಸುವುದು ಕಷ್ಟದ ಕೆಲಸ. ಆದರೂ ಆತನ ಸ್ವಂತ ರಚನೆಯೂ ಈ ಸಂಕಲನದಲ್ಲಿ ಸೇರಿದೆ ಎಂದು ಊಹಿಸಬಹುದಾಗಿದೆ. ಇದರ ಜೊತೆಗೆ ಹಾಲನು ಮತ್ತೂ ಅನೇಕ ಪ್ರಾಕೃತ, ಸಂಸ್ಕೃತಕಾವ್ಯಗಳನ್ನು ರಚಿಸಿದ್ದಿರಬಹುದು. ಹಾಲನ ವಿಚಾರವಾಗಿ ಅಲ್ಲಿ ಇಲ್ಲಿ ದೊರೆಯುವ ತುಣುಕು ಪ್ರಶಂಸಾ ನುಡಿಗಳೇ ಈ ಊಹೆಗೆ ಕಾರಣವಾಗಿವೆ. ಆದರೆ ಈ ಬಗೆಗೆ ಹೆಚ್ಚು ಗ್ರಂಥಗಳ ಅಥವಾ ಉಲ್ಲೇಖಗಳ ಆಧಾರವಾವುದೂ ಇಲ್ಲ.

**ಮಲಯವತಿ :** ಪತಿಯ ಪಾಂಡಿತ್ಯವನ್ನೇ ಪ್ರಶ್ನಿಸಿ ಪರಿಹಾಸ ಮಾಡಿದ ಹಾಲರಾಜನ ಪ್ರಾಣಪ್ರಿಯೆ ಮಲಯವತಿ ಸಾಧಾರಣ ಸ್ತ್ರೀ ಎಂದೆನ್ನಿಸುವುದಿಲ್ಲ. ಅವಳ ವಿದ್ವತ್ ಪ್ರತಿಭೆಗೆ, ಭಾಷಾಪ್ರಭುತ್ವಕ್ಕೆ ಹಿಂದೆ ಹೇಳಿದ ದಂತಕಥೆ ಸಾಕ್ಷಿಯಾಗಿದೆ. ಇಂತಹ ಪ್ರಾಜ್ಞಳು, ಪ್ರಾಕೃತದಲ್ಲಿ ಅಲ್ಲದಿದ್ದರೂ, ಸಂಸ್ಕೃತದಲ್ಲಿ ಏನಾದರೂ ರಚಿಸಿರಲಾರಳೇ ಎಂದು ನಮ್ಮನ್ನೇ ಒಮ್ಮೆ ಪ್ರಶ್ನಿಸಿಕೊಳ್ಳುವಂತಾಗುತ್ತದೆ. ಆದರೆ ಈ ಅನಿಸಿಕೆಯ ಸತ್ಯಾಸತ್ಯತೆಯ ಸಾಕ್ಷ್ಯಾಧಾರಗಳಿಲ್ಲ. ಏನೇ ಇರಲಿ ಕಾವ್ಯಜೀವಿ ಹಾಲದೇವನಿಗೆ ಕವಯಿತ್ರಿಯಾದ ಪತ್ನಿ ದೊರೆತದ್ದರಿಂದ ಅವನ ಬದುಕು ಬಂಗಾರವಾಯಿತು; ಚಿನ್ನಕ್ಕೆ ಸುಗಂಧ ಬೆರೆತಂತಾಯಿತು. ಇದು ನಿಜಕ್ಕೂ ಅಪರೂಪದ ದಾಂಪತ್ಯ. ಹೌದು, ಸ್ವರ್ಗಕ್ಕೆ ಕಿಚ್ಚುಹಚ್ಚಿಸಬಲ್ಲ ಸುಖದಾಂಪತ್ಯ ದೊರೆತರೆ ಎಂಥವನೂ ಹಂತವನ್ನೇರುತ್ತಾನೆ ಎಂದಮೇಲೆ ರಸಿಕಚಕ್ರಿಯ ಪ್ರಗತಿಪ್ರಸ್ಥಾನವನ್ನು ಕೇಳಬೇಕೆ ? ಆತ ನಿಜಕ್ಕೂ ಭಾಗ್ಯಶಾಲಿ. ಆದ್ದರಿಂದಲೇ ಗಾಥಾಸಪ್ತಶತಿಯಂತಹ ಶೃಂಗಾರಪೂರ್ಣ ಕಾವ್ಯಮಂಜರಿಯನ್ನು ನೀಡಲು ಸಾಧ್ಯವಾಯಿತು.

ಕವಿನೃಪನಾದ ಹಾಲದೇವ, ಕವಯಿತ್ರಿ ಮಲಯವತಿ– ಇವರ ಆಸ್ಥಾನ, ಅಂತಃಪುರಗಳು ಬಂಜರಾಗಿರಲು ಸಾಧ್ಯವೇ ? ಅವರ ಪರಿಸರ ನಿಜಕ್ಕೂ ಪ್ರಚೋದಕವಾಗಿತ್ತು.

ನಾವು ಹಿಂದೆಯೇ ಹೇಳಿದಂತೆ ಗಾಥಾಗಳನ್ನು ರಚಿಸಿದ ಹತ್ತಾರು ಜನ ಕವಯಿತ್ರಿಯರೇನೋ ಸಿಗುತ್ತಾರೆ. ಆದರೆ ಅವರಲ್ಲಿ ಯಾರು ಯಾರು ಹಾಲನ ಆಸ್ಥಾನದಲ್ಲಿದ್ದರು ಎಂದು ಹೇಳುವುದು ಕಷ್ಟ. ಅವರೆಲ್ಲರೂ ಆ ಕಾಲದವರೇ ಅಥವಾ ಕೆಲವರಾದರೂ ಇದ್ದರೆ, ಅದೂ ಕಷ್ಟ ಹೇಳುವುದಕ್ಕೆ. 'ಸ್ತ್ರೀ ಸಹನಾಶೀಲೆ', 'ಸ್ತ್ರೀ ಇಂಗಿತಜ್ಞಳು', 'ಸ್ತ್ರೀ ನಿಷ್ಕಾಮಪೂರ್ಣ ಪ್ರೇಮವುಳ್ಳವಳು'. 'ಸ್ತ್ರೀ ನಿಜಕ್ಕೂ ಪುರುಷನ ಪ್ರಣಯದೇವತೆ' 'ಪುರುಷನು ಹೇಗೇ ಇದ್ದರೂ, ಅವನಿಂದ ತನಗೆ ಎಷ್ಟೇ ಕಷ್ಟಗಳು ಬಂದರೂ ಸ್ತ್ರೀ ಎಂದಿಗೂ ತಾನು ವರಿಸಿದ ಗಂಡನನ್ನು ತಾನಾಗಿಯೇ ಬಿಟ್ಟುಹೋಗುವುದಿಲ್ಲ'. 'ಸ್ತ್ರೀ ಎಷ್ಟು ಮುಗ್ಧಳೋ ಅಷ್ಟೇ ಮನೋಹರಿ, ಸುಕೋಮಲೆ, ಸುಶೀಲೆ, ಇತ್ಯಾದಿಯಾಗಿ ಸ್ತ್ರೀತ್ವದ ಶ್ರೀಮಂತಿಕೆಯನ್ನು ಪ್ರದರ್ಶಿಸಿದ ಕವಯಿತ್ರಿಯರಿಗೆ ಹಾಲರಾಜನ ಆಸ್ಥಾನ ಆಡುಂಬೊಲವಾಗಿದೆ. ಅಣುಲಚ್ಛಿ, ರೇವಾ, ರೋಹಾ, ಪಹುಯೀ, ಸಸಿಪ್ಪಹಾ– ಮೊದಲಾದವರು ನಾಡಾಡಿ ಹೆಣ್ಣುಗಳು ಎಂದೆನ್ನಿಸುವುದಿಲ್ಲ. ಅವರ ಬಣ್ಣನೆಗಳಲ್ಲಿ ಸೌಂದರ್ಯವೂ ಇದೆ; ಸಂಸ್ಕೃತಿಯೂ ಇದೆ. ಭಾರತೀಯವಾದ ಸಂಸ್ಕೃತಿಯ ದ್ಯೋತಕವಾಗುವಂತಹ ಗಾಥಾಗಳನ್ನಿತ್ತು ಪ್ರಾಕೃತ ಕಾವ್ಯದ ಸಂಪತ್ತನ್ನು ಹೆಚ್ಚಿಸಿದ್ದಾರೆ.

ಗಾಥಾಸಪ್ತಶತಿಯ ಹಲವು ಹಸ್ತಪ್ರತಿಗಳಲ್ಲಿ ಹಾಲ, ಓಡಿಸಸ್ಸ, ಚುಲ್ಲೋಹ, ಮಲಿರಂದಸೇಣ, ಅಮರರಾಅ, ಕುಮಾರಿಲ, ಸಿರಿರಾಅ, ಭೀಮಸ್ವಾಮಿ– ಮೊದಲಾದ ನಾಲ್ಕಾರು ಗಾಥಾಕಾರರ ಹೆಸರುಗಳು ಸಿಗುತ್ತವೆ. ಇವರಲ್ಲಿ ಯಾರು ಯಾರು ಹಾಲನ ಆಸ್ಥಾನದಲ್ಲಿದ್ದರು ಅಥವಾ ಅವನ ಸಮಕಾಲೀನರಾಗಿದ್ದರು. ಹೇಳುವುದು ಕಷ್ಟ. ಆದರೂ ಹಾಲನಿಂದಲೇ ಕವಿನಾಮಾವಳಿ ಆರಂಭವಾಗುವುದರಿಂದ ಉಳಿದವರು ಕೆಲವರಾದರೂ ಅವನ ಆಸ್ಥಾನವನ್ನು ಬೆಳಗಿಸಿರಬೇಕು ಎಂದೆನ್ನಿಸುತ್ತದೆ. ಆದರೆ ಇಂಥವರೇ ಎಂದು ನಿರ್ಧರಿಸಿ ಹೇಳುವುದು ಸಧ್ಯದಲ್ಲಿ ಸಾಧ್ಯವಿಲ್ಲ.

**ಗುಣಾಢ್ಯ :** ಪ್ರಾಕೃತ ಸಾಹಿತ್ಯಪ್ರಪಂಚದಲ್ಲಿ ಗುಣಾಢ್ಯನದು ಬಹು ದೊಡ್ಡ ಹೆಸರು. ಶಕಪುರುಷ ಶಾತವಾಹನನ ಆಸ್ಥಾನಕವಿಯಾದ ಗುಣಾಢ್ಯನ ಕಾಲ ಕ್ರಿ. ಶ. ೧ನೆಯ ಶತಮಾನ. ಬೃಹತ್ಕಥಾಕೋಶ ಅವನ ಪ್ರಾಕೃತ ಕಲಾಕಾಣಿಕೆ. ಆದರೆ ಬೃಹತ್ಕಥೆ ಉಪಲಬ್ಧವಿಲ್ಲ. ಅದನ್ನು ಕುರಿತ ಉಲ್ಲೇಖಗಳು ಅನೇಕವಿವೆ. ಈ ಗ್ರಂಥದ ಜೊತೆಗೆ ಗುಣಾಢ್ಯನು ಅನೇಕ ಗಾಥಾಗಳನ್ನು ರಚಿಸಿದ್ದಿರಬಹುದು. ಆದರೆ ಅವು ಯಾವುವೆಂದು ಹೇಳಬರುವುದಿಲ್ಲ. ಏನೇ ಇರಲಿ, ಕಾವ್ಯಗುಣಗಣಿಯಾದ ಗುಣಾಢ್ಯ ಅನೇಕ ಕವಿಕೋಗಿಲೆಗಳಿಗೆ ವಟವೃಕ್ಷವಾಗಿದ್ದಾನೆ. ಅವನ ಪ್ರಾತಿಭಪ್ರಭಾವಕ್ಕೆ ಒಳಗಾಗದ, ಅವನ ಪಾಂಡಿತ್ಯ ಪ್ರೌಢಿಮೆಗಳನ್ನು ಮೆಚ್ಚದ, ಅವನ ಬೃಹತ್ ಕಥಾಭಿತ್ತಿಗೆ ಬೆರಗಾಗದ, ಕಲಾಕೌಶಲವನ್ನು ಮೆಚ್ಚದ, ಮಣಿಯದ ಪ್ರಾಕೃತದ ಕವಿಯಿಲ್ಲ. ಅವನು ಗದ್ಯರಚನೆಯಲ್ಲಿ ಪ್ರಾಕೃತದ ಬಾಣಭಟ್ಟ; ಕವಿತಾಶಕ್ತಿಯಲ್ಲಿ ಪ್ರಾಕೃತದ ವ್ಯಾಸಮಹರ್ಷಿ. ಗೋವರ್ಧನಾಚಾರ್ಯನು ಇವನ ಬಗೆಗೆ ಒಂದೆಡೆಯಲ್ಲಿ—

ಅತಿದೀರ್ಘ ಜೀವಿದೋಷಾತ್ ವ್ಯಾಸೇನ ಯಶೋಪಹಾರಿತಂ ಹಂತ ।
ಕೈರ್ನೋಚ್ಯೇತ ಗುಣಾಢ್ಯಃ ಸಏವ ಜನ್ಮಾಂತರಾಪನ್ನಃ ॥೧೧

ಅಂದರೆ ಬಹುಕಾಲ ಬದುಕಿದ ದೋಷದ ಕಾರಣದಿಂದ ವ್ಯಾಸರಿಂದ ಕೀರ್ತಿಯು ಅಪಹರಿಸಲ್ಪಟ್ಟಿತೆಂದು. ಅವನೇ ಗುಣಾಢ್ಯನಾಗಿ ಜನ್ಮಾಂತರವನ್ನು ಹೊಂದಿದನೆಂದು ಯಾರು ತಾನೆ ಹೇಳುವುದಿಲ್ಲ, ಎಂದಿದ್ದಾನೆ. ಅಂದಮೇಲೆ ಗುಣಾಢ್ಯನ ಘನತೆಗೆ ಬೇರೆ ಸಾಕ್ಷಿ ಬೇಕಾಗಿಲ್ಲ. ಆದರೂ ಅವನ ಬೃಹತ್ಕಥಾಕೋಶ ಉಪಲಬ್ಧವಿಲ್ಲದ್ದು ಪ್ರಾಕೃತಸಾಹಿತ್ಯಕ್ಕೆ-- ಅಷ್ಟೇಕೆ ವಿಶ್ವದ ಸಾರಸ್ವತ ಪ್ರಪಂಚಕ್ಕೇ-- ತುಂಬಲಾರದ ನಷ್ಟವಾಗಿದೆ. ಇಂದು ಕಥಾಸರಿತ್ಸಾಗರ ಎಂಬ ಅದರ ಸಂಸ್ಕೃತಛಾಯೆಯನ್ನು ನೋಡಿಕೊಂಡು ತೃಪ್ತಿ ಪಡೆಯಬೇಕಾಗಿದೆ.

ಸಾರ್ವಭೌಮ ಶಾತವಾಹನನಿಗೆ ಆರು ತಿಂಗಳುಗಳಲ್ಲಿ ಸಂಸ್ಕೃತವ್ಯಾಕರಣವನ್ನು ಕಲಿಸುವ ವಿಚಾರದಲ್ಲಿ ಅವನ ಆಸ್ಥಾನಕವಿಗಳಾದ ಗುಣಾಢ್ಯನಿಗೂ, ಶರ್ವವರ್ಮನಿಗೂ ಸ್ಪರ್ಧೆ ಏರ್ಪಟ್ಟಿತ್ತಷ್ಟೆ. ಆ ಸ್ಪರ್ಧೆಯಲ್ಲಿ ಗುಣಾಢ್ಯನು ಪರಾಜಿತನಾಗುತ್ತಾನೆ. ಗೊತ್ತುಪಡಿಸಿದ ಅವಧಿಯಲ್ಲಿ ಶರ್ವವರ್ಮನು ಕಾರ್ತಿಕೇಯನ (ಷಣ್ಮುಖನ) ಕಾರುಣ್ಯ ದಿಂದ ಅರಸನಿಗೆ ಸಂಸ್ಕೃತವ್ಯಾಕಣವನ್ನು ಕಲಿಸಿಬಿಡುತ್ತಾನೆ. ಆ ರೀತಿ ಕಲಿಸಿದ್ದಾದರೆ ಅದು ಪ್ರಚಲಿತವಿದ್ದ ಸಂಸ್ಕೃತಭಾಷೆಯಲ್ಲಿ ತಾನು ಮಾತನ್ನೇ ಆಡುವುದಿಲ್ಲ ಎಂದು ಶಪಥ ಮಾಡಿದ ಗುಣಾಢ್ಯನು ತನ್ನ ಮಾತಿನಂತೆ ಪೈಠಣವನ್ನು ತೊರೆದು ಅರಣ್ಯಕ್ಕೆ ಹೋಗಿ ಪೈಶಾಚಿಭಾಷೆಯಲ್ಲಿ ಬೃಹತ್ಕಥೆಯನ್ನು ರಚಿಸುತ್ತಾನೆ.

ಇದೊಂದು ದಂತಕಥೆಯೇ ಆಗಿದ್ದರೂ ಇದರಲ್ಲಿ ಅನೇಕ ಐತಿಹಾಸಿಕ ಅಂಶಗಳು ಧ್ವನಿತವಾಗುತ್ತವೆ. ಏನೆಂದರೆ ಗುಣಾಢ್ಯ ಮತ್ತು ಶರ್ವವರ್ಮ ಇಬ್ಬರೂ ಶಾತವಾಹನನ ಆಸ್ಥಾನ ಕವಿಗಳು: ಅದರಲ್ಲೂ ಸಂಸ್ಕೃತ ಕವಿಗಳು ಸಂಸ್ಕೃತದಲ್ಲಿ ಅವರಿಬ್ಬರೂ ಉದ್ದಾಮ ಕವಿಗಳಾಗಿರದಿದ್ದರೆ, ಪಂಡಿತೋತ್ತಮರಾಗಿರದಿದ್ದರೆ ಶಾತವಾಹನರಾಜ ಅವರನ್ನು ತನ್ನ ಆಸ್ಥಾನದಲ್ಲಿ ಇಟ್ಟುಕೊಳ್ಳಲು ಸಾಧ್ಯವಿರುತ್ತಿರಲಿಲ್ಲ. ಅಂದಮೇಲೆ ಇಬ್ಬರೂ ಒಂದೆರಡಾದರೂ ಸಂಸ್ಕೃತಗ್ರಂಥಗಳನ್ನು ರಚಿಸಿದ್ದಿರಬಹುದು. ಆದರೆ ಗ್ರಂಥಗಳು ಸಿಗದಿರುವುದರಿಂದ ಅದೊಂದು ಊಹೆಯಾಗಿಯೇ ಉಳಿದಿದೆ. ಎರಡನೆಯ ದಾಗಿ, ಆಸ್ಥಾನವನ್ನು ಬಿಟ್ಟು ಅರಣ್ಯವನ್ನು ಸೇರಿದ ಮೇಲೆ ಗುಣಾಢ್ಯನು ಬೃಹತ್ಕಥೆಯನ್ನು ರಚಿಸಿದನಾದರೂ ಶಾತವಾಹನವಂಶದ ಆಶ್ರಯದಲ್ಲಿ ಬೆಳೆದು ಬಂದವನು. ಉಭಯಭಾಷಾಪ್ರವೀಣನಾದ ಈ ಕವಿಯ ಕೃತಿರತ್ನ ಬೃಹತ್ಕಥಾ ಕೋಶವು ವ್ಯಾಸಭಾರತದಂತೆ ಪ್ರಾಚೀನವೂ, ಪ್ರಬುದ್ಧವೂ, ಬದುಕಿನ ಬಹುಮುಖಗಳ ದರ್ಶನವನ್ನೀಯಬಲ್ಲ ಬೃಹತ್‌ಕೋಶವೂ ಆಗಿದ್ದಿರಬೇಕು. ಅದು ಅನೇಕ ಪ್ರಾಕೃತ

೧೧. ಮಧುರನಾಥಶಾಸ್ತ್ರಿ, ಗಾಥಾಸ, ಭೂಮಿಕಾ, ಪು ೬ ರಿಂದ ಆರಿಸಿಕೊಳ್ಳಲಾಗಿದೆ.

ಕವಿಗಳಿಗೆ ವಸ್ತುವನ್ನಿತ್ತ ಮಾತೃಕೃತಿಯಾಗಿದೆ; ಸ್ಫೂರ್ತಿಯ ಸೆಲೆಯೂ ಆಗಿದೆ. ಇಂತಹ ಆಚಾರ್ಯಕೃತಿಯನ್ನಿತ್ತ ಗುಣಾಢ್ಯ ವಿಶ್ವಕವಿಗಳ ಗೌರವಕ್ಕೆ ಪಾತ್ರನಾಗಿದ್ದಾನೆ.

**ಶರ್ವವರ್ಮ :** ಗುಣಾಢ್ಯನ ಪ್ರತಿಸ್ಪರ್ಧಿಯಾದ ಶರ್ವವರ್ಮನು ಹಾಲರಾಜನ ಆಸ್ಥಾನಕವಿ. ಈತ ಕವಿ, ಮುತ್ಸದ್ದಿ, ರಾಜಗುರು, ಸಾರ್ವಭೌಮನ ಆತ್ಮೀಯ ಗೆಳೆಯ. ಪಂಪ ಮತ್ತು ಅರಿಕೇಸರಿಯರಿಗಿದ್ದಂತಹ ಮೈತ್ರಿಯನ್ನು ಶರ್ವವರ್ಮ ಮತ್ತು ಹಾಲರಾಜರಲ್ಲಿ ಕಾಣಬಹುದಾಗಿದೆ. ಹಾಲರಾಜನಿಗಿದ್ದ 'ಶರ್ವವರ್ಮಧೀಸಖ' (ಶರ್ವವರ್ಮನ ಬೌದ್ಧಿಕ ಮಿತ್ರ) ಎಂಬ ಒಕ್ಕಣೆ, ಮೇಲಿನ ಹೇಳಿಕೆಗೆ ಸಮರ್ಥನೆಯಾಗಿದೆ. ಶರ್ವವರ್ಮ ಪ್ರಕಾಂಡಪಂಡಿತ, ಆದರ್ಶಗುರು, ದಕ್ಷ ಆಡಳಿತಗಾರ ನಿಜ. ಆದರೆ ಆತ ಕವಿಯಾಗಿದ್ದಾನೆ, ವೈಯಾಕರಣಿಯಾಗಿದ್ದಾನೆ. ಷಣ್ಮುಖನ ಭಕ್ತನಾದ ಶರ್ವವರ್ಮ ಶೈವನಿದ್ದಿರಬೇಕು. ಗಾಥಾಸಪ್ತಶತಿಯ ಹಲವಾರು ಗಾಥಾಗಳು ಶಿವಸ್ತುತಿಯನ್ನು ಒಳಗೊಂಡವುಗಳಾಗಿವೆ. ಶಿವಸಂಬಂಧದ ಗಾಥಾಗಳನ್ನು ಪ್ರಾಯಶಃ ಶರ್ವವರ್ಮನೇ ರಚಿಸಿರಬೇಕು. ಇವುಗಳನ್ನು ಸಂಕಲನಕಾರ– ಹಾಲನಾಗಲಿ ಅಥವಾ ಪಾದಲಿಪ್ತನಾಗಲಿ ಅಥವಾ ಬೇರೆ ಯಾವನೇ ಆಸ್ಥಾನ ಕವಿಯಾಗಿರಲಿ– ತನ್ನ ಕೃತಿಯಲ್ಲಿ ಅವುಗಳನ್ನು ಸೇರಿಸಿಕೊಂಡಿರಬೇಕು. ಅಂತೂ ಶಿವಸಂಬಂಧವಾದ ಗಾಥಾಗಳಿಗೆ ಶರ್ವವರ್ಮನೇ ಹಕ್ಕುದಾರ ಎಂದು ಊಹಿಸಬಹುದಾಗಿದೆ.

ಎರಡನೆಯದಾಗಿ, ಆರು ತಿಂಗಳುಗಳಲ್ಲಿ ವ್ಯಾಕರಣವನ್ನು ಕಲಿಸಿಕೊಟ್ಟ ಈ ಘನ ವಿದ್ವಾಂಸನು ಶ್ರೇಷ್ಠ ವೈಯಾಕರಣಿಯೂ ಆಗಿದ್ದಾನೆ. 'ಕಾಲಾಪವ್ಯಾಕರಣ' ಇವನಿತ್ತ ಕೃತಿ. ಇದು ಉಪಲಬ್ಧವಿದೆ: ಪ್ರಕಟವೂ ಆಗಿದೆ.

ಶರ್ವವರ್ಮನು ಕಾಲಾಪವ್ಯಾಕರಣದ ಕರ್ತೃ ಎಂದು ಕಥಾಸರಿತ್ಸಾಗರವು ಸಾರುತ್ತದೆ. ಬಂದೀನರೇಂದ್ರನ ಪುಸ್ತಕಾಲಯದ ಹಸ್ತಪ್ರತಿಯು ಗಾಥಾಸಪ್ತಶತಿಯನ್ನು ಸಂಕಲಿಸಿದ ಶಾತವಾಹನನ ಪ್ರವರವನ್ನು ಕೊಡುವಲ್ಲಿ- ಕುಂತಲೇಶ್ವರ, ಪ್ರತಿಷ್ಠಾನ ಪಟ್ಟಣಾಧೀಶ, ದ್ವೀಪಕರ್ಣಿಯಪುತ್ರ, ಮಲಯವತೀಪ್ರಾಣಪ್ರಿಯ ಎಂದು ಮುಂತಾಗಿ ಹೇಳಿ 'ಕಾಲಾಪಪ್ರವರ್ತಕ, ಶರ್ವವರ್ಮಧೀಸಖ'– ಎಂದು ಹೇಳುತ್ತದೆ. ಈ ಕಾರಣದಿಂದ ಶರ್ವವರ್ಮ 'ಕಾಲಾಪವ್ಯಾಕರಣ'ದ ಕರ್ತೃ ಎಂಬುದು ಸ್ಪಷ್ಟ.

ಕಾಲಾಪವ್ಯಾಕರಣಕ್ಕೆ ಹಲವು ಉಪನಾಮಗಳಿವೆ. ಇದನ್ನು 'ಕಾತಂತ್ರವ್ಯಾಕರಣ'ವೆಂದು ಕರೆಯುತ್ತಾರೆ. ಕಾತಂತ್ರವೆಂದರೆ 'ಈಷತ್ ತಂತ್ರ' ಅರ್ಥಾತ್ ಅಲ್ಪ ಅಥವಾ ಸಂಕ್ಷಿಪ್ತವಾದ ತಂತ್ರ. ಪಾಣಿನಿಯ ವ್ಯಾಕರಣವು ಬೃಹತ್ ತಂತ್ರವಾದರೆ ಇದು ಈಷತ್ ತಂತ್ರ. ಅಂದರೆ ಕಾತಂತ್ರ. ಕುಮಾರಸ್ವಾಮಿಯ ಅನುಗ್ರಹದಿಂದ ರಚಿಸಿದ್ದರಿಂದ ಇದಕ್ಕೆ 'ಕೌಮಾರವ್ಯಾಕರಣ' ಎಂಬ ಹೆಸರಿದೆ. ಕಾರ್ತಿಕೇಯನ ವಾಹನವಾದ ಮಯೂರದ ಕಲಾಪಗಳಿಂದ (ನವಿಲಿನ ಗರಿಗಳಿಂದ) ಇದನ್ನು ಸಂಗ್ರಹಿಸಿದ ಕಾರಣ ಇದಕ್ಕೆ 'ಕಾಲಾಪಕ' ಎಂಬ ಹೆಸರು ಪ್ರತೀತವಾಗಿದೆ.

ಕಾಲಾಪ ಅಥವಾ ಕಾತಂತ್ರವ್ಯಾಕರಣದ ಕಾಲವನ್ನು ಕುರಿತು ಹಲವು ಅಭಿಪ್ರಾಯಗಳಿವೆ. ಶೂದ್ರಕನ ಕಾಲದಲ್ಲಿ ತುಂಬ ಪ್ರಚಾರದಲ್ಲಿದ್ದುದರಿಂದ ಇದು ಕ್ರಿ. ಶ. ೬ನೆಯ ಶತಮಾನಕ್ಕೆ ಸೇರಿದ್ದೆಂದು ಕೀತ್, ವಿಂಟರ್‌ನಿಟ್ಸ್ ಮೊದಲಾದ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಶೂದ್ರಕ ವಾದಗ್ರಸ್ತ ವ್ಯಕ್ತಿ. ಶೂದ್ರಕರು ಎಷ್ಟು ಮಂದಿ ಎಂಬುದು ಇನ್ನೂ ನಿರ್ಧಾರವಾಗಿಲ್ಲ. ತುಂಬ ಜನಪ್ರಿಯವಾದ ಈ ಹೆಸರಿನಲ್ಲಿ ಅನೇಕ ಜನ ರಾಜರೂ, ಕವಿಗಳೂ ಇದ್ದಾರೆ. ಅಲ್ಲದೆ ಕಾತಂತ್ರವ್ಯಾಕರಣದ ಸಂಪ್ರದಾಯ ಶೂದ್ರಕನ ಕಾಲದಲ್ಲಿ ಪ್ರಚಲಿತವಿದ್ದ ಮಾತ್ರಕ್ಕೇ ಅದು ಆ ಕಾಲದಲ್ಲಿ ಹುಟ್ಟಿದುದೆಂದು ಹೇಳುವುದೂ ಸರಿಯಲ್ಲ. ಮತ್ತೆ ಕೆಲವರು ಈ ಕಾತಂತ್ರ ತುಂಬಾ ಪ್ರಾಚೀನವಾದದ್ದು. ಏಕೆಂದರೆ ಇದು ಐಂದ್ರಪ್ರತಿಶಾಖ್ಯಗಳೊಡನೆ ಬಾಂಧವ್ಯವನ್ನಿಟ್ಟುಕೊಂಡಿದೆ ಮತ್ತು ತಮಿಳಿನ ತೊಲ್‌ಗಾಪ್ಪಿಯಂ, ಪತಂಜಲಿಯ ಮಹಾಭಾಷ್ಯ ಮೊದಲಾದವುಗಳು ಒಂದು ಕಾಲಾಪಕವನ್ನು ಹೆಸರಿಸುತ್ತವೆ. ಈ ಕಾರಣ ಅದು ಶರ್ವವರ್ಮನ ಕೃತಿಯೇ ಆಗಿದ್ದರೆ ಅದರ ಕಾಲ ಕ್ರಿಸ್ತಪೂರ್ವಕ್ಕೆ ಹೋಗುತ್ತದೆ—ಎಂದು ಊಹಿಸುತ್ತಾರೆ.[೧೨] ಆದರೆ ಇದಕ್ಕೂ ಸಹ ಹೆಚ್ಚಿನ ಆಧಾರಗಳಿಲ್ಲ. ಸಧ್ಯದಲ್ಲಿ ಇದು ಶಾತವಾಹನಚಕ್ರವರ್ತಿಯ ಆಸ್ಥಾನಕವಿಯೂ, ಅವನ ಬೌದ್ಧಿಕಮಿತ್ರನೂ ಆದ ಶರ್ವವರ್ಮನು ತನ್ನ ಒಡೆಯನಿಗೆ ಸಂಸ್ಕೃತವ್ಯಾಕರಣವನ್ನು ಕಲಿಸುವುದಕ್ಕಾಗಿಯೇ ರಚಿಸಿದ್ದೆಂದು ಸ್ಪಷ್ಟ ಹೇಳಿಕೆ ಇರುವುದರಿಂದ ಇದು ಕ್ರಿ. ಶ. ೧ನೆಯ ಶತಮಾನದ್ದೆಂದು ಹೇಳಬಹುದಾಗಿದೆ. ಅಂತೆಯೇ ಇದು ಶಾತವಾಹನರ ಆಸ್ಥಾನದ ಕೊಡುಗೆಯೂ ಆಗಿದೆ.

ಕಾತಂತ್ರ ಅಥವಾ ಕಾಲಾಪವ್ಯಾಕರಣದಲ್ಲಿ ಸಂಧಿ, ನಾಮ್ನಿಚತುಷ್ಟಯ ಮತ್ತು ಆಖ್ಯಾತ–ಎಂಬ ಮೂರು ಪರಿಚ್ಛೇದಗಳಿವೆ. ಸುಮಾರು ೮೨೯ (ಅಥವಾ ೮೪೨) ಸೂತ್ರಗಳಿವೆ. ಈ ಮೂರು ಪರಿಚ್ಛೇದಗಳ ಜೊತೆಗೆ 'ಕೃತ್‌ಪ್ರತ್ಯಯ' ಪರಿಚ್ಛೇದವೊಂದನ್ನು ನಾಲ್ಕನೆಯದಾಗಿ ಸೇರಿಸಿದಂತಿದೆ. ದುರ್ಗಸಿಂಹ, ಜಗದ್ಧರ ಮೊದಲಾದವರು ಇದನ್ನು ಕುರಿತು ಅನೇಕ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಇಂತಹ ಜನಪ್ರಿಯತೆಯನ್ನು ಗಳಿಸಿ ಇಂದಿಗೂ ಉಳಿದು ಬಂದಿರುವ ಕಾಲಾಪ ಅಥವಾ ಕಾತಂತ್ರ ವ್ಯಾಕರಣದ ಶರ್ವವರ್ಮ ಕ್ರಿ. ಶ. ೧ ನೆಯ ಶತಮಾನದಲ್ಲಿ ಪೈಠಣದ ಆಸ್ಥಾನದಲ್ಲಿ ಪ್ರಖ್ಯಾತನಾಗಿದ್ದ. ಉಭಯಭಾಷಾಪ್ರಭುತ್ವವುಳ್ಳ ಶರ್ವ ಕಲಿ. ಕವಿ, ವೈಯಾಕರಣಿಯಾಗಿದ್ದಾನೆ.

---

೧೨ ಗ್ರಂಥಕರ್ತೃ ಮತ್ತು ವ್ಯಾಖ್ಯಾನಕಾರರ ಬಗೆಗೆ ವಿಶೇಷ ಮಾಹಿತಿಗಾಗಿ ಈ ಕೆಳಕಂಡ ಗ್ರಂಥಗಳನ್ನು ನೋಡಬಹುದು :

i ) ಯುಧಿಷ್ಠಿರ ಮೀಮಾಂಸಕ, ವ್ಯಾಕರಣಶಾಸ್ತ್ರ ಇತಿಹಾಸ್ –ಮೂರು ಸಂಪುಟಗಳು

ii ) Systems of Sanskrit Grammer –Belvalkar

iii ) History of Indian Literature –Winternitz

iv ) ಸಂಸ್ಕೃತ ಶಾಸ್ತ್ರೋಂಕ ಇತಿಹಾಸ್ –ಬಲದೇವ ಉಪಾಧ್ಯಾಯ

**ಶ್ರೀಪಾಲಿತ ಅಥವಾ ಪಾದಲಿಪ್ತಾಚಾರ್ಯ :** ಹಾಲನೆಂಬವನ ಉತ್ತಮ ಪೂಜೆಯಿಂದ ಕವಿಶ್ರೇಷ್ಠನಾದ ಶ್ರೀಪಾಲಿತನು ಲಾಲಿಸಲ್ಪಟ್ಟನು (ಪೋಷಿಸಲ್ಪಟ್ಟನು)- ಎಂಬ ಶ್ರೀ ಅಭಿನಂದನ ಅಭಿಮಾನದ ಮಾತುಗಳ ಆಧಾರದ ಮೇಲೆ ಶ್ರೀಪಾಲಿತ ಹಾಲರಾಜನ ಆಸ್ಥಾನಕವಿಯೆಂದು ಹೆಸರಿಸಿ ಹೆಗಲು ತಟ್ಟಿಕೊಳ್ಳಬೇಕಾಗಿದೆ. ಕಾರಣ ಅವನವೆಂದು ಹೇಳುವ ಕೃತಿಗಳಾವುವೂ ಸಿಕ್ಕಿಲ್ಲ. ಆದರೆ ಸಿಕ್ಕಿರುವ ಗಾಥಾಸಪ್ತಶತಿ ಶ್ರೀಪಾಲಿತನ ಶ್ರಮದ ಫಲ. ಹೊಸ್ನಿಗಾಗಿ ಹಾಲನಿಗೆ ತನ್ನನ್ನೇ ಮಾರಿಕೊಂಡಿದ್ದಾನೆ. ಅನ್ನದಾತ ಹೆಸರಿನಲ್ಲಿ ಪ್ರಾಕೃತ ಗಾಥಾಗಳನ್ನು ಸಂಕಲಿಸಿ ಪ್ರಕಟಿಸಿದ್ದಾನೆ- ಎಂಬ ದೂಷಣೆಗೆ ಪಕ್ಕಾಗಿದ್ದಾನೆ. ಆಧುನಿಕರ ಊಹೆ ಸತ್ಯವೇ ಆಗಿದ್ದರೆ ಗಾಥಾಸಪ್ತಶತಿ ಶ್ರೀಪಾಲಿತನ ದಕ್ಷ ದುಡಿಮೆ ಎಂದು ಹೇಳಬಹುದು.

ಮಾವಿನಮರದ ತುತ್ತತುದಿಯಲ್ಲಿರುವ ಹಣ್ಣನ್ನು ಕಂಡು ಮಗು ಪ್ರಲಾಪಿಸುತ್ತಿದ್ದಾಗ. ಹೇ ರಾಜನೇ, ನಿನ್ನ ಶತ್ರುವಿನ ಮಡದಿ ಕಂಡಕಂಡ ದಾರಿಹೋಕರಿಗೆ ಕೊಯ್ದುಕೊಡಿ ಎಂದು ಗೋಗರೆಯುತ್ತಿರಲಿಲ್ಲವೇ ?[೧೩] -ಎಂದು ಪ್ರಶ್ನೆಯಲ್ಲೇ ಪ್ರಶಂಸೆ ನೀಡುವ. "ಹೇ ರಾಜನೇ ಹಂಸಗಳು ಹೇಗೆ ಮೋಡಗಟ್ಟಿದಾಗ (ಗುಡುಗಿನ ಶಬ್ದ ಕೇಳಿದ ಕೂಡಲೇ) ತಮ್ಮ ತಾವರೆಯ ತೌರು ತೊರೆದು ಮಾನಸಸರೋವರದೆಡೆಗೆ ಹಾರಿ ಹೋಗುತ್ತವೋ ಹಾಗೆ ನಿನ್ನ ಶತ್ರುಗಳೆಂಬ ಹಂಸಗಳು (ನಿನ್ನ ಸೇವೆಗಾಗಿ) ನಿನ್ನ ರಣರೂಪಿ ಮೋಡಗಳನ್ನು ಕಂಡು ವಿಹ್ವಲಚಿತ್ತರಾಗಿ ತಮ್ಮತಮ್ಮ ಸಿರಿಸಂಪನ್ನ ಗಳನ್ನು ತೊರೆದು ನಿನ್ನ ಮನವೆಂಬ ಮಾನಸದೆಡೆಗೆ ಧಾವಿಸುತ್ತಿದ್ದಾರೆ."[೧೪] ಎಂದು ಶ್ಲೇಷೆಯ ರೂಪದಲ್ಲಿ ಶ್ರೇಯಸ್ಸು ಬಯಸುವ, "ಹೇ ರಾಜನೇ ವಿಸ್ತಾರವೂ, ನಿರ್ಮಲವೂ, ಗಂಭೀರವೂ (ಕಪಟವೇ ಮೊದಲಾದ ಕಲ್ಮಷರಹಿತವೂ) ಉನ್ನತಾಭಿಲಾಷೆಗಳಿಂದ ಅತ್ಯುನ್ನತವೂ ಆಗಿರುವ ನಿನ್ನ ಹೃದಯ ಮತ್ತು ಆಕಾಶಗಳೆರಡೂ ಪಯೋಧರಗಳನ್ನು ( ಸ್ತನ ಮತ್ತು ಮೋಡ ) ಕಳೆದುಕೊಂಡಿದೆ ಎಂಬುದು ಅಚ್ಚರಿಯೇ ?"[೧೫]

ಎಂದು ಸೋಜಿಗದ ಮಾತುಗಳಲ್ಲಿ ತನ್ನನ್ನು ಆಳುವವನ ಹೃದಯ ಶ್ರೀಮಂತಿಕೆಯನ್ನು ಬಿಚ್ಚಳಿಸುವ ಅವನ ಪಾದಪದ್ಮೋಪಜೀವಿ ಪಾದಲಿಪ್ತನೇ ಎಂಬುದು ಹಲವರ ಅಭಿಪ್ರಾಯ. ಸಾರ್ವಭೌಮನ ತಾಂಬೂಲ ಹಿಡಿಯುವ ದಿನಗಳಲ್ಲಿ ಅವನ ಆಸ್ಥಾನದಲ್ಲಿದ್ದ ಶ್ರೀಪಾಲಿತ ಅಥವಾ ಪಾದಲಿಪ್ತನು. ರಾಜನ ಅಭೀಷ್ಟಕ್ಕನುಗುಣವಾಗಿ ಶೃಂಗಾರ ರಸಭರಿತವಾದ ಕಾವ್ಯವನ್ನು ಸಂಗ್ರಹಿಸಿದ್ದಾನೆ. ಎಂದು ಊಹಿಸುತ್ತಾರೆ. ಆದರೆ ಈ

---

೧೩ ಗಾಥಾಸ VI - ೯೫

೧೪ ಅದೇ, V-೭೧

೧೫ ಅದೇ, IV-೬೪

ಬಗ್ಗೆ ಇದಮಿತ್ಥಂ ಎಂದು ಹೇಳಬರುವುದಿಲ್ಲ. ಏಕೆಂದರೆ ಸಿದ್ಧನಾಗಾರ್ಜುನನಂತಹ ಬಹುದೊಡ್ಡ ರಸಾಯನಶಾಸ್ತ್ರಜ್ಞನಿಗೆ ಉಪದೇಶವಿತ್ತ ವೀರ ವೀರಾಗಿಗೆ ಅರಸನನ್ನು ಹೊಗಳಬೇಕಾದ ಅವನ ಕೈಕೂಳಿಗೆ ಜೋಳಿಗೆ ಒಡ್ಡುವ ಅಗತ್ಯವಾದರೂ ಏನಿತ್ತು ಅನ್ನಿಸುತ್ತದೆ. ಅಲ್ಲದೆ ಶ್ರೀಪಾಲಿತ, ಪಾದಲಿಪ್ತ, ಪಾದಲಿಪ್ತಾಚಾರ್ಯ ಎಂದು ನಾಮಾಂತರ ಪಡೆದಿದ್ದಾನೆ. ಇಂತಹ ಆಚಾರ್ಯ ಆಸ್ಥಾನದಲ್ಲಿದ್ದು ಅರಸನ ತಾಳಕ್ಕೆ ತಕ್ಕಂತೆ ಕುಣಿದಿರಲಾರ ಅನ್ನಿಸುತ್ತದೆ. ಆಸ್ಥಾನದಲ್ಲಿದ್ದರೂ ಮೇಲೆ ಹೇಳಿದ ಗಾಥಾಗಳ ಕರ್ತೃವೆನಿಸಲಾರ. ದೊರೆತ ಆಧಾರಗಳಿಂದ ಶ್ರೀಪಾಲಿತ ಶಾತವಾಹನನ ಆಸ್ಥಾನಕವಿ ಎಂದಷ್ಟೇ ಹೇಳಬಹುದಾಗಿದೆ.

ಹೀಗೆ ಹಾಲನ ಆಸ್ಥಾನ ಹತ್ತಾರು ಕವಿ, ಕವಯಿತ್ರಿಯರ ಆವಾಸಸ್ಥಾನವಾಗಿದೆ : ಗುಣಾಢ್ಯ, ಶರ್ವವರ್ಮ ಮತ್ತು ಶ್ರೀಪಾಲಿತ— ಇವರು ಆ ಯುಗದ ರತ್ನತ್ರಯರಾಗಿದ್ದಾರೆ. ಯುಗಪುರುಷ ಶಾಲೀವಾಹನನು "ಪ್ರಾಕೃತಾದಿ ವಾಕ್ಪಂಚಕ ಪ್ರೀತ" ನೆನಿಸಿದ್ದಾನೆ. ಅಂದರೆ ಆತನು ಪಂಚಭಾಷಾವಿಶಾರದನಿದ್ದಿರಬೇಕು; ಸ್ವಯಂ ಕವಿಯೂ, ಕವಿಜನಾಶ್ರಿತನೂ ಆಗಿರುವುದನ್ನು ಮತ್ತೆ ಹೇಳಬೇಕಾಗಿಲ್ಲ. ಅವನ ಅಂತಃಪುರವೂ ಸಹ ಪ್ರಣಲ್ಬೆಯರ, ಪಂಡಿತೆಯರ ನೆಲವೀಡು, ಧರ್ಮಪ್ರಭುವಾದ ಹಾಲರಾಜನು ಸರ್ವಧರ್ಮಗಳಿಗೂ ಸಮಾನವಾದ ಸ್ಥಾನವನ್ನು ಕೊಟ್ಟಿದ್ದನೆಂದು ತೋರುತ್ತದೆ. ಏಕೆಂದರೆ ಗುಣಾಢ್ಯ ಜೈನ, ಶರ್ವವರ್ಮ ಶೈವ, ಪಾದಲಿಪ್ತ ಬೌದ್ಧಧರ್ಮಿ. ಈ ಮೂರೂ ಧರ್ಮಗಳಿಗೆ ಸಂಬಂಧಿಸಿದ ಗಾಥಾಗಳು ಗಾಥಾಸಪ್ತಶತಿಯಲ್ಲಿ ದೊರೆಯುತ್ತವೆ. ಹೀಗಾಗಿ ಹಾಲರಾಜನ ಆಳ್ವಿಕೆಯ ಅವಧಿ ಕುಂತಲ ಅಥವಾ ಕರ್ನಾಟಕದ ಇತಿಹಾಸದಲ್ಲಿ ಒಂದು ಸುವರ್ಣ ಸಂಪುಟ; ಅವನ ಕಾಲ ಪ್ರಾಕೃತ ಕಾವ್ಯಜೀವನದಲ್ಲಿ ಒಂದು ಸುವರ್ಣಯುಗ ಎಂದು ಹೇಳಬಹುದು. ಆ ಯುಗದ ಬದುಕಿನ ಬಿತ್ತರ ಎತ್ತರಗಳನ್ನು ಸೊಬಗು ಸೊಗಡುಗಳನ್ನು ಅಚ್ಚಳಿಯದಂತೆ ಉಳಿಸಿಕೊಂಡು ಬಂದಿರುವ ಏಕೈಕ ಕಲಾಕೃತಿಯೆಂದರೆ 'ಗಾಥಾಸಪ್ತಶತಿ'. ಒಂದೇ ಮಾತಿನಲ್ಲಿ ಹೇಳುವುದಾದರೆ ಗಾಥಾಸಪ್ತಶತಿ ಹಾಲರಾಜನ ಸ್ವರ್ಣಯುಗದ ಸೀಮಂತರತ್ನ !

**ಗಾಥಾಸಪ್ತಶತಿಯಲ್ಲಿ ಕನ್ನಡದ ಮಾತುಗಳು :** ಕ್ರಿ. ಶ. ೧ನೆಯ ಶತಮಾನದಲ್ಲಿ ಜನ್ಮತಾಳಿದ ಪ್ರಾಕೃತ ಗಾಥಾಸಪ್ತಶತಿಯಲ್ಲಿ ಕನ್ನಡದ ಮಾತುಗಳಿವೆ ಎಂದು ಮೊಟ್ಟಮೊದಲು ಘೋಷಿಸಿ ಕನ್ನಡಿಗರ ಕುತೂಹಲವನ್ನು ಕೆರಳಿಸಿದವರು ರಾಷ್ಟ್ರಕವಿ ಗೋವಿಂದ ಪೈ.[೧೬] ಶ್ರೀಯುತರ ಹೇಳಿಕೆ ಸಾಹಿತ್ಯ ರಚಕರಿಗೆ ಹೊಸಹುರುಪು ತುಂಬಿದರೂ, ಸಂಶೋಧಕರಿಗೆ ಸಮಾಧಾನ ತರಲಿಲ್ಲ. ಕಾರಣ ಅವರ ಹೇಳಿಕೆ ಸತ್ಯಕ್ಕೆ

೧೬. ಉದಯಭಾರತ, ಕನ್ನಡ ಸಾಹಿತ್ಯದ ಪ್ರಾಚೀನತೆ (ವಿಭವ–ಶ್ರಾವಣ) ಆಗಸ್ಟ್ (೧೯೨೮ ಸಂ. ೨. ಸಂಚಿಕೆ ೫.

ದೂರವಾದದ್ದು. ಅದು ತಮ್ಮ ಆತುರದ ನಿರ್ಧಾರವೆಂದು ಅರಿತಿದ್ದರಿಂದಲೋ ಏನೋ ಶ್ರೀಯುತರು ಉದಯಭಾರತ ಪತ್ರಿಕೆಯಲ್ಲಿ ಪ್ರಕಟವಾದ ತಮ್ಮ ಸವಿಸ್ತಾರವಾದ ಲೇಖನದಿಂದ 'ಗಾಥಾಸಪ್ತಶತಿ' ಎಂಬ ಭಾಗವನ್ನು ತೆಗೆದುಹಾಕಿ ಉಳಿದ ಭಾಗವನ್ನು ಪುಸ್ತಕರೂಪದಲ್ಲಿ ಪ್ರಕಟಿಸಿದರೆಂದು ತೋರುತ್ತದೆ.[೧೭] ತಮ್ಮ ವಾದದಲ್ಲಿ ತಿರುಳಿದ್ದಿದ್ದರೆ ಕನ್ನಡದ ದೂರ್ವಾಸ ಗೋವಿಂದ ಪೈ ಸದ್ದುಗದ್ದಲವಿಲ್ಲದೆ ತಮ್ಮ ಹೇಳಿಕೆಯನ್ನು ವಾಪಸ್ ತೆಗೆದುಕೊಳ್ಳುತ್ತಿರಲಿಲ್ಲ. ಇರಲಿ ಅವರ ಮೊದಲ ಘೋಷಣೆ ಹೀಗಿದೆ :

"ಈ ಪ್ರಾಕೃತ ಕಾವ್ಯದಿಂದ ನಮ್ಮ ಲೇಖನಕ್ಕೆ ಉಪಯುಕ್ತವಾಗಿರುವ ವಿಷಯವೇನೆಂದರೆ, ಇದರಲ್ಲಿ ಕೆಲವು ಅಚ್ಚಗನ್ನಡ ಶಬ್ದಗಳಿವೆ ಎಂಬುದೇ.

ಉದಾ : ೧. ಪೊಟ್ಟ ಪಡಿ ಏಹಿ ದುಃಖ್ಖಂ (I–೮೩)
೨. ತುಪ್ಪಾಣಣಾ (III–೮೯)
೩. ಪೊಟ್ಟಂ ಚ ಪಿಟ್ಟೇ ಇ (II–೭೧)
೪. ಜೆತ್ತಿ ಅ ಮೆತ್ತಂ ತೀರ ಇ (I–೭೧)
೫. ಅಣ್ಣಹನ ತೀರ ಇ (IV–೪೯)

(ಇದರ ಅಡಿಟಿಪ್ಪಣಿಯಲ್ಲಿ ಪೊಟ್ಟ (ಉದರ) > ಪೊಟ್ಟೆ, ಹೊಟ್ಟೆ: ತುಪ್ಪ = ಘೃತ; 'ಪಿಟ್ಟೇ ಇ' > ಪೆಟ್ಟು (ಹೊಡೆ, ಬಡೆ) ಎಂಬ ಧಾತುವಿನಿಂದ ಮಾಡಿದ ಕ್ರಿಯಾಪದ; 'ತೀರ್ ಇ' (ತೀರ್) (ತೀರು) to be able ಅಚ್ಚಗನ್ನಡ ಧಾತುವಿನಿಂದಾದ ಕ್ರಿಯಾರೂಪವೇ ಎಂದಿದ್ದಾರೆ). ಮುಂದುವರಿದು

"ಕನ್ನಡ ಕಾವ್ಯಗಳಲ್ಲಿ ಆಯಾ ಸಂದರ್ಭಾನುಸಾರವಾಗಿ ವಿಭಕ್ತಿ, ವಚನ ಮೊದಲಾದ ಪ್ರತ್ಯಯಗಳನ್ನು ಹೊಂದಿರುವ ನಾಮರೂಪಗಳಿಂದ. ಆಯಾ ರೂಪದ ಪ್ರಾತಿಪದಿಕ (Base) ರೂಪವನ್ನು ಕಂಡುಹಿಡಿಯುವುದು ಅಷ್ಟು ದುಸ್ಸಾಧ್ಯವಲ್ಲವಾದರೂ ಹಾಗೆಯೇ ಕಾಲ ವಚನ ಮೊದಲಾದವುಗಳ ಪ್ರತ್ಯಯಗಳನ್ನು ಹೊಂದಿ ಕಾವ್ಯಗಳಲ್ಲಿ ಪ್ರಯೋಗಿಸಲ್ಪಟ್ಟಿರುವ ಕ್ರಿಯಾರೂಪಗಳಿಂದ ಆಯಾ ಕ್ರಿಯಾರೂಪದ ಮೂಲ ಧಾತು ರೂಪವನ್ನು ಕಂಡುಹಿಡಿಯುವುದೇನೂ ಸುಕರವಲ್ಲ. ಅದನ್ನು ವ್ಯಾಕರಣಗಳಿಂದ. ಅಲ್ಲವೆ ಬಲ್ಲವರಿಂದ ಅಲ್ಲದೆ ಅನ್ಯಥಾ ತಿಳಿದುಕೊಳ್ಳಲು ಶಕ್ಯವೂ ಅಲ್ಲ. ಆದುದರಿಂದ ಈ 'ಗಾಥಾಸಪ್ತಶತಿ'ಯಲ್ಲಿ ಅಚ್ಚಗನ್ನಡ ಧಾತುಗಳಿಂದ ಆಗಿಸಿಕೊಂಡ ಪಾಕೃತ ಕ್ರಿಯಾರೂಪಗಳು ಇರುವುದಾದರೆ. ಆ ಕಾಲಕ್ಕೆ ಹಿಂದೆ ಇದ್ದಿರಬೇಕಾದ ಕನ್ನಡನುಡಿಯ ವ್ಯಾಕರಣಗ್ರಂಥಗಳಿಂದ ಆಯಾ ಧಾತುವಿನ ಸರಿಯಾದ ಮೂಲ

೧೭. ಗೋವಿಂದ ಪೈ, ಮೂರು ಉಪನ್ಯಾಸಗಳು : (ಕನ್ನಡ ಸಾಹಿತ್ಯದ ಪ್ರಾಚೀನತೆ- ಲೇಖನ ನೋಡಿ).

ರೂಪವನ್ನು ಕಂಡುಕೊಳ್ಳದ ಮುಂಚೆ ಅವುಗಳಿಂದ ಪ್ರಾಕೃತ ಕ್ರಿಯಾರೂಪಗಳು ನಿರ್ಮಿಸಲ್ಪಡಲಾರವು ಎಂದೇ ಅನುಮಾನಿಸಬೇಕಾಗುತ್ತದೆ. ಏಕೆಂದರೆ ಈ 'ಗಾಥಾ ಸಪ್ತಶತಿ' ಉಚ್ಚವಾದೊಂದು ಕಾವ್ಯವೆಂಬುದೂ ಸರಿಯೇ, ಉಚ್ಚಕವಿಗಳು ಯಥಾ ಯೋಗ್ಯವಾದ ಆಧಾರ ವಿನಾ ಯಾವುದೊಂದು ಬಗೆಯ ವಿಶೇಷ ಪ್ರಯೋಗವನ್ನು ಮಾಡರೆಂಬುದೂ ಸರಿಯೇ ಮತ್ತು ಅಂತಹ ಕವಿಗಳಿಗೆ ತಂತಮ್ಮ ಕಾವ್ಯ ರಚನೆಯಲ್ಲಿ ತತ್ತದ್ವಿಷಯಕವಾದ ಅಧಿಕಾರ ಗ್ರಂಥಗಳೇ ಅನನ್ಯವಾದ ಆಧಾರವೆಂಬುದೂ ಸರಿಯೇ. ಆದುದರಿಂದ ಈ 'ಗಾಥಾಸಪ್ತಶತಿ' ರಚಿಸಲ್ಪಟ್ಟ ಕ್ರಿ. ಶ. ೧ನೆಯ ೩ನೆಯ ಶತಕಗಳ ಒಂದೆರಡು ಶತಮಾನಗಳ ಮುಂಚಿನಿಂದಲೆ ಅಂದರೆ ಕ್ರಿ. ಶ. ಉಪಕ್ರಮಿಸುವುದಕ್ಕೆ ಮುಂಚೆಯೇ ಕನ್ನಡದಲ್ಲಿ ಕಾವ್ಯಸಾಹಿತ್ಯವು ಇದ್ದಿರಬೇಕೆಂದು ನಿರ್ಧರಿಸಬಹುದು."[೧೮] ಎಂದು ಸ್ಪಷ್ಟಪಡಿಸಿದ್ದಾರೆ.

ಈಗ ಪೈ ಅವರ ಪ್ರವರವನ್ನು ಕೊಂಚ ಚಿಕಿತ್ಸೆಗೆ ಒಳಗುಮಾಡಿ ನೋಡೋಣ :

**ನಾಮಪದಗಳು :** ಮೊದಲನೆಯದಾಗಿ, ಪ್ರಾಕೃತ ಗಾಥಾಸಪ್ತಶತಿಯಲ್ಲಿ ಅಡಗಿರುವ ಪೊಟ್ಟ, ತುಪ್ಪ ಎಂಬ ನಾಮಪದಗಳು. ಇವು ಪ್ರಾಯಶಃ ಸಂಸ್ಕೃತ ಮತ್ತು ಪ್ರಾಕೃತ ಮೂಲಗಳಿಂದ ಬಂದವುಗಳೇ ಹೊರತು ಕನ್ನಡದ ಕೋಶದವುಗಳಲ್ಲ ಅನ್ನಿಸು ತ್ತದೆ. ಪೊಟ್ಟ ಶಬ್ದವು ಹೊಟ್ಟೆ, ಪೊಟ್ಟೆ ಎಂಬ ಕನ್ನಡ ಶಬ್ದಗಳೊಡನೆ ಸಾಮ್ಯತೆ ತೋರಿದರೂ ಅದು ಸಂಸ್ಕೃತದ ಪೃಷ್ಠದ ತದ್ಭವ ಶಬ್ದ ಆಗಿರಬಹುದು. ಪೃಷ್ಠ ಶಬ್ದಕ್ಕೆ ಸಂಸ್ಕೃತದಲ್ಲಿ ಹಿಂಭಾಗ ಎಂದಷ್ಟೇ ಅಲ್ಲ ಮುಂಭಾಗ ಎಂದೂ ಆಗುತ್ತದೆ. ಅದಕ್ಕೆ ಹಿಂದು ಅಥವಾ ಮುಂದು ಎಂಬ ಒಂದೇ ನಿರ್ಧಾರಾರ್ಥ ಸಲ್ಲ. ಹೀಗೆ ಪರಸ್ಪರ ವಿರುದ್ಧಾರ್ಥ ಕೊಡುವ ಅನೇಕ ಪದಗಳು ಸಂಸ್ಕೃತ ಸಾಹಿತ್ಯಕೋಶದಲ್ಲಿವೆ. ಉದಾಹರಣೆ ವೃದ್ಧಿ ಎಂಬುದಕ್ಕೆ ಬೆಳವಣಿಗೆ ಎಂಬುದೊಂದೇ ಅರ್ಥವಲ್ಲ, ತದ್ವಿ ರುದ್ಧವಾದ ಕೆಳಗಣಿಗೆ ಎಂಬ ಅರ್ಥವೂ ಇದೆ. ವಾಲ್ಮೀಕಿ ರಾಮಾಯಣದಲ್ಲಿ 'ಕೇಶವರ್ಧಕ' ಎಂಬ ಶಬ್ದವು 'ಕೂದಲು ತೆಗೆಯುವುದು' ಎಂಬರ್ಥದಲ್ಲಿ ಬಳಕೆ ಯಾಗಿದೆ. ಅದು ವಾಸ್ತವವಾಗಿ "ಕೇಶ ಖಂಡನ" ಎಂದಿದ್ದಿರಬೇಕಾಗಿತ್ತು. ಆದರೆ ಅದಕ್ಕೆ ವಿರುದ್ಧವಾದ ಅರ್ಥದಲ್ಲಿ ಆ ಪದ ಬಳಕೆಯಾಗಿದೆ. ಅದೇರೀತಿ ಅಷ್ಟಾಕ್ಷರೀ ಮಂತ್ರದ ಧ್ಯಾನ ಶ್ಲೋಕದಲ್ಲಿ

> ಸವ್ಯಂ ಪಾದಂ ಪ್ರಸಾರಿಯಾಶ್ರಿತ ದುರಿತಹರಂ
> ದಕ್ಷಿಣಂ ಕುಂಚಯಿತ್ವಾ ॥

ಅಂದರೆ ಎಡಗಾಲನ್ನು ಮುಂದೆ ಚಾಚಿ, ಪಾಪನಿವಾರಕವಾದ ಬಲಗಾಲನ್ನು ಮಡಿಸಿ ಕೊಂಡು ಎಂದು ನಿರ್ದೇಶಿಸುವಲ್ಲಿ 'ಸವ್ಯ' ಎಂಬ ಪದವು ಎಡ ಎಂಬರ್ಥದಲ್ಲಿ

೧೮ ಗೋವಿಂದ ಪೈ, ಕನ್ನಡಸಾಹಿತ್ಯದ ಪ್ರಾಚೀನತೆ, ಉದಯಭಾರತ (ವಿಭವ-ಶ್ರಾವಣ) ಆಗಸ್ಟ್ (೧೯೨೮) ಸಂಚಿಕೆ ೨, ಸಂಪುಟ ೩, ಪುಟ ೧೧೬-೧೧೭.

ಪ್ರಯೋಗವಾಗಿದೆ. ರೂಢಿಯಲ್ಲಿ 'ಸವ್ಯ' ಎಂದರೆ ಬಲ. ಆದರೆ ಪ್ರಾಕೃತ ಸೂತ್ರದಲ್ಲಿ 'ಎಡ' ಎಂದೇ ಅರ್ಥ ನೀಡುತ್ತದೆ. ಹೀಗೆ ಹಲವು ಪದಗಳು ವಿರುದ್ಧಾರ್ಥ ನೀಡುವುದೂ ಉಂಟು. ಇಂಥವುಗಳಲ್ಲಿ ಪೃಷ್ಠವೂ ಒಂದು. ಮೊದಲೇ ತಿಳಿಸಿರುವಂತೆ ಪೃಷ್ಠದ ಅರ್ಥ ಶರೀರದ ಹಿಂಭಾಗವೂ ಆಗಬಹುದು, ಮುಂಭಾಗವೂ ಆಗಬಹುದು. ಅಲ್ಲದೆ ಹರಿಯುವ ನದಿಗೆ ಎಡ ಯಾವುದು ? ಬಲ ಯಾವುದು ? ಹೇಳುವುದು ಕಷ್ಟ. ನಾವು ನಿಂತ ನೆಲೆಯ ಆಧಾರದ ಮೇಲೆ, ಇಲ್ಲವೇ ಗೊತ್ತುಪಡಿಸಿದ ಒಂದು ವಸ್ತುವಿನ ಆಧಾರದ ಮೇಲೆ ಸವ್ಯಾಪಸವ್ಯಗಳನ್ನು ನಿರ್ಧರಿಸಬೇಕಾಗುತ್ತದೆ. ಮನುಷ್ಯ ಅಥವಾ ಪ್ರಾಣಿಯ ಹಿಂದು ಮುಂದು ಎಂಬುದೂ ಅಷ್ಟೇ. ಆದ್ದರಿಂದ ಪೃಷ್ಠದ ಅರ್ಥ ಎರಡೂ ಆಗುವುದರಿಂದ ಸಂಸ್ಕೃತದ ಪೃಷ್ಠ ಪ್ರಾಕೃತದಲ್ಲಿ ಪೊಟ್ಟ ಎಂದಾಗಿರಬಹುದು. ಪ್ರಾರಂಭದ 'ಪೃ' ಎಂಬ ಪರುಷವಾದ ಸಂಯುಕ್ತಾಕ್ಷರ 'ಪೊ' ಎಂಬ ಸರಳಾಕ್ಷರವಾಗಿದೆ. 'ಷ್ಠ' ಎಂಬ ಮಹಾಪ್ರಾಣ ವಿಜಾತೀಯ ದ್ವಿತ್ವಾಕ್ಷರ 'ಟ್ಟ' ಎಂಬ ಅಲ್ಪಪ್ರಾಣ ಸಜಾತೀಯವಾಗಿದೆ. ಆದ್ದರಿಂದ ಪ್ರಾಕೃತ ಗಾಥಾಸಪ್ತಶತಿಯಲ್ಲಿ ಬರುವ 'ಪೊಟ್ಟ'ದ ಮೂಲ ಸಂಸ್ಕೃತದ 'ಪೃಷ್ಠ'ದಲ್ಲಿ ಅಡಗಿದೆ. ಕನ್ನಡದ ಪೊಟ್ಟೆ ಅಥವಾ ಹೊಟ್ಟೆಯಲ್ಲಲ್ಲ ಎಂದು ಹೇಳಬಹುದು.

'ತುಪ್ಪ' ಮತ್ತೊಂದು ನಾಮಪದ. ಇದು ಪ್ರಾಕೃತವೇ ಅಥವಾ ಕನ್ನಡವೇ ಹೇಳಬರುವುದಿಲ್ಲ. ಮಹಾರಾಷ್ಟ್ರದಲ್ಲಿ ತುಪ್ಪಕ್ಕೆ 'ತೂಪ್' ಎನ್ನುತ್ತಾರೆ. ಅಂದರೆ ಅದು ಮಹಾರಾಷ್ಟ್ರಿಯೇ? ಹೇಳಬರುವುದಿಲ್ಲ. ಹೇಳಿದರೂ ಮಹಾರಾಷ್ಟ್ರ ಎಂದರೆ ಯಾವುದು? ಎಂಬ ಪ್ರಶ್ನೆ ಏಳುತ್ತದೆ. ದಂಡಿ ಒಂದೆಡೆಯಲ್ಲಿ

ಮಹಾರಾಷ್ಟ್ರೋದ್ಭವಾಂ ಭಾಷಾಂ
ಪ್ರಕೃತಂ ಪ್ರಾಕೃತಂ ವಿದುಃ ‖[೧೯]

ಎಂದಿದ್ದಾನೆ. ಆದರೆ ಅಂದಿನ ಮಹಾರಾಷ್ಟ್ರ ಇಂದಿನ ಮರಾಠಿಭಾಷೆಯನ್ನಾಡುವ ಜನರಿರುವ ಭಾಷಾಪ್ರಾಂತವಲ್ಲ. ಅಂದು ಮಹಾರಾಷ್ಟ್ರವೇ ಇರಲಿಲ್ಲ. ಅಂದು ಕರ್ನಾಟಕವನ್ನೊಳಗೊಂಡ ಅನೇಕ ರಾಷ್ಟ್ರಗಳ ಒಂದು ಬೃಹತ್ ಭಾಗಕ್ಕೆ ಮಹಾರಾಷ್ಟ್ರವೆಂದು ಕರೆಯುತ್ತಿದ್ದರು. ಅಂದ ಮೇಲೆ 'ಮಹಾರಾಷ್ಟ್ರೋದ್ಭವಾ ಭಾಷಾಂ' ಕನ್ನಡದ ಜೊತೆಗೂಡಿದ ಒಂದು ಪ್ರಾಕೃತ ಪ್ರಾಂತವಾಗಿದ್ದಿರಬಹುದು ಅಥವಾ ಕನ್ನಡವೇ ಆಗಿದ್ದರೂ ಆಗಿರಬಹುದು. ಆದ್ದರಿಂದ 'ತುಪ್ಪ' ಎಂಬ ಪದವು ಪ್ರಾಕೃತ ಶಬ್ದ ಇರಬಹುದು, ಇಲ್ಲವೇ ಸವಿಯನ್ನು ಚಪ್ಪರಿಸುವುದರಿಂದ ಬಂದ ದ್ರಾವಿಡದ ಭಾವ ಸೂಚಕ ಪದವಿದ್ದರೂ ಇರಬಹುದು. ಆದರೆ ದ್ರಾವಿಡದಲ್ಲಿ ಅದರ ರೂಪನಿಷ್ಪತ್ತಿ ಹೇಳುವುದು ಸುಲಭವಲ್ಲ. ಕನ್ನಡದಲ್ಲಿ 'ನೆಯ್' ಎಂಬ ಪದ ಇದೆ. ಇದು ಸಂಸ್ಕೃತದ

೧೯ ದಂಡಿ, ಕಾವ್ಯಾದರ್ಶ I-೩೪.

ಸ್ನಿಗ್ಧ–ಸ್ನೇಹ-ನೇಹ–ನೆಯ್ ಆಗಿದೆ. ನೆಯ್ ದ್ರಾವಿಡ ಅಥವಾ ಕನ್ನಡದ ಸ್ವತಂತ್ರ ಪದವಲ್ಲ. ತುಪ್ಪ ಎಂಬುದು ದ್ರಾವಿಡವೇ ಅಲ್ಲವೇ ಅನುಮಾನ ಅಂದ ಮೇಲೆ ದ್ರಾವಿಡದಲ್ಲಿ ಅಥವಾ ಕನ್ನಡದಲ್ಲಿ 'ತುಪ್ಪ'ದ ಬಳಕೆ ಇರಲಿಲ್ಲವೇ ? ಇದ್ದರೆ ಅದನ್ನು ಏನೆಂದು ಸಂಬೋಧಿಸುತ್ತಿದ್ದರು ? ತುಪ್ಪ ಎಂದೇ ? ಅಥವಾ ಬೇರೆಯೇ ? ಸ್ಪಷ್ಟವಾಗಿ ಹೇಳಲು ಸಾಧ್ಯವಾಗುತ್ತಿಲ್ಲ. ಒಂದುವೇಳೆ ತುಪ್ಪ ದ್ರಾವಿಡ ಪದವೇ ಆಗಿದ್ದರೆ ಪ್ರಾಕೃತಕ್ಕೆ ಕೊಟ್ಟ ಏಕೈಕ ಕನ್ನಡ ನಾಮಪದ ಎಂದು ಹೇಳಬಹುದು. ಬಹುಶಃ ಕನ್ನಡನಾಡಿನಲ್ಲಿ ಅಂದು ಪ್ರಚಲಿತವಿದ್ದ ಪ್ರಾಕೃತದ ಜೊತೆಯಲ್ಲಿ ಕನ್ನಡದ ಆಡುನುಡಿ ಸೇರಿಕೊಂಡಿರಬಹುದು ಅಷ್ಟೇ. ಆದರೆ ಪೈ ಅವರು ಹೇಳುವಂತೆ ಕನ್ನಡ ಸಾಹಿತ್ಯ ಕಾವ್ಯರೂಪದ ಸಾಹಿತ್ಯ ಇತ್ತೆಂದು ಹೇಳುವುದು ಕಷ್ಟ. ಏಕೆಂದರೆ ಆ ಕಾಲದ ಯಾವ ಕನ್ನಡ ಕೃತಿಯೂ ದೊರೆತಿಲ್ಲ. ಒಂದು : ಕೃತಿ ಇತ್ತೆಂದು ಹೇಳುವ ಯಾವ ಮಾಹಿತಿಯೂ ಇಲ್ಲ. ಎರಡು : ಆ ಕಾಲದ ಎಲ್ಲ ಶಾಸನಗಳೂ ಪ್ರಾಕೃತದಲ್ಲೇ ಇವೆ ಮೂರು : ಆದರೆ ಈ ಹೇಳಿಕೆಗೆ ಅಪವಾದ ಎನ್ನುವಂತೆ ಕದಂಬರ ಕಾಲದ ಹಲ್ಮಿಡಿ ಶಾಸನ ಒಂದಿದೆ, ಕನ್ನಡದಲ್ಲಿ. ಅದೂ ಸಹ ಅಂದು ಪ್ರಚಲಿತವಿದ್ದ ಸಂಸ್ಕೃತ ದೊಡನೆ ಹೊಂದಿಕೊಳ್ಳಲು ಹೆಣಗುತ್ತಿರುವ ಕಾಲದ ಕನ್ನಡ ಶಾಸನವಾಗಿದೆ. ಅದಕ್ಕೂ ಹಿಂದಿನ ಮೌರ್ಯರ, ಶಾತವಾಹನರ ಮತ್ತು ಕದಂಬರ ಎಲ್ಲ ಶಾಸನಗಳೂ ಪ್ರಾಕೃತ ದಲ್ಲಿರುವುದು ಇಲ್ಲಿ ಗಮನಿಸಬೇಕಾದ ಅಂಶ. ಆ ಕಾರಣ ಕದಂಬರ ಹಾಗೂ ಶಾತವಾಹನರ ಕಾಲದ ಆಡಳಿತಭಾಷೆ ಪ್ರಾಕೃತವಾಗಿತ್ತೇ ಹೊರತು ಕನ್ನಡವಲ್ಲ. ಆದರೆ ಕದಂಬರ ಕಾಲದಲ್ಲಿ ಕನ್ನಡಕ್ಕೆ ರಾಜಮನ್ನಣೆ ದೊರೆತಂತೆ ತೋರುತ್ತದೆ. ಅದಕ್ಕೆ ಹಲ್ಮಿಡಿಶಾಸನ ಸಾಕ್ಷಿ. ಆದರೂ ಕನ್ನಡ ಅಂದು ಆಡುನುಡಿಯಾಗಿತ್ತೇ ಹೊರತು ಸಾಹಿತ್ಯಸಂಪದವುಳ್ಳ, ಭಾಷೆಯಾಗಿದ್ದಿರಲಾರದು. ಅದು ಸಾಹಿತ್ಯ ಸಿಂಹಾಸನ ವನ್ನೇರಿದ್ದು ಬಾದಾಮಿಯ ಚಾಲುಕ್ಯ ಚಕ್ರವರ್ತಿಗಳ ಕಾಲದಲ್ಲಿ. ಆದ್ದರಿಂದ ಪೈ ಅವರು ಹೇಳುವಂತೆ ಕನ್ನಡದ ಪ್ರಾಚೀನತೆ ಕ್ರಿ.ಶ. ೧ ಅಥವಾ ೨ನೆಯ ಶತಮಾನದಷ್ಟು ಹಿಂದಕ್ಕೆ ಹೋಗಲಾರದು. ಹೆಚ್ಚೆಂದರೆ ಕ್ರಿ. ಶ. ೭ನೆಯ ಶತಮಾನದಿಂದ ಈಚೆಗೆ ಎಂದು ಹೇಳಬಹುದು.

**ಕ್ರಿಯಾಪದಗಳು :** ಈಗ ಗಾಥಾಸಪ್ತಶತಿಯಲ್ಲಿವೆ ಎನ್ನುವ ಕನ್ನಡ ಕ್ರಿಯಾಧಾತುಗಳ ಕಡೆಗೆ ನಮ್ಮ ಗಮನ ಹರಿಸೋಣ.

ಒಂದು ಬೆಳೆಯುವ ಭಾಷೆ ಆಂತರಿಕವಾಗಿ ಕಾಲಕಾಲಕ್ಕೆ ಬದಲಾವಣೆ ಪಡೆಯಬೇಕಷ್ಟೇ. ಆ ರೀತಿಯ ಬದಲಾವಣೆಯೇ ಅದರ ಬದುಕು: ಅದು ಜೀವಂತವಾಗಿರುವುದಕ್ಕೆ ಸಾಕ್ಷಿ. ಅಂತೆಯೇ ಅದು ಕಾಲಕಾಲಕ್ಕೆ ಸಂಸರ್ಗ ಹೆಚ್ಚಿದಂತೆ ಅನ್ಯಭಾಷಾಪದಗಳನ್ನು ತಿಂದು ಜೀರ್ಣಿಸಿಕೊಳ್ಳಲುಬೇಕು. ಅದು ಜೀವಂತಭಾಷೆಯ ಕರ್ತವ್ಯ. ಆದರೆ ಹಾಗೆ ಅನ್ಯ ಭಾಷಾ ಪದಗಳನ್ನು ಸಿಕ್ಕಸಿಕ್ಕ ಹಾಗೆ ತಿನ್ನಲು ಯತ್ನಿಸುವುದಿಲ್ಲ. ಕಾರಣ ತನ್ನ

ಜಾಯಮಾನಕ್ಕೆ ಒಗ್ಗುವ ಪದಗಳನ್ನು ಮಾತ್ರ ಸ್ವೀಕರಿಸುತ್ತದೆ. ತಾನು ಜೀರ್ಣಿಸಿಕೊಳ್ಳಲಾಗದ ಪದವನ್ನು ಅದು ತೆಗೆದುಕೊಳ್ಳುವುದೇ ಇಲ್ಲ. ಅಂತಹ ಒಂದು ಭಾಷೆ ಜೀರ್ಣಿಸಿಕೊಳ್ಳಲಾಗದ ಅನ್ಯಭಾಷಾಪದವೆಂದರೆ ಕ್ರಿಯಾಪದ ಅಥವಾ ಕ್ರಿಯಾಧಾತು. ಒಂದು ಭಾಷೆ ಬೇರೆ ಭಾಷೆಯ ನಾಮಪದಗಳನ್ನು ಧಾರಾಳವಾಗಿ ಬಳಸಿಕೊಂಡು ತನ್ನದನ್ನಾಗಿ ಮಾಡಿಕೊಂಡಂತೆ, ಅನ್ಯಭಾಷೆಯ ಕ್ರಿಯಾಪದಗಳನ್ನೂ ಧಾತುಗಳನ್ನೂ ಬಳಸಿಕೊಳ್ಳಲಾರದು. ಒಂದು ಭಾಷೆಯ ಸರ್ವನಾಮಗಳು ಹೇಗೆ ಆ ಭಾಷೆಯ ಸ್ವಂತಿಕೆಯ ಸ್ವತ್ತೋ ಹಾಗೆ ಕ್ರಿಯಾಪದಗಳೂ ಸಹ ಬೇರೆ ಭಾಷೆಯೊಡನೆ ಸುಲಭವಾಗಿ ಬೆರೆಯದ ಸ್ವತಂತ್ರ ಪ್ರಯೋಗಗಳು. ಅಂದಮೇಲೆ ಪ್ರಾಕೃತ ಗಾಥಾಸಪ್ತಶತಿಯಲ್ಲಿ ಕನ್ನಡದ ಕ್ರಿಯಾಪದಗಳು ಸೇರಿವೆ ಎನ್ನುವುದು ಸತ್ಯಕ್ಕೆ ದೂರವಾದ ಮಾತು. ಅದನ್ನೇ "...ಕಾಲವಚನ ಮೊದಲಾದವುಗಳ ಪ್ರತ್ಯಯಗಳನ್ನು ಹೊಂದಿ ಕಾವ್ಯಗಳಲ್ಲಿ ಪ್ರಯೋಗಿಸಲ್ಪಟ್ಟಿರುವ ಕ್ರಿಯಾರೂಪಗಳಿಂದ ಆಯಾ ಕ್ರಿಯಾರೂಪದ ಮೂಲಧಾತು ರೂಪವನ್ನು ಕಂಡುಹಿಡಿಯುವುದೇನೂ ಸುಕರವಲ್ಲ" ಎಂದು ಪೈ ಅವರೇ ಸಂದೇಹಿಸಿದ್ದಾರೆ. ಆದರೂ 'ಪಿಟ್ಟೇಇ' 'ತೀರ್ಇ' ಎಂಬುವು ಕನ್ನಡದ ಕ್ರಿಯಾಧಾತು ಮೂಲವಾದವುಗಳೆಂಬ ಆತುರದ ನಿರ್ಧಾರಕ್ಕೆ ಬಂದಿದ್ದಾರೆ. ಅದು ಅಷ್ಟಾಗಿ ಸಾಧುವೆನಿಸುವುದಿಲ್ಲ. ಒಂದುವೇಳೆ ಅವು ಅನ್ಯಭಾಷಾ ಮೂಲವನ್ನುಳ್ಳವಾಗಿದ್ದರೆ ಪ್ರಾಕೃತ–ಸಂಸ್ಕೃತ ಒಂದು ಕುಟುಂಬದ ಭಾಷೆಗಳಾದ್ದರಿಂದ ಅವು ಸಂಸ್ಕೃತದ ಮೂಲಕ್ಕೆ ಸರಿಹೋಗುತ್ತವೆ ಎಂಬುದನ್ನು ಆಧಾರಸಹಿತವಾಗಿ ಸಾಧಿಸಿತೋರಿಸಬಹುದು. ಅಲ್ಲದೆ ಮೇಲಿನ ಪದಗಳ ಮೂಲ ಕನ್ನಡಕ್ಕಿಂತಲೂ ಸಂಸ್ಕೃತದಲ್ಲಿ ಎಂದು ಅರಿಯಲು ಈ ವಿವರಣೆ ನೋಡಿ :

'ಪಿಟ್ಟೇಇ' –ಎಂಬ ಪದ ಕನ್ನಡದ ಪೆಟ್ಟು > (ಹೊಡೆ) ಎಂಬರ್ಥದ ಧಾತುವಿನಿಂದ ಮೂಡಿದ ಕ್ರಿಯಾಪದ ಎನ್ನುವುದಕ್ಕಿಂತ ಸಂಸ್ಕೃತದ 'ಪಿಟ' ಶಬ್ದದಿಂದ ಬಂದಿದೆ ಎಂದು ಹೇಳುವುದು ಹೆಚ್ಚು ಸೂಕ್ತ. 'ಪಿಟ' ಶಬ್ದಕ್ಕೆ 'ಹೊಡೆ' ಎಂಬ ಅರ್ಥ ಸಂಸ್ಕೃತದಲ್ಲಿದೆ. "ಪಿಟ ಶಬ್ದ ಸಂಘಾತಯೋಃ" ಎಂದು ಧಾತುಪ್ರಕಾಶಿಕಾ ತಿಳಿಸುತ್ತದೆ.[೨೦] ಪಿಟದಿಂದ 'ಚಪೇಟಿಕಾ' ಎಂಬ ಕ್ರಿಯಾರೂಪ ನಿಷ್ಪನ್ನವಾಗುತ್ತದೆ. ಅದರ ಅರ್ಥ ಹೊಡೆಯುವುದು ಎಂದು. ಅಂದಮೇಲೆ ಗಾಥಾಸಪ್ತಶತಿ— ಪ್ರಾಕೃತ 'ಪಿಟ್ಟೇಇ' ಸಂಸ್ಕೃತದ 'ಪಿಟ' ಧಾತುವಿನಿಂದ ಬಂದ ಕ್ರಿಯಾರೂಪ ಎಂದು ಹೇಳಬಹುದೇ ಹೊರತು, ಕನ್ನಡದ 'ಪೆಟ್ಟು' (ಹೊಡೆ) ಎಂಬ ಪದದಿಂದಲ್ಲ.

ಇಂಥದೇ ಮತ್ತೊಂದು ಕ್ರಿಯಾಪದ 'ತೀರ್ಇ'. ಇದು 'ತೀರ್' (ಶಕ್ಯವಾಗು, to be able) ಎಂಬ ಧಾತುವನ್ನುಳ್ಳ ಪದ. ಆದರೆ 'ತೀರ್' ಎಂಬುದು ಕನ್ನಡದ

೨೦ ಧಾತು ಪ್ರಕಾಶಿಕಾ (ತೆಲುಗು ಲಿಪಿ) ಪು. ೩೧೨. (೧೮೯೭)

ಧಾತುವೇ ? ಎಂಬುದು ಪ್ರಶ್ನೆ. ಕನ್ನಡದಲ್ಲಿ 'ತೀರ್' ಎಂಬುದಕ್ಕೆ ಮುಗಿಸು, ತೀರಿಸು ಎಂಬರ್ಥವಿದೆ. ರನ್ನನ ಗದಾಯುದ್ಧದಲ್ಲಿ

ತ್ರಿದಶನದೀ ಸುತನಿಂ ತೀ
ರದ ಕಜ್ಜಂ ಮುನ್ನ ಕಳಶಸಂಭವನಿಂ ತೀ
ರದ ಕಜ್ಜಮಿನಜನಿಂ ತೀ
ರದ ಕಜ್ಜಂ ದ್ರೋಣಪುತ್ರನಿಂ ತೀರ್ದಪುದೇ೨೦

ಅಂದರೆ ದೇವಗಂಗಾತನಯನಿಂದ ಮುಗಿಯದ ಕಾರ್ಯ, ಕುಂಭೋದ್ಭವನಿಂದ ಮುಗಿಯದ ಕಾರ್ಯ, ಸೂರ್ಯಸುತನಿಂದ ಸಾಧ್ಯವಾಗದ ಕಾರ್ಯ ದ್ರೋಣಪುತ್ರನಿಂದ ಸಾಧ್ಯವಾಗುತ್ತದೆಯೇ ಎಂದಿರುವುದನ್ನು ನೋಡಬಹುದು. ಸಂಸ್ಕೃತದಲ್ಲಿ 'ತೄ' ಎಂಬ ಧಾತು ಇದೆ. ಇದರಿಂದ ಸಕರ್ಮಕ ಕ್ರಿಯೆ 'ತರಣಯೋಃ' (ದಾಟು), ಪ್ಲವನ (ತೇಲು, ಜಿಗಿ) ಎಂದಾಗುತ್ತದೆ. ಕರ್ತರಿ ವರ್ತಮಾನದಲ್ಲಿ 'ತರತಿ' (ದಾಟುತ್ತಾನೆ) ಎಂದು ಪ್ರಥಮಪುರುಷ ಏಕವಚನವಾಗುತ್ತದೆ. ಕರ್ಮಣಿಯಲ್ಲಿ 'ತೀರ್ಯತೆ'(ದಾಟಲ್ಪಡುತ್ತಾರೆ) ಎಂದಾಗುತ್ತದೆ. ಇದೇರೀತಿ 'ತಾರಯತಿ' (ದಾಟಿಸುತ್ತಾನೆ), ತಿತಿರಿಷತಿ, ತಿತಿರೀಷತಿ, ತಿತೀರ್ಷತಿ (ದಾಟಲು ಇಚ್ಛಿಸುತ್ತಾನೆ) ಇತ್ಯಾದಿ ರೂಪ ತಳೆಯುತ್ತದೆ. 'ತರನ್' (ದಾಟುವವನು) ಎಂದು ಕೃಲ್ಲಿಂಗವೂ ಆಗುತ್ತದೆ. ಅಂತೆಯೇ ಸಂಸ್ಕೃತದಲ್ಲಿ 'ತೀರ'ಕ್ಕೆ "ಕರ್ಮಸಮಾಪ್ತಿ" ಎಂದು ಹೇಳುತ್ತದೆ ಧಾತು ಪಾಠ. ಅಂದರೆ ಮುಗಿಯುವ ಎಂಬ ಅರ್ಥದಲ್ಲೇ ಅಲ್ಲೂ ಪ್ರಯೋಗವಾಗಿದೆ. ಹೀಗೆ ಕನ್ನಡ ಮತ್ತು ಸಂಸ್ಕೃತ ಎರಡೂ ಭಾಷೆಗಳಲ್ಲೂ 'ತೀರ್'ಗೆ ಒಂದೇ ಅರ್ಥ ಇದೆ. ಅಂದಮೇಲೆ ಈ 'ತೀರ್' ಯಾವ ಭಾಷೆಯ ಧಾತು ? ಎರಡೂ ಬಿಟ್ಟು ಪ್ರಾಕೃತದ್ದೇ ಇರಬಹುದೇ ? ಹೇಳುವುದು ಕಷ್ಟ.

ಈ ಎಲ್ಲ ಅಂಶಗಳ ಆಧಾರದಿಂದ ಪ್ರಾಕೃತದ ಮೂಲಧಾತುವೇ ಆಗಿರಬಹುದು, ಇಲ್ಲವೇ ಸಂಸ್ಕೃತದ 'ತೄ' ಎಂಬ ಧಾತುವಿನಿಂದ ಬಂದ ಪದವಾಗಿರಬಹುದು. ಒಟ್ಟಿನಲ್ಲಿ ಪ್ರಾಕೃತ ಗಾಥಾಸಪ್ತಶತಿಯಲ್ಲಿ ಬರುವ ಕೆಲವು ಪದಗಳು ಕನ್ನಡದ ಮೂಲದವುಗಳಲ್ಲ: ಸಂಸ್ಕೃತದ ಅಥವಾ ಪ್ರಾಕೃತದವುಗಳೇ ಎಂದು ಹೇಳಬಹುದು. ಗಾಥಾಸಪ್ತಶತಿಯಲ್ಲಿ ಅಚ್ಚಗನ್ನಡ ಪದಗಳಿವೆ ಎಂದು ಹೇಳವುದು ಮಾತ್ರ ಧಾರ್ಷ್ಟ್ಯದ ಮಾತಾದೀತು.

■ ■

೨೦ ರನ್ನನ ಗದಾಯುದ್ಧ ಸಂಗ್ರಹ ೩–೪೪೦

# ಸಂದೇಶಕಾವ್ಯಗಳು

ಬಿ. ಕೆ. ತಿಮ್ಮಪ್ಪ

ಕೇರಳ ಸಾಹಿತ್ಯಚರಿತ್ರೆಯಲ್ಲಿ ತಮಿಳುಮಿಶ್ರ ಶಾಖೆ, ಸಂಸ್ಕೃತಮಿಶ್ರ(ಮಣಿಪ್ರವಾಳ) ಶಾಖೆ, ಶುದ್ಧಮಲಯಾಳ ಶಾಖೆ ಎಂಬ ಸ್ಥೂಲವಿಭಾಗಗಳಿವೆ.

ಆಂಗ್ಲಸಾಹಿತ್ಯದ ಪ್ರಭಾವಕ್ಕೊಳಗಾಗಿ ಅದರ ಜಾಡನ್ನು ಹಿಡಿದು ಸೃಷ್ಟಿಗೊಂಡ ಕೇರಳ ಸಾಹಿತ್ಯಚರಿತ್ರೆಯನ್ನು ಪ್ರತ್ಯೇಕವಾಗಿರಿಸಿ, ಅದಕ್ಕೂ ಮೊದಲಿನ ಮಲಯಾಳ ಸಾಹಿತ್ಯ ಚರಿತ್ರೆಯನ್ನು ಅವಲೋಕಿಸಿದಾಗ 'ರಾಮಚರಿತಂ' ಪಾಟ್ಟಿನಂತಹ ಪಾಟ್ಟುಕೃತಿಗಳನ್ನು ತಮಿಳುಮಿಶ್ರ ಶಾಖೆಗೂ ಮಣಿಪ್ರವಾಳ ಕಾವ್ಯಗಳನ್ನು ಸಂಸ್ಕೃತ ಶಾಖೆಗೂ ಮತ್ತು 'ತುಳ್ಳಲ್' ಸಾಹಿತ್ಯವನ್ನು ಸ್ವತಂತ್ರ ಶಾಖೆಗೂ ಒಳಪಡಿಸಬಹುದು.

ಕ್ರಿ. ಶ. ಒಂಬತ್ತನೆಯ ಶತಮಾನದ ಹೊತ್ತಿಗೆ ನಂಬೂದಿರಿ ಬ್ರಾಹ್ಮಣರು ಉತ್ತರ ಭಾರತದಿಂದ ಗೋಕರ್ಣಮಾರ್ಗವಾಗಿ ಕೇರಳವನ್ನು ಪ್ರವೇಶಿಸಿ ಕೇರಳೀಯರೊಡನೆ ಬೆರೆತು ಅವರ ಭಾಷೆಯನ್ನು ಕಲಿತು, ಸಂಸ್ಕೃತವನ್ನು ಆ ಭಾಷೆಯೊಂದಿಗೆ ಬೆರೆಸಿ, ಮಿಶ್ರಭಾಷಾಶೈಲಿಯಿಂದ ಕಾವ್ಯಗಳನ್ನು ರಚಿಸತೊಡಗಿದರು. ಈ ಶೈಲಿಗೆ ಹೆಚ್ಚು ಮಹತ್ವವನ್ನು ತಂದುಕೊಟ್ಟವರೂ ಅವರೇ. ಅಂತಹ ಪ್ರಯತ್ನದ ಫಲವಾಗಿ ಕೇರಳ ದಲ್ಲಿ ಹಲವಾರು ಗ್ರಂಥಗಳು ಸೃಷ್ಟಿಗೊಂಡವು. ಅನಂತರ ಮಲಯಾಳದಲ್ಲೇ ಕಾವ್ಯ ರಚನೆ ಮಾಡಿರುವುದು ಸ್ಪಷ್ಟವಾಗಿ ತಿಳಿದುಬರುವುದು, ೧೬ನೆಯ ಶತಮಾನದಲ್ಲಿ ಜೀವಿಸಿದ್ದ ಎಳುತ್ತಚ್ಛನ್ ಕವಿಯ ಕಾವ್ಯಗಳಿಂದ.

ಮಣಿಪ್ರವಾಳಶೈಲಿಯ ಪ್ರಧಾನಲಕ್ಷಣವೆಂದರೆ ವಿಭಕ್ತ್ಯಂತ ಸಂಸ್ಕೃತಪದಗಳನ್ನು ಯಾವುದೇ ಸಂಸ್ಕೃತೇತರ ಭಾಷೆಗಳೊಂದಿಗೆ ಬೆರೆಸಿ ಪದ್ಯರಚನೆ ಮಾಡುವುದು. ಈ ಶೈಲಿ ಕೇರಳದಲ್ಲಿ ಉಳಿದೆಲ್ಲ ಸಂಸ್ಕೃತೇತರ ಭಾರತೀಯ ಭಾಷೆಗಳಿಗಿಂತಲೂ ಹೆಚ್ಚು

ಪ್ರಚಾರಕ್ಕೆ ಬಂದಿತು. ಅದರ ಫಲವಾಗಿ ಮಣಿಪ್ರವಾಳಶೈಲಿಯಲ್ಲಿ ಅಧಿಕಸಂಖ್ಯೆಯ ಗ್ರಂಥಗಳು ಹುಟ್ಟಿಕೊಂಡವು. ಕ್ರಿ. ಶ. ಸು. ಹನ್ನೊಂದನೆಯ ಶತಮಾನದಿಂದ ೧೫ನೆಯ ಶತಮಾನದ ವರೆಗೆ ಕೇರಳದಲ್ಲಿ ಮಣಿಪ್ರವಾಳಶೈಲಿ ವೈಭವದ ಆಧಿಪತ್ಯವನ್ನು ನಡೆಸಿತು. ಆ ಯುಗದಲ್ಲಿ ಪೌರಾಣಿಕಕಥೆಗಳನ್ನೋ ಮಹಾಭಾರತ ರಾಮಾಯಣ ಮೊದಲಾದ ಗ್ರಂಥಗಳನ್ನೋ ಆಧಾರವಾಗಿಟ್ಟುಕೊಂಡು ಭಾಷಾಂತರಿಸಿ ಅಥವಾ ಅನುಸರಿಸಿ ಕಾವ್ಯಗಳನ್ನು ರಚಿಸುವ ಉದ್ದೇಶ ನಂಬೂದಿರಿ ಕವಿಗಳಿಗಿದ್ದಂತೆ ತೋರುವುದಿಲ್ಲ.

ನಂಬೂದಿರಿ ಕವಿಗಳು ಶೃಂಗಾರರಸಪ್ರಧಾನವಾದ ಕಾವ್ಯಗಳನ್ನು ರಚಿಸುವುದರಲ್ಲಿ ಹೆಚ್ಚು ಉತ್ಸಾಹಿಗಳಾಗಿದ್ದರೆನ್ನುವುದು, ಅಂದು ಹುಟ್ಟಿಕೊಂಡ ಗ್ರಂಥಗಳಿಂದಲೇ ತಿಳಿದುಬರುತ್ತದೆ. ದೇವದಾಸಿಯರ ಸೌಂದರ್ಯೋಪಾಸನೆಗೆ ಪ್ರಾಧಾನ್ಯವನ್ನು ಕೊಟ್ಟಿರುವುದು, ಅವರನ್ನೇ ನಾಯಿಕೆಯರನ್ನಾಗಿ ಮಾಡಿರುವುದು ಅಂದಿನ ಕವಿಗಳಲ್ಲಿ ಕಂಡುಬರುವ ಸಾಮಾನ್ಯಸೂತ್ರ.

'ಉಣ್ಣಿಯಚ್ಚೀ ಚರಿತಂ', 'ಉಣ್ಣಿಚ್ಚಿರುದೇವೀ ಚರಿತಂ', 'ಉಣ್ಣಿಯಾಡೀ ಚರಿತಂ ಮೊದಲಾದವು ಮೇಲೆ ತಿಳಿಸಿದ ಮಣಿಪ್ರವಾಳಶೈಲಿಯಲ್ಲಿ ಸೌಂದರ್ಯವತಿಯರನ್ನು' ಕುರಿತು ರಚಿಸಿದ ಖಂಡಕಾವ್ಯಗಳು. ಈ ಕಥಾನಾಯಿಕೆಯರು ಗಂಧರ್ವ, ಇಂದ್ರ, ಚಂದ್ರರನ್ನು ಕೂಡ ಆಕರ್ಷಿಸುವಂತಹ ಸಕಲವೈಭವಗಳಿಂದ ಭವ್ಯಸೌಧಗಳಲ್ಲಿ ವಾಸಿಸುತ್ತಿದ್ದ ಸುಂದರಿಯರು. ಊರ್ವಶೀವಂಶದಲ್ಲಿ ಉದಿಸಿದ ಸೌಂದರ್ಯರಾಣಿಯರ ಸುದರ್ಶನಕ್ಕಾಗಿ. ಸಾನ್ನಿಧ್ಯಕ್ಕಾಗಿ ಗಂಧರ್ವರು, ದೇವತೆಗಳು, ನಾಡನ್ನಾಳುವ ಪ್ರಭುಗಳು ಸಾಲುಗಟ್ಟಿ ನಿಲ್ಲುತ್ತಿದ್ದರೆಂದು ಕವಿಗಳು ವರ್ಣಿಸಿ ತೃಪ್ತಿಪಟ್ಟಿದ್ದಾರೆ.

**ಉಣ್ಣಿಯಚ್ಚೀ ಚರಿತಂ :** ತಿರುವಾರಿನ ಪ್ರಸಿದ್ಧ ನರ್ತಕಿ ಉಣ್ಣಿಯಚ್ಚಿ. ಅವಳನ್ನು ಕಾಣಲು ಗಂಧರ್ವನೊಬ್ಬ ಭೂಮಿಗೆ ಬರುತ್ತಾನೆ. ಅವಳ ಪೂರ್ವಕಥೆಯನ್ನು ಒಬ್ಬ 'ವಟು' ಹೇಳುವುದಕ್ಕಾರಂಭಿಸುತ್ತಾನೆ. ವಟುವಿನ ಮುಂದೆ ರಾತ್ರಿಯಿಡೀ ಕುಳಿತು ಅವಳ ಸೌಂದರ್ಯವರ್ಣನೆಯನ್ನೂ ಅವಳ ಹೆಸರಾಂತ ಕುಟುಂಬದ ಕಥೆಯನ್ನೂ ಕೇಳಿ ಗಂಧರ್ವನ ಕುತೂಹಲ ಇಮ್ಮಡಿಗೊಳ್ಳುತ್ತದೆ. ಬೆಳಗಾದ ಕೂಡಲೇ ವಟುವನ್ನು ಜೊತೆಯಲ್ಲಿ ಕರೆದುಕೊಂಡು ಉಣ್ಣಿಯಚ್ಚಿಯ ಭವ್ಯಸೌಧದ ಹೆಬ್ಬಾಗಿಲನ್ನು ದಾಟಿ ಒಳಗೆ ಹೋಗುತ್ತಾನೆ. ಅಲ್ಲಿ ವೈದ್ಯರು, ಜ್ಯೋತಿಷಿಗಳು, ವರ್ತಕರು, ನಾಯರರು, ವೈದಿಕರು, ಅಂಜನ ಮಾರುವವರು, ವಶೀಕರಣ ಔಷಧಿಯನ್ನು ಮಾರುವವರು ಮೊದಲಾದವರೆಲ್ಲ ನರ್ತಕಿಯ ದರ್ಶನಕ್ಕಾಗಿ ಕಾಯುತ್ತಾ ನಿಂತಿರುತ್ತಾರೆ. ಈ ಎಲ್ಲ ವರ್ಣನೆಗಳ ನಂತರ ಭದ್ರಕಾಳಿಯ ಸ್ತುತಿಯೊಂದಿಗೆ 'ಉಣ್ಣಿಯಚ್ಚೀ ಚರಿತಂ' ಕಾವ್ಯ ಮುಕ್ತಾಯಗೊಳ್ಳುತ್ತದೆ.

**ಉಣ್ಣಿ ಚ್ಚಿರುದೇವೀ ಚರಿತಂ :** ಹದಿಮೂರನೆಯ ಶತಮಾನದ ಅಂತ್ಯದಲ್ಲಿ ರಚನೆಗೊಂಡದ್ದೆಂದು ಭಾವಿಸಲಾಗಿರುವ ಗ್ರಂಥ, 'ಉಣ್ಣಿಚ್ಚಿರುದೇವೀ ಚರಿತಂ'. ವಳ್ಳುವ ನಾಡಿನ ಚೋಕಿರಗ್ರಾಮದ ತೊಟ್ಟಿಪಾಯ್‌ಕಳ್ಳದ ನಟಿ 'ಉಣ್ಣಿಚ್ಚಿರುದೇವಿ.' ದೇವೇಂದ್ರ ಒಬ್ಬಾತನಿಂದ ಈ ನಟಿಯನ್ನು ಕುರಿತ ಮಣಿಪ್ರವಾಳ ಕೀರ್ತನೆಯನ್ನು ಕೇಳಿ ವಿಸ್ಮಿತನಾಗುತ್ತಾನೆ. ದೇವೇಂದ್ರನು ಅವಳನ್ನು ಕಾಣದಿರುವುದು ಸರಿಯೇ ಎಂದು ಚೋಕಿರಗ್ರಾಮಕ್ಕೆ ಬರುತ್ತಾನೆ. ಅಲ್ಲಿ ಬ್ರಾಹ್ಮಣರು, ಚಾತ್ರರು, ವರ್ತಕರು ಮುಂತಾದವರೆಲ್ಲ ಉದ್ದಕ್ಕೆ ಸಾಲುಗಟ್ಟಿ ನಿಂತಿರುವುದನ್ನು ನೋಡಿ ಅಲ್ಲಿಂದ ಹಿಂದಿರುಗುವುದು, 'ಉಣ್ಣಿಚ್ಚಿರುದೇವೀ ಚರಿತಂ' ಕೃತಿಯ ಕಥಾವಸ್ತು.

**ಉಣ್ಣಿಯಾಡೀ ಚರಿತಂ :** 'ಉಣ್ಣಿಚ್ಚಿರುದೇವೀ ಚರಿತಂ' ನಂತರ ನೂರು ವರ್ಷಗಳು ಕಳೆದ ಬಳಿಕ ರಚನೆಗೊಂಡ ಕಾವ್ಯವಿದು. ಕಣ್ಣಿಗೆ ಹಬ್ಬವನ್ನುಂಟುಮಾಡುವಂತಹ ಉಣ್ಣಿಯಾಡೀ, ಪೂರ್ವದಲ್ಲಿ 'ಪ್ರಾವೃಟ್' ಎನ್ನುವ ಅಪ್ಸರಸಿಯಾಗಿದ್ದವಳು. ಆವಳು ಅಪ್ಸರೆಯಾಗಿದ್ದಾಗ ಉದಯಪರ್ವತದಲ್ಲಿ ತಂದೆಯೊಡನೆ ವಾಸಿಸುತ್ತಿದ್ದಳು. ಒಂದು ರಾತ್ರಿ ಆ ಅಪ್ಸರೆ, ಸಖಿಯರೊಂದಿಗೆ ಜಲಕ್ರೀಡೆಗೆ ಹೋದಾಗ ಚಂದ್ರ ಅವಳನ್ನು ನೋಡಿ ಕಾಮಾಸಕ್ತನಾದ. ಅವಳ ಜೊತೆಯಲ್ಲಿ ಸ್ವಲ್ಪ ಕಾಲ ಇದ್ದು ಅವಳಲ್ಲಿ ಬೆರೆತ. ಆ ಸಂಗತಿ ರೋಹಿಣಿಗೆ ತಿಳಿಯಿತು. ದುರ್ಮಾರ್ಗಕ್ಕಿಳಿದ ಪತಿಯ ಬಗ್ಗೆ ತುಂಬ ದುಃಖಿಸಿದಳು. ರೋಹಿಣಿಗೆ ತನ್ನ ಪತಿಯನ್ನು ತಪ್ಪುದಾರಿಗೆಳೆದ 'ಪ್ರಾವೃಟ್' ಅಪ್ಸರೆಯ ಮೇಲೆ ಸಹಿಸಲಾರದ ಕೋಪವುಂಟಾಯಿತು. 'ಪ್ರಾವೃಟ್' ಮನುಷ್ಯಯೋನಿಯಲ್ಲಿ ಜನಿಸುವಂತೆ ಶಪಿಸಿದಳು. ಹಾಗೆ ಜನಿಸಿದವಳು, 'ಉಣ್ಣಿಯಾಡಿ'.

ಅವಳ ಮನೆ ಕಂಡಿಯೂರು ದೇವಾಲಯದ ಸಮೀಪದ ಚೆರುಕ್ಕರ. ಅವಳಿಗೆ ಹನ್ನೆರಡು ವರ್ಷಗಳು ತುಂಬಿದವು. ಒಂದುದಿನ ಅವಳು ಒಂದು ಹಾಡನ್ನು ಹಾಡಿದಳು. ಅದನ್ನು ಚಂದ್ರ ಆಲಿಸಿದ. ಆ ಹಾಡನ್ನು ಕೇಳುತ್ತಿದ್ದಾಗ ಅವನಿಗೆ ಹಿಂದಿನ ಅಪ್ಸರೆ 'ಪ್ರಾವೃಟ್' ನೆನಪಾದಳು. ಇಬ್ಬರು ಸೇವಕರನ್ನು ಭೂಮಿಗೆ ಕಳುಹಿಸಿದ. ಅವರು ಭೂಮಿಗೆ ಬಂದು ಹಿಂದಿರುಗಿ ಹೋಗಿ ಅವಳ ವೃತ್ತಾಂತವನ್ನು ಚಂದ್ರನಿಗೆ ವರ್ಣಿಸುವುದು 'ಉಣ್ಣಿಯಾಡೀ ಚರಿತಂ'ದ ಕಥಾವಸ್ತು.

ಈ ಕಾವ್ಯಗಳನ್ನು ರಚಿಸಿದ ಮಣಿಪ್ರವಾಳ ಕವಿಗಳ ಪ್ರತಿಭಾವಿಲಾಸ, ಸ್ತ್ರೀಯ ರೂಪ ಲಾವಣ್ಯಗಳ ವರ್ಣನೆಗೆ, ಶೃಂಗಾರ ರಸಪ್ರತಿಪಾದನೆಗಳಿಗಷ್ಟೇ ಸೀಮಿತವಾಗಿರಲಿಲ್ಲ. ಅವರು ತಮ್ಮ ಕಾವ್ಯಗಳಲ್ಲಿ ಅಂದಿನ ಸ್ಥಿತಿ-ಗತಿಗಳು, ಸಂಸ್ಕೃತಿ, ಭೌಗೋಳಿಕ ಹಿನ್ನೆಲೆ, ಅಂದು ರಾಜ್ಯಗಳನ್ನಾಳುತ್ತಿದ್ದ ರಾಜರು, ನದಿಗಳು, ದೇವಾಲಯಗಳು ಮೊದಲಾದುವುಗಳ ರಮ್ಯಚಿತ್ರಣವನ್ನು ನೀಡಿದ್ದಾರೆ. ಸಾಹಿತ್ಯಚರಿತ್ರೆಕಾರರ ದೃಷ್ಟಿಯಲ್ಲಿ ಈ ಅಂಶಗಳು ಮಹತ್ವವುಳ್ಳವುಗಳಾಗಿವೆ.

ರಸಿಕತೆ ಮತ್ತು ಸೌಂದರ್ಯೋಪಾಸನೆಯ ಕಡೆಗೆ ಒಲವನ್ನು ತೋರಿದ ಮಣಿಪ್ರವಾಳ ಕವಿಗಳಲ್ಲಿ ಒಂದು ಕೊರತೆಯೂ ಕಂಡುಬರುತ್ತದೆ. ಜನಸಾಮಾನ್ಯರ ಜೀವನವನ್ನು ಕಣ್ತೆತ್ತಿ ನೋಡುವ ಉದ್ದೇಶವಾಗಲೀ ಬದುಕಿನ ರೂಕ್ಷ ಅನುಭವವಾಗಲೀ ಮಣಿಪ್ರವಾಳ ಕವಿಗಳ ಪ್ರತಿಪಾದನೆಯಲ್ಲಿ ಕಂಡುಬರುವುದಿಲ್ಲ. ಮಾನವನ ಪ್ರೌಢಚಿಂತನೆಗಳಿಗೂ ಈ ಕಾವ್ಯಗಳಲ್ಲಿ ಸ್ಥಾನವನ್ನು ಕಲ್ಪಿಸಿಕೊಟ್ಟಂತೆ ತೋರುವುದಿಲ್ಲ. ದಾರ್ಶನಿಕ ಮೌಲ್ಯಗಳನ್ನು ಮೇಲಿನ ಕಾವ್ಯಗಳಲ್ಲಿ ಕಾಣುವುದಕ್ಕಂತೂ ಸಾಧ್ಯವೇ ಇಲ್ಲ. ಚತುರ್ವಿಧ ಪುರುಷಾರ್ಥಗಳಲ್ಲೊಂದಾದ ಕಾಮತತ್ತ್ವವನ್ನು ಮಾತ್ರ ಪ್ರತಿಪಾದಿಸಲು; ತಮಗೆ ಸಾಧ್ಯವಿದ್ದಷ್ಟು ಮಟ್ಟಿಗೆ ಕಾಮತತ್ತ್ವವನ್ನು ವಿಕಾಸಗೊಳಿಸಿ, ಶೃಂಗಾರರಸಕ್ಕೆ ಪ್ರಾಶಸ್ತ್ಯವನ್ನು ನೀಡಿರುವುದು ಕಂಡುಬರುತ್ತದೆ. ಅಲ್ಲಲ್ಲಿ ದೇವಾಲಯಗಳ ವರ್ಣನೆ ಬರುವುದಾದರೂ ಭಕ್ತಿ ಮತ್ತು ಆಧ್ಯಾತ್ಮವನ್ನು ಕುರಿತ ಅಲೌಕಿಕ ವಿಚಾರಗಳ ಆಳಕ್ಕಿಳಿದಿರುವುದನ್ನು ಉಣ್ಣಚ್ಚಿರುದೇವಿ, ಉಣ್ಣಿಯಾಡಿ, ಉಣ್ಣಿಯಚ್ಚಿ ಚರಿತ್ರೆಗಳಲ್ಲಿ ಕಾಣಲಾಗುವುದಿಲ್ಲ.

ಮಣಿಪ್ರವಾಳಶೈಲಿಯಲ್ಲಿ 'ಸಂದೇಶಕಾವ್ಯ'ಗಳನ್ನು ರಚಿಸಿದ ಕವಿಗಳ ಧ್ಯೇಯೋದ್ದೇಶಗಳೂ ಇವೇ ಇದ್ದಂತೆ ತೋರುತ್ತವೆ. ನಟಿಕುಲಮಣಿಗಳ ನಿತ್ಯಾರಾಧಕರ ಚಿತ್ರಣವನ್ನು ನೀಡಿದ ಕೇರಳದ ಮಣಿಪ್ರವಾಳ ಕವಿಗಳು ಕಾಳಿದಾಸನ ಮೇಘಸಂದೇಶವನ್ನು ಅನುಕರಿಸಿ ಸಂಸ್ಕೃತದಲ್ಲೂ ಮಿಶ್ರಭಾಷಾಶೈಲಿಯಲ್ಲೂ ಸಂದೇಶಕಾವ್ಯಗಳನ್ನು ರಚಿಸಿದ್ದಾರೆ.

ವಿರಹಿಯಾದ ನಾಯಕ (ಕವಿಯೂ ಆಗಿರಬಹುದು) ತನ್ನ ಪ್ರಿಯತಮೆಗೆ ಸಂದೇಶವನ್ನು ಕಳುಹಿಸಿಕೊಡುವುದೇ ಸಂದೇಶಕಾವ್ಯಗಳ ಮುಖ್ಯ ಪ್ರತಿಪಾದನೆ. ಹತ್ತನೆಯ ಅಥವಾ ಹನ್ನೊಂದನೆಯ ಶತಮಾನದಲ್ಲಿ ಸಂಸ್ಕೃತದಲ್ಲಿ ರಚನೆಗೊಂಡದ್ದೆಂದು ಊಹಿಸಲಾಗಿರುವ 'ಶುಕಸಂದೇಶ' ಕೇರಳದ ಮೊದಲ ಸಂದೇಶಕಾವ್ಯ. ಮೇಘಸಂದೇಶದ ನಂತರ ದೊರೆಯುವ ಗಣನೀಯ ಕೃತಿ, ಶುಕಸಂದೇಶ. ಚಾತಕಸಂದೇಶ, ಕೋಕಿಲಸಂದೇಶ, ಭ್ರಮರಸಂದೇಶ ಮೊದಲಾದ ಸಂಸ್ಕೃತ ಸಂದೇಶಕಾವ್ಯಗಳನ್ನು ರಚಿಸಲು ಕೇರಳೀಯ ಕವಿಗಳಿಗೆ ಸ್ಫೂರ್ತಿನೀಡಿದ ಗ್ರಂಥ, ಶುಕಸಂದೇಶ. ರಂಗಲಕ್ಷ್ಮಿ ಎನ್ನುವ ಸುಂದರೀಮಣಿ ಶುಕಸಂದೇಶದ ನಾಯಿಕೆ. 'ತೃಕ್ಕಣಾ ಮದಿಗಲತ್'ನ ಶಯನಮಂದಿರದಲ್ಲಿ ನಾಯಿಕೆಯೊಡನೆ ಮಲಗಿ ನಿದ್ರಿಸುತ್ತಿದ್ದುದು– ನಾಯಕ ವಿಧಿ ವಂಚನೆಯಿಂದ ರಾಮೇಶ್ವರವನ್ನು ತಲುಪಿ ಅಲ್ಲಿಂದ ಒಂದು ಗಿಳಿಯ ಮೂಲಕ ತನ್ನ ಪ್ರಿಯತಮೆಗೆ ಸಂದೇಶವನ್ನು ಕಳುಹಿಸಿದಂತೆ ಸ್ವಪ್ನ ಕಾಣುವುದು ಶುಕಸಂದೇಶದ ಕಥಾ ಚೌಕಟ್ಟು. ರಂಗಲಕ್ಷ್ಮಿಯ ಸೌಂದರ್ಯವರ್ಣನೆಗೆ ಕವಿ ಈ ಕಾವ್ಯದ ಬಹುಭಾಗವನ್ನು ಆಕ್ರಮಿಸಿದ್ದಾನೆ.

**ಉಣ್ಣುನೀಲಿ ಸಂದೇಶ :** ಕೇರಳದ ಮಣಿಪ್ರವಾಳಶೈಲಿಯ ಅತ್ಯುತ್ತಮ ಖಂಡಕಾವ್ಯ. ಮಿಶ್ರಭಾಷಾಶೈಲಿಯ ಸಂದೇಶಕಾವ್ಯಗಳ ಸಾಲಿನಲ್ಲಿ ಇದಕ್ಕೆ ಪ್ರಥಮಸ್ಥಾನವಿದೆ. ಇದರ ಕರ್ತೃ ಯಾರೆಂಬುದು ಇಂದಿಗೂ ಅಜ್ಞಾತವಾಗಿಯೇ ಉಳಿದಿದೆ. ಹದಿನಾಲ್ಕನೆಯ ಶತಮಾನದ ಅಂತ್ಯದಲ್ಲಿ ರಚಿತವಾದ `ಲೀಲಾತಿಲಕಂ'(ಮಣಿಪ್ರವಾಳ ಲಕ್ಷಣ ಗ್ರಂಥ)ದಲ್ಲಿ ಲಕ್ಷಣಪದ್ಯಗಳನ್ನು ಕೊಡುವಾಗ ಉಣ್ಣುನೀಲಿ ಸಂದೇಶದ ಪದ್ಯಗಳನ್ನು ಉದ್ಧರಿಸಿರುವುದರಿಂದ ಈ ಕಾವ್ಯ ಹದಿನಾಲ್ಕನೆಯ ಶತಮಾನದ ಮಧ್ಯಕಾಲದಲ್ಲಿ ರಚನೆಗೊಂಡದ್ದೆಂದು ಖಚಿತವಾಗಿ ಹೇಳಲು ಸಾಧ್ಯವಾಗಿದೆ.

ಈ ಸಂದೇಶಕಾವ್ಯದಲ್ಲಿ ನಾಯಕನು `ಕಡುತುರುತ್ತಿ'ಯಲ್ಲಿ ತನ್ನ ಪ್ರಿಯತಮೆ ಉಣ್ಣುನೀಲಿಯೊಡನೆ ಮಲಗಿ ನಿದ್ರಿಸುತ್ತಿದ್ದಾಗ ಯಕ್ಷಿಣಿಯೊಬ್ಬಳು ನಾಯಕನನ್ನು ಎತ್ತಿಕೊಂಡು ಗಗನಮಾರ್ಗದಲ್ಲಿ ಸಂಚರಿಸುವುದು– ಅಕಸ್ಮಾತ್ತಾಗಿ ಎಚ್ಚರಗೊಂಡ ನಾಯಕನು ಭಯಪಟ್ಟು ನರಸಿಂಹ ಜಪಮಾಡುವುದು— ಅದರಿಂದ ಭಯಗೊಂಡ ಯಕ್ಷಿಣಿ ನಾಯಕನನ್ನು ತಿರುವನಂತಪುರದ ಶ್ರೀಪದ್ಮನಾಭ ದೇವಾಲಯದ ಮುಂಭಾಗದಲ್ಲಿ ಇಳಿಸಿಹೋಗುವುದು— ಅಲ್ಲಿಗೆ ಬಂದಿದ್ದ ಬಾಲ್ಯಕಾಲದ ಮಿತ್ರನಾಗಿದ್ದ ಕೊಲ್ಲಂ ರಾಜಕುಮಾರನಾದ ಆದಿತ್ಯವರ್ಮನನ್ನು ಕಾಣುವುದು— ಅವನ ಮೂಲಕ ನಾಯಕ ಉಣ್ಣುನೀಲಿಗೆ ಸಂದೇಶವನ್ನು ಕಳುಹಿಸುವುದು— ಇವೇ ಮೊದಲಾದ ಸಂಗತಿಗಳನ್ನೆಲ್ಲ ವರ್ಣಿಸಲಾಗಿದೆ. ಪೂರ್ವಸಂದೇಶ ಮತ್ತು ಉತ್ತರಸಂದೇಶಗಳೆನ್ನುವ ಎರಡು ಭಾಗಗಳಿರುವ ಈ ಖಂಡಕಾವ್ಯದಲ್ಲಿ ಪೂರ್ವಸಂದೇಶದಲ್ಲಿ ೧೩೭ ಪದ್ಯಗಳೂ ಉತ್ತರಸಂದೇಶದಲ್ಲಿ ೧೦೧ ಪದ್ಯಗಳೂ ಇರುತ್ತವೆ.

ಕಾವ್ಯ ಪ್ರಾರಂಭವಾಗುವುದೇ ಉಣ್ಣುನೀಲಿಯ ಶಯನಾಗಾರದಿಂದ :

> ತಂಡಾರ್ ಮಾತಂಡಟಿಗು ಪೊಟಿಯುಂ ಮಿಕ್ಕಮುಂಡೆಕ್ಕಲ್ ಮೇವುಂ
> ವಂತಾರ್ ಕೋಲಕ್ಕುಟಲಿಗಳ್ ಶಿಖಾಮುಣ್ಣುನೀಲೀಮುದಾರಾಂ
> ಕೊಂಡಾಡಿಕ್ಕೊಂಡರಣ ಮಣಿವಾಕೊಂಡು ಕೊಂಡಾತ್ತರಾಗಂ
> ಪಂಡೇಪ್ಪೋಲೇ ಪರಮನುಭಂ ಕೋಪಿ ಕಾಮೀಜಗಾಮ[1]

(ತುಂಬಿತುಳುಕುವ ಸಂಪತ್ ಸಮೃದ್ಧಿಯಿಂದ ಕೂಡಿದ ಹೆಸರಾಂತ `ಮುಂಡಮ್ಕಲ್'ನ[illegible] ವಾಸಿಸುವ ಸುಂದರೀಮೌಲಿಯೂ ಉದಾರಶೀಲೆಯೂ ಆದ ಉಣ್ಣುನೀಲಿಯನ[illegible] ಆಲಿಂಗಿಸಿಕೊಂಡು ರತಿವಿಲಾಸದಿಂದ ಮಾಣಿಕ್ಯದಂತಹ ಅವಳ ಅಧರಗಳನ್ನು ಪ್ರೀ[illegible] ಪೂರ್ವಕವಾಗಿ ಚುಂಬಿಸುತ್ತ ಒಬ್ಬ ಪ್ರಿಯತಮ ಎಂದಿನಂತೆ ಅಮಿತವಾದ ಆನಂ[illegible] ವನ್ನನುಭವಿಸುತ್ತಿದ್ದ).

[1] ಉಣ್ಣುನೀಲಿಸಂದೇಶ: ಪೂ. ಸಂ. ಪದ್ಯ–೧

> ವಕ್ಷೋದೇಶೇ ಸುರತಕಲಹ ವ್ಯಾಕುಲಾಂ ತಾಂ ವಹಂತಂ
> ಯಕ್ಷೀ ಕಾಚಿತ್ ಪುನರಮುಮಿಜ್ಜ್ಞನಿಸ್ಸ್ನ ನೇರಂ ನಿನಾಯ
> ದಕ್ಷಾಚಾಲಚ್ಚದಿಯಿಲ್ ಮಂದೋನ್ಮಾದಿನೀ ದಕ್ಷಿಣಾಶಾಂ
> ರಕ್ಷೋ ರಾಜನ್ನಿಳಯ ಸಹಚಾ ಲಕ್ಷ್ಮಣಂ ರಾಕ್ಷಸೀವ[೧]

(ಅವರಿಬ್ಬರೂ ಮಲಗಿ ನಿದ್ರಿಸುತ್ತಿದ್ದ ಹೊತ್ತು. ಸುರತಸುಖಾನಂತರ ಆಯಾಸಗೊಂಡು ಇನಿಯಳನ್ನು ಎದೆಗಪ್ಪಿಕೊಂಡು ಮಲಗಿ ನಿದ್ರಿಸುತ್ತಿದ್ದ ನಾಯಕನನ್ನು, ಕಾಮೋನ್ಮತ್ತಳೂ ವಂಚಿಸುವುದರಲ್ಲಿ ಚತುರೆಯೂ ಆದ ಒಬ್ಬಳು ಯಕ್ಷಿ, ಶೂರ್ಪನಖಿ ಲಕ್ಷ್ಮಣನನ್ನು ಮೋಹಿಸಿದಂತೆ ಮೋಹಿಸಿ, ದಕ್ಷಿಣದಿಕ್ಕಿಗೆ ಎತ್ತಿಕೊಂಡು ಹೋದಳು). ದೂರದ ತಿರುವನಂತಪುರವನ್ನು ತಲುಪುತ್ತಿರುವಷ್ಟರಲ್ಲಿ ಎಚ್ಚರಗೊಂಡ ನಾಯಕನಿಗೆ ತಾನು ಉಣ್ಣುನೀಲಿಯಿಂದ ಬೇರ್ಪಟ್ಟು ಯಕ್ಷಿಯ ಕೈಗೆ ಸಿಕ್ಕಿಹಾಕಿಕೊಂಡಿದ್ದೇನೆ ಎನ್ನುವ ಭಯವುಂಟಾಗಿ ನರಸಿಂಹಮಂತ್ರವನ್ನು ಜಪಿಸಿದ. ಆ ಮಂತ್ರಕ್ಕೆ ಹೆದರಿದ ಯಕ್ಷಿ ತಿರುವನಂತಪುರದ ಅನಂತಪದ್ಮನಾಭದೇವಾಲಯದ ಮುಂದೆ ನಾಯಕನನ್ನು ಬಿಟ್ಟು ಕಣ್ಮರೆಯಾದಳು.

> ಕಾಳಂಪೋಲೇ ಕುಸುಮಧನುಷೋಹನ್ತ ಪೂಂಕೋಳಿಕೂಕಿ
> ಚೋಳಂಪೋಲೆ ಚೆದಜು ವಿಳಙ್ಙಿ ತಾರಕಾಣಾಂ ನಿಕಾಯಾಂ
> ತಾಳಂಪೋಲೆ ಪುಲರಿವನಿತಯ್ಕಾಗತೌ ಚಂದ್ರಸೂರ್ಯೌ
> ನಾಳಂಪೋಲೆ ನಳಿನ ಕುಹರದುದ್ಗತಾ ಭೃಂಗರಾಜಿಃ[೨]

(ಕಾಮದೇವನ ಕಹಳೆಯಂತೆ ಮುಂಜಾವದ ಕೋಳಿಗಳು ಕೂಗಿದವು. ಜೋಳದ ಅವಲಿನಂತೆ ನಕ್ಷತ್ರಸಮೂಹ ಅಲ್ಲಲ್ಲಿ ಮಂದಪ್ರಕಾಶವನ್ನು ಬೀರಿದುವು. ಸೂರ್ಯ ಚಂದ್ರರು ಉಷಾದೇವಿಯ ತಾಳಗಳಂತೆ ಪೂರ್ವಪಶ್ಚಿಮ ದಿಕ್ಕುಗಳೆರಡು ಕಡೆಗಳಲ್ಲೂ ಕಾಣಿಸಿದರು. ಕಮಲಗಳೊಳಗಿನಿಂದ ಧೂಮನಾಳದಂತೆ ದುಂಬಿಗಳು ಹೊರಬಂದವು. ನೀಲಿಮಾಲೆಯ ರತ್ನದಂತೆ ಸೂರ್ಯಬಿಂಬ ಕಾಣಿಸಿತು). ಸತ್ತಂತಾಗಿದ್ದ ವಿರಹಿಗೆ ಮೃತ್ಯುಂಜಯ ಜಪಮಾಡದೆ ಉಳಿಗಾಲವಿಲ್ಲವೆಂದು ತೋರಿತು. ಮೃತ್ಯುಂಜಯ ಜಪಮಾಡುತ್ತ ಕುಳಿತಿದ್ದಾಗ ತನ್ನ ಬಾಲ್ಯಕಾಲದ ಮಿತ್ರ ಆದಿತ್ಯವರ್ಮ ಅಲ್ಲಿಗೆ ಬಂದ. ಆತ ಆರು ಆರ್ಯಭಾಷೆಗಳಲ್ಲಿ, ಹದಿನೆಂಟು ಅನಾರ್ಯಭಾಷೆಗಳಲ್ಲಿ ಪಂಡಿತ. ಹದಿನೆಂಟುನಾಡುಗಳಿಗೆ, ಹದಿನೆಂಟು ಆಯುಧಗಳಿಗೆ, ಹದಿನೆಂಟುಗ್ರಾಮಗಳಿಗೆ ಅರವತ್ತನಾಲ್ಕು ಕಲೆಗಳಿಗೆ ಆಶ್ರಯದಾತ; ಸಂಗೀತಪ್ರವೀಣ. ದಿನವೂ ವ್ಯಾಯಾಮ ಮಾಡುವವನು. ಇಂದ್ರನ ಉಚ್ಚೈಶ್ರವವನ್ನು ಮೀರಿಸುವ ಅವನ ಬಿಳಿಯ ಕುದುರೆ

---

೧ ಉ. ನೀ. ಸಂ: ಪೂ. ಸಂ. ಪದ್ಯ–೨

೨ ಅದೇ ಪದ್ಯ–೬

ಆಯಾಸಗೊಳ್ಳುವಷ್ಟು ಶತ್ರುಗಳಾದ ತುರುಕರ ಪಡೆಯೊಂದಿಗೆ ಹೋರಾಡುವವನು
ಕುಬೇರನ ಐಶ್ವರ್ಯವನ್ನು ಮೀರಿಸುವಷ್ಟು ಐಶ್ವರ್ಯವುಳ್ಳವನು. ಆ ಮಿತ್ರವರ್ಮನನ್ನು
ಕಂಡೊಡನೆ ವಿರಹಿಯಾದ ನಾಯಕ ಉಪ್ಪರಿಗೆಯಿಂದ ಎದ್ದು ಕುಳಿತು ತನ್ನ ಆತ್ಮಕಥೆ
ಯನ್ನು ಹೇಳುವುದಕ್ಕಾರಂಭಿಸಿದ.

ಅಯ್ಯಾ ಮಿತ್ರ, ಉಣ್ಣುನೀಲಿಯನ್ನು ಬಿಟ್ಟು ಭೂಮಿಯ ಮೇಲಿನ ವಿರಹಿಗಳ ಸಾಲಿ
ನಲ್ಲಿ ಸೇರಿದವನಾಗಿ ಹೋಗಿದ್ದೇನೆ.

ಲೋಕವಿಖ್ಯಾತವಾದ ಮೇದಿನೀಸ್ವರ್ಗವಾದ ಕಡುತುರುತ್ತಿ ಎನ್ನುವ ಒಂದು ಪಟ್ಟಣ
ವನ್ನು ನೀನು ಕೇಳಿರುವೆಯಲ್ಲವೆ ? ಅಲ್ಲಿ ಮನ್ಮಥನ ಸೈನ್ಯವಿದೆ. ಲೋಕಕೀರ್ತಿಯನ್ನು
ಪಡೆದ ಮುಂಡಯ್ಕಲ್ ಎನ್ನುವ ಭವನವಿದೆ. ಆ ಭವನದಲ್ಲಿ ಉಣ್ಣುನೀಲಿಯಿದ್ದಾಳೆ
ಊರ್ವಶಿವಂಶಸ್ಥೆ ಅವಳು: ಪರಮಸುಂದರಿ. ನಾನೂ ಆಕೆಯೂ ಶಯನಾಗಾರದಲ್ಲಿ
ಸುರತಸುಖಾನಂತರ ನಿದ್ರೆಯಲ್ಲಿದ್ದೆವು ಯಾವುದೋ ರೀತಿಯಲ್ಲಿ ಒಬ್ಬಳು ಯಕ್ಷಿ
ನನ್ನನ್ನು ಹೊತ್ತುಕೊಂಡು ಆಕಾಶದಲ್ಲಿ ಸಂಚರಿಸುತ್ತಿದ್ದಾಗ ನಾನು ಎಚ್ಚರಗೊಂಡೆ
ನರಸಿಂಹಮಂತ್ರ ಜಪಿಸಿದೆ. ಅವಳು ಹೆದರಿ ನನ್ನನ್ನು ಬಿಟ್ಟು ಓಡಿಹೋದಳು. ನಿನ್ನ
ದರ್ಶನದಿಂದ ನಾನು ಮತ್ತೆ ಬದುಕಿದೆ. ನೀನು ಈಗ ಈ ಮಿತ್ರನಿಗಾಗಿ ಮಾಡಬೇಕಾದ
ಉಪಕಾರವೊಂದಿದೆ. ನೀನು ಉಣ್ಣುನೀಲಿಯನ್ನು ಕಂಡು ನನ್ನ ಸಂಗತಿಯನ್ನು ತಿಳಿಸ
ಬೇಕು. ಅವಳಿಗೆ ಧೈರ್ಯ ನೀಡಬೇಕು.

ಇಲ್ಲಿಂದ ಅವಳಿರುವ ಊರಿಗೆ ಹೋಗಬೇಕಾದರೆ ದಾರಿ ತಿಳಿಯಬೇಕಲ್ಲವೆ
ಒಂದೊಂದಾಗಿ ತಿಳಿಸುತ್ತೇನೆ. ಅದಕ್ಕೆ ಮೊದಲು ಈ ಅನಂತಪದ್ಮನಾಭಸ್ವಾಮಿಯನ್ನೂ
ಈ ದೇವಾಲಯದ ಸುತ್ತ ಇರುವ ವಿಷ್ಣುವಿನ ಹತ್ತು ಅವತಾರಗಳ ಪ್ರತಿಮೆಗಳಿಗೂ
ಮೊದಲು ನಮಸ್ಕರಿಸು. ಈ ದೇವಾಲಯದ ಪಶ್ಚಿಮದ್ವಾರದ ಮೂಲಕ ಹೊರಟು
ಪ್ರಯಾಣಕ್ಕೆ ಸನ್ನದ್ಧನಾಗು. ದೇವಾಲಯದಿಂದ ಹೊರಗೆ ಬಂದಾಗ 'ಉಣ್ಣುಯಾ
ಎನ್ನುವ ದೇವದಾಸಿ ನಿನ್ನನ್ನು ಎದುರುಗೊಂಡು ಉಪಚರಿಸಲು ಕಾಯುತ್ತ ನಿಲ್ಲುತ್ತಾ
ಅಲ್ಲಿಂದ ಮುಂದೆ ನಡಕಾವಿಗೆ ಹೋಗಿ ಬಾಲಗೋಪಾಲನ ಪ್ರತಿಮೆಗೆ ನಮಸ್ಕರಿಸು
ಅನಂತರ ಅಯಿಕೆಯ ದೇವಾಲಯಕ್ಕೆ ಪ್ರದಕ್ಷಿಣೆ ಬಂದು ಮುಂದುವರಿದರೆ ಸಮು
ಕಾಣಿಸುತ್ತದೆ.

ಅಲ್ಲಿಂದ ಮುಂದೆ ಸಾಗಿದರೆ ಮಧ್ಯಾಹ್ನದ ಪೂಜೆಯ ಹೊತ್ತಿಗೆ ಪ್ರಸಿದ್ಧ
ದೇವಾಲಯವನ್ನು ತಲುಪುತ್ತೀಯೆ.

ಅನತ್ತೋಲೋ ಕೊಡಿಯ ವಿಷಮೋ ವೆಳ್ಳಮೋ ವೆಳ್ಳಿಲಿಂಬೋ
ಮಾನೋ ಮೀನಧ್ವಜ ಜುಟಲಯಾಂ ಕಣ್ಣಿಲಾಗಿನ್ನ ತೀಯೋ
ನೀರೋ ಪೇರೇ ಪಜೆಗಿಲ್ ಮಲಮಾತಿನ್ನು ನಿನ್ ವೈಕನಕ್ಕ
ಕೂಜೀಪಾನೊನ್ನಿಯತತು ಚೊಲ್ಲೀದು ಶೀತಾಂಶುಮೌಲೇ !

(ಆನೆಯ ಚರ್ಮವೋ ? ಕಾಳಕೂಟವೋ ? ಗಂಗೆಯೋ ? ಅಸ್ತಿಮಾಲೆಯೋ ? ಜಿಂಕೆಯೋ ? ಅಗ್ನಿನೇತ್ರವೋ ? ಸ್ಮಶಾನದ ಭಸ್ಮವೋ ? ಒಂದೊಂದನ್ನೂ ಪ್ರತ್ಯೇಕಿಸಿ ಹೇಳುವುದಾದರೆ ಪಾರ್ವತಿಗೆ ನಿನ್ನ ಶರೀರವನ್ನು ವ್ಯಾಪಿಸಿರುವ ಈ ಸಮೂಹದಲ್ಲಿ ಮನೋಹರವಾದದ್ದು ಯಾವುದು ? ಅವಳಿಗೆ ಅವೆಲ್ಲವೂ ಅಪ್ರಿಯವಾದವುಗಳೇ. ಆದರೂ ನಿನ್ನಲ್ಲಿ ಮತ್ತಾವುದೋ ಒಂದು ಮಹತ್ವವಾದುದು ಪ್ರಿಯವಾಗಿ ತೋರಿದು ದರಿಂದ ನಿನ್ನನ್ನು ಸ್ವೀಕರಿಸಿದ್ದಾಳೆ ಎಂದು ಸ್ತುತಿಸು).

ಅಲ್ಲಿಂದ ಮುಂದೆ ಸಾಗಿದಾಗ 'ವರ್ಕಲ' ಎನ್ನುವ ಪಟ್ಟಣವನ್ನು ತಲಪುತ್ತೀಯೆ. ವರ್ಕಲದ ಜನಾರ್ದನದೇವಾಲಯಕ್ಕೆ ಹೋಗಿ ವಂದಿಸಿ ನಿನ್ನ ಪ್ರಯಾಣವನ್ನು ಮುಂದು ವರಿಸು. ಅನಂತರ 'ಇತ್ತಿಕ್ಕರ' ಎನ್ನುವ ಊರನ್ನು ದಾಟಿ 'ಕೊಲ್ಲಂ' ಪಟ್ಟಣವನ್ನು ತಲಪುತ್ತೀಯೆ. ಅದು ವೇಣಾಡಿನ ರಾಜಧಾನಿ. ಅಲ್ಲಿ ವೀಣಾಪಾಣಿ, ವಿಪುಲ ನಿತಂಬಿನಿ, ಕೃಶಮಧ್ಯೆ, ತಳಿರಿನಂತೆ ಬಳುಕುವ ಮೈಯುಳ್ಳವಳು, ವೃತ್ತಸ್ತನಿ, ಮನೋಹರಿ ಯಾದ 'ವೆಳ್ಳೂರ್ ನಾಣಿ' ಎನ್ನುವ ದೇವದಾಸಿ ನಿನ್ನನ್ನು ಸ್ವಾಗತಿಸಲು ಕಾಯುತ್ತ ನಿಂತಿರುತ್ತಾಳೆ.೪ ಅಲ್ಲಿಂದ ಅನತಿದೂರದಲ್ಲಿ 'ಪನಜಾವನು' ಕೋಟೆ ಕಾಣಿಸುತ್ತದೆ.

ಆ ಕೋಟೆಯೊಳಗಿರುವ 'ಭೈರವಿ' ಮತ್ತು 'ಆತಿಚ್ಚಪುರತ್ತಪ್ಪ' ದೇವತೆಗಳಿಗೆ ವಂದಿಸುವುದನ್ನು ಮರೆಯಬೇಡ.

ಅಲ್ಲಿಗೆ ಆ ದಿನದ ಹಗಲು ಮುಗಿದು ಸಂಜೆಯಾಗುತ್ತದೆ. ಅಂದು ನೀನು 'ಕರಿಪುಳಕ್ಕ' ದಲ್ಲಿ ತಂಗುವುದು ಸೂಕ್ತ.

ಮರುದಿನ ಪ್ರಯಾಣಕ್ಕೆ ಸಿದ್ಧನಾಗು. ಬೇಗ ಉಣ್ಣುನೀಲಿಯನ್ನು ಕಂಡು ನನ್ನ ವಿಚಾರ ವನ್ನು ತಿಳಿಸುವುದಕ್ಕೆ ಹೋಗುವಾಗ ಯಾವ ವಿಘ್ನಗಳೂ ಉಂಟಾಗದಂತೆ ಗಣಪತಿ ಯನ್ನು ಸ್ತುತಿಸು. 'ಓಡನಾಡ್' ದೇವತೆಗೆ ವಂದಿಸಿ ಮುಂದೆ ಸಾಗು.

'ಕಾಯಂಕುಳ' ಎನ್ನುವ ಅಂಗಡಿ ಬೀದಿಯನ್ನು ದಾಟಿ 'ಕಂಡಿಯೂರ್' ಪ್ರದೇಶಕ್ಕೆ ಬರುತ್ತೀಯೆ. "ದುಂಬಿಯ ಬಣ್ಣದ ಕಂಠವುಳ್ಳವನೂ ಗಂಗೆಯನ್ನೂ ಚಂದ್ರನನ್ನೂ ತಲೆಯಲ್ಲಿ ಹೊತ್ತವನೂ ಪಾರ್ವತಿಗೆ ತನ್ನ ಶರೀರದಲ್ಲಿ ಅರ್ಧಭಾಗವನ್ನು ನೀಡಿದವನೂ ಸಕಲ ದುರಿತಗಳನ್ನು ಹೋಗಲಾಡಿಸುವವನೂ ಸರ್ಪಗಳನ್ನು ಕಿವಿಯ ಆಭರಣವನ್ನಾಗಿಸಿ ಕೊಂಡಿರುವ ಕಂಡಿಯೂರ್ ಶಿವನನ್ನು ನಮಸ್ಕರಿಸಿಯೇ ನೀನು ಮುಂದುವರಿಯ ಬೇಕು."೫

---

೪ ಉಣ್ಣುನೀಲಿ ಸಂದೇಶ : ಪೂ. ಸಂ. ಪದ್ಯ–೭೨.
೫ ಉ. ನೀ. ಸಂ. : ಪೂ. ಸಂ. ಪದ್ಯ– ೯೯.

"ಕಂಡಿಯೂರಿನಲ್ಲಿ ಸ್ವರ್ಣಕಲಶದಂತಿರುವ ಗುರುಕುಚಗಳುಳ್ಳವರೂ, ಚಂಚಲನೇತ್ರೆಯರೂ ಸುಂದರಿಯರೂ ಆದ ತರುಣಿಯರ ಸಂಭಾಷಣೆಯನ್ನು ಕೇಳುತ್ತಾ ನಿಂತು ಕೊಂಡು ತಡಮಾಡಬೇಡ."೬

ನೃತ್ಯವನ್ನು ಪರಿಚಯ ಮಾಡಿಕೊಡುವಂತಹ ನಡೆ-ನುಡಿಯುಳ್ಳವಳೂ ಮುಡಿಯನ್ನು ಮೇಲೆತ್ತಿ ಕಟ್ಟಿದವಳೂ ಗುರುನಿತಂಬಿನಿಯೂ ಆದ ಉಣ್ಣಿಯಾಡಿ ಎನ್ನುವ ದೇವದಾಸಿಯ ಮನೆಯನ್ನು (ಸಾಧಾರಣವಾಗಿ ರಾಜಕುಮಾರರು ಪ್ರವೇಶಿಸುವ) ನೀನು ಪ್ರವೇಶಿಸಿ ಎಲ್ಲಿ ತಡಮಾಡಿಬಿಡುತ್ತೀಯೋ ಎನ್ನುವ ಶಂಕೆ ನನಗಿದೆ. ಅಲ್ಲಿಂದ ಮುಂದೆ ಹೋದರೆ 'ಇಳೆಯಚ್ಚಿ' ಎನ್ನುವವಳು ನಿನ್ನನ್ನು ತಡೆಯಲೂಬಹುದು.

ಮುಂದೆ 'ಓಡನಾಡು' ರಾಜ ಇರವಿವರ್ಮನನ್ನು ಭೇಟಿಯಾಗುತ್ತೀಯೆ. ನೀನು ಅರ ಮನೆಯನ್ನು ತಲಪುವ ಮೊದಲೇ ಅವನು ನಿನ್ನನ್ನು ಎದುರುಗೊಳ್ಳಲು ಬರಬಹುದು. ಅಲ್ಲಿ ನನ್ನ ಪ್ರಿಯತಮೆಯ ಸಖಿ 'ಉಣ್ಣಿಚ್ಚಕ್ಕಿ' ಎನ್ನುವವಳಿದ್ದಾಳೆ. ಅವಳ ಕಳ್ಳ ನೋಟ ನಿನ್ನ ಮೇಲೆ ಬೀಳಬಹುದು. ಅಲ್ಲಿ ಹೆಚ್ಚು ಹೊತ್ತು ನಿಲ್ಲದೆ ಬೇಗ ಹೊರಟು ಬಿಡು.

ಅಲ್ಲಿಂದ ಪಾರಾದರೆ 'ಚಿರುದೇವಿ' ಎನ್ನುವ ದೇವದಾಸಿ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತ ನಿಂತಿರುವುದನ್ನು ಕಾಣುತ್ತೀಯೆ. ಅನಂತರ ಚಿರವಾ ರಾಜನಾದ ರಾಜಶೇಖರನನ್ನು ಭೇಟಿಮಾಡಿ ನಿನ್ನ ಪ್ರಯಾಣವನ್ನು ಮುಂದುವರಿಸು. ದಾರಿಯಲ್ಲಿ 'ಕೈತ್ತಕ್ಕಾಟ್ಟು' ಸುಂದರಿಯರ ಇಂಪಾದ ಹಾಡು ಕೇಳುತ್ತ ಮೈಮರೆತು ನಿಂತುಕೊಳ್ಳಬೇಡ. ಅವ ರಿಂದಲೂ ತಪ್ಪಿಸಿಕೊಂಡು 'ತಿರುವಲ್ಲಾ' ವಿಷ್ಣುದೇವಾಲಯಕ್ಕೆ ಹೋಗಿ ವಂದಿಸು. ನಿನ್ನ ಪ್ರಯಾಣ ಮುಂದುವರಿಯಲಿ.

ಆ ದೇವಾಲಯದ ಸಮೀಪದಲ್ಲಿ ವಾಸಿಸುವ ಬಾಲತರುಣಿಯರು ನಿನ್ನನ್ನು ಕಂಡು ನಾನು ಮುಂದು ತಾನು ಮುಂದು ಎಂದು ಮುಂದೆಬಂದು ಆಹ್ವಾನಿಸುತ್ತಾರೆ. ಹೇಗಾದರೂ ಸರಿಯೆ ಅವರಿಂದ ತಪ್ಪಿಸಿಕೊಂಡು ಮುಂದೆ ಹೋಗು. 'ನಾಲು ಕೋಟ' 'ತೆಕ್ಕುಂಕೂರ್'ಗಳನ್ನು ದಾಟಿ ಮಣಿಕಂಠಪುರಕ್ಕೆ ಹೋದಾಗ ರಾಮವರ್ಮ ರಾಜನನ್ನು ಭೇಟಿಯಾಗಿ ಅನಂತರ ನಿನ್ನ ಪ್ರಯಾಣವನ್ನು ಮುಂದುವರಿಸು.

ತಿರುವಾಂಚಪ್ಪಳ, ಪಟ್ಟುಮಾನೂರು, ವಡಮದಿರ, ಗೋವಿಂದಪುರಗಳನ್ನೆಲ್ಲ ದಾಟಿ ಹೋದಾಗ ನನ್ನ ಪ್ರಿಯತಮೆಯ ಊರನ್ನು ತಲುಪುತ್ತೀಯೆ.

ಮಣಿಕಂಠನೆನ್ನುವ ಚಿರುಮಳ್ಳ ಮಿತ್ರಾ, 'ಮುಂಡಯ್ಕಲ್' ತಲಪಿದಾಗ ನನ್ನ ಪ್ರಿಯತಮೆಯ ಮನೆಯನ್ನು ಗುರುತಿಸುವುದು ನಿನಗೆ ಸ್ವಲ್ಪವೂ ಕಷ್ಟವಾಗಲಾರದು.

೬ ಉ. ನೀ. ಸಂ : ಪೂ. ಸಂ. ಪದ್ಯ–೧೦೦.

ತೇನ್ಮಾವ್ಪೋಳಂ ಪನಸಸಿಕರಂ ತೆಙ್ಙ್ನಾರೋನ್ನಿನ್ನುನನ್ನಾ
ಲನ್ನಾಲಿನ್ನುಂ ಕ್ರಮುಕಮಿಡಯುಲ್ಪ್ಪಾಕಿ ಮುಮ್ಮೂನ್ನಾಸೀಳೀ
ಒನ್ನಿನ್ನೊನ್ನುಂ ಪಳರ್ಕದಳಿಯುಂ ಜಿಜ್ಜನುಂ ನಲ್ಕರಿಂಬುಂ
ಕಾಕೊಂಡೀಡುಂ ವಟುದಿಸಕಳುಂ ಮಂದಿರೇ ಮಲ್ಪ್ರಿಯಾಯಾಃ೬

(ನನ್ನ ಪ್ರಿಯತಮೆಯ ಮನೆಯ ಮುಂದೆ ಮಾವಿನಮರಗಳಿವೆ. ಅವುಗಳಿಗೆ ನಾಲ್ಕರಷ್ಟು ತೆಂಗಿನ ಮರಗಳಿವೆ. ಆ ತೆಂಗಿನ ತೋಟದ ನಡುವೆ ಅಡಕೆ ಮರಗಳಿವೆ. ಒಂದು ಅಡಕೆ ಮರಕ್ಕೂ ಮತ್ತೊಂದಕ್ಕೂ ನಡುವೆ ಕದಳಿಗಳು ಸೊಂಪಾಗಿ ಬೆಳೆದಿವೆ. ಸಮೀಪದಲ್ಲಿಯೇ ಬೆಳೆದುಬಂದ ಕಬ್ಬಿನ ಗದ್ದೆಗಳನ್ನು ನೀನು ಕಾಣುತ್ತೀಯೇ.)

ಇಷ್ಟಫಲಪ್ರಾಪ್ತಿಯಲ್ಲಿ ಕಲ್ಪವಲ್ಲಿಯಾದ ನಿದ್ರಾದೇವಿಯನ್ನು ಆವಾಹನೆ ಮಾಡಲು ತನ್ನ ವದನಕಮಲದಲ್ಲಿ ನಿದ್ರಾದೇವಿಯ ಪೀಠವನ್ನು ಪೂಜಿಸಿ ಪರಿಚರ್ಯೆಯಿಂದ ಆಯಾಸಗೊಂಡ ಪರಿಜನರನ್ನು ಮಲಗಲು ಕಳುಹಿಸಿ ತಾನೊಬ್ಬಳೇ ಮೃದುತಲ್ಪದ ಮೇಲೆ ಕಣ್ಣುಬಿಟ್ಟುಕೊಂಡು ಮೌನವಾಗಿ ನನ್ನನ್ನು ಕುರಿತು ಯೋಚಿಸುತ್ತ ಮಲಗಿರುತ್ತಾಳೆ.

ನನ್ನ ಪ್ರಿಯತಮೆ ಯೋಚನೆಯಿಂದ ಕುಗ್ಗಿಹೋಗಿದ್ದಾಳೆ. ಕಣ್ಣುಗಳಲ್ಲಿ ನೀರಾಡುತ್ತಿರುತ್ತವೆ. ಮಧ್ಯೆಮಧ್ಯೆ ನಿಟ್ಟುಸಿರು ಬಿಡುತ್ತಾಳೆ. ರಾಮಾಯಣದ ಕಥಾಭಾಗಗಳನ್ನು ಜ್ಞಾಪಿಸಿಕೊಳ್ಳುತ್ತಾಳೆ. 'ದುಃಖೇ ದುಃಖಪ್ರಚುರ ಚರಿತಾನ್ಯೇವ ಸಿದ್ಧೌಷಧಾನಿ'— ದುಃಖದಲ್ಲಿರುವವರಿಗೆ ದುಃಖದ ಕಥೆಗಳೇ ಅಲ್ಲವೆ ಸಿದ್ಧೌಷಧಗಳು ? ಅಪರಿಚಿತನಾಗಿ ನೀನು ಹೋದಾಗ ಅವಳು ಗಾಬರಿಗೊಳ್ಳಬಹುದು, ಭಯಗೊಳ್ಳಬಹುದು— ಮೊದಲು ನಿನ್ನ ಪರಿಚಯ ಮಾಡಿಕೊಳ್ಳು.

"ನನ್ನ ಮನೆ ವೇಣಾಡಿನಲ್ಲಿ ತೃಪ್ಪಾಪಾರಿನಲ್ಲಿದೆ. ನನ್ನ ಹೆಸರು ಆದಿತ್ಯವರ್ಮ. ಈಗ ಆಳುತ್ತಿರುವ ಇರವಿವರ್ಮನ ನಂತರ ನಾನೇ ವೇಣಾಡಿನ ರಾಜ" ಎಂದು ಹೇಳು. ಅದನ್ನು ಕೇಳಿದ ಕೂಡಲೇ ಅವಳು ವಿರಹದುಃಖದಲ್ಲಿರುವವಳಾದರೂ ನಿನ್ನನ್ನು ಸತ್ಕರಿಸುತ್ತಾಳೆ. ಅನಂತರ ನನ್ನ ವಾರ್ತೆಯನ್ನು ಹೇಳುವುದಕ್ಕೆ ಪ್ರಾರಂಭಿಸು. "ಮುಂಡಯ್ಕಲ್ ಸುಂದರೀ, ಮೂರುದಿನಗಳ ಹಿಂದೆ ನಿನ್ನ ಕಾಂತನನ್ನು ನಾನು ಭೇಟಿ ಮಾಡಿದ್ದೆ. ತಿರುವನಂತಪುರದಲ್ಲಿ ಶ್ರೀಪದ್ಮನಾಭಸ್ವಾಮಿಯ ದೇವಾಲಯದಲ್ಲಿದ್ದರೂ ದೀನನಾಗಿ, ಕಾಮಪರವಶನಾಗಿ ನಿನ್ನನ್ನೇ ಧ್ಯಾನಿಸುತ್ತಿದ್ದಾನೆ" ಎಂದು ಹೇಳು.

"ನಾನು ಪದ್ಮನಾಭಸ್ವಾಮಿಯ ದೇವಾಲಯಕ್ಕೆ ಹೋದಾಗ ಅದೃಷ್ಟವಶಾತ್ ಎಚ್ಚರಗೊಂಡ. ತುಂಬ ಶೋಕತಪ್ತನಾಗಿ ಎದ್ದುಕುಳಿತ. ನಿನ್ನನ್ನು ಕಾಣದೆ ಮಾರತಾಪದಿಂದ

---

೬ ಉ. ಸಂ. ಸಂ : ಉತ್ತರ ಸಂದೇಶ ಪದ್ಯ–೪೧.

ಬೇಯುತ್ತಿದ್ದ. ನನ್ನೊಡನೆ ತನ್ನ ಸ್ಥಿತಿಯನ್ನು ನಿನಗೆ ತಿಳಿಸು ಎಂದು ಹೇಳಿದ. ದೀನರಕ್ಷಣೆ ಮಾಡುವುದು ನಮ್ಮ ವಂಶದ ಪಾರಂಪರ್ಯ. ಆದ್ದರಿಂದ ನಾಸಿಲ್ಲಿಗೆ ಬಂದೆ ಎಂದು ಹೇಳು."

ಮಾರಜ್ವಾಲಾಲಿರಿಪನುಡನೇ ಕಣ್ಣುನೀರಾಲ್‌ಕ್ಕುಳಿಪ್ಪನ್
ತಾಪೋದ್ರೇಕಾತ್ ಪ್ರಗಯ್ಪನಬಿಲ್ವನ್ ಚಂದ್ರಿಕಾಚಂದನೇನ
ಭೃಂಗಶ್ರೇಣೀ ಪರಭೃತಕುಲಂ ಕೂವಿನಾಲ್‌ನೋವನುಳ್ಳಿಲ್
ತ್ತೆನ್ನಲ್ ಕಾಟ್ಟೇಟ್ಟುರುಕುವನಹಂ ನಿನ್‌ಪಿಯೋಗಾದಿದಾನೀಂ

(ನಾನು ನಿನ್ನನ್ನು ಅಗಲಿ ದೂರದಲ್ಲಿದ್ದೇನೆ. ಕಾಮತಾಪದಿಂದ ಬೆಂದುಹೋಗು ತ್ತಿದ್ದೇನೆ; ಕಣ್ಣೀರಿನಿಂದ ಸ್ನಾನಮಾಡುತ್ತಿದ್ದೇನೆ; ತಾಪಾಧಿಕ್ಯದಿಂದ ನನ್ನ ದೇಹದಿಂದ ಹೊಗೆಬರುತ್ತಿದೆ; ಬೆಳದಿಂಗಳು ಸುಡುತ್ತಿದೆ. ದುಂಬಿ, ಕೋಗಿಲೆಗಳ ನಾದವನ್ನು ಕೇಳಿ ದಾಗ ನನ್ನ ಅಂತರಂಗ ನೋವನ್ನನುಭವಿಸುತ್ತಿದೆ. ತಂಗಾಳಿ ನನ್ನ ದೇಹವನ್ನು ದಹಿಸು ತ್ತಿದೆ— ಇದು ನನ್ನ ಈಗಿನ ಸ್ಥಿತಿ. ಇದನ್ನು ನನ್ನ ಪ್ರಿಯತಮೆಗೆ ತಿಳಿಸು).

"ಇಷ್ಟನ್ನೆಲ್ಲ ಹೇಳಿದರೂ ಅವಳಿಗೆ ನೀನು ನೀಡುವ ಸಂದೇಶ ಸುಳ್ಳಾಗಿರಬಹುದಲ್ಲವೇ? ಎಂಬ ಸಂಶಯ ಸ್ವಲ್ಪಮಟ್ಟಿಗಾದರೂ ಉಂಟಾಗಬಹುದು. ಆದಕ್ಕಾಗಿ ನಿನ್ನ ಮಾತ ನ್ನೆಲ್ಲ ಸಂಪೂರ್ಣವಾಗಿ ನಂಬುವಂತಹ, ಅವಳಿಗೆ ಮತ್ತು ನನಗೆ ಮಾತ್ರ ತಿಳಿದಿರುವ ಅವಳ–ನನ್ನ ಜೀವನದ ಒಂದು ಗುಟ್ಟಿನ ಸಂಗತಿಯನ್ನು ತಿಳಿಸುತ್ತೇನೆ. ಆ ಸಂಗತಿ ಯನ್ನು ನೀನು ತಿಳಿಸಿದಾಗ ನಿನ್ನ ಬಗ್ಗೆ, ನೀನು ನೀಡುವ ಸಂದೇಶದ ಬಗ್ಗೆ ಅವಳಿಗೆ ಸಂಶಯವೇ ಇಲ್ಲದಾಗುತ್ತದೆ. ಆದುದರಿಂದ ನಿನಗೆ ನನ್ನ ಮತ್ತು ನನ್ನ ಪ್ರಿಯತಮೆಯ ಜೀವನದಲ್ಲಿ ನಡೆದ ಒಂದು ಘಟನೆಯನ್ನು ಮಾತ್ರ ತಿಳಿಸುತ್ತೇನೆ, ಕೇಳು :

"ಒಂದುದಿನ ನಾನೂ ಉಣ್ಣುನೀಲಿಯೂ 'ತಳಿಯಲ್' ದೇವಾಲಯಕ್ಕೆ ಹೋಗಿದ್ದೆವು. ಅಲ್ಲಿ ಒಬ್ಬಳು ನಜ್ಜಯಾರ್ ದೇವದಾಸಿ ನರ್ತನ ಮಾಡುತ್ತಿದ್ದಳು. ಅವಳು ನಮ್ಮಿಬ್ಬ ರನ್ನೂ ನೋಡಿದಳು. ಆ ದೇವದಾಸಿ ನನಗೂ ಅವಳಿಗೂ ಇದ್ದ ಪೂರ್ವಸಂಬಂಧವನ್ನು ಉಣ್ಣುನೀಲಿ ಹಾಳುಮಾಡಿದಳು ಎನ್ನುವ ಅರ್ಥ ಬರುವಂತೆ ಪ್ರಾಕೃತದಲ್ಲಿ ಮಾತನಾಡಿ ದಳು. ಅದನ್ನು ಕೇಳಿದ ಉಣ್ಣುನೀಲಿ ಕುಪಿತಳಾಗಿ ನನ್ನನ್ನು ಬಿಟ್ಟು ಆ ದೇವಾಲಯ ದಿಂದ ಹೊರಟುಹೋಗಿದ್ದಳು."

"ಈ ಸಂಗತಿಯನ್ನು ಉಣ್ಣುನೀಲಿಗೆ ತಿಳಿಸಿದಾಗ ಅವಳು ನೀನು ನೀಡುವ ಸಂದೇಶ ವಾರ್ತೆಯನ್ನು ಸಂಪೂರ್ಣವಾಗಿ ನಂಬುತ್ತಾಳೆ."

ನಾಯಕ ಉಣ್ಣುನೀಲಿಯನ್ನು ಅಗಲಿದಂದಿನಿಂದ ಮೂರುದಿನಗಳ ವರೆಗಿನ ತನ್ನ ಸ್ಥಿತಿ ಯನ್ನು ಆದಿತ್ಯವರ್ಮನಿಗೆ ವಿವರಿಸುವ ಈ ಸಂದೇಶಕಾವ್ಯದಲ್ಲಿ ಅಂದಿನ ದೇವಾಲಯಗಳು, ದೇವದಾಸಿಯರು ಮತ್ತು ರಾಜರುಗಳನ್ನು ಪ್ರಧಾನವಾಗಿ ದೃಷ್ಟಿಯಲ್ಲಿಟ್ಟುಕೊಂಡ

ರಚಿಸಲಾಗಿದೆ. ಉಣ್ಣುನೀಲಿ ಸಂದೇಶ ಒಂದು ಸಂದೇಶಕಾವ್ಯವಾದರೂ ಚಾರಿತ್ರಿಕವಾಗಿಯೂ ಈ ಗ್ರಂಥಕ್ಕೆ ಮಹತ್ವವಿದೆ. ರಾಮಚರಿತಂ ಪಾಟ್ಟು ಕೃತಿಯನ್ನು ಬಿಟ್ಟರೆ ಕ್ರಿ. ಶ. ಹದಿನಾಲ್ಕನೆಯ ಶತಮಾನದ ವರೆಗಿನ ಕೇರಳ ಸಾಹಿತ್ಯಚರಿತ್ರೆಯಲ್ಲಿ ಶೃಂಗಾರರಸ ಪ್ರಧಾನವಾದ ಕೃತಿಗಳನ್ನು ಮಾತ್ರ ಕಾಣಲು ಸಾಧ್ಯ.

**ಕೋಕಿಲಸಂದೇಶ :** ಮೇಘಸಂದೇಶವನ್ನು ಅನುಕರಿಸಿ ಕೇರಳದಲ್ಲಿ ಸಂದೇಶಕಾವ್ಯಗಳು ಉಗಮಗೊಂಡವೆಂದು ಮೇಲೆ ತಿಳಿಸಿದಂತೆ ಕೇರಳದ ಶುಕಸಂದೇಶವನ್ನು ಅನುಕರಿಸಿ 'ಉಣ್ಣುನೀಲಿಸಂದೇಶ', 'ಕೋಕಿಲಸಂದೇಶ', 'ಕಾಮಸಂದೇಶ' ಮೊದಲಾದ ಶೃಂಗಾರಕಾವ್ಯಗಳು ಜನ್ಮತಾಳಿದವು. ಈ ಕಾವ್ಯಗಳು ಕೇರಳ ಚರಿತ್ರೆಯ ರಚನೆಗೆ ತುಂಬ ಸಹಾಯವನ್ನೊದಗಿಸಿವೆ. ಕೋಕಿಲಸಂದೇಶದ ಕಾಲವನ್ನು ಸ್ಪಷ್ಟವಾಗಿ ಗುರುತಿಸುವುದಕ್ಕಾಗಿಲ್ಲವಾದರೂ ಉಣ್ಣುನೀಲಿಸಂದೇಶದ ನಂತರದ ಕಾವ್ಯವೆಂದು ಹೇಳಬಹುದು. ಉದ್ದಂಡಶಾಸ್ತ್ರಿಗಳು ಈ ಕಾವ್ಯದ ಕರ್ತೃ. ನಾಯಕನೂ ಶಾಸ್ತ್ರಿಯೇ. ಕಾರಣಾಂತರದಿಂದ ವಿರಹ, ದುಃಖವನ್ನನುಭವಿಸಬೇಕಾಗಿ ಬಂದ ನಾಯಕ 'ಚಂದಮಂಗಲ'ದ 'ಮಾರಕ್ಕರ' ಎನ್ನುವ ಮನೆಯ ಸುಂದರಿಗೆ ಕಾಂಚೀಪುರದಿಂದ ಒಂದು ಸಂದೇಶವನ್ನು ಕಳುಹಿಸಿದುದು ಕೋಕಿಲಸಂದೇಶದ ಕಥಾವಸ್ತು.

ಸಹ್ಯಾದ್ರಿ, ತಿರುನೆಲ್ಲಿ, ಬಡಗು ಕೋಟ್ಟಯಂ, ಪೆರಿಂಚೆಲ್ಲೂರ್, ತೃಚ್ಚಂಬಲಂ, ಕಲ್ಲಿಕೋಟೆ, ಭಾರತನದಿ, ತಿರುನಾವಾಯ, ಮಾಮಾಂಕಂ, ತ್ರಿಚ್ಚೂರು, ಪೆರುವನಂ, ಊರಕಂ, ಇರಿಞಾಲಕುಡಂ, ಕೊಡುಂಗಲ್ಲೂರು, ತಿರುವಂಚಿಕುಳಂ, ಪೆರಿಯಾರ್, ಚಂದಮಂಗಲಂ ಮೊದಲಾದ ಸ್ಥಳಗಳನ್ನೆಲ್ಲ ಕವಿ ವರ್ಣಿಸಿದ್ದಾನೆ.

**ಕಾಮಸಂದೇಶ :** ಮಾತೃದತ್ತನ್ ಎನ್ನುವ ಕವಿ ಕಾಮದೇವನ ಮೂಲಕ ತಿರುನಾವಾದಲ್ಲಿ ವಾಸಿಸುವ ತನ್ನ ಪ್ರಿಯತಮೆಗೆ ಸಂದೇಶವನ್ನು ಕಳುಹಿಸಿಕೊಡುವುದು, ಕಾಮಸಂದೇಶದ ಕಥಾವಸ್ತು. ಚಾರಿತ್ರಿಕ ದೃಷ್ಟಿಯಿಂದ ಈ ಕಾವ್ಯ ಮೇಲಿನ ಕಾವ್ಯಗಳಷ್ಟೇ ಮಹತ್ವವನ್ನು ವಹಿಸುತ್ತದೆ.

೧೩೭ ಶ್ಲೋಕಗಳುಳ್ಳ ಈ ಕಾವ್ಯದಲ್ಲಿ ಚಿದಂಬರಂ, ಶಿವಗಂಗೆ, ಕಾವೇರಿ, ತಿರುವಿಡೆಮರುತ್ತೂರ್, ಕುಂಭಕೋಣಂ, ಶ್ರೀರಂಗಂ, ಕೊಂಕಣಂ, ಪೇರೂರು, ಸಹ್ಯಾದ್ರಿ ಪರ್ವತ, ಮಂಗಲಂ, ತ್ರಿಚೂರು, ಶುಕಪುರ, ಕೊಡಿಕುನ್ನು, ವೆಳ್ಳಿಯಾನ್‌ಕಲ್ಲು, ಭಾರತಹೊಳೆ, ತಿರುನಾವಾಯ— ಈ ಮೊದಲಾದ ಸ್ಥಳಗಳನ್ನು ಈ ಕಾವ್ಯದಲ್ಲಿ ವರ್ಣಿಸಲಾಗಿದೆ.

ಮೇಲಿನ ಸಂದೇಶಕಾವ್ಯಗಳ ಕಾಲ, ವಸ್ತು, ಶೈಲಿಯನ್ನು ಗಮನಿಸಿದಾಗ ಮಲಯಾಳ ಸಾಹಿತ್ಯಚರಿತ್ರೆಯ ಉಗಮ ವಿಕಾಸಗಳಿಗೆ ದೇವದಾಸಿಯರ ಚರಿತ್ರೆಗಳು— ಅವರನ್ನು ಕುರಿತು ರಚಿಸಿದ ಸಂದೇಶಕಾವ್ಯಗಳು— ಕಾರಣವಾಗಿವೆಯೆನ್ನುವುದು ಸ್ಪಷ್ಟವಾಗುತ್ತದೆ.

ಮಲಯಾಳ, ದ್ರಾವಿಡಗೋತ್ರಗಳಲ್ಲಿ ಒಂದು— ಪ್ರಾರಂಭಕಾಲದ ಮಲಯಾಳ ಸಾಹಿತ್ಯವು ರಾಮಾಯಣ, ಮಹಾಭಾರತ ಮುಂತಾದ ಕಾವ್ಯಗಳ ಪ್ರಭಾವಕ್ಕೊಳಗಾಗುವುದರ ಬದಲು ಮೇಘಸಂದೇಶ ಮೊದಲಾದ ಸಂಸ್ಕೃತ ಶೃಂಗಾರಕಾವ್ಯಗಳ ಪ್ರಭಾವಕ್ಕೊಳಗಾಗಿರುವುದು ವಿಶೇಷ ಸಂಗತಿ. ಪ್ರಾರಂಭದಲ್ಲಿ ಪಂಪನ ಕಾವ್ಯ ತೆಲುಗಿನ ನನ್ನಯಭಟ್ಟನ ಮೇಲೆ ಪ್ರಭಾವ ಬೀರಿದೆ— ತಮಿಳಿನ 'ಪೆರಿಯ ಪುರಾಣಂ' ಕನ್ನಡದಲ್ಲಿ ಶಿವಶರಣರ ರಚನೆಗೆ ಸಹಾಯಕವಾಗಿದೆ. ಮಲಯಾಳದ ಸಂದೇಶಕಾವ್ಯ ಅಥವಾ ಮತ್ತಾವುದೇ ಪ್ರಕಾರಗಳಿಗೆ ತೆಲುಗು, ತಮಿಳು ಮತ್ತು ಕನ್ನಡ ಸಾಹಿತ್ಯದ ಶಾಖೆಗಳು ಪ್ರಭಾವವನ್ನುಂಟುಮಾಡಿಲ್ಲ. ಹಾಗೆಯೇ ಮಲಯಾಳ ಸಾಹಿತ್ಯಪ್ರಕಾರಗಳ ಪ್ರಭಾವ ಇತರ ದ್ರಾವಿಡ ಸಾಹಿತ್ಯಕೃತಿಗಳ ಮೇಲೂ ಆಗಿಲ್ಲವೆಂದು ಸ್ಥೂಲವಾಗಿ ಹೇಳಬಹುದು.



# ಉರ್ದುಕಾವ್ಯದ ಒಂದು ವೈಶಿಷ್ಟ್ಯ : ತಜ್‌ಮೀನ್

□ □ □ □ □ □ □ □ □ □ □ □ □ □ □ □ □ □

ಶಾಂತರಸ

□ □ □ □ □ □ □ □ □ □ □ □ □ □ □ □ □ □

ಭಾರತೀಯ ಭಾಷೆಗಳ ಕಾವ್ಯಗಳಿಗೆ ಇದ್ದಷ್ಟು ಪುರಾತನ ಇತಿಹಾಸ ಉರ್ದು ಕಾವ್ಯಕ್ಕಿಲ್ಲ; ಆದರೆ ಈ ಕಾವ್ಯ ಅನೇಕ ವೈಶಿಷ್ಟ್ಯಗಳಿಂದ ಕೂಡಿದೆ.

ಮಹಮ್ಮದೀಯರು ಭಾರತಕ್ಕೆ ಬಂದ ಬಳಿಕ ಉರ್ದುಭಾಷೆ ಮತ್ತು ಉರ್ದುಕಾವ್ಯ ಜನ್ಮತಳೆದವು ಎಲ್ಲ ಭಾಷೆಯಲ್ಲಿ ಆಗುವಂತೆ ಉರ್ದುಭಾಷೆಯಲ್ಲಿಯೂ ಮೊದಲು ಕಾವ್ಯವೇ ಸೃಷ್ಟಿಯಾಯಿತು. ಕಾವ್ಯಕ್ಕೆ ಮೂಲಪುರುಷ ಅಮೀರ್ ಖುಸ್ರು; ಈತನ ಕಾಲ ೧೩ನೆಯ ಶತಮಾನ. ಮಹಮ್ಮದೀಯರ ಆಗಮನವಾದ ಬಳಿಕ ೧೨ನೆಯ ಶತಮಾನದಲ್ಲಿಯೂ ಉರ್ದುಕಾವ್ಯದ ಸುಳುಹು ಇತ್ತೆಂದು ಪಂಡಿತರ, ಸಂಶೋಧಕರ ಅಭಿಪ್ರಾಯವಾಗಿದೆ.

ಈ ಭಾಷೆಗೆ ಉರ್ದು ಎಂದು ಹೆಸರು ಬಂದುದು ಮೊಗಲ ಅರಸರ ಕಾಲದಲ್ಲಿ; ಉರ್ದು ಎಂದರೆ ಮಿಶ್ರ ಎಂದರ್ಥವಾಗುತ್ತದೆ. ಫಾರಸಿ, ಅರಬಿ– ಇವುಗಳ ಜೊತೆಗೆ ಭಾರತೀಯ ಭಾಷೆಗಳ ವಿಪುಲ ಶಬ್ದಗಳ ಸಮ್ಮಿಶ್ರ ಉರ್ದುಭಾಷೆ; ಈ ಭಾಷೆ ಸತ್ವಸ್ಥವಾದಂತೆ ಸುಮಧುರವೂ ಆಗಿದೆ.

ಉರ್ದುಭಾಷೆ ಉತ್ಕರ್ಷ ಹೊಂದಿದ್ದು ದಕ್ಷಿಣ ಹಿಂದುಸ್ತಾನದ ಗುಲ್ಬರ್ಗಾ, ವಿಜಾಪುರ, ಗೋವಳಕೊಂಡ ಮೊದಲಾದ ಅರಸರ ಓಲಗಗಳಲ್ಲಿ. ಆ ಬಳಿಕ ಉತ್ತರದ ಮಹಮ್ಮದೀಯ ಅರಸರು ಇದನ್ನು ತಮ್ಮ ಓಲಗದ ಭಾಷೆಯನ್ನಾಗಿ ಮಾಡಿಕೊಂಡರು; ಆಗ ಇದಕ್ಕೆ ಉಕ್ಕು ಬಂದಿತು.

ಅಮೀರ್ ಖುಸ್ರು ಫಾರ್ಸಿ-ಹಿಂದೀ ಮಿಶ್ರಭಾಷೆಯಲ್ಲಿ ಕಾವ್ಯ ರಚಿಸಿದ. ಮುಂದೆಬಂದ ಉತ್ತರಭಾರತದ ಉರ್ದು ಕವಿಗಳು ಹೆಚ್ಚಾಗಿ ಫಾರ್ಸಿಪ್ರಿಯರಾಗಿ ಫಾರ್ಸಿಯಲ್ಲಿಯೇ ಕಾವ್ಯ ರಚಿಸಿದರು; ಉರ್ದುವನ್ನು ಕಿಂಚಿತ್ ಬಳಸಿದರು.

ದಕ್ಷಿಣದ ವಲಿ ಔರಂಗಾಬಾದಿ ಅಪ್ಪಟ ಉರ್ದುಪ್ರಿಯ: ಆತ ಶ್ರೇಷ್ಠಕವಿ. ಆತನನ್ನು ಅನುಕರಿಸಿ ಉತ್ತರದ ಕವಿಗಳು ಉರ್ದುವಿನಲ್ಲಿ ಬರೆಯತೊಡಗಿದರು.

೧೮ನೆಯ ಶತಮಾನದ ಪ್ರಾರಂಭಕ್ಕೆ ಉರ್ದುಕಾವ್ಯ ಸತ್ವಪೂರ್ಣವಾಗಿ ಸುಂದರವಾಗಿ ಬೆಳೆದು ಬಂದಿತು. ಅದಕ್ಕೆ ಹೊಸಜೀವ ಹೊಸತಿರುವು ಕೊಟ್ಟವನು ಮೀರ್‌ತಕಿಮೀರ ಮಹಾಕವಿ. ಅನಂತರ ಗಾಲಿಬನ ಉದಯವಾಗಿ ಉರ್ದುಕಾವ್ಯ ಹೊಸಕ್ಷಿತಿಜ ತೆರೆದುಕೊಂಡಿತು. ಕಾವ್ಯ ತನ್ನ ಔನ್ನತ್ಯಕ್ಕೆ ಮುಟ್ಟಿತು. ಕಾವ್ಯತತ್ವ, ದರ್ಶನ, ಸಮಕಾಲೀನಪ್ರಜ್ಞೆ ಮುಂತಾದವುಗಳಿಂದ ಉರ್ದುಕಾವ್ಯಲೋಕದ ಇನ್ನಿತರ ಕಾವ್ಯಗಳ ಸರಿಜೋಡಿಯಾಗಿ ನಿಲ್ಲುವ ಸಾಹಸಮಾಡಿತು

ಮೀರ್, ನಜೀರ್ ಅಕ್ಬರಾಬಾದಿ, ಗಾಲಿಬ್, ಇಕ್ಬಾಲ್, ಹಾಲಿ ಅಕ್ಬರ್ ಅಲಹಾಬಾದಿ, ಚಕ್‌ಬಸ್ತ್ ಮುಂತಾದ ಕವಿಗಳು ಉರ್ದುಕಾವ್ಯವನ್ನು ಸಮೃದ್ಧವಾಗಿ ಬೆಳೆಸಿದರು.

ಇಂದಿನ ಕವಿಗಳಲ್ಲಿ ಜೋಷ್ ಮಲಹಾಬಾದಿ, ಸಾಹಿರ್ ಲುಧಿಯಾನ್ವಿ, ಸರದಾರ ಜಾಫರಿ, ಫಿರಾಕ್ ಗೋರಖಪುರಿ, ಮಜರೂಹ ಸುಲ್ತಾನಪುರಿ, ಜಗನ್ನಾಥ ಆಜಾದ್, ಫೈಜ್ ಅಹಮ್ಮದ್ ಫೈಜ್, ಜಿಗರ್ ಮುರಾದಾಬಾದಿ, ಮಖದುಮ್ ಮೋಹಿಯುದ್ದೀನ್, ಹಫೀಜ್, ಮಂಜರ್ ಉಲ್ ಅಮೀನ್, ಕರ್ನಾಟಕದ ರಾಘವೇಂದ್ರ ಜಜ್ಜ, ಹಮೀದ್ ಅಲ್ಮಾಸ್, ಡಾ. ಕೆ. ಮುದ್ದಣ್ಣ (ಮಂಜರ್) ಮೊದಲಾದವರು ಹೆಸರಾದವರು.

ಇವರಲ್ಲಿ ಫಿರಾಕ್ ಗೋರಖಪುರಿ ಅತ್ಯಂತ ಹೆಸರಾದವರು. ಗಾಲಿಬನ ತರುವಾಯ ಬಹುಸುಂದರ ಸತ್ವಪೂರ್ಣ ಗಜಲ್ ಬರೆದವರು ಇವರೇ. ಇವರ ಗಜಲುಗಳ ಸಂಗ್ರಹಕ್ಕೆಯೇ ಜ್ಞಾನಪೀಠ ಪ್ರಶಸ್ತಿ ದೊರಕಿದೆ.

ಉರ್ದುಕಾವ್ಯ ಭಾರತೀಕರಣವಾಗಲಿಲ್ಲ; ಆ ಲೋಕದಲ್ಲಿ ಬರುವ ಉದಾಹರಣೆಗಳು, ಉಪಮೆಗಳು, ರೂಪಕಗಳು ಫಾರಸಿಯಿಂದ ಬಂದುವೇ: ಇರಾನ್-ಇರಾಕದ ನದನದಿ ಬೆಟ್ಟಗಳು, ಅಲ್ಲಿಯ ಪೌರಾಣಿಕರು ಈ ಕವಿಗಳಿಗೆ ಪ್ರಿಯರು. ಫಾರಸಿ ಕಾವ್ಯಲೋಕವೇ ಈ ಕವಿಗಳಿಗೆ ಆದರ್ಶಲೋಕ.

ಹೀಗಿದ್ದರೂ ಉರ್ದುಕಾವ್ಯ ಹಲವು ವೈಶಿಷ್ಟ್ಯಗಳಿಂದ ಲೋಕಪ್ರಿಯವಾಗಿದೆ: ಗಜಲ್, ಕಸೀದಾ (ಹೊಗಳಿಕೆ), ಮರ್ಸಿಯಾ (ಶೋಕಗೀತೆ), ಮಸ್‌ನವಿ (ಕಥನ ನೀಳ್ಗವಿತೆ), ಮುಸದ್ದಸ್ (ಷಟ್ಪದಿ), ಖಿಮಾಸ್ (ಪಂಚಪದಿ) ಮತ್ತು ತಜ್‌ಮೀನ್.

'ಗಜಲ್' ಅಂತೂ ಉರ್ದುಕಾವ್ಯದ ಆತ್ಮ. ಸೌಂದರ್ಯ, ಪ್ರೇಮ, ಮೋಹ, ದರ್ಶನ ಯೋಗ, ತತ್ವಜ್ಞಾನ, ಲೋಕಜ್ಞಾನ ಮುಂತಾದವುಗಳಿಂದ ಗಜಲ್, ಪ್ರಪಂಚದ ಸಾಹಿತ್ಯದಲ್ಲಿ ಏಕಮೇವಾದ್ವಿತೀಯವೆನಿಸಿದೆ. ಇದರ ಪ್ರತಿದ್ವಿಪದಿಗೆ ಅರ್ಥವ್ಯತ್ಯಾಸ

ವಾಗುತ್ತದೆ: ವಿಷಯ ವ್ಯತ್ಯಾಸವಾಗುತ್ತದೆ. ಒಂದು ಗಜಲ್‌ದಲ್ಲಿ ಅನೇಕ ವಿಷಯ ಗಳನ್ನೊಳಗೊಂಡ ಅನೇಕ ದ್ವಿಪದಿಗಳಿರಬಹುದು.

ಉರ್ದು ಕವಿಗೋಷ್ಠಿಯೂ ಒಂದು ವೈಶಿಷ್ಟ್ಯವುಳ್ಳದಾಗಿದೆ. ಕವಿಗೋಷ್ಠಿಯ ಅಧ್ಯಕ್ಷನಿಗೆ ಯಾರದಾದರೂ ಒಂದು ಕವಿತೆ ಉತ್ಕೃಷ್ಟವೆನಿಸಿದರೆ, "ಈ ಗೋಷ್ಠಿಯಲ್ಲಿ ಈ ಕವಿತೆ ಉತ್ಕೃಷ್ಟವಾದುದು, ಇಂದಿಗೆ ಈ ಗೋಷ್ಠಿ ಸಾಕು, ಮುಂದೆ ಯಾರೂ ಕವಿತೆ ಗಳನ್ನು ಓದುವುದು ಬೇಡ" ಎಂದು ಕವಿಗೋಷ್ಠಿಯನ್ನು ರದ್ದುಗೊಳಿಸಬಹುದು.

**ತಜ್‌ಮೀನ್ :** ಉರ್ದುಕಾವ್ಯದಲ್ಲಿ ತಜ್‌ಮೀನ್ ತನ್ನದೇ ಆದ ಒಂದು ವೈಶಿಷ್ಟ್ಯ ವುಳ್ಳದಾಗಿದೆ. ಬಹುಶಃ ಪ್ರಪಂಚದ ಯಾವುದೇ ಭಾಷೆಯಲ್ಲಿ (ಫಾರ್ಸಿ ಬಿಟ್ಟು) ಈ ಬಗೆಯ ರಚನೆ ಇಲ್ಲ. ಕನ್ನಡದಲ್ಲಿಯ 'ಸಮಸ್ಯಾಪೂರ್ತಿ' ಕಾವ್ಯಪದ್ಧತಿಗೆ ಇದು ತುಸು ಮಟ್ಟಿಗೆ ಹೋಲಿಕೆಯುಳ್ಳದಾದರೂ ಮೂಲತಃ ಅವುಗಳ 'ಜಾತಿ' ಬೇರೆ, 'ಪದ್ಧತಿ' ಬೇರೆ, 'ರೀತಿ' ಬೇರೆ.

ತಜ್‌ಮೀನ್ ಎಂದರೆ ಸೇರಿಸುವುದು. ಅಂಟಿಸುವುದು ಎಂದು ಕೋಶದ ಅರ್ಥ. ಲಾಕ್ಷ ಣಿಕ ಅರ್ಥ ಬೇರೆಯೇ ಇದೆ. ಬೇರೆಯವರ ಕಾವ್ಯವನ್ನು ತನ್ನ ಕಾವ್ಯದಲ್ಲಿ ತರು ವುದು; ಬೇರೆಯವರ ಕಾವ್ಯಕ್ಕೆ ತನ್ನ ಕಾವ್ಯ ಸೇರಿಸಿ ಪಂಚಪದಿಯನ್ನೋ ಅಥವಾ ಷಟ್ಪದಿಯನ್ನೋ ಮಾಡುವುದು ತಜ್‌ಮೀನ್. ಹೆಚ್ಚಾಗಿ ಪಂಚಪದಿಗಳನ್ನೇ ಮಾಡುತ್ತಾರೆ.

ಬಹುಮಟ್ಟಿಗೆ ಗಜಲ್‌ದ ದ್ವಿಪದಿಯನ್ನು ತೆಗೆದುಕೊಳ್ಳುತ್ತಾರೆ. ತಾವು ಮೂರು ಸಾಲುಗಳನ್ನು ಹೆಣೆದು ಅವುಗಳ ಕೆಳಗೆ ಆರಿಸಿಕೊಂಡ ದ್ವಿಪದಿಯನ್ನಿಡುತ್ತಾರೆ. ಆಗ ಪಂಚಪದಿ ಆಗುತ್ತದೆ. ಈ ಪಂಚಪದಿಯ ಅರ್ಥ ಒಂದೇ ಆಗಿಬಿಡುತ್ತದೆ. ಬೇರೆ ಯವರ ಗಜಲ್‌ದಿಂದ ತೆಗೆದುಕೊಂಡ ದ್ವಿಪದಿಯ ಅರ್ಥ ಮತ್ತು ತಾವು ಹೆಣೆದ ತ್ರಿಪದಿಯ ಅರ್ಥದಲ್ಲಿ ವ್ಯತ್ಯಾಸ ಬರದೆ ಆ ಐದು ಸಾಲುಗಳು ಅರ್ಥದ ದೃಷ್ಟಿಯಿಂದ ಒಂದೇ ಆಗಿ ಹಾಲು-ಸಕ್ಕರೆಯಂತೆ ಆ ಸಾಲುಗಳು ಕೂಡಿಕೊಳ್ಳುತ್ತವೆ. ಒಂದು ದೃಷ್ಟಿಯಿಂದ ಬೇರೆ ಕವಿಗಳಿಂದ ತೆಗೆದುಕೊಂಡ ದ್ವಿಪದಿಗೆ ತ್ರಿಪದಿಯ ರಚನೆಯಿಂದ ಭಾಷ್ಯ ಬರೆದಂತಿರುತ್ತದೆ: ಆದರೆ ಈ ಭಾಷ್ಯ ಗದ್ಯವಾಗಿರುವುದಿಲ್ಲ; ಕಾವ್ಯಮಯ ವಾಗಿರುತ್ತದೆ ಮತ್ತು ಆ ದ್ವಿಪದಿಯ ಬಂಧ-ಛಂದಗಳನ್ನೇ ಆ ತ್ರಿಪದಿಗಳಿಗೆ ಬಳಸಿರು ತ್ತಾರೆ. ಆದರ ಪ್ರಾಸಕ್ಕೇ ಇವುಗಳಿಗೆ ಬರುತ್ತದೆ. ಹೀಗಾಗಿ ಈ ಪಂಚಪದಿ, ದ್ವಿಪದಿ ಮತ್ತು ತ್ರಿಪದಿಯು ಸಮ್ಮಿಶ್ರ ವಾಗದೆ ಒಂದು 'ಏಕ ಪದ್ಯ'(unit)ವೆನಿಸುತ್ತದೆ.

ತಜ್‌ಮೀನ್ ಉರ್ದುಸಾಹಿತ್ಯದ ಒಂದು ಹಳೆಯ ಪರಂಪರೆ. ಅನೇಕ ಕವಿಗಳು ಈ ವಿಧಾನವನ್ನು ಬಳಸಿ ಪಂಚಪದಿ ರಚಿಸಿದ್ದಾರೆ. ಸಮರ್ಥ ಕವಿಗಳೇ ಈ ವಿಧಾನವನ್ನು ಬಳಸಬಲ್ಲರು. ತಾವು ತೆಗೆದುಕೊಳ್ಳುವ ಕವಿಯ ದ್ವಿಪದಿಯ ಮೂಲಭಾವ ಕೆಡದಂತೆ,

ಆ ಕವಿಗೆ ಅಪಚಾರವಾಗದಂತೆ ಅದೇ ಬಂಧ ಛಂದ ಪ್ರಾಸದಲ್ಲಿ ಆ ಮೂಲಭಾವವನ್ನು ಹಿಗ್ಗಿಸಿ ಇನ್ನಷ್ಟು ಅದಕ್ಕೆ ಸೌಂದರ್ಯಸ್ನಾನ ಮಾಡಿಸುವ ಕೆಲಸ ಹಗುರಾದುದಲ್ಲ. ಆಧುನಿಕಕವಿಗಳಲ್ಲಿ ಅನೇಕರು ತಜ್‌ಮೀನ್ ಹೆಣೆದಿದ್ದಾರೆ. ಕರ್ನಾಟಕದ ಸುಪ್ರಸಿದ್ಧ ಕವಿಗಳಾದ ಡಾ. ಕೆ. ಮುದ್ದಣ್ಣ(ಮಂಜರ್)ನವರು ಗಾಲಿಬನ ದ್ವಿಪದಿಗಳಿಗೆ ತಮ್ಮ ಮೂರುಸಾಲು ಸೇರಿಸಿ ಅರ್ಥಪೂರ್ಣವಾದ ಪಂಚಪದಿಗಳನ್ನು ರಚಿಸಿದ್ದಾರೆ.

'ತಜ್‌ಮೀನ್' ವಿಧಾನಕ್ಕೆ ಇಷ್ಟೆಲ್ಲ ಭವ್ಯಪರಂಪರೆ ಮತ್ತು ಇತಿಹಾಸ ಇದ್ದರೂ ಯಾರೊಬ್ಬರೂ ಅನೇಕ ಪಂಚಪದಿಗಳನ್ನು ರಚಿಸಿ ಪುಸ್ತಕರೂಪದಲ್ಲಿ ಪ್ರಕಟಿಸಲಿಲ್ಲ. ಈ ಕೆಲಸವನ್ನು ಮೊಟ್ಟಮೊದಲಿಗೆ ಮಾಡಿದವರು ಜ್ಞಾನಪೀಠಪುರಸ್ಕೃತವಿಜೇತರಾದ ಫಿರಾಕ ಗೊರಖಪುರಿಯವರು.

ಫಿರಾಕರ "ಗುಲ್‌ಕಾರಿಯಾಂ" ಎಂಬ ಒಂದು ಪಂಚಪದಿಗಳ ಸಂಗ್ರಹ ಪ್ರಕಟವಾಗಿದೆ. ಇದರಲ್ಲಿ ಸುಮಾರು ತೊಂಬತ್ತಕ್ಕೂ ಹೆಚ್ಚು ಪಂಚಪದಿಗಳಿವೆ. ಫಿರಾಕರು ಅನೇಕ ಪ್ರಸಿದ್ಧ ಕವಿಗಳ ದ್ವಿಪದಿಗಳಿಗೆ ಮತ್ತು ತಮ್ಮ ಕೆಲವು ದ್ವಿಪದಿಗಳಿಗೆ ತ್ರಿಪದಿಗಳನ್ನು ಕೂಡಿಸಿ ಪಂಚಪದಿ ಮಾಡಿದ್ದಾರೆ. 'ಗುಲ್‌ಕಾರಿಯಾಂ' ಸಂಗ್ರಹದ ಮುನ್ನುಡಿಯಲ್ಲಿ ಫಿರಾಕರ ಪಂಚಪದಿಗಳ ಬಗ್ಗೆ ಹೀಗೆ ಬರೆಯಲಾಗಿದೆ : "ಫಿರಾಕರು ಪ್ರತಿ ದ್ವಿಪದಿಯ ಜೀವದಲ್ಲಿ ತಮ್ಮ ಜೀವ ಕೂಡಿಸಿದ್ದಾರೆ: ಅವುಗಳ ಧ್ವನಿಯಲ್ಲಿ ತಮ್ಮ ಧ್ವನಿ ಮತ್ತು ಅವುಗಳ ಲಯದಲ್ಲಿ ತಮ್ಮ ಲಯ ಬೆರೆಸಿದ್ದಾರೆ. ಪ್ರತಿ ಪಂಚಪದಿ ಒಂದು ಸ್ವಂತ ಕವನವಾಗಿವೆ; ಪ್ರತಿ ದ್ವಿಪದಿಯ ಅರ್ಥಸೌಂದರ್ಯ ಎಷ್ಟೋ ಪಟ್ಟು ಹೆಚ್ಚಾಗಿದೆ. ಫಿರಾಕರಂತೆ ಈ ರೀತಿ ತಜ್‌ಮೀನ್ ರಚಿಸುವವರು ಸಮಕಾಲೀನರಲ್ಲಿ ಮತ್ಯಾರೂ ಇಲ್ಲ. ಸೆರಗಿಗೆ ಗೋಟ ಅಥವಾ ಜರಿ ಹಚ್ಚುವುದರಿಂದ ಇಂಥ ಸೆರಗು ಬೆಡಗಿನಿಂದ ಬೆಳಗುತ್ತದೆ. ಇದೇರೀತಿ ಫಿರಾಕಸಾಹೇಬರ– ಪ್ರತಿ ದ್ವಿಪದಿಗೆ ಗೋಟ ಅಥವಾ ಜರಿ ಹಚ್ಚಿ ಅದನ್ನು ಬೆಳಗಿಸಿಬಿಟ್ಟಿದ್ದಾರೆ."

'ಗುಲ್‌ಕಾರಿಯಾಂ' ಸಂಕಲನದಿಂದ ಇಲ್ಲಿ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದೇನೆ. ಈ ಪದ್ಯಗಳನ್ನು ಮೂಲಭಾವಕ್ಕೆ ಚ್ಯುತಿ ಬರದಂತೆ ಅನುವಾದಿಸಲು ಪ್ರಯತ್ನಿಸಿದ್ದೇನೆ. ಮೊದಲ ದ್ವಿಪದಿ ಬೇರೆಯವರದು ಎಂದು ತೋರಿಸಲು ಅದರ ಕೆಳಗೆ ಆ ಕವಿಯ ಹೆಸರು ಕೊಟ್ಟಿದೆ. ಅದರ ಕೆಳಗೆ ಪಂಚಪದಿ ಕೊಟ್ಟಿದೆ. ಈ ಪಂಚಪದಿಯಲ್ಲಿ ಮೊದಲ ಮೂರು ಪಾದಗಳು ಫಿರಾಕ ಗೋರಖಪುರಿಯವರವು, ಕೊನೆಯ ದ್ವಿಪದಿ ಮೇಲೆ ಕೊಟ್ಟ ಕವಿಯದೇ.

೧

ನೀನಿರುವೆ ನನ್ನೊಡನೆ ಏಗಳೂ ಎಲೆ ಪ್ರಿಯೆ
ನೀನಿರದ ಹೊತ್ತಾವುದೆನ್ನೊಡನೆ ಎಲೆ ಪ್ರಿಯೆ

—ಮೋಮಿನ್

ದೂರಲಾರೆನು ನಿನಗೆ ಆಗಲಿಕೆಯ ಬಗೆಗೆ
ಒಂಟಿಯಿದ್ದರು ನಾನು ಒಂಟಿಯಾಗಿಲ್ಲ
ಕಲ್ಪನೆಯ ಮಹಿಮೆಯನು ಏನೆಂದು ಹೇಳಲಿ
ನೀನಿರುವೆ ನನ್ನೊಡನೆ ಏಗಳೂ ಎಲೆ ಪ್ರಿಯೆ
ನೀನಿರದ ಹೊತ್ತಾವುದೆನ್ನೊಡನೆ ಎಲೆ ಪ್ರಿಯೆ

೨

ಬೇರೆಯವರಾರಿದ್ದರಿಲ್ಲಿ ಬೇಡಾದವರು
ನೀನು ಬಂದರೆ ಮನೆಯು ನಿನ್ನದೇ ಇತ್ತು

—ಮುಜ್‌ತಿರ್ ಖೈರಾಬಾದಿ

ಏನೊ ಅಡೆತಡೆ ನಿನಗೆ ಬರಲಿಕ್ಕೆ ಪ್ರಿಯೆ
ಏನಾದರೊಂದು ನೆವ ಇದ್ದುದೇ ಇತ್ತು
ಮನೆಯ ಬಾಗಿಲು ನೋಡು ತೆರದೆ ಇತ್ತು
ಬೇರೆಯವರಾರಿದ್ದರಿಲ್ಲಿ ಬೇಡಾದವರು
ನೀನು ಬಂದರೆ ಮನೆಯು ನಿನ್ನದೇ ಇತ್ತು

೩

ಕೈಯೇಳದಿದ್ದರೂ ಕಣ್ಣಲ್ಲಿ ಬಲವಿಹುದು
ಇರಲಿ ಇನ್ನೂ ಮುಂದೆ ಮಧುಪಾತ್ರೆ ಬಟ್ಟಲು

—ಗಾಲಿಬ್

ಅವುಗಳನು ತೆಗೆಯುವುದು ಖಂಡಿತವಿದನ್ಯಾಯ
ಕಡಿಮೆಯೇ ಈ ದುಃಖ ಮನಸು ನೆಮ್ಮದಿಯಿಲ್ಲ
ಕುಡಿಯಲಸಾಧ್ಯವಾದರೂ ಕುಡಿವಾಸೆ ಹಿಂಗಿಲ್ಲ
ಕೈಯೇಳದಿದ್ದರೂ ಕಣ್ಣಲ್ಲಿ ಬಲವಿಹುದು
ಇರಲಿ ಇನ್ನೂ ಮುಂದೆ ಮಧುಪಾತ್ರೆ ಬಟ್ಟಲು

೪

ಆದುದಾಯಿತು ಅದನು ಮರೆತುಬಿಡು ಪ್ರಿಯೆ
ಇರುಳು ಬಂದಿತು ಈಗ ಹೊಸದೀಪ ಮುಡಿಸು

—ಜಾಲಿಬ್ ದೆಹಲ್ವಿ

ಭೆಟ್ಟಿಯಾದೆವು ಮತ್ತೆ ಸಣ್ಣಮಾತೇನು ?
ಸಪ್ಪೆಮುಖವೇತಕ್ಕೆ ಮತ್ತೆ ಏನಾಯಿತು ?
ಬಹುವಿಚಿತ್ರದ ಸ್ಥಿತಿಯು ಉಂಟಾಯಿತಲ್ಲ
ಆದುದಾಯಿತು ಅದನು ಮರೆತುಬಿಡು ಪ್ರಿಯೆ
ಇರುಳು ಬಂದಿತು ಈಗ ಹೊಸದೀಪ ಮುಡಿಸು

೫

ಇದುವೆ ಲೋಕದ ರೀತಿ ಇದುವೆ ಲೋಕದ ನೀತಿ
ಮನದ ಸೋಲೇ ಸೋಲು ಮನದ ಗೆಲುವೇ ಗೆಲುವು

—ಫಿರಾಕ್

ಓ ಫಿರಾಕ ಈ ಮಾತಿಗೆನಿತೊ ದಿನವುರುಳಿದವು
ಹಾಡುತ್ತಿದ್ದನು ಒಬ್ಬ ಸಂನ್ಯಾಸಿ ಈ ಗೀತ
ವೈರಿಗೂ ಪ್ರಿಯನಿಗೂ ಸಮನಾದುದೀ ಗೀತ
ಇದುವೆ ಲೋಕದ ರೀತಿ ಇದುವೆ ಲೋಕದ ನೀತಿ
ಮನದ ಸೋಲೇ ಸೋಲು ಮನದ ಗೆಲುವೇ ಗೆಲುವು

೬

ಕೇಳದಿರು ನೀನಿರದ ಈ ರಾತ್ರಿ ಕಳೆಯಿತೆಂತೆಂದು
ಏನುಫಲ ಈ ಮಾತುಕತೆಯಿಂದ ಹೇಗೋ ಕಳೆಯಿತು ನೋಡು

—ಸೌದಾ

ದೈವದಲೆ ಇರಲಿಲ್ಲ ನಿನ್ನ ನಂದನದ ವಿಹಾರ
ಓ ಸ್ನೇಹವೇ ನಾವು ನಿನಗೇನು ಪರರು ಆಗಿರಲಿಲ್ಲ
ಏನಾಯಿತೋ ನನಗೆ ಏಕದರ ಮಾತೀಗ ಇರಲಿಬಿಡು
ಕೇಳದಿರು ನೀನಿರದ ಈ ರಾತ್ರಿ ಕಳೆಯಿತೆಂತೆಂದು
ಏನುಫಲ ಈ ಮಾತುಕತೆಯಿಂದ ಹೇಗೋ ಕಳೆಯಿತು ನೋಡು

೭

ಸಿರಿಬಸಂತದ ಮಂದಮಾರುತನೆ ಕೆಣಕದಿರು ಹಿಡಿ ನಿನ್ನ ದಾರಿ
ನಿನಗೆ ವಿನೋದದ ಬಯಕೆ ನಾವೊ ಬಲಿಯಾದವರು ಕಳವಳದ ಕಿಡಿಗೆ

—ಇನ್‌ಷಾ ಅಲ್ಲಾಹ್ ಖಾನ್

ಕುಸುಮಗಳನರಳಿಸುವ ಕಜ್ಜವಲ್ಲದೆ ನಿನಗೆ ಬೇರೆ ಮತ್ತೇನಿಹುದು
ಏಸೊ ನೋವಿನ ಗೂಡು ಈ ಬಾಳು ಎಂಬುವುದು ನಿನಗೆಲ್ಲಿ ಗೊತ್ತು
ನಮ್ಮಂಥ ಮಾಳಿಗರ ಬಳಿಹಾಯ್ದು ಲಾಭವಿಲ್ಲದ ಕೆಲಸವಾಯ್ತು
ಸಿರಿಬಸಂತದ ಮಂದಮಾರುತನೆ ಕೆಣಕದಿರು ಹಿಡಿ ನಿನ್ನ ದಾರಿ
ನಿನಗೆ ವಿನೋದದ ಬಯಕೆ ನಾವೊ ಬಲಿಯಾದವರು ಕಳವಳದ ಕಿಡಿಗೆ

೮

ತೊನೆಯುತ್ತ ಬಳುಕುತ್ತ ನಗೆಯ ಸೂಸುತ್ತ
ಅಹ ! ಬರುವನು ನೋಡು ಋತುವಸಂತ

—ಜ್ವಾಲಾಪ್ರಸಾದ ಬರ್ಕ್



ಮೊಗ್ಗೆಮೊಗ್ಗೆಯ ತುಟಿಯ ಬಿಚ್ಚಿಸುತ
ಸೋಂಕಿಂದ ಪುಷ್ಪಗಳನರಳಿಸುತ
ಮಲಗಿದ್ದ ಭೂಮಿಯನು ಎಚ್ಚರಿಸುತ
ತೊನೆಯುತ್ತ ಬಳುಕುತ್ತ ನಗೆಯ ಸೂಸುತ್ತ
ಅಹ ! ಬರುವನು ನೋಡು ಋತುವಸಂತ

೯

ಕೈಯಲ್ಲಿ ಮಧುಪಾತ್ರೆ ಪಕ್ಕದಲಿ ಪ್ರಿಯೆ
ಯಾವ ರಾಜನು ಸಮನು ನನಗೆ ಈಗ

—ಸಬಾ

ಎನಗಿಂತ ಆನಂದವುಳ್ಳವರು ಯಾರಿಹರು
ಚಂದ್ರಾರ್ಕ ತಾರೆಗಳು ನನ್ನ ಸೇವಕರು
ನನ್ನ ಅಂಕಿತದಲ್ಲಿ ಕಾಲಗತಿ ಇಹುದು
ಕೈಯಲ್ಲಿ ಮಧುಪಾತ್ರೆ ಪಕ್ಕದಲಿ ಪ್ರಿಯೆ
ಯಾವ ರಾಜನು ಸಮನು ನನಗೆ ಈಗ

೧೦

ನಮ್ಮಂತೆ ವಿರಹದಲಿ ಬೇಯುತಿರೆ ಬರಬಹುದಿತ್ತು
ಮೂಡಲೊಡೆಯುತಿದೆ ಈಗ ಬಂದರೆ ಬರಬಹುದಿತ್ತು

—ಅನಾಮಿಕ

ಮಾತುಕೊಟ್ಟಾಬಳಿಕ ನಾಚದಿದ್ದರೆ ಬರಬಹುದಿತ್ತು
ನೋವುಂಡು ಬೆಂದಿದ್ದರೊಂದಿನಿತು ಬರಬಹುದಿತ್ತು
ಎದೆಯೊಳಗೆ ಸಂಶಯಗಳೇಳದಿದ್ದರೆ ಬರಬಹುದಿತ್ತು
ನಮ್ಮಂತೆ ವಿರಹದಲಿ ಬೇಯುತಿರೆ ಬರಬಹುದಿತ್ತು
ಮೂಡಲೊಡೆಯುತಿದೆ ಈಗ ಬಂದರೆ ಬರಬಹುದಿತ್ತು

೧೧

ಸ್ವಲ್ಪ ಕುಡಿದುದಕೆಷ್ಟು ಉಪದೇಶ ಎಷ್ಟು ದೋಷಾರೋಪ
ನಾನೇನು ಕಳ್ಳತನ ಮಾಡಿಲ್ಲ ಕೊಳ್ಳೆಹೊಡೆದಿಲ್ಲ

—ಅಕ್ಬರ್ ಅಲಹಾಬಾದಿ

ಇನಿತಕ್ಕೆ ಆರೋಪ ಎಷ್ಟು ಬೆದರಿಕೆ ಮೇಲೆ
ಎಂಥ ಬೈಗಳು ಮತ್ತೆ ಹೀಗಳೆವುದೆಷ್ಟು
ಹೇಳಿಬಿಡಿ ತಪ್ಪಾದರೇನಂಥದೆಸಗಿರುವೆ
ಸ್ವಲ್ಪ ಕುಡಿದುದಕೆಷ್ಟು ಉಪದೇಶ ಎಷ್ಟು ದೋಷಾರೋಪ
ನಾನೇನು ಕಳ್ಳತನ ಮಾಡಿಲ್ಲ ಕೊಳ್ಳೆಹೊಡೆದಿಲ್ಲ

೧೨

ಕಾಡಿಗೆಯು ಮತ್ತೇಕೆ ಯಾವ ಸಿಂಗಾರಕ್ಕೆ
ಕಪ್ಪಿಹವು ನಯನಗಳು ಕಾಡಿಗೆಯು ಇಲ್ಲದಲೆ

—ಪ್ರಸಿದ್ಧ ಲೋಕಗೀತ

ಆಗಸದ ತಾರೆಗಳು ಘೋಷಿಸುತಲಿಹವು
ದಿನದ ಬೆಳ್ಳಂಬೆಳಕು ತಿನ್ನುತಿದೆ ಆಣೆ
ಕಣ್ಣೆವೆಗಳೂ ಕೂಡ ಸಾಕ್ಷಿ ನುಡಿಯುತ್ತಿಹವು
ಕಾಡಿಗೆಯು ಮತ್ತೇಕೆ ಯಾವ ಸಿಂಗಾರಕ್ಕೆ
ಕಪ್ಪಿಹವು ನಯನಗಳು ಕಾಡಿಗೆಯು ಇಲ್ಲದಲೆ

೧೩

ನಿನ್ನ ನೆನಪೂ ಕೂಡ ಬರಲಿಲ್ಲ ಕೆಲಕಾಲದಿಂದ
ಮರೆತುಬಿಟ್ಟೆವು ನಿನ್ನ ಎಂಬ ಮಾತೇನಿಲ್ಲ

—ಫಿರಾಕ್

ನಿನ್ನ ಕಥೆಯನು ಯಾರು ಹೇಳಲಿಲ್ಲವು ನನಗೆ
ಕಲ್ಪನೆಯಲೂ ನೀನು ಮೂಡಿಬರಲಿಲ್ಲೊಮ್ಮೆ
ಅಗಲಿಕೆಯು ನಿನ್ನ ಸ್ಥಿತಿಯನೊರೆಯಲೂ ಇಲ್ಲ
ನಿನ್ನ ನೆನಪೂ ಕೂಡ ಬರಲಿಲ್ಲ ಕೆಲಕಾಲದಿಂದ
ಮರೆತುಬಿಟ್ಟೆವು ನಿನ್ನ ಎಂಬ ಮಾತೇನಿಲ್ಲ

೧೪

ಇರುಳೆಲ್ಲ ಇಬ್ಬನಿಯು ಅತ್ತುದಕೆ ಹೂಗಳರಳಿಹವಿಲ್ಲಿ
ನಗೆಯಲ್ಲ ಲೋಕದಲಿ ಚೆಲುವ ನಗಿಸುವ ಕಾರ್ಯ

—ರಂಗ್‌ಬಹಾದ್ದುರ್‌ಲಾಲ್ ಜಿಗರ್ ಗೋರಖ್‌ಪುರಿ

ಪ್ರತಿರಾತ್ರಿ ಈ ಜಗದನಂದನದ ದುಃಖರಾತ್ರಿಯಹುದು
ತೋಂಟದಲಿ ವಾಸಿಪರ ನೆಮ್ಮದಿಯು ವ್ಯಥೆಯ ಕಥೆಯು
ಶೋಕವಾವರಿಸುವುದು ಸಂತಸವು ಮರೆಯಾಗೆ ಗೋಷ್ಠಿಯಲ್ಲಿ
ಇರುಳೆಲ್ಲ ಇಬ್ಬನಿಯು ಅತ್ತುದಕೆ ಹೂಗಳರಳಿಹವಿಲ್ಲಿ
ನಗೆಯಲ್ಲ ಲೋಕದಲಿ ಚೆಲುವ ನಗಿಸುವ ಕಾರ್ಯ

೧೫

ಈಗಂತು ಹೊರಟಿಹೆವು ಪಾನಮಂದಿರದಿಂದ ವೀರ
ಕೂಡಬಹುದಿಲ್ಲಿ ಮತ್ತೊಮ್ಮೆ ದೇವರಿಚ್ಛೆ ಹಾಗಿರಲು

—ಮೀರ

ನೆನಪಿದ್ದ ದಿನದಿಂದ ಇಲ್ಲೆ ಇದ್ದೆವು ಮೀರ
ಎನಿತೋ ಕಾಲದಿಂದ ಇಲ್ಲಿಯವರೇ ಮೀರ
ಇನ್ನು ಕೆಲದಿನ ಇಲ್ಲೇ ಇರಬಹುದಿತ್ತು ಮೀರ
ಈಗೇತು ಹೊರಟಿಹೆವು ಪಾನಮಂದಿರದಿಂದ ಮೀರ
ಕೂಡಬಹುದಿಲ್ಲಿ ಮತ್ತೊಮ್ಮೆ ದೇವರಿಚ್ಛೆ ಹಾಗಿರಲು

೧೬

ಝಣಝಣ ನಿನ್ನಯ ಬರುವಿಕೆ ನಲ್ಲೆ
ಒಣಗಿದ ಕಳಮೆಗೆ ನೀರೆರೆದಿಹ ಹಾಗೆ

—ಫಿರಾಕ್

ಹೃದಯವು ಮುರುಟುವುದೆಂದರೆ ಏನು
ಹೃದಯವು ಅರಳುವುದೆಂದರೆ ಏನು
ನಿನ್ನಯ ಹೆಜ್ಜೆಯ ಕೇಳುವುದೇನು
ಝಣಝಣ ನಿನ್ನಯ ಬರುವಿಕೆ ನಲ್ಲೆ
ಒಣಗಿದ ಕಳಮೆಗೆ ನೀರೆರೆದಿಹ ಹಾಗೆ

೧೭

ತುಂಬಿಕೊಟ್ಟಳು ಸಾಕಿ* ಎಲ್ಲರಿಗೂ ಬಟ್ಟಲನು
ನಾನು ಬಟ್ಟಲುಕೇಳೆ ಮಧುಪಾತ್ರೆಯಲುಗಿಸಿದಳು

—ನಜೀರ್ ಅಕ್ಬರಾಬಾದಿ

ಬೆಳಕುಬಟ್ಟಲಿನ ಕೂಟದಲಿ ದರ್ಶನವೆ ದರ್ಶನ
ತುಂಬಿದ್ದರಲ್ಲೆಲ್ಲ ಮಧುರ ಮಧುಪಾನಪ್ರಿಯರು
ಸುವ್ಯವಸ್ಥೆಯ ಆ ಸುಂದರ ಸುಗೋಷ್ಠಿಯಲಿ
ತುಂಬಿಕೊಟ್ಟಳು ಸಾಕಿ ಎಲ್ಲರಿಗೂ ಬಟ್ಟಲನು
ನಾನು ಬಟ್ಟಲು ಕೇಳೆ ಮಧುಪಾತ್ರೆಯಲುಗಿಸಿದಳು

■ ■

* ಮಧು ಕುಡಿಸುವವಳು (ನು).

# ಆಧುನಿಕಸಾಹಿತ್ಯ ಸಮೀಕ್ಷೆ

ಬಿ. ಎಚ್. ಶ್ರೀಧರ

ಸಾಹಿತ್ಯ ಸಮೀಕ್ಷಕನ ಚಾರಿತ್ರ್ಯ, ವಿದ್ವತ್ತೆ, ಅನುಭವಗಳು ಪಕ್ವವಾಗಿರಬೇಕೆಂಬುದು ಸಹೃದಯ ಗ್ರಾಹ್ಯ. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಪರೋಪದೇಶ ಪಂಡಿತರ ಸಂಖ್ಯೆ ಹೆಚ್ಚಾಯಿತು; ಆತ್ಮನಿರೀಕ್ಷಣೆ ಮಾಡಿಕೊಳ್ಳುವುದು ಅನಾದರಕ್ಕೆ ಪಾತ್ರವಾಯ್ತು. ಅದರಿಂದ ಸಮೀಕ್ಷಕನ ಮೇಲೆ ಕಾಮ-ಕ್ರೋಧಾದಿಗಳ ದಬ್ಬಾಳಿಕೆ ಹೆಚ್ಚಿತು. ಅದರ ಫಲವಾಗಿ ಸಾಹಿತ್ಯಕೃತಿಗಳ ಚರಿತ್ರೆ, ವಿಮರ್ಶೆ, ಸಮೀಕ್ಷೆ, ಅವಲೋಕನಗಳು ಅಸತ್ಯ ಭಾಷಿತಗಳಾಗಿ ಪರಿಣಮಿಸಿದ್ದು ಅಧಿಕ. "ಮತ್ಸರೋ ದಶಮೋ ರಸಃ" ಎಂಬ ಮಾತು ಅನೇಕ ಸಂದರ್ಭಗಳಲ್ಲಿ ಪ್ರತೀಕಾರ ಮನೋಭಾವಕ್ಕೆ ಎಡೆಗೊಟ್ಟುದು ಡಾ. ಆರ್. ಸಿ. ಹಿರೇಮಠರಂಥವರ ಕಣ್ಣಿಗೆ ಬೀಳದೆ ಇರಲಿಕ್ಕಿಲ್ಲ.

ರಾಜತಂತ್ರವು ರಾಷ್ಟ್ರಗಳ ನಡುವೆ ಕ್ಷಮ್ಯವಾದಿತಲ್ಲದೆ ರಾಷ್ಟ್ರದೊಳಗಿನ ಸಾಮಾಜಿಕರ ಪರಸ್ಪರ ವ್ಯವಹಾರಗಳಲ್ಲಿ ಅಕ್ಷಮ್ಯ. ಅಭಿಪ್ರಾಯಭೇದವು ವೈರವನ್ನೂ ಸೇಡು ತೀರಿಸಿಕೊಳ್ಳುವ ಬುದ್ಧಿಯನ್ನೂ ಪ್ರೇರಿಸಲು ಅವಕಾಶ ಪಡೆಯುವುದನ್ನು ದಮಿಸಲಾರದ ದುರ್ಬಲಾತ್ಮರು ಸಾಹಿತ್ಯ ಅಕಾದಮಿ, ವಿಶ್ವವಿದ್ಯಾಲಯ, ಸಾಹಿತ್ಯ ಪರಿಷತ್ತು ಮುಂತಾದವುಗಳ ಸಾಹಿತ್ಯ ವಿಭಾಗಗಳಲ್ಲಿ ಸಮೀಕ್ಷಕರಾಗಲು ತೀರ ಅನರ್ಹರು. ಆದರೆ ನಮ್ಮ ದೇಶದ ಪ್ರಜಾಪ್ರಭುತ್ವ ತೀರ ಎಳೆಯದಾದುದರಿಂದ ಅದರ ವಿವಿಧ ಕಾರ್ಯಕ್ಷೇತ್ರಗಳಲ್ಲಿ ಈಗೀಗ ಅಪಕ್ವಾತ್ಮರು ತುಂಬಿಕೊಳ್ಳುವಂತಾಗಿ ಸಾರ್ವಜನಿಕರಲ್ಲಿ ಪ್ರಭಾವರಹಿತರಿಗೆ ನ್ಯಾಯ ಸಿಗದಂತಾಗಿರುವುದು ಸುಪ್ರಸಿದ್ಧ. ಈ ಐತಿಹಾಸಿಕ ಅಪಸಂದರ್ಭಕ್ಕೆ ಸಾಹಿತ್ಯಕ್ಷೇತ್ರವು ಅಪವಾದವಾಗಲಿಲ್ಲ. ಲೇಖಕತ್ವದ ಪಾತ್ರವನ್ನು ವ್ಯಾವಹಾರಿಕ ವ್ಯಕ್ತಿತ್ವದ ಪಾತ್ರದಿಂದ ಬೇರ್ಪಡಿಸಿಕೊಂಡು ಕೃತಿಗಳ ಅವಲೋಕನಕ್ಕೆ ತೊಡಗುವ ಮಧ್ಯಸ್ಥಿಕೆ ನಮ್ಮ ವಿದ್ಯಾವಂತರಲ್ಲಿಂದು ಬೆಳೆದುಬರಲಿಲ್ಲ ಎಂಬ ಅನುಭವ ಅನೇಕ

ಬಾರಿ ಅನೇಕ ಆರ್ಜವಸಂಪನ್ನರಾದ ವಿದಗ್ಧರಿಗೆ ಉಂಟಾಗಿರಬಹುದು. ಇದು ಸಾಹಿತ್ಯ ಸಮೀಕ್ಷೆಯ ಆರೋಗ್ಯಕ್ಕೆ ಮಾರಕ.

ಎರಡನೆಯದಾಗಿ. ಸಮೀಕ್ಷಕನ ಹೆದರಿಕೆ. ಮೊದಲು ಸ್ಥಾನಾದಿ ಬಲಗಳಿಂದ ಸಮೀಕ್ಷ್ಯ ಕೃತಿಯ ಲೇಖಕನಿಗೆ ಅನ್ಯಾಯ ಮಾಡುವ ಪ್ರವೃತ್ತಿ ಕಂಡುಬಂದರೆ, ಅನಂತರ ಕಂಡು ಬರುವುದು ಲೇಖಕರ ಸ್ಥಾನಮಾನಗಳಿಗಂಜಿ ಅವರ ಕೃತಿಗಳಲ್ಲಿ ಇಲ್ಲದ ಒಳ್ಳೆಯ ಗುಣ ಗಳನ್ನು ಆರೋಪಿಸಿ ಸಮೀಕ್ಷಿಸುವುದು. ಈ ಭಟ್ಟಂಗಿತನ ರಾಜಪ್ರಭುತ್ವವಿಲ್ಲದ ಇಂದಿನ ಕಾಲದಲ್ಲೂ ಹೊಟ್ಟೆಪಾಡಿಗಾಗಿ ಮಾಡಬೇಕಾಗಿ ಬರುವ ಒತ್ತಾಯದ ಸನ್ನಿವೇಶಗಳನ್ನು ಸಂಸ್ಥಾಧೀಶರೂ ನಿವಾರಿಸಲಾರದಾಗಿರುವುದು ಒಂದು ವಿಷಾದಕರವಾದ ಸಂಗತಿ! "ಲಾಂಗೂಲಚಾಲನಮಧಶ್ ಚರಣಾವಘಾತಃ" ಎಂಬ ವರ್ತನೆಯನ್ನು ಕೆಳಗಿನವರಿಂದ ಮೇಲಿನವರು ಅಪೇಕ್ಷಿಸುವುದು ಭಾರತದ ಇತರ ಪ್ರಾಂತಗಳಿಗಿಂತ ಕರ್ಣಾಟಕದಲ್ಲಿ ಅಧಿಕವಾಗಿದೆ ಎಂದು ಕಾಣುತ್ತದೆ. ಇದು ಕರ್ಣಾಟಕದ ಸಮಷ್ಟಿಸಂಸ್ಕೃತಿಗೆ ಕಲಂಕ ಪ್ರಾಯವಾದುದು.

ಮೇಲೆ ಹೇಳಿದ ಎರಡು ವಿಧಗಳನ್ನೂ ಬಲ್ಲ ಕೆಲ ವಿದ್ವಾಂಸರು ತಮ್ಮ ಆತ್ಮಸಾಕ್ಷಿ ಯೊಡನೆ ಹೋರಾಡಿ ಗೆಲ್ಲಲಾರದೆ "ರಾಮಾಯ ಸ್ವಸ್ತಿ, ರಾವಣಾಯ ಸ್ವಸ್ತಿ" ಎಂಬಂತೆ ಸಾಹಿತ್ಯ ಸಮೀಕ್ಷೆಯನ್ನು ಮಾಡಿದ್ದಾರೆ. ಅವರ ಹಿರಿಯತನಕ್ಕೆ ಅದು ಕಲಂಕ ಎಂಬುದೂ ಅವರಿಗೆ ಗೊತ್ತಾಗಲಿಲ್ಲ. "ಏನೋ ಪಾಪ, ಹೋಗಲಿ" ಎಂಬ ಔದಾರ್ಯದ ಬುರುಕಿಯನ್ನು ಹಾಕಿಕೊಂಡು ಆತ್ಮಸಾಕ್ಷಿಗೂ ತಮ್ಮಲ್ಲಿ ದೇವರದಯೆಯಿಂದ ಬೆಳೆದು ನಿಂತ ಶುದ್ಧ ರಸರುಚಿಜ್ಞತೆಗೂ ಎರಡು ಬಗೆದು. ನಿಷ್ಠುರವಾಗದೆ ತಾವು ಅಜಾತಶತ್ರು ಗಳಾಗಿ ಉಳಿಯಬೇಕೆಂಬ ಹಂಬಲಿನಿಂದ "ಹಾಗೂ ಸರಿ, ಹೀಗೂ ಸರಿ" ಎಂದು ಕಕ್ಷಿ– ಪ್ರತಿಕಕ್ಷಿಗಳಿಬ್ಬರ ವಕಾಲತ್ತನ್ನು ವಹಿಸಿದ ವಕೀಲರಂತೆ "ಹಾವು ಸಾಯಬಾರದು, ಕೋಲು ಮುರಿಯಬಾರದು" ಎಂದು ಬಗೆದು "ಹಾವೇರಿ ನ್ಯಾಯ"ವನ್ನು ಲೇಖಕ ರಿಗೂ ಅವರ ಕೃತಿಗಳಿಗೂ ತೋರಿಸಿರುವ ಉದಾಹರಣೆಗಳು ವಿಶ್ವವಿದ್ಯಾಲಯದ ಪ್ರಕಟಣೆಗಳಲ್ಲಿಯೂ ಇವೆ. ಸಮಕಾಲೀನಸಾಹಿತ್ಯ ಸಮೀಕ್ಷೆಯಲ್ಲಿ ಸಮೀಕ್ಷ್ಯ-ಸಮೀ ಕ್ಷಕರಿಬ್ಬರೂ ಬದುಕಿರುವುದರಿಂದ. ಪರಸ್ಪರವಾಗಿ ಆ ಈ ವ್ಯವಹಾರಗಳ ಮೂಲಕ ಸಂಬಂಧಿಸಿರುವುದರಿಂದ ಇದು ಅನಿವಾರ್ಯ. ಕ್ಷಮ್ಯ ಎಂದು ಸಾಧಿಸಿ ಆತ್ಮವಂಚನೆಯನ್ನು ಮಾಡಿಕೊಂಡೇ ಮುಂದಿಯೆದುರು ಸಮಾಧಾನದ ಸಮರ್ಥನೆಯ ಮಾತುಗಳನ್ನಾಡಿ ದ್ದನ್ನು ಈ ಲೇಖಕ ಅನೇಕಬಾರಿ ಕೇಳಿದ್ದುಂಟು.

ಇನ್ನೊಂದು ವಿಧದ ಸಮೀಕ್ಷಕ ತನಗಾಗದ ಬರೆಹಗಾರರ ಹೆಸರನ್ನು ಉಲ್ಲೇಖಿಸು ವುದೇ ಇಲ್ಲ. "ದಂತಾನಾಮಿವ ಲೋಪಃಸ್ಯಾತ್" ಲೋಪಸಂಧಿ ಮಾಡಿಬಿಟ್ಟರೆ ಯಾರೂ ಏನನ್ನೂ ಹೇಳರು ಎಂಬುದು ಅವನ ಉಪಾಯವೇದಾಂತ. ಹಾಗಲ್ಲ ವಾದರೆ ಒಂದೇ ವಾಕ್ಯದಲ್ಲಿ "ಅಶ್ವತ್ಥಾಮಾ ಹತಃ ಕುಂಜರೋ ವಾ ನರೋ ವಾ"

ಎಂಬಂತೆ ಜಾರುವಬಂಡೆಯಿಂದ ಮಾತನ್ನು ಜಾರಿಸಿಬಿಟ್ಟು ಮುಂದಕ್ಕೆ ವಿಷಯಾಂತಕ್ಕೆ ಪ್ರವೇಶಿಸುವುದು. ಈ ನಾನಾವಿಧದ ಕೈ ಚಮತ್ಕಾರ, ಬಾಯ್ ಚಮತ್ಕಾರಗಳಿಂದ ನುಣಿಚಿಕೊಂಡೇ ತಿರುಗುತ್ತ ಎಲ್ಲರಿಂದಲೂ ಸಂಭಾವಿತನೆನ್ನಿಸಿಕೊಳ್ಳುವ ಮಹಾಶಯ ! ಇಂಥ ಗೋಮುಖವ್ಯಾಘ್ರರು ತಾವು ಕೀಳ್ಗಳೆಸಿದ ವಿದ್ವಾಂಸನ ಗಮನಕ್ಕೆ ಎಂದೂ ಬೀಳದೆಂದು ತಿಳಿದು ಮೋಸಹೋಗಿರುತ್ತಾರೆ. ಒಮ್ಮೆ ತಿಳಿದರೆ ಏನು ಗತಿ ? ಎಂಬ ಹೆದರಿಕೆ ಯಾವಾಗಲೂ ಇದ್ದೇ ಇರುತ್ತದೆ. ಅಂಥವರ ಅಂತರಂಗವನ್ನು ಅರಿಯಬಲ್ಲವರು ಇದ್ದಾರೆ; ಅವರು ಅವರನ್ನು ಬಯಲಿಗೆಳೆವ ಎಂಟೆದೆತನವುಳ್ಳವರಾಗಿರಬೇಕು. ಅವರಿಗೆ ಜಾತಿವ್ಯಾಮೋಹ, ಬಂಧುವ್ಯಾಮೋಹ, ಅಪಪ್ರಚಾರ ಭಯ, ಲಂಚದಾಸೆ, ಸ್ತುತಿಯ ಆಸೆ ಮುಂತಾದವುಗಳು ಅಂಟಿಕೊಂಡಿರುವಾಗ ಅವರು ಸುಮ್ಮನಿದ್ದು ದೊಡ್ಡ ಸಮಾಜಘಾತಕರಾಗುತ್ತಾರೆ. ಈ ಸುಮ್ಮನಿರುವ ಸಂಭಾವಿತರು ಪೂರ್ವಾಶ್ರಮದಲ್ಲಿ ಎಷ್ಟೋ ಪಕ್ಷಪಾತಗಳನ್ನು ಮಾಡಿರುವುದೂ ಉಂಟು; ಅವರು ಮಾಡಿದ ಪಾಪಗಳನ್ನು ಮುಚ್ಚಿಕೊಳ್ಳುವ ಪ್ರಯತ್ನ ಗುಪ್ತವಾಗಿ ಅವರ ಕೈಯಿಂದ ನಡೆಯುತ್ತಲೇ ಇರುತ್ತದೆ. ಈ ಮೌನಸಾಗರದ ಅಣೆಕಟ್ಟು ಸ್ತುತಿಗೆ ಬಾಯಿ ನೀರು ಕರೆವಾಗ ಒಡೆದುಹೋಗುತ್ತದೆ. ಆಗ ನಗ್ನಸತ್ಯ ಜಗಜ್ಜಾಹೀರಾಗುತ್ತದೆ. ಕಳೆದ ೪೦ ವರ್ಷಗಳಲ್ಲಿ ಕರ್ಣಾಟಕ ಇಂಥ ಹತ್ತಾರು ಮಹಾಪುರುಷರ ಅಂತಃಸತ್ಯವನ್ನು ಈ ಲೇಖಕನಿಗೆ ತೋರಿಸಿದೆ.

ಈ ಎಲ್ಲವೂ ಚಾರಿತ್ರ್ಯವಿಲ್ಲದ ಆದರೆ ವಿದ್ವತ್ತೆ-ಅನುಭವಗಳಿರುವ ಸಮೀಕ್ಷಕರಲ್ಲಿ ಸಿಗುವ ಮಾದರಿಗಳಾದವು. ಹೊಗೆಯಿರುವಲ್ಲಿ ಬೆಂಕಿ ಇದ್ದೇ ಇರಬೇಕು ಎಂಬಂಥ ಅಪರಿಹಾರ್ಯ ಸಂಬಂಧವು ಚಾರಿತ್ರ್ಯ, ವಿದ್ವತ್ತೆ ಅನುಭವಗಳಲ್ಲಿ ಯಾವ ಎರಡರ ನಡುವೆಯೂ ಅಥವಾ ಒಂದು ಮತ್ತೆರಡರ ನಡುವೆಯೂ ಇಲ್ಲ. ಈ ಮೂರರಲ್ಲಿ ಒಂದೇ ಒಂದು ಸರಿಯಾಗಿರುವವನು ⅓ ಸಮೀಕ್ಷಕ, ಎರಡು ಸರಿಯಾಗಿರುವವನು ⅔ ಸಮೀಕ್ಷಕ; ಮೂರೂ ಸರಿಯಾಗಿರುವವರು ೩ ಕೋಟಿ ಕನ್ನಡಿಗರಲ್ಲಿ ಬಹಳ ಪ್ರಯತ್ನ ಮಾಡಿದರೆ ನೂರುಜನ ಸಿಕ್ಕಬಹುದೋ ಏನೋ— ಗಣ್ಯ ಸ್ಥಾನಮಾನಾಲಂಕೃತರಲ್ಲಿ ನೂರಕ್ಕೆ ಮೂರುಜನ ಸಿಕ್ಕುವುದೂ ದುರ್ಲಭ. ಸಾಹಿತ್ಯ ಮತ್ತು ಸಾಹಿತ್ಯವಿಮರ್ಶೆಗಳ ಕ್ಷೇತ್ರದಲ್ಲಿ ಪ್ರವೇಶ ಮಾಡಲು (೧) ವಿಜ್ಞಾನ (೨) ವೇದಾಂತ (೩) ಮನಃಶಾಸ್ತ್ರ (೪) ಅಲಂಕಾರಶಾಸ್ತ್ರ (೫) ವ್ಯಾಕರಣ (೬) ತರ್ಕಶಾಸ್ತ್ರ (೭) ಭೂಗೋಲೇತಿಹಾಸ ಜ್ಞಾನ (೮) ಭಾಷಾತ್ರಯ ಜ್ಞಾನ (೯) ರಾಜ್ಯಾರ್ಥಶಾಸ್ತ್ರಜ್ಞಾನ (೧೦) ನೀತಿಶಾಸ್ತ್ರಗಳೆಂಬ ಹತ್ತು ಜ್ಞಾನಶಾಖೆಗಳ ಸಾಮಾನ್ಯ ಆಳದ ತಿಳಿವಳಿಕೆ ಇದ್ದಾಗ ವಿದ್ವಾಂಸನು "ವಿದಗ್ಧ" ಎನಿಸಿಕೊಳ್ಳುತ್ತಾನೆ. ಇಷ್ಟು ಶಾಸ್ತ್ರಜ್ಞಾನ ಇರುವ ಸಮೀಕ್ಷಕರು ಕರ್ಣಾಟಕದಲ್ಲಿ ಬೆರಳಿನಿಂದ ಎಣಿಸಬಹುದಾದಷ್ಟು ಜನರು ಮಾತ್ರ ಈಗ ಇದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು. ಹೀಗಿರುವಾಗ

"ಅಚ್ಚುಖಾನೆಗಳುಂಟು ವೆಚ್ಚಕ್ಕೆ ಹಣವುಂಟು
ಇಚ್ಛೆಯಾನರಿದು ಪ್ರಕಟಿಸುವ ಜನವುಂಟು
ಹೆಚ್ಚೇತಕೋದು ಬರೆವಂಗೆ ?"

ಎಂಬ ಮನೋವೃತ್ತಿಯಿಂದ ಜ್ಞಾನಲವ ದುರ್ವಿದಗ್ಧರು ನಾಯಿಕೊಡೆಗಳಂತೆ ನಗರ-ನಗರಗಳಲ್ಲಿ ತಲೆಯೆತ್ತಿ ತಮ್ಮ ಅಲ್ಪವಿದ್ಯೆ-ಮಹಾಗರ್ವಗಳನ್ನು ಮುದ್ರಿತ ಕಾಗದಗಳ ಮೂಲಕ ಹೊರಗೆಡಹುವುದು ದಿನನಿತ್ಯದ ರೂಢಿಯಾದರಿಲ್ಲಿ ಆಶ್ಚರ್ಯವೇನು ? ಇಂಥ ಅಲಂಕಾರಪಂಡಿತರ ಸಂಖ್ಯಾಬಲ ವಿದ್ಯಾಸಂಸ್ಥೆಗಳಲ್ಲಿ ಹೆಚ್ಚುಹೆಚ್ಚಾಗಿ ಕಾಣಬಹುದು: ಪತ್ರಿಕಾವ್ಯವಸಾಯದ ಕ್ಷೇತ್ರದಲ್ಲಿಯೂ ಸಾಕಷ್ಟು ಜನರನ್ನು ಕಾಣಬಹುದು. ಕರ್ನಾಟಕ ಮಾತೆಯ ಶರೀರಸೌಂದರ್ಯವನ್ನು ಕೆಡಿಸುವ ಕುಷ್ಠಚಿಹ್ನೆಗಳಾಗಿದ್ದಾರೆ. "ಸ್ಯಾದ್ವಪುಃ ಸುಂದರಮಪಿ ಶ್ವಿತ್ರೇಣೈಕೇನ ದುರ್ಭಗಂ" ಎಂದು ದಂಡಿ ಹೇಳಿದ್ದು ಅಕ್ಷರಶಃ ಸತ್ಯ. ಈ ಅಮಂಗಲಾಂಗರು ಉದಯಿಸಲು ಶಿಕ್ಷಕರ, ಶಿಕ್ಷಣದ ಮತ್ತು ಶಿಕ್ಷಣ ನಿಯೋಜಕರ ಹಾಗೂ ಯೋಜಕರ ಗುಂಪುಗಳಲ್ಲಿ ಅನೇಕ ಸಂಖ್ಯಾತರು ನೀತಿಭ್ರಷ್ಟರಾಗುತ್ತ ಹೋದುದೇ ಕಾರಣ. ಅವರು ಸ್ವಧರ್ಮಜ್ಞಾನವನ್ನು ಅಲಕ್ಷಿಸಿದ್ದರಿಂದ ಸಾಹಿತ್ಯ ಜ್ಞಾನವಷ್ಟೇ ಏಕೆ, ಸರ್ವಜ್ಞಾನಗಳ ಮಟ್ಟವೂ ಇಳಿದುಹೋಗಿ ತುಂಬದ ಮೋಡಗಳ ತುಳುಕುವ ಸದ್ದಿನಿಂದ ರಾಜ್ಯವು ತುಂಬಿಹೋಗಿದೆ. ತಂತಮ್ಮ ಹೆಸರಿನ ಅಕ್ಷರ ಹಾಗೂ ಅರ್ಥಗಳ ಪರಿಚಯ ಕೂಡ ಚೆನ್ನಾಗಿರದ "ವಿದ್ವಾಂಸ"ರಿಂದು ಹೋದ ಹೋದೆಡೆ ಸಿಕ್ಕುತ್ತಾರೆ. ಈ ಪದವೀಧರರು ರಾಜ್ಯದಲ್ಲಿ ವರ್ಷಕ್ಕೆ ೮೦೦೦ ದಿಂದ ೧೦,೦೦೦ ದ ವರೆಗೆ ಯಂತ್ರಾಲಯಗಳಿಂದ ಆಕ್ಷಿಪ್ತರಾಗುತ್ತಾರೆ. ಈ Mass Education ಸ್ತೋಮ ಶಿಕ್ಷಣವು ಅಲ್ಪವಿದ್ಯ ಮಹಾಗರ್ವರನ್ನೂ ವಂಚಕರನ್ನೂ ದುಃಶೀಲಸಂಪರನ್ನೂ ವಿಷ ಕುಂಭಪಯೋಮುಖರನ್ನೂ ತಯಾರುಮಾಡಿ ದೇಶದ ಹಾಗೂ ರಾಜ್ಯದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಆರೋಗ್ಯವನ್ನೇ ಹಾಳುಮಾಡಲು ಕಾರಣವಾಗುತ್ತದೆ. ಸಂಖ್ಯಾ ಬಲದಿಂದ ಸತ್ಯನಿರ್ಣಯ, ನ್ಯಾಯನಿರ್ಣಯ, ಆಗಬೇಕೆಂಬ ಆಗ್ರಹಿಗಳಿಗೆ ಇದು ಅವಕಾಶವನ್ನು ಕಲ್ಪಿಸಿಕೊಟ್ಟಿದೆ. "ಎಮ್ಮ ಯಾರದೋ ದೊಣ್ಣೆ ಅವನದು" ಎಂಬಂತಹ ಪಟ್ಟದಶಿಷ್ಯರಿಂದ ಮಹಾಸ್ಥಾನಪತಿಗಳು "ಘೆರಾವೋ" ಹಾಕಿಸಿಕೊಳ್ಳಬೇಕಾಗುತ್ತದೆ. ಶ್ರೀ ಹಿರೇಮಠರಿಗಿದು ತಿಳಿಯದ ಸಂಗತಿಯಲ್ಲ. ರ್‍ಯಾಂಗ್ಲರ್ ಪಾವಟೆಯವರಿಗೆ ಸಹ ಈ ಅಂಶ ಅನುಭವಕ್ಕೆ ಬಂದಿತ್ತು— ವಿದ್ಯಾರ್ಥಿಗಳು ಶುಲ್ಕಾಪಕರ್ಷಕ್ಕಾಗಿ ಮುಷ್ಕರ ಹೂಡಿದ್ದಾಗ ! ಆದರೂ "ಮಾಸ್ ಎಜ್ಯುಕೇಶನ್" ಮತ್ತು "ಹಾರಿಜಾಂಟಲ್ ಎಕ್ಸ್‌ಪ್ಯಾನ್ಶನ್ ಆಫ್ ಎಜ್ಯುಕೇಶನ್" ಎಂದು, "ಹತ್ತರ ಕೂಡ ಹನ್ನೊಂದು, ಪಿಶಿಯ ಕೂಡ ಗೋವಿಂದ" ಎಂಬ ರೀತಿಯಿಂದ ಭಾಷಣ-ಘೋಷಣಗಳನ್ನು ಮಾಡುವಂತಹ "ಯತಿಪತಿ ಚಕ್ರಪರ್ತಿ, ರುಚಿರಾಮಳ ಮೂರ್ತಿ, ವಿಶಾಲಕೀರ್ತಿ"ಗಳೂ ವೇದಿಕೆಗಳ ಲ್ಲಿಂದು ದೃಶ್ಯರಾಗಿರುತ್ತಾರೆ ! ಇದು ಸುದೈವವೇ ? ವಿ. ಎಂ. ಇನಾಮದಾರರು,

ಜಿ. ಎಸ್. ಶಿವರುದ್ರಪ್ಪನವರು, ಎಂ. ವಿ. ಸೀತಾರಾಮಯ್ಯನವರು, ಕೆ. ಕೃಷ್ಣಮೂರ್ತಿಗಳು. ಜ. ಚ. ನಿ., ಡಿ. ವಿ. ಜಿ., ಶಿ. ಚಿ ನಂದೀಮಠರು ಇತ್ತೀಚೆಗೆ ಮಾಡಿದ ಕಾವ್ಯಾವಲೋಕನಗಳಲ್ಲಿ ತಮ್ಮ ನಿಜವಾದ ವಿದ್ವತ್ತೆಯನ್ನು ಬೀಜಿಸಿದವರಲ್ಲಿ ಕೆಲವರು ಎನ್ನಬಹುದು. ಏಕೆಂದರೆ

"ವಿದ್ವಾನೇವ ವಿಜಾನಾತಿ ವಿದ್ವಜ್ಜನ ಪರಿಶ್ರಮಂ
ನಹಿ ವಂಧ್ಯಾ ವಿಜಾನಾತಿ ಗುರ್ವಿಣೀಂ ಪ್ರಸವವೇದನಾಂ"

ಎಂಬ ಮಾತು ಇಂದಿಗೂ ಸತ್ಯ.

"ಕಾಶೀಗಮನಮಾತ್ರೇಣ ನಾನ್ನಂ ಭಟ್ಟಾಯತೇ ದ್ವಿಜಃ
ಸರ್ವೋ ಡಾಕ್ಟರ್ ಪದವ್ಯಾಜ ನಹಿ ಸುಂಕಾಪುರಾಯತೇ"

ಎಂಬ ಮಾತಿಗೆ ಎರಡುಂಟೇ ? ಆದುದರಿಂದ Heredity and Environment ಪಿತ್ರಾರ್ಜಿತ ಮತ್ತು ಸಂಸ್ಕಾರಗಳೆರಡೂ ದೊರೆತ ಕೆಲ ಪುಣ್ಯವಂತರು ಮಾತ್ರ ಅಪ್ರಜಾಪ್ರಭುತ್ವರೀತ್ಯಾ ವಿದಗ್ಧತ್ವವನ್ನು ಹೊಂದಿರುತ್ತಾರೆ. ವಿದ್ವಲ್ಲೋಕದಲ್ಲಿ ವಿದ್ವತ್ತೆಯು ಸಮತಾವಾದವಿಲ್ಲ. ಇದು ಯಾರಿಗೆ ಸೇರಲಿ, ಬಿಡಲಿ, ಈ ಜಗತ್ತಿನ ನಿಯಾಮಕನು ರತ್ನಗಳಂತೆ ವಿದ್ವಾಂಸರನ್ನು ಅಪೂರ್ವ, ವಿರಳ ಎನ್ನುವಂತೆ ಮಾಡಿದ್ದಾನೆ—ಎಂಬುದು ಎಲ್ಲ ತಲೆಮಾರುಗಳಲ್ಲೂ ಎದ್ದುಕಾಣುವಂಥ ವಿದ್ಯಮಾನ.

"ಶ್ರುತೇನ ಯತ್ನೇನ ಚ ವಾಗುಪಾಸಿತಾ
ದೃಢಂ ಕರೋತ್ಯೇವ ಕಮಪ್ಯನುಗ್ರಹಂ"

ಎಂದೂ ಅಂತಹ ಸಾರಸ್ವತಾನುಗ್ರಹ ಪಡೆದವರು ಮಾತ್ರ

"ವಿದಗ್ಧ ಗೋಷ್ಠೀಷು ವಿಹರ್ತುಮೀಶತೇ"

ವಿದಗ್ಧರ ಗೋಷ್ಠಿಯಲ್ಲಿ ವ್ಯವಹರಿಸಲು ಅರ್ಹರಾಗುತ್ತಾರೆ ಎಂದ ದಂಡಿ ವಿದಗ್ಧ ಗೋಷ್ಠಿಗಳ ಗಂಭೀರವಾದ ಚರ್ಚೆಗಳಲ್ಲಿ ಭಾಗವಹಿಸಬಲ್ಲವರ ವಿದ್ವತ್ತೆ ಸಾಣೆ ಹಿಡಿದ ಮಣಿಯಂತೆ ಪ್ರಕಾಶಮಾನವಾಗುತ್ತದೆ. ಬೆನ್ನ ಹಿಂದೆ ಬೇಕು ಬೇಕಾದುದನ್ನು ಬರೆದು ಪ್ರಕಟಿಸಿ ವಲಿಯನ್ನು ಗೆಲ್ಲಲಾರದೆ ಸೋತು ಹೋದ ರಾವಣ ಜಯಭೇರಿ ಹೊಡೆಯಿಸಿದಂತೆ ತಮ್ಮ "ಚೇಲ"ರ ನಡುವೆ ಜಂಭಕೊಚ್ಚಿಕೊಂಡು ತಿರುಗುವ ಗುಂಪುಗುಳಿ ಸಾಹಿತಿರತ್ನರ ಸಮೀಕ್ಷಕತ್ವವನ್ನು, ಅದು ಬ್ರಹ್ಮನ ಬಾಯಿಂದಲೇ ಹೊರ ಬಿದ್ದರೂ, ವಿದಗ್ಧರು ಮನ್ನಿಸರು. ಕಾಲರಾಯನ ದವಡೆಯಲ್ಲಿ ಸಿಕ್ಕಿ ಸಮೀಕ್ಷಾಭಾಸಗಳು ಎಷ್ಟು ಒಪ್ಪವಾಗಿ ಮುದ್ರಿತವಾಗಿದ್ದರೂ ನುಚ್ಚುನೂರಾಗುತ್ತವೆ: ಹೆಬ್ಬೊಟ್ಟಿಗೆಗಳು ಕಿಬ್ಬೊಟ್ಟಿಗೆಗಳನ್ನು ಎಷ್ಟೋ ಸಲ ಕಾಲನ ಜರಡಿಯಲ್ಲಿ ನುಸುಳುವಾಗ ಗೆಲ್ಲಲಾರದವುಗಳಾಗುತ್ತವೆ. ಆಂಗ್ಲ ಸಾಹಿತಿಗಳಾದ ಕೋಲ್‌ರೀಜ್ ಮತ್ತು ವರ್ಡ್ಸ್‌ವರ್ತರ ಕೃತಿಗಳ ಸಂಖ್ಯೆ ಮತ್ತು ಗುಣಗಳ ಬಲವು ಕಾಲನಿಂದ ಚೆನ್ನಾಗಿ ಸುಪರೀಕ್ಷಿತ

ವಾಗಿರುವುದು, ಕಾಳು-ಜೊಳ್ಳುಗಳಿಂದು ವಿಂಗಡಿಸಲ್ಪಟ್ಟಿರುವುದು ನಿದರ್ಶನ. ಭಾಸನ "ಸ್ವಪ್ನವಾಸವದತ್ತ" ಈ ಶತಮಾನದಲ್ಲಿ ಜಗದ್ವಿಖ್ಯಾತವಾದುದು "ಸತ್ಯಕ್ಕೆ ಸಾವಿಲ್ಲ" ಎಂಬ ಮಾತನ್ನು ಉದಾಹರಿಸುತ್ತದೆ. ಹಾಗೇ ಸಮೀಕ್ಷಕರ ಬರೆಹಗಳೂ ಪ್ರಸಿದ್ಧಿ ವಿಸ್ತಾರದಿಂದ ಮಾತ್ರ ಅಜರಾಮರಗಳಾಗುವುದಿಲ್ಲ. "ಶಬ್ದಾರ್ಥೌ ಅದೋಷೌ ಸಗುಣೌ" ಯಾವುದರಲ್ಲಿ ಅಧಿಕ ಎಂಬುದನ್ನು ಒರೆಗೆ ಹಚ್ಚಬಲ್ಲ ವಿದಗ್ಧರು ನಾಗರಿಕತೆಯ ಒಂದಲ್ಲ ಒಂದು ಅವಧಿಯಲ್ಲಿ ಹುಟ್ಟಿ ರತ್ನಗಳನ್ನು ಗಾಜುಗಳಿಂದ ಬೇರ್ಪಡಿಸಿ ಜಗತ್ತಿನೆದುರು ಎತ್ತಿಹಿಡಿಯುತ್ತಾರೆ. ಈ ಸತ್ಯವನ್ನರಿಯದ ಚಾಪಲರು ಮಾತ್ರ "ಪರಸ್ಪರ ಪ್ರಶಂಸಾತ್ಮಕ ಸಂಘ"ಗಳನ್ನು ಕಟ್ಟಿಕೊಂಡು ಐಹಿಕವಾದ ಭೌತ ಸುಖ ಸಾಧನಗಳನ್ನೂ ಪ್ರಸಿದ್ಧಿಯನ್ನೂ ಕೆಲಕಾಲ ಪಡೆದಾರು. ಆದರೆ ಅವರು ನಾಗರಿಕತಾ ಮಾನದ ಸುದೀರ್ಘ ಕೀರ್ತಿಯಿಂದ ವಂಚಿತರಾಗುತ್ತಾರೆ. ಈ ನಡೆದು ಬಂದ ಹಾದಿಗೆ ಅಡೆಯಿಲ್ಲ, ತಡೆಯಿಲ್ಲ, ಅಪವಾದವಿಲ್ಲ.

ಅರ್ಥಪೂರ್ಣವಾದ ಲೋಕಾನುಭವ ಆಳವೂ ಅಗಲವೂ ವಿವಿಧವೂ ಆಗಿರುವುದು ಅತ್ಯಲ್ಪಸಂಖ್ಯಾತರಲ್ಲಿ ಮಾತ್ರ. ಅನುಭವಗಳ ಜಡಿಮಳೆಯಲ್ಲಿ ಹೊಕ್ಕು ಹೊರಟರೂ "A rolling stone gathers no moss– ಉರುಳುವ ಕಲ್ಲಿಗೆ ಯಾವ ಪಾಚಿಯೂ ಅಂಟಿಕೊಳ್ಳದು" ಎಂಬ ಮಾತಿನಂತೆ ಎಷ್ಟೋ ಜೀವಾತ್ಮಗಳಿಗೆ ಬ್ಲಾಟಿಂಗ್ ಪೇಪರಿನ ಶಕ್ತಿ ಇಲ್ಲದಿರುವುದರಿಂದ ಅವುಗಳಿಗೆ ಯಾವ ಅನುಭವದಿಂದಲೂ ಸಂಸ್ಕೃತಿಪೋಷಕ ವಾಗುವಂತೆ ಯಾವ ಪರಿಣಾಮವೂ ಉಂಟಾಗದು. ಕೆಲ ಜೀವಾತ್ಮಗಳಿಗೆ ಯಥಾರ್ಥ ಪರಿಣಾಮಗಳೂ ಮತ್ತಿನವುಗಳಿಗೆ ವಿಪರೀತಾರ್ಥ ಪರಿಣಾಮಗಳೂ ಉಂಟಾಗುತ್ತವೆ. ಆಯಾ ಜೀವನದ ಮನಸ್ಸಿನಲ್ಲಿ ಸತ್ವ-ರಜಸ್-ತಮುಸ್ಸುಗಳಲ್ಲಿ ಯಾವ ಗುಣವು ಪ್ರಧಾನ ವಾಗಿ ಆಧಿಪತ್ಯ ನಡೆಸುತ್ತಿರುವುದೋ ಅದರ ಬಣ್ಣ ಅದಕ್ಕಾದ ಅನುಭವಕ್ಕೆ ಅಂಟಿಕೊಳ್ಳುತ್ತದೆ. ಆದುದರಿಂದ ಒಂದೇ ಬಗೆಯ ಅನುಭವಗಳು ಒಬ್ಬೊಬ್ಬರಿಗೆ ಒಂದೊಂದು (ಹೆಚ್ಚು ಅಥವಾ ಕಡಿಮೆ) ಬಗೆಯ ಭಿನ್ನ ಪರಿಣಾಮಗಳನ್ನು ಉಂಟು ಮಾಡಬಹುದು. ಇಂಥ ಸಂದರ್ಭಗಳು ಮನಃಪಟಲದ ಮೇಲೆ ಹರಿದಾಗ ಲಿನ್-ಯುಟಾಂಗನು "ದೇವರೇ, ನನ್ನನ್ನು ಯಾವ ಅತಿದಶೆಯ ಅನುಭವಕ್ಕೂ ಈಡು ಮಾಡಬೇಡ" ಎಂದು ಬೇಡಿಕೊಂಡನು. ಅತಿದಶಾನುಭವವು ಲೋಕದ ಸಾಮಾನ್ಯ ಸ್ವರೂಪವು ನಮ್ಮ ಕಣ್ತಪ್ಪಿಸಿ ಹೋಗುವಂತೆ ಮಾಡುವುದು.

"ಅತಿ ದರ್ಪೇ ಹತಾ ಲಂಕಾ
ಅತಿ ಮಾನೇ ಚ ಕೌರವಾಃ ।
ಅತಿ ದಾನೇ ಬಲಿರ್ಬದ್ಧಃ
ಅತಿ ಸರ್ವತ್ರ ವರ್ಜಯೇತ್ ॥"

ಎಂಬುದರಲ್ಲಿರುವ ಮೂರು ಉದಾಹರಣೆಗಳು ಅನುಭವವೊಂದರ ಅತಿಯಿಂದ ವಿನಾ ಶೋನ್ಮುಖ ದೃಷ್ಟಿ ನಮ್ಮಲ್ಲಿ ಮೂಡಬಹುದೆಂಬುದನ್ನು ಸೂಚಿಸುತ್ತವೆ.

ಅನುಭವದ ಅರ್ಥವನ್ನು ಅನ್ಯೂನ–ಅನತಿರಿಕ್ತವಾಗಿ ತಿಳಿದುಕೊಳ್ಳುವುದೂ ತಿಳಿದಮೇಲೆ ಅದರಿಂದ ಕಲಿಯಬೇಕಾದಷ್ಟು ಪಾಠವನ್ನು ಕಲಿಯುವುದೂ ಒಂದು ಅಸಾಧಾರಣವಾದ ಯೋಗವೆಂದೇ ಹೇಳಬಹುದು. ಈ ಶಕ್ತಿ ಸರ್ವಜೀವಿಸಾಧಾರಣವಲ್ಲ. ಇಲ್ಲಿಯೂ "ಡೆಮೊಕ್ರೆಸಿ–ಸೋಷಲಿಜಮ್ಮು"ಗಳ ನ್ಯಾಯವಿಲ್ಲ; ಶಕ್ತಿಪ್ರಮಾಣಭೇದವಿದ್ದೇ ಇದೆ. ಆದುದರಿಂದ ವಸ್ತ್ರ, ದೇಹ, ವಾಕ್ಸೌಂದರ್ಯಗಳ ಸಮತ್ವವು ಸಮಾನಾನುಭವ–ಸಮಾನಜ್ಞಾನಗಳಿಗೆ ಗುರುತಾಗಲಾರದು. ಪದವೀಸಾಮ್ಯವೂ (ಅಥವಾ ವೈಷಮ್ಯವೂ) ಅನುಭಾವಸಾರವತ್ತೆಗೆ ನಿಕಷವಾಗದು. ಒಬ್ಬನಿಗೆ

"One impulse from the vernal word
May teach you more of man
Of moral evil and of good
Than all the sages can"

ಎನ್ನಿಸಿದರೆ, ಮತ್ತೊಬ್ಬನಿಗೆ

"ಸ್ತ್ರಿಯೋಪಿ ನಾಮ ಖಲ್ವೇತಾಃ ನಿಸರ್ಗಾದೇವ ಪಂಡಿತಾಃ
ಪುರುಷಾಣಾಂತು ಪಾಂಡಿತ್ಯಂ ಶಾಸ್ತ್ರೇಣೈವೋಪಲಭ್ಯತೇ"

ಎನ್ನಿಸಲೂಬಹುದು. ಒಬ್ಬ ಕವಿಗೆ ಚಂದ್ರನು ಆಕಾಶದೇವಿಯ ಹಣೆಯ ಕುಂಕುಮದ ಬೊಟ್ಟಾಗಿ ಕಂಡರೆ ಯೆಂಡ್ಕುಡ್ಕ ರತ್ನನಿಗೆ "ಹೆಚ್ಚಿದ ಲಿಂಬೆಹಣ್ಣಿನ ಕಡಿ"ಯಾಗಿ ತೋರುತ್ತದೆ. ಕಾಲಿದಾಸನದೆಂದು ಹೇಳಲಾದ ಸುಭಾಷಿತವು ದೃಷ್ಟಿಭೇದವನ್ನು

"ಅಂಕಂ ಕೇಽಪಿ ಶಶಂಕಿರೇ ಜಲನಿಧೇಃ ಪಂಕಂ ಪರೇ ಮೇನಿರೇ
ಸಾರಂಗಂ ಕತಿಚಿಚ್ಚ ಸಂಜಗದಿರೇ ಭೂಚ್ಛಾಯ ಮೈಚ್ಛನ್ ಪರೇ ।
ಇಂದೌಯದ್ದಲಿಕೇಂದ್ರನೀಲಶಕಲ ಶ್ಯಾಮಂದರೀ ದೃಶ್ಯತೇ
ತತ್ಸಾಂದ್ರಂ ನಿಶಿಪೀತಮಂಧತಮಸಂ ಕುಕ್ಷಿಸ್ಥಮಾಚಕ್ಷ್ಮಹೇ ॥"

ಎಂದು ಎತ್ತಿತೋರಿಸುತ್ತದೆ. ಇದಕ್ಕೆ ಅನುಭವವನ್ನು ಅರ್ಥಯಿಸಿಕೊಳ್ಳುವ ಶಕ್ತಿಯ ಭಿನ್ನಸ್ವರೂಪವೇ ಕಾರಣ. ಈ ಶಕ್ತಿಗೆ ಬುದ್ಧಿ, ಮನಸ್ಸು, ಇಂದ್ರಿಯ, ವಾಸನೆ, ಸಂಸ್ಕಾರ, ಸ್ಮೃತಿಗಳ ಭೇದವು ವಿವಿಧತೆಯನ್ನು ಉಂಟುಮಾಡುತ್ತವೆ. ವ್ಯತ್ಯಾಸವು Qualitative (ಗುಣಾತ್ಮಕ) ಮತ್ತು Quantitative (ಪರಿಮಾಣಾತ್ಮಕ) ಎಂದು ಎರಡು ವಿಧ. ಈ ದ್ವಿವಿಧಗಳಿಂದ ವ್ಯಕ್ತಿವ್ಯಕ್ತಿಗಳಲ್ಲಿ ಸಾಧಾರಣ ಧರ್ಮಗಳ ಜೊತೆಗೇ ಭಿನ್ನಧರ್ಮಗಳೂ ಇರುವಂತಾಗುತ್ತದೆ. ಸಾಹಿತಿಯೂ ಅವನ ರಸಿಕನಾದ ವಿದ್ವದ್ ವಿಮರ್ಶಕನೂ ಮೂಲತಃ ಸಾಮಾಜಿಕವ್ಯಕ್ತಿಗಳು. Cultural pattern (ಸಾಂಸ್ಕೃತಿಕ ಪ್ರಕಾರವು) ಒಂದು ಜಾತಿಯಲ್ಲಿ ಕೂಡ ಒಂದಾಗಿರದಂತೆ ಈಗ ನೋಡಿಕೊಂಡದು ವಿದೇಶೀಯ ಸಂಸ್ಕೃತಿಗಳ ಅಂಧಾನುಕರಣ. ಆಲೋಚನಾ ಪದ್ಧತಿಯಲ್ಲಿ ಸಹ ತರ್ಕಶುದ್ಧಿಯನ್ನು ಬಿಟ್ಟುಹೋಗುವ ಸ್ವೈರಾಚಾರ ತತ್ಕಾಲೀನ ಕರ್ನಾಟಕದ

ರಾಜಧಾನಿ-ಉಪರಾಜಧಾನಿಗಳಲ್ಲಿ ಉದ್ಯೋಗಿಗಳಾಗಿರುವ ಪದವೀಧರರಲ್ಲಿ ಕಂಡು ಬರಲಾರಂಭಿಸಿದ್ದು ಭಾರತೀಯತೆಯ ಜ್ಞಾನವು ಕೊರತೆಯಾಗುತ್ತ ಹೋಗಿರುವು ದರಿಂದಲೇ. ಇನ್ನು ಮುಂದಿನ ತಲೆಮಾರಿಗೆ ಭಾರತೀಯ ದೃಷ್ಟಿಯಿಂದ ಅನುಭವ ಗಳನ್ನು ಅರ್ಥಯಿಸುವ ಶಕ್ತಿ ಉದಯವಾಗಬೇಕಾದರೆ ಶಿಕ್ಷಣಕ್ಷೇತ್ರದಲ್ಲಿ "ಭಾರತೀಯ ಕಾವ್ಯ ಮೀಮಾಂಸೆ" ಮತ್ತು "ಕಾವ್ಯಸೂತ್ರ"ಗಳ ಅಭ್ಯಾಸ ಹೆಚ್ಚುವಂತೆ ಪ್ರಯತ್ನಿಸ ಬೇಕಾಗಿದೆ. ವಿಚಾರಶಕ್ತಿಗೇ ಗೆದ್ದಲು ಹಿಡಿಯುವಂತೆ ಮಾಡಿದ ಆಭಾಸಿಕ ವಿಮರ್ಶ ತರ್ಕದ ಸೆರೆಯಾಳುತನದಿಂದ ಮುಕ್ತರಾಗಲು ಭಾಷಾವ್ಯುತ್ಪತ್ತಿ, ತರ್ಕಶಕ್ತಿಗಳು ಬಹಳ ಮಟ್ಟಿಗೆ ಹೆಚ್ಚಾಗಬೇಕಾಗಿದೆ. ಸುಂದರವಾದ ಹೊತ್ತಗೆಯೊಂದರ ತುಂಬ ಮೃತ್ಪಿಂಡ ಬುದ್ಧಿ ಹಡೆದ ವಾಕ್ಯಗಳು ತುಂಬಿರುವುದು ಯಾವ ವಿಶ್ವವಿದ್ಯಾನಿಲಯದ ಪ್ರಕಟಣೆಗೂ ಭೂಷಣವಾಗದು. ಹೆತ್ತವರಿಗೆ ಹೆಗ್ಗಣ ಮುದ್ದಾದರಾಗಲಿಲ್ಲ. ಪರಪ್ರಾಂತದ ನಿಜ ವಾದ ವಿದಗ್ಧರ ಮನ್ನಣೆ ಅದಕ್ಕೆ ದೊರಕುವಂತಾಗಬೇಕು ಅಂಥ ಹೊತ್ತಗೆಗಳನ್ನು ಸಧ್ಯ ನಾವು ನಿರ್ಮಿಸಿರುವೆವೇ ? ಅಸನ್ಮತೆಯಿಂದ ಕೂಡಿದ ಎಷ್ಟು ಕನ್ನಡ ಶಾಸ್ತ್ರೀಯ ಗ್ರಂಥಗಳೀಗ ಹೊರಬಿದ್ದಿವೆ ? ಇತರ ಭಾಷಿಕರಲ್ಲಿ ಎಷ್ಟು ಜನರು ನಮ್ಮಲ್ಲಿ ನಿರ್ಮಿಸಿದ ಕನ್ನಡ ಶಾಸ್ತ್ರಗ್ರಂಥಗಳ ಭಾಷಾಂತರ ಮಾಡಲು, ಮಾಡಿ ಓದಿ ಅರಗಿಸಿಕೊಳ್ಳಲು ಮುಂಬರುತ್ತಿದ್ದಾರೆ ? ಕೌಟಿಲ್ಯನ "ಅರ್ಥಶಾಸ್ತ್ರ"ದಂಥ ಒಂದು ಕನ್ನಡ ಗ್ರಂಥ ಹೊರ ಬಿದ್ದಿದೆಯೇ ? ಗೋಪಿನಾಥರಾಯರು ಬರೆದಂಥ ಒಂದು "ಪ್ರತಿಮಾಶಾಸ್ತ್ರ" ಗ್ರಂಥ ಕನ್ನಡದಲ್ಲಿ ಹೊರಟಿದೆಯೇ ? "ಭರತನಾಟ್ಯಶಾಸ್ತ್ರ"ದಂಥ ಒಂದು ನಾಟ್ಯಶಾಸ್ತ್ರ ಕನ್ನಡ ದಲ್ಲಿ ಅನನ್ಯವಾಗಿ ರಚಿತವಾಗಿದೆಯೇ ? ನಮ್ಮ ಎಲ್ಲ ಆಧುನಿಕ ಪತ್ರಗಳೂ ಹಳೆಯ ವಿದೇಶೀಯ ಪತ್ರಗಳ ಭಾಷಾಂತರ ಅಥವಾ ಸಾರಸಂಗ್ರಹಗಳಾಗಿರುವುದೇ ಹೆಚ್ಚೆಂದರೆ ಅತಿಶಯೋಕ್ತಿಯಾಗಲಾರದು. ಈ ಪರಪ್ರತ್ಯಯನೇಯತೆ ಇರುವ ತನಕ ನಮಗೆ ಅನುಭವಗಳನ್ನು ಪಡೆದುಕೊಳ್ಳುವ ಹಾಗೂ ಪಡೆದುಕೊಂಡ ಅನುಭವಗಳನ್ನು ಶಾಸ್ತ್ರೀಯವಾಗಿ ಅರ್ಥಪೂರ್ಣ ವ್ಯವಸ್ಥೆಗೆ ಒಳಪಡಿಸಿ ಇತರರಿಗೆ ತಿಳಿಸುವ ಅಪೂರ್ವ ರೀತಿಯು ಕರಗತವಾಗದು.

ವೇದವನ್ನು ಶಾಸ್ತ್ರವೆನ್ನುತ್ತಾರೆ—ಅದು ಶಾಸ್ತ್ರಶೈಲಿಯಲ್ಲಿರದೆ ಕವನ ಶೈಲಿಯಲ್ಲಿದ್ದರೂ. ಏಕೆ ? ವೇದವಂತಹ ಗ್ರಂಥಗಳು ಶಾಸ್ತ್ರೀಯ ಅಂಶಗಳನ್ನು ಪೂರಣವಾಗಿ ಒಳ ಗೊಂಡಿರುವುದರಿಂದ. ಮಹಾಕಾವ್ಯಕ್ಕೆ ಅಂಥ ಸಾಮರ್ಥ್ಯವಿರುತ್ತದೆ. ಮಹಾವಿಚಾರ ಗಳಿಂದ ಗರ್ಭೀಕೃತವಾದಾಗಲೇ ಕಾವ್ಯ (ಪದ್ಯ ಗ್ರಂಥವು) ಮಹಾಕಾವ್ಯವೆನ್ನಿಸುತ್ತದೆ. ಧರ್ಮಶಾಸ್ತ್ರ-ವೇದಾಂತಶಾಸ್ತ್ರಗಳ ಮಹಾವಿಚಾರಗಳನ್ನೊಳಗೊಂಡ ವಚನಗಳೇ ವಚನ ಸಾಹಿತ್ಯದಲ್ಲಿ ಸಮ ಮಹತ್ವವನ್ನು ಪಡೆದಿವೆ. ಕೇವಲ ತಾತ್ಕಾಲಿಕ ಮನೋರಂಜನೆ ಯಷ್ಟನ್ನೇ ಮಾಡುವ ಯಾವ ಸಾಹಿತ್ಯಕೃತಿಯೂ ಪ್ರಚಾರಪರ ವಿಮರ್ಶೆಯೂ ಬಹು ಕಾಲ ಬೆಲೆಯುಳ್ಳದ್ದೆಂದು ಕರ್ನಾಟಕದ ಒಳಗೂ ಹೊರಗೂ ಪ್ರಖ್ಯಾತವಾಗಿ ಉಳಿಯ ಲಾರದು.

ಎಲ್ಲ ಅನುಭವಗಳೂ ಒಂದೇ ಬೆಲೆಯುಳ್ಳವುಗಳಲ್ಲ. ಅನುಭವಗಳಲ್ಲಿ ಉತ್ತರೋತ್ತರ ಸ್ತರಗಳಿರುವುದನ್ನು ಶ್ರೀ ಅರವಿಂದರು ಜಗತ್ತಿಗಿಂದು ಅತ್ಯಂತ ಸ್ಪಷ್ಟವಾಗಿ ವಿವರಿಸಿ ತಿಳಿಸಿದ್ದಾರೆ. ವೀರಶೈವ ಷಟ್‌ಸ್ಥಲಗಳು ಕೂಡ ಅಂಥ ಸ್ತರಗಳ ತಾರತಮ್ಯವನ್ನು, ಉತ್ತರೋತ್ತರ ಉದಾತ್ತತೆಯನ್ನು, ಮೇಲುಮೇಲಿನ ಮೇಲ್ಮೆಯನ್ನು ಎತ್ತಿ ಸಾರುತ್ತವೆ. ಭಾರತೀಯ ಯೋಗಶಾಸ್ತ್ರದ ಷಟ್ಚಕ್ರಸಿದ್ಧಾಂತ ಅದಕ್ಕೆ ಆಧಾರ. ನಾನಾತ್ವದ ಈ ಪ್ರಪಂಚದಲ್ಲಿ ಪ್ರಜ್ಞಾಸ್ತರಗಳು ಮೌಲ್ಯದಲ್ಲಿ ತರತಮಭಾವದಿಂದ ಕೂಡಿರುವುದು ಸ್ವಾಭಾವಿಕ. ಜಗತ್ತಿನ ರಮ್ಯತೆ ಎಲ್ಲಿಯಾದರೂ ಇರುವುದಾದರೆ ಅದು ಅದರಲ್ಲಿರುವ ಪದಾರ್ಥಗಳ ತಾರತಮ್ಯದಲ್ಲಿಯೇ. ಯಾವ ಪದಾರ್ಥವೂ ವೈಜ್ಞಾನಿಕವಾಗಿ ಇನ್ನೊಂದು ಪದಾರ್ಥಕ್ಕೆ ಸರ್ವಾಂಶಗಳಲ್ಲೂ ಸಮಾನವಾಗಿಲ್ಲ. ಅನುಭವವೆಂಬ ಪದಾರ್ಥ ಈ ಮಾತಿಗೆ ಅಪವಾದವಲ್ಲ. ತರ್ಕಶಾಸ್ತ್ರ ಹೇಳಿರುವ ೨೪ ಗುಣಗಳನ್ನೂ ಎಲ್ಲ ದ್ರವ್ಯಗಳು ಹೊಂದಿಲ್ಲ. ಗುಣಭೇದದಿಂದ ದ್ರವ್ಯಭೇದವು ನಮ್ಮ ಅನುಭವಕ್ಕೆ ಬರುತ್ತದೆ. ಪರಮಾಣುವು ಅದೇ ದ್ರವ್ಯದ ಇನ್ನೊಂದು ಪರಮಾಣುವಿನಿಂದ ಬೇರೆಯಾಗಿರುವುದನ್ನು "ವಿಶೇಷ" ಗುರುತಿಸುತ್ತದೆ ಎಂಬುದು ನ್ಯಾಯವೈಶೇಷಿಕ ಸಿದ್ಧಾಂತ. ಮನೋದೈಹಿಕ ಅನುಭವಗಳೆಲ್ಲವೂ ಪ್ರತ್ಯಕ್ಷಾಪ್ರತ್ಯಕ್ಷವಾಗಿ ಭೌತ ಪದಾರ್ಥಗಳನ್ನು ಅವಲಂಬಿಸಿರುವುದರಿಂದ ಭೌತಿಕದ ಮೌಲ್ಯ ತಾರತಮ್ಯವು ಮಾನಸಿಕ ಅನುಭವದಲ್ಲಿಯೂ ಗ್ರಾಹ್ಯವಾಗಿದೆ. ಯಾವ ಜಾತಿಯ ಮೌಲ್ಯವಾದರೂ ಸರಿಯೆ. ಅದೂ ಒಂದು ಪದಾರ್ಥವಾದುದರಿಂದ ಮಾನಸಪ್ರಪಂಚಕ್ಕೆ ಸಂಬಂಧಿಸಿದಂತೆ ಅದರಲ್ಲಿ ತಾರತಮ್ಯವಿರುವುದು (Lower and higher) ಸಹಜ. ಹೀನಾನುಭವವೆಂದೂ ಉತ್ತಮಾನುಭವವೆನ್ನಿಸದು. ಅನ್ನ–ಅಮೇಧ್ಯಗಳೆರಡೂ ಪರಮಾತ್ಮ ನಿರ್ಮಿಸಿದ ಜಗತ್ತಿನವುಗಳೇ ಆದರೂ ಅವುಗಳಿಗೆ ಜೀವನದಲ್ಲಿ ಒಂದೇ ತೆರನಾದ ಸ್ಥಾನಮಾನಗಳನ್ನು ಸುಸಂಸ್ಕೃತರು ಕೊಡಲಾರರು. "ಸರ್ವೇಷು ಗಾತ್ರೇಷು ಶಿರಃ ಪ್ರಧಾನಂ । ಸರ್ವೇಂದ್ರಿಯಾಣಾಂ ನಯನಂ ಪ್ರಧಾನಂ" ಎಂಬುದು ಯಾರಿಗೆ ಗೊತ್ತಿಲ್ಲ ? ೧೯೭೪ ರಲ್ಲಿ ನಡೆದ ಉತ್ತರ ಕನ್ನಡ ಜಿಲ್ಲಾ ಕನ್ನಡ ಸಾಹಿತ್ಯಸಮ್ಮೇಳನದ ಅಧ್ಯಕ್ಷೀಯ ಭಾಷಣದಲ್ಲಿ ಶ್ರೀ ಚೆನ್ನವೀರ ಕಣವಿಯವರು ಒಂದು ಕಾವ್ಯಾವಲೋಕನ ಸಂದರ್ಭದಲ್ಲಿ ಉಕ್ತ ಅನುಭವ ಮೌಲ್ಯದ ತಾರತಮ್ಯವನ್ನು ಕುರಿತ ಉದಾಹರಣೆಗಳನ್ನು ಎತ್ತಿ ತೋರಿಸಲಾಗಿದೆ. ಅವರು ಸ್ನೇಹಿತನಾದ ಈ ಲೇಖಕನಿಗೆ ಈವರೆಗೂ ಆ ಬಗ್ಗೆ ಯಾವ ಸಮಾಧಾನವನ್ನು ಹೇಳಿಲ್ಲ. ಆದುದರಿಂದ ಅವರಿಗೀಗ ಅನುಭವಗಳ ಪ್ರಜ್ಞಾಸ್ತರಗಳ ಮೌಲ್ಯತಾರತಮ್ಯಗಳ ಅರ್ಥ ಮನದಟ್ಟಾಗಿದೆಯೆಂದು ದೃಢವಾಗಿ ನಂಬಬಹುದಾಗಿದೆ. ಅವರ ಸಾತ್ವಿಕತೆಗೆ ಅದು ಭೂಷಣ.

"Experience" ಎಂದ ಕೂಡಲೇ "ಅನುಭವ" ಎಂದು ಅರ್ಥಮಾಡಿಕೊಳ್ಳುವಷ್ಟು ಅದು ಸುಲಭವಾದುದಲ್ಲ. ಸಾಮಾನ್ಯರಿಗೆ ಇಂದ್ರಿಯ ಮತ್ತು ಅರ್ಥಗಳ ಸನ್ನಿಕರ್ಷ

ದಿಂದ ಉಂಟಾಗುವ ಜ್ಞಾನವಷ್ಟೇ ಅನುಭವ. ಆದರೆ ತರ್ಕಶಾಸ್ತ್ರದ ಪ್ರಕಾರ ಸ್ಮೃತೀತರವಾದ ಜ್ಞಾನಪ್ರಕಾರಗಳೆಲ್ಲವೂ ಅನುಭವದ ಜಾತಿಗೆ ಸೇರುತ್ತವೆ; ಅಂದರೆ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದಗಳ ಮೂಲಕ ದೊರಕುವ ಜ್ಞಾನಗಳೆಲ್ಲವೂ "ಅನುಭವಗಳು" ! ಶ್ರೀ ಅರವಿಂದರ ಪ್ರಕಾರ ಉಪನಿಷದುಕ್ತ ಪಂಚಕೋಶಗಳಿಗಾಗುವ ಪ್ರತ್ಯಕ್ಷ ಜ್ಞಾನಗಳೆಲ್ಲವೂ ಅನುಭವಗಳು. ಅಥವಾ ಅವರು ಕೊಟ್ಟ ೧೪ ಪ್ರಜ್ಞಾಸ್ತರಗಳಿಗೆ ಗೋಚರವಾಗುವ ಜ್ಞಾನಗಳೆಲ್ಲವೂ "ಅನುಭವಗಳು". ಅವುಗಳಲ್ಲಿ **cognition, conation, emotion, intuition** ಎಂಬ ಮಾನಸಕ್ರಿಯೆಗಳೆಲ್ಲವೂ ಸೇರುತ್ತವೆ. ಅನುಭವಗಳಲ್ಲಿ ಭೇದವಿಲ್ಲದಿದ್ದರೆ ವಾಸ್ತವಿಕ ಪದಾರ್ಥಗಳಲ್ಲಿ ಭೇದವಿರುವುದು ಗೊತ್ತಾಗುತ್ತಿರಲಿಲ್ಲ. ಭೇದದಲ್ಲಿ ವಿರೋಧವೂ ವಿರೋಧಾಭಾಸವೂ ಉತ್ತಮಾಧಮ ಮಧ್ಯಮ ಮಟ್ಟಗಳೂ ಅಡಕವಾಗುತ್ತವೆ. ತಾದಾತ್ಮ್ಯವೊಂದನ್ನುಳಿದ ಇತರ ಎಲ್ಲ ಸಂಬಂಧಗಳೂ ಭೇದಾಂತರ್ಗತ.

ಮೇಲಿನ ಮಾತುಗಳಿಂದ ಅನುಭವದ ಮೌಲ್ಯಗ್ರಹಣಶಕ್ತಿ ಎಲ್ಲರಲ್ಲೂ ಒಂದೇ ಮಟ್ಟದ್ದಾಗಿರುವುದಿಲ್ಲ ಎಂಬುದು ಸ್ಪಷ್ಟವಾಗುತ್ತದೆ. ಆಯಾ ಮಟ್ಟದವರು ಕೆಲ ವಿಷಯಗಳಲ್ಲಿ ಏಕಾಭಿಪ್ರಾಯವನ್ನು ತಾಳಬಹುದು— ಎಂಬುದನ್ನು **Birds of the same feather flock together** ಎಂಬ ಆಂಗ್ಲ ಗಾದೆ ನಿದರ್ಶಿಸುತ್ತದೆ. ಆದರೆ ಎಲ್ಲ ಜಾತಿಗಳ ಹಕ್ಕಿಗಳಿಗೂ ವೈನತೇಯನು ರಾಜ ಹೇಗೋ ಹಾಗೇ ಭಾರತದಲ್ಲಿ ಎಲ್ಲ ಅನುಭವಗಳಿಗೂ ಕಲಶಪ್ರಾಯವಾಗಿರುವುದು ಸಚ್ಚಿದಾನಂದಾನುಭವ. ಅದು ಸರ್ವಜನಸಾಧಾರಣವೆಂದೂ ಅಲ್ಲ. ಅದಕ್ಕಿಂತ ಕೆಳಗಿನ ಪ್ರಜ್ಞಾಸ್ತರಗಳಲ್ಲೇ ಎಷ್ಟೋ ಶ್ರೀಸಾಮಾನ್ಯನಿಗೆ ಅಗಮ್ಯ. ಆದರೆ ಶ್ರೀಸಾಮಾನ್ಯನೇ ಈ ಜಗತ್ತಿಗೆ ಮಾನದಂಡವೆಂದು ವಿದಗ್ಧರು ಒಪ್ಪಲಾರರು. ಕಾಲಿದಾಸನು ಹಿಮಾಲಯವನ್ನು ಭೂಮಿಗೆ ಮಾನದಂಡವೆಂದು ವರ್ಣಿಸಿದಾಗ ಅದು ಪರ್ವತಗಳಲ್ಲಿ ಅತ್ಯಂತ ಎತ್ತರದ್ದಾಗಿರುವಾಗ ಅತ್ಯಸಾಮಾನ್ಯನಲ್ಲವಾದರೂ ಸಾಮಾನ್ಯ ಅಸಾಧಾರಣ ( ಅಲೌಕಿಕವಲ್ಲದಿದ್ದರೂ ಲೋಕೋತ್ತರವೆನ್ನಿಸುವ) ಅನುಭವವೇ ಮಹಾಕಾವ್ಯಗಳ ಮತ್ತು ಮಹಾಸಮೀಕ್ಷೆಗಳ ಮಾನದಂಡವಾಗಬೇಕಾಯ್ತು. ಕಾಲಿದಾಸನೂ ರವೀಂದ್ರನಾಥರೂ ಕವಿಗಳೇ ಅಲ್ಲ ಎಂಬ ಮೂರ್ಖಶಿರೋಮಣಿಗಳ ವಾದವನ್ನಿಲ್ಲಿ ಅಪ್ರಸ್ತುತವೆಂದು ಎತ್ತಿಕೊಳ್ಳಲಿಲ್ಲ— ಖಂಡನೆಗಾಗಿ: ಒಮ್ಮೆ ಅವರು ಕವಿಗಳಾದರೂ ಮಹಾಕವಿಗಳಲ್ಲ— ಎಂಬ "ಅತಿ ಬುದ್ಧಿವಂತಿಕೆಯ" ವಾದವನ್ನು ಖಂಡನೆಗೆ ಅನವಶ್ಯಕ ವಿಷಯವೆಂದು ಇಲ್ಲಿ ಬಿಟ್ಟುಬಿಡಲಾಗಿದೆ.

ಮೂರ್ಖರು ಅನುಭವವೆಂದುಕೊಳ್ಳುವುದೂ ಅದಕ್ಕೆ ಬೆಲೆಕಟ್ಟುವುದೂ (ಜೀವನದಲ್ಲಾಗಲಿ, ಕಾವ್ಯದಲ್ಲಾಗಲಿ, ಸಮೀಕ್ಷೆಯಲ್ಲಾಗಲಿ) ವಿಕೃತಕ-ಮನೋರೋಗಸಹಜ. ಸಾಮಾನ್ಯರಿಗೂ ಅವರಿಗೂ ಇರುವ ಅಂತರವು ಇತರ ನಾಯಕರಿಗೂ ಶಠನಾಯಕನಿಗೂ ಇರುವ ಅಂತರಕ್ಕೆ ಸರಿಸಮಾನವಾಗಿದೆ; ಧೀರೋದಾತ್ತನಿಗೂ ಖಲನಾಯಕನಿಗೂ

ಇರುವಷ್ಟು ತಾರತಮ್ಯ ಅವರಲ್ಲಿದೆ. ಶಿಸಿ–ಕಪಿಗಳ ತಾರತಮ್ಯವನ್ನು ಮತ್ತೆಷ್ಟು ವಿಧವಾಗಿ ವಿವರಿಸಬೇಕಾಗಿದೆ ?

"ಮೂರ್ಖನಿಗೆ ಬುದ್ಧಿಯನು ನೂರ್ಕಾಲ ಹೇಳುವರೆ ?
ಬೋರ್ಕಲ್ಲ ಮೇಲೆ ಮಳೆಗರೆದರಾ ಕಲ್ಲು
ನೀರ್ಕೊಂಬುದೇನೋ ಸರ್ವಜ್ಞ"

ಎಂಬ ಸರ್ವಜ್ಞೋಕ್ತಿಯಿಂದ, ವಿಪರೀತ ದೃಷ್ಟಿಯಿಂದ ಅನುಭಾವಗಳನ್ನು ಅರ್ಥಯಿಸು ವವರ ಬಗೆಗಿನ ಮಾತನ್ನು ಮುಗಿಸೋಣ.

ಅನುಭಾವವೂ ಅನುಭವದ ಒಂದು ವಿಧ. ತದಿತರ ಜಾತೀಯವಲ್ಲ. ಅದನ್ನು ಅಭಿ ವ್ಯಕ್ತಗೊಳಿಸಲು ಕೆಲ ಅನುಭಾವಿಗಳು ಪ್ರಯತ್ನಿಸಬಹುದು: ಅದರಲ್ಲಿ ಯಥಾಶಕ್ತಿ ಯಶಸ್ವಿಗಳಾಗಲೂಬಹುದು. ಈ ಅಂಶವನ್ನು ಗಮನಿಸಿದರೆ ಸಾಹಿತ್ಯದ ರಸಾರ್ಣವದ ಆಳ–ಅಗಲಗಳ ವ್ಯಾಪ್ತಿಯು ಅರಿವಾಗುವುದು. ಸಮೀಕ್ಷಕನ ಕಲ್ಪನಾಶಕ್ತಿಯು ರೆಕ್ಕೆಗಳು ಎಷ್ಟು ದೂರ, ಎಷ್ಟು ಆಳ, ಎಷ್ಟು ಎತ್ತರ ಹಾರುವ ಶಕ್ತಿಯುಳ್ಳದ್ದಾದರೂ ಕಡಿಮೆ ಯೆಂದೇ ಹೇಳಬೇಕಾಗುವುದಲ್ಲವೇ ? ಹೀಗಿರುವಾಗ ಅವನು ಎಷ್ಟು ಎಚ್ಚರಿಕೆಯಿಂದ ಕಾವ್ಯಾವಲೋಕನ, ಕಾವ್ಯಸಮೀಕ್ಷಣ ಮಾಡಬೇಕಾಗುತ್ತದೆ ಎಂಬುದು ಸುಲಭವಾಗಿ ಊಹ್ಯ. ಇಂಥ ವಿದಗ್ಧತೆಯು ವರಕವಿತ್ವದಂತೆಯೇ ಜನ್ಮಾಂತರದಲ್ಲಿ ಗಳಿಸಿದ ಪುಣ್ಯ ದಿಂದ ಮತ್ತು ಈ ಜನ್ಮದ ಸತತ ಪರಿಶ್ರಮದಿಂದ ಮಾತ್ರ ಲಭ್ಯ ಎಂದು ಯಾರಾದರೂ ಹೇಳಿದರೆ ಅಸಂಬದ್ಧವೆನ್ನುವುದು ಸಾಹಸ.

ಅನುತ್ಪನ್ನವೊಂದು ಉತ್ಪನ್ನವಾದ ಅನುಭವ ನಮಗೆ ಉಂಟಾದರೆ ಅದನ್ನು ಸೃಷ್ಟಿ ಯೆನ್ನುತ್ತೇವೆ. ಸೃಷ್ಟಿಯೊಂದು ಫಲ (effect). ಅದಕ್ಕೆ ಕಾರಣ (cause), ಕಾರ್ಯ (process) ಗಳು ಪೂರ್ವಭಾವಿಗಳು. ಸಾಹಿತ್ಯದ ಹಾಗೆಯೇ ಸಮೀಕ್ಷೆಯೂ ಸಂಶೋ ಧನೆಯೂ ಫಲರೂಪದ ಅನುಭವಗಳು. ಒಬ್ಬನಲ್ಲ ಒಬ್ಬನ ಅನುಭವಕ್ಕೆ ಬಾರದ ಯಾವುದೂ ಜಗತ್ತಿನಲ್ಲಿ ಇಲ್ಲ. ಅನನುಭವಗಮ್ಯವು ಜಗತ್ತಲ್ಲ. ಆದುದರಿಂದ ಎಲ್ಲ ನಿರ್ಮಾಪಕರೂ ಸರ್ವಕಾರ್ಯಗಳ ಕರ್ತರೂ ಫಲಗಳಿಗೆ ನಿಮಿತ್ತಕಾರಣರು. ವೈಜ್ಞಾನಿಕ ಯಂತ್ರೋಪಕರಣಗಳ ನಿರ್ಮಾಪಕರೂ ಅದೇ ವರ್ಗಕ್ಕೆ ಸೇರುತ್ತಾರೆ. ತರ್ಕದಿಂದ ಲಭಿಸುವ ನಿಗಮನ (conclusion) ಕೂಡ ಸೃಷ್ಟಿ (created). ಸರ್ವತಂತ್ರ ಸ್ವತಂತ್ರವೂ ಇತರ ನಿರಪೇಕ್ಷವೂ ಆದ ವಸ್ತು(ಫಲ) ಜಗತ್ತಿನಲ್ಲಿಲ್ಲ. ಆದುದರಿಂದ ಫಲ, ಕಾರ್ಯ, ಕಾರಣಗಳ ರೂಪದಲ್ಲಿರುವ ಪ್ರತಿಯೊಂದು ಜಾಗತಿಕ ಪದಾರ್ಥವೂ (ಅದು ಮೂರ್ತವಾಗಿರಲಿ, ಅಮೂರ್ತವಾಗಿರಲಿ) ಸೃಷ್ಟ. ಸೃಷ್ಟವಲ್ಲದ ಅನುಭವ ವಿಲ್ಲ. ಭವವನ್ನು ಅನುಸರಿಸಿ ಬರುವುದೆಲ್ಲ ಅನುಭವ. ಭವವೇ ಹುಟ್ಟು, ಸೃಷ್ಟಿ. ಸೃಷ್ಟವಾದ ಎಲ್ಲವೂ ಭಾವಗಳು(beings). ಭಾವಗಳು(ಪದಾರ್ಥಗಳು) ಮಾನ ಸಿಕ, ದೈಹಿಕ, ಅತಿಮಾನಸಿಕ, ಆತ್ಮಿಕ. ಅವುಗಳೆಲ್ಲವುಗಳ ಸರ್ವಸಾಧಾರಣ ಸಾರವು

ಚೇತನೆ (consciousness). ಚೇತನಾಶೂನ್ಯವಾದ ಪದಾರ್ಥವು ಆಭಾಸಿಕ. ಆದುದರಿಂದ ಸಮೀಕ್ಷಕನಿಗೆ appearance and reality ತೋರುವ ಮತ್ತು ಇರುವ ಭಾವಗಳನ್ನು ಬಿಂಗಡಿಸಿ ತಿಳಿದುಕೊಳ್ಳುವ ಶಕ್ತಿಯೂ ಇರಬೇಕು. ಇಲ್ಲವಾದರೆ ಅವನು ಅಸಂಪ್ರೇಕ್ಷ್ಯಕಾರಿಯಾಗುವ ಸಂಭವವಿದೆ. ಆಧುನಿಕ ಮುದ್ರಣಾಲಯಗಳಿಂದ ಅಚ್ಚಾಗಿ ಹೊರಬೀಳುತ್ತಿರುವ ಅನೇಕ ಸಮೀಕ್ಷಾಗ್ರಂಥಗಳು ಅಸಂಪ್ರೇಕ್ಷಿತ ಅವಲೋಕನದ ಫಲಗಳು; ಅಲ್ಲೊಂದು ಇಲ್ಲೊಂದು ಮಾತ್ರ ಸಂಪ್ರೇಕ್ಷಿತ ಅವಲೋಕನಗಳನ್ನು ನಿದರ್ಶಿಸುತ್ತವೆ. ಸಾಹಿತ್ಯ ಸಮೀಕ್ಷಾಭ್ಯಾಸಿಯು ಉಕ್ತ ವಿವರಗಳನ್ನು ಲಕ್ಷಿಸುವುದು ನಿರೀಕ್ಷಿತ.

ಪ್ರಾಜ್ಞರಿಗೆ ಅನಿರೀಕ್ಷಿತಗಳು ಎನ್ನಿಸಿದಂಥವು ಕಾರ್ಯಕಾರಣ ವ್ಯವಸ್ಥೆಯಲ್ಲಿ ಬರತಕ್ಕವುಗಳಲ್ಲ; ಅವು ವಿಚಾರಾತೀತ, ಚರ್ಚಾತೀತ, ವಿವರಣಾತೀತ. ಅಂಥವುಗಳು ಅನುಭವಕ್ಕೆ ಬಂದಾಗ ನಾವು ಅವುಗಳ ಅಸ್ತಿತ್ವವನ್ನು ಸುಮ್ಮನೆ ಸ್ವೀಕರಿಸಬೇಕಾಗುತ್ತದೆ. ಸಾಹಿತ್ಯಸಮೀಕ್ಷೆಯು ಅವುಗಳ ವರ್ಗಕ್ಕೆ ಸೇರುವುದಿಲ್ಲ. ಅದು Law of causation ಕಾರ್ಯಕಾರಣ ನಿಯಮಗಳನ್ನು ಮೀರಲಾರದು. ಪ್ರಾಜ್ಞಮಿತ್ರರು ತಿಳಿದಿದ್ದರೂ ಮರೆತಿರಬಹುದಾದ ಕೆಲ ಅಂಶಗಳಲ್ಲಿರಬಹುದು; ತಿಳಿಯದವರಿಗಂತೂ ಇಲ್ಲಿ ಹೇಳಿದ್ದೆಲ್ಲ ಹೊಸದು ! ಇದು ಸಂಭಾವನಾಲಂಕಾರದ ಮಾತು ! ಅಡಿಕೆಯ ಸಂಭಾವನೆಯೂ ಸಂಭಾವನೆಯೇ, ಆನೆಯ ಸಂಭಾವನೆಯೂ ಸಂಭಾವನೆಯೇ.

ಪತ್ರಂ ಪುಷ್ಪಂ ಫಲಂ ತೋಯಂ
ಸತ್ಯಾಭಿವ್ಯಕ್ತಿ ಲಕ್ಷಿತಂ ।
ಸಮರ್ಪಿತಮನೇನ ಸ್ಯಾ-
ದೀಶ್ವರಾಯ ಪರಾತ್ಮನೇ ॥



# ನವೋದಯ ಕಾವ್ಯದ ಭಾಷೆ ಮತ್ತು ಆಲೋಚನೆ

ಕೃಷ್ಣ ಪರಮೇಶ್ವರ ಭಟ್ಟ

ನವೋದಯ ಕಾವ್ಯದ ಭಾಷೆಯನ್ನು ಒಟ್ಟಾರೆ ಗಮನಿಸಿ ಅದರ ಕೆಲವು ಮುಖ್ಯ ವೈಲಕ್ಷಣ್ಯಗಳನ್ನು ಗುರುತಿಸಿ, ಅವು ಆ ಕಾವ್ಯದ ವಿಷಯದ ಮೇಲೆ ಯಾವ ರೀತಿಯ ನಿಯಂತ್ರಣವನ್ನು ಹೇರುತ್ತವೆ ಹಾಗೂ ಕಾವ್ಯದಲ್ಲಿ ತೋರಬಹುದಾದ ಕವಿಯ ವೈಯಕ್ತಿಕತೆ(individuality)ಗೆ ಸಂಬಂಧಿಸಿದಂತೆ ಅವುಗಳ ಸಂಬಂಧಗಳೇನು ಎಂಬುದರ ಬಗ್ಗೆ ಕೆಲವು ತೀರ್ಮಾನಗಳನ್ನು ಮಂಡಿಸುವುದು ಈ ಪ್ರಬಂಧದ ಉದ್ದೇಶ. ಇಲ್ಲಿ ಲಕ್ಷ್ಯದಲ್ಲಿರುವುದು ಭಾವಗೀತಪ್ರಕಾರ.

## ೧

ಕೆಳಗಿನ ಉದಾಹರಣೆಗಳನ್ನು ಗಮನಿಸಿ :

### ಅ

೧. ರಾಮು ಹಣ್ಣು ತಿಂದು ಬಂದ: ಬಂದು ಗೋಡೆಗೆ ಒರಗಿ ಕುಳಿತ; ಹಾಗೆಯೇ ನೆಲದ ಮೇಲೊರಗಿದ.

೨. ಉಚ್ಚಾಟನೆಯ ತರ್ಪಣದ ಮಂತ್ರ ಬಲ್ಲೆ; ಆದರೂ ತಂತ್ರ ಮರೆತೆ.

### ಬ

೩. ನೀರೊಳಗೆ ವೀಣೆ ಮಿಡಿದಂತೆ ಆಡಿದ ಮಾತು.
ಬೇಲಿಯಲಿ ಹಾವು ಹರಿದಂತೆ.

೪. ಮರವು ಮುಗಿಲಿಗೆ ನೀಡಿದೆ
ಗಿಡದ ಹೊದರೊಳು ಹಾಡಿದೆ.





೫) ಹಾರಿತೆನ್ನ ಹೃದಯದುಂಬಿ
ಬೇರೆ ಹೂವ ನೆರಳಿಗೆ
ಜ್ವಲಿಸಿತೆನ್ನ ಅಂತರಂಗ
ಬೇರೆ ಕಣ್ಣ ಹೊರಳಿಗೆ

ಇವುಗಳಲ್ಲಿ ಮೊದಲನೆಯದು ಆಡುಮಾತಿನಲ್ಲಿ ಕಾಣಿಸಿಕೊಳ್ಳಬಹುದಾದ ಒಂದು ವಾಕ್ಯ. ಎರಡನೆಯದು ಗೋಪಾಲಕೃಷ್ಣ ಅಡಿಗರ ನವ್ಯಕವನ 'ಭೂತ'ದಿಂದ ಆಯ್ದು ಕೊಂಡದ್ದು. ಅನಂತರದ ಮೂರು ಉದಾಹರಣೆಗಳು ನವೋದಯ ಕವನಗಳಿಂದ (ಕ್ರಮವಾಗಿ ನರಸಿಂಹಸ್ವಾಮಿಯವರ 'ಮನೆಗೆ ಬಂದ ಹೆಣ್ಣು', ಬೇಂದ್ರೆಯವರ 'ಬಾರೊ ಸಾಧನಕೇರಿಗೆ' ಹಾಗೂ ನರಸಿಂಹಸ್ವಾಮಿಯವರ 'ಕೇಳಬೇಡ : ಎಲ್ಲಿಗೆ ?') ಎತ್ತಿಕೊಂಡದ್ದು. ಇವುಗಳಲ್ಲಿ ಮೊದಲವಾಕ್ಯದಲ್ಲಿ ಕಾವ್ಯಗುಣವೇ ಇಲ್ಲವೆಂದಲ್ಲ ಅಥವಾ ಅದು ಸಾಹಿತ್ಯದಲ್ಲಿ ಬರಬಾರದೆಂದಿಲ್ಲ. ಇದು ಕಥೆ, ಕಾದಂಬರಿ, ನವ್ಯಕವನ ಗಳಲ್ಲಿ ನಿರೀಕ್ಷಿಸಬಹುದಾದಂಥ ವಾಕ್ಯದ ಮಾದರಿಯೇ.

ಈಗ 'ಬ' ವಿಭಾಗದಲ್ಲಿಯ ಉದಾಹರಣೆಗಳು 'ಅ' ವಿಭಾಗದ ಉದಾಹರಣೆಗಳಿಂದ ಯಾವಯಾವ ಅಂಶಗಳಲ್ಲಿ ಬೇರೆಯಾಗುತ್ತವೆಯೆಂಬುದನ್ನು ನೋಡಬಹುದು. ಒಂದ ನೆಯ ಉದಾಹರಣೆಯ ದೊಡ್ಡವಾಕ್ಯದಲ್ಲಿ ಮೂರು ಒಳವಾಕ್ಯಗಳಿವೆ. ಇವುಗಳ ಅರ್ಥ ಒಂದು ನಿರಂತರ ಅಥವಾ ಮುಂದುವರಿದ (continuous) ಕ್ರಿಯೆಯನ್ನು ಹೇಳುತ್ತವೆ. ಇವುಗಳಲ್ಲಿಯ ಪದ, ಪದಪುಂಜಗಳಾಗಲೀ (phrase) ವಾಕ್ಯದ ರಚನೆಯಾಗಲೀ ಆಡುಮಾತಿನಲ್ಲಿ ಕಾಣಿಸಿಕೊಳ್ಳುವಂಥಾದ್ದೆ ಆಗಿರುವುದರಿಂದ ಅವು ಪ್ರತ್ಯೇಕವಾಗಿ ನಮ್ಮ ಗಮನ ಸೆಳೆಯುವುದಿಲ್ಲ. ಎರಡನೆಯ ಉದಾಹರಣೆಯೂ ಬಹುಮಟ್ಟಿಗೆ ಹೀಗೆಯೇ ಇದೆ. ವ್ಯತ್ಯಾಸವೆಂದರೆ 'ತರ್ಪಣ' 'ಉಚ್ಚಾಟನೆ' ಪದಗಳು ಬಳಕೆಯಾಗುವ ಸಂಭವ ಕಡಿಮೆ ಎಂಬುದಿಷ್ಟೆ. ಆದರೆ 'ಬ' ವಿಭಾಗದ ಮೂರೂ ಉದಾಹರಣೆಗಳು ಈ ರೀತಿಯವಲ್ಲ. ಅವುಗಳಲ್ಲಿ ವಾಕ್ಯದ ರಚನೆ ಬೇರೆಯಾಗಿದೆ. ಕರ್ತೃ, (ಕರ್ಮ), ಕ್ರಿಯಾಪದಗಳ ಸ್ಥಾನಪಲ್ಲಟವಾಗಿದೆ. 'ಹೃದಯದುಂಬಿ', 'ನೀರೊಳಗೆ ವೀಣೆ ಮಿಡಿ ದಂತೆ ಆಡಿದ ಮಾತು' ಮುಂತಾದ ಹೋಲಿಕೆಗಳಿವೆ. 'ಅಂತರಂಗ ಜ್ವಲಿಸಿತು', 'ಮರವು ನೀಡಿದೆ' ಎಂಬಂತಹ ಅಸಾಮಾನ್ಯ ರೂಪಗಳಿವೆ. 'ಎನ್ನ' ಎಂಬ ಹಳೆಯ ರೂಪ ಮತ್ತು ಅದರ ಪುನರಾವೃತ್ತಿ ಇದೆ. ನಿರ್ದಿಷ್ಟ ಲಯ ಇದೆ, ಇತ್ಯಾದಿ. ಇವು ಒಡನೆಯೆ ನಮ್ಮ ಲಕ್ಷ್ಯ ಸೆಳೆಯುತ್ತವೆ. ಈ ಮೂರು ಉದಾಹರಣೆಗಳಲ್ಲಿ ಕವನದ ಒಂದು ಸಾಲು ಇನ್ನೊಂದು ಸಾಲಿನ ಜೊತೆಗೆ ಅಥವಾ ಒಂದು ವಾಕ್ಯ (ಒಳವಾಕ್ಯ) ದ ಜೊತೆಗೆ ಸಂಬಂಧ ಸ್ಥಾಪಿಸಿಕೊಳ್ಳುವುದು ಲಯವನ್ನೋ ಪ್ರಾಸವನ್ನೋ ಪರಸ್ಪರ ಸಂಬಂಧಿತವಾದ ಅರ್ಥವುಳ್ಳ ಪದ ಅಥವಾ ಪದಪುಂಜವನ್ನೋ ಅಥವಾ ನಿರ್ದಿಷ್ಟಧ್ವನಿ ಅಥವಾ ಧ್ವನಿಸಮೂಹವನ್ನೋ ಆಧರಿಸಿ ಇರಬಹುದು. ಉದಾ. ಮೂರರಲ್ಲಿ 'ವೀಣೆ

ಹಿಡಿದಂತೆ' ಹಾಗೂ 'ಹಾವು ಹರಿದಂತೆ' ಇವುಗಳಲ್ಲಿ ನಿಜವಾದ ಸಂಬಂಧ ಇಲ್ಲದಿದ್ದರೂ ಹೋಲಿಕೆಯ ಮೂಲಕ ಸಂಬಂಧ ಪಡೆಯುತ್ತವೆ. ಉದಾ. ನಾಲ್ಕರಲ್ಲಿ 'ನೀಡಿದೆ' 'ಹಾಡಿದೆ'–ಪದಗಳಿಂದಾಗಿ ಆ ಎರಡೂ ಸಾಲುಗಳು ಒಂದೇ ಘಟಕಕ್ಕೆ (unit) ಸೇರುತ್ತದೆ. ಉದಾ. ಐದರಲ್ಲಿ 'ಹೃದಯ'–'ಅಂತರಂಗ', 'ಹೂವ'–'ಕಣ್ಣ', 'ನೆರಳಿಗೆ'– 'ಹೊರಳಿಗೆ' ಈ ಪದಯುಗ್ಮಗಳು ಈ ಚರಣದ (stanza) ಸಾಲುಗಳನ್ನು ಒಂದುಗೂಡಿಸುತ್ತವೆ (ಇನ್ನು ಮುಂದೆ ಪ್ರತ್ಯೇಕವಾಗಿ ಹೇಳದ ಹೊರತು 'ಸಾಲು' ಎಂಬುದು ವಾಕ್ಯ ಎಂಬರ್ಥವನ್ನೂ ಕೊಡುತ್ತದೆ ಎಂದು ಭಾವಿಸಬೇಕು. ನವ್ಯೋದಯ ಕವನಗಳಲ್ಲಿ ಬಹುತೇಕವಾಗಿ ಸಾಲುಗಳು ವಾಕ್ಯಗಳೂ ಆಗಿರುತ್ತವೆ). ಇಲ್ಲಿ ಒಂದು ಸಂಗತಿಯನ್ನು ಗಮನಿಸಬೇಕು. ಹೀಗೆ ಸಂಬಂಧ ಪಡೆಯುವ ಸಾಲುಗಳು ಅಕ್ಕಪಕ್ಕದಲ್ಲಿ ಇರಬೇಕಾಗಿಲ್ಲ. ಅವು ಕವನದ ಬೇರೆಬೇರೆ ಭಾಗದಲ್ಲಿರಬಹುದು. ಈ ರೀತಿಯಲ್ಲಿ ಏರ್ಪಡುವ ಸಂಬಂಧವನ್ನು (paradigmatic or parallel relationship) ಎನ್ನೋಣ. ಇಲ್ಲಿಯೆ ಇನ್ನೊಂದು ಸಂಗತಿಯನ್ನೂ ಗಮನಿಸಬೇಕು. ಒಂದು ಸಾಲು ಯಾವುದೇ ಒಂದು ಅಥವಾ ಹೆಚ್ಚು ಅಂಶಗಳ (ಪದ, ಲಯ, ಧ್ವನಿ, ಪ್ರಾಸ ಇತ್ಯಾದಿ) ಆಧಾರದ ಮೇಲೆ ಇನ್ನೊಂದು ಸಾಲಿನ ಜೊತೆಗೆ ಸಂಬಂಧ ಪಡೆಯುವುದರ ಜೊತೆಗೆ ಬೇರೊಂದು ಅಥವಾ ಕೆಲವು ಅಂಶಗಳನ್ನಾಧರಿಸಿ ಮತ್ತೊಂದು ಸಾಲಿನ ಜೊತೆಗೂ ಸಂಬಂಧ ಪಡೆಯಬಹುದು. ಚಿತ್ರ ೧, ಈ ರೀತಿಯ ಸಂಬಂಧವನ್ನು ವಿವರಿಸುತ್ತದೆ.




ಚಿತ್ರ ೧

ಇಲ್ಲಿ ೪ನೇ ಸಾಲು ೧ ಮತ್ತು ೯ನೇ ಸಾಲುಗಳ ಜೊತೆಗೆ ಸಂಬಂಧ ಪಡೆಯುವುದನ್ನು ಹೇಳುತ್ತದೆ. ಹೀಗೆ ಕವನದ ಪ್ರತಿಸಾಲು ಉಳಿದ ಸಾಲುಗಳೊಡನೆ ಸಂಬಂಧ ಪಡೆದಿರಬಹುದು. 'ಅ' ವಿಭಾಗದ ಉದಾಹರಣವಾಕ್ಯ(ಒಳವಾಕ್ಯ)ಗಳಲ್ಲಿ ಈ ರೀತಿಯ ಸಂಬಂಧ ಇಲ್ಲವೆಂಬುದನ್ನೂ ಆಡುಮಾತಿನಲ್ಲಿ ಸಾಮಾನ್ಯವಾಗಿ ಈ ರೀತಿಯ ಸಂಬಂಧ ಇರುವುದಿಲ್ಲವೆಂಬುದನ್ನೂ ಇಲ್ಲಿಯೆ ಗುರುತಿಸಿಕೊಳ್ಳಬೇಕು.

೨

ಭಾಷೆಯಲ್ಲಿ (ಆದ್ದರಿಂದ ಕಾವ್ಯದಲ್ಲಿಯೂ) ಮೇಲೆ ಹೇಳಿದ ಪರೋಕ್ಷಸಂಬಂಧವಲ್ಲದೆ ಇನ್ನೂ ಒಂದು ರೀತಿಯ ಸಂಬಂಧ ಏರ್ಪಟ್ಟಿರಬಹುದು. ಉದಾಹರಣೆ ಒಂದರಲ್ಲಿ ಮೂರೂ ಒಳವಾಕ್ಯಗಳನ್ನು ಕ್ರಮವಾಗಿ ಜೋಡಿಸುವ ರೂಪಗಳಿವೆ. 'ಬಂದು' (= ಆಮೇಲೆ) ಹಾಗೂ 'ಹಾಗೆಯೇ'– ಎಂಬೆರಡು ರೂಪಗಳು ಇಲ್ಲಿ ಈ ಕೆಲಸ ಮಾಡುತ್ತವೆ. ಉದಾ. ಎರಡರಲ್ಲಿ 'ಆದರೂ' ಎಂಬುದು ಮಾಡುವುದೂ ಈ ಕೆಲಸ ವನ್ನೇ. ಕೆಲವೊಮ್ಮೆ ಈ ರೂಪಗಳು ಅಧ್ಯಾಹಾರವಾಗಿದ್ದರೂ ಅವುಗಳ ಅರ್ಥ ಅಲ್ಲಿ ಗೃಹೀತವಾಗಿರುತ್ತದೆ. ಉದಾಹರಣೆಗೆ ಈ ವಾಕ್ಯಗಳನ್ನು ನೋಡಿ : 'ನಾನು ಪೆನ್ನು, ಕಾಗದ ಹಿಡಿದು ಬರೆಯಲು ಕುಳಿತೆ. ಕೆಲವು ನಿಮಿಷಗಳಾದವು. ಏನೂ ಹೊಳೆಯಲಿಲ್ಲ. ಪೆನ್ನು. ಕಾಗದಗಳನ್ನು ಬದಿಗಿಟ್ಟು ಮಲಗಿದೆ.' ಇಲ್ಲಿಯ ನಾಲ್ಕು ವಾಕ್ಯಗಳ ನಡುವಿನ ಮೂರು ಸ್ಥಾನಗಳನ್ನು ಕ್ರಮವಾಗಿ 'ಹೀಗೆಯೆ' 'ಆದರೂ' 'ಆಮೇಲೆ' ಎಂಬ ಪದಗಳಿಂದ ತುಂಬಬಹುದು (ಆಗ ಇವು ಮುಂದಿನ ವಾಕ್ಯದ ಅಂಶಗಳಾಗುತ್ತವೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ). ಇವು ಅಕ್ಕಪಕ್ಕದ ವಾಕ್ಯಗಳನ್ನು ಜೋಡಿಸುವ ಕೆಲಸವನ್ನು ಮಾಡುತ್ತವೆ. ಇಲ್ಲಿ ಒಂದು ಸಂಗತಿಯನ್ನು ಗಮನದಲ್ಲಿರಿಸಬೇಕು. ಹೀಗೆ ಜೋಡಿಸುವ ರೂಪ ಪದವೇ ಆಗಿರಬೇಕಾಗಿಲ್ಲ. ಅದು ಒಂದು ಧ್ವನಿ, ಪದ, ಪ್ರತ್ಯಯ ಅಥವಾ ವಾಕ್ಯವಾಗಿರಬಹುದು. ಆದ್ದರಿಂದಲೇ ಮೇಲೆ ಪದ ಎಂದು ಹೇಳದೆ ರೂಪ ಎಂದಿರುವುದು. ಹಾಗೆಯೆ ಜೋಡಣೆಗೊಳ್ಳುವ ಘಟಕಗಳು ಧ್ವನಿ, ಪದ, ಪದಪುಂಜ, ವಾಕ್ಯ, ಪ್ಯಾರಾ– ಇವುಗಳಲ್ಲಿ ಯಾವು ದಾದರೂ ಆಗಬಹುದು. ಆದ್ದರಿಂದ ಈ ಸಂಬಂಧವನ್ನು ಹೀಗೆ ವಿವರಿಸಬಹುದು :

**A + B + C + D**

ಚಿತ್ರ ೨

ಒಂದು ಘಟಕ ಅದರ ಅಕ್ಕಪಕ್ಕದಲ್ಲಿರುವ ಅಥವಾ ಪ್ರತ್ಯಕ್ಷದಲ್ಲಿರುವ ಇನ್ನೆರಡು ಘಟಕ ಗಳನ್ನು ಜೋಡಿಸುತ್ತದೆ. ಚಿತ್ರ ೨ ರಲ್ಲಿ A, B, C, D ಗಳು ಯಾವುದೇ ಒಂದು ಹಂತದಲ್ಲಿಯ ( level ) ವಿಭಿನ್ನ ಘಟಕಗಳು. '+' ಇವುಗಳನ್ನು ಜೋಡಿಸುವ ರೂಪ. ಉದಾಹರಣೆಗೆ, 'ಅವನ ಪುಸ್ತಕ' ಎಂಬಲ್ಲಿ '–ಅ' ಪ್ರತ್ಯಯ ಇಂತಹ ಸಂಬಂಧವನ್ನುಂಟುಮಾಡುತ್ತದೆ. ಹೀಗೆಯೇ ಕರ್ಮಪದ+ಕ್ರಿಯಾಪದ, ವಿಶೇಷಣ+ನಾಮ ಪದ ಮುಂತಾದವುಗಳ ನಡುವೆ ಇರುವ ಸಂಬಂಧ ಈ ರೀತಿಯದು. ಇದನ್ನು ಪ್ರತ್ಯಕ್ಷ ಸಂಬಂಧ (syntagmatic or combinatory relationship) ಎಂದು ಕರೆ ಯೋಣ. ಈ ರೀತಿಯ ಸಂಬಂಧ ಆಡುಮಾತಿನಲ್ಲಿ ತೀರ ಸಾಮಾನ್ಯವಾದದ್ದು. ಆದರೆ

ಮೇಲೆ 'ಬ' ವಿಭಾಗದ ಉದಾಹರಣೆಗಳಲ್ಲಿ ಅಷ್ಟಾಗಿ ಕಂಡುಬರದು– ಮುಖ್ಯವಾಗಿ ವಾಕ್ಯದ ಹೊರಗೆ(=ಸಾಲಿನ ಹೊರಗೆ) ಅಥವಾ ವಾಕ್ಯೋತ್ತರ ಹಂತದಲ್ಲಿ. ವಾಕ್ಯೋತ್ತರ ಹಂತದಲ್ಲಿ ಈ ಸಂಬಂಧದಿಂದ ವ್ಯಕ್ತವಾಗುವ ಮುಖ್ಯಗುಣವೆಂದರೆ ಅರ್ಥದ (=ಆಲೋಚನೆ/ಕ್ರಿಯೆ) ಮುಂದುವರಿಯುವಿಕೆ ಅಥವಾ ನಿರಂತರತೆ.

'ಬ' ವಿಭಾಗದ ಉದಾಹರಣೆಗಳಲ್ಲಿ ಅರ್ಥಾತ್ ನವೋದಯ ಕಾವ್ಯದಲ್ಲಿ ವಾಕ್ಯಾತ್ಮಕ ಸಂಬಂಧ ಅಷ್ಟಾಗಿ ಕಂಡುಬರುವದಿಲ್ಲ ಎಂದು ಹೇಳಿದ್ದೇನೆ. 'ಅಷ್ಟಾಗಿ' ಎನ್ನುವುದಕ್ಕೆ ಕಾರಣ ಈ ಸಂಬಂಧವನ್ನು ಸಂಪೂರ್ಣವಾಗಿ ತೊರೆದು ಭಾಷೆಯನ್ನು ಬಳಸುವುದು ಸಾಧ್ಯವೇ ಇಲ್ಲ. ಕೆಲವು ಹಂತಗಳಲ್ಲಿಯಾದರೂ (ಧ್ವನಿ, ಪದ ಇತ್ಯಾದಿ) ಇದು ಇದ್ದೇ ಇರುತ್ತದೆ. ಮುಖ್ಯವಾಗಿ ವಾಕ್ಯೋತ್ತರ ಹಂತದಲ್ಲಿ ಕವಿಗೆ ಇದು ಹೆಚ್ಚಿನ ಆಯ್ಕೆಯ ಸೌಲಭ್ಯ ನೀಡುತ್ತದೆ. ಮೇಲೆ 'ಬ' ವಿಭಾಗದ ಉದಾಹರಣೆಗಳನ್ನು ತೆಗೆದುಕೊಂಡು ಅವುಗಳ ಸಾಲುಗಳ ಸ್ಥಾನವನ್ನು ಹಿಂದುಮುಂದು ಮಾಡಿ ನೋಡಿ. ಉದಾ. ಮೂರು ಮತ್ತು ನಾಲ್ಕರಲ್ಲಿ ಇದರಿಂದಾಗಿ ಅರ್ಥದ ಮೇಲೆ ಯಾವ ಪರಿಣಾಮವೂ ಆದಂತೆ ಕಂಡುಬರುವುದಿಲ್ಲ. ಉದಾ. ಐದರಲ್ಲಿ ಮಾತ್ರ ಎರಡನೆಯ ವಾಕ್ಯವನ್ನು ಮೊದಲು ಉಚ್ಚರಿಸಿ ಇನ್ನೊಂದನ್ನು ಆಮೇಲೆ ಉಚ್ಚರಿಸಿದರೆ ಅದು ಅಷ್ಟು ಸರಿಯಲ್ಲ ಎನಿಸಬಹುದು. ಇಲ್ಲಿ ಅರ್ಥಹಾನಿಯಾಗುತ್ತದೆ ಎಂದು ಹೇಳದೆ 'ಸರಿಯಲ್ಲ ಎನಿಸಬಹುದು' ಅಂದದ್ದಕ್ಕೆ ಕಾರಣ 'ಹಾರಿತು' ಹಾಗೂ 'ಜ್ವಲಿಸಿತು' ಎಂಬ ಕ್ರಿಯಾರೂಪಗಳು ಈ ಚರಣದಲ್ಲಿ ಇವೇ ಅನುಕ್ರಮದಲ್ಲಿ ಬರಬೇಕೆಂಬುದಕ್ಕೆ ತರ್ಕಬದ್ಧ ಕಾರಣಗಳೇನೂ ಇಲ್ಲಿಲ್ಲ. ಇವು ಇಲ್ಲಿ ಅನುಕ್ರಮವಾಗಿ ಒಂದರ ಇನ್ನೊಂದು ಆಗುವ ಕ್ರಿಯೆಯನ್ನು ಹೇಳುತ್ತವೆ ಎಂಬುದಕ್ಕೆ ಇಲ್ಲಿ ಆಧಾರವಿಲ್ಲ. ಯಾಕೆಂದರೆ ಇಲ್ಲಿ ಜ್ವಲಿಸುವುದಕ್ಕೆ ಕಾರಣ ಕಣ್ಣ ಹೊರಳು: ಹಾರುವುದಕ್ಕೆ ಕಾರಣ ಇದಲ್ಲ. ಬೇರೆ ಯಾವ ಪದವೂ ಇಲ್ಲಿ ಇವುಗಳ ನಡುವಿನ ಸಂಬಂಧವನ್ನು ಹೇಳುವುದಿಲ್ಲ. ಆದರೂ ಇವು ಇದೇ ಅನುಕ್ರಮದಲ್ಲಿರುವುದು ಸರಿ ಅನಿಸಬಹುದು. ಈ ಅನಿಸಿಕೆಯನ್ನು (ತರ್ಕಶನಿಯನ್ನು ದೂರ ತೊಲಗಿಸಿ) ಒಪ್ಪಿಕೊಳ್ಳೋಣ. ಒಪ್ಪಿಕೊಂಡ ಮೇಲೆ ಕಾರಣ ಹುಡುಕಬೇಕಷ್ಟೆ? ಕೆಲವು ಶಬ್ದಗಳು (lexical items) ರೂಢಿಯಿಂದ ಅಥವಾ ಇತರ ಕಾರಣಗಳಿಂದ ಒಂದು ರೀತಿಯ ಸಹಜವಾದ ವರ್ಗಸಂಬಂಧವನ್ನು (natural class) ತೋರಿಸುತ್ತವೆ: ಹಾಗೂ ಅವುಗಳ ಬಳಕೆಯಿಂದಾಗಿ (ಅಥವಾ ಬೇರೆ ಕಾರಣಗಳಿಂದಾಗಿ) ಒಂದು ರೀತಿಯ ನಿರಂತರತೆ( continuity )ಯನ್ನೂ ಹೇಳುತ್ತವೆ. ಉದಾಹರಣೆಗೆ ಗಂಡಸರು-ಹೆಂಗಸರು, ಹಾಡು-ಹಾಕುವುದು-ಕೆಡಹು, ತಿನ್ನು-ಕುಡಿ, ಮನುಷ್ಯ-ಪ್ರಾಣಿ, ಬಡಿ-ತಿವಿ-ಇರಿ-ಕಡಿ-ಕೊಲ್ಲು ಈ ಮುಂತಾದ ಶಬ್ದಸಮುದಾಯಗಳು ಇದೇ ಅನುಕ್ರಮದಲ್ಲಿ ಬಳಸಿದಾಗ ಕ್ರಿಯೆ ಅಥವಾ ಸ್ಥಿತಿಯ ನಿರಂತರತೆಯನ್ನು ಸೂಚಿಸುತ್ತವೆ. ಮೇಲಿನ ಉದಾಹರಣೆಯಲ್ಲಿ ಒಂದು ಅನುಕ್ರಮವಿದೆ ಎನಿಸಿದ್ದರೆ ಕಾರಣ

ಇದೇ. ಹೀಗೆ ಕವನದ ಸಾಲುಗಳಲ್ಲಿರಬಹುದಾದ ಇಂತಹ ಸಂಬಂಧವನ್ನು ಒಪ್ಪಿಕೊಂಡರೂ ಒಟ್ಟಿನಲ್ಲಿ ಹೀಗೆ ಹೇಳಬಹುದು. ನವೋದಯ ಕವನಗಳಲ್ಲಿ ಒಂದು ಸಾಲು ಹಾಗೂ ಇನ್ನೊಂದು ಸಾಲುಗಳ ನಡುವಿನ ಸಂಬಂಧ ದುರ್ಬಲವಾದದ್ದು; ಆದ್ದರಿಂದ ಒಂದು ಚರಣ ಹಾಗೂ ಇನ್ನೊಂದು ಚರಣಗಳ ನಡುವಿನ ಸಂಬಂಧ ಇನ್ನೂ ದುರ್ಬಲವಾದದ್ದು (ಈ ಮಾತು ನವೋದಯ ಕಾವ್ಯಪರಂಪರೆಯಲ್ಲಿಯ ಎಲ್ಲ ಕವನಗಳಿಗೂ ಅನ್ವಯಿಸುತ್ತದೆಂದಲ್ಲ. ಅಪವಾದವಾಗಿ ಅಲ್ಲಲ್ಲಿ ಕೆಲವು ಕವನಗಳಲ್ಲಿ ಪ್ರತ್ಯಕ್ಷವಾದ ಹಾಗೂ ಗಟ್ಟಿಯಾದ ಸಂಬಂಧ ಇರುವುದೆಂಬುದನ್ನು ಮರೆಯುವಂತಿಲ್ಲ. ವಿಶೇಷವಾಗಿ ಬೇಂದ್ರೆಯವರ ಕವನಗಳು ಇಲ್ಲಿ ಉದಾಹರಣೆಯಾಗುತ್ತವೆ. ಒಂದು ಪರಂಪರೆ ಅಥವಾ ಪ್ರಕಾರವನ್ನು ಒಟ್ಟಾಗಿ ಗಮನಿಸುವಾಗ ಅಪವಾದಗಳಿಗೆ ಸಿದ್ಧವಾಗಿಯೆ ಇರಬೇಕಾಗುತ್ತದೆ).

೩

'ಬ' ವಿಭಾಗದ ಮಾದರಿಯ ಕಾವ್ಯದ ಸಾಲುಗಳು ಅಷ್ಟೊಂದು ಮುಖ್ಯವಲ್ಲದ ಇನ್ನೊಂದು ವೈಶಿಷ್ಟ್ಯವನ್ನು ಹೊಂದಿವೆ. ಇವು ಅನೇಕ ಕಡೆಗಳಲ್ಲಿ 'ಇರು' ಧಾತುವಿನಿಂದ ಸಿದ್ಧವಾದ ರೂಪಗಳನ್ನು ಬಳಸಿಕೊಳ್ಳುತ್ತವೆ. ಇನ್ನು ಕೆಲವೆಡೆ ಕ್ರಿಯಾಪದ ಬಳಕೆಯೇ ಇರದು. ಪರಿಣಾಮದ ದೃಷ್ಟಿಯಿಂದ ಸಾಮಾನ್ಯವಾಗಿ ಇವುಗಳ ನಡುವೆ ವ್ಯತ್ಯಾಸವಿಲ್ಲ (ಹೋಲಿಸಿ : ಚಿಂತೆ, ಬಿಡಿಹೂವ ಮುಡಿದಂತೆ : ಚಿಂತೆ ಬಿಡಿಹೂವ ಮುಡಿದಂತಿದೆ). ಆದರೆ ಇತರ ಕ್ರಿಯಾಪದಗಳ ಜೊತೆಗೆ ಆಯಕಟ್ಟಿನ ಸ್ಥಾನದಲ್ಲಿ ಬಳಕೆಯಾದಾಗ 'ಇರು' ಧಾತುವೂ ಮಹತ್ವ ಪಡೆಯುತ್ತದೆ (ಉದಾಹರಣೆಗೆ, ಅಡಿಗರ 'ಭೂತ' ಕವನ ನೋಡಿ) ಇಂಥ ಎಚ್ಚರಿಕೆ ನವೋದಯ ಕವನಗಳಲ್ಲಿ ಬಹುಮಟ್ಟಿಗೆ ಇಲ್ಲ. 'ಇರು' ಧಾತುವಿನ ಜೊತೆಗೆ ಇನ್ನೂ ತೀವ್ರತರವಾದ ಕ್ರಿಯೆಯನ್ನು ಹೇಳುವ, ಚಲನೆಯನ್ನು ಹೇಳುವ ಬಾ, ಹೋಗು, ಹಾರು, ಜ್ವಲಿಸು ಅಥವಾ ತಿನ್ನು ಮುಂತಾದ ಕ್ರಿಯಾಧಾತುಗಳ ಬಳಕೆಯೂ ನವೋದಯ ಕವನಗಳಲ್ಲಾಗಿದೆ. ಆದರೆ ನುಗ್ಗು, ನೂಕು. ತಿವಿ, ಕಡಿ, ಕೊಲ್ಲು ಮುಂತಾದ ಇನ್ನೂ ತೀವ್ರವಾದ ಕ್ರಿಯೆ ಹೇಳುವ ಧಾತುಗಳ ಬಳಕೆ (ಆಗಿದ್ದರೂ) ತೀರ ಕಡಿಮೆ.

೪

ಇಲ್ಲಿಯವರೆಗೆ ಗಮನಿಸಿದ ಸಂಗತಿಗಳನ್ನು ಪಟ್ಟಿಮಾಡಿಕೊಂಡು ಅವು ಕಾವ್ಯಭಾಷೆಯನ್ನು ಹೇಗೆ ರೂಪಿಸುತ್ತವೆ ಅಥವಾ ನಿಯಂತ್ರಿಸುತ್ತವೆ ಎಂಬುದನ್ನು ಈಗ ನೋಡಬಹುದು : ೧. ಆಡುಮಾತಿನಲ್ಲಿ ಹಾಗೂ ನವ್ಯಕಾವ್ಯದಲ್ಲಿ ಕಂಡುಬರುವ ಪ್ರತ್ಯಕ್ಷ ಸಂಬಂಧ (ವಾಕ್ಯೋತ್ತರ ಹಂತದಲ್ಲಿ ಮುಖ್ಯವಾಗಿ) ನವೋದಯ ಕಾವ್ಯದಲ್ಲಿ ಅಷ್ಟಾಗಿ ಇಲ್ಲ: (ಬದಲಾಗಿ) ೨. ಪರೋಕ್ಷ ಸಂಬಂಧ ಹೆಚ್ಚಾಗಿ ಕಂಡುಬರುತ್ತದೆ. ೩. ತೀವ್ರವಾದ ಕ್ರಿಯೆಯನ್ನು ಹೇಳುವ ಕ್ರಿಯಾಧಾತುಗಳ ಬಳಕೆ ಕಡಿಮೆ. ಬದಲಾಗಿ 'ಇರು' ಧಾತುವಿನ ಬಳಕೆ ಹೆಚ್ಚು; ಆದರೆ ಇದರ ಸಾರ್ಥಕ ಬಳಕೆಯಿಲ್ಲ.

ನವ್ಯೋದಯ ಕವನಗಳಲ್ಲಿ ಪ್ರತ್ಯಕ್ಷಸಂಬಂಧ ಹೆಚ್ಚಾಗಿ ತೋರದ್ದರಿಂದ ಸಾಲು-ಸಾಲುಗಳ ನಡುವಿನ ಸಂಬಂಧ ದುರ್ಬಲವಾಗುತ್ತದೆ ಎಂದು ಹಿಂದೆ ಹೇಳಿದ್ದನ್ನು ನೆನಪಿಸಿ ಕೊಳ್ಳೋಣ (ನೋಡಿ ಭಾಗ ೨). ಹೀಗೆ ಸಾಲುಗಳು ಸಂಬಂಧ ಕಡಿದುಕೊಂಡ ಮೇಲೆ ಒಂದು ಸಾಲು ಇನ್ನೊಂದು ಸಾಲಿಗಾಗಿ ದುಡಿಯುವ ಹಾಗೂ ಮುಂದಿನ ಸಾಲು (ಗಳು) ಹಿಂದಿನ ಸಾಲುಗಳ ಅರ್ಥದ ಸಹಾಯದಿಂದ ಬೆಳೆಯುವುದು ತಪ್ಪಿಹೋಗು ತ್ತದೆ. ಪ್ರತಿಸಾಲೂ ಅದರ ಮಟ್ಟಿಗೆ ಮಾತ್ರ ದುಡಿಯುತ್ತದೆ. ಇದು ಕವನದ ಭಾಷೆಯ ಮೇಲೆ ಇನ್ನೊಂದು ರೀತಿಯ ಪರಿಣಾಮವನ್ನುಂಟುಮಾಡುತ್ತದೆ. ಆಯಾ ಸಾಲಿನಲ್ಲಿ ಯಾವುದೋ ಪದ(ಗಳು) ಕೇಂದ್ರವಾಗಿ ಬರುತ್ತದೆ(ವೆ). ಅಂದರೆ ಅವುಗಳ ಮೇಲೆ ಒತ್ತು ಬೀಳುತ್ತದೆ. ಆದ್ದರಿಂದ ಸಾಲಿನಲ್ಲಿಯ ಉಳಿದ ಪದಗಳು ಇದನ್ನು (ಇವುಗಳನ್ನು) ಪೋಷಿಸಲು ಬರುತ್ತವೆ. ಹೀಗೆ ಒಂದು ಸಾಲಿನಲ್ಲಿ(ವಾಕ್ಯದಲ್ಲಿ) ಕರ್ತೃವೋ ಕರ್ಮಪದವೋ ಕ್ರಿಯಾಪದವೋ ಮುಖ್ಯವಾಗಬಹುದು. ಇದು ಪ್ರಾಸ ಸ್ಥಾನದಿಂದ ಅಥವಾ ಬೇರೆ ವಿಧಾನದಿಂದ ಗುರುತಿಸಲ್ಪಡುತ್ತದೆ. ಒಮ್ಮೊಮ್ಮೆ ವಾಕ್ಯದಲ್ಲಿ ಕ್ರಿಯಾಪದವಿಲ್ಲದಿದ್ದರೆ ಅಥವಾ ಇರು ಧಾತುವಿನ ಬಳಕೆಯಾಗಿದ್ದರೆ ಒತ್ತು ಸಂಪೂರ್ಣವಾಗಿ ನಾಮಪದದ ಮೇಲೆ ಬೀಳುತ್ತದೆ. ಈ ಹಿಂದೆ ಕೊಟ್ಟ 'ಬ' ವಿಭಾಗದಲ್ಲಿಯ ಉದಾ. ಮೂರನ್ನು ಗಮನಿಸಿ. ಇಲ್ಲಿ ಒತ್ತು ಇರುವುದು 'ಮಾತು' ಪದದ ಮೇಲೆ. ಉದಾ. ನಾಲ್ಕರಲ್ಲಿ ಎರಡನೆಯ ಸಾಲಿನಲ್ಲಿ ಒತ್ತು ಇರುವುದು 'ಹಾಡು' ಭಾಗದ ಮೇಲೆ ('ಹಾಡಿವೆ' ಎಂಬುದನ್ನು ಎರಡು ರೀತಿಯಲ್ಲಿ ಅರ್ಥೈಸಬಹುದು : ಒಂದು, ಹಾಡು ಧಾತುವಿನ ಭೂತಕಾಲ ರೂಪ; ಇನ್ನೊಂದು, ಹಾಡು+ಇವೆ ಎಂದಾಗಿ ಹಾಗೆಯೆ 'ನೀಡಿದೆ' ಎಂಬುದಕ್ಕೂ ನೀಡಿದೆ ಹಾಗೂ ನೀಡಿ+ಇದೆ ಎಂದು ಅರ್ಥೈಸ ಬಹುದು. ಬೇಂದ್ರೆ ಕಾವ್ಯದಲ್ಲಿ ಶ್ಲೇಷೆಯ ಬಳಕೆ ಸಹಜವಾದರೂ ಇಲ್ಲಿ ಎರಡನೆಯ ರೀತಿಯ ಅರ್ಥವೇ ಮುಖ್ಯವಾದದ್ದು). ಮೊದಲ ಸಾಲಿನಲ್ಲಿಯೂ 'ಮರವು ಮುಗಿ ಲಿಗೆ ನೀಡಿ'ದ (=ಸ್ಥಿತಿ) ಮೇಲೆ ಒತ್ತು. ಇದೂ ನಾಮಪದ ಮಾಡುವ ಕೆಲಸವನ್ನೇ ಇಲ್ಲಿ ಮಾಡುತ್ತಿದೆ.

ವಾಕ್ಯದ ಒಂದೇ ಪದದ ಮೇಲೆ ಒತ್ತು ಇದ್ದರೆ ಅದನ್ನು ಪೋಷಿಸುವುದರ ಬಗ್ಗೆ ಕವಿ ಜಾಗರೂಕನಾಗಿರುತ್ತಾನೆ. ಅದರ ಕಡೆಗೆ ಗಮನ ಸೆಳೆಯುವುದೆ ಇದರ ಉದ್ದೇಶ. ಆದ್ದರಿಂದ ನಾಮಪದ ಮುಖ್ಯವಾಗಿದ್ದರೆ ಸಹಜವಾಗಿ ವಿಶೇಷಣಗಳ ಬಳಕೆಯೂ ಆಗು ತ್ತದೆ. ವಿಶೇಷಣದ ಕೆಲಸವನ್ನೇ ಇನ್ನೂ ಹೆಚ್ಚು ಪರಿಣಾಮಕಾರಿಯಾಗಿ ಮಾಡುವ ಉಪಮೆ, ರೂಪಕಗಳು ಕವಿಯ ಉದ್ದೇಶಕ್ಕೆ ಇನ್ನೂ ಹೆಚ್ಚು ಸಹಾಯಕಾರಿ. ಉದಾ ಹರಣೆಗೆ 'ಒಳ್ಳೆಯಮಾತು' ಎಂಬುದಕ್ಕಿಂತ 'ಚಿನ್ನದಂತಹ ಮಾತು' ಎಂಬ ಬಳಕೆ ಹೆಚ್ಚು ಪರಿಣಾಮಕಾರಿ ಎನಿಸಬಹುದು. ನವ್ಯೋದಯ ಕವನಗಳಲ್ಲಿ ಉಪಮೆ- ರೂಪಕಗಳ ಅಥವಾ ಹೋಲಿಕೆಗಳ ಬಳಕೆ (ನವ್ಯಕಾವ್ಯದ ಹಿನ್ನೆಲೆಯಲ್ಲಿ) ತುಲನಾತ್ಮಕ

ವಾಗಿ ಹೆಚ್ಚು ಎಂಬುವನ್ನು ಈ ಕೆಳಗಿನ ಕೋಷ್ಟಕ ಮನವರಿಕೆಮಾಡಿಕೊಳ್ಳಬಹುದು. ಇಲ್ಲಿ ಕವನಸಂಗ್ರಹ ಅಥವಾ ಕವನಗಳನ್ನು ಆಯ್ದುಕೊಳ್ಳುವಾಗ ಯಾವುದೇ ನಿಯಮ ವನ್ನನುಸರಿಸದೆ ಮನಸ್ಸಿಗೆ ಬಂದಂತೆ ಎತ್ತಿಕೊಳ್ಳಲಾಗಿದೆ. ಕವನದಲ್ಲಿಯ ವಾಕ್ಯಸಂಖ್ಯೆ ಯನ್ನು ನಿರ್ಧರಿಸಿ ಅವರ ಆಧಾರದ ಮೇಲೆ ಉಪಮೆ–ರೂಪಕಗಳ ಶೇಕಡಾವಾರನ್ನು ಲೆಕ್ಕಹಾಕಲಾಗಿದೆ. (ಇನ್ನೂ ಹೆಚ್ಚು ಕಟ್ಟುನಿಟ್ಟಾಗಿ ನೋಡಿದಲ್ಲಿ ವಾಕ್ಯಸಂಖ್ಯೆಯಲ್ಲಿ ಅಲ್ಪ ಸ್ವಲ್ಪ ಏರಿಳಿತಗಳು ಕಾಣಿಸಿಕೊಳ್ಳಬಹುದು. ಆದರೆ ಅದು ಉಪಮೆ-ರೂಪಕಗಳ ಶೇಕಡಾ ವಾರಿನ ಮೇಲೆ ಅಂತಹ ಪರಿಣಾಮ ಮಾಡಲಾರದು.) ಶೇಕಡಾವಾರನ್ನು ಸೂಚಿಸುವಾಗ ಅಂಶವನ್ನು ಕೈಬಿಟ್ಟು ಹತ್ತಿರದ ಪೂರ್ಣಸಂಖ್ಯೆಯನ್ನು ತೆಗೆದುಕೊಳ್ಳಲಾಗಿದೆ. ಉದಾ : ೧.೭ ಇದ್ದರೆ ೨ ಎಂದು ಗಣಿಸಲಾಗಿದೆ. ಒಂದು ಸಾಲು/ವಾಕ್ಯ ಹಾಗೂ ಇನ್ನೊಂದು ಸಾಲು/ವಾಕ್ಯಗಳ ನಡುವೆ ಹೋಲಿಕೆಯಿದ್ದರೆ ಅಥವಾ ಒಂದೇ ವಾಕ್ಯದ ಎರಡು ಒಳವಾಕ್ಯಗಳ ನಡುವೆ ಹೋಲಿಕೆಯಿದ್ದರೆ ಅದನ್ನು ಪ್ರತ್ಯೇಕವಾಗಿ ಲೆಕ್ಕಹಾಕಿ ಅದರ ಶೇಕಡಾವಾರನ್ನೂ ಪಕ್ಕದಲ್ಲಿ ಸೂಚಿಸಿದೆ. ಉದಾಹರಣೆಗೆ, 'ಚಿನ್ನದಂತಹ ಮಾತು' ಅಥವಾ 'ಕತ್ತಲೆಯ ಕೆಸರು' ಎಂಬ ರೀತಿಯ ಹೋಲಿಕೆಗಳ ಸಂಖ್ಯೆ ಹಾಗೂ ಶೇಕಡಾ ವಾರು ಕೋಷ್ಟಕದ ೫, ೭ನೆಯ ಕಾಲಮ್ಮಿನಲ್ಲಿವೆ. 'ನೀರೊಳಗೆ ವೀಣೆ ಮಿಡಿದಂತೆ' 'ಆಡಿದ ಮಾತು' 'ಹುಚ್ಚಿಬೇವಿನ ತಲೆಗೆ ಹಕ್ಕಿಹಾಡಿನ ಹೆಡಿಗೆ' ಯಂತಹ ಹೋಲಿಕೆ ಗಳ ಸಂಖ್ಯೆ, ಶೇಕಡಾವಾರುಗಳು ೭, ೮ ನೆಯ ಕಾಲಮ್ಮಿನಲ್ಲಿವೆ (ಇಲ್ಲಿ 'ಹುಚ್ಚಿಬೇವು' 'ಹಾಡಿನ ಹೆಡಿಗೆ' ಎಂಬವು ಮತ್ತೆ ಮೊದಲರೀತಿಯ ಹೋಲಿಕೆಗಳು.)

ವಾಕ್ಯದಲ್ಲಿ ನಾಮಪದಕ್ಕೆ (ಮುಖ್ಯವಾಗಿ ಇದು ಕರ್ತೃವಾಗಿ ಬಳಕೆಯಾದಾಗ) ಒತ್ತು ಬಿದ್ದಾಗ ಉಪಮೆ-ರೂಪಕಗಳಂತಹ ಹೋಲಿಕೆಗಳ ಬಳಕೆ ಹೆಚ್ಚಾಗುವುದರ ಜೊತೆಗೆ ಇನ್ನೊಂದು ರೀತಿಯ ಪ್ರಯೋಗವೂ ಕಾಣಿಸಿಕೊಳ್ಳುತ್ತದೆ. ಅದು ನಿರ್ಜೀವವಸ್ತು-ವಿಚಾರಗಳಿಗೆ ಜೀವಾರೋಪಣೆಯ (Personification) ಕ್ರಿಯೆ. (ಉದಾ : 'ಮರವು ಮಾತನಾಡಿತು') ಅಥವಾ ಇದಕ್ಕೆ ತೀರ ವಿರುದ್ಧವಾದ ಕ್ರಿಯೆಯೂ ನಡೆಯ ಬಹುದು (ಉದಾ : 'ನಾ ಮಾಮರಾ ಆಗೇನೊ'). ಇದೂ ನಾಮಪದದ ಗುಣವನ್ನು ಬದಲಿಸುವ ಅಥವಾ ತೀವ್ರಗೊಳಿಸುವ ಇನ್ನೊಂದು ಉಪಾಯ. ನವೋದಯಕಾವ್ಯ ದಲ್ಲಿ ಈ ರೀತಿಯ ಬಳಕೆ ಹೆಚ್ಚು ಎಂಬುದನ್ನು ನೋಡಬಹುದು. ಇವೆಲ್ಲ (ಹೋಲಿಕೆ ಹಾಗೂ ಜೀವಾರೋಪಣಕ್ರಿಯೆ) ನವೋದಯಕಾವ್ಯದಲ್ಲಿ ಕರ್ತೃವಿನ ಸ್ಥಾನದಲ್ಲಿ ಬರುವ ನಾಮಪದಕ್ಕೆ ಕೊಟ್ಟಿರುವ ಮಹತ್ವವನ್ನು ಹೇಳುತ್ತವೆ.

ಹೀಗೆ ಕಾವ್ಯದಲ್ಲಿ ಪ್ರತ್ಯಕ್ಷಸಂಬಂಧವನ್ನು ತರದಿರುವುದು ಅಥವಾ ಅದನ್ನು ಕಡೆಗಣಿಸು ವುದು ಹಾಗೂ ಕ್ರಿಯಾಪದಗಳಲ್ಲಿ ಕೆಲವನ್ನೆ ಆಯ್ದುಕೊಳ್ಳುವುದು ಅಥವಾ ಕ್ರಿಯಾಪದ ವನ್ನೆ ಬಳಸದಿರುವುದು ಪರೋಕ್ಷವಾಗಿ ಹೋಲಿಕೆಯ ರೂಪಗಳನ್ನು ಹೆಚ್ಚಾಗಿ ಬಳಸು

ವುದಕ್ಕೆ ಕಾರಣವಾಗುತ್ತವೆ. ಅಥವಾ ಇಂತಹ ರೂಪಗಳನ್ನು ಬಳಸುವಂತೆ ಕವಿಯನ್ನು ಒತ್ತಾಯಿಸುತ್ತವೆ ಎಂಬುದು ಮೇಲಿನ ವಿವರಣೆ-ಕೋಷ್ಟಕಗಳಿಂದ ಸಿದ್ಧವಾಗುತ್ತದೆ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಭಾಷೆಯ ಕೆಲವು ಅಂಶಗಳಲ್ಲಿ ಮಾಡುವ ಆಯ್ಕೆ ಭಾಷೆಯ ಇನ್ನು ಕೆಲವು ಅಂಶಗಳನ್ನು ನಿಯಂತ್ರಿಸುತ್ತದೆ.

೫

ಮೇಲಿನ ವಿವರಣೆ. ಕೋಷ್ಟಕಗಳ ಆಧಾರದಿಂದ ಸದ್ಯ ಒಂದು ಅವಸರದ ತೀರ್ಮಾನಕ್ಕೆ ಬರಬಹುದು. ಅದು. ಕುವೆಂಪು ಉಳಿದವರಿಗಿಂತ ಹೆಚ್ಚಾಗಿ ಹೋಲಿಕೆಯ ರೂಪಗಳನ್ನು ಉಪಯೋಗಿಸುವುದರಿಂದ ಅವರ ಕವನಗಳಲ್ಲಿ ಸಾಲುಗಳು ಜಾಳುಜಾಳಾಗಿ ಇರುತ್ತವೆ ಹಾಗೂ ಈ ಕಾರಣದಿಂದ ಅವರ ಕವನಗಳಲ್ಲಿ ಸ್ಪಷ್ಟವಾದ ಬೆಳವಣಿಗೆ ಇರುವುದಿಲ್ಲ. (ಈ ಸಂಬಂಧದ ವಿವರಣೆಗೆ ಮುಂದೆ ಭಾಗ ೬ ನ್ನು ನೋಡಿ.) ಆದರೆ ಈ ಸರಳವಾದ ತೀರ್ಮಾನ ಎಲ್ಲ ಸಂದರ್ಭದಲ್ಲಿಯೂ ಸರಿಯಲ್ಲ. ಕಾರಣ (೧) ಪ್ರತ್ಯಕ್ಷ ಸಂಬಂಧ ಇಲ್ಲದಿರುವುದು ಹೋಲಿಕೆಯ ರೂಪಗಳನ್ನು ಹೆಚ್ಚಾಗಿ ಬಳಸುವಂತೆ ಮಾಡುತ್ತವೆ ಎಂಬುದು ನಿಜವಾದರೂ ಪ್ರತ್ಯಕ್ಷ ಸಂಬಂಧವಿದ್ದೂ ಹೋಲಿಕೆಗಳನ್ನು ಬಳಸುವುದು ಸಾಧ್ಯ ಹಾಗೂ ಬಳಸುವ ಸಂಭವವೂ ಇದೆ. ಉದಾಹರಣೆಗೆ, ಬೇಂದ್ರೆ ಹಾಗೂ ಅಡಿಗರ ಅನೇಕ ಉತ್ತಮ ಕವನಗಳು ಪ್ರತ್ಯಕ್ಷ-ಪರೋಕ್ಷ ಸಂಬಂಧಗಳೆರಡನ್ನೂ (ಅರ್ಥಪೂರ್ಣವಾಗಿ) ಬಳಸಿಕೊಂಡಿವೆ ಎಂಬುದನ್ನು ನೋಡಬಹುದು. ಮೇಲಿನ ಕೋಷ್ಟಕದಲ್ಲಿ ಪ್ರತ್ಯಕ್ಷ ಸಂಬಂಧಕ್ಕೆ ಸಂಬಂಧಿಸಿದ ಅಂಕಿ-ಅಂಶಗಳನ್ನು ನೀಡಿಲ್ಲ. ಆದ್ದರಿಂದ ಆ ಬಗ್ಗೆ ಅದು ಏನೂ ಹೇಳುವುದಿಲ್ಲ. (೨) ಪ್ರತ್ಯಕ್ಷ ಸಂಬಂಧವಿಲ್ಲದೆಯೂ ಕವನದಲ್ಲಿ ಬೆಳವಣಿಗೆ ಇರುವುದು ಸಾಧ್ಯ. ಇದು ಸಾಧ್ಯವಾಗುವುದು ಕವನದಲ್ಲಿಯ ಶಬ್ದಗಳು. ಅಥವಾ ರಚನೆಗಳು ಒಂದು ನಿರ್ದಿಷ್ಟವಾದ ನಿರಂತರತೆ (continuity) ಯನ್ನು ಸೂಚಿಸುವಂತೆ ಬಳಕೆಗೊಂಡಾಗ ಮಾತ್ರ. (ಶಬ್ದಗಳ ನಡುವೆ ಮೂಡುವ ಈ ಸಂಬಂಧದ ಬಗ್ಗೆ ಕೆಲವು ಮಾತುಗಳನ್ನು ಹಿಂದೆ ಭಾಗ ೨ ರಲ್ಲಿ ಹೇಳಿದೆ.) ಉದಾಹರಣೆಗಾಗಿ, ಬೇಂದ್ರೆಯವರ 'ಭಾವಗೀತ' ಅಥವಾ 'ನಾದಲೀಲೆ' ಕವನವನ್ನು ನೋಡಬಹುದು. ಆದರೆ ಈ ಎಚ್ಚರಿಕೆ ಬಹುಪಾಲು ನವೋದಯ ಕವಿಗಳ ಬಹುಪಾಲು ಕವನಗಳಲ್ಲಿ ಇರುವುದಿಲ್ಲ.

೬

ಹಿಂದಿನ ಭಾಗಗಳಲ್ಲಿ ನವೋದಯಕಾವ್ಯದ ಭಾಷೆಯ ವೈಶಿಷ್ಟ್ಯ ಮತ್ತು ಅವು ಭಾಷೆಯ ಬಳಕೆಯ ಮೇಲೆ ಯಾವ ರೀತಿಯ ಮಿತಿಯನ್ನು ಹೇರುತ್ತವೆ ಅಥವಾ ನಿಯಂತ್ರಣ ಸಾಧಿಸುತ್ತವೆ ಎಂಬುದನ್ನು ನೋಡಿದ್ದೇವೆ. ಈಗ ಈ ಮಿತಿ ಕವಿಯ ಅನುಭವ-ಆಲೋಚನೆಗಳನ್ನು ಮುಂದಿಡುವಲ್ಲಿ ಹಾಗೂ ವೈಯಕ್ತಿಕತೆ (individuality)ಯನ್ನು ನಿರ್ಧರಿಸುವುದರಲ್ಲಿ ಯಾವ ರೀತಿಯ ಪ್ರಭಾವ ಬೀರುತ್ತವೆ ಎಂಬುದನ್ನು ನೋಡಬಹುದು.

ಪರೋಕ್ಷಸಂಬಂಧವನ್ನೆ ಹೆಚ್ಚಾಗಿ ಆಶ್ರಯಿಸಿದಾಗ ಸಾಲು – ಸಾಲುಗಳ ನಡುವಿನ ಸಂಬಂಧ ಕಡಿಮೆಯಾಗುತ್ತದೆ ಹಾಗೂ ಕವನದಲ್ಲಿ ಪರಸ್ಪರ ಸಂಬಂಧವನ್ನು ಸೂಚಿಸುವ ಕೆಲವು ಶಬ್ದಗಳ ಬಳಕೆ ವ್ಯವಸ್ಥಿತವಾಗಿಲ್ಲದಿದ್ದರೆ ಇದು ಇನ್ನೂ ಕಡಿಮೆಯಾಗುತ್ತದೆ ಎಂಬುದನ್ನು ಹಿಂದೆಯೆ ಹೇಳಿದೆ. ಇದರ ಪರಿಣಾಮ : ಕವನ ನಿರಂತರವಾದ ಬೆಳವಣಿಗೆಯನ್ನು ತೋರಿಸುವುದು ಕಷ್ಟ. ಇದರಿಂದಾಗಿ ಒಂದು ವಸ್ತು-ವಿಚಾರ ಅಥವಾ ಅನುಭವದ ವಿವಿಧಮುಖಗಳ ಪರಿಚಯ ಹಾಗೂ ಅದರ ಗುಣತೀವ್ರತೆಯನ್ನು ಒದಗಿಸುವುದು ಮಾತ್ರ ಸಾಧ್ಯ. ಅಂದರೆ ಕವನ ಅನುಭವವನ್ನಷ್ಟೆ ನೀಡುತ್ತದೆ, ಆಲೋಚನೆಗೆ ತೊಡಗಿಸುವುದಿಲ್ಲ. ಅನುಭವದ ಮುಖಗಳು ಅಥವಾ ಹಂತಗಳ ನಡುವಿನ ಸಂಬಂಧವನ್ನು ಹೇಳಲು ಈ ಭಾಷೆಗೆ ಆಗದ್ದರಿಂದ ಕವನ ಸಂಕೀರ್ಣತೆಯನ್ನು ಪಡೆಯುವುದಿಲ್ಲ. ಕುವೆಂಪು ಅವರ ಅನೇಕ ಕವನಗಳು ಇಲ್ಲಿ ಉದಾಹರಣೆ. ಒಂದು ವೇಳೆ ಕವನ ಅನುಭವ ಮತ್ತು ವಿಚಾರ ಎರಡನ್ನೂ ಹೇಳಲು ತೊಡಗಿದ್ದರೆ ವಿಚಾರ (ಅಥವಾ ತೀರ್ಮಾನ) ಅನುಭವದಿಂದ ಸಿದ್ಧವಾಗದೆ ಅವೆರಡೂ ಪ್ರತ್ಯೇಕವಾಗಿ ಉಳಿಯುತ್ತವೆ. ಕವನ ವಿಚಾರವೊಂದನ್ನೆ ಹೇಳಲು ತೊಡಗಿದಾಗ ಅದು ಹೇಳಿಕೆಗಳ (Statements) ಮಾಲೆಯಾಗಿ ಕವನ ಕೇವಲ ಪದ್ಯವಾಗಬಹುದು ಅಥವಾ ಪದ್ಯರೂಪದ ಗದ್ಯವಾಗಬಹುದು. ಉದಾಹರಣೆಗೆ, ಕುವೆಂಪು ಅವರ 'ನವಿಲು' ಸಂಗ್ರಹದ 'ಕಿಟ್ಟಯ್ಯ', 'ಕೇಶಿರಾಜ' ಮುಂತಾದ ಅನೇಕ ಕವನಗಳನ್ನು ನೋಡಬಹುದು. ಕೇವಲ ಪರೋಕ್ಷ ಸಂಬಂಧವನ್ನೆ ಹೆಚ್ಚಾಗಿ ಆಶ್ರಯಿಸಿದ ಕವಿಗೆ ನಿರ್ದಿಷ್ಟ ಪದ, ಪದಪುಂಜಗಳ ಮೇಲೆ ಒತ್ತುಕೊಡಲು ಪ್ರಾಸ. ಅನುಪ್ರಾಸ ಗಣಯೋಜನೆ ಮೊದಲಾದವುಗಳ ಅವಶ್ಯಕತೆಯುಂಟಾಗಿ ಅವು ನಿರ್ದಿಷ್ಟ ರೂಪವನ್ನು ಅಪೇಕ್ಷಿಸಬಹುದು (ಇಲ್ಲಿ ರೂಪ ಎಂದರೆ ಸಾಲುಗಳ ವ್ಯವಸ್ಥೆ ಎಂದರ್ಥ). ನವೋದಯ ಕವಿಗಳು ರಗಳೆ, ಷಟ್ಪದಿಗಳನ್ನು ಚಿಕ್ಕ ರೂಪಗಳಾಗಿ ಒಡೆದುಕೊಂಡದ್ದನ್ನೂ ಸಾನೆಟ್ ಮುಂತಾದ ಹೊಸರೂಪಗಳನ್ನು ಸ್ವೀಕರಿಸಿದ್ದನ್ನೂ ಇಲ್ಲಿ ನೆನೆಯಬಹುದು.

ಪ್ರತ್ಯಕ್ಷ ಸಂಬಂಧಕ್ಕೆ ಮಹತ್ವಕೊಟ್ಟಿಲ್ಲದುದು ಹಾಗೂ ಅದರಿಂದಾಗಿ ಕವನದಲ್ಲಿ ತರ್ಕಬದ್ಧ ಸಂಬಂಧ ಬಿದ್ದುಹೋಗುವುದು ನವೋದಯ ಕವಿಗಳಿಗೆ (ಕವನಗಳಿಗಲ್ಲ) ಒಂದು ರೀತಿಯಲ್ಲಿ ಸಹಾಯಕಾರಿಯೂ ಆಗಿದೆಯೆನ್ನಬಹುದು. ತರ್ಕಬದ್ಧವಲ್ಲದ ವಿಚಾರಗಳನ್ನು (ಆದರ್ಶವನ್ನು) ಕವಿ ಕವನದಲ್ಲಿ ತುಂಬಲು ಇದು ಅವಕಾಶ ನೀಡುತ್ತದೆ. ಗಮನಿಸಿ : ಪ್ರತ್ಯಕ್ಷಸಂಬಂಧವಿದ್ದಲ್ಲಿ ಇದು ಅಸಾಧ್ಯವೆಂದು ಅರ್ಥವಲ್ಲ ಅಥವಾ ಇಲ್ಲಿ ಕವಿಗೆ ಆದರ್ಶವನ್ನು ಮುಂದಿಡಲು ಭಾಷೆಯೆ ಕಾರಣವೆಂದು ಹೇಳುತ್ತಿಲ್ಲ: ಭಾಷೆ ಇದಕ್ಕೆ ಸಹಾಯಕಾರಿಯಾಗಿದೆ ಎಂದು ಅರ್ಥ. ಬೇಂದ್ರೆಯವರ 'ಜೋಗಿ' ಮತ್ತಿತರ ಕೆಲವು ಉತ್ತಮ ಕವನಗಳು (–ಬೇರೆಯವರ ಕವನಗಳೂ ಹೀಗಿರಬಹುದು–) ಬೆಳವಣಿಗೆಯನ್ನೂ ಸಂಕೀರ್ಣತೆಯನ್ನೂ ಅರ್ಥದ ವ್ಯಾಪಕತೆಯನ್ನೂ ರಕ್ಷಿಸಿಕೊಂಡಿವೆಯಲ್ಲಾ

ಎಂದು ಇಲ್ಲಿ ಪ್ರಶ್ನೆ ಏಳಬಹುದು. ಪರೋಕ್ಷಸಂಬಂಧ, ಜೊತೆಗೆ ಪ್ರತ್ಯಕ್ಷಸಂಬಂಧ–ಇವೆರಡೂ ಅಲ್ಲಿ ಅರ್ಥಪೂರ್ಣವಾಗಿ ಬಳಕೆಯಾಗಿವೆ ಎಂಬುದೆ ಇಲ್ಲಿ ಉತ್ತರ.

ಇಲ್ಲಿಯ ವರೆಗೆ ಹೇಳಿದ ಕಾವ್ಯಭಾಷೆಯಲ್ಲಿ ತೋರಿರಬಹುದಾದ ಎರಡು ರೀತಿಯ ಸಂಬಂಧಗಳಿಗೂ ಕಾವ್ಯದಲ್ಲಿ ಕವಿಯ ವೈಯಕ್ತಿಕತೆ ವ್ಯಕ್ತವಾಗುವುದಕ್ಕೂ ಸಂಬಂಧವಿದೆ ಎಂಬ ಇನ್ನೊಂದು ಮುಖ್ಯವಾದ ತೀರ್ಮಾನವನ್ನೂ ಇಲ್ಲಿ ಪರಿಶೀಲಿಸಬಹುದು. ಆಡು ಮಾತಿನಲ್ಲಿ ವ್ಯಕ್ತಿ (ಭಾಷೆಯ ಸಾಮಾನ್ಯ ನಿಯಮಗಳನ್ನು ಒಪ್ಪಿಕೊಂಡ ಮೇಲೆಯೂ) ತನಗೇ ವಿಶಿಷ್ಟವಾದ ದನಿ. ಶಬ್ದ, ರಚನೆಗಳನ್ನು ಬಳಸಿ ತನ್ನ ವಿಶಿಷ್ಟತೆಯನ್ನು ಅಥವಾ ವ್ಯಕ್ತಿಭಾಷೆಯನ್ನು (idiolect) ಮೆರೆಯುತ್ತಾನೆ. ವ್ಯಕ್ತಿಯ ದೈಹಿಕ, ಬೌದ್ಧಿಕ ಸಾಮರ್ಥ್ಯಗಳು ಹಾಗೂ ರೂಢಿ ಇದನ್ನು ರೂಪಿಸುವ ಅಥವಾ ನಿಯಂತ್ರಿಸುವ ಕಾರಣ ಗಳು. ವ್ಯಕ್ತಿಭಾಷೆಯನ್ನು ನಿರ್ಧರಿಸುವಲ್ಲಿ ಶಬ್ದಗಳ ಬಳಕೆಗಿಂತಲೂ ಉಚ್ಚಾರಣೆ, ರಚನಾವಿಶೇಷ–ಇವುಗಳಿಗೆ ಹೆಚ್ಚಿನ ಮಹತ್ವ. ಕಾರಣ ಶಬ್ದಗಳ ಬಳಕೆ ಮಾತ ನಾಡುವ ವಿಷಯ–ಸಂದರ್ಭಗಳಿಗೆ (topic and context) ನೇರವಾಗಿ ಸಂಬಂಧಿ ಸಿರುವುದರಿಂದ ವ್ಯಕ್ತಿಗಿಂತ ಹೆಚ್ಚಾಗಿ ವಿಷಯ–ಸಂದರ್ಭಗಳು ಅವುಗಳನ್ನು ನಿಯಂತ್ರಿಸು ತ್ತವೆ. ಇಲ್ಲಿ ವ್ಯಕ್ತಿಗೂ ಆಯ್ಕೆಯ ಸೌಲಭ್ಯ ಇರುವುದಾದರೂ ಅದು ತೀರ ಕಡಿಮೆ. ಕಾವ್ಯದಲ್ಲಿಯೂ ಕವಿ ಹೀಗೆಯೆ ವೈಯಕ್ತಿಕತೆಯನ್ನು ಮೆರೆಯುತ್ತಾನೆ. ಆದರೆ ಆಡು ಮಾತಿನ ಉಚ್ಚಾರಣೆಯ ಬದಲು ಇಲ್ಲಿ ಲಿಪಿಯ ಬಳಕೆ ಇರುವುದರಿಂದ ಕವಿಯ ದೈಹಿಕ ವಿಶೇಷಕ್ಕೆ ಇಲ್ಲಿ ಬೆಲೆ ಇಲ್ಲ. ಆದ್ದರಿಂದ ಇನ್ನುಳಿಯುವುದು ಬೌದ್ಧಿಕಸಾಮರ್ಥ್ಯ ಹಾಗೂ ರೂಢಿ. ರೂಢಿ ಹೆಚ್ಚಾಗಿ ನಿಯಂತ್ರಿಸುವುದು ವ್ಯಾಕರಣ ರಚನೆಗಳನ್ನು–ಅಂದರೆ ಕಾವ್ಯದಲ್ಲಿ ಪ್ರತ್ಯಕ್ಷ ಸಂಬಂಧವನ್ನು. ಆದರೆ ಕಾವ್ಯದಲ್ಲಿ ಕವಿ ಭಾಷೆಯ ಬಳಕೆಯ ಬಗ್ಗೆ ಹೆಚ್ಚು ಜಾಗರೂಕನಾಗಿರುವುದರಿಂದ, ಭಾಷೆಯ ಶಬ್ದಗಳನ್ನು, ರಚನೆ ಯನ್ನು ಸ್ಥಾನ, ಮಾತ್ರೆ–ಗಣನಿಯಮಗಳಿಗನುಸಾರವಾಗಿ ಆರಿಸಿಕೊಳ್ಳುವುದರಿಂದ ರೂಢಿಯನ್ನು ಅಲ್ಲಗಳೆಯುತ್ತಾನೆ. ಅಂದರೆ ಬೌದ್ಧಿಕಸಾಮರ್ಥ್ಯ ರೂಢಿಯನ್ನು ಇಲ್ಲಿ ಹತ್ತಿಕ್ಕುತ್ತದೆ. ಪರಿಣಾಮವಾಗಿ ಕವಿ ತನಗೇ ವಿಶಿಷ್ಟವಾದ ವ್ಯಾಕರಣ ರಚನೆಗಳನ್ನು ತೋರುವ ಅವಕಾಶ ಕಡಿಮೆ. (ವಾಸ್ತವವಾಗಿ ವ್ಯಕ್ತಿಗೆ ಹೆಚ್ಚಿನ ಆಯ್ಕೆಯ ಸೌಲಭ್ಯ ಇರುವುದೂ ಅದರಿಂದಾಗಿ ವಿಶಿಷ್ಟತೆಯನ್ನು ತೋರಲು ಹೆಚ್ಚಿಗೆ ಅವಕಾಶ ಇರುವುದೂ ಇಲ್ಲಿಯೇ). ಆದರೆ ಕವಿ ಕೆಲವೊಮ್ಮೆ ತನ್ನನ್ನೆ ಅನುಭವಕ್ಕೆ ಒಪ್ಪಿಸಿಕೊಂಡು ಅರ್ಥಾತ್ ಜಾಗರೂಕ ಅವಸ್ಥೆಯನ್ನು ಕಳೆದುಕೊಂಡು ಬರೆಯುತ್ತಾನೆ ಎಂದು ಹೇಳಲಾಗುತ್ತದೆ (ಇದನ್ನು ಒಪ್ಪಿಕೊಳ್ಳೋಣ). ಇಲ್ಲಿ ಮತ್ತೆ ರೂಢಿ ಅವನ ಭಾಷೆಯನ್ನು ನಿಯಂತ್ರಿಸು ತ್ತದೆ. ಆದ್ದರಿಂದ ವೈಯಕ್ತಿಕತೆ ತೋರುವ ಸಾಧ್ಯತೆ ಇದೆಯಾದರೂ ಕಡಿಮೆ ಎಂದು ಹೇಳಬಹುದು.

ಪರೋಕ್ಷ ಸಂಬಂಧವನ್ನು ಮುಖ್ಯವಾಗಿ ಆಶ್ರಯಿಸಿದ ಕವಿ ಶಬ್ದಗಳನ್ನು ಆಯುವುದರ ಕಡೆಗೆ ಗಮನಕೊಡುತ್ತಾನೆ ಎಂಬುದು ಹೀಗೆಯೇ ವ್ಯಕ್ತವಾಗಿದೆ. ಆದರೆ ಶಬ್ದಗಳು ಕವಿಯ ವೈಯಕ್ತಿಕತೆಯನ್ನು ಖಚಿತವಾಗಿ ನಿರ್ಧರಿಸುವುದಿಲ್ಲ. ಇಲ್ಲಿಯೂ ಅಷ್ಟೇ ಮುಖ್ಯವಾಗಿ ವಿಷಯ ಹಾಗೂ (ನಿರ್ದಿಷ್ಟ ಛಂದೋರೂಪವಿದ್ದರೆ) ಗಣವಿನ್ಯಾಸವನ್ನು ಆಧರಿಸಿರುತ್ತದೆ. ಆದ್ದರಿಂದ ಶ್ಲೇಷೆಯ ಬಳಕೆ ಹಾಗೂ ವಾಕ್ಯದ ಹಂತದಲ್ಲಿ ಬರುವ ರೂಪಕದ ಬಳಕೆ (ಇವು ಕವಿಯ ಪ್ರತಿಭೆಯನ್ನವಲಂಬಿಸಿರುವುದರಿಂದ) ಇವನ್ನು ವೈಯಕ್ತಿಕತೆ ಕೆಲವು ಮಟ್ಟಿಗೆ ನಿರ್ಧರಿಸಬಲ್ಲವು.

ಈ ಪ್ರಬಂಧವನ್ನು ಇಲ್ಲಿಗೆ ಮುಗಿಸುವ ಮೊದಲು ಒಂದು ಎಚ್ಚರಿಕೆಯ ಮಾತನ್ನು ಹೇಳಬೇಕು : ಮೇಲೆ ವ್ಯಕ್ತಪಡಿಸಿದ ಅನುಮಾನ ಹಾಗು ತೀರ್ಮಾನಗಳನ್ನು ತೆಗೆದು ಕೊಳ್ಳುವಾಗ ಕವನದ ವಾಚ್ಯಾರ್ಥದ ನೆಲೆಯನ್ನು ಮಾತ್ರ ಇಟ್ಟುಕೊಳ್ಳಲಾಗಿದೆ (ನವೋದಯ ಕವನಗಳು ಬಹುಮಟ್ಟಿಗೆ ಈ ಜಾತಿಯವೇ). ಸಾಂಕೇತಿಕವಾದ ಕಾವ್ಯಭಾಷಾರೂಪಗಳನ್ನು ಗಮನಿಸಿದಾಗ ಇವುಗಳಿಗೆ ಪುನರೂಪಕೊಡಬೇಕಾಗುತ್ತದೆ.

■ ■

# ರೊಮ್ಯಾಂಟಿಕ್ ಎಪಿಕ್ - ಒಂದು ಟಿಪ್ಪಣಿ

ಎಲ್. ಎಸ್. ಶೇಷಗಿರಿರಾವ್

ಮಹಾಕಾವ್ಯ ಬಹು ಸಾಹಿತ್ಯಗಳಲ್ಲಿ ವಿಶಿಷ್ಟ ಮನ್ನಣೆ ಪಡೆದ ಕಾವ್ಯಪ್ರಕಾರ. ಪಾಶ್ಚಾತ್ಯ ಕಾವ್ಯಸಾಹಿತ್ಯದಲ್ಲಿ ಲಬ್ಧವಾಗಿರುವ ಮೊದಲನೆಯ ಕೃತಿಗಳು ಹೋಮರನ 'ಇಲಿಯೆಡ್' ಮತ್ತು 'ಒಡಿಸ್ಸಿ' ಎರಡು ರೀತಿಗಳ ಮಹಾಕಾವ್ಯಗಳು. ಹೋಮರನ ಕಾಲ ಕ್ರಿ. ಪೂ. ಎಂಟು ಅಥವಾ ಒಂಬತ್ತನೆಯ ಶತಮಾನ ಇದ್ದಿರಬೇಕು. ಪಾಶ್ಚಾತ್ಯ 'ಕ್ಲಾಸಿಕಲ್' ಮಹಾಕಾವ್ಯಪರಂಪರೆ ಇಲ್ಲಿಂದ ಪ್ರಾರಂಭವಾಯಿತು. (ಆದರೆ ವೀರಕಾವ್ಯ ಇದಕ್ಕಿಂತ ಮೊದಲೇ ಉದಿಸಿತ್ತು ಎಂಬುದನ್ನು ಗಮನಿಸಬೇಕು) ಲಿವಿಯಸ್ ಆಂಡ್ರೋನಿಕಸ್ ಎಂಬ ಗ್ರೀಕ ಬರಹಗಾರ (ಕ್ರಿ. ಪೂ. ಮೂರನೆಯ ಶತಮಾನ) 'ಒಡಿಸಿ'ಯನ್ನು ಲ್ಯಾಟಿನ್ ಭಾಷೆಗೆ ಅನುವಾದಿಸಿದ್ದು ಲ್ಯಾಟಿನ್ ಕಾವ್ಯಸಾಹಿತ್ಯದ ಬೆಳವಣಿಗೆಗೆ ಸ್ಫೂರ್ತಿಯನ್ನು ಒದಗಿಸಿತು. ರೋಮ್‌ನ ಮೊದಲ ಚಕ್ರವರ್ತಿ ಆಕ್ಟೇವಿಯಸ್ (ಅಥವಾ ಅಗಸ್ಟಸ)ನ ಕಾಲ ಲ್ಯಾಟಿನ್ ಸಾಹಿತ್ಯದ ವಸಂತಋತು. ಇವನ ಆಸ್ಥಾನದ ವರ್ಜಿಲ್ ಹೋಮರನಿಂದ ಸ್ಫೂರ್ತಿ ಪಡೆದು ಒಂದು ರಾಷ್ಟ್ರೀಯ ಮಹಾಕಾವ್ಯವನ್ನು ರಚಿಸಲು ಹೊರಟು ಹಲವು ವರ್ಷಗಳನ್ನೇ ಈ ಕಾರ್ಯಕ್ಕೆ ಮುಡಿಪಿಟ್ಟು 'ಈನೀಡ್' ಮಹಾಕಾವ್ಯವನ್ನು ರಚಿಸಿದ. ಇಲ್ಲಿಂದ ಯುರೋಪಿನ ಸಾಹಿತ್ಯದಲ್ಲಿ ಮಹಾಕಾವ್ಯಕ್ಕೆ ವಿಶೇಷ ಪ್ರಾಧಾನ್ಯ ದೊರೆಯಿತು. ಭಾರತದಲ್ಲಿ ಇಂಗ್ಲಿಷ್ ಸಾಹಿತ್ಯದ ಅಭ್ಯಾಸ ಪ್ರಾರಂಭವಾದಾಗ ವಿಶ್ವವಿದ್ಯಾನಿಲಯಗಳಲ್ಲಿ ಮಿಲ್ಟನನಿಗೆ ವಿಶೇಷ ಮಹತ್ವ ಸಿಕ್ಕಿತು. (ಇಪ್ಪತ್ತು ವರ್ಷಗಳ ಹಿಂದೆಯೂ ಹಲವು ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ಲಿಷನ್ನು ಕಡ್ಡಾಯ ಭಾಷೆಯಾಗಿ ಕಲಿಯುತ್ತಿದ್ದವರೂ ಮಿಲ್ಟನನ 'ಪ್ಯಾರಡೈಸ್ ಲಾಸ್ಟ್'ದ ಒಂದೆರಡು ಪುಸ್ತಕಗಳನ್ನು ಅಭ್ಯಾಸ ಮಾಡಬೇಕಾಗಿತ್ತು). ಮಿಲ್ಟನ್ ಅನುಸರಿಸಿದ್ದು ಹೋಮರನ ಅಥವಾ 'ಕ್ಲಾಸಿಕಲ್' ಮಹಾಕಾವ್ಯದ

ಪರಂಪರೆಯನ್ನು. ಹೀಗಾಗಿ ನಮ್ಮ ಅಭ್ಯಾಸದಲ್ಲಿ ಈ ಪರಂಪರೆಗೆ ವಿಶೇಷ ಗಮನ ದೊರೆಯಿತು.

ಆದರೆ ಯೂರೋಪಿನಲ್ಲಿ ಹೋಮರನ ಮಾರ್ಗವನ್ನು ಬಿಟ್ಟು ಬೇರೆ ರೀತಿಯಲ್ಲಿ ಮಹಾಕಾವ್ಯವನ್ನು ರಚಿಸುವ ಪ್ರಯತ್ನಗಳು ಆಗಿವೆ. (ಮಿಲ್ಟನನಿಗೆ ಮೊದಲು ಇಂಗ್ಲಿಷ ಭಾಷೆಯಲ್ಲಿ ಮಹಾಕಾವ್ಯವನ್ನು ರಚಿಸುವ ಪ್ರಯತ್ನ ಮಾಡಿದ ಎಡ್ಮಂಡ್ ಸ್ಪೆನ್ಸರ (೧೫೫೨–೧೫೯೯) ನ 'ಫೇರೀ ಕ್ವೀನ್' ಅನ್ಯಾರ್ಥ ಪ್ರಧಾನವಾದ ಮಹಾಕಾವ್ಯ. ಇಲ್ಲಿ ಕಥೆಯೊಂದು ಉಂಟು. ಆದರೆ ಬಹುಮಟ್ಟಿಗೆ ಪಾತ್ರಗಳೆಲ್ಲ ಬೇರೆ ಬೇರೆ ಗುಣಗಳನ್ನು ಪ್ರತಿನಿಧಿಸುತ್ತಾರೆ). ಈ ಪ್ರಯತ್ನಗಳು ಮಹಾಕಾವ್ಯದ ಹೊಸ ಸಾಧ್ಯತೆಗಳನ್ನು ಸೂಚಿಸುತ್ತವೆ. ಇವುಗಳಲ್ಲಿ 'ರೊಮ್ಯಾಂಟಿಕ ಎಪಿಕ್'ನತ್ತ ಗಮನ ಸೆಳೆಯುವುದು ಈ ಲೇಖನದ ಉದ್ದೇಶ.

ಮಧ್ಯಯುಗದಲ್ಲಿ 'ಪವಿತ್ರನಾಡು' ಅಥವಾ ಜೆರೂಸಲೆಮ್‌ದ ರಕ್ಷಣೆಗಾಗಿ 'ಧರ್ಮಯುದ್ಧ'ಗಳಲ್ಲಿ ಭಾಗವಹಿಸಲು ಯೂರೋಪಿನ ಹಲವು ಭಾಗಗಳಿಂದ ಯೋಧರು ಹೋದರು. (ಸಾಮಾನ್ಯವಾಗಿ, 'ಮಧ್ಯಯುಗ' ಎಂದರೆ ಪಶ್ಚಿಮ ರೋಮನ್ ಸಾಮ್ರಾಜ್ಯದ ಪತನದಿಂದ– ಕ್ರಿ. ಶ. ೪೭೬ ದಿಂದ ಕೋಲಂಬಸ್ ಅಮೆರಿಕವನ್ನು ಕಂಡು ಹಿಡಿಯುವ ವರೆಗೆ– ಕ್ರಿ. ಶ. ೧೪೯೨ರ ವರೆಗೆ). ಇವರ ಜೊತೆಗೆ ಹೋದ ಗಾಯಕರಿಂದ ಹಲವು ನಾಡುಗಳ ದಂತಕಥೆಗಳೂ ಚಾರಿತ್ರಿಕ ವ್ಯಕ್ತಿಗಳನ್ನು ಕುರಿತ ಕಥೆಗಳೂ ಹಬ್ಬಿದವು. ಹದಿನೈದನೆಯ ಶತಮಾನದಲ್ಲಿ ಇಟಲಿಯಲ್ಲಿ 'ಕಾಂತಾಸ್ಟೋರೈ' ಎಂಬ ವ್ಯಕ್ತಿಗಾಯಕರಿದ್ದರು. ಇವರು ಬೀದಿಯಿಂದ ಬೀದಿಗೆ ಊರಿಂದ ಊರಿಗೆ ಸಂಚಾರ ಮಾಡುತ್ತಿದ್ದ ಗಾಯಕರು. ಮದುವೆ, ಸಂತೋಷಕೂಟ ಇಂತಹ ಸಂದರ್ಭಗಳಲ್ಲಿ ಇವರನ್ನು ಶ್ರೀಮಂತರ ಮನೆಗಳಿಗೆ ಆಹ್ವಾನಿಸುತ್ತಿದ್ದುದುಂಟು. ಇವರು ಹಾಡುತ್ತಿದ್ದ ಹಲವು ಹಾಡುಗಳು ಚಕ್ರವರ್ತಿ ಷಾರ್ಲಮೇನ್, ರೋಲೆಂಡ್ (ಅಥವಾ ಆರ್ಲ್ಯಾಂಡೊ), ಆಲಿವರ್ ಈ ವೀರರನ್ನು ಕುರಿತವು. ಇವುಗಳಲ್ಲಿ ಸಾಮಾನ್ಯವಾಗಿ ಷಾರ್ಲಮೇನನನ್ನು ಅರಳುಮರುಳಾದ ವೃದ್ಧರಾಜನನ್ನಾಗಿ ಚಿತ್ರಿಸುತ್ತಿದ್ದರು. ರೋಲೆಂಡ್ ಕ್ರೈಸ್ತರಲ್ಲದ ಶತ್ರುಗಳ ವಿರುದ್ಧ ಮೈನವಿರೇಳಿಸುವ ಸಾಹಸಗಳನ್ನು ಸಾಧಿಸಿದ ಅಪ್ರತಿಮ ವೀರನಾಗಿ ಕಾಣಿಸಿಕೊಳ್ಳುತ್ತಿದ್ದ.

ಇಂತಹ ಸಂದರ್ಭದಲ್ಲಿ 'ರೊಮ್ಯಾಂಟಿಕ್ ಎಪಿಕ್' ಇಟಲಿಯಲ್ಲಿ ಕಾಣಿಸಿಕೊಂಡಿತು. ಇದು ಇಟಾಲಿಯನ್ ಸಾಹಿತ್ಯದಲ್ಲಿ ಹೊಸ ಪ್ರಯೋಗಗಳ ಯುಗ. ಈ ಹೊಸ ಪ್ರಕಾರಕ್ಕೆ ಸಾಮಗ್ರಿ ಒದಗಿದ್ದು ಮಧ್ಯಯುಗದ 'ರೊಮಾನ್ಸ್'ಗಳಿಂದ. ಗಂಡು ಹೆಣ್ಣಿನ ಪ್ರೇಮ, ಯೋಧರ ಸಾಹಸಗಳು ಈ ಸಾಮಗ್ರಿಯ ತಿರುಳು.

ಈ ಸಾಮಗ್ರಿಯನ್ನು ಬಳಸಿಕೊಂಡು 'ರೊಮ್ಯಾಂಟಿಕ್ ಎಪಿಕ್' ಅನ್ನು ಬರೆಯುವ ಮೊದಲ ಪ್ರಯತ್ನ ಮಾಡಿದವನು ಲ್ಯೂಜೀ ಪೂಲ್ಚೀ (೧೪೩೨–೧೪೮೪) ಎನ್ನಬಹುದು,

ಇವನ ಕೃತಿ 'ದಿ ಗ್ರೇಟರ್ ಮಾರ್ಗಾಂಟೆ'. ಇದರ ಕಥೆ ಇಷ್ಟು : ವೀರ ಆಲ್ಯಾಂಡೊ ತಾನಾಗಿಯೇ ದೇಶಭ್ರಷ್ಟನಾಗಿದ್ದಾನೆ. ಮೂವರು ಪೇಗನ್ (ಕ್ರೈಸ್ತರಲ್ಲದ) ರಾಕ್ಷಸರನ್ನು ಸಂಧಿಸುತ್ತಾನೆ. ಇವರಲ್ಲಿ ಇಬ್ಬರನ್ನು ಕೊಲ್ಲುತ್ತಾನೆ. ಮೂರನೆಯವನು ಆಲ್ಯಾಂಡೊವಿನ ನಿಷ್ಠ ಸೇವಕನಾಗುತ್ತಾನೆ. ಯಜಮಾನನಿಗೆ ಹಲವು ರೀತಿಗಳಲ್ಲಿ ಸೇವೆ ಮಾಡುತ್ತಾನೆ. ಕಡೆಗೆ ತಾನೇ ಸಾಯುತ್ತಾನೆ. ಆಲ್ಯಾಂಡೊನಿಗೆ ಸ್ನೇಹಿತನಾಗುವ ಪಿಶಾಚವೊಂದು ಅವನಿಗೆ ಆಕಾಶದಲ್ಲಿ ಹಾರುವ ಕುದುರೆಯೊಂದನ್ನು ತಂದು ಕೊಟ್ಟು ಪ್ಯಾರಿಸಿಗೆ ಕರೆದೊಯ್ಯುತ್ತದೆ. ಮುಂದೆ ಕದನ ಒಂದರಲ್ಲಿ ಆಲ್ಯಾಂಡೊ ಸಾಯುತ್ತಾನೆ.

ಈ ಕೃತಿಯನ್ನು ಕಾವ್ಯವನ್ನಾಗಿ ಬೆಲೆಕಟ್ಟುವ ಪ್ರಯತ್ನ ಇಲ್ಲಿ ಅನಗತ್ಯ. ಆದರೆ ಮಹಾಕಾವ್ಯದ ಇತಿಹಾಸದ ದೃಷ್ಟಿಯಿಂದ ಒಂದೆರಡು ಅಂಶಗಳನ್ನು ಗಮನಿಸಬೇಕು. ಮೊದಲನೆಯದು, ಇಲ್ಲಿ ಕಾಣುವುದು 'ರೊಮಾನ್ಸ್' ಕಥೆಗಳ ಸಾಹಸಪ್ರಧಾನ ನಿರೂಪಣೆ. 'ಕ್ಲಾಸಿಕಲ್' ಮಹಾಕಾವ್ಯದಲ್ಲಿಯೂ ಸಾಹಸ ಮುಖ್ಯ. ಆದರೆ ಸಾಹಸ ದಾಟಿ ಒಂದು ಜೀವನದೃಷ್ಟಿಯನ್ನು ಕವಿ ಕಾವ್ಯದಲ್ಲಿ ಪ್ರಕಟಿಸುತ್ತಾನೆ. ಹೋಮರನ 'ಇಲಿಯೆಡ್'ನ ವಸ್ತು, ಕವಿಯೇ ಹೇಳುವಂತೆ, ಆಕಿಲೀಸನ ಕೋಪ, ಜೊತೆಗೆ ದೇವತೆಗಳ ಪ್ರಭು ಜ್ಯೂಸನ ಇಚ್ಛೆ. ಮಿಲ್ಟನನಂತೂ ತಾನು ಕಾವ್ಯವನ್ನು ರಚಿಸಿದ್ದು 'to justify the ways of God to men' ಎಂದೇ ಹೇಳಿದ್ದಾನೆ. ಸಾಹಸ ಮತ್ತು ಅದ್ಭುತಗಳಿಗೆ ಪುಲ್‌ಚೀಯ ಕೃತಿಯಲ್ಲಿ ಪ್ರಾಧಾನ್ಯ. ಇದಕ್ಕಿಂತ ಮುಖ್ಯವಾದ ಅಂಶ ಎಂದರೆ ಈ ಕಾವ್ಯದಲ್ಲಿನ ಹಾಸ್ಯ ಮತ್ತು ವಿಡಂಬನೆ. ಕ್ಲಾಸಿಕಲ್ ಮಹಾಕಾವ್ಯದಲ್ಲಿ ಗಾಂಭೀರ್ಯವೇ ಸಾಕಾರವಾಗಿರುತ್ತದೆ. (ಹಾಸ್ಯ ಮತ್ತು ವಿಡಂಬನೆಗಳು ಇಲ್ಲವೇ ಇಲ್ಲ ಎಂದು ಹೇಳುವಂತಿಲ್ಲ. ಅಲ್ಲಲ್ಲಿ ಇವು ಮಿಂಚುವುದು ಉಂಟು. 'ಇಲಿಯೆಡ್'ನಲ್ಲಿ ಗ್ರೀಕರ ಪಾಳೆಯದ ಪ್ರಮುಖರೂ ಸೈನಿಕರೂ ಸಮಾಲೋಚನೆಗೆಂದು ಸಭೆ ಸೇರಿದಾಗ, ಥರ್ಸಿಟೀಸ್ ಎಂಬ ಸಾಮಾನ್ಯ ಸೈನಿಕನನ್ನು ಚಿತ್ರಿಸುತ್ತಾನೆ ಹೋಮರ್. ಅವನು ಕುರೂಪಿ, ಕಿಸಿಗಾಲಿನ ಕುಂಟ. ಅವನ ಮಾತಿನಲ್ಲಿ ಹುರುಳಿಲ್ಲ. ಆದರೆ ಎಲ್ಲರನ್ನೂ ನಗಿಸುವ ಹಂಬಲ. ಅವನು ನಾಯಕರನ್ನು ಕುರಿತು ಗಳಹುತ್ತಿರುವಾಗ ಅತ್ತ ಬಂದ ಒಡಿಸ್ಯೂಸ್ ಅವನನ್ನು ಗದರುತ್ತಾನೆ, ಅವನ ಭುಜಕ್ಕೆ ರಾಜದಂಡದಿಂದ ಬಾರಿಸುತ್ತಾನೆ. ಥರ್ಸಿಟೀಸ್ ನಡುಗಿ ಹೋಗುತ್ತಾನೆ. ಕಣ್ಣಿನಿಂದ ಬಳಬಳ ನೀರು ಉದುರುತ್ತದೆ. ಕಣ್ಣು ಕತ್ತಲೆ ಇಟ್ಟು, ನೆಲಕ್ಕೆ ಕುಸಿಯುತ್ತಾನೆ. ಸುತ್ತ ಇರುವವರೆಲ್ಲ ನಗುತ್ತಾರೆ). ಆದರೆ ಬಾಳನ್ನು ಗಾಢವಾದ ಗಂಭೀರದೃಷ್ಟಿಯಿಂದ ನೋಡುವ 'ಕ್ಲಾಸಿಕಲ್' ಮಹಾಕಾವ್ಯದಲ್ಲಿ ಲಘುವಾದ ಮನೋಭಾವಕ್ಕೆ ಅವಕಾಶವೇ ಇಲ್ಲ. ಪುಲ್‌ಚೀಯ ಕಾವ್ಯದಲ್ಲಿ ಹಾಸ್ಯ. ವಿಡಂಬನೆಗಳು ಸಮೃದ್ಧವಾಗಿವೆ (ಎಷ್ಟು ಸಮೃದ್ಧವಾಗಿವೆ ಎಂದರೆ ಕೊಲಂಬಿಯಾ–ವೈಕಿಂಗ್ ವಿಶ್ವಕೋಶ ಇದನ್ನು 'ಅಣಕು ಮಹಾಕಾವ್ಯ' ಎಂದೇ ವರ್ಣಿ

ಸುತ್ತದೆ. ಆದರೆ ಇದು ಉತ್ಪ್ರೇಕ್ಷೆಯಾಯಿತು ಎನ್ನಿಸುತ್ತದೆ). ಇಲ್ಲಿನ ಒಂದು ಪಾತ್ರ ಬೆಳವಣಿಗೆ ನಿಂತ ಒಬ್ಬ ರಾಕ್ಷಸನದು. ಇವನು ಹೊಟ್ಟೆಬಾಕ, ಬಡಾಯಿಯ ಮಲ್ಲ. ಕೋತಿಯೊಂದರ ಚೇಷ್ಟೆಯನ್ನು ಕಂಡು ನಕ್ಕುನಕ್ಕು ಪ್ರಾಣಬಿಡುತ್ತಾನೆ. ಪೂಲ್ಚಿ ಈ ಕಾವ್ಯದಲ್ಲಿ ಸಮಕಾಲೀನ ಸಮಾಜದ ರೀತಿನೀತಿಗಳನ್ನು ಚಿತ್ರಿಸುತ್ತಾನೆ. ಈ ಚಿತ್ರದಲ್ಲಿ ಹಾಸ್ಯ, ವ್ಯಂಗ್ಯಗಳು ಸ್ಪಷ್ಟವಾಗಿವೆ.

ಪೂಲ್ಚಿಯ ಸಮಕಾಲೀನ ಮಾಟ್ಯಾಒ ಮಾರೀಅ ಬೋಯಾರ್ಡೋನ (೧೪೪೧–೧೪೯೪). ಇವನ ಮಹಾಕಾವ್ಯ 'ಆರ್ಲ್ಯಾಂಡೊ ಇನಾಮೊರಾಟೊ' ('ಆರ್ಲ್ಯಾಂಡೊ ಪ್ರೇಮದಲ್ಲಿ'). ಇದರ ವೈಶಿಷ್ಟ್ಯ, ಪ್ರೇಮದಲ್ಲಿ ಸಿಲುಕಿ ತೊಳಲಾಡುವ ವೀರ ಇದರ ನಾಯಕ ಎಂಬುದು. ಪ್ರಾಚೀನ ಗ್ರೀಸಿನಲ್ಲಿ ಸ್ತ್ರೀಗೆ ಸಾಮಾಜಿಕ ಜೀವನದಲ್ಲಿ ಸ್ಥಾನವೇ ಇರಲಿಲ್ಲ ಎನ್ನಬಹುದು. ಮದುವೆಗೆ ಮೊದಲಿನ ಪ್ರಣಯ ಚಿತ್ರಿತವಾಗಲು ಅವಕಾಶವಿರಲಿಲ್ಲ. (ಸುಖದಾಂಪತ್ಯದ ಚಿತ್ರಣ ಸಮೃದ್ಧವಾಗಿದೆ.) ಹೋಮರನ ಪರಂಪರೆಯ ಮಹಾಕಾವ್ಯದಲ್ಲಿ ನಾಯಕ ಧೀರ, ಸಾಹಸಿ ಒಂದು ಸಮಾಜದ ಜೀವನಮೌಲ್ಯಗಳನ್ನೆಲ್ಲ ಮೂರ್ತೀಭವಿಸುವ ಒಂದು ವ್ಯಕ್ತಿ, ಒಂದು ಇಡೀ ಸಮುದಾಯದ ಕೇಂದ್ರ. ಆದರೆ ಪ್ರಣಯಕ್ಕೆ ಇವನ ಜೀವನದಲ್ಲಿ ಸ್ಥಾನವಿಲ್ಲ. ಬೋಯಾರ್ಡೋನ ಕಾವ್ಯದ ನಾಯಕ ಆರ್ಲ್ಯಾಂಡೊ ಏಂಜಲಿಕ ಎಂಬ ರಾಜಕುಮಾರಿಯನ್ನು ಪ್ರೀತಿಸಿ, ತನ್ನ ರಾಜ್ಯ, ಅದರ ರಕ್ಷಣೆ ಎಲ್ಲವನ್ನೂ ಬಿಟ್ಟು ಹಿಂಬಾಲಿಸುತ್ತಾನೆ. ಈ ಅಲೆದಾಟದಲ್ಲಿ ಚೀನದೇಶವನ್ನು ಸಹ ಪ್ರವೇಶಿಸುತ್ತಾನೆ. ಈ ಅನ್ವೇಷಣೆಯಲ್ಲಿ ಹಲವಾರು ಹೋರಾಟಗಳು ನಡೆಯುತ್ತವೆ. ಮಾಂತ್ರಿಕರು ಪಿಶಾಚಗಳು ಎಲ್ಲ ಕಾಣಿಸಿಕೊಳ್ಳುತ್ತಾರೆ.

ರೊಮ್ಯಾಂಟಿಕ್ ಎಪಿಕ್‌ನ ಪರಂಪರೆಯ ಶಿಖರವಾಗಿ ಬಂದಿತು ಲೂಡೋವೀಕೋ ಅರಿಯಾಸ್ತೋ (೧೪೭೪–೧೫೩೩)ನ ಕೃತಿ, 'ಆರ್ಲ್ಯಾಂಡೊ ಫ್ಯೂರಿಯಾಸೊ' (ಉನ್ಮಾದಿತ ಆರ್ಲ್ಯಾಂಡೊ) (೧೫೧೬). ಇದು ಘಟನೆಗಳಿಂದ ತುಂಬಿಹೋಗಿದೆ. ಇದರಲ್ಲಿ ಮುಖ್ಯವಾಗಿ ಮೂರು ವಸ್ತುಗಳನ್ನು ಗುರುತಿಸಬಹುದು. (೧) ಕ್ರೈಸ್ತರಲ್ಲಿ ದ್ವೇಷಿಗಳು ಆಫ್ರಿಕದ ರಾಜ ಅಗ್ರಮಾಂಟೆಯ ನಾಯಕತ್ವದಲ್ಲಿ ಪ್ಯಾರಿಸ್ ನಗರವನ್ನು ಮುತ್ತುವುದು (೨) ಆರ್ಲ್ಯಾಂಡೊನ ಉನ್ಮಾದ. ಆರ್ಲ್ಯಾಂಡೊ ಏಂಜಲಿಕಳನ್ನು ಪ್ರೀತಿಸುತ್ತಾನೆ, ಅವಳನ್ನು ಹುಡುಕಿಕೊಂಡು ಹೋಗುತ್ತಾನೆ. ಫ್ರಾಂಕರಿಂದ ತಪ್ಪಿಸಿಕೊಂಡ ಏಂಜಲಿಕ ಮೆಡೊರೊ ಎಂಬ ತರುಣನನ್ನು ಕಾಣುತ್ತಾಳೆ. ಅವನಿಗೆ ಗಾಯಗಳಾಗಿವೆ. ಅವನಿಗೆ ಉಪಚರಿಸಿ ಶುಶ್ರೂಷೆ ಮಾಡಿದ ಏಂಜಲಿಕ ಅವನಲ್ಲಿ ಅನುರಕ್ತಳಾಗಿ ಮದುವೆಯಾಗುತ್ತಾಳೆ. ಈ ಸುದ್ದಿ ಆರ್ಲ್ಯಾಂಡೊನನ್ನು ಉನ್ಮಾದಕ್ಕೆ ತಳ್ಳುತ್ತದೆ. ಬರಿಬತ್ತಲೆಯಾಗಿ ಅಲೆಯುತ್ತಾನೆ. ಹಲವು ಹೋರಾಟಗಳಲ್ಲಿ ಭಾಗವಹಿಸುತ್ತಾನೆ. (೩) ರುಗೀರೊ ಮತ್ತು ಬ್ರಡಮಾಂಟೆಯರ ಪ್ರೇಮದ ಕಥೆ. ರುಗೀರೋ ಕ್ರೈಸ್ತ

ಮತಾವಲಂಬಿಯಾದನಂತರ ಬ್ರಡಮಾಂಟೆಯನ್ನು ಪ್ರೀತಿಸುತ್ತಾನೆ. ಕಾವ್ಯದ ಕಡೆಯ ಭಾಗದಲ್ಲಿ ಬ್ರಿಟಿಷ ವೀರನೊಬ್ಬ ಚಂದ್ರಲೋಕಕ್ಕೆ ಹೋಗಿ ಅಲ್ಲಿಂದ ಆರ್ಲ್ಯಾಂಡೋನ ಬುದ್ಧಿಯನ್ನು ಮರಳಿ ಭೂಮಿಗೆ ತಂದು ಅವನ ದೇಹದಲ್ಲಿ ಹೊಗಿಸುತ್ತಾನೆ. ಆರ್ಲ್ಯಾಂಡೋನ ಉನ್ಮಾದ ಇಳಿಯುತ್ತದೆ, ಅವನು ಏಂಜಲಿಕಳನ್ನು ಮದುವೆಯಾಗುತ್ತಾನೆ, ಅಗ್ರಮಾಂಟೆಯನ್ನು ಕೊಲ್ಲುತ್ತಾನೆ. ರುಗೀರೊ ಮತ್ತು ಬ್ರಡಮಾಂಟೆಯರ ವಿವಾಹವಾಗುತ್ತದೆ.

ಈ ಕಾವ್ಯದಲ್ಲಿ ಹಲವು ದೋಷಗಳಿವೆ. ಮುಖ್ಯವಾದದ್ದು, ಇದರಲ್ಲಿ ಆಳವಾದ ಜೀವನ ಚಿಂತನೆ ಇಲ್ಲ ಎನ್ನುವುದು. ಆದರೆ ಮಹಾಕಾವ್ಯದ ಇತಿಹಾಸದ ದೃಷ್ಟಿಯಿಂದ ಇದರ ಮಹತ್ವ ಮೂರು ಅಂಶಗಳಲ್ಲಿ ಅಡಗಿದೆ ಎನ್ನಬಹುದು. ಮೊದಲನೆಯದಾಗಿ, ಇಲ್ಲಿ ಗಂಡುಹೆಣ್ಣಿನ ಒಲವಿಗೆ ದೊರೆತಿರುವ ಪ್ರಾಧಾನ್ಯ. ಅದರಲ್ಲಿಯೂ ವಿವಾಹಪೂರ್ವದ ಒಲವು, ನಿಷ್ಫಲ ಒಲವು, ಇವಕ್ಕೆ ದೊರೆತಿರುವ ಪ್ರಾಧಾನ್ಯ. ಎರಡನೆಯದು, ಇದರ ಕೆಲವು ಭಾಗಗಳಲ್ಲಿ ಇರುವ ಗೆಲುವು, ಲವಲವಿಕೆ, ಉಲ್ಲಾಸ. ಮೂರನೆಯದು, ಇದರ ಕರ್ತೃ ಮನುಷ್ಯರ ಸ್ವಭಾವವನ್ನೂ ರೀತಿನೀತಿಗಳನ್ನೂ ಮೃದುವ್ಯಂಗ್ಯದಿಂದ, ಮೆಲುನಗೆಯ ವ್ಯಂಗ್ಯದಿಂದ ಚಿತ್ರಿಸಬಲ್ಲ ಎನ್ನುವುದು. ಕವಿ ಬಾಳನ್ನು ದುರಂತವಾಗಿಯೂ ಕಾಣುವುದಿಲ್ಲ, ಅದನ್ನು ನಾಟಕೀಯವಾಗಿಯೂ ನಿರೂಪಿಸುವುದಿಲ್ಲ, ಹಲವು ಪ್ರಸಂಗಗಳಲ್ಲಿ ಆತ ಭಾವಗಳನ್ನು ಕಲಕುವಂತೆ ಬರೆಯಬಲ್ಲ ಎನ್ನುವುದು ಕಾಣುತ್ತದೆ, ಆದರೆ ಭಾವತೀವ್ರತೆಗಿಂತ ನಿರ್ಲಿಪ್ತತೆಯೂ ಹೆಚ್ಚಾಗಿ ಕಾಣುತ್ತದೆ. ವೀರ-ಯೋಧರ ಶೌರ್ಯಶಕ್ತಿಗಳು, 'ಷಿವಲ್ರಿ'ಯ ಆದರ್ಶಗಳು, ಯುದ್ಧ ಎಲ್ಲವನ್ನೂ ಈ ಕವಿ ಹಾಸ್ಯದೃಷ್ಟಿಯಿಂದಲೂ ಕಾಣಬಲ್ಲ. ಆದರೆ ಆತನ ಹಾಸ್ಯ ಎಷ್ಟು ಮೃದುವಾಗಿದೆ ಎಂದರೆ ಓದುಗನಿಗೆ ಕವಿ ನಿಜವಾಗಿ ಇವನ್ನು ಅಣಕ ಮಾಡುತ್ತಿದ್ದಾನೆಯೇ ಎಂದು ಸಂಶಯ ಬಂದೀತು. ಈ ಎಲ್ಲ ರೀತಿಗಳಲ್ಲಿ ಈ ಕಾವ್ಯ 'ಕ್ಲಾಸಿಕಲ್' ಮಹಾಕಾವ್ಯಕ್ಕಿಂತ ಭಿನ್ನ.

ಇವನ ನಂತರ ಬಂದ ಹಿರಿಯಕವಿ ಟಾರ್‌ಕ್ವಾಟೋ ಟ್ಯಾಸೋ (೧೫೪೪–೧೫೯೫). ಇವನ ಮೇಲೆ ಏರಿಯಾಸ್ಟೋನ ಪ್ರಭಾವ ಆಳವಾದದ್ದು. ಇವನ ಮಹಾಕೃತಿ 'ಜೆರೂಸಲೆಮ್ ಲಿಬರೆಟ' (ಜೆರೂಸಲೆಮ್‌ನ ಬಂಧವಿಮುಕ್ತಿ) (೧೫೭೫). ಇದು ಇಪ್ಪತ್ತು ಕ್ಯಾಂಟೊಗಳಲ್ಲಿದೆ. ಇದರ ವಸ್ತು ಗಾಡ್‌ಫ್ರೆ ಎಂಬಾತ ಪವಿತ್ರನಗರ ಜೆರೂಸಲೆಮ್ ಅನ್ನುವಶಪಡಿಸಿಕೊಂಡದ್ದು. ತನ್ನದು ರಾಷ್ಟ್ರೀಯ ಮಹಾಕಾವ್ಯವಲ್ಲ, ಇಡೀ ಕ್ರೈಸ್ತ ಜಗತ್ತಿನ ಮಹಾಕಾವ್ಯ ಎಂದು ಭಾವಿಸಿದ್ದ ಟ್ಯಾಸೊ. ಸಹಜವಾಗಿ ಇದರಲ್ಲಿ ಭೀಕರ ಕಾಳಗಗಳ ವರ್ಣನೆ ಇದೆ. ಆದರೆ ಇದು ಓದುಗರನ್ನು ಇಂದಿಗೂ ಆಕರ್ಷಿಸುವುದು ಮೂರು ಪ್ರಣಯದ ಕಥೆಗಳಿಂದ. ಒಂದು ಕಥೆಯ ನಾಯಕ ಕ್ಲೋರಿಂಡ ಯೋಧಳು. ಆದರೆ ಕ್ರಿಶ್ಚಿಯನಳಲ್ಲ. ಅವಳನ್ನು ಟಾನ್‌ಕ್ರೆಡೊ ಪ್ರೀತಿಸುತ್ತಾನೆ. ಅವಳು ಅವನ ಪ್ರೇಮ

ವನ್ನು ತಿರಸ್ಕರಿಸುತ್ತಾಳೆ. ಅವಳನ್ನು ಗುರುತಿಸದೆ ಅವಳೊಡನೆ ಕಾಳಗವಾಡಿದ ಟಾನ್ ಕ್ರೆಡೊ ತೀವ್ರವಾಗಿ ಗಾಯಗೊಳಿಸುತ್ತಾನೆ. ನಿಜಸ್ಥಿತಿ ಅರಿವಾದಾಗ ಪಶ್ಚಾತ್ತಾಪ ಪಡುತ್ತಾನೆ. ಅವಳು ಅವನನ್ನು ಕ್ಷಮಿಸುತ್ತಾಳೆ. ಕ್ರಿಸ್ತೀಯಳಾಗುತ್ತಾಳೆ. ತೀರಿ ಕೊಂಡನಂತರ ಸ್ವರ್ಗದಿಂದ ಅವನೊಡನೆ ಸಂಪರ್ಕ ಸಾಧಿಸುತ್ತಾಳೆ. ಎರಡನೆಯ ಕಥೆ ಸಫ್ರೊನಿಆ ಮತ್ತು ಆಲಿಂಡೊ ಅವರದು. ಇವರು ಜೆರೂಸಲೆಮ್ ನಿವಾಸಿಗಳು. ನಗರದ ಇತರ ಕ್ರೈಸ್ತರನ್ನು ಉಳಿಸಲು ತಾನೇ ಬೆಂಕಿಗೆ ಆಹುತಿಯಾಗಲು ಸಫ್ರೊನಿಆ ಮುಂದೆ ಬರುತ್ತಾಳೆ. ಆಲಿಂಡೊ ತಾನೇ ಅವಳ ಬದಲು ಬಲಿಯಾಗಲು ಪ್ರಯತ್ನಿಸುತ್ತಾನೆ. ಕಡೆಯ ಗಳಿಗೆಯಲ್ಲಿ ಡೊರಿಂಡ ಪ್ರವೇಶಿಸಿ ಇಬ್ಬರನ್ನು ಉಳಿಸುತ್ತಾಳೆ. ಕಡೆಯ ಪ್ರಣಯಕಥೆ ರಿನಾಲ್ಡೊ ಮತ್ತು ಆರ್ಮಿಡರದು. ರಿನಾಲ್ಡೊ ದ್ವಂದ್ವಯುದ್ಧದಲ್ಲಿ ಮತ್ತೊಬ್ಬ ಕ್ರೈಸ್ತನನ್ನು ಕೊಂದನೆಂದು ಗಾಡ್‌ಫ್ರೆ ಆತನನ್ನು ಓಡಿಸಿಬಿಟ್ಟಿದ್ದಾನೆ. ಐವತ್ತು ಮಂದಿ ಮುಖ್ಯ ಕ್ರೈಸ್ತಯೋಧರನ್ನು ಮಾಂತ್ರಿಕಶಕ್ತಿಯಿಂದ ನಿಷ್ಪ್ರಯೋಜಕಗೊಳಿಸಲು ಬಂದ ಮಾಟಗಾತಿ ಆರ್ಮಿಡ ರಿನಾಲ್ಡೊನಲ್ಲಿ ಅನುರಾಗ ತಳೆಯುತ್ತಾಳೆ. ಅವನನ್ನು ಒಂದು ದ್ವೀಪಕ್ಕೆ ಕೊಂಡೊಯ್ಯುತ್ತಾಳೆ. ರಿನಾಲ್ಡೊ ಇಲ್ಲದೆ ಜೆರೂಸಲೆಮ್ ವಶವಾಗುವುದಿಲ್ಲ ಎಂದು ತಿಳಿದಾಗ ಗಾಡ್‌ಫ್ರೆ ಅವನನ್ನು ಕರೆಸುತ್ತಾನೆ. ರಿನಾಲ್ಡೊ ಬಂದನಂತರ ನಗರ ವಶವಾಗುತ್ತದೆ. ಆರ್ಮಿಡ ಕ್ರೈಸ್ತಳಾಗುತ್ತಾಳೆ. ರಿನಾಲ್ಡೊನ ಕೈ ಹಿಡಿಯುತ್ತಾಳೆ.

'ರೊಮ್ಯಾಂಟಿಕ್ ಎಪಿಕ್'ನ ಸಾಧ್ಯತೆಯನ್ನು ಸ್ಪಷ್ಟಪಡಿಸುವ ಕಾವ್ಯ 'ಜೆರೂಸಲೆಮ್ ಲಿಬರೆಟ'. ಇಲ್ಲಿಯೂ ಅತಿಮಾನವ ಅಂಶವನ್ನು ಬಳಸಿಕೊಂಡಿದೆ. ಆದರೆ 'ಕ್ಲಾಸಿಕಲ್' ಮಹಾಕಾವ್ಯದಲ್ಲಿಯಂತೆ ಈ ಅಂಶ, ಮಾನವನನ್ನು ಶಕ್ತಿಯಲ್ಲಿ ಮೀರಿಸಿ ಅವನ ಅದೃಷ್ಟವನ್ನಾಳುವ ಶಕ್ತಿಗಳ ಹಲವು ಮುಖಗಳನ್ನು ಪ್ರಕಟಪಡಿಸುವುದಿಲ್ಲ. ಕವಿಯ ಜೀವನ ದರ್ಶನದ ಒಂದು ಪ್ರಮುಖ ಭಾಗವಲ್ಲ. ಆದರೂ ವಿಮರ್ಶಕರು ಈ ಕೃತಿಯನ್ನು ಕುರಿತು ಮಾತನಾಡುವಾಗ 'ಧಾರ್ಮಿಕಶ್ರದ್ಧೆ' (religious solemnity) ಯಂತಹ ಪದಗಳನ್ನು ಬಳಸಿದ್ದಾರೆ. ಕವಿ, ಮಾನವನನ್ನು ಮೀರಿದ ಶಕ್ತಿಗಳ ಇರವನ್ನೂ ಮಾನವನ ಬಾಳಿನಲ್ಲಿ ಅವುಗಳ ಕೈವಾಡವನ್ನೂ ಸೂಚಿಸುತ್ತಾನೆ. ಮಾನವನೇ ತನ್ನ ಜೀವನವನ್ನು ಸ್ವತಂತ್ರವಾಗಿ ರೂಪಿಸಿಕೊಳ್ಳುವ ಶಿಲ್ಪಿಯಲ್ಲ ಎಂಬ ಭಾವನೆ ಕಾವ್ಯದಲ್ಲಿ ಧ್ವನಿತವಾಗುತ್ತದೆ. ಆದರೆ, ಇದರೊಂದಿಗೆ ಮಾನವ ತನ್ನೊಳಗೇ ತನ್ನ ಅಂಕೆಗೆ ಮೀರಿದ ರಾಗಗಳ ಶಕ್ತಿಗೆ ಸಿಲುಕಿದ ಚಿತ್ರ ಎದುರಾಗುತ್ತದೆ. 'ರೊಮ್ಯಾಂಟಿಕ್ ಎಪಿಕ್' 'ಲಿರಿಕಲ್' ಸಂಪ್ರದಾಯದಲ್ಲಿಯೂ ಬೆಳೆಯಿತು. ಈ 'ಲಿರಿಕಲ್' ಅಂಶವನ್ನು ಟ್ಯಾಸೊ ಉಳಿಸಿಕೊಳ್ಳುತ್ತಾನೆ. ಜೊತೆಗೆ ಒಂದು ಗಂಭೀರವಾದ, ಜೀವನಶ್ರದ್ಧೆಯ ಸತ್ವ ಉಳ್ಳ ದರ್ಶನವನ್ನು ಕಾವ್ಯದಲ್ಲಿ ಪ್ರಕಟಪಡಿಸುತ್ತಾನೆ. ಅಲ್ಲದೆ ಈ ಕೃತಿ ಅನ್ಯಾರ್ಥ (ಅಲೆಗರಿ)ಯತ್ತಲೂ ವಾಲುತ್ತದೆ. ಕ್ರೈಸ್ತಯೋಧರು ಮುಕ್ತಗೊಳಿಸ

ಬಯಸುವ ಜೆರೂಸಲೆಮ್ ನಗರಕ್ಕೆ ಎರಡು ರೀತಿಗಳಲ್ಲಿ ಪ್ರಾಧಾನ್ಯ ಬರುತ್ತದೆ. ಮೊದಲನೆಯದು, ಅದರ ಧಾರ್ಮಿಕ ಇತಿಹಾಸದಿಂದ. ಕ್ರೈಸ್ತರಿಗೂ ಅವರ ಶತ್ರುಗಳಿಗೂ ಧಾರ್ಮಿಕ ಕಾರಣಗಳಿಗಾಗಿ ಪವಿತ್ರ ಎನಿಸಿದೆ ಈ ನಗರ. ಇದಲ್ಲದೆ ಟ್ಯಾಸೊ ಕಾವ್ಯವನ್ನು ನಿರ್ವಹಿಸುವ ರೀತಿಯಲ್ಲಿ ಇದು, ನಾಗರಿಕ ಜೀವನದಲ್ಲಿನ ನೆಮ್ಮದಿಯ ಸಂಕೇತವಾಗುತ್ತದೆ. ಸಮುದಾಯದ ನಿವಾಸಿಯಾದ ಮನುಷ್ಯ, ನಗರಜೀವನದ ನೆಮ್ಮದಿ, ಸುಖಗಳನ್ನು ಬಯಸುತ್ತಾನೆ. ಅದಕ್ಕಾಗಿ ತ್ಯಾಗ ಮಾಡಲು, ಹೋರಾಡಲು ಸಿದ್ಧವಾಗಿರುತ್ತಾನೆ. ಹೋಮರನ ಮಹಾಕಾವ್ಯದ ಹೆಸರೂ ಒಂದು ಶ್ರೀಮಂತ ನಗರಕ್ಕೆ ಸಂಬಂಧಿಸಿದುದು. ('ಇಲಿಯೆಡ್' ಟ್ರಾಯ್ ನಗರದ ಮತ್ತೊಂದು ಹೆಸರು) ಆದರೆ, ಯುದ್ಧದ ಮುಕ್ತಾಯವನ್ನು ಮತ್ತು ನಗರದ ಭೀಕರ ಪತನವನ್ನು ಕಾವ್ಯ ಚಿತ್ರಿಸುವುದಿಲ್ಲ. ಆದರೆ 'ಜೆರೂಸಲೆಮ್ ಲಿಬರೆಟ' ನಗರದ ಭಾಗ್ಯಕ್ಕೆ ಸಾಕಷ್ಟು ಪ್ರಾಮುಖ್ಯತೆ ಕೊಡುತ್ತದೆ. ಪ್ರಣಯಿಗಳ ಕಥೆಗಳು ನಗರದ ಏಳು ಬೀಳುಗಳ ಕಥೆಯಲ್ಲಿ ಹಾಸುಹೊಕ್ಕಾಗಿವೆ.

'ಕ್ಲಾಸಿಕಲ್' ಮಹಾಕಾವ್ಯಗಳಿಗೂ 'ರೊಮ್ಯಾಂಟಿಕ್' ಮಹಾಕಾವ್ಯಗಳಿಗೂ ಕೆಲವು ಅಂಶಗಳು ಸಮಾನವಾಗಿವೆ. ಎರಡೂ ದೀರ್ಘವಾದ ವೃತ್ತಾಂತ (narration)ಗಳು; ಎರಡರಲ್ಲಿಯೂ ಮಾನವಾತೀತ ಶಕ್ತಿಗಳ ಕೈವಾಡ ಉಂಟು. ಎರಡರಲ್ಲಿಯೂ ಯುದ್ಧಕ್ಕೆ ಪ್ರಾಧಾನ್ಯ. ಇವುಗಳಲ್ಲಿ ಸಾಮಾನ್ಯವಾಗಿ ನಾಯಕಪಾತ್ರ ಅಥವಾ ಪ್ರಧಾನಪಾತ್ರಗಳು ಧರ್ಮಕ್ಕಾಗಿ ಹೋರಾಡುತ್ತವೆ. ಶತಶತಮಾನಗಳಿಂದ ಮನುಷ್ಯನಿಗೆ ಬಾಳು ಹೋರಾಟವಾಗಿ ಕಂಡಿದೆ, ಅನ್ವೇಷಣೆಯಾಗಿ ಕಂಡಿದೆ. ಹೋರಾಟ, ಅನ್ವೇಷಣೆ ಇವಕ್ಕೆ ಮಹಾಕಾವ್ಯಗಳಲ್ಲಿ ಮಹತ್ವ ಲಭಿಸಿರುವುದು ಆಶ್ಚರ್ಯವಲ್ಲ. ಮಾನವ ತನ ಬಾಳಿನಲ್ಲಿ ಕಂಡ ಅನಿಶ್ಚಿತತೆ, ವೈಚಿತ್ರ್ಯಗಳು ಅವನ ಶಕ್ತಿಗಳ ಕಲ್ಪನೆಯನ್ನು ರೂಪಿಸಿವೆ. ಆದರೆ ಈ ಅತಿ ಮಾನವ ಶಕ್ತಿಗಳ ಅತಿಮಾನವತೆಯಷ್ಟೆ ಧ್ವನಿತವಾದಾಗ ಕಾವ್ಯ ಸೋಲುತ್ತದೆ ಎಂಬುದು 'ಅಲ್ಯಾಂಡೊ ಇನಾಮೊರಾಟೊ'ಯಿಂದ ಸ್ಪಷ್ಟವಾಗುತ್ತದೆ. ಮಾಂತ್ರಿಕರು, ಪಿಶಾಚಿಗಳು, ರೆಕ್ಕೆ ಇರುವ ಕುದುರೆ ಇವೆಲ್ಲ ಕಥೆಗೆ ಕುತೂಹಲಕಾರಿ ತಿರುವುಗಳನ್ನು ಕೊಟ್ಟು ಅದ್ಭುತಗಳನ್ನು ಕಾಣುವ ಹಂಬಲಕ್ಕೆ ತಾತ್ಕಾಲಿಕ ತೃಪ್ತಿ ನೀಡಬಹುದು. ಆದರೆ ಈ ಮಹಾಶಕ್ತಿಗಳಿಗೆ ಮಾನವನ ಜೀವನದಲ್ಲಿ ಅರ್ಥ ದೊರೆಯದೆ ಹೋದರೆ ಕಾವ್ಯ ತೃಪ್ತಿಯನ್ನು ನೀಡಲಾರದು.

ಆದರೆ 'ರೋಮ್ಯಾಂಟಿಕ್' ಮಹಾಕಾವ್ಯದಲ್ಲಿ ಒಬ್ಬ ಕೇಂದ್ರನಾಯಕನ ಪ್ರಾಧಾನ್ಯ ಕಡಮೆಯಾಯಿತು ಎಂಬುದು, ಮಹಾಕಾವ್ಯದ ವಿವರಣೆಯ ದೃಷ್ಟಿಯಿಂದ ಗಮನಿಸಬೇಕಾದ ಅಂಶ. ಈ ಕಾವ್ಯಗಳಲ್ಲಿಯೂ ಗಾಡ್‌ಫ್ರೆಯಂತೆ ಅಥವಾ ಆರ್ಲ್ಯಾಂಡೊನಂತೆ ಒಬ್ಬ ಕೇಂದ್ರನಾಯಕನಿದ್ದಾನೆ ಎಂದು ಭಾವಿಸಿದರೂ 'ಕ್ಲಾಸಿಕಲ್' ಮಹಾಕಾವ್ಯಕ್ಕೂ ಈ ಮಹಾಕಾವ್ಯಕ್ಕೂ ಒಂದು ಮುಖ್ಯವಾದ ವ್ಯತ್ಯಾಸವನ್ನು ಕಾಣುತ್ತೇವೆ. 'ಕ್ಲಾಸಿಕಲ್' ಮಹಾಕಾವ್ಯದಲ್ಲಿ ಹಲವಾರು ಪಾತ್ರಗಳು ಬರುತ್ತವೆ: ಅವು ಹಲವು ಪ್ರಸಂಗ

ಗಳಲ್ಲಿ ಪ್ರಾಧಾನ್ಯ ಪಡೆಯುತ್ತವೆ; ಆದರೆ ಮುಖ್ಯನಾಯಕನಲ್ಲದೆ ಇತರರ ಬಾಳುಗಳ ಎಳೆಗಳನ್ನು ನಾವು ಹಿಡಿದುಕೊಂಡು ಹೋಗುವುದಿಲ್ಲ. 'ರೊಮ್ಯಾಂಟಿಕ್' ಮಹಾಕಾವ್ಯದಲ್ಲಿ ಹಲವು ಬಾಳುಗಳ ಏಳುಬೀಳುಗಳು ಹಾಸುಹೊಕ್ಕಾಗಿ ಕಾವ್ಯದ ವಸ್ತು ರೂಪುಗೊಳ್ಳುತ್ತದೆ. ಸಾಹಸಪ್ರವೃತ್ತಿಯಲ್ಲದೆ ಮನುಷ್ಯಸ್ವಭಾವದ ಇತರ ಮುಖಗಳೂ ಮುಖ್ಯವಾಗುತ್ತವೆ, ಪ್ರಕಟವಾಗುತ್ತವೆ. ತಂತ್ರದ ದೃಷ್ಟಿಯಿಂದ ಒಂದು ವ್ಯತ್ಯಾಸವನ್ನು ಗಮನಿಸಬಹುದು. ಕ್ಲಾಸಿಕಲ್ ಮಹಾಕಾವ್ಯದ ಕಥೆ ಒಂದು ಮಹಾಘಟನೆಯ ಸುತ್ತ ಕೇಂದ್ರೀಕೃತವಾಗುತ್ತದೆ. ರೊಮ್ಯಾಂಟಿಕ್ ಮಹಾಕಾವ್ಯದಲ್ಲಿ ಹೀಗಾಗುವುದಿಲ್ಲ. ಜೆರೂಸಲೆಮ್‌ನ ವಿಮೋಚನೆ ಮುಖ್ಯವಾದರೂ ಹಿನ್ನೆಲೆಯಲ್ಲಿ ಉಳಿಯುತ್ತದೆ (ಆದರೆ ನಾವು ಯಾವಾಗಲೂ ಅದನ್ನು ಮರೆಯಲು ಕವಿ ಅವಕಾಶ ಕೊಡುವುದಿಲ್ಲ). ಟ್ಯಾಸೊ ತನ್ನ ಮಹಾಕಾವ್ಯವನ್ನು ಬರೆಯದಿದ್ದರೆ ರೊಮ್ಯಾಂಟಿಕ್ ಮಹಾಕಾವ್ಯ ಒಂದು ವಿಫಲ ಪ್ರಯೋಗ ಎಂದೇ ಹೇಳಬೇಕಾಗುತ್ತಿತ್ತು. ಆದರೆ ಇವನು ಸಾಧಿಸಿದ ಯಶಸ್ಸು 'ರೊಮ್ಯಾಂಟಿಕ್ ಮಹಾಕಾವ್ಯವನ್ನು ನಾವು ಗಂಭೀರವಾಗಿ ಅಭ್ಯಾಸ ಮಾಡುವುದನ್ನು ಅಗತ್ಯಗೊಳಿಸಿದೆ. ಯಾವುದಾದರೊಂದು ರೀತಿಯಲ್ಲಿ ಪ್ರಾಧಾನ್ಯ ಗಳಿಸಿರುವ ಒಂದು ಸಮುದಾಯವನ್ನು ವಿಶ್ವದ ಸಂದರ್ಭದಲ್ಲಿಟ್ಟು ಅದರ ಏಳುಬೀಳುಗಳನ್ನು ಆಳವಾದ ಗಂಭೀರಾಸಕ್ತಿಯಿಂದ ವಿಮರ್ಶಿಸುವ ದೀರ್ಘಕಾವ್ಯ ಮಹಾಕಾವ್ಯ ಎಂದು ಪರಿಗಣಿಸಬಹುದು ಎಂದು ತೋರುತ್ತದೆ. 'ಆರ್ಲ್ಯಾಂಡೊ ಇನಾಮರಾಟೊ'ನ ವೈಫಲ್ಯ 'ಆರ್ಲ್ಯಾಂಡೊ ಫ್ಯೂರಿಯಾಸೊ'ನ ಯಶಸ್ಸು ಇವೂ ನಾಯಕ ಸ್ವತಃ ಎಂತಹ ವೀರನಾದರೂ ಒಂದು ಮಹತ್ವಪೂರ್ಣವಾದ ಮತ್ತು ಸಾಕಷ್ಟು ವಿಸ್ತಾರವಾದ ಸಮುದಾಯದ ಜೀವಕೇಂದ್ರವಾಗದಿದ್ದರೆ ಕಾವ್ಯ ಮಹಾಕಾವ್ಯವಾಗಲಾರದು ಎಂಬುದನ್ನು ತೋರಿಸುತ್ತವೆ. 'ಎಪಿಕ್ ಮೆಲಾಂಕಲಿ' (ಮಹಾಕಾವ್ಯದ ವಿಷಣ್ಣತೆ) ಎಂಬ ಶಬ್ದವೃಂದ ಬಳಕೆಗೆ ಬಂದಿದೆ. ಮಹಾಕಾವ್ಯದ ಕರ್ತೃ ಒಂದು ಮಹತ್ವವಾದ ಯುಗ ಮುಗಿಯುತ್ತಿದ್ದಾಗ ಬರುತ್ತಾನೆ. ತಾನು ಒಂದು ಯುಗದ ಸಂಧ್ಯೆಯಲ್ಲಿದ್ದೇನೆ ಎಂಬ ಅರಿವು ಅವನಲ್ಲಿ ಮೂಡಿರುತ್ತದೆ. ಇದರಿಂದಾಗಿ ಮಹಾಕಾವ್ಯದಲ್ಲಿ ವಿಷಣ್ಣತೆ ಹುಟ್ಟಿರುತ್ತದೆ ಎಂಬುದು ಮಹಾಕಾವ್ಯವನ್ನು ಕುರಿತ ಒಂದು ಕಲ್ಪನೆ. ಬಾರ್ಡನ್‌ನ ಮಹಾಕಾವ್ಯಗ ನವಿರು ವ್ಯಂಗ್ಯ ಈ ಕಾರಣದಿಂದ ಗಮನಾರ್ಹ.

■ ■

# ಕಾದಂಬರಿಯಲ್ಲಿ ಜೀವಸಂಸ್ಕೃತಿ

ಕೃಷ್ಣಮೂರ್ತಿ ಪುರಾಣಿಕ

ಬಾಳಿನ ಸಮಗ್ರಸಂದರ್ಶನವೇ ಕಾದಂಬರಿ ಪ್ರಪಂಚದ ಮಹತಿ. "ನಮ್ಮ ಜೀವನದಲ್ಲಿ ನಿಜವಾದ ಒಳ್ಳೆಯದು ಯಾವುದು? ನಮಗೆ ಸೊಗಸೆಂದು ತೋರುವದರಲ್ಲೆಲ್ಲ ಮೇಲಾದ ಸೊಗಸು ಎಂಥಾದ್ದು? ಎಂಬುದರ ಛಾಯೆಯನ್ನು ನಮ್ಮ ಜೀವದ ಕಣ್ಣ ಮುಂದೆ ಸುಳಿದಾಡಿಸಿ, ಮನಸ್ಸು ಆ ಕಡೆಗೆ ಓಲುವಂತೆ ಮಾಡುವದು ಸಾಹಿತ್ಯದ ಉಪಕಾರ." ಇದು ಕಾದಂಬರಿ ಪ್ರಕಾರಕ್ಕೂ ಅನ್ವಯಿಸುವ ಮಾತು.

ಕಾದಂಬರಿಯಲ್ಲಿ ಎದೆಯನ್ನು ಅಲುಗಿಸುವಂಥ ಸನ್ನಿವೇಶ ಬಂದು ಮನಸ್ಸಿಗೆ ಒಂದು ಹಿತ ರಮಣೀಯವಾದ ಪ್ರಭಾವವನ್ನುಂಟಾಗಿಸುವದೇ ಅದರ ಜೀವಸಂಸ್ಕೃತಿ. 'ನರಹೃದಯದಾಳ ಸುಳಿ ಬಿರುಬುಗಳ' ಸೂಕ್ಷ್ಮಪರಿಜ್ಞಾನದಲ್ಲಿ ಕಾದಂಬರಿಯ ಘನತೆ ಇದೆ. ಡಿ. ವಿ. ಜಿ. ಯವರು

ಪಂಡಿತರೆ ಶಾಸ್ತ್ರಗಳೆ ಮಿಥ್ಯೆಯಿಂ ತಥ್ಯಕ್ಕೆ<br>
ಖಂಡಿತದಿ ಸೇತುವೆಯ ಕಟ್ಟುವೊಡೆ ನೀವು<br>
ಕಂಡಿಹಿರ ನರಹೃದಯದಾಳ ಸುಳಿ ಬಿರುಬುಗಳ?<br>
ದಂಡವದನುಳಿದ ನುಡಿ – ಮಂಕುತಿಮ್ಮ ॥

(ಮಂಕುತಿಮ್ಮನ ಕಗ್ಗ. ೪೯)

ಎಂದು ಹೇಳಿದುದನ್ನು ಗಮನಿಸಬೇಕು.

'ಸಾಹಿತ್ಯವು ನಮಗೆ ನಮ್ಮಗಳ ಅಂತಃಪ್ರಪಂಚವನ್ನು ತೋರಿಸಿಕೊಡುವ ಕಿಟಕಿ: ಮನುಷ್ಯವಿಜ್ಞಾನಶಾಸ್ತ್ರದ ಮೂಲಸಾಮಗ್ರಿ ಅದರಲ್ಲಿರುತ್ತದೆ. ಅದು ನಮ್ಮ ಒಳಮೈಯನ್ನು ನಮ್ಮ ಕಣ್ಣ ಮುಂದೆ ಬಿಚ್ಚರಿಸುತ್ತದೆ'

ಈ ಮಾತು ಕಾದಂಬರಿ ಸಾಹಿತ್ಯಪ್ರಪಂಚಕ್ಕೂ ಅನ್ವಯಿಸುತ್ತದೆ. ಕಾದಂಬರಿ ವಾಚನವು ಜೀವಸಂಸ್ಕೃತಿಗೆ ಪೋಷಕವಾಗುವ ದಿವ್ಯಧ್ವನಿ: 'ಶ್ರೇಯಸ್ಸ್ವರೂಪದರ್ಶನ.' ಈ ಸಾಹಿತ್ಯ ಪ್ರಕಾರದ ನಿಸ್ಸಂದಿಗ್ಧವಾದ ಗುರಿ ಇದು.

ಮನಸ್ಸನ್ನು ಹದಗೊಳಿಸಿ 'ಮನದ ಕಾಳಿಕೆಯನ್ನು ಕಳೆಯುವ' ಶಕ್ತಿ ಕಾದಂಬರಿ ವಾಚನ ಸಂಸ್ಕಾರದಿಂದ ಉಂಟಾಗಬೇಕು. ಸಂಸ್ಕೃತಿಯ ಹಾಲು ಕೆನೆಗಟ್ಟಬೇಕು. ಈ ವಾಚನದಿಂದ ಜೀವ ತುಂಬಿತುಳುಕಬೇಕು.

ಆದುದರಿಂದ ಸಾಹಿತ್ಯ ಸಾಧನೆ. ಕಾದಂಬರಿ ರಚನೆ ಅವಸರದ ದಂದುಗವಲ್ಲ. ಅದು ಹಂತಹಂತದಲ್ಲಿ ಪ್ರಗತಿಪರವಾಗುತ್ತಿರಬೇಕು. ಈ ವಾಚನದಿಂದ ಓದುವವರ ಮನಸ್ಸೂ ಅರಳಬೇಕು; ಬರೆದವನ ಹೃದಯವೂ ಅರಳಿ ಶುದ್ಧೀಕರಣಗೊಳ್ಳುತ್ತಿರಬೇಕು.

ಈ ಬರಹ ಎರಡು ವ್ಯಕ್ತಿಗಳ– ಓದುಗ ಮತ್ತು ಲೇಖಕ– ಹೃದಯ ವಿಕಾಸಕ್ಕೆ ಅನುಕೂಲವಾಗುವ ಮಹಾಸಾಧನ.

ಸಾಹಿತ್ಯದ ಪ್ರಕಾರಗಳಲ್ಲಿ ಕಾದಂಬರಿಗೊಂದು ವಿಶಿಷ್ಟ ಸ್ಥಾನವಿದೆ. ಇದರ ನಡೆ ಗಂಭೀರ; ನುಡಿ ವಿಸ್ತಾರ. ವಸ್ತು ವಿಶಾಲ. ಆದುದರಿಂದ ಇಲ್ಲಿ ಜೀವಸಂಸ್ಕೃತಿ ತುಳುಕಾಡುತ್ತದೆ. ಜೀವದ ಜೋಕಾಲಿಯಲ್ಲಿ ಕಾದಂಬರಿ ಸಂವೇದನೆಯನ್ನು ಪಡೆಯುತ್ತದೆ. ಜೀವಮೌಲ್ಯದ ನಾಡಿಯನ್ನು ಗುರುತಿಸುತ್ತದೆ. ಜೀವನದ ಮಹತಿಯ ಇಲ್ಲವೆ ಅವನತಿಯ ಚಿತ್ರಣವನ್ನು ಕಾಣಲು ಈ ಪ್ರಕಾರದಲ್ಲಿ ಸಾಕಷ್ಟು ಅವಕಾಶವಿರುವದರಿಂದ ಕಾದಂಬರಿಯು ಜೀವನದ ಚಿತ್ರಣವಾಗುತ್ತದೆ ಎಂಬಲ್ಲಿ ಸತ್ಯಾಂಶವಿಲ್ಲದಿಲ್ಲ. ಇನ್ನೂ ಒಂದಿಷ್ಟು ಮುಂದೆ ಸಾಗಿ ಜೀವನವೇ ಕಾದಂಬರಿಯಾಗುತ್ತದೆ ಎನ್ನುವವರೂ ಇದ್ದಾರೆ.

ಈ ಜೀವನವನ್ನು ಕಾಣುವ ಕಣ್ಣು ನೋಡುವ ದೃಷ್ಟಿ ವ್ಯಕ್ತಿಯ ಶಕ್ತಿಯನ್ನೇ, ಅವನ ಅನುಭವವನ್ನೇ, ಅವನ ನಿರೂಪಣಾಶಕ್ತಿಯನ್ನೇ ಅವಲಂಬಿಸಿದೆ ಎಂದು ಧಾರಾಳವಾಗಿ ಹೇಳಬಹುದು.

ಕಾದಂಬರಿಯೆಂದರೆ ಅನುಭವದ ರಸಜೇನು ಕೂಡಿಹಾಕಿದ ಜೇನು ಹುಟ್ಟು ಎಂದು ಹೇಳಿದರೆ ಅನುಭವದ ಹಿರಿಮೆಯ ಬಗ್ಗೆ ಹೇಳಿದಂತಾದೀತು. ಅನುಭವದ ಜೀವರಸದ ಪಾಕದಲ್ಲಿ ಕಾದಂಬರಿ ಹಣ್ಣಿನ ಪಕ್ವಫಲವಿರುತ್ತದೆ.

ಕಾದಂಬರಿಕಾರನಲ್ಲಿ 'ಪರಿಸರ ಪರಿಗ್ರಹಣಶಕ್ತಿ'ಯ ಜೊತೆಗೆ 'ನವನಿರ್ಮಾಣಶಕ್ತಿ'ಯೂ 'ಆವೇದನಶಕ್ತಿ'ಯೂ ಪ್ರತಿಭೆಯಿಂದಲೂ, ಅನುಭವದಿಂದಲೂ ಪ್ರಾಪ್ತವಾಗುತ್ತದೆ. ಕಾದಂಬರಿ ಪ್ರಪಂಚದ ಘನತೆ ಅದು ನೀಡುವ ಜೀವಸಂಸ್ಕೃತಿಯಲ್ಲಿರುತ್ತದೆ. ಅದರ ಜನಪ್ರಿಯತೆಗೆ ಜೀವಸಾಮೀಪ್ಯವೇ ಕಾರಣವಾಗಿದೆ. ಇದು ಕೇವಲ ಜೀವನಪ್ರದ

ರ್ಶನ ಮಾತ್ರವಲ್ಲ: ಜೀವನದರ್ಶನವೂ ಆಗಿದೆ. ಪ್ರದರ್ಶನದ ದೃಷ್ಟಿ–ಸೃಷ್ಟಿಗಳೇ ಬೇರೆ: ದರ್ಶನದ ಅಂತರ್ದೃಷ್ಟಿ, ಭವ್ಯಸೃಷ್ಟಿಗಳೇ ಬೇರೆ. ಇವು ಪರಸ್ಪರ ಪೋಷಕವಾಗಿ ಜೀವಸಂಸ್ಕೃತಿಗೆ ಅನುಗುಣವಾಗಿ ಹೊರಹೊಮ್ಮುವದೇ ಈ ಪ್ರಪಂಚದ ನೆಲಗಟ್ಟಾಗಿದೆ.

ಪಾಪಮಿದು ಪುಣ್ಯಮಿದು ಹಿತ
ರೂಪಮಿದು, ಅಹಿತಪ್ರಕಾರವಿದು ಸುಖಮಿದು ದು
ಖೋಪಾತ್ತವಿದೆಂದರಿಪುಗು
ಮಾ ಪರಮಕವಿಪ್ರಧಾನರಾ ಕಾವ್ಯಂಗಳ್ ॥

(ಕವಿರಾಜಮಾರ್ಗ)

ಕಾವ್ಯ ರಚನೆಯ ಬಗ್ಗೆ ಹೇಳುವಾಗ, ಕವಿಪ್ರಧಾನರ ಕಾವ್ಯಗಳು ಇದು ಪಾಪ, ಇದು ಪುಣ್ಯ, ಇದು ಹಿತ, ಇದು ಅಹಿತ, ಇದು ಸುಖ, ಇದು ದುಃಖ ಎಂಬುದನ್ನು ತಿಳಿಸಿಕೊಡಲು ತಕ್ಕುವಾಗಿವೆ ಎಂದಿದ್ದಾರೆ. ಜೀವನದ ಆಗುಹೋಗುಗಳ ಸೂಕ್ಷ್ಮ ಪೃಥಕ್ಕರಣಮಾಡಿ ಜೀವಕ್ಕೊಂದು ಮಾರ್ಗದರ್ಶನವಾಗಿ ತೋರುವ ಕಥಾವಸ್ತುವಿನಿಂದ ಹೊರಬರುತ್ತಿರುವ ಕಾದಂಬರಿಗೆ ಕೂಡ ಮೇಲಿನ ಮಾತುಗಳನ್ನು ಅನ್ವಯಿಸಬಹುದು. ಕಾವ್ಯವೂ ಕೂಡ ಸಾಹಿತ್ಯದ ಒಂದು ಪ್ರಭೇದವಾಗಿರುವಂತೆ ಕಾದಂಬರಿಯೂ ಅಲ್ಲವೇನು ? ಕೇವಲ ಸಂಕ್ಷೋಭತೆಯೇ ಸಾಹಿತ್ಯ ಕಥಾವಸ್ತುವಾಗುವದು ಅಪೇಕ್ಷಣೀಯವಲ್ಲ. ಹಾಗೆಂದ ಮಾತ್ರಕ್ಕೆ ಅದು ಕಥಾವಸ್ತು ಬಾಹಿರವಲ್ಲ. ಆದರೆ ಅದಕ್ಕೊಂದು ಇತಿಮಿತಿ ಇರಬೇಕು. ಕ್ಷೋಭೆಯಿಂದ ಜೀವನ ಕಹಿಯಾಗುತ್ತದೆ. ಕಹಿಯಾಗಿರುವ ಜೀವನವನ್ನು ತನ್ನ ಕುಶಲತೆಯ ಕಂಚಿನಿಂದ ಸಿಹಿ ಹೇಗೆ ಮಾಡಿಕೊಳ್ಳಬೇಕೆಂಬ ಮಾತಿಗೆ ಕಾದಂಬರಿ ಪ್ರಪಂಚದಲ್ಲಿ ಶಾಶ್ವತಮೌಲ್ಯವಿದೆ.

ತಂಬಾಕು ತಿನ್ನುವವನಿಂದ ಸುತ್ತುಮುತ್ತಲೂ ಎಂಜಲು ಸಿಡಿಯುತ್ತದೆ; ಜೇನುತುಪ್ಪವನ್ನು ಬಾಯೊಳಗಿರಿಸಿದವನ ಜಠರದಲ್ಲಿ ಅದು ನೇರವಾಗಿ ಇಳಿದು ಹಿತವನ್ನು ಉಂಟುಮಾಡುತ್ತದೆ. ಉಗುಳು ಸಿಡಿಸುವುದು ಸಾಹಿತ್ಯರಚನೆಯ ಉದ್ದೇಶವಿರಬಾರದು; ಅಂತರಂಗದಲ್ಲಿ ಜೇನು ಹನಿಸುವದು ಅದರ ಗುಣವಾಗಿರಬೇಕು. ವ್ಯಕ್ತಿಯ ಜೀವನವನ್ನು ಅದು ಕಾಪಾಡಬೇಕು. "It can Save the Individual" ಎಂಬುದು ಈ ಸಾಹಿತ್ಯವಿಭಾಗದ ವೈಶಿಷ್ಟ್ಯ.

ಜೀವನದ ಕೇವಲ ನೀರಸ ನಿರೂಪಣೆಯೇ ಕಾದಂಬರಿ ಕಥಾವಸ್ತುವಾಗಬೇಕಿಲ್ಲ. ನೈಜತೆಯೆಂದರೆ ವಿಪರ್ಯಸ್ತ ಜೀವನದ ಅಪ್ರಬುದ್ಧ ಚಿತ್ರಣವಲ್ಲ. ಭಾರತೀಯ ಜೀವನವನ್ನು ಬದಿಗೆ ಸರಿಸಿ ಪಾಶ್ಚಿಮಾತ್ಯ ಸಮಾಜ ಚಿತ್ರಣವನ್ನು ಅಲ್ಲಿಯ ರೀತಿ ನೀತಿಯನ್ನು ಬಿಂಬಿಸುವದು ನೈಜತೆಯಾಗಲಾರದು. ನಮ್ಮ ಜೀವನದ ಆಳವಾದ ಅನುಭವದಿಂದ ಮೂಡಿಬರುವ ಪೃಥಕ್ಕರಣದ ಪರಮಾವಧಿ ಶಕ್ತಿಯೇ ಕಾದಂಬರಿಬ್ರಹ್ಮನ ರಚನಾ

ಶಕ್ತಿ. ಹೃದಯಮಂಥನದಿಂದ ಅನುಭವದ ರಸಪಾಕವೇ ಜೀವನಸಮುದ್ರ. ಇದರ ವಿಸ್ತಾರ ದೊಡ್ಡದು; ಆಳ ಇನ್ನೂ ಆಳತೆಗೆ ಸಿಲುಕದು. ಈ ವಿಸ್ತಾರವನ್ನು, ಈ ಆಳ ವನ್ನು ಅಳೆದು, ತೂಗಿ. ರಸಭಾವನೆ ಮಾಡಿ ಜೀವನದ ರಸಗಟ್ಟಿಯನ್ನಾಗಿ ಪರಾರ್ಪ ಡಿಸಿದ ಕೃತಿ ಸುಕೃತಿ. ಜೀವನದಲ್ಲಿ ನೂರು ಸ್ವರವೇಳುತ್ತವೆ; ಅವು ನೂರು ತೆರ ವಾಗಿರುತ್ತವೆ. ಒಂದೊಂದೂ ಒಂದೊಂದು ತರ. ಈ ತರದ ಸ್ವರಗಳನ್ನು ಅನು ಭವಿಸಿ ನಿರೂಪಿಸುವದೆ ಕಾದಂಬರಿಗೆ ಕಲಾಪ್ರಪಂಚವನ್ನು ನೀಡುತ್ತದೆ. ಜೀವನ ದಲ್ಲಿಯೇ ಒಳ್ಳೆಯದನ್ನು ಗ್ರಹಿಸಿ, ಕೆಟ್ಟದುದನ್ನು ಸೂಚ್ಯವಾಗಿ ತೋರಿಸಿ ಜೀವನದ ವೈಭವವು ಅದನ್ನು ಬಾಳವದರಲ್ಲಿದೆ ಎಂಬುದನ್ನು ಮನಂಬುಗುವಂತೆ ಹೇಳುವದರಲ್ಲಿ ಸಾರ್ಥಕ್ಯವಿದೆ. ಈ ಜೀವನಾನುಭವವು ಒಳಗಣ್ಣಿಗೆ ಬೆಳಕನ್ನು ದಯಪಾಲಿಸುತ್ತದೆ. ಈ ಬೆಳಕಿನಲ್ಲಿ ಕಾದಂಬರಿ ರಥ ಸಾಗಬೇಕು. ಅದರ ಉದ್ದೇಶ ಪಾದಗಟ್ಟಿಯನ್ನು ತಲುಪುವದಿರಬೇಕು.

ಹೀಗೆ ಹೇಳುವಾಗ ಕಾದಂಬರಿ ಲೇಖಕನು ತಾನು ಸೃಷ್ಟಿಸುವ ಪಾತ್ರಗಳಲ್ಲಿ ತಲ್ಲೀನ ನಾಗುವದು ಅನಿವಾರ್ಯ. ಪಾತ್ರಗಳೇ ತಾನಾಗಿ ನುಡಿಯುವದೇ ಇದರ ರೀತಿ. ಅವುಗಳ ಅಂತರಂಗದ ಒಳಹೊಕ್ಕು ಅನುಭವಿಸುವದೇ ಕಾದಂಬರಿಕಾರನ ದಿವ್ಯತೆ. ಪಾತ್ರ ಗಳು ಅಳುವಾಗ ಅವನೂ ಅಳಬೇಕು; ನಕ್ಕಾಗ ನಗಬೇಕು. ಈ ಏಕರಸನಾದ ವಿತಾನ ದಿಂದ ಕಾದಂಬರಿ ವೀಣೆ ಝೇಂಕರಿಸುತ್ತದೆ. ಇದನ್ನು ಅನುಭವಿಸದೇ ಪರಕೀಯತೆ ಯಿಂದ ಬರೆದ ಕೃತಿ ಬರಡು. ಹೋರೇಸ (Horace) ಅವರು ಹೇಳುವಂತೆ "The Author who will make me weep, must first weep himself." ಯಾಕೆಂದರೆ ಕಾದಂಬರಿಕಾರನು ಜೀವನ ದಿನಪತ್ರಿಕೆಯ ಸ್ವಂತ ಸುದ್ದಿಗಾರನೂ ಅಲ್ಲ, ವರದಿಗಾರನೂ ಅಲ್ಲ. ಅವನು ಜೀವನಾನುಭವಿ. ಜೀವನದ ಸಂಗತಿಗಳು ಅವನ ಆತ್ಮವನ್ನು ಉದ್ದೀಪನಗೊಳಿಸುತ್ತವೆ. ನಿತ್ಯನಿರಂತನ ಚಿಂತನವೆ ಅವನ ಚಿಂತೆ. ತನ್ನದಲ್ಲದ ಚಿಂತೆಯನ್ನು ತನ್ನದು ಮಾಡಿಕೊಂಡು ಆ ಚಿಂತೆಗೆ ಭಾವಪುಷ್ಟಿ ಮಾಡುವದೇ ಅವನ ಬ್ರಹ್ಮಾಂಡ ಚಿಂತೆ. ಅನುಭವಗಳ ಮೂಸೆಯಲ್ಲಿ ಬೆಂದು ಪುಟವಿಕ್ಕಿದಾಗ ಈ ರಸಾನುಭವಗಳ ರಸಸಿದ್ಧಿಪಾಕದಿಂದ ಅವನ ಹೃದಯವು ರಸಗಟ್ಟಿಯಾಗುತ್ತದೆ. ಈ ಸ್ಥಿತಿ ಬಂದಾಗ ಅವನ ಕೃತಿಯು ಅವನ ಆತ್ಮದ ಅಮರ ಸಂದೇಶವಾಗುತ್ತದೆ. ಇದೇ ಕಾದಂಬರಿಕಾರನ ದಿವ್ಯಧ್ವನಿ; ಕಾದಂಬರಿಕಾರನ ಪ್ರೇರಣಾರೆಝೇಂಕಾರದ ಪ್ರತಿಭಾ ರೂಪ ಸಂಪನ್ನತೆ.

"A thing out of place is dirt" ತನಗೆ ತಕ್ಕ ಸ್ಥಾನವನ್ನು ಬಿಟ್ಟು ಬೇರೆ ಕಡೆಗೆ ಬರುವದೇ ಕೊಳಕು ಎಂಬ ಮಾತೊಂದಿದೆ. ಕಾದಂಬರಿ ಬರಹಗಾರರು ಈ ಮಾತನ್ನು ನೆನೆದಷ್ಟೂ ಬರಹ ಉತ್ತಮಗೊಳ್ಳುತ್ತದೆ.

ಕಾದಂಬರಿ ಬರಹದಲ್ಲಿ ಮಾನವೀಯತೆಗೆ ಬಹುದೊಡ್ಡ ಸ್ಥಾನವಿದೆ. ಶಾಶ್ವತವಾಗಿ ನಿಲ್ಲುವವೇ ಅದು. ಅವನು ಪಕ್ಷ-ಪಂಗಡಗಳ ರಾಯಭಾರಿಯಾಗದೆ ವಿಶ್ವಜೀವಿತದ ಹಿರಿಮೆಯನ್ನು ಅರಿತುಕೊಂಡಾಗ ಮಾನವೀಯತೆಯು ಸಾಕ್ಷಾತ್ಕಾರವಾಗುತ್ತದೆ. ಮಾನವೀಯತೆಯ ಮೌಲ್ಯ ಅಬಾಧಿತ. ಇದನ್ನೇ ಡಿ. ವಿ. ಜಿ. ಯವರು ಅಸಂದಿಗ್ಧವಾದ ಮಾತುಗಳಲ್ಲಿ ಹೇಳಿದ್ದಾರೆ.

> ತಲೆಯಿಂದ ತಲೆಗೆ, ಪೀಳಿಗೆಯಿಂದ ಪೀಳಿಗೆಗೆ
> ಅಲೆಯಿಂದಲಲೆಗೆ, ಟಪ್ಪೆಯ ಚಾರನಂತೆ
> ಇಳಿಯುತಿದೆ ಯುಗದಿಂದ ಯುಗಕೆ ಮಾನವಧರ್ಮ
> ನಿಲದಮೃತಧಾರೆಯದು ಮಂಕುತಿಮ್ಮ ॥

(ಮಂಕುತಿಮ್ಮನ ಕಗ್ಗ. ೪೦೮)

ಅಲ್ಲದೆ ಈ ನುಡಿಗಳನ್ನೂ ಕೇಳಿ,

> ಜಾನಪದಗಳು ರಾಜ್ಯಸಾಮ್ರಾಜ್ಯಗಳು ಗುರು
> ಸ್ಥಾನಗಳು ಧರ್ಮಗಳು ಭಾಷೆ ವಿದ್ಯೆಗಳು
> ಕಾಣಿಸದೆ ಸಾಗಿಹವು ಕಾಲಪ್ರವಾಹದಲಿ
> ಮಾನವತೆ ನಿಂತಿಹುದು ಮಂಕುತಿಮ್ಮ ॥

(ಮಂಕುತಿಮ್ಮನ ಕಗ್ಗ. ೪೧೦)

ಜೀವನದಲ್ಲಿ ಕಂಡುಬರುವ ಕೂಪಮಂಡೂಕ ವೃತ್ತಿಯು ಮಂಗಳಾಚರಣೆಯಾಗಿ ವಿಶ್ವಜೀವನ ಹೃದಯದ ವಿಶಾಲಮಾರ್ಗವು ತೆರೆದು ತೋರುವಂತೆ ಬರಹಗಾರನು ವ್ಯಕ್ತಿತ್ವವನ್ನು ಬೆಳೆಸಿಕೊಂಡಾಗ ಆ ಕೃತಿಗೆ ಬೆಲೆ ಬರುತ್ತದೆ. ಇದು ಶತಸ್ಸಿದ್ಧವಾದ ಮಾತು.

೨

ದೇಶದ ಅಳಿವು ಉಳಿವುಗಳಿಗೆ ಕಾದಂಬರಿಕಾರನು ಹೊಣೆಗಾರನಾಗಿ ತನ್ನ ಲೆಕ್ಕಣಿಕೆಯನ್ನು ಓಡಿಸುವದು ಅನಿವಾರ್ಯವಾಗಿದೆ. ಸಮಾಜಜೀವನದ ದುಸ್ಥಿತಿಯನ್ನು ಕಾಣುತ್ತಿರುವ ಕಾದಂಬರಿಕಾರನು ತನ್ನ ಹೃದಯವನ್ನು ಹದಮಾಡಿಕೊಂಡು ಅಲ್ಲಿ ಇಲ್ಲಿ ಬೊಟ್ಟುಮಾಡಿ ತೋರಿಸುವುದು ಧರ್ಮವಾಗಿದೆ. ಕಾದಂಬರಿಕಾರನು ಹೆಚ್ಚು ಅಧಿಕೃತನೆನ್ನಿಸಬೇಕಾದರೆ ಅವನ ಮನಸ್ಸು ಹದಕ್ಕೆ ಬರಬೇಕು. ಅವನ ಶಬ್ದಭಾಂಡಾರದಲ್ಲಿ ಭಾವಪುಷ್ಟಿ ತುಂಬಬೇಕು. ಮಾತಿಗಾಗಿ ಮಾತು ಬರದೆ ಹೃದಯ ತುಂಬಿ ಬರಬೇಕು. ಮಾತಿಗೊಂದು ಅರ್ಥವಿರಬೇಕು. ಅರ್ಥವಿಲ್ಲದ ಮಾತುಗಳು ಕಾದಂಬರಿಗೊಂದು ಶಾಪ. ಭಾಷೆಯ ಮೇಲೆ ಪ್ರಭುತ್ವವಿಲ್ಲದ ಕಾದಂಬರಿಕಾರನ ರಚನೆ ಸಪ್ಪಗಾಗಿ ಅವನ ಅಪಕ್ವದೆಶೆ ದೃಗ್ಗೋಚರವಾಗುವದು. ಹೀಗೆಂದ ಮಾತ್ರಕ್ಕೆ ಕಾದಂಬರಿಯನ್ನು ಭಾಷೆ ಆಳಬೇಕಾಗಿಲ್ಲ; ಭಾವಪುಷ್ಟಿಗೆ ಅಗತ್ಯವಾದ ಜೀವದ ಭಾಷೆ ಕಾದಂಬರಿಯಲ್ಲಿ ಜೀವಚೈತನ್ಯವನ್ನು ತುಂಬಬೇಕು.

ಬರೆಯುವದೇ ಒಂದು ಉದ್ಯೋಗವಾಗದೆ ಬರೆಯುವದೇ ನಿರ್ಮಾಣಶಿಲ್ಪವೆನ್ನುವ ಮನಃಸ್ಥಿತಿ ಲೇಖಕನದಾಗಬೇಕು. ಹೃದಯ ಮಿಡಿದಾಗ ಮಾತ್ರ ಲೆಕ್ಕಣಿಕೆ ಕುಣಿಯಬೇಕು. ಅನುಭವನಿರೂಪಣೆಯ ಶಕ್ತಿಯಿಂದ ಕಾದಂಬರಿಯು ಜೀವನಾಡಿ ಹಿಡಿಯಬೇಕು. ಜೀವಸಂಸ್ಕೃತಿಗೆ ಜೀವನ ಸಂಸ್ಕಾರವು ಕಾರಣವಾಗಿರುವದರಿಂದ, ಲೇಖಕನು ಪಡೆಯುವ ಸಂಸ್ಕಾರಕ್ಕೆ ಬೆಲೆಯಿದೆ. ಸಂಸ್ಕೃತಿ ಸಂವರ್ಧನಕ್ಕೆ ಸಾಹಿತ್ಯವೇ ಸೋಪಾನಮಾರ್ಗ ವೆಂಬುದನ್ನು ಮನಗಂಡಾಗ ಸಾಹಿತಿಯ, ಕವಿಯ, ಕಾದಂಬರಿಕಾರನ ಹೊಣೆಯು ಅರಿವಾಗುವದು.

ಕಾದಂಬರಿಯೊಂದು ಸಂಕ್ಷಿಪ್ತ ರಂಗಭೂಮಿ, ಜೀವನಪಾತ್ರಗಳೆಲ್ಲ ಇಲ್ಲಿ ಆಡಬೇಕು. ಹದವರಿತು ಪಾತ್ರ ನಿರ್ಮಿಸಬೇಕು. ಹದ ತಪ್ಪಿದರೆ ರಚನೆ ಹದಗೆಡುವದು. ಹದ ಗೆಡಿಸುವದು ಸಾಹಿತಿಯ ಧರ್ಮವಲ್ಲ. ತನ್ನ ಲೋಕಪಾವನಶಕ್ತಿಯಲ್ಲಿ ಜೀವಗಂಗೆ ಯನ್ನು ಹರಿಯಿಸಿ ಕೃತಾರ್ಥನಾದ ಕಾದಂಬರಿಕಾರನು ನಿತ್ಯ ಜೀವನರಸವಾಹಿನಿಯಿಂದ ಯಥಾರ್ಥಜೀವನದ ಅಭಿಷೇಕಪಾತ್ರೆಯಿಂದ ಜೀವಶಿವನಿಗೆ ಅಭಿಷೇಕ ಮಾಡು ವಂತಾಗಬೇಕು. ಯಾಕಂದರೆ ಕಾದಂಬರಿಕಾರನು ಕಾಲದ ಕೂಸು. ಅವನು ಕಾಲಾ ತೀತನೆನ್ನುವದು ಅವನಲ್ಲಿರುವ ದಾರ್ಶನಿಕ ದೃಷ್ಟಿಯಿಂದ ಸಿದ್ಧವಾದೀತು. ಆದರೆ ಕಾದಂಬರಿಯು ಮುಗಿಲಮಲ್ಲಿಗೆಯಲ್ಲ. ಅದರ ಬೇರು ಆಳವಾಗಿ ನೆಲದಲ್ಲಿ ಊರಿ ಕೊಂಡಿವೆ. ಬಾನತುಂಬ ಹಂದರ ಹಾಕಿ ಬೇರನ್ನು ಕಡೆಗಣಿಸಿದರೆ ಯಾವ ಪ್ರಯೋಜನ? ಜನಜೀವನವೇ ಕಾದಂಬರಿಕಾರನಿಗೆ ಜೀವಂತವಾಣಿ. ಜನಜೀವನದ ಕಷ್ಟಕಾರ್ಪಣ್ಯಗಳ ಒಳಹೊಕ್ಕು ಅಂತರ್ಮುಖಿಯಾದ ಲೇಖಕನು ತೇಜಸ್ವಿ ಬರಹದಿಂದ ಪ್ರತಿಭಾಪೂರ್ಣ ನಾಗುತ್ತಾನೆ.

ಪ್ರಜಾಪ್ರಭುತ್ವದ ಚೌಕಟ್ಟಿನಲ್ಲಿ ಹಾದು ಹೋಗುವ ಜೀವನರಥವು ಸಾಹಿತ್ಯಸಂಪರ್ಕದ ಹೊಂಬೆಳಕಿನ ಹೊನ್ನತೇರಿನಲ್ಲಿಯೇ ಸಾಗುವದು ಸುಕ್ಷೇಮ. ಕಾದಂಬರಿ ಶಾರದೆ ಸುಖಿ ಗಳ, ದುಃಖಿಗಳ ಮೆರವಣಿಗೆಯಲ್ಲಿ ಹೊರಟು ನಿಂತ ಅನಂತಮುಖಿಯಾದ ಸರಸ್ವತಿ ಯಾಗಿದ್ದಾಳೆ. ಕಾದಂಬರಿ ಕೂಸಿಗೆ ಸಮಾಜವೇ ತಾಯಿ; ಅದೇ ತಾಯಿಬೇರು.

ಕಾದಂಬರಿಯ ಕನ್ನಡಿಯಲ್ಲಿ ಓದುಗನು ತನ್ನನ್ನು ತಾನು ಕಾಣುತ್ತಾನೆ. ತನ್ನಂಥವರನ್ನು ಕಾಣುತ್ತಾನೆ. ತನಗೆ ಬೇಕು ಬೇಡಾದವರನ್ನು ಕಾಣುತ್ತಾನೆ. ಆದುದರಿಂದಲೇ ಕಾದಂಬರಿಯು ಜೀವನಕ್ಕೆ ತೀರ ಹತ್ತಿರ. ಈ ಆತ್ಮೀಯತೆಯಿಂದ ರಸೋಲ್ಲಾಸದ ಬುಗ್ಗೆಯಾಗುತ್ತದೆ. ಈ ಅನುಭವವನ್ನು ಸಾವಿರ ಸಾವಿರ ಜನ ಅನುಭವಿಸುತ್ತದೆ. ಈ ಅನುಭವದ ಏಕೀಕರಣತೆಯಿಂದ ಕಾದಂಬರಿ ಬರಹವು ಸಾರ್ಥಕತೆಯನ್ನು ಪಡೆ ಯುತ್ತದೆ. ಕ್ರಿಯೆ ಪ್ರತಿಕ್ರಿಯೆಗಳಲ್ಲಿ ಕಾದಂಬರಿಯು ಪ್ರತಿಕೃತಿ ಮೂಡುತ್ತದೆ. ಕ್ರಿಯಾ ಶಕ್ತಿಯು ಕಲಾತ್ಮಕವಾಗಿ ಬರೆದ ಕೃತಿ ಕಲಾಕೃತಿಯಾಗುತ್ತದೆ.

ಈ ಶಕ್ತಿಯನ್ನು ಗಳಿಸಿಕೊಳ್ಳುವ ಬರಹಗಾರನು "ರಸಿಕತೆಯೆ ಯೋಗ" ವೆಂಬುದನ್ನು ಅರಿಯಬೇಕು. ಈ ಯೋಗಸಿದ್ಧಿಯನ್ನು ಕಾಣುವ ಬಯಕೆ ಇದ್ದ ಲೇಖಕನು

ಅಸಮದಲಿ ಸಮತೆಯನು, ವಿಷಮದಲಿ ಮೈತ್ರಿಯನು
ಅಸಮಂಜಸದಿ ಸಮನ್ವಯಸೂತ್ರನಯನವ
ವ್ಯಸನಮಯ ಸಂಸಾರದಲಿ ವಿನೋದವ ಕಾಣ್ಬ
ರಸಿಕತೆಯೆ ಯೋಗವೆಲೊ – ಮಂಕುತಿಮ್ಮ ॥

(ಮಂಕುತಿಮ್ಮನ ಕಗ್ಗ. ೨೪೧)

ಡಿ. ವಿ. ಜಿ ಯವರ ಈ ಸೂತ್ರಗಳನ್ನು ಮೆಲುಕುಹಾಕಬೇಕು.

ಕಾದಂಬರಿ ಸಾಹಿತ್ಯಪ್ರಭೇದವು ಕಲಾಪೂರ್ಣವಾಗಿದ್ದರೂ ಜೀವನದ ಸಮಗ್ರತೆ, ಕಲೆಯ ನಿಯಮಗಳನ್ನು ಕೂಡ ಮೀರಿ ಮುಂದೆ ಸಾಗುತ್ತದೆ. ವಿಶ್ವವಿಖ್ಯಾತವಾದ "ಆನಾ ಕೆರಿನೆನಾ" ಕಾದಂಬರಿಯ ಬಗ್ಗೆ ಹೇಳುವಾಗ ಅದು ಕಲಾಪರಿಪೂರ್ಣವಾಗಿ ಇರಲಿ ಬಿಡಲಿ, ಅದು ಸಮೃದ್ಧಜೀವನದಿಂದ ತುಂಬಿತುಳುಕಿದೆ ಅದು ಪ್ರತ್ಯಕ್ಷ ಜೀವನವೇ ಆಗಿದೆ ಎಂದು ವಿಮರ್ಶಕರು ಹೇಳುತ್ತಾರೆ. ಆದುದರಿಂದ ಕಾದಂಬರಿ ಕಲೆಯ ಚೌಕಟ್ಟನ್ನೂ ಮೀರಿನಿಂತ ವಿಶಾಲ ಸೌಧವಾಗಿದೆ.

ಶ್ರೀಮತಿ 'ವರ್ಜಿನಿಯಾ ಉಲ್ಫ' (Mrs. Virginia Woolf) ಅವರು ಹೇಳುವ ಮಾತು ಕಾದಂಬರಿಯ ಕಲಾತ್ಮಕ ಸೃಷ್ಟಿಯ ಮೇಲೆ ಬೆಳಕು ಚೆಲ್ಲುತ್ತದೆ. ಅವರು ಹೇಳುತ್ತಾರೆ :

'A novel in particular has roused a thousand ordinary human feelings in its progress. To drag in art in such a connection seems priggish and cold hearted. There is not a critic alive now who will say that a novel is a work of art and that as such we will judge it'.

ಎಂದು ಹೇಳಿದ ಸಮರ್ಥ ಮಾತುಗಳನ್ನು ಕಾದಂಬರಿ ವಿಮರ್ಶಕರು ಅರಿತುಕೊಳ್ಳಬೇಕು. ಅತ್ಯಂತ ಜನಪ್ರಿಯವಾದ ಕನ್ನಡ ಕಾದಂಬರಿಗಳನ್ನು ಓದಿ ಆನಂದಿಸಿ ಆಮೇಲೆ ಈ ಕಾದಂಬರಿಗಳಲ್ಲಿ ಕಲೆ ಎಲ್ಲಿದೆ ಎಂದು ಕೇಳುವದು ಹಾಸ್ಯಾಸ್ಪದ.

ಜೀವನದ ಗತಿಯೇ ಕಾದಂಬರಿಯ ಸ್ಥಿತಿ. ಆದುದರಿಂದ ಕಾದಂಬರಿಕಾರನು ಜೀವ ತಪಸ್ವಿಯಾಗಬೇಕು. ನಿಷ್ಠೆಯನ್ನು ಬಿಟ್ಟು ಈ ತಪಸ್ವಿ ಬದುಕಲಾರ.

ಕಾದಂಬರಿಕಾರನು ಓದುವ ಹೃದಯಗಳಿಗೆ ಸಂಸ್ಕಾರವನ್ನು ಕೊಡುವ ಹಿರಿಯನಾದಂತೆ, ಅವನ ವ್ಯಕ್ತಿವಿಕಾಸಕ್ಕೂ ಆಸ್ಪದವಾಗುತ್ತದೆ. ಕಾದಂಬರಿಕಾರನ ಶೀಲವೇ ಅವನ

ಸಂಪತ್ತು. ಭ್ರಷ್ಟಾಚಾರಿಯಾದ ಲೇಖಕನು ಓದುಗರನ್ನು ಯಾವ ಎತ್ತರಕ್ಕೆ ಏರಿಸ ಬಲ್ಲ ? ಯಾವ ಆದರ್ಶವನ್ನು ಬಿಂಬಿಸಬಲ್ಲ ?

ಒಬ್ಬರ ಸೊತ್ತಾಗಿ ಮೆರೆಯುವದು ಕಾದಂಬರಿಗೆ ಶುಭಲಕ್ಷಣವಲ್ಲ. ಕಾದಂಬರಿ ಎಂದಿಗೂ ಸರಕಾರಿ ಬರಹವಾಗದು. ಲೇಖಕನ ಸ್ವಾತಂತ್ರ್ಯವೇ ಸೃಜನಶೀಲ ಸಾಹಿತ್ಯಕ್ಕೆ ಸಂಜೀವಿನಿ. ಅದರಲ್ಲಿ ಅಡಕವಾದ ಜೀವಸಂಸ್ಕೃತಿಯೇ ಕಾದಬರಿಯ ಮಹತಿ. ಈ ಮಹತಿ ನಿತ್ಯನೂತನವಾಗಿದೆ.

ರಾಜಕೀಯ ಘೋರರವದ ಅಬ್ಬರದ ಕಾಲದಲ್ಲಿಯೂ ಈ ಕರಡಿಮಜಲಿನ ಕಟಕಟಿಯ ನಾದದಲ್ಲಿಯೂ ಕಾದಂಬರಿಯು ಮಧುರವಾಣಿ ಸಂಸ್ಕೃತಿಯ ತಂತುವಾದ್ಯವನ್ನು ಮಿಡಿದು ಜನಸಾಮಾನ್ಯರ ಹೃದಯದಲ್ಲಿ ಯೋಗ್ಯಸಂಸ್ಕಾರವನ್ನು ಉಂಟುಮಾಡುತ್ತದೆ. ಪ್ರಜಾ ಪ್ರಭುತ್ವಪದ್ಧತಿಯ ರಾಜಕೀಯದಲ್ಲಿ ಈ ಸಂಸ್ಕಾರಕ್ಕೆ ಹೆಚ್ಚಿನ ಬೆಲೆ ಇದೆ.

ಜನಸಾಮಾನ್ಯರಲ್ಲಿ ತಿಳುವಳಿಕೆಯನ್ನೂ ಹೊಣೆಯನ್ನೂ ಹೆಚ್ಚಿಸುವ ಮಹಾಕಾರ್ಯ ವನ್ನು ಮಾಡುತ್ತದೆ. ಜನ ಉಳಿದರೆ ಮಾತ್ರ ಸಾಹಿತ್ಯ ಬದುಕುತ್ತದೆ. ಜನರ ಬದು ಕಿನ ಚಿತ್ರವೇ ಕಥೆಯಾಗಬೇಕಾದಾಗ ಆ ಬದುಕು ಘನವಾಗಬೇಡವೆ ? ಘನತೆ ಇಲ್ಲದ ಬದುಕು ಪ್ರಜಾಪ್ರಭುತ್ವಕ್ಕೆ ಶಾಪವೇ ಆದೀತು.

ಕಾದಂಬರಿಕಾರನು ರಾಜಕಾರಣದಲ್ಲಿ ಪ್ರತ್ಯಕ್ಷವಾಗಿ ಭಾಗವಹಿಸದಿದ್ದರೂ ಪರೋಕ್ಷವಾಗಿ ಅವನು ರಾಜಕೀಯವನ್ನು ಬಲ್ಲ ರಾಜಕಾರಣಿಯೇ ಆಗಿದ್ದಾನೆ. ಅವನ ದಾರ್ಶನಿಕ ದೃಷ್ಟಿಯಲ್ಲಿ ಜೀವನದ ತುಷ್ಟಿಪುಷ್ಟಿಗಳ ಸಮಗ್ರ ಚಿಂತನವಿರುತ್ತದೆ.

ಕಾದಂಬರಿಕಾರನು ರಾಜಕಾರಣಿ, ಸಮಾಜಸುಧಾರಕ, ಕಲಾವಿದ ಎಲ್ಲವೂ ಆಗಿದ್ದಾನೆ. ಈ ಮುಪ್ಪುರಿಯ ಶಕ್ತಿ ಕಾದಂಬರಿಗೆ ಜೀವಸಂಸ್ಕೃತಿಯನ್ನು ನೀಡುತ್ತದೆ.



# ಹನ್ನೆರಡನೆಯ ಶತಮಾನ: ಒಂದು ಅನ್ವೇಷಣೆಯ ಯುಗ

ಜಿ. ಎಸ್. ಸಿದ್ಧಲಿಂಗಯ್ಯ

೧

ಬದುಕು ಬೇರು, ಧರ್ಮ ಕಲೆ ಮತ್ತು ಸಂಸ್ಕೃತಿಗಳು ಅದರ ಹೂವು ಹಣ್ಣುಗಳು. ಆದ್ದರಿಂದಲೇ ಧರ್ಮ, ಕಲೆ ಮತ್ತು ಸಂಸ್ಕೃತಿಗಳ ವೈಶಿಷ್ಟ್ಯವನ್ನು ತಿಳಿಯಬೇಕಾದರೆ ಅವುಗಳ ಮೂಲದ್ರವ್ಯವಾದ ಬದುಕಿಗೇ ಹೋಗಬೇಕು. ಒಂದು ಕಾಲದ ಅಥವಾ ದೇಶದ ಜನರ ವೈಶಿಷ್ಟ್ಯ ಅವರು ಬದುಕಿದ ಅಥವಾ ಬದುಕಲು ಬಯಸಿದ ಮೌಲ್ಯಗಳನ್ನು ಅರಿಯಲು ಅಥವಾ ನಿರ್ಮಿಸಲು ಹೊರಟ ರೀತಿ ಅಥವಾ ಅಂಥ ಪ್ರಯತ್ನದಲ್ಲಿ ಪಟ್ಟ ಯಾತನೆ – ಆನಂದಗಳ ಸಂಕೀರ್ಣ ಕ್ರಿಯೆಯಾಗಿರುತ್ತದೆ. ಏಕೆಂದರೆ ಬದುಕು ಮತ್ತು ಧರ್ಮ, ಕಲೆ, ಸಂಸ್ಕೃತಿಗಳ ಸಂಬಂಧ ಸರಳವಾದುದಲ್ಲ; ಅತ್ಯಂತ ಜಟಿಲವಾದುದು.

ಅವನತಿಯ ಕಡೆಗೆ ಧಾವಿಸುತ್ತಿರುವ ಸಮಾಜ ಮಹೋನ್ನತ ಧರ್ಮ, ಕಲೆ, ಸಂಸ್ಕೃತಿಗಳಿಗೆ ಹೇಗೆ ಕಾರಣವಾಗಬಲ್ಲುದೋ ಹಾಗೆಯೇ ಸುಭಿಕ್ಷವಾದ ಹಾಗೂ ಅಭ್ಯುದಯದತ್ತ ಹೆಜ್ಜೆಯಿಡುತ್ತಿರುವ ಸಮಾಜಗಳೂ ಕಾರಣವಾಗಬಲ್ಲುದು. ಒಮ್ಮೊಮ್ಮೆಯಂತೂ ಬದುಕು, ಕಲೆ, ಧರ್ಮ. ಸಂಸ್ಕೃತಿಗಳು ಒಂದರಿಂದ ಮತ್ತೊಂದು ಪುಷ್ಟಿಗೊಳ್ಳುತ್ತ ಸಮೃದ್ಧವಾಗಬಲ್ಲುವು. ಹನ್ನೆರಡನೆಯ ಶತಮಾನ ಈ ದೃಷ್ಟಿಯಿಂದ ಮಹತ್ವದ್ದೂ ಅಭ್ಯಾಸಯೋಗ್ಯವಾದುದೂ ಆಗಿದೆ.

೨

ಹನ್ನೆರಡನೆಯ ಶತಮಾನವನ್ನು ಅನ್ವೇಷಣೆಯ ಯುಗ ಎಂದು ಕರೆಯುವುದು ಇದೇ ಅರ್ಥದಲ್ಲಿಯೇ. ಈ ಕಾಲದ ಅನ್ವೇಷಣೆ ಹಲವು ಮುಖಗಳಿಂದ ಕೂಡಿದುದು.

ಸಂಪ್ರದಾಯ ಜಡವಾಗಿ ಮಲೆತು ನಾರತೊಡಗಿದ್ದ ಜೀವನ ಪ್ರವಾಹವನ್ನು ತಿಳಿಯಾಗಿ, ಶುಭ್ರವಾಗಿ ಹಾಗೂ ಅವಿನಾಶಿಯಾಗಿ ಉಳಿಸಿಕೊಳ್ಳುವ ದೃಷ್ಟಿಯಿಂದ; ಚಂಪೂಶೈಲಿ, ಅಷ್ಟಾದಶವರ್ಣನೆಗಳ ಕಟ್ಟುಪಾಡುಗಳಿಂದ ಹಾಗೂ ಜಡಕಾವ್ಯಸಂಪ್ರದಾಯಗಳಿಂದ, ಕಾವ್ಯವನ್ನು ಮುಕ್ತಗೊಳಿಸುವ ದೃಷ್ಟಿಯಿಂದ, ಗ್ರಾಂಥಿಕತೆ ಹಾಗೂ ಶಿಷ್ಟತೆಗಳ ಗಾಂಭೀರ್ಯದಿಂದ ಬೀಗಿ ನಿಜವಾದ ಬೇರಿನಿಂದ ಕಡಿದುಕೊಂಡು ಬೀಟಿಕೊಳ್ಳುತ್ತಿದ್ದ ಭಾಷೆಯನ್ನು ಜೀವಂತವಾಗಿರಿಸುವ ದೃಷ್ಟಿಯಿಂದ, ಮೌಲ್ಯಗಳ ಅನ್ವೇಷಣೆಯ ದೃಷ್ಟಿಯಿಂದ ಹೀಗೆ ಹಲವಾರು ಕಾರಣಗಳಿಂದ ಈ ಕಾಲ ಅನ್ವೇಷಣೆಯ ಕಾಲವಾಗಿತ್ತು.

ಸಾಹಿತ್ಯದಲ್ಲಿ ಹೇಗೋ ಹಾಗೆಯೇ ಧರ್ಮ ಮತ್ತು ಜೀವನರಂಗದಲ್ಲಿ ಈ ಅನ್ವೇಷಣೆ ಒಂದು ಪ್ರಮುಖ ಕಾರಣವಾಗಿ, ಒಂದು ಜೀವಂತ ಪರಂಪರೆಯನ್ನು ನಿರ್ಮಾಣ ಮಾಡುವ ದೃಷ್ಟಿಯಿಂದ ಇದನ್ನು ಸಮರ್ಥ ಹಾಗೂ ಸಾರ್ಥಕವಾದ ಅನ್ವೇಷಣೆಯ ಯುಗ ಎಂದು ಕರೆಯಬಹುದು. ಈ ಅನ್ವೇಷಣೆ, ಕುರುಡರು ತಡವಿ ತಡವಿ ದಾರಿಯನ್ನು ಕಂಡುಕೊಳ್ಳುವಂಥದಲ್ಲ. ಬದುಕಿಗೊಂದು ದಿಕ್ಕನ್ನು ಕಾಣುವ ಮಹಾಸಂಕಲ್ಪದಿಂದ ಉದ್ಬೋಧವಾದುದು.

ರಾಜದಂಡವನ್ನು ಬಿಸುಟು ಮೋಳಿಗೆಯ ಕಾಯಕ ಹಿಡಿದವರು, ಪ್ರಧಾನಿಪಟ್ಟ ಬಿಟ್ಟು ಜಂಗಮಕ್ಕೆ ಶರಣೆಂದವರು, ಜನರಿಗಾಗಿ ಕಲ್ಲೊಡ್ಡರ ಕಾಯಕ ಹಿಡಿದವರು, ಎಲ್ಲವನ್ನೂ ಚನ್ನಮಲ್ಲಿಕಾರ್ಜುನನಿಗರ್ಪಿಸಿ ಬೆತ್ತಲಾದವರು, ಮೋಹಮಾಯೆಗಳನ್ನು ಗೆದ್ದು ಶೂನ್ಯ ಸಿಂಹಾಸನವೇರಿದವರು– ಇಂಥ ಹಲವಾರು ವ್ಯಕ್ತಿಗಳಿಂದ ಈ ಅನ್ವೇಷಣೆ ನಡೆಯಿತು.

ಸಾಮೂಹಿಕವಾಗಿ ಇವರೆಲ್ಲ ಹುಡುಕಿದುದು ಬದುಕಿನ ಮೂಲ ನೆಲೆಯನ್ನು, ನಿಜವಾದ ಸುಖದ ನೆಲೆಯನ್ನು ಹಾಗೂ ಬದುಕಿನ ಬೆಲೆಯನ್ನು. ಹುಡುಕಿ ಹುಡುಕಿ ಇವರು ದಾರಿ ತಪ್ಪಿದವರೂ ಅಲ್ಲ; ದಾರಿ ತಪ್ಪಿಸಿದವರೂ ಅಲ್ಲ; ದಾರಿ ತೋರಿದವರು. ಇವರು ತೀರ್ಥಂಕರರು.

೩

ಈ ಲೋಕದ ಬದುಕು ಏನೆಂಬುದು ವಚನಕಾರರ ಸೂಕ್ಷ್ಮಸಂವೇದನೆಗೆ ಸಿಕ್ಕಿದೆ. ಹಾಗಾಗಿಯೇ ಅವರ ಸೃಷ್ಟಿಶಕ್ತಿ ವಿಜೃಂಭಿಸಿದೆ. ಬದುಕಿನ ಬೇರನ್ನು ಹಿಡಿದು ಅದರ ನೀತಿ ಬೆಲೆಗಳತ್ತ ಕಣ್ಣಾಡಿಸುವ ಈ ಎರಡು ವಚನಗಳನ್ನು ನೋಡಿ :

ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ
ಹರದ ಕುಳ್ಳಿರ್ದ ನಮ್ಮ ಮಹದೇವಸೆಟ್ಟಿ
ಒಮ್ಮನವಾದರೆ ಒಡನೆ ನುಡಿವನು; ಇಮ್ಮನವಾದರೆ ನುಡಿಯನು
ಕಾಣಿಯ ಸೋಲ ಅರ್ಧಕಾಣಿಯ ಗೆಲ್ಲ !
ಜಾಣ ನೋಡಯ್ಯಾ ನಮ್ಮ ಕೂಡಲಸಂಗಮದೇವ.[೧]

೧ ಪುಟ ೩೦, ವಚನ ೧೧೫ : ಬಸವಣ್ಣನವರ ಷಟ್ಸ್ಥಲ ವಚನಗಳು : ಶಿ. ಶಿ. ಬಸವನಾಳ

ಒಡಲುಗೊಂಡವ ಹಸಿವ. ಒಡಲುಗೊಂಡವ ಹುಸಿವ
ಒಡಲುಗೊಂಡವನೆಂದು ನೀನೆನ್ನ ಜಡಿದೊಮ್ಮೆ ನುಡಿಯದಿರಾ
ನೀನೆನ್ನಂತೆ ಒಮ್ಮೆ ಒಡಲುಗೊಂಡು ನೋಡಾ ರಾಮನಾಥ[೧].

ಮೊದಲ ವಚನ ಬಸವಣ್ಣನವರದು. ಈ ಜಗತ್ತು, ದೇವರು, ಧರ್ಮ ಮತ್ತು ಮಾನವಜೀವನದ ವ್ಯವಹಾರಗಳು, ಇವುಗಳನ್ನು ಕುರಿತ ಭವ್ಯಸಂಕೇತವೊಂದು ಈ ವಚನದಲ್ಲಿದೆ. ಸಾಹಿತ್ಯಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳಂತೆ ಜೀವನವಮೌಲ್ಯವನ್ನು ನಿರಾಕರಿಸದ ನೆಲೆಯಲ್ಲಿರುವುದನ್ನು ಈ ವಚನದಲ್ಲಿ ನೋಡುತ್ತೇವೆ. ಪರಿಭಾವಿಸಿದಷ್ಟೂ ಅರ್ಥ ಬೆಳೆಯುತ್ತಲೇ ಹೋಗುತ್ತದೆ.

ಎರಡನೆಯ ವಚನ ಈ ಜೀವನದ ಅತ್ಯಂತ ಪ್ರಮುಖವಸ್ತುವಾದ ಶರೀರದ ಶಕ್ತಿ ದೌರ್ಬಲ್ಯಗಳ ರಹಸ್ಯಗಳತ್ತ ಕಣ್ಣು ಹೊರಳಿಸುತ್ತದೆ. ಶರೀರಧರ್ಮ ಹೇಗೆ ಜೀವನದ ಆದರ್ಶಗಳನ್ನು ಸಾಧಿಸುವ ಹಂತದಲ್ಲಿ ಅಡ್ಡಿಯಾಗಬಹುದೆಂಬ ಮೂಲಭೂತ ಅಂಶ ಗಂಭೀರವಾದುದು.

ನಾಯಿತನ, ಮರ್ಕಟತನಗಳಿಂದ ಕೂಡಿರುವ ಈ ಅಂಗ-ಲಿಂಗವಾಗಬೇಕಾದ ಧರ್ಮವನ್ನು ಹುಡುಕಹೊರಟ ವಚನಕಾರರು ಅತ್ಯಂತ ಅರ್ಥಪೂರ್ಣವಾಗಿಯೇ ಈ ಲೋಕದ ಬದುಕನ್ನು ಗೌರವದಿಂದ ಕಂಡರು. ಈ ಲೋಕದ ಜೀವನ ಅವರಿಗೆ ನಿರಾಕರಣದ ವಸ್ತುವಾಗಲಿಲ್ಲ. ಉದ್ದೇಶಪೂರ್ವಕವಾದ ಸ್ವೀಕರಣವಾಯಿತು. ಹಾಗಾಗಿಯೇ ವಚನಕಾರರ ದೃಷ್ಟಿ ಈ ಲೋಕದ ಬದುಕನ್ನು ಸತ್ವಶಾಲಿಯಾಗಿ ಕಂಡಿತು. ಸಾಮಾಜಿಕ ಹೊಣೆಗಾರಿಕೆಯಿಂದ ಹಾಗೂ ಪ್ರೀತಿಯಿಂದ ಬದುಕಬೇಕಾದ ಅಗತ್ಯವನ್ನು ಮನಗಾಣಿಸಿತು. ಇದು ಈ ಅನ್ವೇಷಣೆಯ ಮೊದಲ ಛಲ.

ಮರ್ತ್ಯಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ,
ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರಯ್ಯಾ;
ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರಯ್ಯಾ
ಕೂಡಲಸಂಗಮದೇವಾ[೨]

ಈ ಮಾತುಗಳ ಹಿನ್ನೆಲೆಯಲ್ಲಿ ಬದುಕನ್ನು ವಾಸ್ತವವಾದ ಸವಾಲಾಗಿ ಸುಖದುಃಖಾನುಭವಗಳ ಭಂಡಾರವಾಗಿ ಆದರೆ ತರಬೇತಿಯ ರಂಗವಾಗಿ ಗುರುತಿಸಿಕೊಂಡು ಬದುಕಿದರು. ಹೀಗೆ ಈ ಲೋಕದ ಬದುಕು ಅರ್ಥಪೂರ್ಣವಾದುದರಿಂದಲೇ ಇವರು ರೂಪಿಸ

---

೧ ಪುಟ ೭, ವಚನ ೨೬ : ಜೇಡರ ದಾಸಿಮಯ್ಯನ ವಚನಗಳು :
ಎಚ್. ದೇವೀರಪ್ಪ, ಆರ್. ರಾಚಪ್ಪ

೨ ಪುಟ ೪೦. ವಚನ ೧೫೫ : ಬ. ಪ. ವಚನಗಳು : ಬಸವನಾಳ

ಬಯಸಿದ ಸಮಾಜ ಜಾತಿದೂರವಾಗಿ[೪], ವರ್ಗರಹಿತವಾಗಿ, ಕಾಯಕದ[೫] ಆಧಾರದ ಮೇಲೆ ಸುಭದ್ರವಾಗಿ ನೆಲೆಗೊಳ್ಳಬಯಸಿತು. ಸಕಲ ಪ್ರಾಣಿಗಳೆಲ್ಲರಲ್ಲಿ ದಯವೇ ಬೇಕೆನ್ನುವ ದೃಢನಿಲುವಿನಿಂದ ಕೂಡಿದ ದೃಷ್ಟಿಗೆ ಸಹಜವಾಗಿಯೇ, ಗಂಡು ಹೆಣ್ಣುಗಳಿಗೆ ಬದುಕಿನಲ್ಲಿ ಸಮಾನಾವಕಾಶಗಳಿರಬೇಕೆನ್ನಿಸಿತು. ಇನ್ನೂ ಆಶ್ಚರ್ಯದ ಮಾತೆಂದರೆ ಈ ಅನ್ವೇಷಣೆಯಾದ್ಯಂತ ಗುರುತಿಸಿದ ಮೌಲ್ಯಗಳಿವು :

ಆಚಾರವೇ ಸ್ವರ್ಗ ಅನಾಚಾರವೇ ನರಕ.
ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ.
ತನ್ನರಿವೇ ತನಗೆ ಗುರು.
ಮಾತೇ ಜ್ಯೋತಿರ್ಲಿಂಗ.
ಅರಿದರೆ ಶರಣ ಮರೆದರೆ ಮಾನವ.

ಇಂಥ ಮಾತುಗಳನ್ನು ನೋಡುತ್ತ ನೋಡುತ್ತ ಹೋದಂತೆ, ವಚನಕಾರರು ಬದುಕನ್ನು ಅನ್ವೇಷಿಸಿ ರೂಪಿಸಿದ ಮೌಲ್ಯಗಳು ಕಾಣತೊಡಗುತ್ತವೆ.

೪

ಜೀವನಮೌಲ್ಯ ಹಾಗೂ ಸಾಹಿತ್ಯಮೌಲ್ಯಗಳಿಂದ ಕೂಡಿದ ವಚನಕಾರರಿಗೆ ಇಂಥ ಸಿದ್ಧತೆ ಸಂಸ್ಕಾರಗಳು ಅಪರೂಪವಾದುವು. ಹೊಸದೊಂದು ಧರ್ಮಮಾರ್ಗವನ್ನೇ ತೆರೆದ ವಚನಸಾಹಿತ್ಯ, ಧರ್ಮಸಂಸ್ಕೃತಿಗಳ ಭಾಷೆಯಾದ ಸಂಸ್ಕೃತದ ಸಂಸ್ಕಾರವನ್ನು ಪೂರ್ಣವಾಗಿಯೇ ಪಡೆದಿದ್ದಿತು. ವೇದ, ಉಪನಿಷತ್ತು, ಭಗವದ್ಗೀತೆ ಇಂಥವುಗಳಿಂದ ವಚನಸಾಹಿತ್ಯ ಪಡೆದ ಸಂಸ್ಕಾರವನ್ನು ಇನ್ನೂ ಸಂಶೋಧಿಸಿ ವಿಶ್ಲೇಷಿಸಬೇಕಾಗಿದೆ. ಬಸವಣ್ಣ, ಚನ್ನಬಸವಣ್ಣ, ಉರಿಲಿಂಗಪೆದ್ದಿ ಮೊದಲಾದವರ ವಚನಗಳಲ್ಲಿ ಇಡಿಇಡಿಯಾಗಿ ಅಥವಾ ಬಿಡಿಬಿಡಿಯಾಗಿ ಬರುವ ಸಂಸ್ಕೃತ ಸಾಹಿತ್ಯಭಾಗಗಳನ್ನು ನೋಡಿದರೆ ಸಾಹಿತ್ಯದ ನಿಧಿಗೆ ಎಷ್ಟೊಂದು ಮುಕ್ತವಾಗಿ ವಚನಕಾರರು ಕೈಯಿಕ್ಕಿದ್ದಾರೆನ್ನುವುದು

೪ ಸೆಟ್ಟಿಯೆಂಬೆನೆ ಸಿರಿಯಾಳನ ? ಮಡಿವಾಳನೆಂಬೆನೆ ಮಾಚಯ್ಯನ ? ಡೋಹಾರನೆಂಬೆನೆ ಕಕ್ಕಯ್ಯನ ? ಮಾದಾರನೆಂಬೆನೆ ಚನ್ನಯ್ಯನ ? ಆನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯ ! ಪುಟ ೮೬, ವಚನ ೩೪೪, ಬ. ಪ. ವಚನಗಳು.

೫ ಕಾಯಕದಲ್ಲಿ ನಿರತನಾದರೆ ಗುರುದರುಶನವಾದಡೂ ಮರೆಯಬೇಕು; ಲಿಂಗಪೂಜೆಯಾದಡೂ ಮರೆಯಬೇಕು; ಜಂಗಮ ಮುಂದಿದ್ದರೂ ಹಂಗು ಹರಿಯಬೇಕು; ಕಾಯಕವೇ ಕೈಲಾಸವಾದ ಕಾರಣ, ಅಮರೇಶ್ವರ ಲಿಂಗವಾಯಿತ್ತಾದಡೂ ಕಾಯಕದೊಳಗು– ಪು. ೨೪೬, ವ. ೭ : ವಚನ ಸಾಹಿತ್ಯ ಸಂಗ್ರಹ : ಸಂಪಾದಕರು : ಎಸ್. ಎಸ್. ಭೂಸನೂರಮಠ.

೬ ಪುಟ ೩೬, ವ. ೧೫: ಜೇಡರ ದಾಸಿಮಯ್ಯನ ವಚನಗಳು: ಎಚ್. ದೇವೀರಪ್ಪ, ಆರ್. ರಾಚಪ್ಪ
ಮೊಲೆ ಮುಡಿಬಂದರೆ ಹೆಣ್ಣೆಂಬರು. ಗಡ್ಡ ಮೀಸೆ ಬಂದರೆ ಗಂಡೆಂಬರು
ನಡುವೆ ಸುಳಿವಾತ್ಮನು ಗಂಡೂ ಅಲ್ಲ ಹೆಣ್ಣೂ ಅಲ್ಲ ಕಾಣಾ ರಾಮನಾಥ.

ವಿಶದವಾಗುತ್ತದೆ. ವಚನಕಾರರು ಬಳಸಿರುವ ದಾಸೋಹ, ಜಂಗಮ, ಕಾಯಕ, ಸ್ಥಾವರ, ಶರಣ–ಇಂಥ ಪದಗಳು ಅವರ ಸಂಸ್ಕೃತಭಾಷಾಪ್ರಭುತ್ವವನ್ನು ಹಾಗೆಯೇ ಕನ್ನಡಭಾಷೆಗಾಗಿ ಅವನ್ನು ಬಳಸಿಕೊಂಡಿರುವ ವಿಧಾನವನ್ನೂ ನಿರೂಪಿಸುತ್ತವೆ[೭]. ಈ ಎರಡು ವಚನಗಳನ್ನು ನೋಡಿ :

ಶ್ರುತಿತತಿಶಿರದ ಮೇಲೆ ಅತ್ಯತಿಷ್ಠದ್ದಶಾಂಗುಲನ
ನಾನೇನೆಂಬೆನಯ್ಯ
ಘನಕ್ಕೆ ಘನಮಹಿಮನ ಮನಕ್ಕಗೋಚರನ ?
'ಅಣೋರಣೀಯಾನ್ ಮಹತೋ ಮಹೀಯಾನ್'
ಮಹಾದಾನಿ ಕೂಡಲಸಂಗಮದೇವ.[೮]

ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ
ಪಾತಾಳದಿಂದತ್ತತ್ತ ನಿಮ್ಮ ಶ್ರೀಚರಣ
ಬ್ರಹ್ಮಾಂಡದಿಂದತ್ತತ್ತ ನಿಮ್ಮ ಶ್ರೀಮುಕುಟ !
ಅಗಮ್ಯಗೋಚರ ಅಪ್ರತಿಮಲಿಂಗವೇ
ಕೂಡಲಸಂಗಮದೇವಯ್ಯ
ಎನ್ನ ಕರಸ್ಥಳಕ್ಕೆ ಬಂದು ಚುಳುಕಾದಿರಯ್ಯಾ ![೯]

ಮೊದಲವಚನ ಪುರುಷಸೂಕ್ತದ ಕೊನೆಯ ಪಾಠವನ್ನು ಅದರ ಪೂರ್ಣಸಾರದೊಂದಿಗೆ ಬಳಸಿಕೊಳ್ಳುತ್ತದೆ, ತನ್ನ ಇಷ್ಟದೈವದ ಹಿರಿಮೆಯೊಂದಿಗೆ. ಘನಕ್ಕೆ ಘನವೂ ಮನಕ್ಕೆ ಅಗೋಚರವೂ ಆದ ಈ ಸತ್ವವನ್ನು ಶ್ರುತಿತತಿ ಶಿರದ ಮೇಲೆ ನಿಂತಿರುವುದಾಗಿ ಕಲ್ಪಿಸಿರುವುದು ರಚನಕಾರರ ಧಾರ್ಮಿಕದೃಷ್ಟಿ. ಆದರೂ ಆ ಸತ್ಯವನ್ನು ಅನುಭವಕ್ಕೆ ತಂದುಕೊಳ್ಳುವಲ್ಲಿ ಬಳಸಿಕೊಂಡ 'ಅಣೋರಣೀಯಾನ್ ಮಹತೋ ಮಹೀಯಾನ್' ಈ ಪದಪುಂಜಗಳು ಸಂಸ್ಕೃತಭಾಷೆಯ ಮೇಲಿರುವ ಇವರ ಪ್ರಭುತ್ವವನ್ನು ಹಾಗೆಯೇ ತಮ್ಮ ವಿವಕ್ಷೆಗೆ ತಕ್ಕಂತೆ ಸಂಸ್ಕೃತೋಕ್ತಿಗಳನ್ನು ಬಳಸಿಕೊಳ್ಳಬಲ್ಲ ಔಚಿತ್ಯಶಕ್ತಿಯನ್ನು ಧ್ವನಿಸುತ್ತವೆ. ಶಕ್ತನಾದವನಲ್ಲಿ ಕಬ್ಬಿಣವೂ ರಕ್ತಗತವಾಗುವಂತೆ ಸಂಸ್ಕೃತ ವಚನಕಾರರಿಗೆ ನಮ್ಯವಾಗಿರುವುದನ್ನೂ ಸಂಸ್ಕೃತಭಾಷೆಯ ಸೂಕ್ತಗಳನ್ನು[೧೦], ಸೂಕ್ತಿಖಂಡಗಳನ್ನು ಅರ್ಥವತ್ತಾಗಿ ಬಳಸಿಕೊಳ್ಳುವ ರೀತಿ ಒಂದಾದರೆ ಅಲ್ಲಿಯ ಅನುಭವಗಳನ್ನು ತಮ್ಮದಾಗಿಸಿಕೊಂಡು ಅಭಿವ್ಯಕ್ತಗೊಳಿಸುವ ಕಾರ್ಯವನ್ನೂ ವಚನಕಾರರು ಮುಕ್ತವಾಗಿ ನಡೆಸಿದ್ದಾರೆ. ಎರಡನೆಯ ವಚನ ಇಂಥ ಒಂದು ಸಾಧನೆಯನ್ನು ಸೂಚಿಸುತ್ತದೆ.

೭ ಪುಟ ೩೦೩ : ವಚನಸಾಹಿತ್ಯದ ಮೇಲೆ ಸಂಸ್ಕೃತದ ಪ್ರಭಾವ : ಎಂ. ಜಿ. ನಂಜುಂಡಾರಾಧ್ಯ.

೮ ಪುಟ ೧೩೫. ವಚನ ೫೩೦ : ಬಸವಣ್ಣನವರ ಷಟ್ಸ್ಥಲದ ವಚನಗಳು : ಶಿ. ಶಿ. ಬಸವನಾಳ.

೯ ಪುಟ ೧೯೪. ವಚನ ೭೪೩ : ಅದೇ.

೧೦ ಕೆಲವೊಮ್ಮೆ ಸಂಸ್ಕೃತದ ಶ್ಲೋಕ ಅಥವಾ ಅದೇ ಸೂಕ್ತಿಗಳು ವಚನಕಾರರ ಅನುಭವ ಅಭಿಪ್ರಾಯಗಳಿಗೆ ಅಧಿಕೃತತೆಯನ್ನು ಒದಗಿಸಲು ಬಳಕೆಯಾಗಿರುವುದೂ ಉಂಟು.

ವಿರಚನೆಯ ವಚನದಲ್ಲಿ ಈ ಎರಡು ವಿರೋಧಗುಣಗಳನ್ನು ಒಂದೆಡೆ ಹಿಡಿದಿಟ್ಟಿರುವ ಅರ್ಥಪವಾಡವಿದೆ. ಒಂದನೆಯ ಸಾಲು ಭಗವಂತ ವ್ಯಾಪಿಸಿರುವುದೆಲ್ಲಿ ಎನ್ನುವ ಅನುಭವದ ನಾಟಕೀಯ ಅಭಿವ್ಯಕ್ತಿಯಾಗಿದೆ. ದೇವರು ಜಗದಗಲವೇ ? ಎಂಬ ಈ ಪ್ರಶ್ನೆಗೆ ಉತ್ತರ ಮುಗಿಲಗಲ ಎಂದು. ನೋಡುವ ಕಣ್ಣು ಭೂಮಿಯನ್ನೆಲ್ಲ ಅಳೆದು, ದೇವರು ಇದನ್ನು ಮೀರಿದವನು ಎಂದು ಮೇಲೆ ಕಣ್ಣಾಡಿಸುತ್ತದೆ. ಅಲ್ಲೇನು ? ಬರೀ ಅನಂತ ಆಕಾಶ. ಆತ ಆಕಾಶದಗಲವೂ ಆಗಿ ಇನ್ನೂ ವ್ಯಾಪಿಸುತ್ತಾನೆ. ಆಗ ಹೊರಡುತ್ತದೆ ಮಿಗೆಯಗಲ, ನಿಮ್ಮಗಲ ಎಂಬ ವಿನಯದ ಉದ್ಗಾರ! ಭೂಮಿ ಆಕಾಶಗಳನ್ನು ವ್ಯಾಪಿಸಿದ ಈ ಶಕ್ತಿ ಇಷ್ಟಕ್ಕೆ ಸೀಮಿತವಾದುದಲ್ಲ. ಆದರ ಪಾದ ಪಾತಾಳದಿಂದ ಅತ್ತತ್ತ ಹೋದ ಹಾಗೆಲ್ಲ ಎಲ್ಲೋ ದೂರದ ಮಿನುಗುವ ನಕ್ಷತ್ರದಂತೆ ತನ್ನಿರವಿನ ಸೂಚನೆ ನೀಡುತ್ತದೆ. ಹಾಗೆಯೇ ಈತನ ತಲೆ ಎಲ್ಲಿರಬಹುದು ಎನ್ನಿಸಿದರೆ ಬ್ರಹ್ಮಾಂಡಗಳ ಆಚೆ— ಕಿರೀಟದ ಮಿಂಚಿನ ಹೊಳಪಿನಿಂದ ಇನ್ನೆಲ್ಲೋ ಆತನ ಶಿರಸ್ಸು ಇರಬೇಕು ಎನ್ನುವ ಅನುಮಾನಕ್ಕೆ ಅವಕಾಶ ಮಾಡಿಕೊಡುತ್ತದೆ. ಹೀಗೆ ಭಗವಂತನ 'ಅತ್ಯತಿಷ್ಠದ್ದಶಾಂಗುಲತ್ವ'ವನ್ನು ಅತ್ಯಂತ ಕಾವ್ಯಮಯವಾಗಿ ಕಾಣಿಸುವ ವಚನದ ಕೊನೆಯ ಸಾಲು ವಚನಕಾರರ ಅಭಿವ್ಯಕ್ತಿಶಕ್ತಿಯ ಸತ್ವಕ್ಕೆ ಉದಾಹರಣೆ. ಅಂಥ ಅಗಮ್ಯ, ಅಗೋಚರ ಅಪ್ರತಿಮಲಿಂಗ ಭಕ್ತಿಗೆ ಸೋತು ಅಂಗೈಯಲ್ಲಿ ಚುಳುಕವಾಗಿ ಮಿರುಗವ ಪವಾಡ ವಚನಸಾಹಿತ್ಯದ ಅರ್ಥಶ್ರೀಮಂತಿಕೆಯ ದ್ಯೋತಕ. ಇಂಥ ಸಾಧನೆಗಳನ್ನು ಕಂಡೇ 'ವಚನಗಳು ಕನ್ನಡದ ಉಪನಿಷತ್ತುಗಳು'[೧೧] ಎಂದು ಉದ್ಗರಿಸಿರುವುದು. ಅರ್ಥಸತ್ವ ಮುದ್ದುಮಗನ ತುಟಿಗಿಳಿಯುವ ತಾಯ ಮೊಲೆಹಾಲಿನಂತೆ, ಸಂಸ್ಕೃತಭಾಷೆಯ ಸತ್ವ ವಚನಕಾರರ ತುಟಿಗಿಳಿದಿರುವುದು ಕನ್ನಡಿಗರ ಅದೃಷ್ಟವೇ ಸರಿ.

ವಚನಕಾರರಿಗಿದ್ದ ಕನ್ನಡ ಭಾಷೆ, ಸಾಹಿತ್ಯಗಳ ಸಂಸ್ಕಾರ ಕೂಡ ಅಸಾಮಾನ್ಯವಾದುದು. ಹಿರಿಯ ವಚನಕಾರ ಜೇಡರ ದಾಸಿಮಯ್ಯನ ವಚನಗಳಲ್ಲಿ ನಿಚ್ಚಳವಾಗಿ ಗೋಚರವಾಗುವ ತ್ರಿಪದಿಯ ಲಯ ಆ ಕಾಲದಲ್ಲಿದ್ದಿರಬಹುದಾದ ಕನ್ನಡಸಾಹಿತ್ಯ ಪರಂಪರೆಯ ಅರಿವು ವಚನಕಾರರಿಗಿದ್ದುದರ ಸೂಚನೆ ನೀಡುತ್ತದೆಯಾದರೂ ಸ್ಪಷ್ಟವಾಗಿ ಇಂತಿಂಥ ರೀತಿಯ ಕನ್ನಡಸಾಹಿತ್ಯದ ಸಂಸ್ಕಾರ ಇವರಿಗಿತ್ತು ಎಂದು ಹೇಳುವುದಕ್ಕೆ ಸಾಧ್ಯವಾಗುತ್ತಿಲ್ಲ.[೧೨] ಆದರೆ ಒಂದು ಮಾತಂತೂ ನಿಜ. ವಚನಕಾರರು ಬರೆದ ಭಾಷೆ ಅಂದಿನ

---

೧೧ ಪುಟ ೨೩೨. ವಚನಧರ್ಮಸಾರ : ಎಂ. ಆರ್. ಶ್ರೀ.

೧೨ ವಚನಸಾಹಿತ್ಯದ ಪ್ರಭಾವವನ್ನು ಹರಿಹರ-ರಾಘವಾಂಕ ಚಾಮರಸಾದಿಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾಗಿರುವಂತೆ, ವಚನಕಾರರ ಮೇಲಾಗಿರುವ ಕನ್ನಡಸಾಹಿತ್ಯದ ಪ್ರಭಾವವನ್ನಾಗಲಿ ಅದಕ್ಕೆ ಹಿನ್ನೆಲೆ ಅಥವಾ ಸಂಸ್ಕಾರರೂಪವಾಗಿರುವ ಕನ್ನಡ ಕಾವ್ಯರೀತಿಗಳನ್ನಾಗಲಿ ಕುರಿತು ಹೇಳುವುದು ಸಾಧ್ಯವಾಗಿಲ್ಲ. —ಲೇಖಕ.

ಜನಜೀವನದಲ್ಲಿ ಜೀವಂತವಾಗಿ ಮಿಡಿಯುತ್ತಿದ್ದ ಕನ್ನಡ. ಆದರ ಬೀಸು, ಒರಟುತನ, ನಯನಾಜೂಕುಗಳೆಲ್ಲದರೊಡನೆ ವಚನಕಾರರು ಆ ಭಾಷೆಯನ್ನು ಸ್ವೀಕರಿಸಿದ್ದಾರೆ. ಹಾಗಾಗಿಯೇ ಈ ಇಪ್ಪತ್ತನೆಯ ಶತಮಾನದ ಕನ್ನಡ ಆಡುಭಾಷೆಯ ದಾಖಲೆಯನ್ನು ಬಿಟ್ಟರೆ ಅದಕ್ಕೆ ಹಿಂದೆ ದೊರೆಯಬಲ್ಲ ಆಡುಮಾತಿನ ತೀರ ಹತ್ತಿರದ ದಾಖಲೆಯೆಂದರೆ ವಚನಕಾರರ ಭಾಷೆಯದೇ ಆಗಿದೆ. ಜನಸಾಮಾನ್ಯರಿಗೆ ರಾಜಶಾಸನಗಳನ್ನು ತಿಳಿಸಹೊರಟ ಶಾಸನಗಳಲ್ಲಿ ಕೂಡ ಆಡುಮಾತಿಗೆ ಹತ್ತಿರದ ಭಾಷೆಯಿಲ್ಲದಿರುವುದನ್ನು, ಅದು ವಚನಕಾರರಲ್ಲಿ ವೆಗ್ಗಳವಾಗಿರುವುದನ್ನೂ ನೋಡಿದರೆ, ವಚನಕಾರರಿಗಿದ್ದ ಭಾಷೆಯ ಸಿದ್ಧತೆ, ಸಾಧ್ಯತೆ ನಮ್ಮನ್ನು ಬೆರಗುಗೊಳಿಸುತ್ತವೆ.[೧೩]

ಕನ್ನಡಭಾಷೆಯ ಅನೇಕಾನೇಕ ಅಭಿವ್ಯಕ್ತಿಶಕ್ತಿರಹಸ್ಯಗಳು ವಚನಕಾರರಿಗೆ ಕರಗತವಾಗಿ ಹೋಗಿವೆ.

೫

ವಚನಕಾರರಿಗಿದ್ದ ಸಿದ್ಧತೆಗಳನ್ನು ಗಮನಿಸಿದ ಮೇಲೆ ವಚನಕಾರರ ಮುಖ್ಯವಾದ ಸಾಹಿತ್ಯಿಕ ಸಿದ್ಧಿಗಳನ್ನು ನೋಡಬಹುದು. ಸಾಹಿತ್ಯೇತರ ಸಂಕಲ್ಪವಿದ್ದಂತೆ ತೋರಿದರೂ ಜೀವನವನ್ನು ಕುರಿತ ಶ್ರದ್ಧೆ ಮತ್ತು ಪ್ರೀತಿಗಳು, ಜನತೆಯನ್ನು ಕುರಿತ ಆತ್ಮೀಯತೆ, ಸೂಕ್ಷ್ಮವಾದ ಸಂವೇದನಶಕ್ತಿಯಿಂದ ಉದ್ಬೋಧವಾದ ಅಂತಃಕರಣ, ಕನ್ನಡ ಸಂಸ್ಕೃತ ಭಾಷೆ ಹಾಗೂ ಸಾಹಿತ್ಯಗಳ ಸಂಸ್ಕಾರ ಇವುಗಳು ವಿಪುಲವಾಗಿದ್ದ ವಚನಕಾರರ ಸೃಷ್ಟಿಶಕ್ತಿ ಕನ್ನಡಸಾಹಿತ್ಯದಲ್ಲಿ ಅನೇಕ ಸಿದ್ಧಿಗಳನ್ನು ಪಡೆಯಿತು.[೧೩]

ಗದ್ಯದ ಬೆಳವಣಿಗೆ, ಗದ್ಯಪದ್ಯಗಳ ವಿಂಗಡಣಾಕ್ರಮದ ಕೃತಕತೆ ಸಂಕೋಲೆಗಳಿಲ್ಲದ ಮುಕ್ತ ಅಭಿವ್ಯಕ್ತಿ, ಲಯದಲ್ಲಿ ತೋರುವ ಸ್ವಾತಂತ್ರ್ಯ, ಅಂತರಂಗ ನಿರೀಕ್ಷಣಾವಿಧಾನ —ಹೀಗೆ ಒಂದೊಂದು ಅಂಶವನ್ನೂ ಇನ್ನೂ ವಿಶ್ಲೇಷಿಸಿ ನೋಡಿ ನಾಡು ಕಲಿಯಬೇಕಾದುದು ಬಹಳವಿದೆ.[೧೩]

೬

ವಚನಕಾರರದು ಪ್ರಧಾನತಃ ಸಾಮಾಜಿಕ ಧಾರ್ಮಿಕದೃಷ್ಟಿ. ಅವರು ನಿರೂಪಿಸಿದ ಸಾಮಾಜಿಕ ಧಾರ್ಮಿಕದೃಷ್ಟಿ ಸಾಮಾಜಿಕ ಮೌಲ್ಯಗಳಿಂದ ಘಮಘಮಿಸುತ್ತಿದ್ದಂತೆಯೇ ಹೊಸಧರ್ಮವೊಂದರ ಬೆಳಕು ಚೆಲ್ಲಿ ಹರಳುಗಟ್ಟಿಸಿರುವುದನ್ನು ನೋಡಬಹುದಾಗಿದೆ. ಅಷ್ಟಾವರಣ, ಷಟ್‌ಸ್ಥಲ ವರ್ಣನೆಗಳು ಗುರು, ಲಿಂಗ, ಜಂಗಮಗಳ ಮಹತ್ವ ಈ ಅಂಶಗಳಲ್ಲಿ ಎಲ್ಲರಿಗೂ ಸಮಾನವಾದ ಸಮಾಜದ ಸೃಷ್ಟಿಯಾಯಿತು ಹಾಗಾದುದರ ಗುರುತಾಗಿಯೇ ಅಸ್ಪೃಶ್ಯತೆಯನ್ನೂ ನಿವಾರಿಸಲು ಯತ್ನಿಸಿದ ಕ್ರಾಂತಿಕಾರಕದೃಷ್ಟಿ, ಜಾತಿಸಂಕರ ಉಂಟುಮಾಡುವ ಕೃತಕಭೀತಿಗೆ ಕಾರಣವಾಗಿ ಬಸವಣ್ಣನಂಥವರನ್ನೂ

೧೩. ಹೆಚ್ಚಿನ ವಿವರಗಳಿಗೆ ಇದೇ ಲೇಖಕರು ಬರೆದ ಲೇಖನ 'ವಚನಕಾರರ ಭಾಷಾಸಿದ್ಧಿ'— 'ಬಸವ ಪರುಷ' ಕೃತಿಯಲ್ಲಿ ನೋಡಿ.

ಅಪೋಷಣೆ ತೆಗೆದುಕೊಂಡಿತು. ಎಲ್ಲರಿಗೂ ಮೀಸಲಾದ ಈ ಧರ್ಮ ಮುಂದೆ ಜಾತಿಯಾದುದು ಮಾತ್ರ ಕರ್ಣಾಟಕದ ದುರ್ದೈವ[೧೪].

೭

ಹನ್ನೆರಡನೆಯ ಶತಮಾನ ಇಂದಿಗೂ ಮಹಾ ಅನ್ವೇಷಣೆಯ ಶತಮಾನವಾಗಿದೆ. ಕನ್ನಡಿಗರ ಜೀವನ, ಸಂಸ್ಕೃತಿ, ಧರ್ಮ, ಸಾಹಿತ್ಯ ಹಾಗೂ ಭಾಷೆಗಳ ಸತ್ವವಿಕಾಸದ ದೃಷ್ಟಿಯಿಂದ ಆ ಕಾಲದಲ್ಲಾದ ಸಾಧನೆಗಳು ಅಭ್ಯಾಸಯೋಗ್ಯವಾಗಿವೆ. ಈ ಬಗೆಗೆ ಇನ್ನೂ ನಡೆಯಬೇಕಾದ ಕಾರ್ಯ ಬೇಕಾದಷ್ಟಿದೆ ಎಂದು ಸೂಚಿಸುತ್ತ ಜೀವನದಿಂದ ಸಾಹಿತ್ಯ, ಸಾಹಿತ್ಯದಿಂದ ಜೀವನ ಹಾಗೂ ಧರ್ಮ ಸಂಸ್ಕೃತಿಗಳು ಹೀಗೆ ಪರಸ್ಪರ ಪೂರಕವಾಗಿ ಬೆಳೆದುಬಂದ ಸಂದರ್ಭಗಳು ಇತಿಹಾಸದಲ್ಲಿ ಅಪರೂಪವೆನ್ನಬೇಕು. ಅಂಥ ಅಪರೂಪ ಸಿದ್ಧಿಗಳಲ್ಲಿ ಹನ್ನೆರಡನೆಯ ಶತಮಾನದ ಸಿದ್ಧಿಗಳು ಮಾತ್ರ ಅಪೂರ್ವವಾಗಿವೆ[೧೫].

■ ■

---

೧೪ ಎಲ್ಲ ಧರ್ಮಗಳ ಪಾಡು ಹೀಗೆಯೇ. ಬುದ್ಧ ಕ್ರಿಸ್ತರು ತೆರೆದ ಬೆಳಕಿನ ದಾರಿಗಳು ಮುಂದೆ ಬೌದ್ಧಮತ ಕ್ರೈಸ್ತಮತಗಳಾಗಿ ಪರಿಮಿತಗೊಂಡವು! —ಲೇಖಕ.

೧೫ ಅಕ್ಕಮಹಾದೇವಿ ಮತ್ತು ಬಸವಣ್ಣನವರಂಥ, ಅದರಲ್ಲೂ ಅಕ್ಕನಂಥ ವಚನಕಾರರ ವಚನಗಳು ಅವರ ಜೀವನದಿಂದ ಅವಿಭಾಜ್ಯವೆಂಬಂತೆ ತೋರುವುದಿಲ್ಲ. ವಚನವಾಗುತ್ತ ಆಗುತ್ತ ಅವರು ಬೆಳೆದರು; ವಚನಗಳೂ ರಚಿತವಾದವು. ಭಾಷೆ, ಸಾಹಿತ್ಯಗಳು ಸಮೃದ್ಧವಾದವು.

# ವಚನಗಳಲ್ಲಿ ಶಿವಯೋಗ

ಎಸ್. ವಿದ್ಯಾಶಂಕರ

‘ಯೋಗ’ ಪದ ಸಂಸ್ಕೃತದ ‘ಯುಜ್’ ಮೂಲಧಾತುವಿನಿಂದ ಬಂದಿದೆ. ಈ ಪದಕ್ಕೆ ಕೂಡಿಸು, ಸೇರಿಸು, ಸಂಬಂಧಿಸು, ಐಕ್ಯಗೊಳಿಸು ಎಂಬ ನಾನಾ ಅರ್ಥಗಳಿವೆ. ಪ್ರಾಪಂಚಿಕವಾದ ಸುಖಗಳಲ್ಲಿ ರುಚಿ ಕಂಡು ಅವಿದ್ಯೆ, ಅಜ್ಞಾನಗಳಿಂದ ಮೋಹ ವಶನಾಗಿ ಜೀವನು ಅವುಗಳ ಅನುಭೋಗಕ್ಕಾಗಿ ಚಂಚಲಿತಚಿತ್ತನಾಗಿ ಸಂಸಾರದಲ್ಲಿ ಚಕ್ರಭ್ರಮಣ ಮಾಡುವನು. ಅವನನ್ನು ಅವನ ಅರಿವುಗೆಟ್ಟ ಸ್ಥಿತಿಯಿಂದ ಮೇಲೆತ್ತಿ ಸುಜ್ಞಾನಪಥದಲ್ಲಿ ಮುನ್ನಡೆಸಲು ಸಾಧನವಾಗಿದೆ, ಯೋಗ. ‘ಯೋಗಶ್ಚಿತ್ತವೃತ್ತಿ ನಿರೋಧಃ’ ಎಂದು ಪತಂಜಲಿ ಮಹರ್ಷಿ ಹೇಳಿರುವನು. “ಚಿತ್ತವೆಂದರೆ ಅಂತಃಕರಣ: ಇದಕ್ಕೆ ಮಹತ್, ಅಹಂಕಾರ, ಮನಸ್ಸು ಈ ಮೂರರ ವೃತ್ತಿಗಳಿರುವವು. ಇವುಗಳನ್ನು ನಿರೋಧಿಸುವುದೆಂದರೆ ಇವುಗಳಿಗೆ ವಿಶ್ರಾಂತಿಯನ್ನುಂಟುಮಾಡುವುದು. ಇವುಗಳನ್ನು ಇವುಗಳ ಕಾರಣದಲ್ಲಿ ಲಯಗೊಳಿಸುವುದಕ್ಕೆ ವಿಶ್ರಾಂತಿಯೆನ್ನುವರು. ಚಿತ್ತವೃತ್ತಿಗಳನ್ನು ನಿರೋಧಿಸಿದ ಕಾಲದಲ್ಲಿ ಆತ್ಮನು ತನ್ನ ಸ್ವರೂಪಮಾತ್ರದಿಂದಿರುವನು. ಎಂದರೆ, ಆತ್ಮನು ಯೋಗದಲ್ಲಿರುವ ಕಾಲದಲ್ಲಿ ತನ್ನ ಸ್ವರೂಪವನ್ನಲ್ಲದೆ ತನ್ನಿಂದ ಅತಿರಿಕ್ತವಾದ ಪದಾರ್ಥಗಳನ್ನು ತಿಳಿಯುವುದಿಲ್ಲ. ಹೀಗೆ ಮತ್ತೊಂದು ಪದಾರ್ಥದ ಸಂಬಂಧವಿಲ್ಲದೆ ಸ್ವಸ್ವರೂಪದಲ್ಲಿರುವ ಸ್ಥಿತಿಯನ್ನು ಪಡೆಯುವುದೇ ಯೋಗದ ಪ್ರಯೋಜನ.”[೧] ಯೋಗಗಳಲ್ಲಿ ಬಳಕೆಯಲ್ಲಿರುವವು ನಾಲ್ಕು : ಮಂತ್ರಯೋಗ, ಲಯಯೋಗ, ಹಠಯೋಗ, ರಾಜಯೋಗ ಇವುಗಳಲ್ಲದೆ ಅಷ್ಟಾಂಗಯೋಗ (ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿ), ಪಂಚಯೋಗ (ಮಂತ್ರ, ಹಠ, ಲಯ, ರಾಜ, ಶಿವ ಯೋಗಗಳು), ಏಕಮುದ್ರೆ,

---

೧ ಪಂಡಿತರತ್ನ ವೈ. ನಾಗೇಶಶಾಸ್ತ್ರಿಗಳು : ಶಿವಯೋಗ (೧೯೭೧) ಪು. ೪೯.

(ಶಾಂಭವೀಯೋಗ[೨]), ತ್ರಿಮುದ್ರೆ (ಖೇಚರೀ, ಶಾಂಭವೀ, ಷಣ್ಮುಖೀ ಮುದ್ರೆಗಳು), ಬಹುಮುದ್ರೆ (ಮಹಾಮುದ್ರೆ, ನಭೋಮುದ್ರೆ, ಖೇಚರೀಮುದ್ರೆ, ವಿಪರೀತಕರೀ ಮುದ್ರೆ, ಯೋನಿಮುದ್ರೆ, ವಜ್ರೋಳಿಮುದ್ರೆ, ಶಕ್ತಿಚಾಲನೀಮುದ್ರೆ, ಮಾಂಡೂಕೀ ಮುದ್ರೆ, ಶಾಂಭವೀಮುದ್ರೆ, ಪಂಚಧಾರಣಮುದ್ರೆ, ಪಾರ್ಥಿವೀಧಾರಣಮುದ್ರೆ, ಆಂಭಸೀಧಾರಣಮುದ್ರೆ, ಆಗ್ನೇಯಮುದ್ರೆ, ವಾಯುವೀಧಾರಣಮುದ್ರೆ, ಆಕಾಶ ಧಾರಣಮುದ್ರೆ, ಅಶ್ವಿನೀಮುದ್ರೆ, ಪಾಶಿನೀಮುದ್ರೆ, ಕಾಕೀಮುದ್ರೆ, ಮಾತಂಗಿನೀ ಮುದ್ರೆ ಭುಜಂಗಿನೀ ಮುದ್ರೆ) — ಹೀಗೆ ಹಲವು ಯೋಗಗಳು ಪ್ರಚಲಿತವಿದ್ದುದನ್ನು ಸಿದ್ಧರಾಮನು ತನ್ನ ವಚನವೊಂದರಲ್ಲಿ ಪ್ರಸ್ತಾಪಿಸಿರುವನು (ವ. ೧೦೪೩).

**ಮಂತ್ರಯೋಗ :** ನಮ್ಮ ಉಚ್ಛ್ವಾಸ ನಿಶ್ವಾಸಗಳಲ್ಲಿ 'ಅಜಪಾಜಪ'ವನ್ನು ಅಂದರೆ 'ಸೋಽಹಂ' ಭಾವವನ್ನು ಸಹಜವಾಗಿ ಅಳವಡಿಸಬೇಕು. ಉಚ್ಛ್ವಾಸದಲ್ಲಿ 'ಸೋ' ಎಂಬ ಶಬ್ದವೂ ನಿಶ್ವಾಸದಲ್ಲಿ 'ಅಹಂ' ಎಂಬ ಶಬ್ದವೂ ಉಚ್ಚಾರಗೊಳ್ಳುತ್ತದೆ. 'ಸೋ' ಲಿಂಗವಾಚಕವಾಗಿಯೂ 'ಅಹಂ' ಅಂಗವಾಚಕವಾಗಿಯೂ ಪರಿಗಣಿತವಾದಾಗ 'ಸೋಽಹಂ'ಭಾವವು– ಆ ಶಿವನೇ ನಾನು– ಸಾಧಕನನ್ನು ಅದ್ವೈತ ನಿಲುವಿಗೆ ಮುಟ್ಟಿ ಸುತ್ತದೆ. ಚೆನ್ನಸದಾಶಿವ ಶಿವಯೋಗಿಯು ತನ್ನ 'ಶಿವಯೋಗಪ್ರದೀಪಿಕೆ' ಯಲ್ಲಿ ಮಂತ್ರಯೋಗದ ಲಕ್ಷಣವನ್ನು ಹೀಗೆ ಹೇಳಿರುವನು :

> ಏಕಾಕ್ಷರಂ ದ್ವ್ಯಕ್ಷರಂ ವಾ ಷಡಕ್ಷರಮಥಾಪಿ ವಾ
> ಅಷ್ಟಾಕ್ಷರಂ ವಾ ಮೋಕ್ಷಾಯ ಮಂತ್ರಯೋಗೀ ಜಪೇತ್ ಸದಾ ॥ (೧.೫)

ಈ ಶ್ಲೋಕದ ಪ್ರಕಾರ ಏಕಾಕ್ಷರಮಂತ್ರವಾದ ಓಂ, ಹ, ಹ್ರೀಂ, ಹಂ, ಹ್ರೌಂ ಎಂಬ ಪಂಚಪ್ರಕಾರವಾದ ಮಂತ್ರವನ್ನೂ ದ್ವ್ಯಕ್ಷರಮಂತ್ರವಾದ ಹಂಸ, ಸೋಽಹಂ ಎಂಬು ದನ್ನೂ ಷಡಕ್ಷರಮಂತ್ರವಾದ ಓಂ ನಮಃಶಿವಾಯ ಎಂಬುದನ್ನೂ ಅಷ್ಟಾಕ್ಷರಮಂತ್ರ ವಾದ ಓಂ ಹ್ರೀಂ ಹ್ರೂಂ ನಮಃಶಿವಾಯ ಎಂಬ ಮಂತ್ರವನ್ನೂ ಸದಾ ಜಪಿಸುತ್ತಿದ್ದರೆ ಮೋಕ್ಷ ಪ್ರಾಪ್ತಿಯಾಗುತ್ತದೆ. ಷಡಕ್ಷರಮಂತ್ರದಲ್ಲಿನ ಅದ್ವೈತದ ನೆಲೆಯನ್ನು ಪ್ರಭು ಹೀಗೆ ಹೇಳುವನು :

> 'ನ' ಎಂಬುದೆ ನಂದಿಯಹಾಗಿ, 'ಮ' ಎಂಬುದೆ ಮಹತ್ತಾಗಿ,
> 'ಶಿ' ಎಂಬುದೆ ರುದ್ರನಾಗಿ, 'ವಾ' ಎಂಬುದೆ ಹಂಸೆಯಾಗಿ,
> 'ಯ' ಎಂಬುದೆ ಅಜೀವಾಗಿ, 'ಓಂ'ಕಾರವೆ ಗುರುವಾಗಿ,
> ಸಂಬಂಧವೆ ಅಸಂಬಂಧವಾಗಿ, ಅಸಂಬಂಧವೆ ಸಂಬಂಧವಾಗಿ,
> ಎರಡೂ ಒಂದಾಗೆ ಗುಹೇಶ್ವರಲಿಂಗ ಸಂಬಂಧಿ ! (೪೩೩)

---

೨ 'ಚಂಚಲ ಮನದಂಬರಕ್ಕೆ ಕಟಕದ ಗೊಂಚಲಾಯಿತ್ತಲ್ಲಾ ಶಾಂಭವೀಯೋಗ' ಎಂದು ಶಿವ ಯೋಗಿ ಸಿದ್ಧರಾಮ ಹೇಳುವನು (ವ. ೧೦೪೫).

'ಶಿವಮಂತ್ರಕ್ಕೆ ಸರಿ ಬೇಱೆ ಮಂತ್ರವಿಲ್ಲ' ಎಂದು ಹೇಳುವ ಬಸವಣ್ಣ 'ಓಂ ನಮಃ ಶಿವಾಯ' ಎಂಬ ಮಂತ್ರವ ಮೀಱಲಮ್ಮದೆ ನಿಂದವು ವೇದ, 'ಓಂ ನಮಃಶಿವಾಯ' ಎಂಬ ಮಂತ್ರವ ಮೀಱಲಮ್ಮದೆ ನಿಂದವು ಶಾಸ್ತ್ರ. 'ಓಂ ನಮಃಶಿವಾಯ' ಎಂಬ ಮಂತ್ರವ ಮೀಱಲಮ್ಮದೆ ನಿಂದವು ತರ್ಕ — ಭಯಂಕರ ಭ್ರಮೆಗೊಂಡಿತ್ತು ಮಂತ್ರ–ತಂತ್ರ ಎಂದು ಷಡಕ್ಷರಮಂತ್ರಮಹಿಮೆಯನ್ನು ವಿವರಿಸಿರುವನು (ವ. ೮೦, ೮೧). ಮಂತ್ರಯೋಗಿಗೆ 'ಹಂಸ ಹಂಸ' ಎಂಬ ಜಪವೇ ಸಾಕು. ಬೇರೆ ಜಪವೇ ಬೇಕಿಲ್ಲ. ಏಕವಾದ ಮನದಿಂದ ಈ ಮಂತ್ರೋಚ್ಚಾರ ಮಾಡಿದರೆ ಸಿದ್ಧರಾಮ ಹೇಳುವಂತೆ 'ತತ್ವಮಸಿ' ಎಂಬ ಹಡಗಿನಿಂದ ಕಪಿಲಸಿದ್ಧಮಲ್ಲಿಕಾರ್ಜುನನು ಒಯ್ವನು :

ಎಪ್ಪತ್ತೆರಡುಸಾವಿರ ಇಚ್ಛಾನಾಡಿಗಳಲ್ಲಿ ತಪ್ಪದೆ ಚರಿಸುವಾತನ
ಉಪಪ್ರಯೋಗ ಹಂಸನೆಂದೆಂಬೆ. ಆತನ ಪರಿಯಂದಂತಿರಲಿ.
ದ್ವಾರ ಒಂಬತ್ತಱಲ್ಲಿ ನಾಯಕದ್ವಾರವನಱಿಯಬೇಕು ಯೋಗಿಗಳು;
ಬೇಱೆ ಜಪ ನಿಮಗೇಕೆ ಹೇಳಿರೆ.
'ಹಂಸ ಹಂಸ' ಎಂಬ ಜಪ ಸಂಪೂರ್ಣವಾಗಿ
ಅತ್ತಲಿತ್ತಲಿತ್ತೆಱಕ್ಕೆ ಕಂಪಿಸದಿದ್ದಡೆ,
ಕಪಿಲಸಿದ್ಧಮಲ್ಲಿಕಾರ್ಜುನಯ್ಯನು ಕೂರ್ತು
'ತತ್ವಮಸಿ'ಯೆಂಬ ಛತ್ರದಿಂದೊಯ್ವನವ್ವಾ (೧೦೫೨)

ತೋಂಟದ ಸಿದ್ಧಲಿಂಗಯತಿಯು 'ಮಂತ್ರಯೋಗವೆಂಬುದು ಸರ್ವಸಂದೇಹಕ್ಕಿಕ್ಕಿ ಕೊಲುತಿಪ್ಪುದು' ಎಂದು ಹೇಳಿ ಅದಕ್ಕೆ ಕಾರಣ ನೀಡುತ್ತಾ. ಕೆಲವರು ಶೈವರು ಮಂತ್ರವೇ ಲಿಂಗ, ಲಿಂಗವೇ ಮಂತ್ರ ಎಂದು ತಿಳಿದೂ ಲಿಂಗಧ್ಯಾನವನ್ನು ಸಂಬಂಧಿಸಿ ಕೊಳ್ಳಲರಿಯದೆ ಲಿಂಗವ ಬಿಟ್ಟು ಧ್ಯಾನವನ್ನು ಮಾಡುತ್ತಿರುವರು. ಇವರ ಈ ವರ್ತನೆ ಶರಣರು ಮೆಚ್ಚರು ಎಂದಿರುವನು (ವ. ೩೫೮). ಷಣ್ಮುಖಶಿವಯೋಗಿಯು ಮಂತ್ರ ಯೋಗದ ಅನುಷ್ಠಾನವನ್ನು ವಿಸ್ತಾರವಾಗಿ ಹೀಗೆ ನಿರೂಪಿಸುವನು : "...ಆವನಾವ ನೊಬ್ಬ ಯೋಗಸಿದ್ಧಿಯ ಪಡೆದಾತನು ಪಕ್ಷಿಗಳುಲಿಯದ ಮುನ್ನ, ಪಶುಗಳು ಕೂಗದ ಮುನ್ನ, ಪ್ರಕೃತಿ ಆತ್ಮರು ಸುಳಿಯದ ಮುನ್ನ, ಶುಭಮುಹೂರ್ತದಲ್ಲಿ ಶಿವಧ್ಯಾನಮಂ ಮಾಡುತ್ತೆದ್ದು ಶೌಚಾಚಮನದಂತಧಾವನಂಗಳ ಮಾಡಿ ಜಲಸ್ನಾನಂಗೈದು ಏಕಾಂತ ಸ್ಥಳದಲ್ಲಿ ಕಂಬಳಾಸನದಿ ಗದ್ದುಗೆಯಲ್ಲಿ ಪೂರ್ವಮುಖವಾಗಲಿ ಉತ್ತರಮುಖವಾಗಲಿ ತನಗಿಷ್ಟಾಸನದಲ್ಲಿ ಕುಳ್ಳಿರ್ದು, ಭಸ್ಮಸ್ನಾನಂಗಳನಾಚರಿಸಿ ಆಗಮೋಕ್ತದಿಂದೆ ಈಶ್ವರಾರ್ಚನೆಯಂ ಮಾಡಿ ಬಳಿಕ ಅಂತರಾಳಹೃದಯಕಮಲಕರ್ಣಿಕಾಸ್ಥಲದಲ್ಲಿಹ ಹಕಾರವೆಂಬ ಬೀಜಾಕ್ಷರಮಧ್ಯದಲ್ಲಿ... ಸದಾಶಿವಮೂರ್ತಿಯ ಧ್ಯಾನಿಸುತ್ತೆ

ಓಂ ಅಸ್ಯಶ್ರೀಷಡಕ್ಷರಮಂತ್ರಸ್ಯ ವಾಮದೇವ ಋಷಿಃ
ಪಂಕ್ತಿಃ ಛಂದಃ ಶ್ರೀ ಸದಾಶಿವೋ ದೇವತಾ

ಓಂ ಬೀಜಂ ಉಮಾಶಕ್ತಿಃರುದಾತ್ತ ಸ್ವರಃ
ಶ್ವೇತವರ್ಣಃ ಸದಾಶಿವಪ್ರೀತ್ಯರ್ಥೇ ಜಪೇ ವಿನಿಯೋಗ.

ಎಂಬ ಷಡಕ್ಷರಮಂತ್ರಾನುಷ್ಠಾನಾದಿ ಅಖಿಳಮಂತ್ರಂಗಳಿಂದೆ ಕರಶಿರಾದಿ ಷಡಂಗ-ನ್ಯಾಸಂಗಳಂ ಮಾಡಿ, ನಿತ್ಯಜಪಾನುಷ್ಠಾನಮಂ ಮೋಕ್ಷಾರ್ಥಿಯಾದಾತನು, ರುದ್ರಾಕ್ಷಿ ನೂರೆಂಟರಿಂದಾದಡು, ಇಪ್ಪತ್ತೈದರಿಂದಾದಡು ಆಗಮೋಕ್ತಮಾರ್ಗದಿಂದೆ ಜಪ ಮಾಲಿಕೆಯಿಂದೆ ಅಂಗುಷ್ಠಮಧ್ಯಮೆಗಳಿಂದೆ ಉಪಾಂಶುರೂಪದಿಂದೆ ಧ್ಯಾನಪೂರ್ವಕದಿಂ ಜಪಮಂ ಮಾಡುವುದೆ ಮಂತ್ರಯೋಗ...." (ವ. ೪೯೫).

**ಲಯಯೋಗ :** ತೋಂಟದ ಸಿದ್ಧಲಿಂಗ ಶಿವಯೋಗಿಯು ಲಯಯೋಗಿಗಳನ್ನು 'ನಾಯಿಗಿಂದ ಕಡೆ' ಎಂದಿರುವನು. ಅದು ನಾನಾ ದರುಶನಗಳಲ್ಲಿ ವರ್ತಿಸುವದರಿಂದ, ಅಷ್ಟು ಹೀನಾಯವಾಗಿ ಆತ ಅದನ್ನು ಕರೆದಿರುವನು (ವ. ೩೫೮). ಚೆನ್ನಸದಾಶಿವ-ಯೋಗಿಯು ಲಯಯೋಗದ ಲಕ್ಷಣವನ್ನು ಹೀಗೆ ತಿಳಿಸಿರುವನು :

ಯಸ್ಯ ಚಿತ್ತಂ ನಿಜಧ್ಯೇಯೇ ಮನಸಾ ಮರುತಾ ಸಹ
ಲೀನಂ ಭವತಿ ನಾದೇ ವಾ ಲಯಯೋಗೀ ಸ ಏವ ಹಿ ॥ (೧–೬)

ಈ ಶ್ಲೋಕದ ಪ್ರಕಾರ ಯಾವನ ಅಂತಃಕರಣವೃತ್ತಿಯು ತನ್ನ ಧ್ಯಾನಮೂರ್ತಿಯಲ್ಲಿ ಅಥವಾ ವೈಕೃತ ಪ್ರಾಣಾಯಾಮದಿಂದ ಅಭಿವ್ಯಕ್ತವಾದ ನಾದದಲ್ಲಿಯಾದರೂ ಮನೋ ಮಾರುತಂಗಳೊಡನೆ ಕೂಡಿ ಲಯವಾಗುವುದೋ ಆತನೇ ಲಯಯೋಗಿಯೆಂದು ಪ್ರಸಿದ್ಧನಾಗಿರುವನು. ಷಣ್ಮುಖಶಿವಯೋಗಿಯು ಹೇಳುವಂತೆ "ಈಡಾ ಪಿಂಗಳೆ ಯಲ್ಲಿ ತುಂಬಿ ಸೂಸುವ ಹಂಸರೂಪವಾದ ಪ್ರಕೃತಿ ಪ್ರಾಣವಾಯುವನು ಸೋಹಂಭಾವ ದಿಂದೆ ವೈಕೃತ ಪ್ರಾಣನಂ ಮಾಡಿ ಧ್ಯಾನಮೂರ್ತಿಯಲಾದಡು, ಪ್ರಾಣಾತ್ಮಕ ಸುನಾದದ ಲಾದಡು, ಲಕ್ಷ್ಯಂಗಳಲಾದಡು ಮನೋಮಾರುತಂಗಳೊಡಗೂಡಿ ಲಯಿಸುವುದೆ ಲಯಯೋಗ..." (ವ. ೪೮೬).

**ಹಠಯೋಗ :** ತೋಂಟದ ಸಿದ್ಧಲಿಂಗಯತಿಯು ಹಠಯೋಗಿಗಳನ್ನು 'ಅಟಮಟ ಗಾಜಿ' ರೆಂದು ಹೀಯಾಳಿಸಿರುವನು. ಚೆನ್ನಸದಾಶಿವಯೋಗಿಯು ಹಠಯೋಗದ ಲಕ್ಷಣವನ್ನು ಹೀಗೆ ಹೇಳಿರುವನು :

ಭವೇದಷ್ಟಾಂಗಮಾರ್ಗೇಣ ಮುದ್ರಾಕರಣ ಬಂಧನೈಃ
ತಥಾ ಕೇವಲ ಕುಂಭೇ ವಾ ಹಠಯೋಗೀ ವಶಾನಿಲಃ ॥ (೧–೭)

ಈ ಶ್ಲೋಕದ ಪ್ರಕಾರ ಯಮನಿಯಮಾದಿ ಅಷ್ಟಾಂಗಯೋಗಮಾರ್ಗದಿಂದಾದರೂ ಮುದ್ರಾಬಂಧಗಳಿಂದಲಾದರೂ ಧೌತಿ, ವಸ್ತಿ ಇವೇ ಮೊದಲಾದ ಷಟ್ಕರ್ಮಬಂಧನ ಗಳಿಂದಲಾದರೂ ಇಲ್ಲವೇ ರೇಚಕಪೂರಕಗಳಿಲ್ಲದೆ ಕುಂಭಿಸುವ ಕೇವಲಕುಂಭಕದಿಂದ ಲಾದರೂ ಪ್ರಾಣವಾಯುವನ್ನು ವಶಗತಮಾಡುವವನು ಹಠಯೋಗಿಯಾಗುವನು.

ಷಣ್ಮುಖಶಿವಯೋಗಿಯು ನಿರೂಪಿಸುವಂತೆ "...ವಾಮಪಾದದ ಹಿಮ್ಮಡದಿಂ ಯೋನಿ ಸ್ಥಾನಮನೊತ್ತಿ, ಬಲದ ಪಾದಮಂ ನೀಡಿ. ಎರಡು ಹಸ್ತಂಗಳಿಂದೆ ಅಂಗುಷ್ಠಮಂ ಪಿಡಿದು, ಕಂಠಸ್ಥಾನದಲ್ಲಿ ಚುಬುಕಮನಿರಿಸಿ ವಾಯುಧಾರಣಮಂ ಮಾಡುವುದೆ ಜಾಲಂಧರಬಂಧವೆನಿಸುವುದ . ವಾಮಪಾದದ ಹಿಮ್ಮಡದಿಂದಾಧಾರವನೊತ್ತಿ ಎಡದ ತೊಡೆಯ ಮೇಲೆ ಬಲದ ಪಾದವನಿರಿಸಿ ವಾಯುಪೂರಣಮಂ ಮಾಡಿ ಜಾಲಂಧರಮಂ ಬಂಧಿಸುವುದೆ ಮಹಾಬಂಧವೆನಿಸುವುದು. ನಾಭಿಯ ಊರ್ಧ್ವ ಅಧೋಭಾಗಂಗಳನು ಬಲಾತ್ಕಾರದಿಂ ಬಂಧಿಸುವುದೆ ಉಡ್ಯಾಣಬಂಧವೆನಿಸುವುದು. ಈ ಬಂಧತ್ರಯಂಗಳಿಂದೆ ಛೇದನಚಾಲನದೋಹನಾದಿಕ್ರಿಯ್ಯಂಗಳಿಂದೆ ಪೆರ್ಚಿದ ಜಿಹ್ವೆಯನು ಭ್ರೂಮಧ್ಯಸ್ಥಾನಕ್ಕೇರಿಸಿ ಸ್ಥಿರದೃಷ್ಟಿಯಾಗಿಹುದೆ ಹಠಯೋಗ..." (ವ. ೪೮೭).

**ರಾಜಯೋಗ :** ತೋಂಟದ ಸಿದ್ಧಲಿಂಗ ಶಿವಯೋಗಿಯು ರಾಜಯೋಗವನ್ನು 'ಗಾಜುಗೋಜು' ಎಂದು ಕರೆದು, ಅದರ ಬೆಂಬಲಿಗರು ಲಿಂಗವಿರಹಿತರಾಗಿ ಜ್ಞಾತೃ, ಜ್ಞಾನ, ಜ್ಞೇಯ ಒಂದಾದಲ್ಲಿಯೆ ಯೋಗವೆನ್ನುತ್ತಿರುವರು. ಆದಕಾರಣ ಅದೂ ಅನುಸರಣೀಯವಲ್ಲವೆಂದು ನಿರಾಕರಿಸಿರುವನು (ವ. ೩೫೮). ರಾಜಯೋಗವು ಮಂತ್ರ, ಲಯ, ಹಠಯೋಗಗಳಿಗಿಂತ ಉತ್ತಮೋತ್ತಮವೆಂದು ಚೆನ್ನಸದಾಶಿವಯೋಗಿಯು ಹೇಳುವನು (೧.೯). "ಶಬ್ದಾತ್ಮಕವಾದ ಮಂತ್ರಯೋಗದಿಂ ನಿಶ್ಶಬ್ದಾತ್ಮಕವಾಗಿ ಮನೋಲಯವೆನಿಸುವ ಲಯಯೋಗವೇ ವಿಶೇಷವೆನಿಸುವುದು; ಆ ಮನೋಲಯವನೇ ವಾಯುಜಯದಿಂದೆ ಮನಮಂ ಸ್ಥಿರ ಮಾಳ್ಪುದಾಗಿ ಲಯದಿಂ ಹಠಯೋಗ ವಿಶೇಷವೆನಿಸುವುದು. ಆ ಮನೋಮಾರುತಂಗಳನು ಉಪದೇಶಮಾತ್ರದಿಂದ ನಿರಾಯಾಸವಾಗಿ ನಿಲ್ಲಿಸಿ, ನಿಜವಸ್ತು ಸಾಕ್ಷಾತ್ಕಾರಮಂ ಮಾಳ್ಪುದಾಗಿ ರಾಜಯೋಗಂ ಆ ಹಠಯೋಗದಿಂ ವಿಶೇಷಮಪ್ಪುದು..." ಮೇಲಿನ ಶ್ಲೋಕಕ್ಕೆ (೧.೯) ಬಸವಾರಾಧ್ಯನ ಟೀಕೆಯಿದು. ರಾಜಯೋಗವು ಸಾಂಖ್ಯ, ತಾರಕ, ಅಮನಸ್ಕವೆಂದು ಮೂರು ಬಗೆಯಾಗಿರುವುದು. ಚೆನ್ನಸದಾಶಿವಯೋಗಿಯು ಇವುಗಳ ಲಕ್ಷಣವನ್ನು ಹೀಗೆ ನಿರೂಪಿಸಿರುವನು :

ಪಂಚವಿಂಶತಿ ತತ್ತ್ವಾನಾಂ ಜ್ಞಾನಂ ತತ್ಸಾಂಖ್ಯ ಉಚ್ಯತೇ ॥
ಬಹಿರ್ಮುದ್ರಾಪರಿಜ್ಞಾನಾದ್ಯೋಗಸ್ತಾರಕ ಉಚ್ಯತೇ
ಅಂತರ್ಮುದ್ರಾಪರಿಜ್ಞಾನಾದಮನಸ್ಕ ಇತೀರಿತಃ ॥

ಈ ಶ್ಲೋಕಗಳ ಪ್ರಕಾರ ಪೃಥ್ವಿಯೇ ಆದಿಯಾಗಿ ಪ್ರಕೃತಿ ಅಂತ್ಯವಾದ ಇಪ್ಪತ್ತೈದು ತತ್ತ್ವಗಳ ಜ್ಞಾನವು ಸಾಂಖ್ಯಯೋಗವೆನಿಸುವುದು. ಮನೋದೃಷ್ಟಿಮಾರುತಗಳನ್ನು ಬಹಿರ್ಮುಖವಾಗದಂತೆ ಸ್ಥಿರಗೊಳಿಸುವುದೇ ತಾರಕಯೋಗವೆನಿಸುವುದು. ಅಂತರಂಗ ಅನ್ಯವನ್ನು ನೆನೆಯದಂತೆ ಸ್ಥಿರಗೊಳಿಸುವುದೇ ಅಂತರ್ಮುದ್ರೆ. ಈ ಮುದ್ರೆಯಿಂದ ಪರವಸ್ತುವಿನ ಸಾಕ್ಷಾತ್ಕಾರ ಹೊಂದುವುದೇ ಅಮನಸ್ಕಯೋಗವೆನಿಸುವುದು.

ಚೆನ್ನಸದಾಶಿವಯೋಗಿಯ ಪ್ರಕಾರ ತ್ರಿವಿಧ ರಾಜಯೋಗಗಳಲ್ಲಿ ತತ್ತ್ವಜ್ಞಾನರೂಪವಾದ ಸಾಂಖ್ಯಕ್ಕಿಂತಲೂ ಭೇದ-ಜಿಂದು ಸಾಕ್ಷಾತ್ಕಾರರೂಪವಾದ ತಾರಕಯೋಗವು ಶ್ರೇಷ್ಠ ವಾದುದು. ಇದಕ್ಕಿಂತಲೂ ಪರವಸ್ತು ಸಾಕ್ಷಾತ್ಕಾರರೂಪವಾದ ಅಮನಸ್ಕಯೋಗವು ಶ್ರೇಷ್ಠವಾದುದು. ಮಂತ್ರ ಲಯ, ಹಠ ಯೋಗಗಳಿಗಿಂತಲೂ ತ್ರಿವಿಧರೂಪವಾದ ಈ ರಾಜಯೋಗವೇ ಶ್ರೇಷ್ಠವಾದುದು (೧೧೨). ಶಿವಯೋಗಕ್ಕೂ ರಾಜಯೋಗಕ್ಕೂ ಪರಮಾರ್ಥದ ದೃಷ್ಟಿಯಿಂದ ಭೇದವೇ ಇಲ್ಲ. ಆದರೂ ಕೈವಲ್ಯಾಪೇಕ್ಷಿಗಳಿಗೆ ಹಾಗೂ ಅವರ ಜ್ಞಾನವೃದ್ಧಿಗೆ ರಾಜಯೋಗ, ಶಿವಯೋಗಗಳ ಭೇದವನ್ನು ಹೇಳಲಾಗಿದೆ. ಶಿವತತ್ತ್ವಾಭಿವ್ಯಕ್ತಿಯಲ್ಲಿ ಪ್ರೀತರಾದವರಿಗಾಗಿ ಅವೆರಡು ಯೋಗಗಳ ಭೇದವು ಪ್ರತಿ ಪಾದಿತವಾಗಿದೆ. ವಿವೇಕಿಗಳಿಗೆ ಶಿವಾಗಮೋಕ್ತಮಾರ್ಗದಲ್ಲಿ ಪ್ರತಿಪಾದಿತವಾಗಿರುವ ಶಿವಯೋಗವೇ ಸಮರ್ಥ ಯೋಗ್ಯವು (೧೧೪). ಷಣ್ಮುಖಶಿವಯೋಗಿಯು "...ಮಂತ್ರಯೋಗ ಲಯಯೋಗ ಹಠಯೋಗ ಉತ್ತರೋತ್ತರ ವಿಶಿಷ್ಟವಾದ ರಾಜಯೋಗವೇ ಸಾಂಖ್ಯಯೋಗವೆಂದು, ತಾರಕಯೋಗವೆಂದು, ಅಮನಸ್ಕಯೋಗ ವೆಂದು ಮೂರುಪ್ರಕಾರವಾಗಿರ್ಪುದು..." ಎಂದು ಹೇಳಿ, ಅವುಗಳ ಲಕ್ಷಣಗಳನ್ನು ವಿಸ್ತರಿಸಿ ಹೇಳಿರುವನು. ರಾಜಯೋಗದಲ್ಲಿ ನಿಶ್ಚಿಂತನಾದ ಯೋಗೀಶ್ವರನ ಸಹಜ ವರ್ತನ, ಧರ್ಮಗಳನ್ನು ಮುಂದೆ ಪ್ರಸ್ತಾಪಿಸುತ್ತಾ "ಅರ್ಧಾವಲೋಕನವೆನಿಸುವ ಅರೆಮುಗಿದ ನೇತ್ರವುಳ್ಳಾತನಾಗಿ, ಸಕಲ ಸಂಶಯಗಳ ಬಿಟ್ಟ ಮನವುಳ್ಳಾತನಾಗಿ, ಮತ್ತಾ ಮನವು ಸುಷುಪ್ತಿಯಲ್ಲಿ ಮರೆಯದಂತೆ ಜಾಗ್ರದಲ್ಲಿ ಕೆದರದಂತೆ ನಿಶ್ಚಲಮಂ ಮಾಡಿ ಭ್ರೂಮಧ್ಯ ಲಕ್ಷ್ಯದಲ್ಲಿರುವುದೇ ಉನ್ಮನಿಯ ಸ್ವರೂಪವು. ಅದೇ ಪರಮ ಪದವು. ಅದೇ ಜ್ಞಾನವು. ಅದೇ ಮೋಕ್ಷವು. ಅದೇ ಪರಮರಹಸ್ಯವಾದ ಶಿವ ಯೋಗವು. ಅದರಿಂದ ಅನ್ಯವಾದ ಅರ್ಥಮಂ ಪೇಳ್ವಗ್ರಂಥ ವಿಸ್ತಾರವೆಲ್ಲವು ವ್ಯರ್ಥ ಮಪ್ಪುದಾಗಿ ಈ ಉನ್ಮನಿಯ ಸಾಧಿಸುವಾತನೆ ಜೀವನ್ಮುಕ್ತ... (ವ. ೪೯೭-೫೦೯) ಎಂದಿರುವನು.

ವಚನಕಾರರು ಮಂತ್ರ, ಲಯ, ಹಠ, ರಾಜ ಯೋಗಗಳನ್ನು ಪ್ರಸ್ತಾಪಿಸಿರುವರಾದರೂ ಅವರು ಪ್ರತಿಪಾದಿಸಿರುವುದು 'ಶಿವಯೋಗ'ವನ್ನೇ. ಅವರು ಪ್ರತಿಪಾದಿಸಿರುವ ಶಿವಯೋಗವು ಲಿಂಗಾಂಗಸಾಮರಸ್ಯವನ್ನು ಪ್ರಧಾನವಾಗಿ ತನ್ನಲ್ಲಿ ಅಳವಡಿಸಿಕೊಂಡಿದೆ. ಹೀಗಾಗಿ, ಅದು ಮುಖ್ಯವಾಗಿ ಷಟ್ಸ್ಥಲತತ್ತ್ವವನ್ನೇ ಆಧರಿಸಿರುವಂತಿದೆ. ಜೀವನು ತನ್ನ ಕ್ರಮಾಗತವಾದ ವಿಕಾಸಕ್ಕೆ ಷಟ್ಸ್ಥಲದ ಸೋಪಾನಗಳನ್ನು ಬಳಸಿಕೊಂಡು ಊರ್ಧ್ವ ಮುಖವಾಗಿ ಪ್ರಗತಿಯನ್ನು ಕಾಣಬೇಕು. ವಿಕಾಸದ ಈ ಅವಸ್ಥೆಯಲ್ಲಿ ಕ್ರಮಕ್ರಮ ವಾಗಿ ಜೀವನು ತನ್ನ ಅಂತರಂಗದ ಕಾಳಿಕೆಗಳನ್ನೆಲ್ಲಾ ಕಳೆದುಕೊಂಡು ಶುದ್ಧಚೇತನನಾಗಿ ಮಾರ್ಪಡುವನು. ಷಟ್ಸ್ಥಲದ ಕೊನೆಯ ಮೆಟ್ಟಿಲಾದ 'ಐಕ್ಯ'ದಲ್ಲಿ ಜೀವನ ಪರಿ- ಪೂರ್ಣಾವಸ್ಥೆಯನ್ನೂ ಅದ್ವೈತದ ಪರಮನಿಲುವನ್ನೂ ಗಮನಿಸುತ್ತೇವೆ. ದೇಹವೆಂಬ

ದೇವಾಲಯದಲ್ಲಿ ಪ್ರಾಣಲಿಂಗ ಪ್ರತಿಷ್ಠಾಪನೆ ಮಾಡಿ ಆ ಪ್ರಾಣಲಿಂಗಕ್ಕೆ "ಕಾಯುವೆ ಸೆಜ್ಜೆ, ಆಕಾಶಗಂಗೆಯಲ್ಲಿ ಮಜ್ಜನ. ಹೂವಿಲ್ಲದ ಪರಿಮಳದ ಪೂಜೆ. ಹೃದಯಕಮಲದಲ್ಲಿ, ಶಿವ ಶಿವಾ ಎಂಬ ಶಬ್ದ..." ಪ್ರಭು ಹೇಳುವಂತೆ 'ಇದು ಅದ್ವೈತ...' (ವ. ೧೯೮). 'ದೇಹವೇ ದೇವಾಲಯ' ಎಂಬ ಅಲೌಕಿಕವಾದ ತಾತ್ವಿಕ ನಿಲುವನ್ನು ಮುಂದಿಟ್ಟು, ಮಾನವ ದೇವನಾಗುವ ಸಾಧ್ಯತೆಯ ಮಿತಿಗಳನ್ನು ಶಿವಯೋಗವು ಪ್ರತಿಪಾದಿಸುವುದರಿಂದ ಸಹಜವಾಗಿಯೇ ಅದು ಉಳಿದವುಗಳಿಂದ ಭಿನ್ನವಾಗುತ್ತದೆ. 'ಶಿವಯೋಗ'ದ ಸಾಧನೆ ಸಂಸಾರದಲ್ಲಿದ್ದುಕೊಂಡೇ, ಸಂಸಾರಿಕ ಸುಖಗಳನ್ನು ಅನುಭೋಗಿಸುತ್ತಲೇ ಎಂದಾಗ ಸಂಸಾರವನ್ನು ಬಿಡಬೇಕೆನ್ನುವ, ದೈಹಿಕ ಸುಖ-ಭೋಗಗಳನ್ನು ತ್ಯಜಿಸಬೇಕೆನ್ನುವ, ಕಠಿಣ ವ್ರತಾಚರಣೆಗಳನ್ನು ಮಾಡಬೇಕೆನ್ನುವ, ದೇಹವನ್ನು ದಂಡಿಸಬೇಕೆನ್ನುವ ಯೋಗಗಳಿಂದ ಇದು ಭಿನ್ನವಾಗಿ ಪ್ರತ್ಯೇಕ ನಿಲುವನ್ನು ತಾಳುತ್ತದೆ. ಈ ಹಿನ್ನೆಲೆಯಲ್ಲೇ ವಚನಕಾರರು ಜಪ-ತಪ-ಸಮಾಧಿಗಳಿಗೆ ವಿಶೇಷ ಪ್ರಾಧಾನ್ಯ ನೀಡಿ ಕಾಡು-ಮೇಡುಗಳಲ್ಲಿ, ಬೆಟ್ಟಗುಡ್ಡಗಳಲ್ಲಿ ನದಿ ಜಲಾಶಯಗಳಲ್ಲಿ ಏಕಾಂತತೆಯನ್ನರಸಿ ಸಂಸಾರದ ಬಂಧನವನ್ನು ಹರಿದುಕೊಂಡು ಮನದ ಚಾಂಚಲ್ಯವನ್ನು ನಿಲ್ಲಿಸಲು ಪ್ರಯತ್ನಿಸುವ ಯತಿವರರನ್ನು ಸನ್ಯಾಸಿಗಳನ್ನು ಖಂಡಿಸಿರುವುದು. ಇಹದಲ್ಲೇ ಇದ್ದು ಪರವನ್ನು ಸಾಧಿಸುವ ಶಿವಯೋಗದ ನಿಲುವನ್ನು ಪ್ರತಿಪಾದಿಸಿದುದು. ಚೆನ್ನಸದಾಶಿವಯೋಗಿಯು ಹೃತ್ಕಮಲದಲ್ಲಿ ನೆಲಸಿರುವ ಸಕಲ ನಿಷ್ಕಲಾತ್ಮಕನಾದ ಈಶನನ್ನು ಏಕಾಗ್ರಚಿತ್ತದಿಂದ ಧ್ಯಾನಿಸಬೇಕು, ಏಕಾಂತಕ್ಕೆ ವಾನಪ್ರಸ್ಥವೇ ಆಗಬೇಕಿಲ್ಲ, ಯೋಗಗೃಹವಾದರೆ ಸಾಕು ಎಂದು ಹೇಳಿ ಆ ಯೋಗಗೃಹ ಹೇಗಿರಬೇಕು ಎಂಬುದರ ವಿವರವನ್ನೂ ನೀಡಿರುವನು(೨.೧೬–೨೦). ಹಠಯೋಗದಿಂದ ಅನುಪಮಸಿದ್ಧಿಗಳನ್ನು ಸಾಧಿಸಬಹುದು. ಮಂತ್ರ-ತಂತ್ರಗಳಿಂದಲೂ ಗಿಡಮೂಲಿಕೆಗಳ ವಿಶೇಷಜ್ಞಾನದಿಂದಲೂ ಅಗ್ನಿಸ್ತಂಭ, ಜಲಸ್ತಂಭ, ಅಂತರಿಕ್ಷಗಮನ, ಅಂಜನಸಿದ್ಧಿ — ಹೀಗೆ ಅನೇಕ ಅದ್ಭುತಗಳಿಂದ ಜನರನ್ನು ಆಕರ್ಷಿಸಬಹುದು. ಈ ಸಿದ್ಧಿಗಳೆಲ್ಲ ಲೌಕಿಕದ ತೆಕ್ಕೆಗೆ ವ್ಯಕ್ತಿಯನ್ನು ಒಡ್ಡುತ್ತವೆ. ಇವುಗಳಿಂದ ಒದಗುವ ಸುಖ ಲೌಕಿಕವಾದುದು, ಕ್ಷಣಿಕವಾದುದು. ಪ್ರಭುವು ನವನಾಥಸಿದ್ಧರ ಪ್ರಸ್ತಾಪ ಮಾಡಿರುವನು (ವ. ೩೭೧). ನಾರು ಬೇರಿನ ಕುಟಿಲ ಕಪಟದ ಸಿದ್ಧರನ್ನು; ಕಾಯಸಮಾಧಿ, ಕರುಣಸಮಾಧಿ, ಜೀವಸಮಾಧಿಯ ಸಿದ್ಧರನ್ನು ಟೀಕಿಸುತ್ತಾ ಇವರದು ನಿಜವಾದ ಯೋಗವಲ್ಲ ಎಂದಿರುವನು (ವ. ೬೪೦). ಸಿದ್ಧರಾಮನು 'ನೀರಮೇಲೆ ನಡೆವವರನಂತರುಂಟು, ಖೇಚರರಾಗಿ ನಡೆವವರನಂತರುಂಟು .....ಕಾಲಿಲ್ಲದೆ ನಡೆವವರೊರ್ವರಿಲ್ಲ' ಎಂದು ವ್ಯಂಗ್ಯವಾಡಿರುವನು (ವ. ೧೨೨೯). ಮತ್ತೊಂದು ವಚನದಲ್ಲಿ ರಸವಾದಿಗಳನ್ನು ಖಂಡಿಸುತ್ತಾ 'ಸಿದ್ಧ ಸಿದ್ಧರುಗಳೆಲ್ಲ ರಸವಾದವ ಕಲಿತು ಬಂಧನಕ್ಕೆ ಗುರಿಯಾದರಲ್ಲಾ' ಎಂದು ತನ್ನ ಅನುತಾಪವನ್ನು ವ್ಯಕ್ತಪಡಿಸಿರುವನು (ವ. ೧೨೩೨). ತೋಂಟದ ಸಿದ್ಧಲಿಂಗಯತಿಯು ಪವನಯೋಗಿಗಳನ್ನು 'ಪ್ರಪಂಚಿಗಳು' ಎಂದು ಕರೆದಿರುವುದು (ವ ೩೫೮) ಅವರು

ಪೂರ್ಣವಾಗಿ ಲೌಕಿಕರು ಎಂಬ ಅರ್ಥದಲ್ಲಿಯೇ. ಗೋರಕ್ಷನು ಪ್ರಾರಂಭದಲ್ಲಿ ಹಠಯೋಗಿಯಾಗಿದ್ದು ಪ್ರಭುವಿನ ಮೂಲಕ 'ಶಿವಯೋಗ' ಬಲ್ಲಿದನಾದನು. ಅವನು ತನ್ನ ವಚನವೊಂದರಲ್ಲಿ[೩] ಹಠಯೋಗದ ಅಪೂರ್ವಸಿದ್ಧಿಯನ್ನು ನಿರಾಕರಿಸಿರುವನು. ಸಕಳೇಶಮಾದರಸನೂ ಮೊದಲಿಗೆ ಹಠಯೋಗಿಯಾಗಿದ್ದು ಶಿವಯೋಗಿ ಮಲ್ಲರಸನ ಸಂಪರ್ಕದಿಂದಾಗಿ ಶಿವಯೋಗಿಯಾದವನು. ಹಠಯೋಗಿಗಳ ಸಾಧನೆ ಪವನವಿಜಯದಲ್ಲಿ ಕೊನೆಗೊಳ್ಳುತ್ತಿದ್ದುದನ್ನು ಮನಗಂಡು ಇಂತಹ ವ್ಯಕ್ತಿಗಳು ವೇಷಕಾರರು, ಇವರ ಕ್ರಿಯೆಗಳು ಡಂಬಕತನದಿಂದ ಕೂಡಿದ್ದವೆಂದೂ ಕಟುವಾಗಿ ಆಕ್ಷೇಪಿಸುವನು :

ಗಿರಿಯ ಕರದಿಂದೆತ್ತಿದಡೇನು ?
ಹರಿವ ವಾರಿಧಿಯನಾಪೋಷಣಂಗೊಂಡಡೇನು ?
ಗಗನ ಗಮನದಲ್ಲಿ ಸುಳಿದಡೇನು ?
ಇವರೆಲ್ಲರೂ ಪವನದ ಬಳಿಯಲಭ್ಯಾಸಿಗಳು.
ಅರ್ಚಿಸಿ ಪೂಜಿಸುವ ಮುಕ್ಕರದೊಳಗಣ ಲೌಕಿಕರ ಮೆಚ್ಚ
ಸಕಳೇಶ್ವರದೇವ ವೇಷಡಂಬಕರ[೪]

ಹಠಯೋಗಿಗಳ ಪರಂಪರೆಯಲ್ಲಿ ಪ್ರಭುವಿನ ಹೆಸರೂ ಕಾಣಬರುತ್ತದೆ. ಸ್ವಾತ್ಮಾರಾಮ ಯೋಗೀಂದ್ರನು (ಸು. ೧೬೦೦) 'ಹಠಯೋಗಪ್ರದೀಪಿಕೆ'ಯಲ್ಲಿ ಹಠಯೋಗಿಗಳ ಸಾಲಿನಲ್ಲಿ ಪ್ರಭುವಿನ ಹೆಸರನ್ನೂ ಸೇರಿಸಿರುವನು[೫]. ವಚನಕಾರರು ಹಠಯೋಗವನ್ನು ತಿರಸ್ಕರಿಸಿಲ್ಲ, ಒಪ್ಪಿರುವರು. ಅವರ ಪ್ರಕಾರ ಹಠಯೋಗ ಅನುಪಮಸಿದ್ಧಿ ಸಾಧನೆಗೆ ಬಳಕೆಯಾಗಬಾರದು. ಅದರ ಗಮ್ಮಗುರಿ ಚಮತ್ಕಾರಗಳನ್ನು ಪ್ರದರ್ಶಿಸುವ ಮಟ್ಟಿಗೆ ಸೀಮಿತಗೊಳ್ಳಬಾರದು. ವ್ಯಕ್ತಿಯಲ್ಲಿ ಅಹಮ್ಮಿಕೆಯನ್ನು ಬೆಳೆಸಬಾರದು. ಚಾಮರಸನ 'ಪ್ರಭುಲಿಂಗ ಲೀಲೆ'ಯಲ್ಲಿ ಗೋರಕ್ಷನ ಭ್ರಮೆಯನ್ನು ಪ್ರಭು ನಿರಸನಗೊಳಿಸುವುದು ಈ ಕಾರಣದಿಂದಲೇ. ಪ್ರಭುವು ಕೆಳವರ್ಗದಿಂದ ಹುಟ್ಟಿಬಂದರೂ ತನ್ನ ಕಠಿನ ಸಾಧನೆಗಳಿಂದ, ಅಪೂರ್ವ ಧೀಶಕ್ತಿಯಿಂದ, ಜ್ವಲಿಸುವ ತನ್ನ ವಿಚಾರಸಂಪತ್ತಿನಿಂದ ಲೌಕಿಕ ಹಾಗೂ ಆಧ್ಯಾತ್ಮ ಪ್ರಪಂಚದಲ್ಲಿ ಅತ್ಯಂತ ಹಿರಿದಾದ ಸ್ಥಾನ-ಮಾನಗಳನ್ನು ತನ್ನಿಂದ ತಾನೇ ಪಡೆದುಕೊಂಡನು. ಅವನ ಬದುಕು ಯೋಚಿಸಲೂ ಸಾಧ್ಯವಾಗದ ಅಗಾಧ ಪರಿವರ್ತನೆಗೆ ಒಳಗಾಗಿದೆ. ಅವನ ಅನುಪಮವಾದ ಸಾಧನೆ-ಸಿದ್ಧಿಯನ್ನು, ತೀಕ್ಷ್ಣವಾದ ಚಿಂತನಶಕ್ತಿಯನ್ನು, ಆಳವಾದ ಅನುಭಾವದ ನೆಲೆಯನ್ನು ಹೇಳಲಿಕ್ಕೆ ಸಾಧ್ಯ

೩ ನೋಡಿ : ಬಸವಾದಿ ಗಣಚರಿತೆ, ಮತ್ತು ಗಣವಚನಮಂಜರಿ
ಸಂ. ಡಾ. ಎಸ್. ಎಂ. ಹುಣಶ್ಯಾಳ, ಪು. ೨೬-೨೭
೪ ಸಕಳೇಶ ಮಾದರಸನ ವಚನಗಳು (ಸಕಲ ಪುರಾತನರ ವಚನಗಳು, ಸಂ. ೨)
ಸಂ. ಡಾ. ಆರ್. ಸಿ. ಹಿರೇಮಠ ವ. ೧೯೬೩. ಪು. ೫೫೪
೫ ನೋಡಿ : ಪಾರಮಾರ್ಥ ಪ್ರಕಾಶಿಕೆ ; ಸಂ. ಜಿ. ಎಂ. ಉಮಾಪತಿಶಾಸ್ತ್ರಿ, ಅರಿಕೆ, ಪು. ೭೭

ವಿಲ್ಲ. ಅಷ್ಟರಮಟ್ಟಿಗೆ ಅವನು ವಚನಕಾರರಲ್ಲಿ ಅನುಪಮನು. ಪ್ರಭುವು "ಗಗನ ಸ್ಥಾನವೆ ಕಂಥೆ, ಆಕಾಶವೆ ಕೊಪ್ಪರ, ಅನಾಹತವೇ ಒಡ್ಯಾಣ, ಅದ್ವೈತವೇ ಯೋಗ ವಟ್ಟಿಗೆ, ಅಗಮ್ಯವೇ ಯೋಗವಾವುಗೆ, ಅಚಳಿತವೆ ಖರ್ಪರ, ಅಪ್ರಮಾಣವೆ ಲಾಕುಳ, ಅವಿಚಾರವೆ ಸುಳುಹು, ಅಕಲ್ಪಿತವೆ ಭಿಕ್ಷ, ಕೊಂಡುದೆ ಗಮನ, ನಿಂದುದೆ ನಿವಾಸ..." (ವ. ೩೭೪)–ಈ ಬಗೆಯ ಶಿವಯೋಗಿ! "...ಸುಜ್ಞಾನಪ್ರಭೆಯ ಬೆಳಗಿನೊಳಗೆ ಸುಳಿದಾಡುವ ಪರಮಾನಂದದ ಮಹಾಮಹಿಮ !!" (ವ. ೩೭೪). ಹಠಯೋಗಿಗಳ, ನವನಾಥಸಿದ್ಧರ, ಕಾಪಾಲಿಕರ ಅಸಹ್ಯಕರ ಆಚರಣೆಗಳನ್ನು ಕಟುವಾಗಿ ಟೀಕಿಸುವ (ವ. ೧೦೩೯) ಪ್ರಭುವು ಯೋಗದ ಸಾತ್ವಿಕಾಂಶವನ್ನು ಶಿವಯೋಗಿಯಾಗಿ 'ಶಿವಯೋಗ'ದಲ್ಲಿ ಪ್ರತಿಪಾದಿಸಿರುವನು. ಪುಣ್ಯಕ್ಷೇತ್ರ, ಪುರುಷಕ್ಷೇತ್ರ, ಅಷ್ಟವಿಧಾರ್ಚನೆ. ಷೋಡಶೋಪಚಾರಗಳಿಂದ ಹೊರತಾದ 'ತನ್ನೊಳಗಿಪ್ಪ ನಿಕ್ಷೇಪವ ಭೇದಿಸಿ ಕಾಣಲಱಿ'ಯುವುದೇ ಶಿವಯೋಗದ ಗುರಿ. ಇದನ್ನು ತನ್ನ ಹಲವು ವಚನಗಳಲ್ಲಿ ಪ್ರಭು ವಿಶದಪಡಿಸಿರುವನು. '...ಸರ್ವಾಚಾರ ಸಂಪತ್ತಿನಾಚರಣೆಯ, ನಿಜಸುಖದ ರಾಜಾಧಿರಾಜ ಶಿವಯೋಗದ ನಿಲುಕಡೆಯ ಬಲ್ಲವನು ಷಟ್‌ಸ್ಥಲಚಕ್ರವರ್ತಿಯಾದ ಚೆನ್ನಬಸವಣ್ಣ. ಶಿವಾಚಾರಸಂಪನ್ನನಾಗಿ ಯೋಗದ ಹೊಲಬನ್ನರಿತು ಲೌಕಿಕ ಪರಮಾರ್ಥಗಳೆರಡನ್ನೂ ಗಳಿಸಿದವನು ಸಿದ್ಧರಾಮ ಶಿವಯೋಗಿ. ಸಮತೆಯೆಂಬ ಕಂಥೆಯ ಧರಿಸಿ, ಅಮಿತವೆಂಬ ಭಸ್ಮವ ಧರಿಸಿ, ಲಿಂಗವೆಂಬ ಕರ್ಪರವ ಕರಸ್ಥಲದಲ್ಲಿ ಧರಿಸಿ, ಸರ್ವಜೀವ ದಯಾಪಾರಿಯೆಂಬ ವಿಮಲರುದ್ರಾಕ್ಷಿಯ ಧರಿಸಿ, ನಿರ್ಮೋಹವೆಂಬ ಕಾಪೀನವ ಧರಿಸಿ, ನಿಸ್ಸಂಗವೆಂಬ ಮೇಖಲಾಪರಿಪೂರ್ಣನಾಗಿ, ಸುಮ್ಮಾನವೆ ಕಿರೀಟವಾಗಿ, ಶುದ್ಧಜ್ಞಪ್ತಿಯೆ ಮುಕುಟವಾಗಿ, ನಿರಹಂಕಾರವೆ ಬಹಿರ್ವಾಸಿಯಾಗಿ, ದುರ್ವ್ಯಸನ ದುರ್ಭ್ರಮೆ ಹೃಷೀಕೋತ್ಪಾತವಿಜಯ ಶಿವಯೋಗವಾಗಿ ಚರಿಸುವ 'ಮಹಾಜಂಗಮಮೂರ್ತಿ'ಯು ಸಿದ್ಧರಾಮ.[೬] ಈ ಮೂವರೂ ವಚನಯುಗದ ಶಿವಯೋಗದ ಪ್ರತಿಪಾದಕರು. ಅವರ ಕಾಲಕ್ಕೆ 'ಶಿವಯೋಗ'ವು ಕಲ್ಯಾಣದ ಶರಣರ ವ್ಯಾಪಕವಾದ ಅನುಷ್ಠಾನದಿಂದಾಗಿ ಒಂದು ಸ್ಪಷ್ಟ ರೂಪವನ್ನು ಪಡೆಯಿತು. ಇದರ ಸೂಚನೆಯನ್ನು ಪ್ರಭು, ಚೆನ್ನಬಸವಣ್ಣ ಹಾಗೂ ಸಿದ್ಧರಾಮ– ಇವರ ವಚನಗಳಲ್ಲಿ ನಿಚ್ಚಳವಾಗಿ ಗುರುತಿಸುತ್ತೇವೆ. ಶಿವಯೋಗದಲ್ಲಿ ಬಲ್ಲಿದರಾದವರು ಶಿವಯೋಗಿಗಳು. ಹಾಗೆ ನೋಡಿದರೆ ಷಟ್‌ಸ್ಥಲವನ್ನು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡ ನಮ್ಮ ಶರಣರೆಲ್ಲರೂ ಶಿವಯೋಗಿಗಳೇ. ಶಿವಯೋಗ ವನ್ನೇ ಕುರಿತ ಗ್ರಂಥ ೧೨ನೆಯ ಶತಮಾನದವೇಳೆಗೆ ಕನ್ನಡದಲ್ಲಿ ಹುಟ್ಟಿಲ್ಲ. ಬಸವಯುಗದ ಬಸವಾದಿ ಶಿವಶರಣರ ವಚನಗಳು, ವೀರಶೈವ ಪುನರುತ್ಥಾನಯುಗದ ತೋಂಟದ ಸಿದ್ಧಲಿಂಗ ಶಿವಯೋಗಿಗಳ 'ಷಟ್‌ಸ್ಥಲಜ್ಞಾನಸಾರಾಮೃತ', ಷಣ್ಮುಖ ಶಿವಯೋಗಿಗಳ 'ಅಖಂಡೇಶ್ವರ ವಚನಗಳು' ಶಿವಯೋಗವನ್ನು ಪ್ರತಿಪಾದಿಸಿರುವ ಗ್ರಂಥಗಳಾಗಿವೆ.

---

೬ ನೋಡಿ: ಶ್ರೀ ಸಿದ್ಧರಾಮೇಶ್ವರ ವಚನಗಳು, ವ. ೧೧೬೪.

ಇವುಗಳ ಅಧ್ಯಯನದಿಂದ ಶಿವಯೋಗದ ಕಲ್ಪನೆಯನ್ನು ಚೆನ್ನಾಗಿಯೇ ರೂಪಿಸ ಬಹುದು.

ಸಿದ್ಧರಾಮನು ತನ್ನ ವಚನವೊಂದರಲ್ಲಿ (ವ. ೧೦೭೧) ತನ್ನಂತೆಯೇ ಶಿವಯೋಗವನ್ನು ಸಾಧಿಸಿದ್ದ ನಿಜಗುಣ, ವೃಷಭಯೋಗೀಶ್ವರ, ಶಿವನಾಗಮಯ್ಯ—ಈ ಶಿವಯೋಗಿ ಗಳನ್ನು ಉಲ್ಲೇಖಿಸಿರುವನು. ಅಜಗಣ್ಣ ಮಂತ್ರಯೋಗದಲ್ಲಿಯೂ ಸಕಳೇಶ ಮಾದರಸ ಹಠಯೋಗದಲ್ಲಿಯೂ ಮಹಾದೇವಿಯಕ್ಕ ಲಯಯೋಗದಲ್ಲಿಯೂ ಸಕಲ ಗಣವರರು ರಾಜಯೋಗದಲ್ಲಿಯೂ ಬಲ್ಲಿದರಾಗಿದ್ದರೆಂದು ಹೇಳಿ, ತನಗೆ ಶ್ರೀಗುರು ಕಪಿಲಮಲ್ಲಿಕಾರ್ಜುನನಿಂದ ಶಿವಯೋಗವು ತಿಳಿಯಬಂದಿತ್ತು ಎಂದು ಮತ್ತೊಂದು ವಚನದಲ್ಲಿ (ವ. ೧೦೭೨) ಈ ಮಹತ್ವದ ಸಂಗತಿಯನ್ನು ಪ್ರಸ್ತಾಪಿಸಿರುವನು.

ಬಸವಸಮಕಾಲೀನ ವಚನಕಾರರಲ್ಲಿ ನಿಜಗುಣಶಿವಯೋಗಿಯು ಯೋಗಶಾಸ್ತ್ರದಲ್ಲಿ ವಿಶೇಷಜ್ಞಾನವನ್ನು ಹೊಂದಿದ್ದನು. 'ನಿಜಗುಣಯೋಗಿಯ ಯೋಗಾ' ಎಂಬ ಅಂಕಿತದಲ್ಲಿ ಇವನು ವಚನಗಳನ್ನು ರಚಿಸಿರುವನು. ಫ. ಗು. ಹಳಕಟ್ಟಿಯವರಿಗೆ ಇವನ ಎಂಟು ವಚನಗಳು ಮಾತ್ರ ದೊರೆತಿವೆ. ಚಿಮ್ಮಲಗಿ ಇವನ ವಾಸಸ್ಥಳ. ಕೇಭಾವಿಯ ಚಂದಿಮರಸ ಇವನ ಶಿಷ್ಯ. ಚಂದಿಮರಸನು ತನ್ನ ವಚನಗಳಲ್ಲಿ ನಿಜಗುಣನ ಅಂತ ಜ್ಞಾನ, ಅವನ ಅರಿವು, ಅವನ ಯೋಗ ಇವುಗಳ ಸ್ವರೂಪವನ್ನು ಬಹಳ ಹೊಗಳಿರು ವುದಾಗಿ ಫ. ಗು. ಹಳಕಟ್ಟಿಯವರು ಹೇಳುವರು.[2] ನಿಜಗುಣನು ಶ್ರೇಷ್ಠಮಟ್ಟದ ಶಿವಯೋಗಿಯಾಗಿದ್ದು ಅವನು ತನ್ನ ವಚನಗಳಲ್ಲಿ ಪಾತಂಜಲಯೋಗಸೂತ್ರಗಳನ್ನಾ ಗಲಿ, ಹಠಯೋಗವನ್ನಾಗಲಿ ಸಮರ್ಥಿಸದೆ ಲಿಂಗಾಂಗಸಾಮರಸ್ಯವನ್ನೇ ವಿಶೇಷವಾಗಿ ಪ್ರತಿಪಾದಿಸಿರುವನು. ನಿಜಗುಣ ಜನಮನದ ಆರಾಧ್ಯಮೂರ್ತಿಯಾಗಿದ್ದುದರಿಂದ ಚಿಮ್ಮಲಗಿಯಲ್ಲಿ ಇವನ ಸಮಾಧಿಯ ಮೇಲೆ ದೇವಾಲಯವೊಂದು ನಿರ್ಮಾಣವಾಗಿ ನಿಜಗುಣೇಶ್ವರಲಿಂಗವೆಂಬ ಹೆಸರಿನಿಂದ ಈಗಲೂ ಪೂಜೆಗೊಳ್ಳುತ್ತಿರುವನು. ಸಿದ್ಧರಾಮ ಹೇಳುವ ಶಿವನಾಗಮಯ್ಯನು ಕಂಬಳಿಯ ನಾಗಿದೇವನಿರಬಹುದು. ವಿರೂಪಾಕ್ಷ ಪಂಡಿತನು ಚೆನ್ನಬಸವಪುರಾಣದಲ್ಲಿ ಬಸವನೆಸಗಿದ ಪವಾಡಗಳನ್ನು ಹೇಳುವಲ್ಲಿ 'ಶಿವನಾಗಯ್ಯನ ಬೆರಳೊಳಗೆ ಪಾಲನುರೆ ಕರೆದ' ಪ್ರಸಂಗವನ್ನು ಪ್ರಸ್ತಾಪಿಸಿರುವನು (ಸಂ. ೫೭, ಪ. ೭೯). ಶಿವನಾಗಮಯ್ಯನೇ ಕಂಬಳಿಯ ನಾಗಿದೇವನೆಂಬುದಕ್ಕೆ ಇದೊಂದು ಗಟ್ಟಿ ಆಧಾರ. ಇವನು ಕೀರ ಕೆಳವರ್ಗಕ್ಕೆ ಸೇರಿದವನಾಗಿದ್ದನು. ಸದಾ ಚಾರ, ಸತ್ಕ್ರಿಯೆ, ಸದ್ವರ್ತನೆಗಳಿಂದ ಎಲ್ಲರಿಂದಲೂ ಗೌರವಾನ್ವಿತನಾಗಿದ್ದನು. ಬಸವಣ್ಣನಿಂದ ವೀರಶೈವ ದೀಕ್ಷೆಯನ್ನು ಹೊಂದಿ ಹಿರಿಯ ಮಾಹೇಶ್ವರನಾಗಿ ಶಿವಾನು ಭವದಲ್ಲಿ ನಿಮಗ್ನನಾಗಿ ಇರುತ್ತಿರಲು, ಒಮ್ಮೆ ಬಸವಣ್ಣನು ಇವನಲ್ಲಿಗೆ ಬಂದು ಸಂಗ

---

೨ ಶಿವಶರಣರ ಚರಿತ್ರೆಗಳು : ಭಾಗ ೧ (೧೯೪೪), ಪು. ೨೫.

ಪ್ರಸಾದದೊಂದಿಗೆ ಇವನು ಕೊಟ್ಟ ಪ್ರಸಾದವನ್ನು ಬೆರಸಿ ಸ್ವೀಕರಿಸಿದನು. ಈ ಸುದ್ದಿ ತಿಳಿದ ಬ್ರಾಹ್ಮಣರು ಅರಮನೆಗೆ ಬಂದು ಬಿಜ್ಜಳನಿಗೆ 'ಬಸವನ ನಡವಳಿ ದಿನದಿನಕೆ ವಿಪರೀತವಾಗಿರ್ಪುದು. ಪಿರಿಯ ಮಾಹೇಶ್ವರರೆಂದು ಬೆರಸಿಕೊಂಡಿರ್ಪುದಂತಲ್ಲದೆ ಇಂದೀ ಗಳಿಗೆಗಳ್ ಪೊಲೆಗೇರಿಯೊಳೊರ್ವಂ ಪೊಲೆಯನೆಂದಡೆ ಕೊಂದಪಂ ಹಿರಿಯ ಭಕ್ತನ ಮನೆಯೊಳುಂಡು ಉಂಡುದಲ್ಲದೆ ನಿನ್ನೋಲಗದೊಳ್ ಪೊಲೆಗಲಸಲ್ ಬಂದಪಂ. ಇಂತಾದಡೆ ಎಮಗಿರಲ್ಬಾರದು' ಎಂದು ದೂರುವರು. ಅವರನ್ನು ಸಮಾಧಾನಿಸಿದ ಬಿಜ್ಜಳ ಬಸವಣ್ಣನನ್ನು ಕರೆಯಿಸಿ ಅವನ ಅಂದಿನ ವರ್ತನೆಯನ್ನು ಪ್ರಶ್ನಿಸುವನು. ಈರ್ವರ ನಡುವೆ ಚರ್ಚೆಯಾಗುತ್ತಿರುವಾಗ ಮಾತಿನ ಭರದಲ್ಲಿ 'ವಿಪ್ರರ ಮೈಯಂ ಕುಯ್ಯೆ ನೆತ್ತರು ಸುರಿದು ಭಕ್ತರ ಮೈಯೊಳ್ಪಾಲು ಸುರಿದಪುದೆ?' ಎಂದು ಬಿಜ್ಜಳ ನುಡಿಯುವನು. ಬಸವ ಆ ಮಾತಿಗೆ ಒಡಂಬಟ್ಟು, ನೀನೆಂದಂತೆ ನಾನು ಮಾಡಿತೋರಿಸದಿದ್ದರೆ ಸಂಗನಿಗೆ ಶರಣರಿಗೆ ದೂರವಾಗುತ್ತೇನೆ. ಸ್ವಲ್ಪ ಸೈರಿಸು ಎಂದು ಹೇಳಿ ಗಳಗಳನೆ 'ಹಿರಿಯ ಕೇರಿಗೆ' ಬಂದು ಕಂಬಳಿಯ ನಾಗಿದೇವನನ್ನು ಪಲ್ಲಕ್ಕಿಯಲ್ಲಿ ಕರೆದುತಂದು ಆಸ್ಥಾನದ ಸಮಸ್ತರ ಮುಂದೆ ಶರಣನ ಪಾದದ ಅಂಗುಷ್ಟವನ್ನು ಚುಚ್ಚಲು ಹಾಲು ಹೊಳೆಯಾಗಿ ಹರಿಯಿತು. ಶಿವನಾಗಮಯ್ಯನನ್ನು ಕುರಿತ ಈ ಪ್ರಸಂಗ ಹರಿಹರನ 'ಬಸವೇಶ್ವರ ದೇವರ ರಗಳೆ'ಯಲ್ಲಿ[೮] ಮೊದಲಿಗೆ ಕಾಣಬರುತ್ತದೆ. ಬಸವಸಮಕಾಲೀನ ಮಹಿಮಾನ್ವಿತ ಶಿವಯೋಗಿಗಳಲ್ಲಿ ಒಬ್ಬನಾಗಿದ್ದ ಇವನು 'ನಾಗಯ್ಯಪ್ರಿಯ ಚನ್ನರಾಮೇಶ್ವರಾ'ಎಂಬ ಅಂಕಿತದಲ್ಲಿ ವಚನಗಳನ್ನೂ ಬರೆದಿರುವನು. ಸಕಳೇಶ ಮಾದರಸನು ಕಲ್ಲುಕುರಿಕೆ ಎಂಬ ಪಟ್ಟಣದ ಅರಸನಾಗಿದ್ದು ವಿರಕ್ತಿಯಿಂದಾಗಿ ರಾಜ್ಯವನ್ನು ತೊರೆದು ಶ್ರೀಶೈಲಕ್ಕೆ ಹೊರಟನು. ಮಾರ್ಗಮಧ್ಯೆ ಅಂಬೆ ಎಂಬ ಗ್ರಾಮದ ಜನರು ಇವನ ನಿಷ್ಠೆಗೆ ಮನ ಸೋತು ತಮ್ಮಲ್ಲಿಯೇ ಇವನನ್ನು ನಿಲ್ಲಿಸಿಕೊಂಡರು. ಇವನ ಪೂಜಾವೈಭವಕ್ಕೆ ಆಕರ್ಷಿತರಾದ ಜನ ಇವನ ಶಿಷ್ಯರಾಗತೊಡಗಿದರು. ಶಿಷ್ಯರ ಬಳಗ ಹೆಚ್ಚುತ್ತಾ ಹೋದಂತೆ ಇವನ ಪ್ರತಿಷ್ಠೆಯೂ ಬೆಳೆಯಿತು. ಭಕ್ತರ ಮನೆಗೆ ಪೂಜೆಗೆ ಹೋದಲ್ಲಿ ಪೂಜಾಕಾರ್ಯಗಳಿಗೆ ಅವರಿಂದ ಹನ್ನೆರಡು ಹಣ ತೆಗೆದುಕೊಳ್ಳುತ್ತಿದ್ದನು. ಒಮ್ಮೆ ಭಕ್ತನೋರ್ವನು ತನ್ನ ಮಗಳನ್ನು ಒತ್ತೆಯಿಟ್ಟು ಅದರಿಂದ ಬಂದ ಹಣದಿಂದ ಸಕಳೇಶ ನನ್ನು ಮನೆಗೆ ಕರೆದು ಗುರುಸೇವೆ ಮಾಡಿದನು. ಅಷ್ಟವಿಧಾರ್ಚನೆ, ಷೋಡಶೋಪ ಚಾರಗಳ ಸಂಭ್ರಮದಲ್ಲಿ ಮೈಮರೆತಿದ್ದ ಸಕಳೇಶನಿಗೆ ಒಮ್ಮೆ ಲಿಂಗಕ್ಕೆ ಆರತಿ ಬೆಳಗು ವಾಗ ಒತ್ತೆಯಾಗಿ ಹೋಗಿದ್ದ ಭಕ್ತನ ಮಗಳು ಲಿಂಗದಲ್ಲಿ ಕಾಣಿಸಿಕೊಂಡಳು. ಆಗ ಅವನಿಗೆ ತನ್ನ ತಪ್ಪಿನ ಅರಿವಾಯಿತು. ರಾಜವೈಭವವನ್ನು ಬಿಟ್ಟ ನನಗೆ ಇನ್ನು ಶಿವ ಪೂಜಾವೈಭವವೂ ಬೇಡವೆಂದು ಶ್ರೀಶೈಲದ ಮಲ್ಲರಸನಲ್ಲಿಗೆ ಬಂದು ಅವನಿಂದ ಬೋಧೆಪಡೆದು ಉಗ್ರತಪಸ್ಸಿಗೆ ಕುಳಿತನು. ಇವನ ಮನಸ್ಸನ್ನು ಒರೆಹಚ್ಚಿ ನೋಡ

---

೮ ಬಸವೇಶ್ವರದೇವರ ರಗಳೆ(ನೂತನ ಪುರಾತನರ ರಗಳೆಗಳು; ಸಂ. ಡಾ.ಎಂ. ಎಸ್. ಸುಂಕಾಪುರ) ಪು. ೭೪–೭೭.

ಬೇಕೆಂದು ಶಿವಯೋಗಿ ಮಲ್ಲರಸನು ಕುರುಬನ ವೇಷತೊಟ್ಟು ತಪಸ್ಸು ಮಾಡುತ್ತಿದ್ದ ಲ್ಲಿಗೆ ಬಂದು ನಾನಾಬಗೆಯಲ್ಲಿ ನಿಂದಿಸಿ, ಅವನ ಮೈಮೇಲೆ ಎಲೆಗಳನ್ನು ಸುರಿದು ತಪೋ ಭಂಗ ಮಾಡಿದನು. ತನ್ನ ಮನಶ್ಶಾಂತಿಗೆ ಭಂಗ ಬಂದುದನ್ನು ಕಂಡು ಕೆರಳಿದ ಸಕಳೇಶ ಆ ಕುರುಬನಿಗೆ ಶಾಪಕೊಡಹೊರಟನು. ಆಗ ಮಲ್ಲರಸ ತನ್ನ ನಿಜರೂಪು ದೋರಿದನು. ಉಗ್ರತಪಸ್ಸಿಗೆ ಕುಳಿತೂ ಕೋಪ-ತಾಪಗಳಿಗೆ ಗುರಿಯಾದ ತನ್ನ ಬಗೆಗೆ ನಾಚಿಕೆಯಾ ಯಿತು. ಸಕಳೇಶನು ತಪೋಮಾರ್ಗವನ್ನು ಬಿಟ್ಟು ಮಲ್ಲರಸನ ಸೂಚನೆಯಂತೆ ಕಲ್ಯಾ ಣದ ಶಿವಶರಣರೆಡೆಗೆ ಬಂದು ಶಿವಾನುಭವಿಯಾದನು. ಕೆಲವುಕಾಲ ಕಲ್ಯಾಣದಲ್ಲಿದ್ದು, ಕಲ್ಯಾಣಕ್ರಾಂತಿಯ ನಂತರ ಕಲ್ಯಾಣವನ್ನು ಬಿಟ್ಟು ಶ್ರೀಶೈಲಕ್ಕೆ ಹೊರಡುವಾಗ ಮಾರ್ಗ ದಲ್ಲಿ ಗೋಪೆಯ ಶಿವದೇವನನ್ನು ಸಂಧಿಸಿ ಅವನ ನಿಷ್ಠುರ ವ್ರತವನ್ನು ಖಂಡಿಸಿ ಶಿವಾನುಭವಬೋಧೆಯನ್ನು ಮಾಡಿದನು. ಮುಂದೆ ಮಹಾಲಿಂಗ ರಾಮಯ್ಯನನ್ನು ಭೇಟಿಮಾಡಿ ಅವನಿಗೆ ಲಿಂಗಾಂಗಸಾಮರಸ್ಯವನ್ನು ಅರುಹಿಸಿ ತನ್ನ ಗುರು ಮಲ್ಲರಸ ನಲ್ಲಿಗೆ ಬಂದು ಶಿವಾನುಭವಗೋಷ್ಠಿಯಲ್ಲಿ ಹಲವು ಕಾಲವಿದ್ದು ಅಲ್ಲಿಯೇ ಲಿಂಗೈಕ್ಯ ನಾದನು. 'ಸಕಳೇಶ್ವರದೇವಾ' ಎಂಬ ಅಂಕಿತದಲ್ಲಿ ಬಂದಿರುವ ಇವನ ವಚನಗಳು ಅನುಭವದಿಂದ ಸಂಪನ್ನವಾಗಿವೆ[೯]. ಹಠಯೋಗದ ನಿಸ್ಸಾರತೆಯನ್ನು ಮನಗಂಡ ಈತ ತನ್ನ ಅನಿಸಿಕೆಗಳನ್ನು ಮುಕ್ತಮನದಿಂದ ನಿರೂಪಿಸಿರುವನು. ರಾಜನಾಗಿ, ಕಡು ನಿಷ್ಠೆಯ ಭಕ್ತನಾಗಿ, ಹಠಯೋಗಿಯಾಗಿ, ಶಿವಯೋಗಿಯಾಗಿ– ಹೀಗೆ ಇವನ ಬದುಕು ಹಲವು ಘಟ್ಟಗಳಲ್ಲಿ ವಿಶಿಷ್ಟ ಅನುಭವಗಳನ್ನು ಒದಗಿಸಿರುವುದರಿಂದ ಇವನ ವಚನಗಳಲ್ಲಿ ಬದುಕಿನ ಸಾರವತ್ತಾದ ನಿಲವುಗಳು ಮೈದುಂಬಿ ನಿಂತಿವೆ.

ಸಿದ್ಧರಾಮ ಹೇಳುವ ವೃಷಭಯೋಗೀಶ್ವರ ಯಾರೆಂಬುದು ನಿಚಿತವಾಗಿ ತಿಳಿಯದು. ಸ್ಕಂದಪುರಾಣದಲ್ಲಿ ಶಿಲಾದಮುನಿಯು ಶ್ರೀಶೈಲದ ನೈರುತ್ಯಭಾಗದಲ್ಲಿ ನೆಲಸಿ ಉಗ್ರ ತಪಸ್ಸನ್ನಾಚರಿಸಿ ಪ್ರಮಥಗಣೇಶ್ವರ ನಂದೀಶನನ್ನು ಪಡೆದನೆಂದು ಹೇಳಲಾಗಿದೆ. ಭೀಮಕವಿಯ ಬಸವಪುರಾಣದಲ್ಲೂ ಈ ವಿಷಯದ ಪ್ರಸ್ತಾಪವಿದೆ. ಶಿಲಾದಮುನಿಗೆ ಮಗನಾಗಿ ಬಂದ ನಂದೀಶ್ವರನೂ ತಂದೆಯಂತೆ ಮಹಾತಪಸ್ವಿ. ಈತನ ತಪಸ್ಸಿಗೆ ಮೆಚ್ಚಿದ ಶಿವ ಇವನನ್ನು ತನ್ನ ವಾಹನವನ್ನಾಗಿ ಮಾಡಿಕೊಂಡು 'ಸಮುನ್ನತ ಪ್ರಮ ಥೇಂದ್ರ ಪದವಿಯನ್ನು ಅನುಗ್ರಹಿಸಿ ಸರ್ವಜ್ಞತ್ವವನ್ನು ದಯಪಾಲಿಸುವನು (ಸಂ. ೨ ಪ. ೨೩–೨೫). ಈ 'ಪ್ರಮಥೇಂದ್ರ' 'ಸರ್ವಜ್ಞ'ನಾದ ವೃಷಭಯೋಗೀಶ್ವರನೇ ಕಲಿಯುಗದಲ್ಲಿ ಭಕ್ತಿಯನ್ನುದ್ಧರಿಸಲು ಮಾದರಸ-ಮಾದಲಾಂಬೆಯ ಮಗನಾಗಿ ಬಸವಣ್ಣ ನೆಂಬ ಹೆಸರಿನಿಂದ ಮರ್ತ್ಯದಲ್ಲಿ ಜನ್ಮವೆತ್ತಿದನು (ಸಂ. ೨ ಪ. ೩೭). ಸಿದ್ಧರಾಮ ಹೇಳು ತ್ತಿರುವುದು ಬಹುಶಃ ಮೇಲೆ ತಿಳಿಸಿರುವ ವೃಷಭಯೋಗೀಶ್ವರನನ್ನೇ ಇರಬಹುದು.

೯ ನೋಡಿ : ಸಕಳೇಶ ಮಾದರಸನ ವಚನಗಳು (ಸಕಲಪುರಾತನರ ವಚನಗಳು, ಸಂಪುಟ ೨ ಸಂ : ಡಾ. ಆರ್. ಸಿ. ಹಿರೇಮಠ).

**ಶಿವಯೋಗ :** ಶಿವಯೋಗಕ್ಕೆ ಪಂಚ ಅಂಗಗಳೆಂದೂ ಶಿವಜ್ಞಾನ, ಶಿವಭಕ್ತಿ, ಶಿವಧ್ಯಾನ, ಶಿವವ್ರತ, ಶಿವಾರ್ಚನಗಳು ಶಿವಯೋಗಸಾಧಕನಿಗೆ ಸಾಧನಗಳಾಗಿವೆಯೆಂದೂ ಚೆನ್ನಸದಾಶಿವಯೋಗಿಯು ಹೇಳುವನು (೧-೧೫). ಮಾನವಜನ್ಮ ಅಪೂರ್ವ. ಪ್ರಭು ವಿನ ಪ್ರಕಾರ 'ಆವನಾದಡೇನಯ್ಯ ಮಾನವನಪ್ಪುದರಿಂದಯ್ಯಾ. ಮಾನವನಾಗಿ ಕಿಂಚಿನ್ಮಾತ್ರ ಶಿವಜ್ಞಾನವಿಲ್ಲದಿದ್ದಡೆ ಶ್ವಾನಶರೀರವ ಹೊರೆದಂತೆ' (೯೬೫) ಶಿವಭಕ್ತಗೆ ಜಾತಿ ಸೂತಕಗಳಿಲ್ಲ. ಬಸವಣ್ಣ ಹೇಳುವಂತೆ '......ದೇವನ ಭಕ್ತಿ ಅಭಿಮಾನಿಯ ಜವ್ವನದಂತೆ!' (ವ. ೮೬೬). 'ಭಕ್ತಿಯೆಂಬ ನಿಧಾನವ ಸಾಧಿಸುವಡೆ ಶಿವಪ್ರೇಮವೆಂಬ ಅಂಜನವ ನೆಚ್ಚಿಕೊಂಬುದು' (ವ. ೨೪೩). '.....ಶಿವಬೀಜವಲ್ಲದವರಿಗೆ ವೇದ್ಯವಾಗದು ಶಿವಜ್ಞಾನ, ಶಿವಭಕ್ತಿ' (ವ. ೮೫೮) 'ತಿದ್ದಬಾರದ ಡೊಂಕು; ಕೂಡಲಸಂಗನ ಭಕ್ತಿ' (ವ. ೯೩೬). ಧ್ಯಾನ-ಅಧ್ಯಾತ್ಮದಿಂದಾಗಲೀ, ಜಪ-ತಪ-ನೇಮಗಳಿಂದಾಗಲೀ ಪರಮಾತ್ಮನನ್ನು ಪ್ರಮಾಣಿಸಲಾಗದು. ಭಾವದಿಂದ ಏಕರೂಪನ್ನು ಪ್ರಮಾಣಿಸಬೇಕು. ಆಗ ಆ ಏಕರೂಪವೇ ಪರಮಾತ್ಮನಾಗುವನು.[೧೦] ಪರಮಾತ್ಮನನ್ನು ಪ್ರಮಾಣಿಸಲು ಇಷ್ಟಲಿಂಗ ಮುಖ್ಯ ಸಾಧನ. ಗುರುವಿನಿಂದ ಹಸ್ತಮಸ್ತಕಸಂಯೋಗದ ಮೂಲಕ ಇಷ್ಟಲಿಂಗ ಪ್ರಾಪ್ತಿಯಾದ ಮೇಲೆ ಮಂತ್ರೋಪದೇಶವಾದ ಮೇಲೆ ಭಕ್ತ ಲಿಂಗಪ್ರಾಣಿಯಾಗುವನು. ಆ ನಂತರ ಅವನಿಗೆ ಶಿವಯೋಗವಲ್ಲದೆ ಮತ್ತೊಂದು ಯೋಗವಿಲ್ಲ. 'ನಾನು ನೀನೆಂಬ ಉಭಯವಳಿದು ಕೂಡುವ ಯೋಗದ ಹೊಲಬು' ತಿಳಿಯುವ ಪ್ರಯತ್ನವನ್ನು ಮಾಡಬೇಕು. ಭಕ್ತನ ಮನಸ್ಸು ಶಿವಯೋಗವಲ್ಲದೆ ಉಳಿದ ವ್ಯರ್ಥಯೋಗಗಳನ್ನು ತಿಳಿಯಲು ಒಡಂಬಡುವುದಿಲ್ಲ. ಸಿದ್ಧರಾಮನು ತನ್ನ ಬದುಕಿನಲ್ಲಿ ಶಿವಯೋಗದ ಅನುಷ್ಠಾನವಾಗಲು ಚನ್ನಬಸವಣ್ಣನು ಕಾರಣನೆಂದು ಹೇಳಿ, ಅವನನ್ನು ಅತ್ಯಂತ ಕೃತಜ್ಞತೆಯಿಂದ ಸ್ಮರಿಸುತ್ತಾ ಶಿವಯೋಗವಲ್ಲದವುಗಳನ್ನು ಅತಿಗಳೆದು ಇಷ್ಟಲಿಂಗವೇ 'ಉರುತರಪದ'ವೆಂದು ತೋರಿ ಕೊಟ್ಟು ನನ್ನನ್ನು ಶುದ್ಧ ಶಿವಯೋಗಿಯನ್ನಾಗಿ ಮಾಡಿದನು. ನಾನು ಚನ್ನಬಸವಣ್ಣನ ಕರುಣದಿಂದ ಅಭ್ಯಾಸಯೋಗವನ್ನು ಅತಿಗಳೆದು, ಶಿವಯೋಗದಲ್ಲಿ ನಿತ್ಯನಾಗಿ, ಭಕ್ತ, ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ ಎಂಬ ಷಡುಸ್ಥಳಕ್ಕೆ ಅಧಿಕಾರಿಯಾದೆನು. ಶರಣರ ಸಲುಗೆಗೆ ಒಳಗಾದೆನು. ಚನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಎಂದಿರುವನು (ವ ೧೦೩೯). ಚನ್ನಬಸವಣ್ಣ ಹೇಳುವಂತೆ ಸಪ್ತವ್ಯಸನಗಳನ್ನು ಬಿಟ್ಟು ಲಿಂಗವ್ಯಸನಿಯಾದವನೇ ಪ್ರಾಣಲಿಂಗಸಂಬಂಧಿ (ವ. ೮೭೨). ಪ್ರಭು ಹೇಳುವಂತೆ 'ತಪವೆಂಬುದು ತಗಹು, ನೇಮವೆಂಬುದು ಬಂಧನ, ಶೀಲವೆಂಬುದು ಸೂತಕ, ಭಾಷೆಯೆಂಬುದು ಪ್ರಾಣಘಾತಕ' ಶರಣನು ಈ ಚತುರ್ವಿಧದೊಳಗಲ್ಲ (ವ. ೧೦೧೭). ಶರಣನು ಒಡಲ 'ಗುಣಧರ್ಮರಹಿತ'ನಾಗಬೇಕು— ಬಂದುದನತಿಗಳೆದು ಬಾರದುದ ಬಯಸನಾಗಬೇಕು (ವ. ೧೦೧೯). 'ಸುತ್ತಿಸುಳಿವ ಮನವ ಚಿತ್ತ

೧೦ ನೋಡಿ : ಪ್ರಭು. ವ (೧೦೨೧).

ನಲ್ಲಿಂಬಿ, ಚಿತ್ತು ಬಯ'ಲಾಗುವಂತೆ ಸಾಧನೆ ನಡೆಸಬೇಕು (ವ. ೧೦೨೪). ಸಿದ್ಧರಾಮ ಹೇಳುವಂತೆ ಶಿವಾಚಾರಸಂಪನ್ನನಾಗಿ ಶಿವಯೋಗಮಾರ್ಗವನ್ನು ಅರಿತು ನಡೆಯು ವವರು ಲೌಕಿಕ ಪಾರಮಾರ್ಥಗಳೆರಡನ್ನೂ ಸಾಧಿಸುವರು. ಮೇಲಾಗಿ ಮಹಾಬಯಲಿ ನಲ್ಲಿ ಬಯಲಾಗುವರು (ವ. ೧೧೪೫). ಪ್ರಾರಂಭದಲ್ಲಿ ಶೈವನಾಗಿದ್ದು, ಕೆರೆ ದೇಗುಲ ಗಳನ್ನು ಕಟ್ಟಿಸಿ ಲೌಕಿಕದಲ್ಲಿ ಮುಳುಗಿಹೋಗಿದ್ದ, ಸ್ಥಾವರಲಿಂಗಪೂಜಕನಾಗಿದ್ದ ಸಿದ್ಧ ರಾಮನಿಗೆ ಚನ್ನಬಸವಣ್ಣನು ದೀಕ್ಷೆಯಿತ್ತು, ವೀರಶೈವನಾಗಿ ಪರಿವರ್ತಿಸಿದ ಮೇಲೆ ಅವ ನಲ್ಲಿ ಮಹತ್ವದ ಬದಲಾವಣೆ ತಲೆದೋರಿತು. ಪರವಸ್ತುವಿನ ಇರವು–ನಿಲವು ಅವನ ಅರಿವಿಗೆ ಶಿವಯೋಗದ ಮೂಲಕ ಪ್ರಾಪ್ತವಾಯಿತು, ನಿಲುಕಿತು. 'ಪ್ರಸಾದವ ಬಯಸಿ ಪರವನರಿಯದಿಪ್ಪುದೆ ಧ್ಯಾನ; ಶಿವನಲ್ಲದೆ 'ಅತಃಪರ'ವಿಲ್ಲೆಂದು ಅನ್ಯರ ಕೂಡೆ ನುಡಿಯದಿಪ್ಪುದೆ ಮೌನ; ವ್ರತಪಾಜಿಜಿಲ್ಲಿ ತದ್ಗತವಾಗಿಪ್ಪುದೆ ಸಮಾಧಿ'— ಹೀಗೆ ಆನಂದಮಯೀ ಶರಣನು ಜ್ಞಾನ-ಮೌನ-ಸಮಾಧಿಯಲ್ಲಿರುವುದೇ ಶಿವಯೋಗ ಎಂದು ಸಿದ್ಧರಾಮ ನಂಬಿದ್ದನು (ವ. ೧೦೪೭). 'ತೆಱಹಿಲ್ಲದ ಘನವು' ಇಷ್ಟಲಿಂಗದ ಕುರುಹನ್ನು ಹೊಂದಿ ಅಂಗೈಯಲ್ಲಿ ಬಂದು ನೆಲೆಗೊಳ್ಳಲು ಅವರವರ ಭಕ್ತಿಯೇ ಕಾರಣ. ಚಿನ್ಮಯನನ್ನು ಕಾಣಲು ಇಷ್ಟಲಿಂಗ ಮುಖ್ಯ ಸಾಧನವೆಂದು ದೃಢವಾಗಿ ನಂಬಿದ ಸಿದ್ಧರಾಮನು ಬಡವ ನಿಧಾನವ ಕಂಡಂತೆ, ಹಾರುವ ಮಹಳವ ಕಂಡಂತೆ, ಶಿಶು ತನ್ನ ತಾಯ ಕಂಡಂತೆ, ವೀರ ತಾನು ಪರಸೇನೆಯ ಕಂಡಂತೆ' ಗುರು ಚನ್ನಬಸ ವಣ್ಣನನ್ನು ನೋಡಿ ಹರುಷಿತನಾಗಿ 'ಮಾಡಿ ಮಾಡಿಸಾ ಉಪದೇಶವ, ನೋಡಿ ನೋಡಿಸಾ ಮಹಿಮೆಯ... ಕೊಡಿಸಾ ಎನ್ನ ಕೈಯಲ್ಲಿ ಇಷ್ಟಲಿಂಗವ' ಎಂದು ಪ್ರಾರ್ಥಿಸಿ (ವ. ೧೯೧) ಇಷ್ಟಲಿಂಗಧಾರಣೆ ಮಾಡಿಸಿಕೊಂಡನು. 'ಅಂತಕಾಂತಕ ಶ್ರೀಗುರು ಮೂರ್ತಿ ತನ್ನಱಿವಿನ ರೂಪವಿಂತೆಂದು ತೋಱಿದ ನಿಜಕಲ್ಲೇ ನಿಜಲಿಂಗ' (ವ. ೨೦೦) ಎಂಬ ಭಾವ ಸಿದ್ಧರಾಮನ ಮನದಲ್ಲಿ ಬಲಿದು ದೃಢಗೊಂಡಮೇಲೆ ಸ್ಥಾವರ ಲಿಂಗಪೂಜೆ ಅನಗತ್ಯವೆನಿಸಿತು. ತಾನು ನಿತ್ಯವೂ ಪೂಜಿಸುತ್ತಿದ್ದ ಸ್ಥಾವರಮೂರ್ತಿ ಯನ್ನು ಕುರಿತು 'ಎಲೆ ಕಪಿಲಸಿದ್ಧಮಲ್ಲಿನಾಥಯ್ಯಾ, ನಾ ಧರಿಸಿಕೊಂಬುವೆ ಲಿಂಗವ. ನೀ ಕರಸಿಕೊಂಬುವನಾಗು ಮತ್ತೊರ್ವನ ನಿನ್ನ ಪೂಜೆಗೆ; ನಾ ನಿನ್ನವನಲ್ಲೆಲೆ ದೇವಾ' (ವ. ೧೮೯) ಎನ್ನುವಲ್ಲಿನ ಅವನ ಸ್ಥಿರನಿಲವು ತುಂಬಾ ಆಶ್ಚರ್ಯಕರವಾದುದು. ಇಷ್ಟು ನೇರವಾಗಿ ಹೇಳಬೇಕಿದ್ದರೆ ಅವನ ಮನದಲ್ಲಾದ ಪರಿವರ್ತನೆ ಎಷ್ಟು ಅಗಾಧ ವಾದುದು ! ಊಹಿಸಿದರೆ ರೋಮಾಂಚನವಾಗುತ್ತದೆ.

ಚನ್ನಬಸವಣ್ಣ ನಿರೂಪಿಸಿರುವಂತೆ ಶಿವಾನುಗ್ರಹಕ್ಕೆ ಭಕ್ತಿ ಕಾರಣೀಭೂತವಾಗಿರು ವುದು. ಭಕ್ತಿಯಿಂದ ಪ್ರಾಪ್ತವಾಗುವ ಶಿವಾನುಗ್ರಹದಿಂದ ಇಹ-ಪರ ಸುಖ, ಪರಮಾ ನಂದ ಪ್ರಾಪ್ತಿಯಾಗುವುದು (ವ. ೪೭೪). ಮಂತ್ರ, ಹಠ, ಲಯ, ಜ್ಞಾನ ಯೋಗ ಗಳನ್ನು ಅರಿತು ಮರೆತು ಭಕ್ತಿಯೋಗದ ಮೇಲೆ ನಿಂತು ರಾಜಯೋಗದ ಮೇಲೆ ನಡೆದು

ನುಡಿಯಬೇಕು. ಆಗ ವಾಗತೀತವೂ, ಮನೋಽತೀತವೂ, ಭಾವಾತೀತವೂ, ನಿರಂಜನತ್ವವೂ, ಪರಮಪದವಿಯೂ ಲಭಿಸುತ್ತದೆ. ಇದು ಮಹಾಲಿಂಗೈಕ್ಯರ ನಿಲವು (ವ. ೧೪೫೭). ಸಿದ್ಧರಾಮನ ಒಂದು ಮಾತಿನಲ್ಲಿ ಹೇಳುವುದಾದರೆ ಪರಬ್ರಹ್ಮದ ಸೊಮ್ಮಾಗಿಪ್ಪುದು' ಶಿವಯೋಗ (ವ. ೧೧೪೬).

ಪ್ರಭುವು ಯೋಗದಲ್ಲಿ ಎರಡು ಬಗೆಯೆಂದು ಹೇಳುವನು. ಅಳಿದು ಕೂಡುವುದೊಂದು, ಅಳಿಯದೆ ಕೂಡುವುದೊಂದು —ಹೀಗೆ ಎರಡು ಯೋಗ (ವ. ೨೫೭). ಹಠಯೋಗದ ಅಷ್ಟಾಂಗಯೋಗಗಳಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳು— ಅಳಿದು ಕೂಡುವ ಯೋಗಕ್ಕೆ ಸಂಬಂಧಿಸಿದವು. ಇವನ್ನು 'ಪೂರ್ವಯೋಗ'ವೆಂದು ವಚನಕಾರರು ಕರೆಯುವರು. ಧ್ಯಾನ, ಧಾರಣ, ಸಮಾಧಿ–ಇವು ಮೂರು ಅಳಿಯದೆ ಕೂಡುವ ಯೋಗಕ್ಕೆ ಸಂಬಂಧಿಸಿವು. ಇವನ್ನು 'ಉತ್ತರಯೋಗ'ವೆಂದು ವಚನಕಾರರು ಕರೆಯುವರು. ಪ್ರಭು ಹೇಳುವಂತೆ ಈ ಎರಡು ಯೋಗಗಳಲ್ಲಿ 'ಅಳಿಯದೆ ಕೂಡುವ ಯೋಗವರಿದು'. ವಚನಕಾರರು ಹಠಯೋಗದ 'ಸಿದ್ಧಿ'ಯಿಂದ ವ್ಯಕ್ತಿಯಲ್ಲಿ ತಲೆದೋರಬಹುದಾದ ಅಹಿತ ಪರಿಣಾಮಗಳನ್ನು ಮನಗಂಡು ಅದರ ಬಗೆಗೆ ತಮ್ಮ ಅಸಹನೆ ವ್ಯಕ್ತಪಡಿಸಿರುವರೇ ಹೊರತು ಅವರು ಹಠಯೋಗವನ್ನು ತ್ಯಾಜ್ಯವೆಂದು ಸಾರಹೊರಟಿಲ್ಲ. ಚನ್ನಸದಾಶಿವಯೋಗಿಯು ಹಠಯೋಗದಿಂದ ಜ್ಞಾನಪ್ರಾಪ್ತಿಯಾಗುತ್ತದೆ. ಶರೀರದಲ್ಲಿರುವ ತಮೋಗುಣಾದಿ ರೂಪವಾದ ಶ್ಲೇಷ್ಮಾದಿ ದೋಷಗಳು ಹಠಯೋಗದಿಂದ ನಾಶವಾಗಲು, ಚೆನ್ನಾಗಿ ಜ್ಞಾನದ ಅಭಿವ್ಯಕ್ತಿಯಾಗುತ್ತದೆ. ಆ ಜ್ಞಾನದಿಂದ ಶಿವತ್ವಾಭಿವ್ಯಕ್ತಿರೂಪವಾದ ಶಿವಯೋಗವು ಪ್ರಾಪ್ತವಾಗುವುದು. ಆ ಜ್ಞಾನಯೋಗಗಳ ಸಿದ್ಧಿಗಾಗಿ, ವಿವೇಕಿಯಾದವನು ಲೋಕದಲ್ಲಿ ಶರೀರವನ್ನು ರಕ್ಷಿಸಬೇಕು (೨.೨) ಎಂದಿರುವನು. ವಚನಕಾರರು ಪಾತಂಜಲಿಯು ಯೋಗಸೂತ್ರದಲ್ಲಿ ವಿವರಿಸಿರುವ ಹಠಯೋಗದ ಅಷ್ಟಾಂಗಗಳನ್ನು ಶಿವಪೂಜಾಂಗಗಳನ್ನಾಗಿ ಮಾರ್ಪಡಿಸಿ, ಶಿವಯೋಗದ ಏಕಾಗ್ರತೆಗೆ ಹಠಯೋಗವು ಸಾಧನವೆಂದು ನಿರೂಪಿಸಿರುವರು (ಚನ್ನಸದಾಶಿವಯೋಗಿಯು ಸಹಾ ಇದೇ ರೀತಿ ಮಾರ್ಪಡಿಸಿಕೊಂಡಿದ್ದು, ಹಠಯೋಗಕ್ಕೆ ಯಮ, ನಿಯಮ, ಆಸನ, ಪ್ರಾಣಾಯಾಮಗಳು ಬಾಹ್ಯಚತುರಂಗಗಳೆಂದೂ ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿಗಳು ಅಭ್ಯಂತರ ಚತುರಂಗಗಳೆಂದೂ ಹೇಳಿ ಈ ಅಷ್ಟಾಂಗಗಳಿಂದ ಶಿವನನ್ನು ಪೂಜಿಸಬೇಕು ಎಂದು ಆ ಪೂಜಾವಿಧಾನವನ್ನು ವಿವರಿಸಿರುವನು)[೧೧]. ತೋಂಟದ ಸಿದ್ಧಲಿಂಗ

೧೧ ನೋಡಿ : ಶಿವಯೋಗಪ್ರದೀಪಿಕಾ ೨. ೪-೬.

ಶಿವಯೋಗಿಯು ವೀರಶೈವಪರವಾದ ಅಷ್ಟಾಂಗಯೋಗಗಳ ಲಕ್ಷಣಗಳನ್ನು ಹೀಗೆ ಹೇಳುವನು[೧೨]:

**ಯಮಯೋಗ :** ಅನೃತ, ಹಿಂಸೆ, ಪರಧನ, ಪರಸ್ತ್ರೀ, ಪರನಿಂದೆ— ಇವನ್ನು ಬಿಟ್ಟು ಲಿಂಗಪೂಜೆಯ ಮಾಡುವುದು.

**ನಿಯಮಯೋಗ :** ಬ್ರಹ್ಮಚಾರಿಯಾಗಿ ನಿರಪೇಕ್ಷಕನಾಗಿ ಆಗಮಧರ್ಮಗಳಲ್ಲಿ ನಡೆವವನು ಶಿವನಿಂದೆಯ ಕೇಳದಿಹನು, ಇಂದ್ರಿಯಂಗಳ ನಿಗ್ರಹವ ಮಾಡುವನು. ಮಾನಸ, ವಾಚಸ, ಉಪಾಂಶಿಕವೆಂಬ ತ್ರಿಕರಣದಲ್ಲಿ ಪ್ರಣವಪಂಚಾಕ್ಷರಿಯನ್ನು ಸ್ಮರಿಸುತ್ತ ಶುಚಿಯಾಗಿರುವನು, ಅಶುಚಿತ್ವವ ಬಿಟ್ಟು ವಿಭೂತಿ ರುದ್ರಾಕ್ಷಿಯ ಧರಿಸಿ ಶಿವಲಿಂಗಾರ್ಚನಾತತ್ಪರನಾಗಿ ಪಾಪಕ್ಕೆ ಭೀತನಾಗಿರುವನು.

**ಆಸನಯೋಗ :** ಸಿದ್ಧಾಸನ, ಪದ್ಮಾಸನ, ಸ್ವಸ್ತಿಕಾಸನ, ಅರ್ಧಚಂದ್ರಾಸನ, ಪರ್ಯಂಕಾಸನ— ಈ ಐದು ಆಸನಯೋಗಗಳಲ್ಲಿ ಸ್ವಸ್ಥಿರಚಿತ್ತನಾಗಿ ಮೂರ್ತಿಗೊಂಡು ಶಿವಲಿಂಗಾರ್ಚನೆ ಮಾಡುವುದು.

**ಪ್ರಾಣಾಯಾಮ :** ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯ— ಇವು ದಶವಾಯುಗಳು[೧೩]. ಪ್ರಾಣವಾಯುವು ಇಂದ್ರನೀಲವರ್ಣದಿಂದ ಕೂಡಿದ್ದು ಹೃದಯಸ್ಥಾನದಲ್ಲಿದೆ. ಇದು ಉಂಗುಷ್ಟದಿಂದ ತೊಡಗಿ ಪ್ರಾಣದ ತುದಿಯ ವರೆಗೆ ಸಂಪ್ರಾಣಿಸಿಕೊಂಡು ಉಚ್ಛ್ವಾಸ ನಿಶ್ವಾಸಗಳನ್ನೂ ಅನ್ನ ಜೀರ್ಣವನ್ನೂ ಮಾಡಿಸುವುದು. ಅಪಾನವಾಯುವು ಹರಿತವರ್ಣದಿಂದ ಕೂಡಿದ್ದು ಗುದಸ್ಥಾನದಲ್ಲಿದೆ. ಇದು ಮಲಮೂತ್ರಗಳ ವಿಸರ್ಜನೆ ಮಾಡಿಸಿ ಅಧೋದ್ವಾರವನ್ನು ಬಲಿದು ಅನ್ನರಸವ್ಯಾಪ್ತಿಯನ್ನು ಮಾಡಿಸುವುದು. ವ್ಯಾನವಾಯುವು ಗೋಕ್ಷೀರವರ್ಣದಿಂದ ಕೂಡಿದ್ದು ಸರ್ವಸಂದಿಗಳಲ್ಲಿದೆ. ಇದು ನೀಡಿಕೊಂಡಿರುವುದನ್ನು ಮುದುಡಿಕೊಂಡಿರುವುದನ್ನು ಸರಿಗೊಳಿಸಿ ಅನ್ನಪಾನವ

---

೧೨ ಷಟ್‌ಸ್ಥಲಜ್ಞಾನಸಾರಾಮೃತ, ವ. ೩೬೪.
ಅಷ್ಟಾಂಗಯೋಗಕ್ಕೆ ನಿಜದಂಗವಾಗಿರುವ ಅಷ್ಟಾಂಗಯೋಗಗಳ ಲಕ್ಷಣಗಳನ್ನು ಷಣ್ಮುಖಶಿವಯೋಗಿಯೂ ಹೇಳಿರುವನು (ವ. ೪೮೮–೪೯೫). ಇವನಲ್ಲಿ ಈ ಲಕ್ಷಣಗಳು ವಿಸ್ತಾರವಾಗಿ ನಿರೂಪಿತವಾಗಿವೆ.

೧೩ ಚೆನ್ನಬಸವಣ್ಣನು ವಚನವೊಂದರಲ್ಲಿ ದಶವಾಯುಗಳು, ಅವುಗಳ ಸ್ಥಾನ, ಕಾರ್ಯಗಳನ್ನು ಹೇಳಿ ವಾಯುಪ್ರಾಣಿಯು ಲಿಂಗಪ್ರಾಣಿಯಾಗುವುದೇ 'ಯೋಗ' ಎಂದು ವಿವರಿಸಿರುವನು (ವ. ೮೬೯, ೮೭೦). ದಶವಾಯುಗಳನ್ನು ದಶಸ್ಥಾನಗಳಲ್ಲಿ ನಿಲಿಸಿ ಭಕ್ತಿ ಮಾಡುವುದನ್ನು ಹೇಳಿ ಅಂತಹ ಪ್ರಾಣಲಿಂಗಸಂಬಂಧಿಯ ನಿಲವನ್ನು ಚೆನ್ನಬಸವಣ್ಣ ಅರ್ಥಪೂರ್ಣವಾಗಿ ತಿಳಿಯಪಡಿಸಿರುವನು (ನೋಡಿ : ವ. ೧೦೮೬).

ತುಂಬಿಸುವುದು. ಉದಾನವಾಯುವು ಎಳೆಮಿಂಚಿನ ವರ್ಣದಿಂದ ಕೂಡಿದ್ದು ಕಂಠಸ್ಥಾನ ದಲ್ಲಿದೆ. ಸೀನುವ, ಕೆಮ್ಮುವ, ಕನಸುಕಾಣುವ, ಏಳಿಸುವ, ವರ್ಜ್ಯ ನಿರೋಧಗಳನ್ನು ಮಾಡಿಸುವ ಕಾರ್ಯ ನೆರವೇರಿಸುವುದು. ಇದು ಅನ್ನರಸ ಆಹಾರ ಸ್ಥಾಪನ ಮಾಡಿಸು ವುದು. ಸಮಾನವಾಯುವು ನೀಲವರ್ಣದಿಂದ ಕೂಡಿದ್ದು ನಾಭಿಸ್ಥಾನದಲ್ಲಿದೆ. ಇದು ಪಾದದಿಂದ ತಲೆಯ ವರೆಗೆ ದೇಹವನ್ನು ಹರಡಿಕೊಂಡಿರುವ ಅನ್ನರಸವನ್ನು ಎಲ್ಲಾ ರೋಮನಾಳಗಳಿಗೆ ಹಂಚುವುದು. ಈ ಐದು ಪ್ರಾಣಪಂಚಕಗಳು. ನಾಗವಾಯುವು ಪೀತವರ್ಣದಿಂದ ಕೂಡಿದ್ದು ರೋಮನಾಳಗಳಲ್ಲಿದೆ. ಇದು ಚಲನೆಯಿಲ್ಲದೆ ಹಾಡಿ ಸುತ್ತಿರುವುದು. ಕೂರ್ಮವಾಯುವು ಶ್ವೇತವರ್ಣದಿಂದ ಕೂಡಿದ್ದು ಉದರ ಲಲಾಟ ದಲ್ಲಿದ್ದು ಇದು ಶರೀರವನ್ನು ಹೊಂದಿ ಪುಷ್ಟಿಯನ್ನುಂಟುಮಾಡಿ ಬಾಯನ್ನು ಮುಚ್ಚುವ- ತೆರೆಯುವ; ಕಣ್ಣನ್ನು ಅರಳಿಸುವ ಕಾರ್ಯ ಮಾಡಿಸುವುದು ಕೃಕರ ವಾಯುವು ಅಂಜನವರ್ಣದಿಂದ ಕೂಡಿದ್ದು ನಾಸಿಕಾಗ್ರದಲ್ಲಿದೆ. ಹಸಿವು ಬಾಯಾರಿಕೆ ಮೊದಲಾದ ದೈಹಿಕಕ್ರಿಯೆಗಳನ್ನು ನಡೆಸುವುದು. ದೇವದತ್ತವಾಯುವು ಸ್ಫಟಿಕವರ್ಣ ದಿಂದ ಕೂಡಿದ್ದು ಗುಹ್ಯಸ್ಥಾನದಲ್ಲಿರುವುದು. ಇದು ಕುಳಿತಿದ್ದಲ್ಲಿ ಮಲಗಿಸಿ, ಮಲಗಿದ್ದಲ್ಲಿ ಏಳಿಸಿ, ನಿಲ್ಲಿಸಿ, ಚೈತನ್ಯಗೊಳಿಸಿ, ಮಾತನಾಡಿಸುವುದು. ಧನಂಜಯವಾಯುವು ನೀಲ ವರ್ಣದಿಂದ ಕೂಡಿದ್ದು ಬ್ರಹ್ಮರಂಧ್ರದಲ್ಲಿದೆ. ಇದು ಕಿವಿಯಲ್ಲಿ ಸಮುದ್ರಘೋಷವನ್ನು ಕೇಳಿಸುವುದು. ಮರಣಕಾಲಕ್ಕೆ ನಿರ್ಘೋಷವಾಗುವುದು. ಹೀಗೆ ಮೂಲವಾಯುವು ಸರ್ವಾಂಗದಲ್ಲಿ ಸರ್ವತೋಮುಖವಾಗಿ ಚಲಿಸುವುದು. ಆ ವಾಯುವಿನೊಡನೆ ಪ್ರಾಣವು ಸೇರಿ, ಪ್ರಾಣದೊಡನೆ ವಾಯು ಸೇರಿ, ಹೃದಯಸ್ಥಾನದಲ್ಲಿ ನಿಂತು, ಹಂಸ ನೆನಿಸಿಕೊಂಡು ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯುಗಳೆಂಬ ಷಡ್ಚಕ್ರಗಳ ಮೇಲೆ ಸುಳಿದು ನವನಾಳಗಳಲ್ಲಿ ಚರಿಸುವುದು. ಅಷ್ಟ ದಳಂಗಳೆ ಆಶ್ರಯವಾಗಿ ಅಷ್ಟದಳಂಗಳ ಮೆಟ್ಟಿ ಚರಿಸುವ ಹಂಸನು ಅಷ್ಟದಳಂಗಳಿಂದ ವಿಶುದ್ಧಿಚಕ್ರವನೆಯ್ದಿ ಅಲ್ಲಿಂದ ನಾಸಿಕಾಗ್ರದಲ್ಲಿ ಹದಿನಾರಂಗುಲಪ್ರಮಾಣದಲ್ಲಿ ಹೊರ ಸೂಸುತ್ತಿರುವುದು: ಹನ್ನೆರಡಂಗುಲಪ್ರಮಾಣ ಒಳಗೆ ತುಂಬುತ್ತಿರುವುದು. ಹೀಗೆ ರೇಚಕಪೂರಕದಿಂದ ವಾಯು ಚರಿಸುತ್ತಿರಲು ಸಮಸ್ತ ಪ್ರಾಣಿಗಳ ಆಯುಷ್ಯವು ದಿನದಿನಕ್ಕೆ ಕುಂದುವುದು. ಹೀಗೆ ಈಡಾ ಭೇದವನ್ನರಿತು ಮನ ವಾಯುಗಳ ಮೇಲೆ ಪಿಂಗಳಾದಲ್ಲಿ ಚರಿಸುವ ರೇಚಕಪೂರಕಗಳ ಲಿಂಗವ ಸಂಬಂಧಿಸಿ. ಮನ ವಾಯು ಪ್ರಾಣಗಳನ್ನು ಲಿಂಗದೊಡನೆ ಕೂಡಿ, ಲಿಂಗಸ್ವರೂಪವ ಮಾಡಿ, ವಾಯುಪ್ರಾಣತ್ವವ ಕಳೆದು ಲಿಂಗಪ್ರಾಣಿಯ ಮಾಡಿ ಹೃದಯಕಮಲ ಮಧ್ಯದಲ್ಲಿ ಪ್ರಣವಮಂತ್ರವನ್ನು ಉಚ್ಚರಿಸುತ್ತಾ ಪರಶಿವಧ್ಯಾನದಲ್ಲಿ ಏಕವಾಗಿರುವುದು.

**ಪ್ರತ್ಯಾಹಾರ :** ಆಹಾರದಿಂದ ನಿದ್ರೆ, ನಿದ್ರೆಯಿಂದ ಇಂದ್ರಿಯಗಳು, ಇಂದ್ರಿಯಗಳಿಂದ ವಿಷಯಗಳು ಹೆಚ್ಚುತ್ತಿರುವವು. ಆ ವಿಷಯವಾಸನೆಯಿಂದ ದುಃಕರ್ಮಗಳನ್ನು ಹೆಚ್ಚು

ಮಾಡಿ ಜೀವನಿಗೆ ಜನ್ಮಜನ್ಮಗಳ ಬಂಧನವನ್ನುಂಟುಮಾಡಿ ಅಜ್ಞಾನಕರ್ಮಿಗಳು ಶ್ರಮಿಸುತ್ತಿರುವರು. ಈ ಅವಸ್ಥೆಯೆನ್ನು ಸುಜ್ಞಾನಿಗಳು ಹೋದರು. ಈ ಅವಸ್ಥೆಯನ್ನು ಹೊಂದದಿರಲು ಸುಜ್ಞಾನಿಗಳು ಆಹಾರವನ್ನು ಕ್ರಮುಕ್ರಮವಾಗಿ ಸೇವಿಸುತ್ತ ಬರಬೇಕು. ಗುರುಕೃಪೆಯಿಂದ ಹೀಗೆ ಸರ್ವೇಂದ್ರಿಯಗಳನ್ನುಲಿಂಗಮುಖವಾಗಿ ಶಾಂತಗೊಳಿಸುವುದು.

**ಧ್ಯಾನಯೋಗ :** ಅಂತರಂಗಶುದ್ಧ ಪರಮಾತ್ಮಲಿಂಗವನ್ನೇ ಶಿವಲಿಂಗಸ್ವರೂಪವನ್ನಾಗಿ ಮಾಡಿ ಶ್ರೀಗುರುವು ಶಿಷ್ಯನ ಕರಸ್ಥಲಕ್ಕೆ ತಂದುಕೊಟ್ಟಿರುವುದರಿಂದ ಆ ಶಿವಲಿಂಗವೇ ಪರಮಾತ್ಮಲಿಂಗ ಚಿಹ್ನೆಯೆಂದು ತಿಳಿದು ಆಧಾರ, ಸ್ವಾಧಿಷ್ಠಾನ. ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೇಯ, ಬ್ರಹ್ಮರಂಧ್ರ ಮುಖ್ಯವಾದ ಸ್ಥಾನಗಳಲ್ಲಿ ಆ ಶಿವಲಿಂಗಮೂರ್ತಿಯನ್ನು ಆಹ್ವಾನ ವಿಸರ್ಜನೆಯಿಲ್ಲದೆ ಧ್ಯಾನಿಸುವುದು.

**ಧಾರಣಯೋಗ :** ಇಷ್ಟಲಿಂಗವನ್ನು ಭಾವ, ಕರಣ, ಮನ ಮುಖ್ಯವಾದ ಸರ್ವಾಂಗದಲ್ಲಿ ಧರಿಸುವುದು.

**ಸಮಾಧಿಯೋಗ :** ಸತ್ಕ್ರಿಯಾಜ್ಞಾನಯೋಗದಿಂದ ಪ್ರಾಣನಿಗೆ ಶಿವಕಳೆಯನ್ನು ಸಂಬಂಧಿಸಿ ಇಷ್ಟಪ್ರಾಣಭಾವವೆಂಬ ಲಿಂಗತ್ರಯವನ್ನು ಏಕಾಕಾರವನ್ನಾಗಿ ಮಾಡಿ ಅಖಂಡಪರಿಪೂರ್ಣಕೇವಲಪರಂಜ್ಯೋತಿಸ್ವರೂಪವಾಗಿರುವ ಮಹಾಲಿಂಗದೊಳಗೆ ಕೂಡಿ ಭಿನ್ನವಿಲ್ಲದೆ ಏಕಾರ್ಥವಾಗಿರುವುದು.

ಈ ಅಷ್ಟಾಂಗಯೋಗದಲ್ಲಿ ಶಿವಲಿಂಗಾರ್ಚನೆಯನ್ನು ಮಾಡಿ ಶಿವತತ್ವದೊಡನೆ ಕೂಡುವುದೇ, 'ಲಿಂಗಾಂಗಯೋಗ'

ಹೀಗೆ ಹಠಯೋಗರೂಪದಲ್ಲಿರುವ ಅಷ್ಟಾಂಗಗಳನ್ನು ನಿರಾಲಸ್ಯದಿಂದ ಎಡೆಬಿಡದೆ ಮಾಡಿದರೆ "ಮೊದಲನೆಯ ವರ್ಷದಲ್ಲಿ ನಿರೋಗಿಯಾಗಿ ಸಕಲಜನಪ್ರೀತನಾಗುವನು. ಎರಡನೆಯ ವರ್ಷದಲ್ಲಿ ಸುಸಂಸ್ಕೃತಭಾಷೆಯಿಂದ ಕವಿತ್ವಮಂ ಮಾಡುವನು. ಮೂರನೇ ವರ್ಷದಲ್ಲಿ ಸರ್ಪಾದಿ ದುಷ್ಟಪ್ರಾಣಿಗಳಿಂದ ಬಾಧಿಸಿಕೊಳ್ಳುತಿರನು. ನಾಲ್ಕನೆಯ ವರ್ಷದಲ್ಲಿ ಹಸಿವು, ತೃಷೆ. ವಿಷಯ, ನಿದ್ರೆ, ಶೋಕ, ಮೋಹಾದಿಗಳಂ ಬಿಡುವನು. ಐದನೆಯ ವರ್ಷದಲ್ಲಿ ದೂರಶ್ರವಣ. ವಾಕ್ಸಿದ್ಧಿ, ಪರಕಾಯಪ್ರವೇಶಾಧಿಕ ಉತ್ಕೃಷ್ಟನಹನು. ಆರನೆಯ ವರ್ಷದಲ್ಲಿ ವಜ್ರಾದ್ಯಾಯುಧಗಳಿಂದೆ ಭೇದಿಸಲ್ಪಡದಾತನಾಗಿ ಶೀಘ್ರಗಾಮಿಯಾಗಿ ದೂರದರ್ಶನ ಉತ್ಕೃಷ್ಟನಾಗುವನು. ಏಳನೆಯ ವರ್ಷದಲ್ಲಿ ಖೇಚರಗಾಮಿಯಾಗುವನು. ಎಂಟನೆಯ ವರ್ಷದಲ್ಲಿ ಅಣಿಮಾದಿ ಅಷ್ಟಮಹದೈಶ್ವರ್ಯಸಂಪನ್ನನಾಗುವನು. ಒಂಬತ್ತನೆಯ ವರ್ಷದಲ್ಲಿ ಮನೋಯೋಗಿಯಾಗಿ ಇಚ್ಛಾವಿಷಯಂಗಳ ಪಡೆಯುವನು. ಹನ್ನೊಂದನೆಯ ವರ್ಷದಲ್ಲಿ ಸಕಲಲೋಕಂಗಳಿಗೆ ಆಜ್ಞಾಕರ್ತೃವಾಹನು. ಹನ್ನೆರಡನೆಯ ವರ್ಷದಲ್ಲಿ ಶಿವನ ಸಮಾನವಾಗಿ ಸೃಷ್ಟಿ ಸ್ಥಿತಿ ಲಯಂಗಳಂ ಮಾಡುತ್ತಿ"ರುವನು ಎಂದು ಲಭ್ಯವಾಗುವ ಹಠಯೋಗಸಿದ್ಧಿಗಳನ್ನು ಷಣ್ಮುಖಶಿವಯೋಗಿಯು ಪಟ್ಟಿಮಾಡಿಕೊಟ್ಟಿರುವನು (ವ. ೪೯೬).

ಶಿವಯೋಗವು ವೀರಶೈವತತ್ತ್ವಗಳ ಹಿನ್ನೆಲೆಯಲ್ಲಿಯೇ ಪ್ರತಿಪಾದಿತವಾಗಿದೆ. 'ಮಂತ್ರಯೋಗ'ದ ವಿಚಾರ ಅಷ್ಟಾವರಣಗಳಲ್ಲಿ ಒಂದಾದ 'ಮಂತ್ರ'ದಲ್ಲಿ ವಿವರಿಸಲಾಗಿದೆ. 'ಲಯಯೋಗ'ವು ಭಕ್ತನ ಶಿವಪೂಜಾಕ್ರಮದಲ್ಲಿ ಸೇರ್ಪಡೆಯಾಗಿದೆ. ಲಿಂಗಧ್ಯಾನಿಯು ಲಿಂಗಧ್ಯಾನದಲ್ಲಿ ಮಗ್ನನಾಗಿ ಇಷ್ಟ–ಪ್ರಾಣ–ಭಾವಗಳಲ್ಲಿ ಲೀನನಾಗುವನು. 'ಹಠಯೋಗ'ವು ಕೆಲವು ಮುಖ್ಯ ಸಿದ್ಧಾಸನ, ಪದ್ಮಾಸನ, ಸ್ವಸ್ತಿಕಾಸನ, ಅರ್ಧಚಂದ್ರಾಸನ, ಪರ್ಯಂಕಾಸನ— ಈ ಆಸನಗಳ ಮೂಲಕ ಹಾಗೂ ಲಿಂಗಧ್ಯಾನದ ಮೂಲಕ ಷಟ್‌ಚಕ್ರಗಳನ್ನು ಪ್ರೇರೇಪಿಸುವುದಾಗಿದೆ. 'ರಾಜಯೋಗ'ವು ಶಿವಯೋಗದಿಂದ ಹೆಚ್ಚು ಭಿನ್ನವಿಲ್ಲ. ಶಿವಯೋಗದಲ್ಲಿ ಅಷ್ಟಾವರಣ, ಏಕೋತ್ತರಶತಸ್ಥಲದಲ್ಲಿನ ವಿಶಿಷ್ಟ ಆಚರಣೆಗಳನ್ನು ಅಳವಡಿಸಲಾಗಿದೆ. ವಚನಕಾರರು ಷಟ್‌ಸ್ಥಲಾಚರಣೆಯನ್ನು ನಡೆಸುವ ಲಿಂಗವಂತನನ್ನು ಶಿವಯೋಗಿಯೆಂದೇ ಕರೆದಿರುವರು. ಷಟ್‌ಸ್ಥಲದ ಭಕ್ತ, ಮಹೇಶ ಸ್ಥಲಗಳಲ್ಲಿ ನೈತಿಕವಾದ ವಿಷಯಗಳನ್ನು ವಿಸ್ತಾರವಾಗಿ ವಿವೇಚಿಸಲಾಗಿದೆ. ಯಮ, ನಿಯಮಗಳು ಭಕ್ತನಲ್ಲಿ ನೈತಿಕ ನೆಲೆಗಟ್ಟನ್ನು ಭದ್ರಗೊಳಿಸುತ್ತವೆ. ನೈತಿಕವಾಗಿ ದುಡಿದು ನಡೆಯುವುದು ಮಹೇಶ್ವರಸ್ಥಲದ ಆಚರಣೆಯಾಗುತ್ತದೆ. ಪ್ರಸಾದಿ ಪ್ರಾಣಲಿಂಗಿ ಸ್ಥಲಗಳಲ್ಲಿ ಅಂತರಂಗಶುದ್ಧತೆಗೆ ಪ್ರಾಧಾನ್ಯ. ಇಂದ್ರಿಯಚಾಪಲ್ಯಗಳಿಗೆ ಕಡಿವಾಣ ಅಗತ್ಯ. ಇಂದ್ರಿಯಗಳು ತಹಬಂದಿಗೆ ಬಂದರೆ ಮನಸ್ಸಿನ ಏಕಾಗ್ರತೆ ಸಾಧಿಸಲು ಸುಲಭ. ಚಿತ್ತಚಾಂಚಲ್ಯವನ್ನು ನಿವಾರಿಸಲು ಆಸನ, ಪ್ರಾಣಾಯಾಮ, ಪ್ರತ್ಯಾಹಾರಗಳು ಮುಖ್ಯ ಸಾಧನಗಳು. ಅತ್ತ ಇತ್ತ ಚಲಿಸುವ ಮನವನ್ನು ಒಂದೆಡೆ ಕಟ್ಟಿ ನಿಲ್ಲಿಸಿದರೆ ಕ್ರಮೇಣ ಮಾನಸಿಕಬಲ ಬೆಳೆದು ಷಟ್‌ಚಕ್ರಗಳಲ್ಲಿ ಮಹತ್ತರವಾದ ಶಕ್ತಿಯೊಂದು ಉದ್ಭವಿಸುತ್ತದೆ. ಪ್ರಸಾದಿ ಪ್ರಾಣಲಿಂಗಿ ಸ್ಥಲಗಳಲ್ಲೇ ಈ ಶಕ್ತಿವಿಶೇಷವು ಪ್ರಾಪ್ತವಾಗುವುದು. ಶರಣಸ್ಥಲದಲ್ಲಿ ಬರುವವು ಧ್ಯಾನ, ಧಾರಣಗಳು. ಶರಣನು ಪರಂಜ್ಯೋತಿರೂಪಾಗಿರುವ ಇಷ್ಟಲಿಂಗವನ್ನು ಆಧಾರ, ಸ್ವಾಧಿಷ್ಠಾನ, ಮಣಿಪೂರಕ, ಅನಾಹತ, ವಿಶುದ್ಧಿ, ಆಜ್ಞೆ, ಬ್ರಹ್ಮರಂಧ್ರ —ಈ ಸ್ಥಾನಗಳಲ್ಲಿ ಧ್ಯಾನಿಸಿ ಅಲ್ಲಿ ಷಡ್ಲಿಂಗಗಳನ್ನು ನೆಲೆಗೊಳಿಸುವನು. ಇದು ಧ್ಯಾನದ ಸ್ಥಿತಿ. ಹೀಗೆ ಷಟ್ಚಕ್ರಗಳನ್ನು ಷಡ್ಲಿಂಗಗಳಲ್ಲಿ ನೆಲೆಗೊಳಿಸಿ ಅವು ತನ್ನ ಭಾವ-ಕರಣ-ಮನ ಮುಖ್ಯವಾದ ಸರ್ವಾಂಗಗಳಲ್ಲಿ ಹರಡುವಂತೆ ಮಾಡುವನು. ಇದು ಧಾರಣದ ಸ್ಥಿತಿ. ಐಕ್ಯಸ್ಥಲದಲ್ಲಿ ಸಮಾಧಿಯೋಗವು ಬರುವುದು. ಸತ್ಕ್ರಿಯಾಜ್ಞಾನಸಂಬಂಧದಿಂದ ಇಷ್ಟಪ್ರಾಣಭಾವಗಳಿಗೆ ಶಿವಕಳೆಯು ಪ್ರಾಪ್ತವಾಗುತ್ತದೆ. ಇಷ್ಟಪ್ರಾಣಭಾವಗಳೆಂಬ ಲಿಂಗತ್ರಯವನ್ನು ಏಕಾಕಾರಮಾಡಿ ಅಖಂಡಪರಿಪೂರ್ಣಕೇವಲಪರಂಜ್ಯೋತಿಸ್ವರೂಪವಾಗಿರುವ ಮಹಾಲಿಂಗದೊಳಗೆ ಕೂಡಿ ಭಿನ್ನವಿಲ್ಲದೆ ಏಕವಾಗಿರುವುದೇ ಸಮಾಧಿಯೋಗ. ಹೀಗೆ ಶಿವಯೋಗವು ವೀರಶೈವದಲ್ಲಿ ಪ್ರಧಾನವಾಗಿರುವ ಷಟ್‌ಸ್ಥಲದಲ್ಲಿ ಅಷ್ಟಾಂಗಯೋಗಗಳನ್ನು ಗರ್ಭೀಕರಿಸಿರುವುದು. ಪಾತಂಜಲಿಯು, ತನ್ನ ಯೋಗಸೂತ್ರಗಳಲ್ಲಿ ಹೇಳಿರುವ ಅಷ್ಟಾಂಗಯೋಗಗಳನ್ನು ಶಿವಯೋಗವು ತನಗೆ ಅನುಕೂಲಿಸುವಂತೆ

ಮಾರ್ಪಡಿಸಿಕೊಂಡಿರುವುದು. ಶಿವಯೋಗದಲ್ಲಿ ಅಷ್ಟಾಂಗಯೋಗಗಳೇ ಪ್ರಧಾನವಲ್ಲ. ವಲ್ಲಿ. ವಚನಕಾರರು ಅಷ್ಟಾಂಗಯೋಗಕ್ಕಿಂತಲೂ ನಿರ್ಗುಣಯೋಗಕ್ಕೆ ಹೆಚ್ಚು ಮಹತ್ವ ನೀಡಿರುವರು. "ಅಷ್ಟಾವರಣದ ಹಣ್ಣು ಹಣ್ಣು ಬಟ್ಟಬಯಲೊಳಗಿರಲು । ಅಷ್ಟಾಂಗ ಯೋಗಗಳ ಮಾಡಿ ಬಳಲುವರು । ದೃಷ್ಟಿಲಿರುವುದನು ಮುಚ್ಚಿವರು" ಎಂಬ ಮಹಾದೇವಿಯಕ್ಕನ 'ಯೋಗಾಂಗತ್ರಿವಿಧಿ'ಯು[೧೪] ಅಭಿಮತವನ್ನೇ ಮೇಲಿನ ಮಾತಿಗೆ ನಿದರ್ಶನವಾಗಿ ಸ್ವೀಕರಿಸಬಹುದು. ಪ್ರಭುವಿನ ಪ್ರಕಾರ ಅಷ್ಟಾಂಗಯೋಗಾಭ್ಯಾಸದಿಂದ ಪರವಸ್ತುವನ್ನು ಕಾಣುವೆನೆಂದರೆ ಅದು ಆಯಾಸದ ಕೆಲಸ. ತಾನೆಂಬ ಅಹಂಕಾರ ವಳಿದು ತಾನೆಂಬುದೇ ಶಿವ ಎಂದು ಅರಿತರೆ ಅದು ರಾಜಯೋಗ ಸಗುಣಯೋಗದಲ್ಲಿ ತಾನಳಿದು ಪರವಸ್ತುವಿನೊಡನೆ ಸಮರಸ ಹೊಂದುವದು ನಿರ್ಗುಣಯೋಗ. ಸಗುಣ ಮತ್ತು ನಿರ್ಗುಣಯೋಗಗಳಲ್ಲಿ ನಿರ್ಗುಣಯೋಗವೆ ಅಧಿಕ (ವ. ೨೫೭).

ನಿರ್ಗುಣಯೋಗದ ಸಾಧನೆಗೆ ದೃಷ್ಟಿಯೋಗವು ಪೂರಕವಾಗಿದೆ. ಶ್ರೀಗುರುವು ಅನುಗ್ರಹಿಸಿದ ದಿವ್ಯಲಿಂಗದ ಮೇಲೆ ನಮ್ಮ ಕಣ್ಣಿನ ಕರಿಯ ಗುಡ್ಡೆಯು ಹೊಮ್ಮಿಸುವ ಕಿರಣಗಳು ಕೇಂದ್ರೀಕೃತವಾಗಬೇಕು. ಸಾಧಾರಣ ಅರ್ಥದಲ್ಲಿ ಇದು ದೃಷ್ಟಿಯೋಗ. ಅಂಗೈ ಮೇಲಣ ಇಷ್ಟಲಿಂಗದ ಕಾಂತಿ ಹಾಗೂ ಅನಿಮಿಷನೋಟದ ಕಣ್ಣಕಾಂತಿ ಇವೆರಡೂ ಸಮರಸಗೊಂಡಾಗ ದೃಷ್ಟಿ ಸ್ಥಿರಗೊಳ್ಳುವುದು. ದೃಷ್ಟಿ ಕೀಲಿಸಿದಾಗ ಮೂಗಿನಲ್ಲಿ ಸುಳಿದು ಸೂಸುವ ಗಾಳಿಯೂ ನಿಲ್ಲುವುದು. ಗಾಳಿ ನಿಂತೊಡನೆ ಮನವೂ ನಿಲ್ಲುವುದು. ದೃಷ್ಟಿಯೋಗದಿಂದ ಮನವು ಏಕಾಗ್ರತೆಯನ್ನು ಪಡೆಯುವುದು. ಈ ದೃಷ್ಟಿಯೋಗದ ಸುಖವನ್ನು ವಚನಕಾರರು ಮನದಣಿಯೆ ಬಣ್ಣಿಸಿರುವರು. "ಅಂಗೈಯೊಳಗಣ ಲಿಂಗವ ನೋಡುತ್ತ ಕಂಗಳು ಕಡೆಗೋಡಿವರಿಯುತ್ತ ಸುರಿಯುತ್ತ ಎಂದಿಪ್ಪೆನೋ ! ನೋಟವೇ ಪ್ರಾಣವಾಗಿ ಎಂದಿಪ್ಪೆನೊ ! ಕೂಟವೆ ಪ್ರಾಣವಾಗಿ ಎಂದಿಪ್ಪೆನೊ ! 'ಎನ್ನ ಅಂಗ ವಿಕಾರದ ಸಂಗವಳಿದು' ಕೂಡಲಚೆನ್ನಸಂಗಯ್ಯ 'ಲಿಂಗ ಲಿಂಗ' ಎನ್ನುತ್ತ !" ಎನ್ನುವ ಬಸವಣ್ಣನ ಅಂತರಂಗ ನಾಂದುಬಂದ ವಾಣಿಯನ್ನೇ ಗಮನಿಸಬಹುದು. "ಅಂಗೈಯೊಳಗಣ ಲಿಂಗವ ಪೂಜಿಸುತ್ತ, ಮಂಗಳಾರತಿಯನು ತೊಳಗಿ ಬೆಳಗುತಲಿರ್ದೆ ನೋಡಯ್ಯಾ ! ಕಂಗಳ ನೋಟ ಕರುವಿಟ್ಟ ಭಾವ, ಹಿಂಗದ ಮೋಹ ತೆಅಹಿಲ್ಲದಿರ್ದೆ ನೋಡಯ್ಯಾ ! ಚೆನ್ನಮಲ್ಲಿಕಾರ್ಜುನಯ್ಯಾ, ನಿಮ್ಮನಗಲದ ಪೂಜೆ ಅನುವಾಯಿತ್ತೆನಗೆ" ಎಂಬ ಮಹಾದೇವಿಯಕ್ಕನ ನೋಟ-ಭಾವ ಅಗಲದ ನಿರಂತರ ಪೂಜೆಯ ಅನುವನ್ನೇ ನೋಡಬಹುದು. "ಅಂಗಯ್ಯ ನೋಟದೊಳು ಕಂಗಳು ನಟ್ಟು, ಕಂಗಳ ತೇಜ ಲಿಂಗದಲ್ಲಿ ಅರಿತು, ಲಿಂಗಪ್ರಭೆಯೊಳಗೆ ಅಂಗವೆಲ್ಲ ಲೀಯವಾಗಿ, ಸಂಗ ನಿಸ್ಸಂಗವೆಂಬ ದಂದುಗ ಹಿಂಗಿದು, ಹಿಂದುಮುಂದೆಂಬ ಭಾವವಳಿದು ನಿಂದ, ನಿಜದ ನಿರಾಳದಲ್ಲಿ

೧೪ ಯೋಗಾಂಗ ತ್ರಿವಿಧಿ (ಶಿವಶರಣೆಯರ ವಚನಗಳು : ಸಂ. ಡಾ. ಆರ್. ಸಿ. ಹಿರೇಮಠ) ಪು. ೧೫೪, ವ. ೩೨

ಪ್ರಾಣ ಸಮರತಿ” (ವ. ೧೦೯೪) ಅಂಗೈಯೊಳಗಣ ಲಿಂಗಮೂರ್ತಿಯು ಕಂಗಳಲ್ಲಿಂಗಗೊಟ್ಟಡೆ, ತಿಂಗಳ ಸೂಡನಾದೆ ನೋಡಾ ಅಯ್ಯಾ. ಮಂಗಳಮೂರ್ತಿ ಗಂಗಾಜೂಟಾಂಗಮಯ ಕಪಿಲಸಿದ್ಧಮಲ್ಲಿಕಾರ್ಜುನಲಿಂಗ ಬೇಱೆಂದಱಿಯಲಿಲ್ಲ ನೋಡಾ.. ” (ವ. ೧೧೦೫) ಎಂಬ ಸಿದ್ಧರಾಮಯ್ಯನ ಸಮರಸಭಾವದ ಅದ್ವೈತ ನಿಲುವಿನ ವಿಶೇಷತೆಯನ್ನೇ ಪರಿಭಾವಿಸಬಹುದು. ಚಾಮರಸನು ಷಟ್‌ಸ್ಥಲ ಭಕ್ತಿಮಾರ್ಗಕ್ಕೆ ದೇಹದ ಅಗತ್ಯತೆಯನ್ನು ಒತ್ತಿಹೇಳಿ ಈ ತನುವನ್ನು ಆಧರಿಸಿ ‘ಲಿಂಗೋಪಾದಿಯಲಿ ಯೋಗೈಸಿಕೊಳುತಲಿ’ ಸಮಾಧಿಯನ್ನು ಸಾಧಿಸಬೇಕು ಎನ್ನುವನು (ಪ್ರಭುಲೀ ೧೮.೧೩). ಆವನ ಸಿದ್ಧಾಂತದ ಪ್ರಕಾರ ಧೀರತನದಲಿ ಸಂಚಲಿಸುತಿಹ ಮನವ’ ಕಟ್ಟಿ ನಿಲಿಸುವುದು ‘ವೀರಶೈವದ ಬಟ್ಟೆ’. ಮಾಯೆ ಎನ್ನುವುದೇ ಮನಸ್ಸು. ಮನವೇ ವಾಯು. ವಾಯುವನ್ನು ಗೆದ್ದಲ್ಲಿ ಮನವನ್ನು ಗೆದ್ದಂತೆಯೇ. ಕಾಯವನ್ನು ಕಂಗೆಡಿಸಿ, ಭಕ್ತಿಗೆ ಅಡ್ಡವಾಗಿರುವ ವಾಯುವನ್ನು ಗೆಲಿದವನೆ ಭಕ್ತ (೧೮.೨೦). ಮನಸ್ಸಿಗೂ ಕಣ್ಣಿಗೂ ನೇರವಾದ ಸಂಬಂಧವಿದೆ :

ಹೇಳುವಡೆ ಮನವೆಂಬ ಹಕ್ಕಿಗೆ
ಕಾಲುಗಳಲ್ಲೈ ತೊಳಲುತಿಹ ಕ-
ಣ್ಣಾಲಿಗಳು ದಿಟವವಕೆ ಪಕ್ಕಗಳೀಡೆ ಪಿಂಗಳದಾ
ಗಾಳಿಯಾಗಿಹುದಂತು ಕಾರಣ–
ವಾಲಿಯೇ ಸಾಧನಕೆ ಸಾಧನ
ಮೂಲವನು ನಿಲಿಸುವನೆ ಭಕ್ತನು......॥
ಆಲಿ ನಿಂದರೆ ಸುಳಿದು ಸೂಸುವ
ಗಾಳಿ ನಿಲುವುದು ಗಾಳಿ ನಿಲೆ ಮನ
ಮೇಲೆ ನಿಲುವುದು ಮನವು ನಿಂದರೆ ಬಿಂದು ನಿಂದಿಹುದು
ಲೀಲೆಯಿಂದಾ ಬಿಂದು ನಿಂದಿರೆ
ಕಾಲಕರ್ಮವ ಗೆಲಿದು ಮಾಯೆಯ
ಹೇಳ ಹೆಸರಿಲ್ಲೆನಿಸಬಹುದೈ.........॥ (೧೮. ೨೧-೨೨)

ಚಾಮರಸ ಕೊಡುವ ಈ ‘ರೂಪಕ’ದಲ್ಲಿ ತುಂಬಾ ಸೊಗಸಾಗಿ ಅರ್ಥ ನೆಲೆಗೊಂಡಿದೆ. ಮನಸ್ಸು ಒಂದು ಪಕ್ಷಿ. ಚಲಿಸುವ ಎರಡು ದೃಷ್ಟಿಗಳೇ ಆ ಪಕ್ಷಿಯ ಕಾಲುಗಳು. ಮೂಗಿನ ಎಡ ಬಲ ಭಾಗದ ರಂಧ್ರಗಳಲ್ಲಿ ಶ್ವಾಸೋಚ್ಛ್ವಾಸರೂಪದಲ್ಲಿ ಚರಿಸುವ ಗಾಳಿಯೇ ಆ ಪಕ್ಷಿಯ ರೆಕ್ಕೆಗಳು. ಆ ಪಕ್ಷಿಯ ಕಾಲುಗಳನ್ನು ಹಿಡಿದರೆ ಸಹಜವಾಗಿ ಅದರ ರೆಕ್ಕೆಯಾಡುವಿಕೆಯೂ ನಿಲ್ಲುತ್ತದೆ. ಆಗ ಸುಲಭವಾಗಿ ಮನವೆಂಬ ಪಕ್ಷಿ ಕರಗತವಾಗುತ್ತದೆ.

ನಮ್ಮ ದೇಹದಲ್ಲಿ ಎಪ್ಪತ್ತೆರಡುಸಾವಿರ ಇಡಾ ನಾಡಿಗಳಿವೆ. ಇವುಗಳಲ್ಲಿ ಮುಖ್ಯವಾದವು ನವನಾಡಿಗಳು. ಪ್ರಭು ಹೇಳುವಂತೆ "ಇಡಾ ಪಿಂಗಳಾ ನಾಡಿಗಳಲ್ಲಿ ಹರಿವ ಸ್ವರವು ಅಡಗಿ, ಪಂಚಪ್ರಾಣವಾಯುಗಳು ನೆಲೆಗೆಟ್ಟು ಲಿಂಗಪ್ರಾಣವಾದರೆ ಅದೇ ಆದಿಪ್ರಣವ. ಇದು ಆತ್ಮತತ್ವದೊಳಗೆ ಪರಮಾಮೃತವ ಸೂಸುವ ಸೆಲೆಯಾಗಿದೆ... (ವ. ೧೮೭); "ಇಡಾ ಪಿಂಗಳಾ ಸುಷುಮ್ನಾ ಎಂಬ ಮೂರು ನಾಳಗಳಲ್ಲಿ ಪವನಯೋಗವಾಗುತ್ತಿದೆ. ಈ ನಾಡಿಗಳಿಗೆ ಪಶ್ಚಿಮದ್ವಾರ ತುಂಬಾ ಅಸಾಧ್ಯ. ಪಶ್ಚಿಮದ್ವಾರ ಒಂದರಲ್ಲಿ ಯೋಗಿಸುವ ಶಿವಯೋಗವ ನವನಾಳದಲ್ಲಿ ಪ್ರಯೋಗಿಸಬೇಕೆನ್ನುವರು: ಇದು ಸರಿಯಲ್ಲ. ಹೀಗೆ ಅಭಿಪ್ರಾಯವುಳ್ಳವರ ಜ್ಞಾತೃ, ಜ್ಞಾನ, ಜ್ಞೇಯವೆಂಬ ತ್ರಿವಿಧಜ್ಞಾನದ ಸ್ವರೂಪದ ಮೇಲೆ ಅಜ್ಞಾನವೆಂಬ ತಮಸ್ಸು ಆವರಿಸಿರುವದು. ಈ ಭಿನ್ನಯೋಗಕ್ಕೆ ಶಿವಯೋಗ ಸಾಧ್ಯವಾಗದು" (ವ. ೨೨೩); " 'ಸೋಽಹಂ ಸೋಽಹಂ' ಎಂದು ಇಡಾ ಪಿಂಗಳಾ ಮಾರ್ಗದಲ್ಲಿ ಉರಿಯುತ್ತಿರುವ ಜೀವಹಂಸನ ನಿಲವಿನ ಮೇಲೆ 'ಶಿವೋಽಹಂ' ಎಂಬ ಸ್ವಾನುಭಾವವು ಬಂದೆರಗಲು ವಾಯುವಿಕಾರಸ್ಪಂದನವೆಲ್ಲ ಸ್ತಬ್ಧವಾಗುವುದು, 'ಶಿವೋಽಹಂ' ಎಂಬ ಶಬ್ದ ಭಿನ್ನಮಥನವಿಲ್ಲದೆ ತನ್ನಲ್ಲಿ ವ್ಯಾಪಿಸುವದು. ಇದರಿಂದ ಭವದುಃಖವು ಮರಳಿ ಅಂಟಿಕೊಳ್ಳದು. ಇಂತಹ ಪರಮಹಂಸನ ಮೇಲೆ ಪರಿಪೂರ್ಣವೆಡೆಗೊಳ್ಳಲು ಈ ಶಬ್ದವೆ ಬ್ರಹ್ಮನಾದಮಯವಾಗಿ ತೋರುವದು. ಇಂತಹ ಶಬ ಬ್ರಹ್ಮದಿಂದ ಅಖಂಡಸುಖವು ದೊರೆಕೊಳ್ಳುವುದು. ಈ ಸುಖವು ಮಹಾಲಿಂಗಕ್ಕೆ ಸಮರ್ಪಿತವಾದ ರಹಸ್ಯವನ್ನು ದೇಹಭಾವಿಗಳು ತಿಳಿಯರು" (ವ. ೨೪೧): "ಬ್ರಹ್ಮರಂಧ್ರವನ್ನು ಸೇರಲು ಸುಷುಮ್ನಾನಾಳವು ಶಿವಯೋಗಮಾರ್ಗವಾಗಿದೆ. ಆ ಮಾರ್ಗದಲ್ಲಿ 'ಶಿವೋಽಹಂ ಶಿವೋಽಹಂ' ಎಂಬ ಧ್ವನಿಯಲ್ಲಿ ಶಿವಯೋಗಾಮೃತವಿದೆ. ಆ ಪರಮಾಮೃತವ ದಣಿಯುಂಡ ಶಿವಯೋಗಿ ಪರಶಿವತತ್ವದಲ್ಲಿ ವಿಶ್ರಾಂತಿ ಪಡೆಯುವನು" (ವ. ೨೪೭); "ಆಧಾರಚಕ್ರದಲ್ಲಿ ಉದಯವಾದ ಸತ್ಪ್ರಣವಜ್ಞಾನದ ಅನುಸಂಧಾನವು ಮಣಿಪೂರಕಚಕ್ರದಲ್ಲಿ ಸ್ವತಃಸಿದ್ಧವಾಗಿ ನೆಲೆಸುವುದು. ಅಲ್ಲಿಂದ ಮುಂದೆ ಅದು ಸುಷುಮ್ನಾನಾಳದ ಮುಖಾಂತರ ಬ್ರಹ್ಮರಂಧ್ರವನ್ನು ಸೇರುವದು. ಆ ಬಳಿಕ ಅದು ವ್ಯೋಮಚಕ್ರವನ್ನು ಪ್ರವೇಶಿಸಿ ಅಲ್ಲಿ ಇರುವ ಅಮೃತವನುಣಿಸಿ ಪರಮಾನಂದಗೊಳಿಸುವದು. ಈ ಪರಮ ಆನಂದದಿಂದ ಲಭಿಸಿದ ಸುಖವು ನಿರ್ಗುಣ ಯೋಗದಲ್ಲಿ ಉದಯಿಸುವ ಮಹಾಜ್ಞಾನಪ್ರಭೆ ತಾನೆ ಆಗಿದೆ" (ವ. ೨೫೮); "ಪ್ರಣವ ಮಂತ್ರಕ್ಕೆ ಆದಿಶಕ್ತಿ ಪ್ರಚೋದಕವಾಗಿದೆ. ಈ ಪ್ರಣವಸ್ವರವು ಇಡಾ ಪಿಂಗಳಾ ಮಾರ್ಗವನ್ನು ಮೆಟ್ಟಿ ಬ್ರಹ್ಮನಾಡಿ (ಸುಷುಮ್ನಾನಾಡಿ)ಯ ಮೇಲೆ ನೆಲೆಸಿದೆ. ಸಗುಣ ಯೋಗದಲ್ಲಿ ಮಹಾನುಭಾವವೆನಿಸಿದ ಪ್ರಾಣಲಿಂಗವು ಮನೋಮೂರ್ತಿಯಾಗಿರಲು, ಶರಣನಿಗೆ ಅದು ನಿರ್ಗುಣಯೋಗವಾಗಿ ನಿರಾಳಸ್ಥಾನದಲ್ಲಿ ಪರಮಶಾಂತಿಯನ್ನು ನೀಡುವದು" (ವ. ೨೫೯): "ಶಿವಾನುಭಾವಯೋಗದಿಂದ ಕುಂಡಲಾಗ್ನಿಯನ್ನು ದೃಢವಾಗಿ ಎತ್ತಲು, ಆ ಸುಜ್ಞಾನಾಗ್ನಿ ಸುಷುಮ್ನೆಯ ಮುಖಾಂತರ ವ್ಯೋಮವನ್ನು

ಸೇರುವದು. ಆ ಬಳಿಕ ಲಿಂಗದ ಅನುಭವ ತಲೆದೋರುವದು. ಮನವು ಉನ್ಮನಿ ತತ್ತ್ವವಾಗಿ ಮಾರ್ಪಡುವದು. ಆತ್ಮತತ್ತ್ವಭಾವದ ಕಳೆಯನ್ನು ಪಡೆದು ಅದು ನಿರಾಳ ಶಿವತತ್ತ್ವದಲ್ಲಿ ವಿಶ್ರಮಿಸುವುದು. ಕೊನೆಗೆ ನಿಜವಸ್ತುವಿನಲ್ಲಿ ನೆಲೆನಿಂತ ಪರಮಜ್ಞಾನವು ಬ್ರಹ್ಮರಂಧ್ರದಲ್ಲಿ ಸ್ಥಾಯಿಯಾಗಿ ತಾನೆ ತಾನಾಗಿ ಬೆಳಗುವದು" (ವ. ೨೭೦).[೧೫]

ಬ್ರಹ್ಮರಂಧ್ರ ಅಥವಾ ಸುಷುಮ್ನಾರಂಧ್ರದಲ್ಲಿ ಸ್ಥಾಯಿಯಾಗಿ ನೆಲೆಸಿ ಪ್ರಜ್ವಲಿಸಿ ಬೆಳಗುವ ಮಹಾಲಿಂಗನ ಬಗೆಗೆ ಶಿವಯೋಗಿಗಳು ಬಗೆಬಗೆಯಾಗಿ ವರ್ಣಿಸಿರುವರು. ಇದರ ಸ್ವರೂಪ ಶಿವಯೋಗಿಗಳಿಗೆ ಮಾತ್ರ ದರ್ಶನಸಾಧ್ಯ. "ನಾಸಿಕದ ದ್ವಾರದ ಹಿಂದಿನ ಮಗ್ಗಲು ತೆಳುವಾದ ಪರದೆಯಿದ್ದು ಅದಕ್ಕೆ ಅತ್ಯಂತ ಸೂಕ್ಷ್ಮವಾದ ರಂಧ್ರವಿರುತ್ತದೆಂದು ಹೇಳುತ್ತಾರೆ. ಇದನ್ನು 'ಸುಷುಮ್ನಾರಂಧ್ರ' ವೆಂದೂ 'ಕಡುಸಣ್ಣದ್ವಾರ' ವೆಂದೂ ಕರೆದಿರುವರು. ಪ್ರಾಣಾಯಾಮಾದಿ ಸಾಧನೆಯಿಂದ ಇಲ್ಲವೆ ಪೂರ್ವಜನ್ಮದ ಸಾಧನೆಯ ಸುಕೃತ ವಿಶೇಷದಿಂದ ಅಥವಾ ಇವೆರಡರಿಂದಲೂ ಒಮ್ಮೆ ಈ ರಂಧ್ರ ಹಿಗ್ಗಿ ಹರವಾಯಿತೆಂದರೆ— ಈ ದ್ವಾರವು ತೆರೆಯಿತೆಂದರೆ ಮೂಗಿನಿಂದಾಡುವ ಉಸಿರು ಪುಪ್ಪಸಗಳಿಗಿಳಿಯದೆ ನೇರವಾಗಿ ಮಿದುಳಿನ ಪೊಳ್ಳುಭಾಗವನ್ನು ವ್ಯಾಪಿಸಿ ಅಲ್ಲಿಂದ ಅದು ಬೆನ್ನುಹುರಿಯ ಮಣಿಗಳಲ್ಲಿ ಅಂದರೆ ಮೇರುದಂಡದಲ್ಲಿ ಅಥವಾ ಸುಷುಮ್ನಾನಾಳದಲ್ಲಿ ಪ್ರವೇಶಿಸಿ ಹರಿದಾಡುವುದು. ಆಗ ಜಗ್ಗನೆ ಬೆಳಕೊಂದು ಬಿದ್ದು ಅಪೂರ್ವವಾದ ಅನುಭವವು ಕಾಣಿಸಹತ್ತುವುದು".[೧೬] ಬ್ರಹ್ಮರಂಧ್ರದಲ್ಲಿರುವ ಮಹಾಲಿಂಗನ ಅರ್ಚನೆ ಮಾಡುವ ಮಹಾಮಹಿಮರನ್ನು ತನಗೆ ತೋರಿ ಬದುಕಿಸು ಎಂದು ಚನ್ನಬಸವಣ್ಣ ದೈನ್ಯಬಟ್ಟು ಕೇಳಿರುವನು :

"ಪಶ್ಚಿಮಪದ್ಮಾಸನದಲ್ಲಿ ಕುಳ್ಳಿರ್ದು ನಿಟ್ಟೆಲುವ ನೆಟ್ಟನೆ ಮಾಡಿ,
ಅಧೋಮುಖಕಮಲವ ಬಲಿದು, ಊರ್ಧ್ವಮುಖವ ಮಾಡಿ,
ಇಂದ್ರಿಯಗಳನು ಏಕಮುಖವ ಮಾಡಿ,
ಚಂದ್ರಸೂರ್ಯರನೊಂದೆ ಠಾವಿನಲ್ಲಿರಿಸಿ,
ಅತ್ತಿತ್ತ ಮಿಸುಕದೆ ನಡುಗೀಱ ಜ್ಯೋತಿಯ ದೃಢವಾಗಿ ಹಿಡಿದು,
ಪರಮಾನಂದದ ಮಠದೊಳಗೆ ಪ್ರಾಣಲಿಂಗಾರ್ಚನೆಯ ಮಾಡುವ
ಮಹಾಮಹಿಮರ ತೋಱಿ ಬದುಕಿಸಾ, ಕೂಡಲಚೆನ್ನಸಂಗಯ್ಯಾ"
(ವ. ೮೯೯)

---

೧೫ ಮೇಲಿನ ೧೮೭, ೨೩೩, ೨೮೧, ೨೮೭, ೨೫೮, ೨೯೯, ೨೭೦ — ಈ ಪ್ರಭುವಿನ ಬೆಡಗಿನ ವಚನಗಳ ಭಾವಾನುವಾದವನ್ನು 'ವ್ಯೋಮಮೂರುತಿ ಅಲ್ಲಮಪ್ರಭುದೇವರ ವಚನಗಳು' ಎಂಬ ಮುದ್ರಿತ ಗ್ರಂಥದಿಂದ ಸ್ವೀಕರಿಸಿರುವೆನು.

೧೬ ಶ್ರೀಕುಮಾರಕೃಪಾ : ಅನುಭಾವ ಚಿಂತಾಮಣಿ : ಸಂ. ಈಶ್ವರಚಂದ್ರ ಚಿಂತಾಮಣಿ, ಪು. ೭೭

ಪಶ್ಚಿಮಚಕ್ರದಲ್ಲಿ ಪ್ರಾಣನಿವಾಸಿಯಾಗಿರುವ ಶರಣ-ಚನ್ನಬಸವಣ್ಣ. 'ಓಂ ಮೂಲದ ಆ ಪುಶಿಖಾಚಕ್ರದಲ್ಲಿ ಮನೋಭಾವವಡಗಿ, ಸಹಸ್ರದಳಕಮಲದ ಬಯಲೊಳಗೆ ಬಯಲಾಗಿ, ನೀನು ತಾನಾದ' ಗುರುಚನ್ನಬಸಣ್ಣನ ಶ್ರೀಪಾದಗಳಿಗೆ ಸಿದ್ಧರಾಮಯ್ಯ ಭಕ್ತಿಪೂರ್ವಕವಾಗಿ ಮಣಿದಿರುವನು (ವ. ೧೧೪೮). ಬೂದಿ ಮರೆಸಿದ ಕೆಂಡದಂತೆ ಕೆಂಡದ ಮರೆಯಲಡಗಿದ ಪ್ರಕಾಶದಂತೆ ತನುತ್ರಯದ ಮರೆಯಲಡಗಿದ ಮಹಾಲಿಂಗವ ಕಂಡಾತನೇ ಪರಮಜ್ಞಾನಿ ಎಂದು ಪ್ರಭು ಭಕ್ತಿಭಾವದಿಂದ ನುಡಿದಿರುವನು (ವ. ೨೬೫).

'ಶಿವಯೋಗ'ದ ಬಗೆಗೆ ನಮ್ಮ ವಚನಕಾರರು ಮೊದಲಿಗೆ ಹೇಳಿದವರು. ಅದರ ಸ್ಪಷ್ಟವಾದ ನಿಲವುಗಳನ್ನು ಪ್ರಭು, ಚನ್ನಬಸವಣ್ಣ, ಸಿದ್ಧರಾಮರುಗಳಲ್ಲಿ ಮೊದಲಿಗೆ ಕಾಣಬಹುದಾಗಿದೆ. ಬಸವಾನಂತರದ ಶಿವಶರಣರ ವಚನಗಳಲ್ಲೂ ಇದು ವಿವೇಚಿತ ವಾಗಿದೆ. 'ಶಿವಯೋಗ' ವನ್ನು ಕುರಿತ ಮೊದಲ ಕನ್ನಡಕೃತಿ ಮಹಾದೇವಿಯಕ್ಕನ 'ಯೋಗಾಂಗ ತ್ರಿವಿಧಿ'. ಚೆನ್ನಸದಾಶಿವಯೋಗಿಗಳ 'ಶಿವಯೋಗಪ್ರದೀಪಿಕಾ'ವನ್ನು ಆಧರಿಸಿ ನಿಜಗುಣ ಶಿವಯೋಗಿಗಳು 'ಪಾರಮಾರ್ಥ ಪ್ರಕಾಶಿಕೆ' ಎಂಬ ಗದ್ಯ ಗ್ರಂಥ ರಚನೆ ಮಾಡಿರುವರು. ಸಪ್ತಕಾವ್ಯದ ಗುರುಬಸವನು 'ಯೋಗಾಂಗ ವಿಭೂಷಣ' ಎಂಬ ಷಟ್ಪದೀರೂಪದ ಕೃತಿ ರಚಿಸಿರುವನು. ಸರ್ಪಭೂಷಣ ಶಿವಯೋಗಿಗಳು 'ಕೈವಲ್ಯ ಕಲ್ಪವಲ್ಲರಿ'ಯನ್ನು ಸಾಮಾನ್ಯನೂ ಓದಿ ಗ್ರಹಿಸುವಂತೆ ಸರಳವಾಗಿ ಬರೆದಿರುವರು. ಬಸವಲಿಂಗಾರಾಧ್ಯನು 'ಶಿವಯೋಗಾನಂದ ತ್ರಿವಿಧಿ' ಎಂಬ ಲಘುಕೃತಿ ರಚಿಸಿರುವನು.[೧೭] ಹುಬ್ಬಳ್ಳಿ ಸಂಗಯ್ಯನು 'ಶಿವಯೋಗರತ್ನಾಕರ' ಎಂಬ ಕೃತಿ ಬರೆದಿರುವನು[೧೮] (ಕೊನೆಯ ಇವೆರಡು ಕೃತಿಗಳು ಇನ್ನೂ ಮುದ್ರಣಯೋಗ ಕಂಡಿಲ್ಲ). ಶಿವಯೋಗದ ಬಗೆಗೆ ರಚಿತವಾಗಿರುವ ಕೃತಿಗಳು ಇನ್ನೂ ಬಹಳವಿರಬಹುದು. ಶಿವಯೋಗದ ವಿಸ್ತೃತವಾದ ಅಧ್ಯಯನಕ್ಕೆ ಇವು ಬೆಳಕು ಕಾಣುವುದು ಅಗತ್ಯ.

## ಆಧಾರ ಗ್ರಂಥಗಳು

೧. ವ್ಯೋಮಮೂರುತಿ ಅಲ್ಲಮಪ್ರಭುದೇವರ ವಚನಗಳು : ಸಂ. ಡಾ. ಆರ್. ಸಿ. ಹಿರೇಮಠ, ಡಾ. ಎಂ. ಎಸ್. ಸುಂಕಾಪುರ.
೨. ಚನ್ನಬಸವಣ್ಣನವರ ವಚನಗಳು : ಸಂ. ಡಾ. ಆರ್. ಸಿ. ಹಿರೇಮಠ
೩. ಶ್ರೀ ಸಿದ್ಧರಾಮೇಶ್ವರ ವಚನಗಳು : ಸಂ. ಡಾ. ಆರ್. ಸಿ. ಹಿರೇಮಠ
೪. ಶಿವಶರಣೆಯರ ವಚನಗಳು : ಸಂ. ಡಾ. ಆರ್. ಸಿ. ಹಿರೇಮಠ

೧೭ ವಿವರಗಳಿಗೆ ನೋಡಿ : ಶ್ರೀ ಎಸ್. ಶಿವಣ್ಣ: ಬಸವಲಿಂಗಾರಾಧ್ಯ ಕೃತ ಶಿವಯೋಗಾನಂದ ತ್ರಿವಿಧಿ : ಒಂದು ಟಿಪ್ಪಣಿ. 'ಕರ್ನಾಟಕ ಭಾರತಿ' ಸಂ. ೧೦. ಸಂ.೧
ಈ ಕೃತಿಯ ಹಸ್ತಪ್ರತಿ ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರ ದಲ್ಲಿದೆ (ಕೆ ೧೩೮೮/೧೧).

೧೮ ಈ ಕೃತಿಯೂ ಬೆಂ. ವಿ. ವಿ. ದ ಕ. ಅ. ಕೇಂದ್ರದಲ್ಲಿದೆ (ಕೆ ೧೭೧, ೧-೪೩).

೫. ಸಕಲ ಪುರಾತನರ ವಚನಗಳು ಸಂಪುಟ ೨ : ಸಂ. ಡಾ. ಆರ್. ಸಿ. ಹಿರೇಮಠ

೬. ಬಸವಣ್ಣನವರ ಷಟ್ಸ್ಥಲದ ವಚನಗಳು : ಸಂ. ಡಾ. ಆರ್. ಸಿ. ಹಿರೇಮಠ

೭. ಷಟ್‌ಸ್ಥಲಜ್ಞಾನಸಾರಾಮೃತ : ಸಂ. ಡಾ. ಆರ್. ಸಿ. ಹಿರೇಮಠ

೮. ಷಣ್ಮುಖಸ್ವಾಮಿಗಳ ವಚನಗಳು : ಸ. ಹ. ನಂ. ವಿಜಯಕುಮಾರ್

೯. ಪ್ರಭುಲಿಂಗಲೀಲೆ : ಸಂ. ಡಾ. ಎಂ. ಎಸ್. ಸುಂಕಾಪುರ

೧೦. ಶಿವಯೋಗ ಪ್ರದೀಪಿಕಾ : ಸಂ. ಡಾ. ಎಂ. ಎಂ. ಕಲ್ಬುರ್ಗಿ, ಪಂಡಿತ ನಾಗಭೂಷಣಶಾಸ್ತ್ರಿ

೧೧. ಪಾರಮಾರ್ಥ ಪ್ರಕಾಶಿಕೆ : ಸಂ. ಜಿ. ಎಂ. ಉಮಾಪತಿಶಾಸ್ತ್ರಿ

೧೨. ಶಿವಯೋಗ : ವೈ. ನಾಗೇಶಶಾಸ್ತ್ರಿ

೧೩. ನೂತನ ಪುರಾತನರ ರಗಳೆಗಳು : ಸಂ. ಡಾ. ಎಂ. ಎಸ್. ಸುಂಕಾಪುರ

೧೪. ಬಸವ ಪುರಾಣ : ಸಂ. ಡಾ. ಆರ್. ಸಿ. ಹಿರೇಮಠ

೧೫. ಚೆನ್ನಬಸವಪುರಾಣ : ಸಂ. ಶಿ. ಶಿ. ಬಸವನಾಳ

೧೬. ಬಸವಾದಿ ಗಣಚರಿತ್ರೆ ಮತ್ತು ಗಣವಚನಮಂಜರಿ : ಸಂ. ಡಾ. ಎಸ್. ಎಂ. ಹುಣಶ್ಯಾಳ

೧೭. ಶಿವಶರಣರ ಚರಿತ್ರೆಗಳು (೧೯೪೪) : ಫ. ಗು. ಹಳಕಟ್ಟಿ

೧೮. ಯೋಗಾಂಗ ವಿಭೂಷಣ : ಸಂ. ಡಾ. ಎಂ. ಎಸ್. ಸುಂಕಾಪುರ

೧೯. ಅನುಭಾವ ಚಿಂತಾಮಣಿ : ಸಂ. ಈಶ್ವರಚಂದ್ರ ಚಿಂತಾಮಣಿ

೨೦. ಅಲ್ಲಮನ ವಚನಚಂದ್ರಿಕೆ : ಸಂ. ಡಾ. ಎಲ್. ಬಸವರಾಜು




# ಕರ್ನಾಟಕದಲ್ಲಿ ಜೈನ-ಬೌದ್ಧಧರ್ಮಗಳು

ಪ್ರ. ಗೋ. ಕುಲಕರಣಿ

ಜೈನ-ಬೌದ್ಧಧರ್ಮಗಳು ಉತ್ತರಭಾರತದಲ್ಲಿ ಜನ್ಮತಾಳಿ ಭಾರತದಲ್ಲೆಲ್ಲ ವ್ಯಾಪಿಸಿದವು. ಕರ್ನಾಟಕದಲ್ಲಿಯೂ ಪ್ರವೇಶಿಸಿದವು. ಇಲ್ಲಿಯ ಜನಜೀವನದ ಮೇಲೆ ಪರಿಣಾಮವನ್ನು ಬೀರಿದವು. ಹೀಗಿದ್ದರೂ ಆ ಧರ್ಮಗಳು ಕರ್ನಾಟಕದಲ್ಲಿ ಕಾಲಿರಿಸಿದ ಕಾಲದ ಬಗೆಗೂ ಅವು ಬೀರಿದ ಪರಿಣಾಮದ ಬಗೆಗೂ ಸಾಕಷ್ಟು ಸಂಶೋಧನೆಗಳು ಆಗಿರುವುದಿಲ್ಲ. ಈ ಸಂಗತಿಗಳ ಕಡೆಗೆ ಇತಿಹಾಸಜ್ಞರ ಗಮನ ಸೆಳೆಯುವುದು ಈ ಲೇಖನದ ಉದ್ದೇಶ.

ದಕ್ಷಿಣಭಾರತದಲ್ಲಿ ಮೊದಲು ಕಾಲಿರಿಸಿದವರು ಬೌದ್ಧರೊ ಜೈನರೊ ? ಬೌದ್ಧರೇ ಜೈನರಿಗಿಂತ ಮೊದಲು ಕಾಲಿರಿಸಿದವರು, ಆ ಧರ್ಮದ ಪ್ರಭಾವವೇ ಜೈನ ಧರ್ಮದ ಪ್ರಭಾವಕ್ಕಿಂತ ಕನ್ನಡಿಗರ ಮೇಲೆ ಹೆಚ್ಚಾಗಿ ಆಗಿದೆಯೆಂದು ಈಗ ಸಾಮಾನ್ಯವಾದ ತಿಳುವಳಿಕೆಯಾಗಿದೆ. ಶ್ರೀ ಗೋವಿಂದ ಪೈಗಳು ಶ್ರೀ ಆರ್. ನರಸಿಂಹಾಚಾರ್ಯರ ಕರ್ಣಾಟಕ ಕವಿಚರಿತೆಯ ೩ನೆಯ ಸಂಪುಟವನ್ನು ವಿಮರ್ಶಿಸುತ್ತ ಈ ಬಗೆಗೆ ಹೇಳಿದುದು : "ಪ್ರಥಮತಃ ಕನ್ನಡದಲ್ಲಿ ಕಾವ್ಯವನ್ನು ಬರೆದವರು ಜೈನರೋ ಜೈನೇತರರೋ ಎಂದು ನಿಷ್ಕೃಷ್ಟವಾಗಿ ಹೇಳುವ ಬಗೆ ಹೇಗೆ ? ಜೈನರಿಂದ ಎಷ್ಟೋ ಮುಂಚೆ ದಕ್ಷಿಣಕ್ಕೆ ಇಳಿತಂದ ಬೌದ್ಧರೇಕೆ ಕನ್ನಡದಲ್ಲಿ ಕಾವ್ಯರಚನೆಯನ್ನು ತೊಡಗಿರಬಾರದು ?"[೧]

ಶ್ರೀ ಗೋವಿಂದ ಪೈಗಳ ಅಭಿಪ್ರಾಯಕ್ಕೆ ಆಧಾರಗಳು ಯಾವವು ? ಜೈನ ಧರ್ಮದ (೨೪ನೆಯ) ಕೊನೆಯ ತೀರ್ಥಂಕರನಾದ ಮಹಾವೀರನೂ ಬುದ್ಧನೂ ಸುಮಾರಾಗಿ ಒಂದೇ ಕಾಲದವರು. ಕ್ರಿ. ಪೂ. ೬ನೆಯ ಶತಮಾನದಲ್ಲಿ ಜೀವಿಸಿದರು. ಬೌದ್ಧ

೧ ಪ್ರಬುದ್ಧ ಕರ್ನಾಟಕ. ಸಂಪುಟ-೧೧, ಸಂಚಿಕೆ-೪, —ಕಾವ್ಯಾವಲೋಕನ ಪುಟ-೪.

ಧರ್ಮವು ಭಾರತದ ಒಳಗೂ ಹೊರಗೂ ಪ್ರಚಾರ ಮಾಡಲು ನಡುಕಟ್ಟಿದವನು ಮೌರ್ಯವಂಶದ ಅಶೋಕಚಕ್ರವರ್ತಿ. ಅವನ ಕಾಲ ಕ್ರಿ. ಪೂ. ೩ನೆಯ ಶತಮಾನ. ಕ್ರಿ. ಪೂ. ೨೭೦-೨೩೨ ಎಂದು ಶ್ರೀ ಗೋವಿಂದ ಪೈ ಹೇಳುತ್ತಾರೆ.[೨] ಅಶೋಕ ಮಹಾರಾಜನು ತಾನೆಸಗಿದ ಕಲಿಂಗಯುದ್ಧದಲ್ಲಿ ಆದ ಹಿಂಸಾಚಾರವನ್ನು ಕಂಡು ಮನ ಮರುಗಿದವನಾಗಿ ಅಹಿಂಸಾತ್ಮಕ ಬೌದ್ಧಧರ್ಮವನ್ನು ಸ್ವೀಕರಿಸಿದುದಲ್ಲದೆ ಆ ಧರ್ಮದ ಪ್ರಚಾರಕ್ಕಾಗಿ ದಕ್ಷಿಣಭಾರತ-ಸಿಂಹಳಗಳಿಗೂ ಸಿರಿಯಾ, ಇಜಿಪ್ತ, ಪ್ಟೊಲೆಮಿ, ಮಕೆದೋನ, ಅಂತಿಗೋನ, ಅಲೆಕ್ಸಂದರ ಮೊದಲಾದ ಕಡೆಗೂ ಬೌದ್ಧಧರ್ಮದ ಮಹಾಮಾತ್ರರನ್ನು ಕಳಿಸಿದನು. ತಾನಿರುವಾಗಲೇ ಆಯಾ ಪ್ರದೇಶಗಳಲ್ಲಿ ಬೌದ್ಧ ಧರ್ಮದ ಪ್ರಸಾರವಾಗುತ್ತಿರುವ ಸಂಗತಿಯನ್ನು ತನ್ನ ಶಾಸನಗಳಲ್ಲಿ ಹೇಳಿಕೊಂಡಿದ್ದಾನೆ. ಅವನ ಮಹಾಮಾತ್ರರಲ್ಲಿ ಮಹಾದೇವಸ್ಥೇರನೆಂಬವನು ಬನವಾಸಿಗೂ ರಕ್ಷಿತ ಎಂಬವನು ಮಹಿಷಮಂಡಲಕ್ಕೂ ಬಂದಿದ್ದರೆಂಬುದು ಸಿಂಹಲದಲ್ಲಿ ದೊರೆತ 'ಮಹಾವಂಸ' ಎಂಬ ಪಾಲಿ ಭಾಷೆಯ ಐತಿಹಾಸಿಕ ಕಾವ್ಯದಿಂದ ತಿಳಿದುಬರುತ್ತದೆ. ಕನ್ನಡ ನಾಡಿನಲ್ಲಿ ಬೌದ್ಧಧರ್ಮವು ಕಾಲಿರಿಸಿದುದುದು ಇದೇ ಮೊದಲು.

ಮೌರ್ಯ ಚಂದ್ರಗುಪ್ತನು ಕರ್ನಾಟಕಕ್ಕೆ ಆಗಮಿಸಿದುದೇ ಕನ್ನಡನಾಡಿಗೂ ಜೈನ ಧರ್ಮಕ್ಕೂ ಸಂಬಂಧ ಜೋಡಿಸುವ ಪ್ರಾಚೀನ ಐತಿಹಾಸಿಕ ಸಂಗತಿ. ಈ ಬಗೆಗೆ ಶ್ರೀ ಆರ್. ನರಸಿಂಹಾಚಾರ್ಯರು ಕವಿಚರಿತೆಯಲ್ಲಿ ಹೇಳಿದುದು :

"ಭದ್ರಬಾಹುವೂ ಚಂದ್ರಗುಪ್ತನೂ ಶ್ರವಣಬೆಳುಗೊಳದಲ್ಲಿ ಇದ್ದರು ಎಂಬುದಕ್ಕೆ ಕೆಲವು ಆಧಾರಗಳು ದೊರೆಯುತ್ತವೆ. ಶ್ರವಣಬೆಳುಗೊಳದ ಚಿಕ್ಕಬೆಟ್ಟದ ಮೇಲೆ 'ಚಂದ್ರಗುಪ್ತಬಸ್ತಿ' ಎಂಬ ಜಿನಾಲಯವೂ 'ಭದ್ರಬಾಹುಗವಿ' ಎಂಬ ಗವಿಯೂ ಈಗಲೂ ಇವೆ. ಸುಮಾರು ೭ನೆಯ ಶತಮಾನದಲ್ಲಿ ಬರೆದ ಶ್ರವಣಬೆಳುಗೊಳದ ೧೭ನೆಯ ಶಾಸನದಲ್ಲಿ 'ಭದ್ರಬಾಹು ಸಚಂದ್ರಗುಪ್ತ ಮುನೀಂದ್ರಯುಗ್ಮದಿನೊಪ್ಪೆ' ಎಂದೂ ಸುಮಾರು ೯ನೆಯ ಶತಮಾನದಲ್ಲಿ ಹುಟ್ಟಿದ ಶ್ರೀರಂಗಪಟ್ಟಣದ ೧೪೭-೧೪೮ನೆಯ ಶಾಸನಗಳಲ್ಲಿ 'ಭದ್ರಬಾಹು ಚಂದ್ರಗುಪ್ತ ಮುನಿಪತಿಚರಣ ಮುದ್ರಾಂಕಿತ ಜಗಲ್ಲಲಾಮಾಯಿತ ಶ್ರೀಕಟ್ವಪ್ಪುತೀರ್ಥಸನಾಥಬೆಳ್ಗೊಳ' ಎಂದೂ ಶ್ರವಣಬೆಳುಗೊಳದ ವಿಷಯವಾಗಿ ಹೇಳಿದೆ. ೯೩೧ರಲ್ಲಿ ಹರಿಷೇಣನಿಂದ ರಚಿತವಾದ ಕಥಾಕೋಶದಲ್ಲಿಯೂ ಇತರ ಗ್ರಂಥಗಳಲ್ಲಿಯೂ ಈ ವಿಷಯವು ಉಕ್ತವಾಗಿದೆ. ವಿನ್ಸೆಂಟ ಸ್ಮಿಥ್ ಬರೆದಿರುವ ಹಿಂದೂ ದೇಶದ ಪುರಾತನ ಚರಿತ್ರೆಯಲ್ಲಿ ಚಂದ್ರಗುಪ್ತನು ರಾಜ್ಯವನ್ನು ಬಿಟ್ಟು ಸನ್ಯಾಸಿಯಾಗಿ ಶ್ರವಣಬೆಳುಗೊಳಕ್ಕೆ ಬಂದನೆಂದು ಹೇಳುವ ಕಥೆ ನಿಜವಾಗಿರಬಹುದೆಂದು ಹೇಳಿದೆ."[೩]

---

೨ ಪ್ರಬುದ್ಧ ಕರ್ಣಾಟಕ, ಸಂಪುಟ– ೨೭, ಸಂಚಿಕೆ– ೧. —ಬುದ್ಧನ ಮತ್ತು ಮಹಾವೀರನ ಪರಿನಿರ್ವಾಣಗಳ ಕಾಲ, ಪುಟ– ೮೯.

೩ ಕರ್ಣಾಟಕ ಕವಿಚರಿತೆ II, ಅವತರಣಿಕೆ, ಪುಟ ೨

ಭದ್ರಬಾಹುವನ್ನೊಡಗೊಂಡು ಕನ್ನಡನಾಡಿಗೆ ಬಂದವನು ಅಶೋಕನ ಅಜ್ಜನಾದ ಮೌರ್ಯಚಂದ್ರಗುಪ್ತನೆಂದು ಇಲ್ಲಿ ಹೇಳಿದೆ. ಇದೇ ನಿಜವೆಂದುದಾದರೆ ಅಶೋಕನ ಪೂರ್ವದಲ್ಲಿಯೇ ಜೈನಧರ್ಮದ ಪ್ರವೇಶವು ಕನ್ನಡನಾಡಿಗೆ ಆಗಿದ್ದಿತೆಂದಾಗುತ್ತದೆ. ಅಶೋಕನ ಅಜ್ಜನಾದ ಚಂದ್ರಗುಪ್ತನು ಜೈನಧರ್ಮವನ್ನು ಸ್ವೀಕರಿಸಿದುದಕ್ಕೆ ಬೇರೆ ಆಧಾರಗಳಿಲ್ಲ. ಬ್ರಾಹ್ಮಣನಾದ ಚಾಣಕ್ಯನ ಸಹಾಯದಿಂದ ನಂದರನ್ನು ನಾಶಪಡಿಸಿ ಚಕ್ರಾಧಿಪತ್ಯ ಪಡೆದ ಈತನು ಜೈನಧರ್ಮ ಸ್ವೀಕರಿಸಿದನೆಂಬುದು ನಂಬುವಂತಹ ಮಾತಲ್ಲ. ಭದ್ರಬಾಹು-ಚಂದ್ರಗುಪ್ತರ ಕಥೆಯು ಕನ್ನಡದ ವಡ್ಡಾರಾಧನೆಯಲ್ಲಿ ಬರುತ್ತದೆ. ಇದರಲ್ಲಿ ಭದ್ರಬಾಹುವಿನೊಡನೆ ದಕ್ಷಿಣಕ್ಕೆ ಬಂದ ಚಂದ್ರಗುಪ್ತನು ಅಶೋಕ ಚಕ್ರವರ್ತಿಯ ಮೊಮ್ಮಗನೆಂದೂ ಅವನು ಉಜ್ಜಯನಿಯಲ್ಲಿ ಆಳುತ್ತಿದ್ದನೆಂದೂ ಹೇಳಲಾಗಿದೆ. ಶ್ರೀ ಆರ್. ನರಸಿಂಹಾಚಾರ್ಯರಿಂದ ಈಚೆಗೆ ದೊರೆತ ಈ ಪ್ರಾಚೀನ ಗ್ರಂಥವನ್ನು ಆಧರಿಸಿ ಶ್ರೀ ಗೋವಿಂದ ಪೈಗಳು ಜೈನರಿಗಿಂತ ಬೌದ್ಧರು ಎಷ್ಟೋ ಮುಂಚೆ ದಕ್ಷಿಣಕ್ಕೆ ಇಳಿತಂದರೆಂದು ಹೇಳಿದಂತೆ ಕಂಡುಬರುತ್ತದೆ. ಇದನ್ನು ಬಿಟ್ಟರೆ ಅವರ ಅಭಿಪ್ರಾಯವನ್ನು ಸಮರ್ಥಿಸುವ ಬೇರೆ ಆಧಾರಗಳು ಯಾವವೂ ಇರುವುದಿಲ್ಲ.

ಅಶೋಕನ ಪೂರ್ವದ ಐತಿಹಾಸಿಕ ಸಂಗತಿಗಳನ್ನು ತಿಳಿಸುವಂತಹ ಆಧಾರಗಳು ನಮಗೀಗ ದೊರೆತಿಲ್ಲ. ನಮ್ಮ ಪುರಾಣಗಳಲ್ಲಿ ವಿಕೃತಗೊಂಡ ಕೆಲವು ಐತಿಹಾಸಿಕ ಸಂಗತಿಗಳು ಬರುತ್ತವೆ. ಅವು ಗಣಿಗಳಲ್ಲಿ ದೊರೆತ ವಜ್ರಗಳಿದ್ದಂತೆ ಇರುತ್ತವೆ. ಅವುಗಳನ್ನು ಸಾಣೆಗೆ ಹಿಡಿದಾಗ ಬೆಳಕು ಬೀರುತ್ತವೆ. ಈ ರೀತಿಯಲ್ಲಿ ಭಾಗವತ ಪುರಾಣದಲ್ಲಿ ಬರುವ ಒಂದು ವಿಷಯವು ಅಶೋಕನ ಅದೆಷ್ಟೋ ಪೂರ್ವದಲ್ಲಿ ಕನ್ನಡನಾಡಿಗೆ ಜೈನಧರ್ಮದ ಪ್ರವೇಶವಾದ ಸಂಗತಿಯನ್ನು ತಿಳಿಸುತ್ತದೆ.

ಪರಮಾತ್ಮನು–ಆದಿನಾರಾಯಣನು ಮತ್ಸ್ಯಕೂರ್ಮಾದ್ಯವತಾರಗಳನ್ನು ತಾಳಿ ದುಷ್ಟರನ್ನು ನಿಗ್ರಹಿಸಿ ಭೂಭಾರವನ್ನಿಳುಹಿ ಶಿಷ್ಟರನ್ನು ಪರಿಪಾಲಿಸಿದನೆಂದು ಪುರಾಣಗಳು ಹೇಳುತ್ತವೆ. ಪರಮಾತ್ಮನ ದಶಾವತಾರಗಳಲ್ಲಿ ಬುದ್ಧನದೂ ಒಂದು ಅವತಾರ. ಒಂಬತ್ತನೆಯ ಅವತಾರ. ಜೈನಧರ್ಮದ ತೀರ್ಥಂಕರರಲ್ಲಿ ಒಬ್ಬರೂ ಇದರಲ್ಲಿ ಸೇರಿಲ್ಲ. ಆದರೆ ಭಾಗವತ ಪುರಾಣದಲ್ಲಿ ಪರಮಾತ್ಮನ ಇಪ್ಪತ್ತೊಂದು ಲೀಲಾವತಾರಗಳ ವರ್ಣನೆ ಬರುತ್ತದೆ. ಆ ಲೀಲಾವತಾರಗಳಿವು : ೧) ಬ್ರಹ್ಮ ೨) ವರಾಹ ೩) ನಾರದ ೪) ನರನಾರಾಯಣ ೫) ಕಪಿಲ ೬) ಅತ್ರಿಸುತ ದತ್ತ ೭) ಯಜ್ಞ ೮) ವೃಷಭ ೯) ಪೃಥುಚಕ್ರವರ್ತಿ ೧೦) ಮತ್ಸ್ಯ ೧೧) ಕೂರ್ಮ ೧೨) ಧನ್ವಂತರಿ ೧೩) ಮೋಹಿನಿ ೧೪) ನರಸಿಂಹ ೧೫) ವಾಮನ ೧೬) ಪರಶುರಾಮ ೧೭) ವ್ಯಾಸ ೧೮) ರಾಮ ೧೯) ಕೃಷ್ಣ ೨೦) ಬುದ್ಧ ೨೧) ಕಲ್ಕಿ.

ಇಲ್ಲಿ ಹೇಳಿರುವ ಲೀಲಾವತಾರಗಳಲ್ಲಿ ಜೈನತೀರ್ಥಂಕರರಲ್ಲಿ ಮೊದಲಿಗನಾದ ಋಷಭ ತೀರ್ಥಂಕರನದೂ ಒಂದು ಅವತಾರ. ಋಷಭಾವತಾರದ ಬಗೆಗೆ ಭಾಗವತದಲ್ಲಿ ಹೇಳಿದ ಸಂಗತಿಗಳಿವು :

ಅಷ್ಟಮೋ ಮೇರುದೇವ್ಯಾಂತುರ್ನಾಭೇರ್ಜಾತ ಉರುಕ್ರಮಃ ।
ದರ್ಶಯನ್ವರ್ತ್ಮಧೀರಾಣಾಂ ಸರ್ವಾಶ್ರಮ ನಮಸ್ಕೃತಂ ॥

—ಸ್ಕಂಧ ೧, ಅಧ್ಯಾಯ ೩, ಶ್ಲೋಕ ೧೦

—(ಪರಮಾತ್ಮನು) ಎಂಟನೆಯ ಅವತಾರವಾಗಿ ಮೇರುದೇವಿಯಲ್ಲಿ ನಾಭಿಗೆ ಜನ್ಮತಾಳಿ ಉರುಕ್ರಮನೆಂದು ಪ್ರಸಿದ್ಧನಾಗಿ ವಿದ್ವಾಂಸರಿಗೆ ಪರಮಹಂಸಧರ್ಮವನ್ನು ಬೋಧಿಸಿದನು.

ನಾಭೇರಸಾ ವೃಷಭ ಆಸ ಸುದೇವಿ ಸೂನು ।
ಯೋವೈಚಚಾರ ಸಮದೃಗ್ ಹೃದಿಯೋಗಚರ್ಯಾಂ ॥
ಯತ್ಪಾರಮಹಂಸ್ಯ ಮೃಷಯಃ ಪದಮಾಮನಂತಿ ।
ಸ್ವಸ್ಥಃ ಪ್ರಶಾಂತಕರಣಃ ಪರಿಮುಕ್ತಸಂಗಃ ॥

—ಸ್ಕಂಧ ೨, ಅಧ್ಯಾಯ ೩, ಶ್ಲೋಕ ೧೦

—ನಾಭಿಗೆ ಸುದೇವಿಯೆಂಬವಳಲ್ಲಿ ಹರಿಯು ವೃಷಭಾವತಾರವನ್ನು ತಾಳಿ ಜಡಸ್ವಭಾವವಾದ ಯೋಗವನ್ನು ಮಾಡಿ ಪ್ರಶಾಂತಾಂತಃಕರಣನೂ ಮುಕ್ತಸಂಗನೂ ಆಗಿ ಪರಮಹಂಸಾದಿ ಗಮ್ಯವಾದ ಪದವಿಯು ಇದೇ ಎಂದು ಮಹಾಮುನಿಗಳು ಹೇಳಲು ಸಂಚರಿಸುತ್ತಿದ್ದನು. (ಸುದೇವಿ=ಮೇರುದೇವಿ).

ಭಾಗವತದ ಪಂಚಮಸ್ಕಂಧದಲ್ಲಿ ವಿವರಿಸಲಾದ ಋಷಭಚರಿತ್ರೆ : ಅಗ್ನಿಧ್ರನ ಮಗನಾದ ನಾಭಿರಾಜನಿಗೆ ಸಂತಾನವಿರಲಿಲ್ಲ. ಪುತ್ರಾರ್ಥಿಯಾಗಿ ತನ್ನ ಭಾರ್ಯೆಯಾದ ಮೇರುದೇವಿಯೊಡಗೂಡಿ ಯಜ್ಞಗಳ ಮೂಲಕವಾಗಿ ಯಾಗಾರಾಧ್ಯನಾದ ಪರಮಪುರುಷನನ್ನು ಶ್ರದ್ಧೆಯಿಂದ ಆರಾಧಿಸುತ್ತಿದ್ದನು. 'ಅಗ್ನಿಷ್ಟೋಮ' ಎಂಬ ಯಾಗ ಆಚರಿಸುವಾಗ ಪರಮಾತ್ಮನು ಪ್ರೀತನಾಗಿ ಪ್ರತ್ಯಕ್ಷನಾದನು. ಅಲ್ಲಿ ಕೂಡಿದ ಋತ್ವಿಕ್ಕುಗಳೂ ಪುರೋಹಿತರೂ ಸಭಾಸದರೂ ಪರಮಾತ್ಮನನ್ನು ಸ್ತುತಿಸಿ 'ರಾಜನು ನಿನಗೆ ಸಮಾನನಾದ ಪುತ್ರನನ್ನು ಪಡೆಯಲಿ' ಎಂದು ಪ್ರಾರ್ಥಿಸಿದರು. ಆಗ ಪರಮಾತ್ಮನು 'ನನಗೆ ಸಮಾನರಾದವರು ಬೇರೊಬ್ಬರಿಲ್ಲ, ನಿಮ್ಮ ಮಾತು ಸುಳ್ಳಾಗಬಾರದೆಂದು ನನ್ನ ಅಂಶದಿಂದ ನಾನೇ ಈ ನಾಭಿರಾಜನ ಭಾರ್ಯೆಯಾದ ಮೇರುದೇವಿಯಲ್ಲಿ ಜನಿಸುವೆನು' ಎಂದು ಹೇಳಿ ಆ ರೀತಿಯಲ್ಲಿ ಋಷಭನಾಮಧೇಯದಿಂದ ಜನಿಸಿದನು. ಋಷಭನು ದೇವೇಂದ್ರನು ತನಗೆ ಪ್ರೀತಿಯಿಂದ ಕೊಟ್ಟ 'ಜಯಂತಿ' ಎಂಬ ಕನ್ನೆಯನ್ನು ಮದುವೆಯಾಗಿ ಅವಳಲ್ಲಿ ನೂರುಮಂದಿ ಪುತ್ರರನ್ನು ಪಡೆದನು. ಆ ಮಕ್ಕಳಲ್ಲಿ ಹಿರಿಯನು ಭರತ. ಈ ಭರತನಿಂದಲೇ ಅಜನಾಭವೆಂಬ ಈ ಭೂಖಂಡಕ್ಕೆ, ಭರತವರ್ಷ ಎಂಬ ಹೆಸರಾಯಿತು. ಭರತನು ಸಾಮಾದ್ಯುಪಾಯಗಳಿಂದ ತನ್ನ ಪ್ರಜೆಗಳನ್ನು ರಕ್ಷಿಸುತ್ತಿದ್ದನು. ಕೊನೆಗಾಲದಲ್ಲಿ ಅವನು ತನ್ನ ಮಕ್ಕಳಿಗೆ ಮೋಕ್ಷಧರ್ಮವನ್ನು ಉಪದೇಶಿಸಿ ತನ್ನ ಹಿರಿಯ ಮಗನಾದ ಭರತನಿಗೆ ಪಟ್ಟಗಟ್ಟಿ ತಾನು ಉಡಿಗೆ-ತೊಡಿಗೆ ಮೊದ

ಲಾದ ಶರೀರಪರಿಕರಗಳನ್ನೆಲ್ಲ ತೆಗೆದು ಹಾಕಿ ದಿಗಂಬರನಾಗಿ ಹುಚ್ಚನಂತೆ, ತಲೆಯನ್ನು ಕೆದರಿಕೊಂಡು ವೈದಿಕಾಗ್ನಿಗಳನ್ನು ಆತ್ಮಸಮಾರೋಪಣ ಮಾಡಿಕೊಂಡು ಸಂನ್ಯಾಸಿಯಾಗಿ ಹೊರಟುಬಿಟ್ಟನು. ದಾರಿಯಲ್ಲಿ ಜನರು ತನ್ನನ್ನು ಮಾತನಾಡಿಸಿದರೂ ಉತ್ತರವನ್ನು ಕೊಡದೆ ಮೂಕನಂತೆಯೂ ಕಿವುಡನಂತೆಯೂ ಕುರುಡನಂತೆಯೂ ಪಿಶಾಚಿ ಹಿಡಿದವನಂತೆಯೂ ಹುಚ್ಚನಂತೆಯೂ ಏಕಾಕಿಯಾಗಿ ತಿರುಗುತ್ತಿದ್ದನು. ಅತನು ಸಹಜವಾಗಿ ಶರೀರಾಭಿಮಾನವನ್ನು ಬಿಟ್ಟಿದ್ದರೂ ತನಗೆ ಕರ್ಮವಾಸನೆಯಿಂದ ದೇಹಾಭಿಮಾನವಿರುವಂತೆ ನಟಿಸುತ್ತ ಭೂಮಂಡಲವನ್ನು ಸುತ್ತುತ್ತಿದ್ದನು.[೪]

ಮೇಲಿನದು ಭಾಗವತಧರ್ಮದವರು ಹೇಳುವ ಪರಮಾತ್ಮನ ಋಷಭಾವತಾರದ ಚರಿತ್ರೆಯಾದರೆ ಜೈನಧರ್ಮೀಯರು ಹೇಳುವ ಆದಿತೀರ್ಥಂಕರನಾದ ಋಷಭದೇವನ ಚರಿತ್ರೆಯಿದು :

ಚತುರ್ದಶಮನುಗಳಲ್ಲಿ ಕೊನೆಯವನು ನಾಭಿರಾಜ. ಆ ನಾಭಿರಾಜನ ಪತ್ನಿ ಮರುದೇವಿ. ಇವರಿಂದ ಜನಿಸಿದ ಋಷಭನೇ ಆದಿತೀರ್ಥಂಕರ. ಕಚ್ಛ ಮಹಾಕಚ್ಛರ ತಂಗಿಯರಾದ ಯಶಸ್ವತಿ-ಸುನಂದೆಯರೊಡನೆ ಋಷಭನ ಲಗ್ನವಾಯಿತು. ಋಷಭನಿಗೆ ಪಟ್ಟಮಹಿಷಿ ಯಶಸ್ವತಿಯಲ್ಲಿ ಭರತನು ಜನಿಸಿದನು. ಯಶಸ್ವತಿಯು ನೂರು ಜನ ಪುತ್ರರನ್ನೂ ಬ್ರಹ್ಮಿ ಎಂಬ ಮಗಳನ್ನೂ ಹೆತ್ತಳು. ಸುನಂದಾದೇವಿಯು ಬಾಹುಬಲಿಯೆಂಬ ಪುತ್ರನನ್ನೂ ಸೌಂದರಿಯೆಂಬ ಪುತ್ರಿಯನ್ನೂ ಹೆತ್ತಳು. ಋಷಭನು ತನ್ನ ಪುತ್ರಿಯರಲ್ಲಿ ಒಬ್ಬಳಾದ ಬ್ರಹ್ಮಿಗೆ ಲಿಪಿಗಳನ್ನೂ ಸೌಂದರಿಗೆ ಛಂದೋವಿಚಿತ್ರಾಲಂಕಾರ ಮೊದಲಾದ ಸಮಸ್ತವಿದ್ಯೆಗಳನ್ನೂ ಕಲಿಸಿದನು. ಗಂಡುಮಕ್ಕಳಲ್ಲಿ ಭರತನಿಗೆ ಭರತಶಾಸ್ತ್ರ-ಅರ್ಥಶಾಸ್ತ್ರಗಳನ್ನೂ ವೃಷಭಸೇನನಿಗೆ ಗಂಧರ್ವಶಾಸ್ತ್ರವನ್ನೂ ಬಾಹುಬಲಿಗೆ ಕಾಮತಂತ್ರ ಸಾಮುದ್ರಿಕಾದಿ ಶಾಸ್ತ್ರಗಳನ್ನೂ ಕಲಿಸಿದನು. ಆ ತರುವಾಯ ಆದಿನಾಥನು ಅಸಿ. ಮಸಿ. ಕೃಷಿ. ವಾಣಿಜ್ಯ, ಶಿಲ್ಪಗಳನ್ನೂ ಕಲ್ಪಿಸಿ ಕ್ಷತ್ರಿಯರಿಗೆ ಶಾಸ್ತ್ರಕರ್ಮವನ್ನೂ ವೈಶ್ಯವರ್ಗಕ್ಕೆ ಪಶುಪಾಲ್ಯಕೃಷಿಪುಣ್ಯಕರ್ಮಗಳನ್ನೂ ಶೂದ್ರರಿಗೆ ಶುಶ್ರೂಷಾನಿಯೋಗವನ್ನೂ ಉಪದೇಶಿಸಿ ವರ್ಣಸಂಕರವಾಗದಂತೆ ನಿಯೋಗಿಸಿದನು. ಆದಿಬ್ರಹ್ಮನು ತಾನು ಹಿಂದೆ ಪಡೆದ ವರ್ಣತ್ರಯಕ್ಕೆ ಅವನ ಮಗನಾದ ಭರತನಿಂದ ಮುಂದೆ ಉಂಟಾಗುವ ವಿಪ್ರವರ್ಣಕ್ಕೆ ಯಥೋಚಿತ ವೃತ್ತಿಗಳನ್ನು ತಿಳಿಸಬೇಕೆಂದು ಬಗೆದು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮತ್ತು ಶೂದ್ರ ಎಂಬೀ ಹೆಸರುಗಳು ವೃತ್ತಿಗಳಿಂದ ಉಂಟಾದುವೆಂದು ತಿಳಿಸಿ ಇದನ್ನು ತಪ್ಪಿದವರಿಗೆ ಶಿಕ್ಷೆಯನ್ನು ವಿಧಿಸಿದನು. ಜನರು ಸ್ವಚ್ಛಂದವಾಗಿ ನಡೆಯದಂತೆ ರಾಜ್ಯಪರಿಪಾಲನೆಗೆಂದು ಕುರುವಂಶ, ಹರಿವಂಶ, ನಾಥವಂಶ, ಉಗ್ರವಂಶ ಎಂಬ ರಾಜವಂಶಗಳನ್ನು ನಿಯಮಿಸಿದನು. ಈ ಪ್ರಕಾರ ವ್ಯವಸ್ಥೆಮಾಡಿ ಅರವತ್ತುಮೂರು ಲಕ್ಷ ಪೂರ್ವಕಾಲ ರಾಜ್ಯವಾಳಿ, ಕೊನೆಯಲ್ಲಿ ಹಿರಿಯಮಗ ಭರತನಿಗೆ ಅಧಿರಾಜ ಪಟ್ಟ

೪ ಭಾಗವತ ಸ್ಕಂಧ ೫, ಅಧ್ಯಾಯ ೩ ರಿಂದ ೬

ವನ್ನೂ ಬಾಹುಬಲಿಗೆ ಯುವರಾಜ ಪಟ್ಟವನ್ನೂ ಕಟ್ಟಿ ಉಳಿದ ಅಪತ್ಯವರ್ಗಕ್ಕೆ ಭೂಮಿಯನ್ನು ಹಂಚಿಕೊಟ್ಟು ವೈರಾಗ್ಯಪರನಾಗಿ ಸಂಸಾರತ್ಯಾಗವಮಾಡಿ ತಪಸ್ಸನ್ನಾಚರಿಸಿ ಜಿನಕಲ್ಪವೆಂಬ ಆಚರಣವನ್ನು ಕೈಕೊಂಡು ಯೋಗ್ಯ ಸ್ಥಳಗಳಲ್ಲಿ ಸಂಚರಿಸುತ್ತ ಪರಿಮತಾಳಪುರದ ಬಹಿರುದ್ಯಾನ ಕೆಳಗೆ ಪಲ್ಯಂಕಾಸೀನನಾಗಿ ಕುಳಿತು ಘಾತಿಕರ್ಮಗಳನ್ನು ಕೆಡಿಸಿ ಕೈವಲ್ಯಲಕ್ಷ್ಮಿಯನ್ನು ಪಡೆದನು.[೫]

ಭಾಗವತ ಮತ್ತು ಜೈನಪುರಾಣ ಇವುಗಳಲ್ಲಿ ಬರುವ ಋಷಭಚರಿತೆಯಲ್ಲಿ ಹಲವು ವ್ಯತ್ಯಾಸಗಳಿದ್ದರೂ ಕೆಲವು ಸಾಮ್ಯಗಳೂ ಕಂಡುಬರುತ್ತವೆ. ಎರಡರಲ್ಲಿಯೂ ಋಷಭನು ದೇವಸ್ವರೂಪನು. ಅವನ ತಂದೆ ನಾಭಿರಾಜ. ಭಾಗವತದಲ್ಲಿ ಋಷಭನ ತಾಯಿ ಮೇರು ಎಂದಿದ್ದರೆ ಆದಿಪುರಾಣದಲ್ಲಿ ಮರು, ಪುತ್ರ ಭರತ ಎಂದಿರುವುದನ್ನು ಗಮನಿಸಬೇಕು. ಇದೂ ಅಲ್ಲದೆ ಭಗವದವತಾರವಾದ ಋಷಭನ ಆಚಾರಗಳಿಗೆ ಅಪಾರ್ಥಮಾಡಿಕೊಂಡುದರ ಪರಿಣಾಮವಾಗಿ ಪಾಷಂಡ ಜೈನಮತವು ಪ್ರಚಾರದಲ್ಲಿ ಬಂದಿತಾಗಿ ಭಾಗವತದಲ್ಲಿ ಹೇಳಲಾಗಿದೆ. ಅರ್ಥಾತ್ ಭಾಗವತ ಜೈನಪುರಾಣಗಳಲ್ಲಿ ಹೇಳುವ ಋಷಭಚರಿತೆಯು ಒಂದೇ ವ್ಯಕ್ತಿಯ ಎರಡು ಮುಖಗಳೆಂಬುದನ್ನು ಸ್ಪಷ್ಟಪಡಿಸುತ್ತದೆ. ಇದು ನೋಡಿ :

"ಏಕದಾತು ಕಾಂಕಟ ಕರ್ಣಾಟಕಾದ್ದಕ್ಷಿಣಕರ್ಣಾಟಕಾನ್ ದೇಶಾನ್ ಯದೃಚ್ಛಯೋಪಗತಃ ಕುಟಚಾಚಲೋಪವನೇ ಆಸ್ಯಕೃತಾಶ್ಮಕವಲ ಉನ್ಮಾದ ಇವಮುಕ್ತಮೂರ್ಧಜೋಽಸಂವಿತ ಏವ ವಿಚಚಾರ".

"ಅಥ ಸಸೂರ ವೇಗ ವಿಧುತ ವೇಣು ನಿಕರ್ಷೋಪಜಾತೋ ದಾವಾನಲಸ್ತದ್ವನ ಮಾಲೇ ಲಿಹಾನಃ ಸಹತೇನ ದದಾಹ"

"ಯುಸ್ಯ ಕಿಲಾನುಚರಿತಮುಪಾಕರ್ಣ್ಯ ಕಾಂಕಟ ಕರ್ಣಾಟಕಾನಾಂ ದಕ್ಷಿಣಕರ್ಣಾಟಕಾನಾಂ ರಾಜಾರ್ಹನಾಮೋಪಶಿಕ್ಷ್ಯ ಕಲಾವಧರ್ಮ ಉತ್ಕೃಷ್ಯಮಾಣೇ ಭವಿತವ್ಯೇಕ ವಿಮೋಹಿತಃ ಸ್ವಧರ್ಮ ಪಥಮಕುತೋಭಯಮಪಹಾಯದಃ ಕುಪಥಂ ಪಾಷಂಡಮಸಮಂಜಸಂ ನಿಜ ಮನೀಷಯಾಮಂದಃ ಸಂಪ್ರವರ್ತಯಿಷ್ಯತೇ".

"ಯೇನ ಹವಾ ಕಲೇ ಮನುಜಾಪಸದಾ ದೇವಮಾಯಾ ವಿಮೋಹಿತಾಃ ಸ್ವವಿಧಿನಿಯೋಗ ಶೌಚಾಚಾರವಿಹೀನಾ ದೇವಹೇಲಿನಾದೀನ್ಯಪವ್ರತಾನಿ ನಿಜೇಚ್ಛಯಾಗೃಹ್ಣಾನಾ ಅಸ್ನಾನಾ ನಾಚಮನಾಶೌಚಕೇಶೋಲುಂಚಾನಾದೀನಿ ಕಲಿ ನಾಧರ್ಮಬಹುಲೇನೋಪಹತ ಧಿಯೋ ಬ್ರಹ್ಮಬ್ರಾಹ್ಮಣ ಯಜ್ಞಪುರುಷ ಲೋಕ ವಿದೂಷಕಾಃ ಪ್ರಾಯೇಣ ಭವಿಷ್ಯಂತಿ"

"ತ್ರೈರಪಿಹ್ಯರ್ವಾಕ್ತನಯಾ ನಿಜ ಲೋಕಯಾತ್ರಯಾಂಧಪರಂಪರಯಾತ ಏವಾ ನಾಸ್ಥಾಸ್ತಮಸ್ಯಂಧೇ ಸ್ವಯಮೇವ ಪ್ರಪತಿಷ್ಯಂತಿ" [೬]

೫ ಪಂಪನ ಆದಿಪುರಾಣ, ಆಶ್ವಾಸ ೬ ರಿಂದ ೯

೬ ಭಾಗವತ ಸ್ಕಂಧ - ೫, ಅಧ್ಯಾಯ ೬. ಶ್ಲೋಕ ೮-೧೨

—ಸನ್ಯಾಸಿಯಾಗಿ ದೇಶಾಟನ ಮಾಡುತ್ತ ನಡೆದ ಋಷಭನು ಕೊಂಕಣವೆಂದೂ ವೆಂಕಪಟುವೆಂದೂ ಕುಟಕವೆಂದು ಕರೆಯಲ್ಪಡುವ ದಕ್ಷಿಣ ಕರ್ನಾಟಕ ದೇಶಕ್ಕೆ ಬರುತ್ತಾನೆ. ಅಲ್ಲಿ ಕುಟಚಾಚಲವೆಂಬ ಬೆಟ್ಟಕ್ಕೆ ಸಮೀಪದಲ್ಲಿರುವ ಒಂದಾನೊಂದು ಕಾಡಿನಲ್ಲಿ ಸುತ್ತಾಡುತ್ತಿರುವಾಗ ಅಲ್ಲಿ ಹಬ್ಬಿದ ಕಾಳ್ಗಿಚ್ಚಿನಲ್ಲಿ ಅವನ ದೇಹವು ದಗ್ಧವಾಗಿ ಹೋಗುತ್ತದೆ. ಕೊಂಕಣ ದಕ್ಷಿಣ ಕರ್ನಾಟಕಗಳಿಗಧಿಪತಿಯಾದ ಅರ್ಹನಾಮಧೇಯ ರಾಜನು ಬ್ರಹ್ಮಚರ್ಯಾದಿ ಚತುರಾಶ್ರಮಧರ್ಮಗಳಿಗಿಂತೂ ವಿಲಕ್ಷಣವಾದ ಋಷಭನ ವ್ರತಾಚಾರಗಳನ್ನು ಕೇಳಿ ಅವುಗಳೇ ಶಾಸ್ತ್ರವಿಹಿತವೆಂದು ಭ್ರಮಿಸುವನು. ವೈದಿಕ ಕರ್ಮಗಳನ್ನೆಲ್ಲ ಬಿಟ್ಟು ಸರ್ವವಿಧದಲ್ಲಿಯೂ ನಿರ್ಭಯವಾದ ಸ್ವಧರ್ಮವನ್ನು ತ್ಯಜಿಸಿ ತಾನೂ ಆ ಋಷಭನಂತೆಯೇ ಆಚರಿಸುತ್ತ ತನ್ನ ಪ್ರಜೆಗಳಿಗೂ ಅದನ್ನೇ ಉಪದೇಶಿಸಿದನು. ದೈವಮಾಯೆಯಿಂದ ಮೊದಲೇ ಮೋಹಿತರಾದ ಆ ಜನರು ಅರ್ಹನ ಬೋಧನೆಯಿಂದ ಮತ್ತಷ್ಟು ಮೋಹಿತರಾಗಿ ತಮ್ಮ ವರ್ಣಾಶ್ರಮಗಳನ್ನೂ ವಿಧ್ಯುಕ್ತವಾದ ಶೌಚ-ಸಂಧ್ಯಾವಂದನಾದಿಗಳನ್ನೂ ತ್ಯಜಿಸಿ ದೇವ ದೇವತೆಗಳಿಗೆ ಅವಮಾನಕರವಾದ ವ್ರತಗಳನ್ನು ಆಚರಿಸಿ ತಾವಾಗಿಯೇ ಅಂಧತಮಸ್ಸಿನಲ್ಲಿ ಬೀಳುತ್ತಿದ್ದರು.

ಈ ವಿವರಣೆಯು ಭಾಗವತಧರ್ಮದಲ್ಲಿ ಪರಮಾತ್ಮನ ಅವತಾರವೆಂದು ಎಣಿಸಿದ ಋಷಭನೂ ಜೈನ ತೀರ್ಥಂಕರನಾದ ಋಷಭನೂ ಒಬ್ಬನೇ ಎಂಬುದನ್ನು ವಿಶದಪಡಿಸುವುದಲ್ಲದೆ ಜೈನಧರ್ಮವು ಕರ್ನಾಟಕ ರಾಜನೊಬ್ಬನಿಂದ ಜನ್ಮ ತಾಳಿದುದಾಗಿ ಹೇಳುತ್ತದೆ. ಬುದ್ಧನೂ ಮಹಾವೀರನೂ ಸಮಕಾಲೀನ ಐತಿಹಾಸಿಕ ವ್ಯಕ್ತಿಗಳು. ಮಹಾವೀರನು ಜೈನಧರ್ಮದ ಕೊನೆಯ ೨೪ನೆಯ ತೀರ್ಥಂಕರ. ಅವನಿಗೆ ಪೂರ್ವದಲ್ಲಿ ೨೩ ತೀರ್ಥಂಕರರು ಆಗಿ ಹೋಗಿರುವರೆಂದೂ ಅವರಲ್ಲಿ ಋಷಭನು ಆದಿ ತೀರ್ಥಂಕರನೆಂದೂ ಜೈನಧರ್ಮೀಯರ ಹೇಳಿಕೆ. ಕ್ರೈಸ್ತ-ಮುಸಲ್ಮಾನ ಧರ್ಮಗಳಲ್ಲಿಯೂ ಏಸುಕ್ರಿಸ್ತ, ಮುಹಮ್ಮದ ಪೈಗಂಬರ ಇವರುಗಳಿಗೆ ಪೂರ್ವದಲ್ಲಿ ಹಲವರ ಪ್ರವಾದಿಗಳು ಆಗಿ ಹೋದರೆಂದು ಹೇಳಲಾಗಿದೆ. ಇದೂ ಹಾಗೆಯೆ. ಮಹಾವೀರನ ಪೂರ್ವದ ತೀರ್ಥಂಕರರನ್ನೂ ಐತಿಹಾಸಿಕ ವ್ಯಕ್ತಿಗಳಲ್ಲಿ ಎಣಿಸುವುದು ಅಯೋಗ್ಯವಾದುದೆಂದೂ ಹೇಳಲಿಕ್ಕೆ ಬರುವುದಿಲ್ಲ. ಭಾಗವತದಲ್ಲಿ ಜೈನಧರ್ಮದ ಮಹಾವೀರ ತೀರ್ಥಂಕರನ ಉಲ್ಲೇಖವಿಲ್ಲ. ಅರ್ಥಾತ್ ದಾಕ್ಷಿಣಾತ್ಯರಿಗೆ ಅದರಲ್ಲಿಯೂ ಕನ್ನಡಿಗರಿಗೆ ಮಹಾ-ವೀರನ ಪರಿಚಯವಾಗುವ ಪೂರ್ವದಲ್ಲಿಯೇ ಕನ್ನಡನಾಡಿನಲ್ಲಿ ಜೈನಧರ್ಮವು ಪ್ರಸಾರವಾಗಿತ್ತೆಂದು ಹೇಳಬಹುದು. ಜೈನಧರ್ಮವು ಕನ್ನಡ ರಾಜನೊಬ್ಬನಿಂದ ಉದಯವಾಯಿತೆಂದು ಹೇಳುವುದು ಐತಿಹಾಸಿಕ ಸಂಗತಿಗೆ ವಿರುದ್ಧವಾಗುವುದು. ಆದುದರಿಂದ ದಕ್ಷಿಣಕ್ಕೆ ಸಾಗಿಬಂದ ಜೈನಸನ್ಯಾಸಿಯೊಬ್ಬನು ಕರ್ನಾಟಕದ ರಾಜನೊಬ್ಬನ ಆಶ್ರಯ ಪಡೆದು ಜೈನಧರ್ಮವನ್ನು ಇಲ್ಲಿ ಪ್ರಸಾರ ಮಾಡಿದನೆಂದು ಹೇಳುವುದು ಯುಕ್ತವಾದುದು.

ಪರಮಾತ್ಮನ ಬೌದ್ಧಾವತಾರದ ಬಗೆಗೆ ಭಾಗವತಪುರಾಣದಲ್ಲಿ ಹೇಳಿದ ಸಂಗತಿಗಳಿವು :

"ತತಃ ಕಲೌ ಸಂಪ್ರವೃತ್ತೇ ಸಂಮೋಹಾಯ ಸುರದ್ವಿಷಾಂ ।
ಬುದ್ಧೋನಾಮ್ನಾ ಜಿನಸುತಃ ಕೀಕಟೇಷು ಭವಿಷ್ಯತಿ ॥"[೭]

—ಕಲಿಯುಗದ ಆದಿಯಲ್ಲಿ ರಾಕ್ಷಸರನ್ನು ಸಮ್ಮೋಹಗೊಳಿಸುವುದಕ್ಕಾಗಿ ಕೀಕಟ (ಮಧ್ಯ ಗಯಾ)ದಲ್ಲಿ ಪರಮಾತ್ಮನು ಬುದ್ಧನೆಂಬ ನಾಮಧೇಯದಿಂದ ಜಿನಸುತನಾಗಿ ಪ್ರಕಾಶಿಸುವನು.

"ದೇವದ್ವಿಷಾಂ ನಿಗಮವರ್ತ್ಮನಿ ನಿಷ್ಠಿತಾನಾಂ ।
ಪೂರ್ಭಿರ್ಮಯೇನ ವಿಹಿತಾಭಿರದೃಶ್ಯ ಮೂರ್ತಿಃ ॥
ಲೋಕಾನ್ ಘ್ನತಾಂ ಮತಿವಿಮೋಹ ಮತಿಪ್ರಲೋಭಂ ।
ವೇಷಂ ವಿಧಾಯ ಯದ ಭಾಷತ ಔಪಧರ್ಮ್ಯಂ ॥"[೮]

—ದೇವದ್ವೇಷಿಗಳಾದ ಅಸುರರು ವೈದಿಕಮಾರ್ಗದಲ್ಲಿ ಬಹಳ ಶ್ರದ್ಧೆಯನ್ನು ವಹಿಸಿ ಮಯನಿರ್ಮಿತವಾಗಿಯೂ ಎಣೆಯಿಲ್ಲದ ವೇಗವುಳ್ಳವುಗಳಾಗಿಯೂ ಇದ್ದ ಪಟ್ಟಣಗಳಿಂದ ಜನತೆಯನ್ನು ಹಿಂಸಿಸುತ್ತಿರುವಾಗ ಅವನನ್ನು ಮೋಹಗೊಳಿಸಿ ವಂಚಿಸುವುದಕ್ಕಾಗಿ ಭಗವಂತನು ಆಭಾಸಧರ್ಮವಾದ ಪಾಷಂಡಧರ್ಮವನ್ನೇ ಹಿಡಿದು ಅವರಿಗೂ ಆ ಧರ್ಮವನ್ನು ಉಪದೇಶಿಸಿದನು.

ಭಾಗವತ ಪುರಾಣದಂತೆ ಪರಮಾತ್ಮನ ಬೌದ್ಧಾವತಾರದ ಕಾರ್ಯವೆಂದರೆ ತ್ರಿಪುರಾಸುರರ ನಾಶಕ್ಕೆ ಅನುಕೂಲ ಪರಿಸ್ಥಿತಿಯನ್ನುಂಟುಮಾಡುವುದಕ್ಕಾಗಿ ಅಧರ್ಮವನ್ನಾಚರಿಸಲು ರಾಕ್ಷಸರನ್ನು ಪ್ರಚೋದಿಸುವುದು. ಆ ತ್ರಿಪುರಾಸುರರ ಕಥೆ ಇಂತಿದೆ :

ತಾರಕಾಸುರನಿಗೆ ಮೂವರು ಮಕ್ಕಳು, ತಾರಾಕ್ಷ, ಕಮಲಾಕ್ಷ, ವಿದ್ಯುನ್ಮಾಲಿ (ಮ. ಭಾ. ಕರ್ಣ, ೨೪). ತಾರಕಾಸುರನ ಮರಣಾನಂತರ ರಾಕ್ಷಸರ ಶಿಲ್ಪಿಯಾದ ಮಯನು ತಾರಾಕ್ಷ ವಿದ್ಯುನ್ಮಾಲಿಗಳನ್ನು ಕೂಡಿಕೊಂಡು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿದನು. ಬ್ರಹ್ಮನನ್ನು ಮೆಚ್ಚಿಸಿ 'ಯಾವ ದೇವತೆಗಳಿಗೂ ಭೇದಿಸುವುದಕ್ಕೆ ಅಸಾಧ್ಯವಾದ ಮೂರು ಪಟ್ಟಣಗಳನ್ನು ನಿರ್ಮಿಸುವ ಸಾಮರ್ಥ್ಯ ಕೊಡು' ಎಂದು ವರವನ್ನು ಪಡೆದನು. ಆಮೇಲೆ ಭೂಮಿ-ಅಂತರಿಕ್ಷ-ಪಾತಾಳಗಳಲ್ಲಿ ವೇಗವಾಗಿ ತಿರುಗುತ್ತಿರುವ ಒಂದೊಂದು ಪಟ್ಟಣ ರಚಿಸಿದನು. ತಾರಕಾಸುರನ ಮಕ್ಕಳಲ್ಲಿ ಒಬ್ಬೊಬ್ಬರನ್ನು ಒಂದೊಂದು ಪಟ್ಟಣದಲ್ಲಿರಿಸಿ (ಕರ್ಣ, ೨೪) ಅವರಿಗೆ 'ಇನ್ನು ಮೇಲೆ ದೇವತೆಗಳ ಗೊಡವೆಗೆ ಹೋಗದಿರಿ. ಅವರು ತಿರುಗಾಡುವ ದಾರಿಯಲ್ಲಿ ಸುಳಿಯದಿರಿ. ದೈವ ಭಕ್ತಿ ದೂರಮಾಡಿ ಆಚಾರಹೀನರಾಗದಿರಿ. ಪರಮೇಶ್ವರನ ಪೂಜೆಯಲ್ಲಿ ಅಸಡ್ಡೆ

೭ ಭಾಗವತ ಸ್ಕಂಧ – ೧, ಅಧ್ಯಾಯ – ೩. ಶ್ಲೋಕ – ೨೪.
೮ ಭಾಗವತ ಸ್ಕಂಧ – ೨, ಅಧ್ಯಾಯ – ೭, ಶ್ಲೋಕ – ೩೭.

ತೋರದಿರಿ' ಎಂದು ಉಪದೇಶ ಮಾಡಿದನು. ಮಯನಿರ್ಮಿತ ತ್ರಿಪುರಗಳು ತಿರುಗುತ್ತ ತಿರುಗುತ್ತ ಒಂದೇ ಕಡೆಗೆ ಕೂಡುತ್ತಿದ್ದುವು; ಮತ್ತೆ ದೂರವಾಗುತ್ತಿದ್ದುವು. ರಾಕ್ಷಸರು ಅನಾಚಾರ, ಹಿಂಸೆಗಳಲ್ಲಿ ತೊಡಗಿದರೆ ತ್ರಿಪುರಗಳು ಒಂದೇ ಕಡೆಗೆ ಕೂಡಿದ ಸಮಯದಲ್ಲಿ ಮಾತ್ರ ಅವುಗಳನ್ನು ನಾಶಮಾಡುವುದು ಶಕ್ಯವೆಂದು ಬ್ರಹ್ಮನು ಹೇಳಿದ್ದನು. ತ್ರಿಪುರಾಸುರರು ಕೆಲಕಾಲ ಮಯನ ಉಪದೇಶದಂತೆ ನಡೆದರು. ಆಮೇಲೆ ತಮ್ಮ ಸಹಜಸ್ವಭಾವಕ್ಕೆ ಅನುಸರಿಸಿ ದೇವತೆಗಳ ಹಿಂಸೆಯಲ್ಲಿ ತೊಡಗಿದರು. ಇದೇ ಸಮಯದಲ್ಲಿ ಪರಮಾತ್ಮನು-ವಿಷ್ಣುವು-ಬೌದ್ಧಾವತಾರ ತಾಳಿ ರಾಕ್ಷಸರು ಅಧರ್ಮದಲ್ಲಿ ನಡೆಯುವಂತೆ ಪ್ರಚೋದಿಸುವನು. ರಾಕ್ಷಸರ ಹಿಂಸೆಯು ಮೇರೆ ಮೀರಿದಾಗ ದೇವತೆಗಳು ಈಶ್ವರನ ಮೊರೆ ಹೊಕ್ಕರು. ಆಗ ಈಶ್ವರನು ಭೂಮಿಯನ್ನು ರಥವನ್ನಾಗಿ ಮಾಡಿಕೊಂಡು, ನಾಲ್ಕು ವೇದಗಳನ್ನು ಕುದುರೆಗಳನ್ನಾಗಿಯೂ ಬ್ರಹ್ಮನನ್ನು ಸಾರಥಿಯಾಗಿಯೂ ಮಂದಾರ ಪರ್ವತವನ್ನು ಬಿಲ್ಲಾಗಿಯೂ ಮಾಡಿಕೊಂಡು ತ್ರಿಪುರಗಳು ಒಂದೆಡೆ ಸೇರಿದಾಗ ವಿಷ್ಣುರೂಪಿಬಾಣದಿಂದ ತ್ರಿಪುರಗಳನ್ನು ದಹಿಸಿಬಿಡುತ್ತಾನೆ (ದ್ರೋಣ–೨೦, ಕರ್ಣ–೨೭, ಮತ್ಸ್ಯ ೧೩೦–೧೩೭, ಭಾಗವತ ಅಧ್ಯಾಯ ೭–೧೦).

ಬೌದ್ಧಾವತಾರದ ಈ ಕಥೆಗೂ ಬೌದ್ಧಧರ್ಮಸ್ಥಾಪಕ ಬುದ್ಧನಿಗೂ ಸಂಬಂಧವಿಲ್ಲ. ಇದು ಕೇವಲ ಪುರಾಣ ಕಥೆ. ಆದರೆ ಬುದ್ಧನನ್ನು ಪುರಾಣಗಳಲ್ಲಿ ಧರ್ಮಸ್ಥಾಪಕನನ್ನಾಗಿ ಮಾಡಿದುದು ಇತಿಹಾಸಕ್ಕೆ ಸಂಬಂಧಿಸಿದುದು. ಭಾಗವತ ಪುರಾಣವು ಬುದ್ಧನನ್ನು 'ಜಿನಪುತ್ರ' ಎಂದು ಹೇಳುತ್ತದೆ. ಸಿಂಹಲದಲ್ಲಿ ರಚಿತವಾದ ಮಹಾವಂಸದಲ್ಲಿ ಐತಿಹಾಸಿಕ ಬುದ್ಧನನ್ನು 'ಜಿನ' ಎಂದೇ ಹೇಳಲಾಗಿದೆ. ಬುದ್ಧನ ಪರಿನಿರ್ವಾಣದ ನಂತರ ೨೧೮ನೆಯ ವರ್ಷದಲ್ಲಿ ಅಶೋಕನ ಪಟ್ಟಾಭಿಷೇಕವಾಯಿತಾಗಿ ಅಲ್ಲಿ ಹೇಳಲಾಗಿದ್ದು ಇಲ್ಲಿ ಬುದ್ಧನಿಗಾಗಿ 'ಜಿನ' ಎಂಬ ಪದಪ್ರಯೋಗಿಸಲಾಗಿದೆ :[೯]

"ಅಸೋಕೋ ಆಸಿ ತೇಸಂ ತು ಪುಞ್ಞತೇಜೋ ಬಲಿದ್ಧಿಕೋ ॥ ೧೯ ॥
ಸಕಲೇ ಜಂಬುದೀಪಸ್ಮಿಂ ಏಕರಜ್ಜಂ ಅಪಾಪುಣಿ ॥ ೨೦ ॥
ಜಿನ ನಿಬ್ಬಾಣತೋ ಪಚ್ಛಾಪುರೇ ತಸ್ಸಾಭಿಸೇಕತೋ ।
ಸಾಟ್ಠಾರಸಂ ವಸ್ಸ ಸತದ್ವಯಂ ಏವಂ ವಿಜಾನಿಯಂ" ॥ ೨೧ ॥

ದಾಕ್ಷಿಣಾತ್ಯರಿಗೆ ಬೌದ್ಧಧರ್ಮವು ಪರಿಚಿತವಾಗುವ ಪೂರ್ವದಲ್ಲಿಯೇ ಜೈನಧರ್ಮವು ಪರಿಚಿತವಾಗಿತ್ತೆಂದೂ ಬೌದ್ಧಧರ್ಮಕ್ಕೂ ಜೈನಧರ್ಮಕ್ಕೂ ಇರುವ ಭೇದವನ್ನು ಅವರು ಅರಿಯದೆ ಎರಡೂ ಧರ್ಮಗಳನ್ನು ಒಂದೇ ಎಂದು ತಿಳಿಯುತ್ತಿದ್ದರೆಂಬುದೂ ಇದರಿಂದ ವ್ಯಕ್ತವಾಗುತ್ತದೆ.

ಭಾಗವತ ಧರ್ಮವು ಬುದ್ಧನನ್ನು ಜೈನನೆಂದೇ ಭಾವಿಸಿದೆ. ಅವನನ್ನು ಜೈನತೀರ್ಥಂಕರನನ್ನಾಗಿ ಎಣಿಸಿದೆ. ಬತ್ತಲ ಸಂನ್ಯಾಸಿಯನ್ನಾಗಿ ಮಾಡಿದೆ. ಕನ್ನಡನಾಡಿನ ದಾಸರು

೯ ಮಹಾವಂಸ, ಪರಿಚ್ಛೇದ–೫.

ಬುದ್ಧನನ್ನು 'ಗಂಭೀರಪ್ರರುಷನೆಂಬೆನೆ ದಿಗಂಬರನಿವ'[೧೦] 'ಬತ್ತಲಿರುವ ಶ್ರೀನಿರ್ವಾಣಿ'[೧೧] ಮೊದಲಾಗಿ ವರ್ಣಿಸಿದ್ದಾರೆ. ಇದು ಬೌದ್ಧಧರ್ಮವು ಕನ್ನಡನಾಡಿಗೆ ಕಾಲಿರಿಸುವ ಪೂರ್ವದಲ್ಲಿ ಜೈನಧರ್ಮವು ಇಲ್ಲಿ ಸಾಕಷ್ಟು ಬೇರು ಬಿಟ್ಟಿದ್ದಿತೆಂಬುದನ್ನೇ ಸ್ಪಷ್ಟ ಪಡಿಸುತ್ತದೆ.

ಅಶೋಕಚಕ್ರವರ್ತಿಯ ಮೊಮ್ಮಗನಾದ ಚಂದ್ರಗುಪ್ತನು ಭದ್ರಬಾಹುವಿನ ಜೊತೆಗೆ ಕನ್ನಡನಾಡಿಗೆ ಬಂದು ಇಲ್ಲಿಯೇ ದೇಹಬಿಟ್ಟನೆಂದು ತಿಳಿದುಬರುವುದರಿಂದ ಕ್ರಿ. ಶ. ಆರಂಭದ ಕಾಲದಿಂದಲೇ ಜೈನಧರ್ಮದ ಸಂಪರ್ಕವು ಈ ನಾಡಿಗೆ ಇದ್ದಿತೆಂಬುದು ವ್ಯಕ್ತ ವಾಗುತ್ತದೆ. ಕನ್ನಡದ ಆದಿಕವಿಯಾದ ಪಂಪನು ಆದಿತೀರ್ಥಂಕರನ ಪುರಾಣವನ್ನು ಕನ್ನಡದಲ್ಲಿ ರಚಿಸಿದ್ದಾನೆ (ಕ್ರಿ. ಶ. ೯೪೧). ಸರ್ವಕ್ರತುಯಾಜಿಯೆಂದು ಪ್ರಸಿದ್ಧನಾದ ಮಾಧವಸೋಮಯಾಜಿಯೆಂಬ ಬ್ರಾಹ್ಮಣನ ವಂಶದಲ್ಲಿ ಜನಿಸಿದವನಿವ. ಜಾತಿಗಳಲ್ಲೆಲ್ಲ ಬ್ರಾಹ್ಮಣಜಾತಿಯು ಉತ್ತಮವಾದುದೆಂದು ತಿಳಿದರೂ ಜಿನಧರ್ಮವೇ ಸರಿಯಾದು ದೆಂದು ನಂಬಿ ಜಿನಧರ್ಮವನ್ನು ಸ್ವೀಕರಿಸಿ ಅದನ್ನು ಅಭಿವೃದ್ಧಿಗೊಳಿಸಿ, ಪ್ರಸಿದ್ಧಿ ಪಡೆದ ಭೀಮಪಯ್ಯನು ಪಂಪನ ತಂದೆ. ಕ್ರಿ. ಶ. ೫ನೆಯ ಶತಮಾನದ ಆರಂಭ ದಲ್ಲಿ ಕರ್ನಾಟಕದಲ್ಲಿ ಗಂಗರಾಜ್ಯವನ್ನು ಸ್ಥಾಪಿಸಿದ ಕೊಂಗುಣಿವರ್ಮನು ಅರ್ಹ ದ್ಭಟಾರಕರಾದ ಸಿಂಹನಂದ್ಯಾಚಾರ್ಯರ ಕೃಪಾಪ್ರಸಾದದಿಂದ ರಾಜ್ಯವನ್ನು ಪಡೆದ ನೆಂಬುದು ಶಾಸನಗಳಿಂದ ತಿಳಿದುಬರುತ್ತದೆ.[೧೨] ಹೊಯ್ಸಳರಾಜ್ಯ ಸ್ಥಾಪನೆಯಲ್ಲಿಯೂ ಜೈನಮುನಿಗಳ ವರಪ್ರಸಾದದ ಕಥೆ ಬರುತ್ತದೆ. ರಾಷ್ಟ್ರಕೂಟ ಅರಸರಲ್ಲಿ ಹಲವರು ಜೈನಧರ್ಮ ಸ್ವೀಕರಿಸಿ ಆ ಧರ್ಮಕ್ಕೆ ಆಶ್ರಯವನ್ನು ಇತ್ತಿದ್ದಾರೆ. ಕದಂಬ, ಚಾಲುಕ್ಯ ಅರಸರು ಜೈನಧರ್ಮೀಯರಲ್ಲದಿದ್ದರೂ ಆ ಧರ್ಮಕ್ಕೆ, ಧರ್ಮದ ವಿದ್ವಾಂಸರಿಗೆ ಆಶ್ರಯವನ್ನಿತ್ತು ಪ್ರೋತ್ಸಾಹಿಸಿದ್ದಾರೆ. ಕ್ರಿ. ಶ. ೩ನೆಯ ಶತಮಾನದಿಂದ ೧೨ನೆಯ ಶತಮಾನದ ವರೆಗೆ ಕನ್ನಡನಾಡಿನಲ್ಲಿ, ಕನ್ನಡದ ರಾಜಕಾರಣದಲ್ಲಿ ಜೈನಧರ್ಮೀಯರ ಪ್ರಾಬಲ್ಯವು ಒಂದಿಲ್ಲೊಂದು ಬಗೆಯಲ್ಲಿ ಕಂಡುಬರುತ್ತದೆ. ಈ ಅವಧಿಯಲ್ಲಿ ಕನ್ನಡ ನಾಡು ನಿಜವಾಗಿಯೂ 'ಜಿನಧರ್ಮಾವಾಸ'ವಾಗಿದ್ದಿತು. ಈ ಕಾಲದಲ್ಲಿ ಕನ್ನಡನಾಡಿನ ಮಕ್ಕಳ ಅಕ್ಷರಾಭ್ಯಾಸವು ಜೈನಸಂನ್ಯಾಸಿಗಳ ಮಠದಲ್ಲಿಯೇ ಸಾಗುತ್ತಿದ್ದಿತೆಂಬುದು ಕನ್ನಡ ನಾಡಿನಲ್ಲಿ ಇಂದಿಗೂ ಸಾಗಿಬಂದ ವರ್ಣಮಾಲೆಯ ಪಾಠಕ್ರಮದಿಂದ ಕಂಡುಬರುತ್ತದೆ. ಕನ್ನಡ ವರ್ಣಮಾಲೆಯು 'ಶ್ರೀ ಗಣೇಶಾಯ ನಮಃ, ಓಂ ನಮಃ ಸಿದ್ಧಂ' ಎಂಬ ನಮಸ್ಕಾರರೂಪದ ಮಂಗಲವಾಕ್ಯಗಳಿಂದ ಪ್ರಾರಂಭಿಸಲ್ಪಡುತ್ತದೆ. ಇದರಲ್ಲಿಯ 'ಶ್ರೀ ಗಣೇಶಾಯ ನಮಃ' ಎಂಬುದು ವೈದಿಕ ಸಂಪ್ರದಾಯದವರು ಹಿಂದಿನಿಂದ

೧೦ ಶ್ರೀ ಪುರಂದರದಾಸರ ಸಾಹಿತ್ಯ ಭಾಗ – ೩, ಪದ್ಯ–೯೩.
೧೧ ಶ್ರೀ ಪುರಂದರದಾಸರ ಸಾಹಿತ್ಯ ಭಾಗ – ೩, ಪದ್ಯ–೧೧೨.
೧೨ ಹಸ್ತಿಮಲ್ಲನ ಉದಯೇಂದಿರಂ ಶಾಸನ. SII. Vol II, P. 384.

ಸೇರ್ಪಡೆ ಮಾಡಿದ ಮೊದಲ ಮಂಗಲವಾಕ್ಯವಾಗಿದೆ. ಅದಕ್ಕೂ ಮೊದಲು 'ಓಂ ನಮಃ ಸಿದ್ಧಂ' ಎಂಬುದೇ ಪ್ರಥಮ ವಾಕ್ಯವಾಗಿದ್ದಿತು. ಆದಿತೀರ್ಥಂಕರ ವೃಷಭನು ತನ್ನ ಮಗಳಾದ ಬ್ರಹ್ಮಿಗೆ ಲಿಪಿಯನ್ನು ಕಲಿಸಿದನೆಂದೂ ಹಾಗೆ ಲಿಪಿ ಪ್ರಾರಂಭದ ಪೂರ್ವದಲ್ಲಿ 'ಸಿದ್ಧಂ ನಮಃ' ಎಂದು ಪ್ರಾರಂಭಿಸಿದನೆಂದೂ ಪಂಪನು ಆದಿಪುರಾಣದಲ್ಲಿ ಹೇಳುತ್ತಾನೆ:

> ಮುನ್ನಂ ತ್ರಿಲೋಕಗುರು ಸಿ
> ದ್ಧಂ ನಮಯೆಂದಱಿಪಿ ಮುಖ್ಯಮಂಗಳಪದಮಂ
> ಕನ್ನೆಗೆ ಪಿಱಿಯಾಕೆಗೆ ಬಱಿ
> ಯನ್ನಯದಿಂ ಬರೆದು ತೋಱಿದಂ ಲಿಪಿಗಳುಮಂ ॥ ೮.೫೯ ॥

ಇದೆಲ್ಲವು ಜೈನಧರ್ಮವು ಕನ್ನಡನಾಡಿನಲ್ಲಿ ಅದೆಷ್ಟು ಆಳವಾಗಿ ಬೇರು ಬಿಟ್ಟಿದ್ದಿತೆಂಬುದನ್ನು ತೋರಿಸಿಕೊಡುತ್ತದೆ. ಜೈನಧರ್ಮವು ಇಂದಿಗೂ ಕನ್ನಡನಾಡಿನಲ್ಲಿ ಒಂದು ಪ್ರತಿಷ್ಠಿತ ಸಮಾಜದ ಧರ್ಮವಾಗಿದೆ. ಇಲ್ಲಿ ಜೈನಧರ್ಮೀಯರ ಹಲವು ತೀರ್ಥಕ್ಷೇತ್ರಗಳಿವೆ. ಉತ್ತರಭಾರತದ ಜೈನರು ಯಾತ್ರಾರ್ಥಿಗಳಾಗಿ ಇಂದಿಗೂ ಕನ್ನಡನಾಡಿಗೆ ಬರುತ್ತಾರೆ. ಜೈನರು ಕನ್ನಡನಾಡಿನಲ್ಲಿ ವಾಸಿಸಿ ಕನ್ನಡದೊಡನೆ ತಾದಾತ್ಮ್ಯ ಹೊಂದಿದ್ದಾರೆ. ಈ ಮೊದಲು ಅಚ್ಚಗನ್ನಡನಾಡಾಗಿದ್ದು ಈಗ ಮರಾಠಿ ಪ್ರದೇಶಗಳೆಂದು ಕರೆಯಿಸಿಕೊಳ್ಳುವ ಸಾಂಗಲಿ, ಮಿರಜಿ, ಕೊಲ್ಲಾಪುರ, ಕರಾಡ ಮೊದಲಾದ ಸ್ಥಳಗಳಲ್ಲಿ ವಾಸಿಸುವ ಜೈನ ಕುಟುಂಬಗಳವರು ತಮ್ಮ ಮಾತೃಭಾಷೆಯು ಕನ್ನಡವೆಂಬುದನ್ನು ಅಭಿಮಾನದಿಂದ ಹೇಳಿಕೊಳ್ಳುತ್ತಾರೆ. ನಾಲ್ವತ್ತುವರ್ಷಗಳ ಹಿಂದೆ ಮದುವೆಯ ನಿಬ್ಬಣದವರಲ್ಲೊಬ್ಬನಾಗಿ ನಾನು ಕೊಲ್ಲಾಪುರಕ್ಕೆ ಹೋದಾಗ ನಾವು ನಮ್ಮನಮ್ಮಲ್ಲಿ ಕನ್ನಡದಲ್ಲಿ ಮಾತನಾಡುತಿದ್ದುದನ್ನು ಕಂಡು ಹಾಲು ಹಾಕಲು ಬಂದ ಮುದುಕಿಯೊಬ್ಬಳು ನಮ್ಮ ಜೊತೆಗೆ ಕನ್ನಡದಲ್ಲಿಯೇ ಮಾತನಾಡತೊಡಗಿದಾಗ ನಮ್ಮವರಲ್ಲಿಯ ಒಬ್ಬರು 'ಎಲಾ! ಈ ಊರೊಳಗೂ ಕನ್ನಡ ಮಾತಾಡುವವರು ಇದ್ದಾರಲ್ಲ!' ಎಂದು ಅಂದರು. ಆಗ ಆ ಮುದುಕಿಯು 'ನಾವು ಜೈನರೀ ಅಪಾ!' ಎಂದು ಅಭಿಮಾನದಿಂದ ಹೇಳಿದಳು. ಆ ಹೇಳಿಕೆಯು ಇಂದಿಗೂ ನನ್ನ ಕಿವಿಯಲ್ಲಿ ದುಮುದುಮಿಸುತ್ತದೆ. ಈ ಪ್ರದೇಶಗಳಲ್ಲಿಯ ಜೈನ ಕುಟುಂಬಗಳ ಮನೆಮಾತು ಇಂದಿಗೂ ಕನ್ನಡವಾಗಿದೆ. ಇತ್ತೀಚೆಗೆ ಮುಂಬಯಿ ಪುಣೆಗಳ ಜೊತೆಗೆ ಬರುವ ವ್ಯಾಪಾರದ ನಿಮಿತ್ತವಾಗಿ ಜೈನ ಗಂಡಸರ ಭಾಷೆಯು ಮರಾಠಿಯಾಗಿ ಕೆಲವು ಮನೆತನಗಳು ಪೂರ್ಣ ಮರಾಠಿಯಾಗಿವೆ. ಜೈನಧರ್ಮವು ಕನ್ನಡಿಗರ ಧರ್ಮವಾಗಿ ಪರಿಣಮಿಸಿದುದನ್ನು ತೋರಿಸುವುದಕ್ಕಾಗಿ ಈ ಮಾತು ಹೇಳಬೇಕಾಯಿತು.

ಇನ್ನು ಬೌದ್ಧಧರ್ಮದ ವಿಷಯ. ಭಾರತದಲ್ಲಿ ಜನ್ಮತಾಳಿದ ಬೌದ್ಧಧರ್ಮವು ಚೀನ, ಜಪಾನ, ಬ್ರಹ್ಮದೇಶ ಮೊದಲಾದ ಭಾರತದ ಹೊರನಾಡುಗಳಲ್ಲಿ ಇಂದು ಸಾಕಷ್ಟು ಪ್ರಚಾರದಲ್ಲಿದ್ದರೂ ಜನ್ಮಭೂಮಿಯಾದ ಭಾರತದಲ್ಲಿಯೇ ಅದು ತನ್ನ ಅಸ್ತಿತ್ವ ಕಳೆದು

ಕೊಂಡಿದೆ. ಕನ್ನಡನಾಡಿನಲ್ಲಿ ಇದು ದೃಷ್ಟಿಗೆ ಬೀಳುವುದೇ ಇಲ್ಲ. ಪ್ರಾಚೀನಕಾಲದಲ್ಲಿ ಈ ಧರ್ಮವು ಪ್ರಬಲವಾಗಿದ್ದಿತೆಂದು ಇತಿಹಾಸಕಾರರು ಹೇಳುತ್ತಾರೆ. ಆದರೆ ಆ ಧರ್ಮದ ಹ್ರಾಸವು ಏಕಾಯಿತೆಂಬುದರ ಕಾರಣವನ್ನು ಶೋಧಿಸುವ ಕಡೆಗೆ ವಿಶೇಷ ಗಮನ ನೀಡಿಲ್ಲ. ಬೌದ್ಧಧರ್ಮಕ್ಕೂ ಕನ್ನಡನಾಡಿಗೂ ಇದ್ದ ಸಂಪರ್ಕದ ಬಗೆಗೆ ಮತ್ತು ಆ ಧರ್ಮವು ನಾಶಹೊಂದಿದ ಬಗೆಗೆ ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಹೀಗೆ ಹೇಳಿದ್ದಾರೆ :

"ಕ್ರಿ. ಶ. ೧, ೨ ನೆಯ ಶತಮಾನಗಳಲ್ಲಿ ಬೌದ್ಧಮತವು ಪ್ರಬಲಿಸಿತ್ತೆಂಬುದು ಚರಿತ್ರೆಯಲ್ಲಿ ಪ್ರಸಿದ್ಧವಾದ ಸಂಗತಿ. ಅಶೋಕನ ಕಾಲದಲ್ಲಿ ಬೌದ್ಧಮತವು ಕನ್ನಡನಾಡಿನಲ್ಲಿ ವ್ಯಾಪಿಸಿತ್ತೆಂಬುದರಲ್ಲಿ ಸಂದೇಹವಿಲ್ಲ. ಕ್ರಿ. ಶ. ೨ ನೆಯ ಶತಮಾನದ ಆದಿಭಾಗದಲ್ಲಿ ಕನ್ನಡನಾಡಿನಲ್ಲಿ ಪ್ರಸಿದ್ಧರಾಗಿ ಆಳಿದ ಶಾತವಾಹನರು ಅವರಾದ ಮೇಲೆ ಪಲ್ಲವರೂ ಬೌದ್ಧಮತಕ್ಕೆ ವಿಶೇಷವಾಗಿ ಪ್ರೋತ್ಸಾಹ ಕೊಟ್ಟರೆಂದು ಉತ್ತರಕರ್ನಾಟಕದಲ್ಲಿ ದೊರೆಯುವ ಶಾಸನಗಳಿಂದ ಗೊತ್ತಾಗುತ್ತದೆ. ಶಾತವಾಹನರು ಬೌದ್ಧಮತಾವಲಂಬಿಗಳಾಗಿದ್ದರೆಂದು ಕೆಲವರು ಅಭಿಪ್ರಾಯ ಪಡುತ್ತಾರೆ. ಅವರ ಕಾಲದಲ್ಲಿ ರಾಜರು, ಸಾಮಂತರು, ಹೆಗ್ಗಡೆಗಳು, ವ್ಯಾಪಾರಿಗಳು, ಬಡಗಿಗಳು ಮುಂತಾಗಿ ಅನೇಕರು ಬೌದ್ಧ ದೇವಾಲಯಗಳನ್ನು ವರ್ಷಾಕಾಲದಲ್ಲಿ ವಾಸಮಾಡಲು ಬೌದ್ಧಭಿಕ್ಷುಗಳಿಗೆ ಮಠಗಳನ್ನೂ ಕಟ್ಟಿಸಿಕೊಟ್ಟಂತೆ ಶಾಸನಗಳಿಂದ ತಿಳಿದು ಬರುತ್ತದೆ. ಇದರಿಂದ ಸುಮಾರು ಕ್ರಿ. ಶ. ೬–೭ ನೆಯ ಶತಮಾನಗಳ ವರೆಗೂ ಬೌದ್ಧಮತವು ಕನ್ನಡ ದೇಶದಲ್ಲಿ ಬಹಳ ಪ್ರಾಬಲ್ಯ ಸ್ಥಿತಿಯಲ್ಲಿ ಇತ್ತೆಂದು ಕಾಣುತ್ತದೆ. ಬೌದ್ಧಮತತತ್ವಗಳನ್ನು ಬೋಧಿಸುವುದಕ್ಕಾಗಿ ಈ ದೇಶಕ್ಕೆ ಬಂದವರು ಕನ್ನಡ ಭಾಷೆಯನ್ನು ಕಲಿತು ಬೌದ್ಧ ಮತದ ವಿಷಯಗಳನ್ನು ತಿಳಿಸುವ ಗ್ರಂಥಗಳನ್ನು ಕನ್ನಡದಲ್ಲಿ ರಚಿಸಿರಬೇಕು. ಎಲ್ಲ ಕಾಲಗಳಲ್ಲಿಯೂ ಎಲ್ಲ ಜನರಲ್ಲಿಯೂ ಮತಮಾತ್ಸರ್ಯವು ಹೆಚ್ಚು ಕಡಿಮೆ ಇದ್ದೇ ಇರುವುದು. (ಈ ಮತಮಾತ್ಸರ್ಯದಿಂದಲೇ) ಇಲ್ಲಿ ಅತ್ಯಂತ ಪ್ರಬಲವಾಗಿದ್ದ ಬೌದ್ಧ ಮತವು ಈಗ ಅನ್ಯದೇಶೀಯಮತವೆಂದು ತೋರುವಷ್ಟು ಮಟ್ಟಿಗೆ ಇಲ್ಲಿ ನಿಶ್ಶೇಷವಾಗಿ ಹೋಗಿದೆ. ಬೌದ್ಧಮತದ ವಿನಾಶಕ್ಕೆ ಆರಂಭವಾದುದು ಸುಮಾರು ಕ್ರಿ. ಶ. ೭–೮ ನೆಯ ಶತಮಾನಗಳಲ್ಲಿ. ಮಹಾಪಂಡಿತನೂ ಕರ್ಮಕಾಂಡ ಪ್ರತಿಪಾದಕನೂ ಆದ ಕುಮಾರಿಲಭಟ್ಟನು ಪ್ರಬಲಿಸಿ ವೇದಪ್ರಾಮಾಣ್ಯವನ್ನು ಸಕಲರೂ ಅಂಗೀಕರಿಸುವಂತೆ ಸ್ಥಾಪನೆ ಮಾಡುವುದಕ್ಕಾಗಿ ಸುಧನ್ವನಂತಹ ರಾಜರುಗಳ ಸಹಾಯವನ್ನು ಪಡೆದು ಬೌದ್ಧರ ಹುಟ್ಟಡಗಿಸುವ ಕಾರ್ಯದಲ್ಲಿ ಬದ್ಧಕಂಕಣನಾದನು. ಬೌದ್ಧ ವಿನಾಶಕ್ಕಾಗಿ ಪೀರಕರ್ಮಠನಾದ ಆ ಬ್ರಾಹ್ಮಣನು ಮಾಡಿದ ಪ್ರಯತ್ನಗಳು ಶ್ರೀಶಂಕರ ದಿಗ್ವಿಜಯದ ಮೊದಲನೆಯ ಆಶ್ವಾಸದಲ್ಲಿ ಉಕ್ತವಾಗಿವೆ. ಬೌದ್ಧಮತದ ನಾಶದೊಂದಿಗೆ (ಕನ್ನಡದಲ್ಲಿಯೂ) ಬೌದ್ಧಗ್ರಂಥನಾಶವೂ ಆಯಿತು."[೧೩]

೧೩ ಕರ್ನಾಟಕ ಸಾಹಿತ್ಯಪರಿಷತ್ಪತ್ರಿಕೆ ಸಂಪುಟ-೬. ಸಂಚಿಕೆ-೪, ಕನ್ನಡ ಸಾಹಿತ್ಯ ಚರಿತ್ರೆ, ಪುಟ ೨೪೧-೪೩.

ಶ್ರೀ ಟಿ. ಎಸ್. ವೆಂಕಣ್ಣಯ್ಯನವರ ಈ ಅಭಿಪ್ರಾಯವನ್ನು ಪುಷ್ಟೀಕರಿಸುವಂತಹ ಆಧಾರಗಳು ದೊರೆಯುವುದಿಲ್ಲ. ಇದನ್ನು ವಿರೋಧಿಸುವ ಆಧಾರಗಳೇ ಸಾಕಷ್ಟು ದೊರೆಯುತ್ತವೆ. ಶ್ರೀ ಟಿ. ಎಸ್. ವೆಂಕಣ್ಣಯ್ಯನವರು ಹೇಳುವ ಅವಧಿಯಲ್ಲಿ (ಕ್ರಿ. ಶ. ೬೪೧) ಭಾರತಕ್ಕೆ ಕನ್ನಡನಾಡಿಗೆ ಬಂದ ಚೀನಾದೇಶದ ಬೌದ್ಧ ಯಾತ್ರಿಕನಾದ ಹುಯೆನ್‌ತ್ಸಾಂಗನು 'ಕನ್ನಡಿಗರು ಮತಗಳಲ್ಲಿ ಪರಸ್ಪರ ಸಹಿಷ್ಣುತೆಯುಳ್ಳವರು' ಎಂದು ಬರೆದಿಟ್ಟಿದ್ದಾನೆ. ಧರ್ಮ, ಧರ್ಮಾಭಿಮಾನ, ಧರ್ಮದ್ವೇಷ ಇವುಗಳ ಬಗೆಗೆ ಭಾರತೀಯರಿಗೂ ಇತರರಿಗೂ ಮಹದಂತರವಿದೆ. ಕ್ರೈಸ್ತಧರ್ಮವಾಗಲಿ, ಮುಸಲ್ಮಾನ ಧರ್ಮವಾಗಲಿ ದಯವೇ ಧರ್ಮವೆಂದು ಸಾರುತ್ತಿದ್ದರೂ ಆ ಧರ್ಮದ ಅನುಯಾಯಿಗಳು ಧರ್ಮಾಭಿಮಾನದ ಅತಿರೇಕದಿಂದ ಹಿಂಸಾಕೃತ್ಯಕ್ಕಿಳಿದು ತಮ್ಮ ಧರ್ಮವನ್ನು ಒತ್ತಾಯದಿಂದ, ಹಿಂಸೆಯಿಂದ ಇನ್ನಿತರರ ಮೇಲೆ ಹೇರಿದ ಸಾಕಷ್ಟು ಉದಾಹರಣೆಗಳು ದೊರೆಯುತ್ತವೆ. ಆದರೆ ಭಾರತೀಯರು ಹೀಗೆ ಮಾಡಿದುದರ ಉದಾಹರಣೆಗಳು ದೊರೆಯುವುದಿಲ್ಲ. ಶ್ರೀ ವೆಂಕಣ್ಣಯ್ಯನವರೂ ಅಂತಹ ಉದಾಹರಣೆಗಳನ್ನು ಕೊಟ್ಟಿಲ್ಲ. ಮತದ್ವೇಷದಿಂದ ಕ್ರೈಸ್ತಮತ ಸಂಪ್ರದಾಯದ ವಿರುದ್ಧ ವಿಕ್ಲಿಫ್ ಲೂಥರ ಇವರು ಬರೆದ ಗ್ರಂಥಗಳನ್ನು ಪೋಪಗುರುಗಳು ಸುಡಿಸಿದುದನ್ನು ಹೇಳಿ ಹಾಗೆಯೇ ಕನ್ನಡದಲ್ಲಿಯ ಬೌದ್ಧಮತಗ್ರಂಥಗಳು ನಾಶವಾಗಿರಬೇಕೆಂದು ಊಹಿಸುತ್ತಾರೆ. ಭಾರತೀಯ ಬೌದ್ಧಧರ್ಮವು ಚೀನ, ಜಪಾನ, ಬ್ರಹ್ಮದೇಶ ಮೊದಲಾದ ಭಾರತದ ಹೊರದೇಶಗಳಲ್ಲಿ ವಿಸ್ತಾರವಾಗಿ ಹಬ್ಬಿದ್ದರೂ ಅದು ಒತ್ತಾಯದಿಂದ ಪ್ರಸಾರವಾದುದಕ್ಕೆ ಎಲ್ಲಿಯೂ ಐತಿಹಾಸಿಕ ದಾಖಲೆಗಳು ದೊರೆಯುವುದಿಲ್ಲ. ಭಾರತದಲ್ಲಿ ಹಲವು ಧರ್ಮಮತಗಳ ಜನರು ಪುರಾತನಕಾಲದಿಂದ ಇಂದಿನ ವರೆಗೂ ನೆರೆಹೊರೆಯವರಾಗಿ ಸೌಹಾರ್ದದಿಂದ ಬಾಳುತ್ತ ಬಂದಿದ್ದಾರೆ. ಬೌದ್ಧಧರ್ಮದ ಆರ್ಯಪ್ರಸಾರಕನಾದ ಅಶೋಕಚಕ್ರವರ್ತಿಯೇ ಹೇಳಿದುದನ್ನು ನೋಡಿ,"...........ದೇವಾನಾಂ ಪ್ರಿಯ ಪ್ರಿಯದರ್ಶಿಯು ಪಟ್ಟಕ್ಕೆ ಬಂದು ಹತ್ತುವರ್ಷಗಳಾದಾಗ ಸಂಬೋಧಿಗೆ ತೆರಳಿದನು. ಅಂದಿನಿಂದ ಧರ್ಮಯಾತ್ರೆಗೆ ಆರಂಭವಾಯಿತು. ಇಂಥ ಯಾತ್ರೆಗಳಲ್ಲಿ ನಡೆಯುವುದಿದು : ಶ್ರಮಣರ ಬ್ರಾಹ್ಮಣರ ದರ್ಶನ ಮತ್ತು ಅವರಿಗೆ ದಾನ; ಹಿರಿಯರ ದರ್ಶನ ಮತ್ತು ಅವರಿಗೆ ಹಿರಣ್ಯವಿತರಣ; ಜನಪದಗಳ ಜನರ ದರ್ಶನ; ಧರ್ಮದ ವಿಷಯವಾಗಿ ಚರ್ಚೆ." [೧೪] "ಲೋಕಕಲ್ಯಾಣಕ್ಕಾಗಿ ಮತ್ತು ಜನರು ಇದನ್ನು ಅನುಸರಿಸಿ ಧರ್ಮವು ಬೆಳೆಯಲಿ ಎಂದು ಅಪೇಕ್ಷಿಸಿ ಅರಸನಾಗಿ ಹನ್ನೆರಡು ವರ್ಷಗಳಾದಾಗಿನಿಂದ ಧರ್ಮಲಿಪಿಗಳನ್ನು ಬರೆಯಿಸತೊಡಗಿದೆ. .........ವಿವಿಧ ಕಾಣಿಕೆಗಳಿಂದ ನಾನು ಎಲ್ಲ ಮತಗಳನ್ನು ಗೌರವಿಸಿದ್ದೇನೆ. ಆದರೂ ಬೇರೆಬೇರೆ ಮತದವರನ್ನು ಸ್ವತಃ ನಾನೇ ಹೋಗಿ ಕಾಣುವುದೇ ಮಹತ್ವದ್ದೆಂದು ನನಗೆನಿಸಿದೆ." [೧೫] ಇವು ಕ್ರಿ. ಪೂ.

೧೪ ಅಶೋಕ ಚಕ್ರವರ್ತಿಯ ಎಂಟನೆಯ ಶಿಲಾಲಿಪಿ.

೧೫ ಅಶೋಕ ಚಕ್ರವರ್ತಿಯ ಆರನೆಯ ಸ್ತಂಭಲಿಪಿ.

೩ನೆಯ ಶತಮಾನದ ಅಶೋಕನ ಶಾಸನಗಳಾದರೆ ಕನ್ನಡನಾಡಿನ ಹೊಯ್ಸಳ ರಾಜರ ಧರ್ಮಸಮನ್ವಯವನ್ನು ಸಾರುವ ಬೇಲೂರ ಶಾಸನದಲ್ಲಿಯ ಮುಂಗಿನ ಪದ್ಯವನ್ನು ನೋಡಿ :

"ಯಂ ಶೈವಾಸ್ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ।
ಬೌದ್ಧಾ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯ್ಯಾಯಿಕಾಃ॥
ಅರ್ಹಶ್ಚೇತಿಹ ಜೈನಶಾಸನಮತಿಃ ಕರ್ಮೇತಿ ಮೀಮಾಂಸಕಾಃ।
ಸೋಽಯಂ ವೋ ವಿಧಧಾತು ವಾಂಛಿತ ಫಲಂ ಶ್ರೀಕೇಶವೇಶಸ್ಸದಾ॥

—ಶೈವರು ಶಿವನೆಂದು, ವೇದಾಂತಿಗಳು ಬ್ರಹ್ಮನೆಂದು, ಬೌದ್ಧರು ಬುದ್ಧನೆಂದು, ನೈಯ್ಯಾಯಿಕರು ಕರ್ತನೆಂದು, ಜೈನಶಾಸನಮತಗಳು ಅರ್ಹತ್ ಎಂದು ಮೀಮಾಂಸಕರು ಕರ್ಮ ಎಂದು ಅಭಿಮಾನದಿಂದ ಹೇಳಿ ಪೂಜಿಸಲ್ಪಡುವ ಕೇಶವನು ನಿಮ್ಮೆಲ್ಲರ ಆಶೆಗಳನ್ನು ಪೂರಯಿಸಲಿ.

ತನ್ನ ಪ್ರಜೆಗಳಾದ ವೈಷ್ಣವ ಧರ್ಮದವರು ಮತ್ತು ಜೈನಧರ್ಮದವರು ಇವರಲ್ಲಿ ಧಾರ್ಮಿಕವಿತುಷ್ಟತೆ ಉಂಟಾದಾಗ ವಿಜಯನಗರದ ಬುಕ್ಕರಾಯನು (೧೩೬೮) ಜಾಣತನದಿಂದ ಬಗೆಹರಿಸಿ ಎರಡೂ ಬಣಗಳಲ್ಲಿ ಸೌಹಾರ್ದವನ್ನುಂಟುಮಾಡಿದ ಐತಿಹ್ಯವನ್ನು ಶ್ರವಣಬೆಳಗೊಳದ ಶಾಸನವು ಸಾರಿ ಸಾರಿ ಹೇಳುತ್ತದೆ.[೧೬]

ಇವೆಲ್ಲವೂ ಭಾರತದಲ್ಲಿ, ಕರ್ನಾಟಕದಲ್ಲಿ ಮತಧರ್ಮಗಳು ಬೆಳೆದುಕೊಂಡು ಬಂದ ರೀತಿಯನ್ನು ವ್ಯಕ್ತಪಡಿಸುತ್ತವೆ. ಹೀಗಿರಲು ಭಾರತದಲ್ಲಿಯ ಬೌದ್ಧಧರ್ಮವು ಮತಮಾತ್ಸರ್ಯದಿಂದ ನಾಶವಾಯಿತೆಂದು ಹೇಳುವುದು ಸರಿಯಾದೀತೇ ? ಶ್ರೀ ವೆಂಕಣ್ಣಯ್ಯನವರು ಮತಮಾತ್ಸರ್ಯದಿಂದ ಬೌದ್ಧಮತವು ವಿನಾಶವಾದುದನ್ನು ತೋರಿಸುವುದಕ್ಕೆ ಶಂಕರದಿಗ್ವಿಜಯದಲ್ಲಿ ಬರುವ ಕುಮಾರಿಲಭಟ್ಟನು ಮಾಡಿದ ಬೌದ್ಧಧರ್ಮದ ಖಂಡನೆಯನ್ನು ಉದಾಹರಿಸಿದ್ದಾರೆಯಷ್ಟೆ. ಧರ್ಮತತ್ವಗಳ ಪ್ರತಿಪಾದನೆಗಾಗಿ ಸುಧನ್ವನಂತಹ ರಾಜರು ತಮ್ಮ ಆಸ್ಥಾನದಲ್ಲಿ ಕುಮಾರಿಲಭಟ್ಟರಂತಹ ತತ್ವವೇತ್ತರನ್ನು ಪೋಷಿಸಿಕೊಂಡು ಬಂದುದನ್ನೂ ಮತತತ್ವಗಳ ವಿದ್ವಾಂಸರಲ್ಲಿ ನಡೆಯುತ್ತಿದ್ದ 'ಟಗರುಗಾಳಗ' ವನ್ನೂ ನಾವಿಲ್ಲಿ ಕಾಣುತ್ತೇವೆ. ವೈದಿಕಧರ್ಮದ ಅದ್ವೈತಸಿದ್ಧಾಂತವನ್ನು ಪ್ರತಿಪಾದನೆ ಮಾಡುವಾಗ ಕುಮಾರಿಲಭಟ್ಟನು ಪೂರ್ವಪಕ್ಷವಾಗಿ ಬೌದ್ಧಧರ್ಮದ ತತ್ವಗಳನ್ನು ಇಲ್ಲಿ ಎತ್ತಿಕೊಂಡಿದ್ದಾನೆ. ಅವುಗಳನ್ನು ಖಂಡಿಸಿ ಅದ್ವೈತಸಿದ್ಧಾಂತಗಳನ್ನು ಪ್ರತಿಪಾದಿಸಿದ್ದಾನೆ. ಇದೇ ವೈದಿಕಧರ್ಮದ ದ್ವೈತಸಿದ್ಧಾಂತವನ್ನು ಪ್ರತಿಪಾದಿಸುವಾಗ ಮಾಧ್ವಮತದ ವಿದ್ವಾಂಸರು ಶಂಕರಾಚಾರ್ಯರ ಅದ್ವೈತ ತತ್ವಗಳನ್ನು ಪೂರ್ವಪಕ್ಷವಾಗಿ ಬಳಸಿಕೊಂಡಿದ್ದಾರೆ. ದ್ವೈತಾದ್ವೈತ ಖಂಡನೆ

೧೬ ಎಪಿಗ್ರಾಫಿಯಾ ಕರ್ನಾಟಿಕಾ, ಸಂಪುಟ-೨, ನಂ. ೩೪೪ (೧೩೬).

ಮುಂಡನೆಯು ಬಿರುಸಾಗಿ ನಡೆದುದನ್ನು ನಾವಿಲ್ಲಿ ಕಾಣುತ್ತೇವೆ. ಶಂಕರದಿಗ್ವಿಜಯದಲ್ಲಾಗಲಿ ಮಾಧ್ವಮತ ಗ್ರಂಥಗಳಲ್ಲಾಗಲಿ ಕಂಡುಬರುವ ಈ ಕಾಳಗವು ಮಾತಿನ ಕಾಳಗ. ಇದರ ಪರಿಣಾಮವಾದುದು ಸುಸಂಸ್ಕೃತರ ಮೇಲೆ. ಇದರಿಂದ ಸಾಮಾನ್ಯರಲ್ಲಾದ ಮತಪ್ರಚಾರವು ಅಷ್ಟಕ್ಕಷ್ಟೆ. ಒಟ್ಟಿನಲ್ಲಿ ಹೇಳುವುದೆಂದರೆ ಬೌದ್ಧಮತವು ಭಾರತದಲ್ಲಿ, ಅದರಲ್ಲಿಯೂ ಕರ್ನಾಟಕದಲ್ಲಿ ಮತಮಾತ್ಸರ್ಯದಿಂದ ಅಳಿದುಹೋಯಿತೆಂಬುದು ಅಷ್ಟೊಂದು ಸಮಂಜಸವಾಗಿ ಕಂಡುಬರುವುದಿಲ್ಲ.

■ ■

# ವ್ಯುತ್ಪತ್ತಿ : ಒಂದು ಟಿಪ್ಪಣಿ

ಜಿ. ಎಸ್. ಶಿವರುದ್ರಪ್ಪ

ಕಾವ್ಯನಿರ್ಮಿತಿಗೆ ಅಗತ್ಯವಾದ ಪರಿಕರಗಳನ್ನು ಪ್ರಸ್ತಾಪಿಸುವಾಗ ನಮ್ಮ ಆಲಂಕಾರಿಕರು ಪ್ರತಿಭೆ ಮತ್ತು ವ್ಯುತ್ಪತ್ತಿಗಳನ್ನು ಕುರಿತು ಹೇಳುತ್ತಾರೆ. 'ಪ್ರತಿಭೆ' ಇಲ್ಲದಿದ್ದರೆ ಕಾವ್ಯವೇ ಹುಟ್ಟುವುದಿಲ್ಲ; ಆದ್ದರಿಂದ ಅದು ಅತ್ಯಂತ ಅಗತ್ಯವಾದ ಕಾವ್ಯಕಲಾ ನಿರ್ಮಾಣಸಾಮರ್ಥ್ಯ. ಜತೆಗೆ ಅದು ಹೇಗೋ ಕವಿಗೆ ಹುಟ್ಟಿನೊಡನೆ ಸಹಜವಾಗಿ ಬಂದಿದ್ದು; ಅದು ಯಾರಿಂದಲೂ ಕಲಿತದ್ದಲ್ಲ, ಕಲಿಸಲು ಬರುವಂಥದೂ ಅಲ್ಲ. ಆದರೆ, ಈ 'ಪ್ರತಿಭೆ'ಯೆಂಬ ಸಹಜಸಾಮರ್ಥ್ಯಕ್ಕೆ, ಅಗತ್ಯವಾದ ಅನುಭವಸಾಮಗ್ರಿಯೆಂಬುದೊಂದು ಉಂಟಲ್ಲ ? ಅದು, ಎಂದರೆ, ಕವಿಗೆ ಅಗತ್ಯವಾದ ಲೋಕಾನುಭವ ಸಾಮಗ್ರಿ, ಕವಿಗೆ ಅನುಭವ ಹಾಗೂ ಅಧ್ಯಯನಗಳ ಮೂಲಕ ದೊರೆಯುವಂಥದ್ದು. ಈ ಅನುಭವಸಾಮಗ್ರಿಯನ್ನೆ ನಮ್ಮ ಆಲಂಕಾರಿಕರು 'ವ್ಯುತ್ಪತ್ತಿ' ಎಂದು ಕರೆದಿದ್ದಾರೆ. ಪ್ರತಿಭೆ ಮತ್ತು ವ್ಯುತ್ಪತ್ತಿಗಳಲ್ಲಿ, ಒಂದು, ಕವಿಗೆ ಸಹಜವಾಗಿಯೇ ದತ್ತವಾದದ್ದು. ಮತ್ತೊಂದು ಕವಿ ಉದ್ದೇಶಪೂರ್ವಕವಾಗಿ ಸಂಪಾದಿಸಿಕೊಳ್ಳುವಂಥದು. ಈ ಎರಡನೆಯದು ಎಷ್ಟೆಷ್ಟು ಸಮೃದ್ಧವಾಗಿ ಕವಿಗೆ ಒದಗಿ ಬರುತ್ತದೋ ಅಷ್ಟಷ್ಟರ ಮಟ್ಟಿಗೆ ಅವನ ಕೃತಿ ಗಟ್ಟಿಮುಟ್ಟಾದ್ದಾಗುತ್ತದೆ.

'ವ್ಯುತ್ಪತ್ತಿ' ಎಂದರೆ ಬಹುಜ್ಞತೆ, ಎಂದು ಹಿಂದಿನಿಂದಲೂ ಹೇಳಿಕೊಂಡು ಬರಲಾಗಿದೆ. 'ಬಹುಜ್ಞತಾ ವ್ಯುತ್ಪತ್ತಿಃ ಇತ್ಯಾಚಾರ್ಯಾಃ' (ಬಹುಜ್ಞತೆಯೆ ವ್ಯುತ್ಪತ್ತಿ ಎಂದು ಪೂರ್ವಾಚಾರ್ಯರ ಅಭಿಪ್ರಾಯ)[೧] ಎಂಬ ರಾಜಶೇಖರನ ಸೂತ್ರ ಈ ಸಂಗತಿಯನ್ನೆ ಹೇಳುತ್ತದೆ. 'ಬಹುಜ್ಞತೆ' ಎಂದರೆ ಅನೇಕ ವಿಷಯಗಳನ್ನು ತಿಳಿದಿರುವಿಕೆ. ಈ ಮಾತನ್ನು ಕುರಿತ ವಿಸ್ತೃತವಾದ ವಿವೇಚನೆ ನಡೆದದ್ದು ಮೊದಲು ವಾಮನನಲ್ಲಿ (ಕಾವ್ಯಾಲಂಕಾರ

೧ ಕನ್ನಡ ಕಾವ್ಯಮೀಮಾಂಸೆ : ಅನು : ಡಾ. ಕೆ. ಕೃಷ್ಣಮೂರ್ತಿ, ಪು. ೩೨.

ಸೂತ್ರವೃತ್ತಿ : I. III. ೧–೧೫). ಇನ್ನೂ ಹಲವರು 'ಬಹುಜ್ಞತೆ' ಯನ್ನು ವಿಸ್ತಾರವಾಗಿಯೇ ವಿವರಿಸಿದ್ದಾರೆ. ಕವಿ 'ಬಹುಜ್ಞತೆ'ಗಾಗಿ, ಅನ್ವೇಷಿಸಬಹುದಾದ ಕ್ಷೇತ್ರಗಳ ಒಂದು ದೊಡ್ಡ ಪಟ್ಟಿಯನ್ನೇ ಕ್ಷೇಮೇಂದ್ರನು ತನ್ನ ಕವಿಕಂಠಾಭರಣ (ಎರಡನೆ ಸಂಧಿ : ೫–೧೧) ದಲ್ಲಿ ಕೊಟ್ಟಿದ್ದಾನೆ. 'ಬಹುಜ್ಞತೆ'ಯ ಬಗೆಗೆ ಮಮ್ಮಟನ ವಿವರಣೆ ಈ ಸಂದರ್ಭದಲ್ಲಿ ಗಮನಿಸತಕ್ಕದ್ದಾಗಿದೆ : ಕವಿಗೆ ಒದಗುವ ವಿಶೇಷವಾದ ತಿಳಿವಳಿಕೆಯನ್ನು ಕುರಿತು 'ಲೋಕ, ಶಾಸ್ತ್ರ, ಕಾವ್ಯ ಮುಂತಾದವುಗಳ ವಿಶೇಷಪರಿಚಯದಿಂದ ಬಂದ ನೈಪುಣ್ಯ (ನಿಪುಣತಾ ಲೋಕಶಾಸ್ತ್ರ ಕಾವ್ಯಾದವೇಕ್ಷಣಾತ್')[೨] ಎನ್ನುತ್ತಾನೆ ಮಮ್ಮಟ. ಕವಿಗೆ ಒದಗುವ ತಿಳಿವಳಿಕೆ ಮುಖ್ಯವಾಗಿ ಮೂರು ದಿಕ್ಕಿನಿಂದ ಬರುವಂಥದ್ದು. ಅವು, ಲೋಕ, ಶಾಸ್ತ್ರ ಮತ್ತು ಕಾವ್ಯ—ಇವುಗಳ ಪರಿಶೀಲನೆಯಿಂದ ಬರುತ್ತದೆ. ಕವಿಯಾದವನು ಮೊದಲು ಮಾಡಬೇಕಾದ ಕೆಲಸವೆಂದರೆ, ತನ್ನ ಸುತ್ತಣಲೋಕವನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು. ಇದೇ ಮೊದಲ ಸಿದ್ಧತೆ ಕವಿಗೆ. 'ಲೋಕ'ವೆಂದರೆ 'ಚರಾಚರಗಳೆಲ್ಲವನ್ನೂ ಒಳಗೊಂಡ ವಿಶ್ವದ ನಡವಳಿಕೆ'.[೩] ಸಾಹಿತ್ಯದ ಮೂಲ ದ್ರವ್ಯವೇ ಇದು. ಮಾನವಪ್ರಕೃತಿ ಹಾಗೂ ನಿಸರ್ಗಪ್ರಕೃತಿಗಳಲ್ಲಿನ ಸಮಸ್ತ ನಡವಳಿಕೆಯನ್ನೂ ಕವಿಯಾದವನು ಕಣ್ಣು ತೆರೆದು ಕಾಣಬೇಕು; ಗುರುತಿಸಿಕೊಳ್ಳಬೇಕು. ಎರಡನೆಯದು ಈ ದೈನಂದಿನ ವಾಸ್ತವಾನುಭವಗಳ ಜತೆಗೆ, ಇವನ ತಿಳಿವಳಿಕೆಯನ್ನು ಖಚಿತಗೊಳಿಸುವ ಮತ್ತು ತನ್ನ ಅನುಭವಕ್ಕೆ ತಕ್ಕ ಅಭಿವ್ಯಕ್ತಿಯನ್ನು ಸಿದ್ಧಪಡಿಸಿಕೊಳ್ಳಲು ಅಗತ್ಯವಾದ ಇತರ ಶಾಸ್ತ್ರಗಳ ಅರಿವು. ಇಲ್ಲಿ 'ಶಾಸ್ತ್ರ' ಎಂದರೆ, ಛಂದಸ್ಸು ವ್ಯಾಕರಣ, ನಿಘಂಟು, ಕೋಶ, ಕಲೆಗಳ ಲಕ್ಷಣ; ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಕುರಿತ ಗ್ರಂಥಗಳು ಇತ್ಯಾದಿ— ಎಂದು ಅರ್ಥ. ಮೂರನೆಯದು 'ಕಾವ್ಯ'. 'ಕಾವ್ಯ ಎಂದರೆ ಮಹಾಕವಿಗಳ ಕೃತಿಗಳು'[೪]— ಎಂದು ವಿವರಿಸಲಾಗಿದೆ. ವಾಮನನು ಇನ್ನೂ ಸ್ಪಷ್ಟವಾಗಿ 'ಇತರರ ಕಾವ್ಯಗಳ ಪರಿಚಯವೇ ಲಕ್ಷ್ಯಪರಿಜ್ಞಾನ, ಅದರ ದೆಸೆಯಿಂದಲೇ ಕಾವ್ಯರಚನೆಗೆ ಅಗತ್ಯವಾದ ವ್ಯುತ್ಪತ್ತಿಯುಂಟಾಗುತ್ತದೆ'[೫]—ಎನ್ನುತ್ತಾನೆ. 'ನಿಪುಣತಾ ಲೋಕಶಾಸ್ತ್ರಕಾವ್ಯಾದವೇಕ್ಷಣಾತ್'— ಎಂದು ವ್ಯುತ್ಪತ್ತಿಯನ್ನು ಕುರಿತ ಈ ಸೂತ್ರ, ಕವಿಗೆ 'ಅಗತ್ಯವಾದ ಅನುಭವಸಂಗ್ರಹ, ತಂತ್ರನಿರ್ಮಾಣ ಮತ್ತು ಸಾಹಿತ್ಯ ಪರಂಪರೆಯ ಪ್ರಜ್ಞೆ', ಈ ಮೂರನ್ನು ಅನುಕ್ರಮವಾಗಿ ಸೂಚಿಸುವಂತೆ ತೋರುತ್ತದೆ. ನಿಜವಾದ ಕವಿಗೆ ವರ್ತಮಾನದ ವಾಸ್ತವಾನುಭವ ಎಷ್ಟು ಮುಖ್ಯವೋ, ಪರಂಪರಾಗತವಾದ ಹಿಂದಿನ ಅನುಭವವೂ ಅಷ್ಟೇ ಮುಖ್ಯ. ಇವುಗಳಲ್ಲಿ ಪರಂಪರೆಯ ಅರಿವು

---

೨ ಕನ್ನಡ ಕಾವ್ಯಪ್ರಕಾಶ : ಅನು : ಡಾ. ಕೆ ಕೃಷ್ಣಮೂರ್ತಿ, ಪು. ೭. (೧ ೩)
೩ ಅಲ್ಲೇ. ಪುಟ ೮
೪ ಅಲ್ಲೇ. ಪುಟ ೮
೫ ಕನ್ನಡ ಕಾವ್ಯಾಲಂಕಾರ ಸೂತ್ರವೃತ್ತಿ : ವಾಮನ, ಅನು : ಡಾ. ಕೆ. ಕೃಷ್ಣಮೂರ್ತಿ ಪು. ೩೦.

ಕವಿಗೆ ಮೈಗೂಡುವುದು. ತನ್ನ ಪರಿಸರದ ಹಾಗೂ ಪೂರ್ವಕವಿಗಳ ಕೃತಿಗಳ ಅಧ್ಯಯನದ ಮೂಲಕವೇ. ಪಾಶ್ಚಿಮಾತ್ಯ ವಿಮರ್ಶಕರೂ, ಕವಿಯ ಕಾವ್ಯನಿರ್ಮಿತಿಯಲ್ಲಿ ಪರಂಪರೆಯ ಪಾತ್ರ ಅತ್ಯಂತ ಮುಖ್ಯವಾದದ್ದು ಎಂಬುದನ್ನು ಒತ್ತಿ ಹೇಳಿದ್ದಾರೆ. ಪ್ರಾಚೀನ ಗ್ರೀಕ್ ಕಾವ್ಯಮೀಮಾಂಸಕರು. ಕವಿಯಾದವನು ಪ್ರಾಚೀನ ಕವಿಕೃತಿಗಳನ್ನು ಅನುಕರಿಸಬೇಕು ಎಂದು ಹೇಳಿದ್ದು ಬಹುಶಃ ಈ ಅರ್ಥದಲ್ಲಿಯೇ. "ಮಿತ್ರರೇ ನೀವು ಗ್ರೀಕ್‌ರ ಕೃತಿಗಳನ್ನು ಹಗಲೂ ರಾತ್ರಿ ಶ್ರದ್ಧೆಯಿಂದ ತಿರುವಿ ಹಾಕಿ ವ್ಯಾಸಂಗಮಾಡಿ"೬ ಎಂದು ಹೊರೆಸನು ತನ್ನ ಕವಿಮಿತ್ರರಿಗೆ ಹೇಳುತ್ತಾನೆ. ಇಂಗ್ಲಿಷ್ ವಿಮರ್ಶಕ ಬೆನ್ ಜಾನ್ಸನ್ನನು "ನಿಸರ್ಗದತ್ತವಾದ ಪ್ರತಿಭೆ. ಸತತ ಪರಿಶ್ರಮ, ಹಿಂದಿನ ಹಿರಿಯ ಕವಿಗಳಿಂದ ಪಡೆಯಬಹುದಾದ ಸಹಾಯ ಮತ್ತು ಮಾರ್ಗದರ್ಶನ, ವಿಸ್ತೃತವಾದ ವ್ಯಾಸಂಗ, ಹಾಗೂ ತನ್ನ ಕಲೆಗೆ ಸಂಬಂಧಿಸಿದ ತಂತ್ರಜ್ಞಾನ –ಈ ಐದು ಅಗತ್ಯಗಳನ್ನು ಕುರಿತು ವಿವರವಾಗಿ ಬರೆಯುತ್ತಾನೆ"೭. ನಿಜವಾದ ಸೃಜನಶೀಲ ಲೇಖಕನಿಗೆ ಪರಂಪರೆಯ ಪ್ರಜ್ಞೆ ಎಷ್ಟೊಂದು ಅಗತ್ಯವೆಂಬುದನ್ನು ಟಿ. ಎಸ್. ಇಲಿಯೆಟ್ ಹೇಳುತ್ತಾ, ಈ ಪರಂಪರೆ ಎಂಬುದು ಪಿತ್ರಾರ್ಜಿತವೆಂಬಂತೆ ಅನಾಯಾಸವಾಗಿ ಬರುವಂಥದಲ್ಲ; ಅದು ಅತ್ಯಂತ ಶ್ರಮದಿಂದ ಮೈಗೂಡಿಸಿಕೊಳ್ಳುವಂಥದ್ದು, ಎನ್ನುತ್ತಾ, ಹೋಮರ್‌ನಿಂದ ಹಿಡಿದು ಇಂದಿನ ವರೆಗೆ ಪ್ರಾಚೀನ ಕವಿಕೃತಿಗಳನ್ನು ಅಧ್ಯಯನ ಮಾಡುವುದರ ಮೂಲಕ ರಕ್ತಗತ ಮಾಡಿಕೊಳ್ಳಬೇಕಾದ ಸಾಂಸ್ಕೃತಿಕ ಸತ್ವವನ್ನು 'ಚಾರಿತ್ರಿಕಪ್ರಜ್ಞೆ' (Historical Sense) ಎಂದು ಕರೆಯುತ್ತಾನೆ.೮ ಅಷ್ಟೆ ಅಲ್ಲ, ಕವಿಯಾದವನು ಒಂದು ಕಡೆಯಿಂದ ಪಡೆಯುವ ಅನುಭವದ್ರವ್ಯ (ಅದು ಲೋಕಾನುಭವ ಹಾಗೂ ಕಾವ್ಯಾಧ್ಯಯನದ ಪರಿಣಾಮರೂಪದ್ದು) ವನ್ನು, ತನ್ನ ನಿರಂತರ ಪ್ರಯೋಗಗಳಿಂದ ಸಿದ್ಧಪಡಿಸಿಕೊಳ್ಳುವ ಅಭಿವ್ಯಕ್ತಿಯ ಕೌಶಲ್ಯದ ಮೂಲಕ ಹಿಡಿದಿಡುವ ಕ್ರಿಯೆಯೇ ಕಾವ್ಯನಿರ್ಮಿತಿಯ ರಹಸ್ಯ ಎನ್ನುತ್ತಾನೆ. ಅವನ ಪ್ರಕಾರ ನಿಜವಾದ ಕವಿಕೃತಿ ನಿರ್ಮಾಣ ಎರಡು ಸಮಾನಾಂತರ ರೇಖೆಗಳಲ್ಲಿ ಮೊದಲು ರೂಪುಗೊಳ್ಳುತ್ತದೆ. ಒಂದು ಕಡೆ ಪ್ರಜ್ಞಾಪೂರ್ವಕವಾದ ನಿರಂತರ ಪ್ರಯತ್ನ ಹಾಗೂ ಪ್ರಯೋಗಗಳ ಮೂಲಕ ಸಿದ್ಧವಾಗುವ, —ಯಾವಾಗ ಬೇಕೆಂದರೆ ಆಗ ಭಾವಾಭಿವ್ಯಕ್ತಿಗೆ ಒದಗುವ—ತಂತ್ರ ಕೌಶಲ : ಮತ್ತೊಂದು ಕಡೆ ವ್ಯಕ್ತಿಯಾಗಿ ಅವನು ಪಡೆಯುವ ಸಮೃದ್ಧಾನುಭವ ಸಾಮಗ್ರಿ. ಈ ಎರಡೂ ಯಾವುದೋ ಒಂದು ಶಿಖರ ಬಿಂದುವಿನಲ್ಲಿ ಸಂಧಿಸಿದಾಗ ಒಂದು ಮಹಾಕೃತಿ ಮೈದಾಳುತ್ತದೆ.೯ ಭಾರತೀಯ ಲಾಕ್ಷಣಿಕರ 'ವ್ಯುತ್ಪತ್ತಿ' ಪರಿ

---

೬ ಎಸ್. ಬಾಲಸುಬ್ರಮಣ್ಯ : ಹೊರೆಸನ ಸಾಹಿತ್ಯ ವಿಮರ್ಶೆ. ಪು. ೧೨೯.

೭ ವಿ. ಎಂ. ಇನಾಂದಾರ್ : ಪಾಶ್ಚಾತ್ಯ ಸಾಹಿತ್ಯವಿಮರ್ಶೆಯ ಸಂಪ್ರದಾಯಯುಗ, ಪು. ೭೫.

೮ T. S. Eliot : Selected prose

೯ Ezra Pound : Selected poems (Introduction by T. S. Eliot) p. 17.

ಕಲ್ಪನೆ ಕವಿಯ ಅನುಭವದ್ರವ್ಯ. ಪ್ರಾಚೀನ ಕೃತಿಗಳ ಅಭ್ಯಾಸ ಹಾಗೂ ಶಾಸ್ತ್ರಜ್ಞಾನಗಳಿಂದ ಒದಗುವ ಪೂರ್ವಸಿದ್ಧತೆ ಮತ್ತು ತತ್ಪರಿಣಾಮವಾದ ತಂತ್ರಜ್ಞಾನಗಳ ಸಂಗತಿಯನ್ನು ಒಳಗೊಳ್ಳುತ್ತದೆ ಎಂಬುದನ್ನು ನಾವು ಗುರುತಿಸಿಕೊಳ್ಳಬೇಕಾಗಿದೆ.

ಒಂದೆಡೆ ಲೋಕ–ಶಾಸ್ತ್ರಕಾವ್ಯಗಳ ಮೂಲಕ ಬರುವ 'ಬಹುಶ್ರುತಿ', ಇನ್ನೊಂದೆಡೆ ಈ ಅನುಭವದ್ರವ್ಯವನ್ನು ಕಾವ್ಯವನ್ನಾಗಿ ಪರಿವರ್ತಿಸುವ ಪ್ರತಿಭೆ —ಈ ಎರಡರ ಜತೆಗೆ, ನಮ್ಮ ಲಾಕ್ಷಣಿಕರು, ವ್ಯುತ್ಪತ್ತಿಯ ಪರಿಕಲ್ಪನೆಯನ್ನು ವಿವರಿಸುವ ಸಂದರ್ಭದಲ್ಲಿ ಇನ್ನೂ ಒಂದು ಮಹತ್ವದ ಅಂಶವನ್ನು ಗುರುತಿಸಿದ್ದಾರೆ. ಅದೆಂದರೆ ಕವಿಗೆ ಕಾವ್ಯನಿರ್ಮಿತಿಯ ಸಂದರ್ಭದಲ್ಲಿ ಎಚ್ಚರವಾಗಿರಬೇಕಾದ 'ಉಚಿತಾನುಚಿತ ವಿವೇಕ'. ಇದೂ ಕೂಡಾ ವ್ಯುತ್ಪತ್ತಿಯ ಬಹುಮುಖ್ಯವಾದ ಒಂದು ಅಂಗವಾಗಿದೆ. ರಾಜಶೇಖರನು, ವ್ಯುತ್ಪತ್ತಿಯನ್ನು ಹೇಳುವಾಗ 'ಬಹುಜ್ಞತಾ ವ್ಯುತ್ಪತ್ತಿಃ' ಎಂಬುದನ್ನು ಹೇಳುತ್ತಲೇ 'ಉಚಿತಾನು-ಚಿತವಿವೇಕೋ ವ್ಯುತ್ಪತ್ತಿಃ' (ಯಾವುದು ಉಚಿತ ಯಾವುದು ಅನುಚಿತ ಎಂಬುದರ ವಿವೇಚನೆಯೇ ವ್ಯುತ್ಪತ್ತಿ)[೧೦] ಎನ್ನುತ್ತಾನೆ. ರುದ್ರಟನು 'ಯುಕ್ತಾಯುಕ್ತ ವಿವೇಕವೇ ವ್ಯುತ್ಪತ್ತಿ'[೧೧] ಎನ್ನುತ್ತಾನೆ. 'ವ್ಯುತ್ಪತ್ತಿ'ಯ ಕಲ್ಪನೆ ಒಂದೆಡೆ 'ಬಹುಜ್ಞತೆ'ಯನ್ನು ಹೇಳಿದರೆ, ಇನ್ನೊಂದೆಡೆ 'ಉಚಿತಾನುಚಿತ ವಿವೇಕ' ವನ್ನು ತನ್ನ ಇನ್ನೊಂದು ಅಂಗವಾಗಿ ಹೇಳುತ್ತದೆ. ಕವಿಯ ಕಾವ್ಯನಿರ್ಮಿತಿಯ ಸಂದರ್ಭದ ಸೃಜನಕ್ರಿಯೆಯ ಸ್ವರೂಪವನ್ನು ಈ ಎರಡು ಮಾತುಗಳೂ ಸೂಚಿಸುತ್ತವೆ. ಕಾವ್ಯನಿರ್ಮಿತಿಗೆ, ಕವಿಗೆ ಒದಗುವ ಲೋಕ-ಶಾಸ್ತ್ರ-ಕಾವ್ಯಗಳ ಪರಿಶೀಲನೆಯಿಂದ ಒದಗುವ ಬಹುಜ್ಞತಾರೂಪದ ಅನುಭವದ್ರವ್ಯ ಮೂಲಸಾಮಗ್ರಿಯೆಂಬುದೇನೋ ನಿಜವೆ. ಆದರೆ ಅದನ್ನು ಕಾವ್ಯಾಭಿವ್ಯಕ್ತಿಗೆ ಒಡ್ಡಿಕೊಳ್ಳುವಾಗ ಕವಿಯಲ್ಲಿ ಇನ್ನೊಂದು ಬಹುಮುಖ್ಯವಾದ ಸಾಮರ್ಥ್ಯ ಕ್ರಿಯಾಭಿಮುಖವಾಗುತ್ತದೆ. ಅದೇ 'ಉಚಿತಾನುಚಿತ ವಿವೇಕ' ಅಥವಾ ವಿಮರ್ಶನ ಪ್ರಜ್ಞೆ. ತನಗೊದಗುವ ಅನುಭವಕ್ಕೆ, ಅಭಿವ್ಯಕ್ತಿಯನ್ನು ಕೊಡುವಾಗ ಕವಿ ನಿರ್ವಹಿಸುವ ವಸ್ತು ಹಾಗೂ ಭಾವಕ್ಕೆ ಅನುಸಾರವಾಗುವಂತೆ, ಯಾವುದನ್ನು ಹಾಗೂ ಎಷ್ಟನ್ನು ಅಭಿವ್ಯಕ್ತಿಗೆ ಒಳಗುಪಡಿಸಿಕೊಳ್ಳಬೇಕು ಎನ್ನುವ 'ಉಚಿತಾನುಚಿತ ವಿವೇಕ'ವೇ ಇದು. ಅಭಿನವಗುಪ್ತರು "ಕಾವ್ಯನಿರ್ಮಾಣ ಸಮರ್ಥವಾದ ಪ್ರತಿಭೆ ಉಪಯೋಗವಾಗುವ ಸಮಸ್ತವಸ್ತುಗಳ ಪೂರ್ವಾಪರಗಳನ್ನು ವಿಮರ್ಶಿಸುವ ವಿಚಕ್ಷಣತೆ"[೧೨]ಯೇ ವ್ಯುತ್ಪತ್ತಿ ಎಂದು ಹೇಳುವ ಮಾತನ್ನು ಇಲ್ಲಿ ಗಮನಿಸಬಹುದು. ಭಾರತೀಯ ಲಾಕ್ಷಣಿಕರ ಈ ಮಾತುಗಳು ಕವಿಯ ಸೃಜನಕ್ರಿಯೆಯ ಜತೆಜತೆಗೆ ಹಾಗೂ ಆ ಸಂದರ್ಭದಲ್ಲಿ ಎಚ್ಚರವಿರುವ ವಿಮರ್ಶನ ಪ್ರಜ್ಞೆಯ ಸಂಗತಿಯನ್ನು ಬಹು ಸ್ಪಷ್ಟವಾಗಿ ಹೇಳುತ್ತವೆ. ಪ್ರತಿಭೆ,

೧೦ ಕನ್ನಡ ಕಾವ್ಯಮೀಮಾಂಸೆ: ಅನು: ಡಾ. ಕೆ. ಕೃಷ್ಣಮೂರ್ತಿ. ಪು. ೩೧ (ಹನೆಯ ಅಧ್ಯಾಯ)
೧೧ ಅಲ್ಲೇ : ಪು ೩೧ (ಅಡಿಟಿಪ್ಪಣಿ).

ನವನವೋನ್ಮೇಷಶಾಲಿನಿಯಾದ ಕವಿಪ್ರತಿಭೆ, ಅಭಿವ್ಯಕ್ತಿಯ ಸಂದರ್ಭದಲ್ಲಿ 'ಬಹುಜ್ಞತೆ' ಯಿಂದ ದತ್ತವಾದ ಅನುಭವದ್ರವ್ಯವನ್ನು ಒಂದು ವ್ಯವಸ್ಥೆಗೆ ತರುತ್ತದೆ; ಹೀಗೆ ವ್ಯವಸ್ಥೆಗೆ ತರುವ ಕ್ರಿಯೆಯಲ್ಲಿ ಪ್ರವೃತ್ತವಾಗತಕ್ಕದ್ದು, 'ಉಚಿತಾನುಚಿತ ವಿವೇಕ' ರೂಪದ ವಿಮರ್ಶನ ಪ್ರಜ್ಞೆಯೇ.

ಕವಿಗೆ ಕೇವಲ ಪ್ರತಿಭೆ ಇದ್ದರೆ ಸಾಲದು, ವ್ಯುತ್ಪತ್ತಿಯೂ ಅತ್ಯಂತ ಅಗತ್ಯವಾದದ್ದು ಎಂಬುದನ್ನು ನಮ್ಮ ಆಲಂಕಾರಿಕರು ಹೇಳುತ್ತಾ ಬಂದಿದ್ದಾರೆ. ಒಂದೊಂದು ಸಲ, ವ್ಯುತ್ಪತ್ತಿಯ ಬಗ್ಗೆ ಒತ್ತುಬಿದ್ದ ಅಭಿಪ್ರಾಯಗಳೂ ವ್ಯಕ್ತವಾಗಿರುವುದುಂಟು. ಕವಿಗೆ ಅಗತ್ಯವಾದ ಶಾಸ್ತ್ರಜ್ಞಾನ ಇತ್ಯಾದಿಗಳ ದೊಡ್ಡ ಪಟ್ಟಿಯನ್ನೇ ಕೊಡುವ ಆಲಂಕಾರಿಕರ ನಿರ್ದೇಶನಗಳು ಎಷ್ಟೋವೇಳೆ ಕವಿಯನ್ನು ಕಾವ್ಯಯುದ್ಧಕ್ಕೆ ಸಜ್ಜುಗೊಳಿಸುವ ಪಾಂಡಿತ್ಯದ ಶಸ್ತ್ರಶಾಲೆಗಳಂತೆ ಭಾಸವಾಗುವುದುಂಟು. 'ಕವಿಯಲ್ಲದವನಿಗೂ ಕವಿತ್ವ ಲಭಿಸುವ ಬಗೆ'[೧೩] ಯನ್ನು ಉದ್ದೇಶಿಸುವ ಕೆಲವು ಶಿಕ್ಷಾಗ್ರಂಥಗಳು ಈ ಬಗೆಯ ಪಟ್ಟಿಗಳನ್ನು ಸೂಚಿಸುವುದು ಆಶ್ಚರ್ಯವೇನಲ್ಲ. ಜತೆಗೆ ಕಾವ್ಯದಲ್ಲಿ ಪಾಂಡಿತ್ಯದ ಪ್ರಕರ್ಷವನ್ನು ಮೆಚ್ಚುವ ಒಂದು ಪ್ರವೃತ್ತಿಯೂ, 'ವ್ಯುತ್ಪತ್ತಿ'ಯನ್ನೇ ಎತ್ತಿ ಹಿಡಿಯುವವರೆಗೂ ಮುಂದುವರಿದಿರಬಹುದು. ಹೀಗಾಗಿ "ಪ್ರತಿಭೆಗಿಂತ ವ್ಯುತ್ಪತ್ತಿಯೇ ಹೆಚ್ಚಿನದು"— ಎಂದು ಮಂಗಳನು ಹೇಳುತ್ತಾ "ಕವಿಯ ಅಶಕ್ತಿಯು ಕಾವ್ಯರಚನೆಯಲ್ಲಿ ಕಾಣುವ ವ್ಯುತ್ಪತ್ತಿಯ ಮಹಿಮೆಯಿಂದ ವಿದ್ವಾಂಸರಾದ ವಿಮರ್ಶಕರ ಕಣ್ಣಿಂದ ಮರೆಯಾಗುತ್ತದೆ"[೧೪] ಎನ್ನುತ್ತಾನೆ. ಈ ಹೇಳಿಕೆಯಲ್ಲಿ ಪೂರ್ವಾರ್ಧದ ಮಾತನ್ನು ಒಪ್ಪುವುದು ಕಷ್ಟ. ಆದರೆ, ವ್ಯುತ್ಪತ್ತಿಯ ಮಹಿಮೆಯಿಂದ, ಕವಿಯ ಅಶಕ್ತಿಯು ವಿದ್ವಾಂಸರಾದ ವಿಮರ್ಶಕರ ಕಣ್ಣಿಂದ ಮರೆಯಾಗುತ್ತದೆಂಬುದೇನೋ ನಿಜವಾದರೂ, 'ವ್ಯುತ್ಪತ್ತಿ' ಕವಿಯ 'ಅಶಕ್ತಿ' ಯನ್ನು ಮರೆಮಾಡುವ ಒಂದು ತಾತ್ಕಾಲಿಕ ಸಾಧನ ಮಾತ್ರವಾದೀತೆ ಹೊರತು, ಅದರಿಂದ ಕಾವ್ಯವು ಉತ್ಕೃಷ್ಟವಾಗುತ್ತದೆಂದು ಅರ್ಥವಾಗುವುದಿಲ್ಲ. ವಾಸ್ತವವಾಗಿ ರಾಜಶೇಖರನು ಹೇಳುವಂತೆ "ಪ್ರತಿಭೆ ವ್ಯುತ್ಪತ್ತಿ ಎರಡೂ ಕೂಡಿರುವಾತನೇ ಕವಿಯೆನಿಸುತ್ತಾನೆ".[೧೫] ಇಲ್ಲಿ ಗಮನಿಸಬೇಕಾದ ಸಂಗತಿ ಎಂದರೆ, ಕವಿಗೆ 'ವ್ಯುತ್ಪತ್ತಿ' ಯಲ್ಲಿ ಒಂದುವೇಳೆ ಕೊರತೆ ಇದ್ದರೂ ನಡೆಯುತ್ತದೆ; ಆದರೆ ಪ್ರತಿಭೆಯಲ್ಲಿನ ಕೊರತೆಯನ್ನು ಮತ್ತಾವುದೂ ತುಂಬಲಾರದು. ಆನಂದವರ್ಧನನು ದೋಷವನ್ನು ಕುರಿತು ಹೇಳುವಾಗ, ಈ ಮಾತನ್ನೆ ಖಚಿತಪಡಿಸುತ್ತಾನೆ. ಅವನ ಪ್ರಕಾರ ದೋಷಗಳಲ್ಲಿ ಎರಡು ಬಗೆ : ಒಂದು ಪ್ರತಿಭಾ ದೋಷ: ಮತ್ತೊಂದು ಅವ್ಯುತ್ಪತ್ತಿ ದೋಷ. ಮೊದಲನೆಯದು ಕವಿಯ ಪ್ರತಿಭಾಶಕ್ತಿಯ ಕೊರತೆಯಿಂದ ಸಂಭವಿಸತಕ್ಕದ್ದು. ಎರಡನೆಯದು, ಲೋಕಶಾಸ್ತ್ರಾದಿಗಳಿಂದ ಲಭಿಸುವ 'ಬಹುಶ್ರುತಿ'ಯ ಕೊರತೆಯಿಂದಲೋ

೧೨ ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ : ಅನು : ಡಾ. ಕೆ. ಕೃಷ್ಣಮೂರ್ತಿ ಪು. ೧೩೭ (ಅಡಿಟಿಪ್ಪಣಿ).

೧೩ ಕ್ಷೇಮೇಂದ್ರ : ಕವಿಕಂಠಾಭರಣ : ಅನು : ಡಾ. ಕೆ. ಕೃಷ್ಣಮೂರ್ತಿ ಪು. ೧೪ (೧–೪).

೧೪ ಕನ್ನಡ ಕಾವ್ಯಮೀಮಾಂಸೆ (ರಾಜಶೇಖರ) ಅನು : ಡಾ. ಕೆ. ಕೃಷ್ಣಮೂರ್ತಿ, ಪು. ೩೨.

೧೫ ಅಲ್ಲೇ : ಪುಟ. ೩೪.

ಉಚಿತಾನುಚಿತ ವಿವೇಕದ ಅರಕೆಯಿಂದಲೋ ಸಂಭವಿಸುವಂಥವು ಇವುಗಳಲ್ಲಿ "ಕವಿಯ ಅವ್ಯುತ್ಪತ್ತಿಯಿಂದಾದ ದೋಷವನ್ನು ಅವನ ಶಕ್ತಿ ಮುಚ್ಚುತ್ತದೆ: ಪ್ರತಿಭಾ ದಾರಿದ್ರ್ಯದಿಂದ ಏನಾದರೂ ದೋಷವುಂಟಾದರೆ ಅದು ಥಟಕ್ಕನೆ ಕಣ್ಣಿಗೆ ಬೀಳುತ್ತದೆ."[೧೬] ನಿಜವಾದ ಪ್ರತಿಭಾವಂತನಾದವನ ಕೃತಿಗಳಲ್ಲಿ ಒಮ್ಮೊಮ್ಮೆ ಕಾಣುವ 'ಅವ್ಯುತ್ಪತ್ತಿ' ದೋಷಗಳೂ, 'ಮಹಾಕವಿ ಪ್ರಯೋಗ' ಗಳೆಂದು ಪರಿಗಣಿತವಾಗಿ ಬಿಡುತ್ತವೆ: ಆದರೆ. 'ವ್ಯುತ್ಪತ್ತಿ' ಎಷ್ಟೇ ಇದ್ದೂ, ಕವಿಯ ಪ್ರತಿಭೆಯ ಅರಕೆಯಿಂದ ಸಂಭವಿಸುವ ದೋಷಗಳು, ಕವಿಗೆ ಒಳ್ಳೆಯ ಹೆಸರನ್ನು ತರಲಾರವು. ಆದುದರಿಂದ ನಿಜವಾದ ದೋಷವೆಂದರೆ 'ಪ್ರತಿಭಾದೋಷ' ಗಳೇ.

ಕಾವ್ಯಾಸ್ವಾದ ಕಾಲದಲ್ಲಿ ಸಹೃದಯನಿಗೆ. ಆಹ್ಲಾದದ ಜತೆಗೆ ಒದಗುವ ತಿಳಿವಳಿಕೆಯನ್ನೂ ನಮ್ಮ ಆಲಂಕಾರಿಕರು 'ವ್ಯುತ್ಪತ್ತಿ' ಎಂದು ಹೇಳಿರುವುದು, ಗಮನಿಸಬೇಕಾದ ಮತ್ತೊಂದು ಅಂಶವಾಗಿದೆ. 'ವ್ಯುತ್ಪತ್ತಿ' ಎಂಬುದಕ್ಕೆ ಮೊದಲ ಅರ್ಥ. ಬಹುಜ್ಞತೆ ಅಥವಾ ಅನೇಕ ವಿಷಯಗಳನ್ನು ಕುರಿತ ತಿಳಿವಳಿಕೆ ಎಂಬುದು ಸ್ಪಷ್ಟವಷ್ಟೆ ? ಮತ್ತು ಕಾವ್ಯ-ನಾಟ್ಯಾದಿಗಳ ಸಂದರ್ಭದಲ್ಲಿ ಸಹೃದಯನಿಗೆ ಆಹ್ಲಾದವೊದಗುವುದರ ಜತೆಗೆ, ಅನೇಕ ವಿಷಯಗಳನ್ನು ಕುರಿತ ತಿಳಿವಳಿಕೆಯೂ ದೊರೆಯುವುದರಿಂದ, 'ವ್ಯುತ್ಪತ್ತಿ' ಎಂದರೆ, ಸಹೃದಯನಿಗೆ ದೊರೆಯುವ 'ಉಪದೇಶ'ವೇ —ಎಂದು ಕೆಲವು ಆಲಂಕಾರಿಕರು ಭಾವಿಸಿದರು. ಈ 'ವ್ಯುತ್ಪತ್ತಿ' ಇತಿಹಾಸಾದಿಗಳಲ್ಲಿ ಬೇಕಾದರೆ ಇದ್ದುಕೊಳ್ಳಲಿ, ನಾಟಕ–ಕಾವ್ಯಗಳಲ್ಲಿ ಇದನ್ನು ಪ್ರಯೋಜನವೆಂದು ಯಾಕೆ ಎಣಿಸುತ್ತೀರಿ ಎಂದು ಪ್ರತಿಭಟಿಸಿದವರಲ್ಲಿ ಧನಂಜಯ ಮತ್ತು ಭಟ್ಟನಾಯಕ ಇವರು ಮುಖ್ಯರಾದವರು. "ಕಾವ್ಯದಲ್ಲಿ ಯಾರೇ ಪಡೆಯುವುದೂ ರಸಾಸ್ವಾದವೊಂದೇ; ಅವರಿಗೆ ಅದರಿಂದ ತಿಳಿವಳಿಕೆಯೂ ಬರಬೇಕಾಗಿಲ್ಲ, ವಿಧಿನಿಷೇಧಗಳೂ ಗೊತ್ತಾಗಬೇಕಾಗಿಲ್ಲ'[೧೭] ಎಂದು ಘೋಷಿಸಿದ ಭಟ್ಟನಾಯಕನ ಮಾತನ್ನು ಇಲ್ಲಿ ಗಮನಿಸಬಹುದು. ಆದರೆ ಅಭಿನವಗುಪ್ತರು. ಕಾವ್ಯಪ್ರಯೋಜನಗಳಾದ ಆನಂದ ವ್ಯುತ್ಪತ್ತಿಗಳನ್ನು ಬೇರೆ ಬೇರೆ ಎಂದು ಎಣಿಸಬೇಕಾಗಿಲ್ಲ ಎಂದು ಸೂಚಿಸುತ್ತಾ, ಎರಡರ ವಿಷಯವೂ ಒಂದೇ "ವಿಭಾವಾನುಭಾವಗಳನ್ನು ಉಚಿತವಾಗಿ ಹವಣಿಸಿ ಕಾವ್ಯಕಟ್ಟಿದರೆ ತಾನೆ ಆನಂದವೊದಗತಕ್ಕದ್ದು. ಈ ವಿಭಾವಾನುಭಾವಗಳ ಸ್ವರೂಪವನ್ನು ಸರಿಯಾಗಿ ಅರಿತುಕೊಳ್ಳುವಾಗ ಸಾಮಾಜಿಕನಿಗೆ ತನ್ನಷ್ಟಕ್ಕೆ ತಾನೆ ವ್ಯುತ್ಪತ್ತಿ ಲಭಿಸುವುದು. ಅದಕ್ಕಾಗಿ ಅವನು ಬೇರೆ ಪ್ರಯಾಸಪಡಬೇಕಾಗಿಲ್ಲ"[೧೮] ಎನ್ನುತ್ತಾರೆ. ಕಾವ್ಯ ಮತ್ತು ತಿಳಿವಳಿಕೆ ಅಥವಾ ನೀತಿಬೋಧೆಗೆ ಸಂಬಂಧಪಟ್ಟ ಚರ್ಚೆಯ ಈ ಭಾಗದಲ್ಲಿ 'ವ್ಯುತ್ಪತ್ತಿ' ಎಂಬ ಪದ, ಬೇರೊಂದು ಅರ್ಥದಲ್ಲಿ ಬಳಕೆಯಾಗಿರುವುದನ್ನೂ ಗಮನಕ್ಕೆ ತೆಗೆದುಕೊಳ್ಳುವುದು ಅಗತ್ಯವಾಗಿದೆ.

■ ■

೧೬ ತೀ. ನಂ. ಶ್ರೀಕಂಠಯ್ಯ : ಭಾರತೀಯ ಕಾವ್ಯಮೀಮಾಂಸೆ, ಪು. ೧೮೦.
೧೭ ಅಲ್ಲೇ : ಪು. ೨೩೪.
೧೮ ಅಲ್ಲೇ : ಪು. ೨೩೬.

# ಕಾವ್ಯಮೀಮಾಂಸೆಯ ಎರಡು ಟಿಪ್ಪಣಿಗಳು

ಸಿ. ಪಿ. ಕೆ.

**ಸ್ವಭಾವೋಕ್ತಿಯ ಬಗೆಗೆ ದಂಡಿಯ ಗೊಂದಲ:** ಭಾರತೀಯ ಕಾವ್ಯಮೀಮಾಂಸೆಯಲ್ಲಿ ಸ್ವಭಾವೋಕ್ತಿಯದೇ ಒಂದು ಚರಿತ್ರೆ. ಅದನ್ನು ಕೆಲವರು ಅಲಂಕಾರವೆಂದರೆ, ಮತ್ತೆ ಕೆಲವರು ಅಲಂಕಾರ್ಯವೆಂದಿದ್ದಾರೆ. ಭಾಮಹ ಸ್ವಭಾವೋಕ್ತಿಯನ್ನು ಒಂದು ಅಲಂಕಾರವೆಂದು ಒಪ್ಪಿದ್ದಾನೆಯೆ ಇಲ್ಲವೆ ಎಂಬುದು ಚರ್ಚಾಸ್ಪದ; ಈ ಬಗ್ಗೆ ಅವನ ಹೇಳಿಕೆ[೧] ಸಂದಿಗ್ಧವಾಗಿದೆ. ಆದರೆ ಅವನಿಗೆ ವಕ್ರೋಕ್ತಿಯ ಬಗ್ಗೆ ಇರುವಷ್ಟು ಒಲವು, ಉತ್ಸಾಹಗಳು ಸ್ವಭಾವೋಕ್ತಿಯ ಬಗ್ಗೆ ಇಲ್ಲವೆಂಬುದು ಮಾತ್ರ ಖಚಿತ. ಅವನ ಸಮಕಾಲೀನನಾದ ದಂಡಿಗಾದರೋ ಸ್ವಭಾವೋಕ್ತಿ ಮೊದಲನೆಯ ಅಲಂಕಾರ; ಅವನು ವಕ್ರೋಕ್ತಿಗೆ ಕೊಡುವಷ್ಟೇ ಪ್ರಾಶಸ್ತ್ಯವನ್ನು ಸ್ವಭಾವೋಕ್ತಿಗೂ ಕೊಡುತ್ತಾನೆ: "ಭಿನ್ನಂ ದ್ವಿಧಾ ಸ್ವಭಾವೋಕ್ತಿರ್ವಕ್ರೋಕ್ತಿಶ್ಚೇತಿ ವಾಙ್ಮಯಂ" (ಸ್ವಭಾವೋಕ್ತಿ, ವಕ್ರೋಕ್ತಿ ಎಂದು ವಾಙ್ಮಯ ಎರಡು ಬಗೆ) ಎಂದು ಘೋಷಿಸುತ್ತಾನೆ.[೨] ಕಾವ್ಯ, ಶಾಸ್ತ್ರಗಳೆರಡನ್ನೂ ಒಳಗೊಳ್ಳುವ ವಿಶಾಲಾರ್ಥದಲ್ಲಿ — ಒಂದು ಭಾಷೆಯ ಗ್ರಂಥರಾಶಿ ಎಂಬರ್ಥದಲ್ಲಿ— 'ವಾಙ್ಮಯ' ಶಬ್ದವನ್ನು ಇಲ್ಲಿ ದಂಡಿ ಬಳಸಿದಂತಿದೆ: ಸಾಹಿತ್ಯವೆಂಬ ಸೀಮಿತಾರ್ಥದಲ್ಲಲ್ಲ. ಎಂತಲೇ ಅವನು ಸ್ವಭಾವೋಕ್ತಿಯನ್ನು ಕುರಿತು "ಶಾಸ್ತ್ರೇಷ್ವಸ್ಯೈವ ಸಾಮ್ರಾಜ್ಯಂ ಕಾವ್ಯೇಷ್ವಪ್ಯೇತದೀಪ್ಸಿತಂ" (ಶಾಸ್ತ್ರಗಳಲ್ಲಿ ಇದರದೇ ಸಾಮ್ರಾಜ್ಯ, ಕಾವ್ಯಗಳಲ್ಲೂ ಇದು ಇಷ್ಟವಾಗುತ್ತದೆ) ಎಂದಿದ್ದಾನೆ.[೩] ಕಾವ್ಯಗಳಿಗಿಂತ ಶಾಸ್ತ್ರಗಳಲ್ಲಿ ಸ್ವಭಾವೋಕ್ತಿ ಹೆಚ್ಚು ಪ್ರಚುರವೆಂಬ ಅವನ ಅಭಿಮತ

೧ 'ಕಾವ್ಯಾಲಂಕಾರ', ೨.೯೩.

೨ 'ಕಾವ್ಯಾದರ್ಶ', ೨.೨೬೩.

೩ ಅದೇ ೨೧.೩.

ಇಲ್ಲಿ ಸೂಚಿತವಾಗುತ್ತದೆ. "ಶಾಸ್ತ್ರೇಷ್ವಸ್ಯೈವ ಸಾಮ್ರಾಜ್ಯಂ" ಎಂಬ ಹೇಳಿಕೆ ತುಂಬ ಗಮನಾರ್ಹವಾದುದು, ವಿಚಾರಯೋಗ್ಯವಾದುದು. ನಿಜವಾಗಿ ಶಾಸ್ತ್ರಗಳು ಸ್ವಭಾವೋಕ್ತಿ ಭೂಯಿಷ್ಠವೆ ? ದಂಡಿ ಹೀಗೆ ಹೇಳಲು ಕಾರಣವಾದರೂ ಏನು ?

ಭಾಮಹ ಸ್ವಭಾವೋಕ್ತಿಯ ಜೊತೆಗೆ 'ವಾರ್ತೆ'ಯೆಂಬುದೊಂದನ್ನು ಹೇಳಿದ್ದಾನೆ: ಯಾವ ಸಂಶಯಕ್ಕೂ ಆಸ್ಪದವಿಲ್ಲದಂತೆ ಎರಡನ್ನೂ ಪ್ರತ್ಯೇಕವಾಗಿರಿಸಿ, ಬೇರೆ ಬೇರೆ ಉದಾಹರಣೆಗಳನ್ನು ಕೊಟ್ಟಿದ್ದಾನೆ. "ಗತೋಽಸ್ತಮರ್ಕಃ ಭಾತೀಂದುಃ ಯಾಂತಿ ವಾಸಾಯ ಪಕ್ಷಿಣಃ" (ಸೂರ್ಯ ಮುಳುಗಿದನು, ಚಂದ್ರ ಹೊಳೆಯುತ್ತಾನೆ, ಹಕ್ಕಿಗಳು ಗೂಡು ಸೇರುತ್ತಿವೆ) ಎಂಬುದನ್ನು ಅವನು ವಾರ್ತೆಗೆ ನಿದರ್ಶನವಾಗಿ ಹೇಳಿ "ಇತ್ಯೇವಮಾದಿ ಕಿಂ ಕಾವ್ಯಂ" (ಇಂಥದೆಲ್ಲ ಕಾವ್ಯವೇನು) ಎಂದು ಕೇಳುತ್ತಾನೆ.[೪]

ಭಾಮಹ ಹೇಳುವ ಸ್ವಭಾವೋಕ್ತಿ, ವಾರ್ತೆ ಎರಡೂ ಒಂದೇ ಎಂದು ದಂಡಿ ಗ್ರಹಿಸಿದಂತೆ ತೋರುತ್ತದೆ. ಆದ್ದರಿಂದಲೇ ಅವನು "ಗತೋಽಸ್ತಮರ್ಕಃ..." ಎಂಬುದನ್ನು "ಇತೀದಮಪಿ ಸಾಧ್ವೇವ ಕಾಲಾವಸ್ಥಾ ನಿವೇದನೇ" (ಕಾಲವನ್ನು ಹೇಳುವಾಗ ಇದೂ ಒಳ್ಳೆಯದೇ) ಎಂದು ಸಮರ್ಥಿಸಿದ್ದಾನೆ.[೫] ಈ ಮಾತು ಅಲಂಕಾರಗಳ ಪ್ರಸ್ತಾವದಲ್ಲಿ ಬರುವುದರಿಂದ, ದಂಡಿಯ ಪಾಲಿಗೆ ಸ್ವಭಾವೋಕ್ತಿಯೂ ಒಂದು ಅಲಂಕಾರವಾದುದರಿಂದ, ಅವನು ವಾರ್ತೆ ಸ್ವಭಾವೋಕ್ತಿಗಳು ಅಭಿನ್ನವೆಂಬ ಗೊಂದಲಕ್ಕೆ ಗುರಿಯಾಗಿರುವುದು ಗೊತ್ತಾಗುತ್ತದೆ. ಈ ಗೊಂದಲವೇ "ಶಾಸ್ತ್ರೇಷ್ವಸ್ಯೈವ ಸಾಮ್ರಾಜ್ಯಂ" ಎಂಬ ಹೇಳಿಕೆಗೆ ಹೇತುವಾಗಿದೆ.[೬]

ವಾಸ್ತವವಾಗಿ, ಶಾಸ್ತ್ರಗಳಲ್ಲಿ ಬರತಕ್ಕದ್ದು ವಾರ್ತೆಯೆ ವಿನಾ ಸ್ವಭಾವೋಕ್ತಿಯಲ್ಲ: ಶಾಸ್ತ್ರಗಳು ವಾರ್ತಾಸಾಮ್ರಾಜ್ಯವೇ ಹೊರತು ಸ್ವಭಾವೋಕ್ತಿ ಸಾಮ್ರಾಜ್ಯವಲ್ಲ. ಸ್ವಭಾವೋಕ್ತಿ, ವಕ್ರೋಕ್ತಿಗಳು ಬರುವುದು ಕಾವ್ಯಗಳಲ್ಲಿ. ಶಾಸ್ತ್ರಗಳಲ್ಲೂ ಸ್ವಭಾವೋಕ್ತಿಯುಂಟೆಂದು ಹೇಳುವುದಾದರೆ. ಶಾಸ್ತ್ರಕ್ಕೂ ಕಾವ್ಯಕ್ಕೂ ಏನು ವ್ಯತ್ಯಾಸ ?

ಇದ್ದುದನ್ನು ಇದ್ದಂತೆ ಹೇಳುವ ಪ್ರವೃತ್ತಿ ವಾರ್ತೆ, ಸ್ವಭಾವೋಕ್ತಿ ಎರಡಕ್ಕೂ ಸಮಾನವಾದುದು. ಆದರೂ, ವಾರ್ತೆ ನೀರಸವಾದುದು: ಸ್ವಭಾವೋಕ್ತಿಯಾದರೋ ಸರಸವಾದುದು, 'ಚಾರು'ವಾದುದು, 'ಸಿದ್ಧಸೌಂದರ್ಯ'ವುಳ್ಳದ್ದು. ಸ್ವಭಾವೋಕ್ತಿಯಲ್ಲಿ ಕವಿಯ ಮನೋಧರ್ಮಕ್ಕೆ ಅವಕಾಶವಿದೆ. ಯಾವುದೇ ವಸ್ತು ಅಥವಾ ಸಂಗತಿ,

---

೪ 'ಕಾವ್ಯಾಲಂಕಾರ', ೨,೮೭.

೫ 'ಕಾವ್ಯಾದರ್ಶ', ೨ ೨೨೪.

೬ ವಾರ್ತೆ, ಸ್ವಭಾವೋಕ್ತಿಗಳ ನಡುವೆ ನಿಖರವಾಗಿ ಗೆರೆಯೆಳೆಯುವುದು ಕಠಿಣವೆಂಬುದೂ ಒಂದು ಕಾರಣವಿರಬಹುದು. ಸಂದರ್ಭವನ್ನು ನೋಡಿ ಯಾವುದು ವಾರ್ತೆ, ಯಾವುದು ಸ್ವಭಾವೋಕ್ತಿ ಎಂಬುದನ್ನು ನಿರ್ಧರಿಸಬೇಕಾಗುತ್ತದೆ.

ಅನಲಂಕೃತವಾಗಿದ್ದರೂ. ಕವಿಯ ವ್ಯಕ್ತಿತ್ವದ ಮೂಲಕ ಹಾದು ಬರುವಾಗ ಅದರ ಬಣ್ಣ, ಗುಣಗಳನ್ನು ಯಾವುದೋ ಪ್ರಮಾಣದಲ್ಲಿ ಕಳೆಯುವುದು ಅನಿವಾರ್ಯ. ವಾರ್ತೆಯಲ್ಲಿ ಕವಿಯ ವ್ಯಕ್ತಿತ್ವದ ಪ್ರಶ್ನೆ ಏಳುವುದಿಲ್ಲ. ಸ್ವಭಾವೋಕ್ತಿಯಲ್ಲಿ ಪ್ರತಿಭೆಯ ಪ್ರಸಕ್ತಿಯುಂಟು, ವಾರ್ತೆಯಲ್ಲಿ ಇಲ್ಲ. ಆದ್ದರಿಂದ ವಾರ್ತೆಯೇ ಬೇರೆ, ಸ್ವಭಾವೋಕ್ತಿಯೇ ಬೇರೆ: ಶಾಸ್ತ್ರವೇ ಬೇರೆ, ಕಾವ್ಯವೇ ಬೇರೆ. ಅಷ್ಟೇ ಅಲ್ಲ, ಅವು ಪರಸ್ಪರ ವಿರುದ್ಧ.

ಆದ್ದರಿಂದ, ದಂಡಿಯ ನಿಲುವು ಮತ್ತು ಅದರ ಕಾರಣ ಏನೇ ಇರಲಿ, ಅವನ ಹೇಳಿಕೆಯಲ್ಲಿ ನಾವು ತಿದ್ದುಪಡಿ ಮಾಡಿಕೊಳ್ಳಬೇಕು: ಶಾಸ್ತ್ರಗಳಲ್ಲಿ ವಾರ್ತೆಯದೇ ಪ್ರಾಧಾನ್ಯ, ಸ್ವಭಾವೋಕ್ತಿಯದಲ್ಲ ಎಂದು ತಿಳಿಯಬೇಕು.

**ಧ್ವನಿ ವಾಚ್ಯಾರ್ಥಕ್ಕಿಂತ ಬೇರೆಯೆ ? :** ಇದು ಧ್ವನಿಸ್ವರೂಪವನ್ನು ಹೇಳುವ ಆನಂದವರ್ಧನನ ಸುಪ್ರಸಿದ್ಧ ಕಾರಿಕೆ :

ಪ್ರತೀಯಮಾನಂ ಪುನರನ್ಯದೇವ
ವಸ್ತ್ವಸ್ತಿ ವಾಣೀಷು ಮಹಾಕವೀನಾಂ
ಯತ್‌ತತ್ ಪ್ರಸಿದ್ಧಾವಯವಾತಿರಿಕ್ತಂ
ವಿಭಾತಿ ಲಾವಣ್ಯಮಿವಾಂಗನಾಸು[೭]

ಇಲ್ಲಿ ಆನಂದವರ್ಧನನು ಧ್ವನಿಯೆಂದರೇನೆಂಬುದನ್ನು ಒಂದು ಹೋಲಿಕೆಯ ಮೂಲಕ ಸ್ಪಷ್ಟೀಕರಿಸಲು ಯತ್ನಿಸಿದ್ದಾನೆ. ಈ ಪದ್ಯದ ಪೂರ್ವಾರ್ಧದಲ್ಲಿ ಉಪಮೇಯವಿದೆ; ಉತ್ತರಾರ್ಧದಲ್ಲಿ ಉಪಮಾನವಿದೆ. ಸೂಕ್ಷ್ಮವಾಗಿ ಗಮನಿಸಿದರೆ, ಉಪಮಾನ–ಉಪಮೇಯಗಳ ನಡುವೆ ತುಸು ವ್ಯತ್ಯಾಸ ಕಂಡುಬರುತ್ತದೆ. ಉಪಮೇಯದಲ್ಲಿ ಪ್ರತೀಯಮಾನಕ್ಕೆ 'ಅನ್ಯ(ತ್)' ಎಂಬ ವಿಶೇಷಣವಿದ್ದರೆ, ಉಪಮಾನದಲ್ಲಿ ಲಾವಣ್ಯಕ್ಕೆ 'ಅತಿರಿಕ್ತ' ಎಂಬ ವಿಶೇಷಣವಿದೆ. 'ಅನ್ಯ' ಮತ್ತು 'ಅತಿರಿಕ್ತ' ಸಮಾನಾರ್ಥಕ ಶಬ್ದಗಳಲ್ಲ. ಆದರೆ ಅವು ಸಮಾನಾರ್ಥಕವೆಂಬಂತೆ ತೀ. ನಂ. ಶ್ರೀಕಂಠಯ್ಯನವರು ಮತ್ತು ಕೆ. ಕೃಷ್ಣಮೂರ್ತಿಯವರು ಪ್ರಕೃತ ಕಾರಿಕೆಯನ್ನು ಅನುವಾದಿಸಿದ್ದಾರೆ. ತೀನಂಶ್ರೀ : "ಮಹಾಕವಿಗಳ ವಾಣಿಯಲ್ಲಿ [ವಾಚ್ಯಾರ್ಥಕ್ಕಿಂತ] ಬೇರೆಯಾಗಿಯೇ ಪ್ರತೀಯಮಾನವಾಗುವ ಅರ್ಥವೊಂದು ಇದ್ದೇ ಇರುತ್ತದೆ: ಲಲನೆಯರಲ್ಲಿ ಸ್ಫುಟವಾದ ಅವಯವಗಳಿಗಿಂತ ಬೇರೆಯಾಗಿರುವ ಲಾವಣ್ಯದಂತೆ ಅದು ಹೊಳೆಯುತ್ತದೆ"[೮]; ಕೆ. ಕೃಷ್ಣಮೂರ್ತಿ : "ಕೇವಲ ಪ್ರತೀಯಮಾನವೇ ಆದ ಮತ್ತೊಂದು ವಸ್ತುವು ಮಹಾಕವಿಗಳ ವಾಣಿಗಳಲ್ಲಿರುತ್ತದೆ; ಅದು ಅಂಗನೆಯರ ಪ್ರಸಿದ್ಧವಾದ ಅವಯವಗಳ ಚೆಲುವಿಗಿಂತ ಬೇರೆಯಾಗಿಯೇ ಪ್ರಕಾಶಿಸುತ್ತದೆ."[೯]

---

೭ 'ಧ್ವನ್ಯಾಲೋಕ', ೧.೪.
೮ 'ಭಾರತೀಯ ಕಾವ್ಯಮೀಮಾಂಸೆ'. ೧೯೫೩. ಪು. ೪೫.
೯ 'ಕನ್ನಡ ಧ್ವನ್ಯಾಲೋಕ ಮತ್ತು ಲೋಚನಸಾರ', ೧೯೬೧, ಪು. ೧೩.

ಈ ಅನುವಾದಗಳ ಪ್ರಕಾರ, ವ್ಯಂಗ್ಯಾರ್ಥ ಅಥವಾ ಧ್ವನಿ ವಾಚ್ಯಾರ್ಥಕ್ಕಿಂತ 'ಬೇರೆ ಎಂಬುದು ಖಚಿತವಾಗಿ ವ್ಯಕ್ತವಾಗುತ್ತದೆ.[೧೦] (ಈ ಖಚಿತತೆ ಆನಂದವರ್ಧನನ ಹೇಳಿಕೆ ಯಲ್ಲಿಲ್ಲ). ಇದನ್ನೊಪ್ಪಿದರೆ, ಧ್ವನಿ ವಾಚ್ಯಾರ್ಥಕ್ಕೆ ವಿರುದ್ಧವಾದುದು ಅಥವಾ ವಾಚ್ಯಾರ್ಥವನ್ನು ನಿರಾಕರಿಸುವಂಥದು ಎಂಬ ಭಾವನೆಗೆ ಅವಕಾಶವಾಗಬಹುದು.[೧೧] ಅಂಥ ಭಾವನೆ ಅಸಾಧುವಾಗುತ್ತದೆ. ಆದ್ದರಿಂದ, ವ್ಯಂಗ್ಯಾರ್ಥಕ್ಕೆ 'ಬೇರೆ' ಎಂಬ ವಿಶೇಷಣವನ್ನು ಬಳಸದೆ, ಆನಂದವರ್ಧನನ ಉಪಮಾನದಲ್ಲಿರುವ 'ಅತಿರಿಕ್ತ' ಎಂಬ ವಿಶೇಷಣವನ್ನು ಬಳಸುವುದು ಸೂಕ್ತ.[೧೨] 'ಅತಿರಿಕ್ತ' ಶಬ್ದಕ್ಕೆ 'ಬೇರೆ' ಎಂಬ ಅರ್ಥ ವಿಲ್ಲ; 'ಅತೀತವಾದ, ಮೀರಿದ' ಎಂಬ ಅರ್ಥವಿದೆ. ವಾಸ್ತವವಾಗಿ, ಧ್ವನಿ ವಾಚ್ಯಾರ್ಥ ಕ್ಕಿಂತ ಅನ್ಯ ಅಥವಾ ಬೇರೆಯಾದುದಲ್ಲ; ಅದಕ್ಕೆ ಅತೀತವಾದುದು ಅಥವಾ ಅದನ್ನು ಮೀರಿದ್ದು: ವಾಚ್ಯಾರ್ಥವನ್ನು ತಿರಸ್ಕರಿಸದೆ, ಅದನ್ನು ಒಳಗೊಂಡೇ ಮುಂದೆ ಹೋಗು ತ್ತದೆ ವ್ಯಂಗ್ಯಾರ್ಥ.

ಈ ಸಂದರ್ಭದಲ್ಲಿ, ಧ್ವನಿ(Suggestion)ಸಂಬಂಧವಾದ ಕೆಲವು ಪಾಶ್ಚಾತ್ಯ ವಿಮರ್ಶೋಕ್ತಿಗಳನ್ನು ಲಕ್ಷಿಸಬಹುದು. Lowes : "Over that which we call the meaning of the words a Poet uses, there goes on an incessant play of suggestion...". Wyndham Lewis: "...Words are changed into something beyond themselves". T. S. Eliot : "Suggestiveness of Poetry...is the aura around a bright clear centre... you cannot have the aura alone". ಕೃಷ್ಣಚೈತನ್ಯ ಅವರ ಈ ಹೇಳಿಕೆಯನ್ನು ನೋಡಬಹುದು : "The suggested meaning is the over-tone of the expressed, not a total cancellation of it."[೧೩] ಇಲ್ಲೆಲ್ಲ, ಧ್ವನಿ ವಾಚ್ಯಾರ್ಥವನ್ನು ಮೀರಿದ್ದು ಎಂಬ ಅಭಿಪ್ರಾಯವಿದೆ; ಅದಕ್ಕಿಂತ ಬೇರೆ ಯೆಂಬುದಿಲ್ಲ.

ಧ್ವನಿ ವಾಚ್ಯಾರ್ಥಕ್ಕಿಂತ ಭಿನ್ನವೆಂದು ಹೇಳಿದರೆ ತಪ್ಪೇನೂ ಆಗಲಾರದು. ಆದರೆ ಅದು ವಾಚ್ಯಾರ್ಥಕ್ಕೆ ಅತೀತವಾದುದು ಎಂದಿಟ್ಟುಕೊಂಡರೆ, ನಿರ್ದುಷ್ಟತೆ ನಿಸ್ಸಂದಿಗ್ಧತೆ ಗಳು ಸಿದ್ಧಿಸುತ್ತವೆ. ಈ ಪರಿಷ್ಕರಣಕ್ಕೆ ಆನಂದವರ್ಧನನಲ್ಲೇ ಆಧಾರವಿದೆ.[೧೪]

■ ■

೧೦ ಜನ್ನ ತನ್ನ 'ಅನಂತನಾಥ ಪುರಾಣ'ದಲ್ಲಿ ಒಂದು ಕಡೆ "ವಾಕ್ಯಾರ್ಥದಿಂ ಧ್ವನಿ ಬೇರ್ಪಡೆಸೆ ವಂತೆ" ಎಂದಿರುವುದನ್ನೂ ಇಲ್ಲಿ ಸೂಚಿಸಬಹುದು.

೧೧ ಆ ಬಗೆಯ ನಿದರ್ಶನಗಳುಂಟು. ಆದರೆ ಬಹು ವಿರಳ.

೧೨ ಇದರಿಂದ, ಉಪಮಾನದ ವಿಶೇಷಣವನ್ನು—ಅದೇ ಮುಖ್ಯ—ಉಪಮೇಯಕ್ಕೂ ಅನ್ವಯಿಸಿ ದಂತಾಗುತ್ತದೆ, ಅಷ್ಟೆ.

೧೩ Sanskrit Poetics, P. 138 (ಈ ಗ್ರಂಥದಿಂದಲೇ ಎತ್ತಿಕೊಂಡವು ಮೇಲಿನ ಉದ್ಧೃತಿಗಳು).

೧೪ ಅದು ಅನುವಾದಗಳಲ್ಲಿ ಲುಪ್ತವಾಗಿದೆ.

# ರನ್ನನ ಗದಾಯುದ್ಧ ಕಾವ್ಯದಲ್ಲಿ ಸೂಕ್ಷ್ಮಛಂದಃಪ್ರಜ್ಞೆ

ಡಿ. ಎಸ್. ಕರ್ಕಿ

ಮಾನವನ ಅನಿಸಿಕೆ ನುಡಿಪಡೆಯಲು ಹವಣಿಸುವುದು ಸ್ವಾಭಾವಿಕ. ಭಾವನೆ ಗಾಢವಾದಾಗ ಅದು ಬರಿಮಾತಿನಲ್ಲಿ ತೃಪ್ತಿಪಡದೆ ದನಿಯೆಳೆಯಲು ಹವಣಿಸುತ್ತದೆ. ಹೀಗೆ ನುಡಿ ಹಾಡಾಗಿ ಹೊಮ್ಮಿದಾಗ ಅದರೊಡನೆ ಲಯವೆಂಬುದು ತಾನಾಗಿಯೇ ಕೂಡಿ ಬರುತ್ತದೆ. ಛಂದೋಲಯದ ಮೂಲವಿದು. ಛಂದೋಲಯದಲ್ಲಿ ನುಡಿ ರಚನೆಗೊಂಡು ಗೀತವಾಗಿಯೋ ಕಾವ್ಯವಾಗಿಯೋ ಪರಿಣಮಿಸುವ ದಾರಿಯಿದು.

ಛಂದಸ್ಸು ಎಂಬುದು ಪದ್ಯರಚನೆಗೆ ಸಂಬಂಧಪಟ್ಟ ಒಂದು ಲೆಕ್ಕಾಚಾರ ಮಾತ್ರ ಎಂದು ಭಾವಿಸಲಾಗದು. ಪದ್ಯ, ಪದ್ಯದ ಚರಣ, ಗಣ, ಮಾತ್ರೆ ಇವುಗಳನ್ನು ವಿಂಗಡಿಸಿ ನೋಡಿ ಅವುಗಳ ಪರಸ್ಪರ ಸಂಬಂಧದಿಂದುಂಟಾಗುವ ಛಂದೋಗತಿಗಳನ್ನು ನಿರೂಪಿಸುವ ಕಾರ್ಯ ಛಂದಸ್ಸಿನದೇನೋ ನಿಜ. ಕವಿತೆಯ ಬಗೆಗೆ ಅಥವಾ ಕಾವ್ಯದ ಬಗೆಗೆ ಛಂದಸ್ಸು ಮಾಡುವ ಕಾರ್ಯ ಇಷ್ಟೇ ಅಲ್ಲ; ಸ್ಥೂಲವಾದ ಲೆಕ್ಕಾಚಾರವನ್ನು ಮೀರಿ, ಭಾವಾಭಿವ್ಯಕ್ತಿಯ ಕ್ಷೇತ್ರವನ್ನು ಪ್ರವೇಶಿಸಿ, ಪ್ರಾಸ, ಅನುಪ್ರಾಸ, ಸಮುಚಿತ ಗತಿ ಶ್ರುತಿಗಳ ಪಾತ್ರವನ್ನು ಸೂತ್ರಿಸುವುದೂ ಛಂದಸ್ಸಿನ ಕಾರ್ಯ. ರಸವತ್ ಕಾವ್ಯ ರಚನೆಗೆ ಹಾಗೂ ರಸಾನುಭೂತಿಗೆ ಕೂಡ ಛಂದಸ್ಸು ತನ್ನ ಕಾಣಿಕೆಯನ್ನು ಸಲ್ಲಿಸಬಹುದಾಗಿದೆ. ಉತ್ತಮ ಕಾವ್ಯವು ರಚನಾಮಾರ್ಗದಲ್ಲಿ— ತಕ್ಕ ಛಂದಸ್ಸುಗಳನ್ನೊಳಗೊಂಡು ಬಂದಾಗ ಪೂರ್ಣ ಪರಿಣಾಮವನ್ನು ಬೀರಬಹುದಾಗಿದೆ.

ಕನ್ನಡ ಕಾವ್ಯರಚನಾರೂಪಗಳಲ್ಲಿ ಹಿಂದಣ ಹಳಗನ್ನಡ ಚಂಪೂಕಾವ್ಯ ರೀತಿಯೂ ಒಂದು. ಕನ್ನಡ ಸಾಹಿತ್ಯದ ಸುವರ್ಣಯುಗವೆಂದು ಹೆಸರಾಂತ ೧೦ನೆಯ ಶತಮಾನದಲ್ಲಿ ಪಂಪಕವಿ ತನ್ನ ಶ್ರೇಷ್ಠ ಕೃತಿಗಳಿಂದಾಗಿ ಚಂಪೂಕಾವ್ಯ ರೀತಿಯನ್ನು ಒಂದು ನಿಶ್ಚಿತ

ನಿಲಪಿಗೆ ತಂದನೆಂಬುದನ್ನು ಇಲ್ಲಿ ಬೇರೆ ಹೇಳಬೇಕಿಲ್ಲ. ಈ ಚಂಪೂ ಸಂಪ್ರದಾಯ ವನ್ನು ಅದೇ ಕಾಲದ ಪ್ರಥಮ ದರ್ಜೆಯ ಕವಿಗಳಾದ ರನ್ನ ಪೊನ್ನರು ಅನುಸರಿಸಿದರು. ಇಷ್ಟೇ ಅಲ್ಲ; ತನ್ನ ಒಂದು ವಿಶಿಷ್ಟ ಪ್ರಭಾವದಿಂದಾಗಿ ರುದ್ರಭಟ್ಟನ ಜಗನ್ನಾಥ ವಿಜಯ ಷಡಕ್ಷರ ಕವಿಯ ರಾಜಶೇಖರ ವಿಲಾಸ, ಇವೇ ಮೊದಲಾದ ಸುಂದರ ಬಂಧುರ ಕಾವ್ಯ ಗಳನ್ನು ನೀಡುವಂತಾಯಿತು ಚಂಪೂಕಾವ್ಯ ಪದ್ಧತಿ. ಹೀಗೆ ಕನ್ನಡ ಕವಿಗಳು ಸಮು ಚಿತವಾಗಿ ರೂಪಿಸಿಕೊಂಡು ದೀಪಿಸಿದ ಈ ಕಾವ್ಯರೀತಿ ಛಂದಸ್ಸಿನ ದೃಷ್ಟಿಯಿಂದಲೂ ವೈಶಿಷ್ಟ್ಯವನ್ನೊಳಗೊಂಡಿದೆ.

ಚಂಪೂ ರೀತಿಯ ಕಾವ್ಯದಲ್ಲಿ ಸಾಮಾನ್ಯವಾಗಿ ಮೂರು ಬಗೆಯ ಛಂದಸ್ಸು ಪ್ರೈದೋ ರಿದುದುಂಟು :

(೧) ವಿವಿಧ ವೃತ್ತಗಳು : ಸಂಸ್ಕೃತ ಮೂಲದಿಂದ ಬಂದ ವರ್ಣಗಣ ಛಂದಸ್ಸು (ಅಕ್ಷರಗಣ ಛಂದಸ್ಸು).

(೨) ಕಂದಪದ್ಯಗಳು : ಪ್ರಾಕೃತದ ಮಾರ್ಗವಾಗಿ ಬಂದ ಮಾತ್ರಾಗಣ ಛಂದಸ್ಸು.

(೩) ಪಿರಿಯಕ್ಕರ, ತ್ರಿಪದಿ ಮೊದಲಾದ ನೇರ ಕನ್ನಡ ಮಟ್ಟುಗಳು : ದ್ರಾವಿಡ (ಜಾತಿಯ) ಅಂಶಗಣ ಛಂದಸ್ಸು.

ಕನ್ನಡ ಚಂಪೂ ಕೃತಿಗಳಲ್ಲಿ ಕಂದದ ಸ್ಥಾನಮಾನ ತುಂಬಾ ಗಣ್ಯವಾದುದು. ಇದಕ್ಕೆ ಕಾರಣಗಳುಂಟು. ಕಿರಿಗಾತ್ರದ ಛಂದೋಬಂಧವು ರಚನೆಗೆ ಸುಲಭ. ಮೇಲಾಗಿ ಕನ್ನ ಡಕ್ಕೆ ಹತ್ತಿರವಾಗಿ ಹೊಂದಿಕೊಳ್ಳುವ ಛಂದವಿದು. ಕಾವ್ಯದಲ್ಲಿ ಬರುವ ಸಂವಾದ ಕ್ಕಂತೂ ಕಂದಪದ್ಯಗಳು ಬಲು ಹವಣು. ಗಣಗಣದಲ್ಲಿ ಗುರುಲಘುಗಳು, ಹೀಗೆಯೇ ಹೊಂದಿಕೊಳ್ಳಬೇಕೆಂಬ ಕಟ್ಟುನಿಟ್ಟಿಗೆ ಒಳಗಾಗದ ಮಾತ್ರಾಗಣಾನ್ವಯವಾದ ಕಂದದ ಛಂದೋಗತಿ ರಸಭಾವಕ್ಕೆ ಶ್ರುತಿಗೊಡಲು ಒಂದಿನಿತು ಅನುಕೂಲತೆಯನ್ನು ಒದಗಿಸಿ ಕೊಡುವಂಥದು. ಈ ಒಂದು ಒಟ್ಟು ಬೆಳಕಿನಲ್ಲಿ ರನ್ನನ ಕಾವ್ಯದಲ್ಲಿ ಪ್ರಯೋಗವಾದ ನಾಲ್ಕೈದು ಸೂಕ್ಷ್ಮ ಸಹಜ ಛಂದೋವಿಧಾನಗಳನ್ನು ಗುರುತಿಸಬಹುದು. ಅವುಗಳು ಹೆಚ್ಚಾಗಿ ಕನ್ನಡದ ಆದಿಪ್ರಾಸವನ್ನು ಒಳಸಿ ಬಂದವುಗಳು. ಕಂದದ ಛಂದಃಶ್ರುತಿ ಯಲ್ಲಿ ಬಗೆದೋರಿದ ಈ ವಿಧಾನಗಳು ಪ್ರಧಾನವಾಗಿ ಸಂವಾದದ ಸಂದರ್ಭಗಳಿಗೆ ಸಂಬಂಧಿಸಿದವುಗಳೆಂದು ಹೇಳಬಹುದು. ಅವುಗಳ ಪರಿಶೀಲನೆ ಈಗ ಪ್ರಸ್ತುತ.

**ಛಂದೋವಿಧಾನ ೧ :** ಕಂದಪದ್ಯದ ಮೊದಲನೆಯ ಪಾದದಲ್ಲಿ ಹಾಗು ಮೂರನೆಯ ಪಾದದಲ್ಲಿ ಹ್ರಸ್ವಾಕ್ಷರಗಳನ್ನೊಳಗೊಂಡ ಆದಿಪ್ರಾಸವು ೨ನೆಯ ಹಾಗು ೪ನೆಯ ಪಾದ ಗಳಲ್ಲಿ ಸಂವೇದನೆಗೆ ಅನುಸಾರವಾಗಿ ದೀರ್ಘಾಕ್ಷರಕ್ಕೆ ಎಡೆ ಮಾಡಿಕೊಟ್ಟ ಬಗೆ.

ಉದಾಹರಣೆ : ರನ್ನನ ಈ ಕಾವ್ಯದ ಮೊದಲ ದೃಶ್ಯದಲ್ಲಿ ದ್ರೌಪದಿಯು ಭೀಮಸಿಗೆ ಪ್ರತಿಜ್ಞೆಯ ನೆನಪುಕೊಟ್ಟು ಆಡಿದ ಪ್ರಚೋದನೆಯ ನುಡಿ : ಆತನ ಕೋಪವನ್ನು ಕೆರಳಿಸಿದ ಕಿಡಿ; ನೋಡಿ.

ಖಳ* ದುಶ್ಶಾಸನ ವಕ್ಷಃ
ಸ್ಥಳೋ†ಚ್ಚಳತ್ ಕೃಷ್ಣರಕ್ತಜಲದಿಂ ಕೋಪಾ
ನಳ*ನಂ ಮನ್ನಿಸದಿನ್ನುಂ
ಗಳಾ†ಗಳಿತಕೋಪನಿರ್ಪ ತೆಱದಿಂದಿರ್ದಿಯ್

ಇಲ್ಲಿ ಆದಿಪ್ರಾಸಾಕ್ಷರದ ಲಿಪಿಯಲ್ಲಿ ತೋರಿಸಿದ ಗುರುತುಗಳನ್ನು (*ಮತ್ತು†) ಗಮನಿಸಬೇಕು. (ವಕ್ಷ)ಸ್ಥಳೋಚ್ಚಳತ್ ಕೃಷ್ಣರಕ್ತ ಎಂಬಲ್ಲಿ ಆದಿಪ್ರಾಸದ ದೀರ್ಘಾಕ್ಷರವು ಭಾವಕ್ಕೆ ಪುಷ್ಟಿ ನೀಡುವಂಥದಾಗಿಲ್ಲವೇ ? ಅದರಂತೆಯೇ 'ಗಳಾಗಳಿತ ಕೋಪ' ಎಂಬಲ್ಲಿಯೂ ಸಮುಚಿತವಾಗಿದೆ.

**ಛಂದೋವಿಧಾನ ೨ :** ಇದೇ ಒಂದು ಹದದಲ್ಲಿ ಆದರೆ ಒಂದಿಷ್ಟು ಬೇರೆ ಬಗೆಯ ಹೊಂದಿಕೆಯಲ್ಲಿ ಭೀಮನು ದ್ರೌಪದಿಗೆ ಆಡಿದ ನುಡಿ ಕೆಳಗಣ ಪದ್ಯದಲ್ಲಿ ತಕ್ಕ ಶ್ರುತಿಗೂಡಿ ಬಂದಿದೆ : ಪರಿಶೀಲಿಸಿ ಅರಿಯಬಹುದು.

ಗಳಿಯಿಸುತಿರೆ ಕಬರಿಭರಂ
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ
ನಳಿನಾನನೆ ನೀನಿರೆ ಕುರು
ಕುಳಾಂತಕಂ ಗಳಿತಕೋಪನೇ ಕಲಿ ಭೀಮಂ ೨–೧೦

ಮೊದಲ ಮೂರು ಚರಣಗಳಲ್ಲಿ ಹ್ರಸ್ವಾಕ್ಷರಗಳನ್ನೊಳಗೊಂಡ ಆದಿಪ್ರಾಸವು ಇಲ್ಲಿ ಕೊನೆಯ ಚರಣದಲ್ಲಿ ದೀರ್ಘಾಕ್ಷರವನ್ನು ಬರಮಾಡಿಕೊಂಡು ಭೀಮನ ಆವೇಶವನ್ನು ಸರಿಯಾಗಿಯೇ ಸೂಚಿಸಿದೆ. ಭೀಮನು ಕುರುಕುಳಾಂತಕವಲ್ಲದೆ ಮತ್ತೇನು ? ದ್ರೌಪದಿಯಾದರೋ ಕೋಮಲೆ. ಆಕೆಯ ಮಾತುಗಳ ರೀತಿಯಲ್ಲಿಯೇ ಇಲ್ಲಿ ತನ್ನ ಮಾತನ್ನು ಮೊದಲು ಮಾಡಿದ ಭೀಮ ಕೊನೆಯಲ್ಲಿ ಕೌರವಕುಳಾಂತನಾಗುವ ಭೀಮ ಭರವಸೆಯನ್ನು ನೀಡಿದುದು ಸಹಜವೇ ಸರಿ.

ಇದೇ ಛಂದೋವಿಧಾನದಲ್ಲಿ ಭೀಮನ ಭರವಸೆ ಇನ್ನೂ ನಿಶ್ಚಿತವಾಗಿ ನಿಷ್ಠುರವಾಗಿ ಹಾಗು ಔಚಿತ್ಯಪೂರ್ಣವಾಗಿ ಅಭಿವ್ಯಕ್ತಗೊಂಡಿದೆ ಕೆಳಗಣ ಪದ್ಯದಲ್ಲಿ :

ಕುರುಕುಲ ಜೀವಾಕರ್ಷಣ
ಪರಿಣತಮಿದು ಕಾಳಹಸ್ತಮಲ್ಲದೆ ಪರಮೇ
ಶ್ವರಿ ಕೇಶಹಸ್ತಮಕ್ಕುಮೆ
ಪರಾಭವಜ್ವಲನ ಧೂಮಕೃಷ್ಣ ಕೃಷ್ಣೇ ? ೨–೧೩

ಈ ತರುವಾಯದ ಕಾರ್ಯಾನುಕ್ರಮದಲ್ಲಿ ಪಾಂಡವ ಕೌರವರ ಮಧ್ಯೇ ಹೊತ್ತಿದ ಯುದ್ಧದ ಜ್ವಾಲೆಯನ್ನೂ, ಆ ಜ್ವಾಲೆಯ ಜೊತೆಗೆ ಬಂದ ಕೌರವನ ಪರಾಭವರೂಪದ ಧೂಮವನ್ನೂ ಸಮರ್ಥವಾಗಿ ಸೂಚಿಸುವಂತೆ ಈ ಸಮಗ್ರಪದ್ಯ ಸಂದರ್ಭೋಚಿತವಾಗಿ ಮೂಡಿಬಂದಿದೆ ಎಂಬುದು ಇಲ್ಲಿ ಗಮನಾರ್ಹವಾದ ಸಂಗತಿ.

**ಛಂದೋವಿಧಾನ ೩ :** ಆದಿಪ್ರಾಸವನ್ನು ತನ್ನ ತೋಳತೆಕ್ಕೆಯಲ್ಲಿ ಆವರಿಸಿಕೊಂಡು ಬಂದ ಸಂಯುಕ್ತ ಹಾಗು ಒತ್ತಕ್ಷರ ಪದಪ್ರಯೋಗವೂ ಕೂಡ ಭಾವಾಭಿವ್ಯಕ್ತಿಗೆ ಶಕ್ತಿಯನ್ನು ನೀಡುವ ಛಂದಃಶ್ರುತಿಯ ಒಂದು ವಿಧಾನ. ಭೀಮನು ತನ್ನ ಪ್ರತಿಜ್ಞೆಯನ್ನು ಪೂರಾ ನೆರವೇರಿಸುವ ಭರವಸೆಯನ್ನು ಗಟ್ಟಿಯಾಗಿ ಮೂಡಿಸುವ ಸಂದರ್ಭದಲ್ಲಿ ಈ ಬಗೆಯ ಅಂತಶ್ಛಂದೋವಿಧಾನ ತನ್ನ ಪರಿಣಾಮವನ್ನು ಬೀರಿದೆ. ಅದು ಹೀಗಿದೆ :

> **ಸತ್ಯ** ಪ್ರತಿಜ್ಞನೆನೆ ಕುರು
> **ಪತ್ಯೂ**ರುಕಿರೀಟಭಂಗಮಂ ಪಡೆದು ಜಗತ್
> **ಸ್ತುತ್ಯ ಕೃತಕೃತ್ಯ**ನೆನಿಸದೆ
> **ಸತ್ಯಾ**ಶ್ರಯವೆಸರ್ಗೆ ಮುಯ್ಯನಾಂಪನೆ ಭೀಮಂ  ೨–೧೧

ಈ ಪದ್ಯದಲ್ಲಿ ಗುರುತಿಸಿ ತೋರಿದ (ಆದಿಪ್ರಾಸವನ್ನು ಒಳಗೊಂಡ) ಸಂಯುಕ್ತಾಕ್ಷರ ಪದಗಳನ್ನು ಸರಿಯಾಗಿ ನುಡಿದು ಈ ಹವಣವನ್ನು ಅರಿಯಬಹುದಾಗಿದೆ. ಭೀಮನ ಆವೇಶಕ್ಕೆ ತುಂಬಾ ಸರಿಹೋಗುವ ರೀತಿಯಲ್ಲವೇ ಇದು ? ಚರಣದಿಂದ ಚರಣಕ್ಕೆ ಹರಿದುಬಂದ ರಭಸದ ಛಂದಃ ಪ್ರವಾಹ ಇಲ್ಲಿ ಗಮನಕ್ಕೆ ಬಾರದಿರದು.

**ಛಂದೋವಿಧಾನ ೪ :** ಲಯಾನುಸಾರವಾಗಿ ದೀರ್ಘಸ್ವರಗಳು ಸೇರಿದ ಪ್ರಾಸಾನುಪ್ರಾಸಗಳ ವಿನ್ಯಾಸದಿಂದ ಇದೇ ಹದವನ್ನೂ ಪರಿಣಾಮವನ್ನೂ ಸಾಧಿಸಿದ ರೀತಿಗೆ ಕೆಳಗಣ ಪದ್ಯ ಒಂದು ಉದಾಹರಣೆ :

> **ನೀ**ನಗ್ನಿಪುತ್ರಿಯೈ ಪವ
> **ಮಾನ**ತ**ನೂ**ಭವನೆನಾನಣಂ ಕೂಡೆ ಸುಸಂ
> ಧಾನಮರಿನೃಪನೊಳಂತನ
> **ಲಾ**ನಿಲ**ಸಂಯೋ**ಗಮುರಿಪದಿರ್ಕುಮೆ ಪಗೆಯಂ  ೨–೧೨

ಹೊತ್ತಿಕೊಂಡು ಧಗಧಗಿಸುವ ಅಗ್ನಿಯ ಉದ್ವೇಗವನ್ನು ಹಾಗು ಧಾವಿಸಿಬರುವ ಗಾಳಿಯ 'ಬೀಸು' ಗುಣವನ್ನೂ ಈ ಪದ್ಯದಲ್ಲಿ ಹೊಂದಿಕೊಂಡ ಶಬ್ದಗಳು ಸುಳುವು ಗಾಣಿಸುವಂತಿವೆ. 'ನೀನಗ್ನಿಪುತ್ರಿ' 'ಪವಮಾನತನೂಭವನೆ ನಾಂ' ಎಂಬ ಪದಗಳನ್ನು ಇಲ್ಲಿ ವಿಶಿಷ್ಟವಾಗಿ ಗಮನಕ್ಕೆ ತೆಗೆದುಕೊಳ್ಳಬೇಕು. ಬೆಂಕಿಗೆ ಗಾಳಿ ಕೂಡಿದಾಗ ಆಗುವ ಪರಿಣಾಮವನ್ನು ಬೇರೆ ಹೇಳಬೇಕೇ ? ಮುಂದೆ ನಡೆಯಲಿರುವ ಒಂದು ಮುಖ್ಯ ಕಾರ್ಯವನ್ನು ಇಲ್ಲಿ ಈ ಅರ್ಥಪೂರ್ಣವಾದ ಪದ್ಯ ಸಂದರ್ಭೋಚಿತವಾಗಿ ಮುಂಗಾಣಿಸಿದೆ.

ಭೀಮ ದ್ರೌಪದಿಯ ಸಂವಾದವನ್ನು ಒಳಗೊಂಡ ಈ ಕಾವ್ಯದ ಮೊದಲ ದೃಶ್ಯದಲ್ಲಿ ಹೀಗೆ ಬಹಳಷ್ಟು ಕಂದಪದ್ಯಗಳು ಸಂವೇದನೆಯನ್ನು ಸಮುಚಿತವಾದ ಛಂದೋವಿಧಾನಗಳೊಡನೆ ಅಭಿವ್ಯಕ್ತಗೊಳಿಸಿವೆ.

ಈ ತರುವಾಯ ದುರ್ಯೋಧನನ ವ್ಯಕ್ತಿತ್ವವನ್ನು ಎತ್ತಿ ತೋರುವ ರೀತಿಯಲ್ಲಿ ಬರುವ ದುರ್ಯೋಧನ ಸಂಜಯರ ಸಂವಾದದಲ್ಲಿ ಇಂತಹ ಒಂದೆರಡು ಛಂದೋವಿಧಾನಗಳನ್ನು ಕವಿ ಪ್ರಯೋಗಿಸಿದುದುಂಟು. ಯುದ್ಧದಲ್ಲಿ ನೆಚ್ಚಿನ ತನುಜಾನುಜರನ್ನೂ ನೆಚ್ಚಿನ ಕಲಿ ಕರ್ಣನಂತಹ ಮಿತ್ರನನ್ನೂ ಕಳೆದುಕೊಂಡು ರೋಷತಳೆದ ಏಕಾಂಗವೀರ ದುರ್ಯೋಧನನ ರೊಚ್ಚು ನೆಚ್ಚುಗಳ ನುಡಿ ವಿಶಿಷ್ಟವಾದ ಛಂದಃಶ್ರುತಿಗೂಡಿ, ಹೊಮ್ಮಿ ಬಂದಿದೆ.

**ಛಂದೋವಿಧಾನ ೫ :** ಕಂದಪದ್ಯದ ಮಾತ್ರಾಗಣಾನ್ವಯವಾದ ಲಯದ ನಡೆ ನಿಚ್ಚಳವಾಗುವಂತೆ ನಿಂತುನಿಂತು ಸಾಗುವಂತಹ ಒಂದು ಅಂತಃಶ್ರುತಿಯನ್ನು ಒಡಗೂಡಿಸಿಕೊಂಡ ಹವಹವಣವೂ ಒಂದು ವಿಶಿಷ್ಟ ವಿಧಾನ. ಇದಕ್ಕೆ ಒಂದು ಉದಾಹರಣೆ :

ಓಜಂ ಗಡ ಚೀ ಭಾರ
ಧ್ವಾಜಂ ಗಡ, ಬಿಲ್ಲ ಬಲ್ಮೆಯುಂ ಕುಲಮುಂ ನಿರ್
ವ್ಯಾಜಂ ಮಸುಳ್ದುವು ಪಾಂಡುತ
ನೂಜರ ಪಕ್ಕದೊಳೆ ಪಾಱಿಗಿಡೆ ನೆಗಱ್ದುದಱಿಂ ೩–೪

ಇದೇ ಬೀಸು ನುಡಿ ಪ್ರಾಸವಿನ್ಯಾಸದಲ್ಲಿ ಶ್ರುತಿಗೂಡಿಬಂದ ಬಗೆಯನ್ನು ಕೆಳಗಣ ಪದ್ಯದಲ್ಲಿ ಕಾಣಬಹುದು :

ಕರವಾಳಂ ಮಸೆವಂತಿರೆ
ಮರವಾಳಂ ಮಸೆಯೆ ಕೂರಿತಕ್ಕುಮೆ ಕಲಿಯಂ
ಪೊರೆದೊಡೆ ಕೂರ್ಪಂ ತೋರ್ಪಂ
ತಿರೆ ತೋರ್ಕುಮೆ ಪಂದೆ ಪತಿಗೆ ಸಂಗರದೆಡೆಯೊಳ್ ೩–೨

**ಛಂದೋವಿಧಾನ ೬ :** ಅಣಕನುಡಿ ದಟ್ಟವಾಗಿ ಹೆಣೆದುಕೊಂಡ ಪ್ರಾಸದ ಜತೆಜತೆಗೆ ಧ್ವನಿಪೂರ್ಣವಾಗಿ ಶ್ರುತಿಗೂಡಿದ ಇನ್ನೂ ಒಂದು ವಿಧಾನ ಈ ಕಾವ್ಯದಲ್ಲಿ ಒಡಮೂಡಿ ಬಂದಿದೆ.

ಅತಿರಥನಾತಂ ಗಡ ಬಲ
ಯುತನಾಂ ಸಮರಥನೆನಧಿಕಬಲವಂತಂ ಮಾ
ರುತಿ ಗಡ ಮಹಾರಥಂ ಮಾ
ರುತಿಯುಂ ತದ್ರಥದ ಗಾಲಿಗಳ್ ದೊಡ್ಡಿದುವೇ ? ೩–೪೦

ಭೀಮನ ಬಗೆಗೆ ದುರ್ಯೋಧನನು ಆಡಿದ ಅಣಕನುಡಿಯಿದೆಂಬುದನ್ನು ಮನದಂದರೆ ಈ ರೀತಿಯ ಔಚಿತ್ಯ ಹೊಳೆದೀತು.

**ಅಂತಶ್ಛಂದೋವಿಧಾನ :** ಶೋಕರಸದ ಅಭಿವ್ಯಕ್ತಿಗೆ ಅನುಸ್ವಾರದಿಂದ ಕೂಡಿದ ಪ್ರಾಸ ಹೇಗೆ ಅನುಕೂಲವಾಗುತ್ತದೆ ಎಂಬುದನ್ನು ಹಾಗೂ ಇಂಥ ಪದ್ಯದಲ್ಲಿ ಚರಣ

ಬಿಟ್ಟು ಚರಣದಲ್ಲಿ ಗುರುಲಘುಗಳು ಪ್ರಾಸದೊಡನೆ ಕೂಡಿಬರುವ ಕ್ರಮವು ತುಂಬ ಪರಿಣಾಮಕಾರಿಯಾಗುವುದೆಂಬುದನ್ನು ಸೂಚಿಸುವ ಛಂದೋವಿಧಾನವೂ ಒಂದುಂಟು. ಈ ರೀತಿಗೆ ಒಂದು ಉದಾಹರಣೆಯನ್ನು ಸುಯೋಧನನು ನೆಚ್ಚಿನ ತಮ್ಮಂದಿರನ್ನು ಕಳೆದುಕೊಂಡ ಬಗೆಗೆ ನುಡಿದ ಮನೋವ್ಯಥೆಯ ಸಂದರ್ಭದಲ್ಲಿ ಕಾಣಬಹುದು.

ಕಂದ ನಿಜಾನುಜರೆಲ್ಲಿದ
ರೆಂದೆನ್ನಂ ಜನನಿ ಬಂದು ಬೆಸಗೊಂಡೊಡದೇ
ನೆಂದು ಮರುಮಾತುಗುಡುವೆಂ
**ಕೊಂದರ್ ಕೌಂತೇ**ಯರೆಂದು ಜಿನ್ನೈಸುವೆನೋ ೩-೫೮

ಇಲ್ಲಿ ಗುರುತಿಸಿದ ಪದಗಳನ್ನು ಗಮನಿಸಬೇಕು.

ಇದೇ ಕ್ರಮದಲ್ಲಿ ಗುರುಲಘುಗಳು ಕೂಡಿಬಂದ ಆದಿಪ್ರಾಸದ ಬಗೆಯು ಅಭಿಮನ್ಯು ವನ್ನು ಕಂಡು ಸುಯೋಧನನು ಆಡಿದ ನೆಚ್ಚಿಕೆಯೊಡಗೂಡಿದ ಕಂದಪದ್ಯದಲ್ಲಿ ಕಾಣಿಸಿ ಕೊಂಡಿದೆ ('ದುರ್ಯೋಧನ ವಿಲಾಪ' ದಲ್ಲಿ ೫-೧೭ ನೆಯ ಪದ್ಯವನ್ನು ನೋಡಬೇಕು).

ತನ್ನ ಕವಿತಾಶಕ್ತಿಯ ಬಗೆಗೆ ರನ್ನ ತಳೆದ ಆತ್ಮಪ್ರಜ್ಞೆ ಆತನ ಕಾವ್ಯದ ಪೀಠಿಕೆಯಲ್ಲಿ ಅಭಿವ್ಯಕ್ತವಾಗಿದೆ :

ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ
ಡಾರದ ಮುದ್ರೆಯನೊಡೆದಂ
ಸಾರಸ್ವತಮೆನಿಪ ಕವಿತೆಯೊಳ್ ಕವಿರನ್ನಂ

ರನ್ನನ ಈ ಆತ್ಮಪ್ರಜ್ಞೆ ಛಂದಸ್ಸಿನ ದೃಷ್ಟಿಯಿಂದ ಒಂದಿಷ್ಟು ಸಮರ್ಥನೆಯನ್ನು ಪೂರೈಸ ಬಹುದು. ಈ ಬರಹದಲ್ಲಿ ಈ ಮೊದಲು ವಿವೇಚಿಸಿದ ಕೆಲವೊಂದು ಅಂತಶ್ಛಂದೋ ವಿಧಾನಗಳು.

ಒಟ್ಟಿನಲ್ಲಿ ಈ ಕಾವ್ಯದ ಸಂವಾದದ ಸಂದರ್ಭಗಳಲ್ಲಿ ರನ್ನಕವಿಯ ಕಂದಪದ್ಯಗಳು ದೃಶ್ಯವತ್ತಾಗಿ ಹಾಗು ರಸಾನುಗುಣವಾಗಿ ಅಂತಃಶ್ರುತಿ ತಳೆದು ಬಂದಿವೆ ಎಂದು ಹೇಳಬಹುದು.

■ ■

# ಕನ್ನಡ ರಗಳೆಯ ಉಗಮ : ಒಂದು ವಿವೇಚನೆ

ಸೀತಾರಾಮ ಜಾಗೀರ್‌ದಾರ್

ಕನ್ನಡ ಛಂದಸ್ಸನ್ನು ಕುರಿತು ಒರೆದ ಗ್ರಂಥಗಳನ್ನು ಅವಲೋಕಿಸಿದಾಗ, ಹರಿಹರನ ರಗಳೆಗಳನ್ನು ಸಂಪಾದಿಸಿದ ಸಂದರ್ಭದಲ್ಲಿನ ಉಪೋದ್ಘಾತಗಳನ್ನು ಮನದಂದಾಗ, ನಮಗೆ ಕಂಡುಬರುವ ಸಂಗತಿಯೆಂದರೆ ರಗಳೆಛಂದಸ್ಸಿನ ಮೂಲ 'ಪಜ್ಝಟಿ' ಎಂಬ ಒಂದು ಭೇದ. ಪ್ರಾಕೃತ ಪೈಂಗಲ ಗ್ರಂಥದಲ್ಲಿ ವಿವರಿಸಿದ ಪಜ್ಝಟಿಯ ಗತಿಯೆ ಎಂದರೆ :

ಚಉತ್ತಮಕರಹಗಣಠಾಇಠಾಇ
ಠಇ ಅಂತಪಓಹರ ಪಾಇಪಾಇ
ಚಉಸಠ್ಠಿ ಮತ್ತ ಪಜ್ಝಲಇಇಂದು
ಸಮುಚಾರಿಪಾಅ ಪಜ್ಝಟಿಅ ಛಂದು ॥[೧]

—ಎಂಬುದೇ ಆಧಾರಸ್ತಂಭವಾಗಿನಿಂತಿದೆ. ಪ್ರಾಕೃತ ಪೈಂಗಲ ಗ್ರಂಥವು ಹುಟ್ಟಿದುದು ಸು. ಕ್ರಿ. ಶ. ೧೪ನೆಯ ಶತಮಾನ ಎಂದಾಗ[೨] ಈ ಲಕ್ಷಣಶಾಸ್ತ್ರವನ್ನು ಅನುಸರಿಸಿ, ಆಧರಿಸಿ ಇದಕ್ಕೂ ಪೂರ್ವದಲ್ಲಿ ಹುಟ್ಟಿದ ಕನ್ನಡದ ಕಾವ್ಯಗಳಲ್ಲಿನ ಛಂದೋಬಂಧಗಳನ್ನು ವಿವರಿಸುವುದು ಅಷ್ಟು ಸಮರ್ಪಕ ಎಂದು ತೋರದು; ಅವು ಈ ಪಜ್ಝಟಿಯನ್ನು ಆಧರಿಸಿ ಹುಟ್ಟಿಕೊಂಡುವು ಎಂಬುದು ಸರಿಯಾದ ಮಾರ್ಗವಲ್ಲ. ಈ ಗ್ರಂಥಕ್ಕೂ ಪೂರ್ವದಲ್ಲಿದ್ದ ಲಕ್ಷಣಶಾಸ್ತ್ರವನ್ನು ಉಪಲಬ್ಧವಿದ್ದಾಗ ಬಳಸಿಕೊಳ್ಳುವುದು ವಿಹಿತ.

೧ ಪ್ರಾಕೃತ ಪೈಂಗಲ, ಪು. ೨೧೭.

೨ (ಅ) The Prakrit Pingala belongs to the 14th century A.D.)., at the earliest—M. Winternitz & S. Jha, History of Indian Literature, Vol. III, pt. I (1963 edition) p. 33. ffin. 2

(ಬ) A. B. Keith, History of Sanskrit Literature (1956) p. 35

ಈ ಪಜ್ಝಟಿಯು ಪ್ರಾಕೃತದಲ್ಲಿ 'ಪದ್ಧಡಿ' ಎಂದೂ ಪ್ರಸಿದ್ಧ. ಇದು ನಮಗೆ ಸು. ಕ್ರಿ. ಶ. ೮-೯ ನೆಯ ಶತಮಾನದಲ್ಲಿದ್ದ ಕರ್ನಾಟಕದವನೇ ಆದ ಕವಿ ಸ್ವಯಂಭುವಿನ 'ಛಂದಲಕ್ಷಣಂ' ಗ್ರಂಥದಲ್ಲಿ ದೊರೆಯುತ್ತದೆ.[೩] 'ಡ' ಕಾರ 'ಳ' ಕಾರವಾಗುವದರಿಂದ ಮತ್ತು ಮಹಾಪ್ರಾಣವು ಅಲ್ಪಪ್ರಾಣವಾಗುವದರಿಂದ 'ಪದ್ಧಡಿ' ಕನ್ನಡದಲ್ಲಿ 'ಪದ್ದಳಿ' ಎಂದಾಗಿದೆ.[೪] ಪದ್ಧತಿ(ಕಾ) > ಪದ್ಧಡಿ(ಅ) > ಪದ್ದಳಿ — ಇದು ಶಬ್ದದ ರೂಪನಿಷ್ಪತ್ತಿ. ಮಾನಸೋಲ್ಲಾಸ ಗ್ರಂಥದಲ್ಲಿ 'ಪದ್ಧತಿ' ಎಂಬಲ್ಲಿನ 'ತಿ' ಕಾರ 'ಲಿ' ಕಾರವಾಗಿದೆ. ಅರ್ಥಾತ್ 'ಪದ್ಧಲಿ' ಎಂಬುದು ಪ್ರತಿಕಾರರ ಕೈಯಲ್ಲಿ ಉಂಟಾದ ಸ್ಖಾಲಿತ್ಯವೆಂದು ತೋರುತ್ತದೆ.[೫] ಪದ್ಧಡಿ ಒಂದು ವಿಶಿಷ್ಟ ಛಂದಸ್ಸಾಗಿರುವಂತೆಯೇ ಅದು ಒಂದು ವಿಶಿಷ್ಟ ಕಾವ್ಯರೂಪವೂ ಕೂಡ ಆಗಿದೆ. ಚಂಪೂಕಾವ್ಯಗಳಲ್ಲಿ ಅನೇಕ ಬಗೆಯ ವೃತ್ತಗಳೂ ಛಂದಗಳೂ ಬಂದಹಾಗೆ 'ಪದ್ಧಡಿ' ಕಾವ್ಯಗಳಲ್ಲೂ ಹಲವು ಬಗೆಯ ಛಂದಸ್ಸುಗಳು ಬರುತ್ತವೆ. ಅವುಗಳಲ್ಲಿ ಕೇವಲ 'ಪಜ್ಝಟಿ' (ಪದ್ಧಡಿ) ಛಂದ ಒಂದೇ ಬರುವದಿಲ್ಲ. ಆದುದರಿಂದ ಕನ್ನಡ ರಗಳೆಗಳ ಮೂಲ ಕೇವಲ ಪಜ್ಝಟಿ ಒಂದೇ ಅಲ್ಲ. ಆಶ್ಚರ್ಯದ ಸಂಗತಿಯೆಂದರೆ ಪದ್ಧಡೀ ಕಾವ್ಯರೀತಿಯನ್ನು 'ರಡ್ಡಾವೃತ್ತ' ಅಥವಾ 'ರಡ್ಡಾಪದ್ಧ' ಎಂದೂ ಹೇಳಲಾಗುತ್ತಿತ್ತು.[೬] 'ರಯಡಾ' ಅಥವಾ ರಡ್ಡಾ (?) ಇದರ ಮೂಲವೇ ರಘಟಾ. ಅದು ನೇರ ಸಂಸ್ಕೃತದಿಂದ ಕನ್ನಡಕ್ಕೆ ಬಂದಾಗ 'ರಗಳೆ' ಆಯಿತು. 'ರಗಳೆ' ಶಬ್ದದ ನಿಷ್ಪತ್ತಿ ನನ್ನ ಬೇರೊಂದು ಲೇಖನದಲ್ಲಿ ಬಂದಿದೆ.[೭]

ನಾಗವರ್ಮನ ರಘಟಾಲಕ್ಷಣ ಒಂದು ಕಂದದಲ್ಲಿದ್ದು ಅದು ಬಹಳ ಸ್ಥೂಲ ಧೋರಣೆಯನ್ನುಳ್ಳದ್ದಾಗಿದೆ :

ಗಣನಿಯಮ ವಿಪರ್ಯಾಸದೊ
ಳೆಣೆವಡೆದೊಳ್ಪೆಸೆಯೆ ಮಾತ್ರೆ ಸಮನಾಗೆ ಗುಣಾ
ಗ್ರಣಿಯ ಮತದಿಂದೆ ತಾಳದ
ಗಣನೆಗೊಡಂಬಟ್ಟೊಡದುವೆ ರಘಟಾಬಂಧಂ ॥[೮]

ಈ ಒಂದು ಕಂದವನ್ನು ಬಿಟ್ಟರೆ ಮಿಕ್ಕವೆಲ್ಲ ಪ್ರಕ್ಷಿಪ್ತ ಎಂಬ ಒಂದು ನಿರ್ಣಯವನ್ನು ಎಲ್. ಬಸವರಾಜು ಸಂಪಾದಿಸಿದ 'ಛಂದೋಂಬುಧಿ' ನೀಡುತ್ತದೆ.[೯] ನಾಗವರ್ಮನು ಪಂಪಾದಿಗಳ ಕಾವ್ಯಗಳನ್ನು ನೋಡಿದ್ದರೆ ರಗಳೆಯ ಲಕ್ಷಣವನ್ನು ಹೀಗೆ ಅಸ್ಪಷ್ಟ ರೀತಿಯಲ್ಲಿ ಏಕೆ ವಿವರಿಸಿದ? ಎಂಬ ಪ್ರಶ್ನೆ ನಮ್ಮ ಮುಂದೆ ಹಾಗೆಯೆ ನಿಲ್ಲುತ್ತದೆ.

---

೩ ಸ್ವಯಂಭೂಛಂದಃ (ಸಂ. ಪ್ರೊ. ಎಚ್. ಡಿ. ವೇಲಣಕರ್) ಪು. ೯೬.
೪ (ಅ) ಶಾಂತಿನಾಥ ಕವಿಯ 'ಸುಕುಮಾರ ಚರಿತಂ' ಆ. ೮–೬೬. ಪ. ೧೪೩–೪೪
(ಬ) ಕರ್ಣಾಟಕ ಕವಿಚರಿತೆ, ಭಾಗ–೧ (೧೯೬೧) ಪು. ೧೦೨.
೫ ಮಾನಸೋಲ್ಲಾಸದಲ್ಲಿ ಛಂದಸ್ಸು (ಡಿ. ಎಲ್. ಎನ್) ಪ್ರ. ಕ. ಸಂ. ೪೫, ಸಂ. ೨. ಪು. ೬೦
೬ ಸ್ವಯಂಭುಕವಿಯ 'ಪಉಮಚರಿಉ' (ಸಂ. ಡಾ. ಭಯಾಣಿ) ಭಾಗ ೧, ಸಂಧಿ ೧ ಕ. ೩-೯
೭ ಪ್ರಬುದ್ಧಕರ್ಣಾಟಕ, ಸಂ–೫೧. ಪು. ೧೫–೪೬
೮ ಛಂದೋಂಬುಧಿ. ೩–೨೨; ಈ ಪದ್ಯದಲ್ಲಿ ಕೆಲ ಸಣ್ಣ ಪಾಠಭೇದಗಳಿವೆ.
೯ ಕನ್ನಡ ಛಂದಸ್ಸಂಪುಟ - ಡಾ. ಎಲ್. ಬಸವರಾಜು, ಪು. ೯೪.

ಜಯಕೀರ್ತಿಯು ರಗಳೆಯ ಲಕ್ಷಣವನ್ನು ಕುರಿತು ಹೇಳಿದ ಲಕ್ಷಣ ಪದ್ಯ :

ಸ್ವೇಷ್ಟಸ್ಯ ಸಂಜ್ಞಾ ರಘಟಾ ಮಾತ್ರಾಕ್ಷರ ಸಮೋದಿತಾಃ ।
ಪಾದಸ್ವಸ್ವಾ ಸಮಾಕೀರ್ಣಾ ಸುಶ್ರಾವ್ಯಾ ಸೈವ ಪದ್ಧತಿಃ ॥

—ಕೂಡ ಒಂದು ಸ್ಥೂಲಘೋರಣೆಯ ಲಕ್ಷಣವಾಗಿದೆ ವಿನಾ ಅದು ರಗಳೆಗಳ ವಿವಿಧ ಭೇದಗಳನ್ನು ತಿಳಿಸುವದಿಲ್ಲ. ಈ ಅನುಷ್ಟುಪ್ ಪದ್ಯ. ಕೇವಲ 'ಸಂಜ್ಞಾ' ಅಧಿಕಾರ ವಾದ ಪ್ರಥಮ ಅಧಿಕಾರದಲ್ಲಿ ಬಂದಿರುವದರಿಂದ[೧೦] ಜಯಕೀರ್ತಿಯ ರಗಳೆಯ ಸಂಪೂರ್ಣ ಲಕ್ಷಣ ಬೇರೆಡೆ ಗ್ರಂಥದಲ್ಲಿ ಬಂದಿದ್ದು ಅದು ನಮಗೆ ಇನ್ನೂ ದೊರಕಿಲ್ಲ ವೆಂದೇ ಹೇಳಬೇಕಾಗಿದೆ. ಈ ಗ್ರಂಥದ ಒಂದೇ ಹಸ್ತಪ್ರತಿ ದೊರಕಿದ್ದು ಅದು ಆರನೆಯ ಅಧಿಕಾರದಲ್ಲಿ ಇನಿತು ತ್ರುಟಿತವಾಗಿದ್ದುದೂ ಸ್ಪಷ್ಟ ಇರುವದರಿಂದ[೧೧] ಹೀಗೆ ಊಹಿಸದೆ ಬೇರೆ ಗತ್ಯಂತರವಿಲ್ಲ. ಇಲ್ಲಿನ ಈ ಲಕ್ಷಣ, ಪ್ರಥಮ ಅಧಿಕಾರದಲ್ಲಿ ಬಂದ ಅಕ್ಷರ (ಅಕ್ಕರ), ದಂಡಕ ಇತ್ಯಾದಿಗಳ ಹಾಗೆ ಸ್ಥೂಲ ಹೇಳಿಕೆ. ಆದುದರಿಂದ ಇದು ವರೆಗೆ ಇದನ್ನೇ 'ಪಜ್ಝಟಿ'ಛಂದ ಎಂದು ವಿವರಿಸಿದುದು ಸರಿಯಲ್ಲ. ಇಲ್ಲಿನ 'ಪದ್ಧತಿ' 'ಪದ್ಧಡಿ'ಯನ್ನು ಸೂಚಿಸುತ್ತದೆ, ಅದು ಕೇವಲ ಒಂದು ಬಗೆಯ ಛಂದಗಳ ಸಂಜ್ಞೆ.

ಪಂಪಾದಿ ಕವಿಗಳ ಪೂರ್ವದಲ್ಲಿದ್ದ ಪದ್ಧಡೀಬದ್ಧ ಕಾವ್ಯಗಳನ್ನು ಮತ್ತು ಸ್ವಯಂಭೂ ಕವಿಯ ಛಂದಶ್ಶಾಸ್ತ್ರವನ್ನು ಪರೀಕ್ಷಿಸಿದರೆ ಮಾತ್ರ ಇನಿತು ನಮಗೆ 'ಪದ್ಧಡಿ' ಕಾವ್ಯ ರೂಪದ ಅರಿವು ಮೂಡುತ್ತದೆ. ಪದ್ಧಡಿ ಆ ಕಾವ್ಯರೂಪ ಗ್ರಂಥ, ಹಲವು ಸಂಧಿ ಗಳಿಂದ ಕೂಡಿರುತ್ತದೆ. ಸಂಧಿಯು ಕೆಲವು ಕಡವಕಗಳಿಂದ ಕೂಡಿರುತ್ತದೆ. ಒಂದೊಂದು ಕಡವಕವೂ ಆದಿ, ಮಧ್ಯ ಹಾಗೂ ಅಂತ್ಯ ಎಂಬ ಮೂರು ಭಾಗಗಳನ್ನು ಹೊಂದಿರು ತ್ತದೆ.[೧೨] ಈ ಮೂರು ಭಾಗಗಳಲ್ಲಿಯೂ ವಿವಿಧ ರೀತಿಯ ಛಂದಸ್ಸುಗಳನ್ನು ಬಳಸ ಲಾಗುತ್ತದೆ. ಮೊದಲನೆಯ ಭಾಗಕ್ಕೆ ನಿರ್ದಿಷ್ಟ ಹೆಸರಿದ್ದಂತೆ ತೋರುವದಿಲ್ಲ. ಮಧ್ಯ ಭಾಗಕ್ಕೆ ಯಮಕ ಎಂದು ಹೇಳಲಾಗುತ್ತದೆ. ಅದು ೮ ಇಲ್ಲವೆ ೬ ಯುಗಲಗಳನ್ನು ಹೊಂದಿರುತ್ತದೆ. ಒಂದು ಕಡವಕದಿಂದ ಇನ್ನೊಂದು ಕಡವಕದಲ್ಲಿನ ಛಂದಸ್ಸುಗಳು ಸಾಮಾನ್ಯವಾಗಿ ಭಿನ್ನಭಿನ್ನವಾಗಿರುತ್ತವೆ. ಕೊನೆಯ ಭಾಗವನ್ನು 'ಘತ್ತಾ' ಎಂಬ ಹೆಸರಿನಿಂದ ಕರೆಯಲಾಗುತ್ತದೆ. ಇದು ಪದ್ಧಡಿ ಆ ಕಾವ್ಯಗಳನ್ನು ಅವಲೋಕಿಸಿ ಹೇಳುವ ಸಂಗತಿಯಾದರೆ ಸ್ವಂಭುವಿನ 'ಛಂದಲಕ್ಖಣಂ' ಗ್ರಂಥದಲ್ಲಿ ಬಂದಿರುವ ವಿವರಣೆ ಇದಕ್ಕೆ ಸಂಪೂರ್ಣ ವಿರುದ್ಧವಾಗಿದೆ. ಅವನ ಪ್ರಕಾರ ಪದ್ಧಡಿ ಎಂದರೆ ಏನೆಂಬುದು ಅರ್ಥವಾಗಬೇಕಾದರೆ ಅದು ಬಂದಿರುವ ಸಂದರ್ಭಗಳೆಲ್ಲವನ್ನೂ ಅವಲೋಕಿಸಬೇಕು. ಏಕೆಂದರೆ ನಮಗೆ ಉಪಲಬ್ಧವಾಗಿರುವ ಸ್ವಯಂಭುವಿನಗ್ರಂಥ ಅಸಂಪೂರ್ಣ ಹಾಗೂ ತ್ರುಟಿತ; ಆ ಗ್ರಂಥದಲ್ಲಿ ಬಂದಿರುವ ಪದ್ಧಡಿಆದ ಉಲ್ಲೇಖಗಳು :

೧೦ ಜಯದಾಮನ್, ಜಯಕೀರ್ತಿಯ ಛಂದೋನುಶಾಸನ ಅ. ೧. ೨೪, ಪು. ೪೩.

೧೧ ಅದೇ ಗ್ರಂಥ. ಉಪೋದ್ಘಾತ. ಪು. ೪೮; ಗ್ರಂಥ ಪು. ೬೫. ಗ್ರಂಥದಲ್ಲಿ ಎಷ್ಟು ಓಲೆಗಳು ಲುಪ್ತವಾಗಿವೆಯೆಂಬುದನ್ನು ಡಾ. ಎಚ್. ಡಿ. ವೇಲಣಕರ್ ಅವರು ತಿಳಿಸಿಲ್ಲ.

೧೨ ಪಉಮಚರಿಉ, ಸಂಪುಟ–೧ (ಡಾ. ಎಚ್. ಸಿ. ಭಯಾಣಿ) ಉಪೋದ್ಘಾತ, ಪು. ೭೪

೧ ಸೋಲಹ ಮತ್ತಂ ಪಾಆಉಲಅಂ
ಭಚಭಂಸ ವಿರಇಅಂ ಸಂಕುಲಅಂ
ತಂಚೇಅ ಚ[ಆ]ರ ಚಉಕ್ಕಲಅಂ
ತಂಜಾಣಸು ಪದ್ಧಡಿಆ ಧುವಅಂ॥

[ಷೋಡಶ ಮಾತ್ರಂ ಪಾದಾಕುಲಕಂ। ಭಜಭಂಶ ವಿರಚಿತಂ ಸಂಕುಲಮ್।
ತದೇವ ಚಕಾರ ಚತುಷ್ಕಂ। ತಜ್ಜಾನೀಹಿ ಪದ್ಧತಿಕಾ ಧ್ರುವಕಮ್॥][೧೩]

೨ ಸತ್ತವಿಹಾ ಛಡ್ಡಣಿಆ
ತಿವಿಹಾಓ ಹೊಂತಿ ತಹಅ ಘತ್ತಾಓ
ಪದ್ಧಡಿ ಆಣೇಅ ವಿಹಾ
ಗೀಈಓ ಹೊಂತಿ ವಿವಿಹಾಓ॥

[ಸಪ್ತವಿಧಾಶ್ಛಡ್ಡಣಿಕಾ ಸ್ತ್ರಿವಿಧಾ ಭವನ್ತಿ ತಥಾ ಚ ಘತ್ತಾಃ।
ಪದ್ಧತಿಕಾನ್ಯೈಕವಿಧಾ ಗೀತಯೋ ಭವನ್ತಿ ವಿವಿಧಾಃ॥][೧೪]

೩ (ಅ) ಪದ್ಧಡಿಆ ಪುಣು ಜೆ[ಈ] ಕರೇಂತಿ
ತೇ ಸೋಡಹ ಮತ್ತಉ ಪುಉ ಧರೇಂತಿ।
ಬಿಹಿಂ ಪಅಹಿಂ ಜಮಉ ತೇಣಿಮ್ಮ ಅಂತಿ
ಕಡವಅ ಅಟ್ಠಹಿಂ ಘಮಅಹಿಂ ರಅನ್ತಿ॥[೧೫]

[ಪದ್ಧತಿಕಾಂ ಪುನರ್ಯೇತಿ ಕುರ್ವನ್ತಿ। ತೇ ಷೋಡಶ ಮಾತ್ರಾಃ ಪಾದಂ ಧಾರಯನ್ತಿ।
ಧ್ವಾಭ್ಯಾಂ ಪಾದಾಭ್ಯಾಂ ಯಮಕಂ ತೇ ನಿರ್ಮಿಮತೇ। ಕಡವಕಮಷ್ಟಭಿರ್ಯಮಕೈ
ರಚಯನ್ತಿ ॥][೧೬]

(ಬ) ಆಇಹಿಂ ಪುಣು ಘತ್ತಸಮಾಮಣಂತಿ
ಜಮ ಆವಸಾಣ ಛಡ್ಡಣಿ ಭಣಂತಿ।
ಸಂಖಾಣಿಬದ್ಧ ಕಡವೇಹಿಂ ಸಂಧಿ
ಇಹ ವಿವಿಹ ಪಆರಹಿಂ ತುಹುಂ ವಿ ಬಂಧಿ॥

---

೧೩ ಸ್ವಯಂಭೂ ಛಂದಃ. ಪು. ೮೫. ಪ್ರಾಕೃತಪದ್ಯದ ಮೂರನೆಯ ಪಾದದಲ್ಲಿ ವೇಲಣಕರ್ ಅವರ ಸಂಸ್ಕರಣದಲ್ಲಿ 'ಚತ್ತಾರ' ಎಂದಿದೆ ನಾನು ಅದು 'ಚಆರ' ಎಂದು ಸ್ವೀಕರಿಸಿದ್ದೇನೆ' ರೂಪಸಾದೃಶದಿಂದ ಆ>ತಾ ಆಗಿರಲು ಸಾಧ್ಯ. 'ಚತ್ತಾರ' ಇಟ್ಟುಕೊಂಡರೆ ಛಂದಸ್ಸು ಕೆಡುತ್ತದೆ. ಸಂಸ್ಕೃತದಲ್ಲಿ ಉತ್ತರಭಾಗ ಪ್ರಾಕೃತದಷ್ಟು ಸ್ಪಷ್ಟವಾಗಿಲ್ಲ.

೧೪ ಅದೇ ಗ್ರಂಥ. ಪು ೯೩, 'ಪದ್ಧತಿ' ಅನೇಕ ವಿಧವೆಂಬುದು ಗಮನಾರ್ಹವಾದ ಅಂಶ.

೧೫ ಅದೇ ಗ್ರಂಥ. ಪು. ೯೬, ಇಲ್ಲಿ ಬಿಂದುವಿನ ಮೇಲೆ ಲಘು ಸಂಜ್ಞೆಯನ್ನು ಅಂಥಾ ಅಕ್ಷರಗಳನ್ನು 'ಹಿಂ'ಲಘುವಾಗಿ ಸ್ವೀಕರಿಸಲು ಸೂಚಿಸಿದೆ. ಇದು ಪ್ರಾಕೃತಗಳಲ್ಲಿ ರೂಢಿ. ಕೊನೆಯ ಪಾದದ 'ರಅನ್ತಿ' ಇದಕ್ಕೆ 'ರಸಅಂತಿ' ಎಂಬ ಪಾಠಾಂತರವಿದೆ. ಅದನ್ನು ಸ್ವೀಕರಿಸಿದರೆ ಛಂದಸ್ಸು ಕೆಡುತ್ತದೆ. 'ರಸಂತಿ' ಎಂಬ ಪರಿಷ್ಕರಣ ಸಾಧ್ಯವೇ ಎಂಬುದು ವಿಚಾರಣೀಯ.

೧೬ ಸಂಸ್ಕೃತದ ಛಾಯೆಯ ಉತ್ತರ ಭಾಗದಲ್ಲಿ ಛಂದಸ್ಸು ಕೆಟ್ಟಿದೆ.

[ಆದೌ ಪುನಃ ಘತ್ತಾಂ ಸಮಾಮನನ್ತಿ । ಯಮಕಾವಸಾನಾಂ ಛಡ್ಡಣಿಕಾಂ ಭಣನ್ತಿ।
ಸಂಖ್ಯಾನಿಬದ್ಧ ಕಡವ್ಯೈಃ ಸನ್ಧಿಂ । ಇಹ ವಿವಿಧ ಪ್ರಕಾರೈ ತ್ವಮಪಿ ಬಧಾನ ॥]

೪ ಸಂಧಿಹಿಂ ಆಇಹಿಂ ಘತ್ತಾ । ದುವಈ ಗಾಹಾಡಿಲ್ಲಾ ।
ಮತ್ತಾ ಪದ್ಧಡಿ ಆವಿ । ಛಡ್ಡಣಿ ಆ ವಿ ಪಡಿಲ್ಲಾ ॥

[ಸನ್ಧಿಷು ಆದೌ ಘತ್ತಾ । ದ್ವಿಪದೀ ಗಾಥಾ ಅಡಿಲಾ ।
ಮಾತ್ರಾ ಪದ್ಧತಿಕಾಃ । ಛಡ್ಡಣಿಕಾ ಅಪಿ ಪಶ್ಚಾದ್ಭಾವಾಃ ॥][೧೭]

೫ ಘತ್ತಾ ಛಡ್ಡಣಿ ಆಹಿಂ
ಪದ್ಧಡಿ ಆ[ಹಿಂ] ಸು ಅಣ್ಣ ರೂಪಹಿಂ ।
ರಾಸಾಬಂಧೋ ಕವ್ವೇ
ಜಣಮಣ ಅಹಿರಾಮಓ ಹೋಇ ॥

[ಘತ್ತಾ ಛಡ್ಡಣಿಕಾಭಿಃ । ಪದ್ಧತಿಕಾಭಿಃ ಸುವರ್ಣರೂಪಾಭಿಃ
ರಾಸಾಬನ್ಧಃ ಕಾವ್ಯೇ । ಜನಮನೋಽಭಿರಾಮಕೋ ಭವತಿ ॥][೧೮]

—ಮೇಲಿನ ಉಲ್ಲೇಖಗಳಿಂದ ಒಂದು ಚತುಷ್ಪದಿ ಇಲ್ಲವೆ ಯಮಕಗಳಲ್ಲಿ ಒಟ್ಟು ೧೬ ಮಾತ್ರೆಗಳು ಪಾದವೊಂದಕ್ಕೆ ಬಂದರೆ ಅದು 'ಪಾದಾಕುಲಕ'; ಒಂದೊಂದು ಪಾದದಲ್ಲಿ ೬+೪+೬ ರ ಗಣನಿಯಮವಿದ್ದರೆ ಅದು 'ಸಂಕುಲಕ' ಮತ್ತು ಒಂದೊಂದು ಪಾದದಲ್ಲಿ ೪+೪+೪+೪ ರ ಗಣನಿಯಮವಿದ್ದರೆ ಅದು 'ಪದ್ಧಡಿ'[೧೯] ಆಗುತ್ತದೆ. ಈ ಪದ್ಧಡಿ ಅನೇಕ ವಿಧ. ಅದು ಯುಗಲ(ಯಮಕ)ರೂಪದಲ್ಲಿರುತ್ತದೆ. ಆದಿಯಲ್ಲಿ ಘತ್ತಾ ಮಧ್ಯದಲ್ಲಿ ಯಮಕ ಅದರ ಅನಂತರದಲ್ಲಿ ಛಡ್ಡಣಿ ಇದ್ದರೆ ಒಂದು ಕಡವಕ ಮತ್ತು ಅನೇಕ (ಸಂಖ್ಯಾ ಅನಿಬದ್ಧ) ಕಡವಕಗಳಿಂದ ಒಂದು ಸಂಧಿ ಆಗುತ್ತದೆ. ಪದ್ಧಡಿಯನ್ನು ರಾಸಾಬಂಧ[೨೦] ಕಾವ್ಯದಲ್ಲೂ ಬಳಸಲಾಗುತ್ತದೆ. ರೇಖೆಯ ರೂಪದಲ್ಲಿ ಈ ವಿಷಯವನ್ನು ಹೀಗೆ ಗುರುತಿಸಬಹುದು :

ಕಡವಕ [ ಛಂದಲಕ್ಖಣ– ಘತ್ತಾ + ಯಮಕ + ಛಡ್ಡಣಿ
ಪ್ರಾಕೃತ ಕಾವ್ಯಗಳು – ? + ಯಮಕ + ಘತ್ತಾ

೧೭ ಅದೇ ಗ್ರಂಥ ಪು. ೯೭. ಈ ಸೂತ್ರದ ಕೆಳಗೆ ಕೇವಲ ಒಂದು ಬಗೆಯ ಪದ್ಧಡಿ ಬಂದವನ್ನು ಕೊಟ್ಟಿದ್ದಾನೆ — ೨೦–೬ ರಿಂದ ೨೦–೯ ರ ವರೆಗೆ ನಾಲ್ಕು ನುಡಿ (ಚತುಷ್ಪದಿ) ಗಳು ಇಲ್ಲವೆ ಎಂಟು ಯಮಕಗಳಿವೆಯೆಂದು ಹೇಳಬಹುದು.

೧೮ ಅದೇ ಗ್ರಂಥ. ಪು. ೧೦೦

೧೯ ಒಂದನೆಯ ಉಲ್ಲೇಖ 'ಪಾದಾಕುಲಕ' 'ಸಂಕುಲಕ' ಇಲ್ಲವೆ 'ಪದ್ಧಡಿ' ಇವುಗಳಲ್ಲಿ ಯಾವುದಾದರೊಂದು ಆಗಬಹುದು. ಮೂರನೆಯ ಉಲ್ಲೇಖದಲ್ಲಿನ 'ಪದ್ಧಡಿ' ೩(a) ಯನ್ನು 'ಸಂಕುಲಕ' ಎಂದೂ ೩(b) ಯನ್ನು ಪಾದಾಕುಲಕ ಎಂದೂ ಹೇಳಿದರೆ ತಪ್ಪಾಗದು.

೨೦ 'ರಾಸಾಬಂಧ' ಎಂದರೆ ಪದ್ಯ ಹೀಗೇ ಎಂದು ವಿವರಿಸಲು ಸಾಧ್ಯವಿಲ್ಲ. ಇಲ್ಲಿ ಇದು ಕಿಂಚಿತ್ ಅಸ್ಪಷ್ಟ. ಈ ದಿಶೆಯಲ್ಲಿ ಇನ್ನೂ ಸಂಶೋಧನೆ ಆಗಬೇಕು. ಅನಂತರದ ಹಿಂದೀ ಭಾಷೆಯಲ್ಲಿ 'ರಾಸೊ' ಕಾವ್ಯಗಳಿದ್ದುದರ ಅರಿವು ನನಗಿದೆ.

ಅಚ್ಚರಿಯ ಸಂಗತಿಯೆಂದರೆ ಸ್ವತಃ ಸ್ವಯಂಭೂಕವಿಯ ಮಹಾಕಾವ್ಯಗಳಲ್ಲಿಯ ಕಡವಕಗಳು ಛಂದಲಕ್ಷಣದಲ್ಲಿನ ನಿಯಮಕ್ಕನ್ವಯವಾಗಿ ರಚಿತವಾಗಿಲ್ಲ. ಸ್ವಯಂಭೂಕವಿಯ 'ಪಉಮಚರಿಉ' ಮತ್ತು 'ರಿಟ್ಠಣೇಮಿಚರಿಉ' ಕಾವ್ಯಗಳಲ್ಲಿನ ಛಂದಸ್ಸುಗಳನ್ನು ಡಾ. ಎಚ್. ಸಿ. ಭಯಾಣಿ ಅವರು ಈಗಾಗಲೇ ಒಂದೆಡೆ ಬಹು ಸುಂದರವಾಗಿ ಪ್ರತಿಪಾದಿಸಿದ್ದಾರೆ[21] ಪದ್ಧಡಿಯನ್ನು ಕುರಿತು ಶ್ರೀಯುತರು ಬಹುಗಮನಾರ್ಹವಾದ ಹೇಳಿಕೆಯನ್ನಿತ್ತಿದ್ದಾರೆ : From these pices of information we can gather that like the terms *Chaḍḍaṇia*, *Ghattā*, *Dhruvaka*, Vastukai the term *Paddhaḍiā* also had two applications. It was the name given to the group of metres containing 16 moras per pāda and employed in the Ap. epic called in all probability the Sand, bandha. Besides it was the name of a particular metre having the form 4 + 4 + 4 + ⏑ – ⏑. It is likely that as in the case of the other terms mentioned above, the development of the application may have been from the general to the particular. In other words because the meter with the form 4+ 4 + 4 + ⏑ – ⏑ was fondly employed in the sandhibandha that alone came to be called Padhaḍikā. From the remarks *ādi śabdād Vadanadi parigrahaḥ* of the Com. of the *Kavidarpaṇa* we know that over and above the Paddhaḍikā, Vadanaka and some other metre or metres were used for the main body of the Ap. epic, and this finds support from the actual practice as evidenced by the works of Svayambhū, Tribhuvana, Pushpa-Panta and others.[22]

'ಪಉಮಚರಿಉ' ಗ್ರಂಥದ ಮೂರನೆಯ ಭಾಗದಲ್ಲಿ ಅಭ್ಯಾಸಿಯೋ ಅಥವಾ ಪ್ರತಿಕಾರನೋ ಬಹುಹಿಂದೆಯೆ ಕೆಲವು ಛಂದಸ್ಸುಗಳನ್ನು ಗುರುತಿಸಿಟ್ಟಿದ್ದಾನೆ. ಅವೆಂದರೆ : ಧ್ರುವಕಮ್[23], ಮಯಣಾವಯರೋಣಾಮ ಛನ್ದೋ[24] (ಮದನಾವತಾರ–೫ + ೫ + ೫ + ೫ = ೨೦); ಹೇಲಾದುವಈ;[25] ತೋಮರೋಣಾಮ ಛನ್ದೋ[26] (ಇದು 'ಸಮಾನಿ'ಲಯ–ಗತಿಯುಳ್ಳದ್ದು ಅಷ್ಟಾಕ್ಷರಿ × ೪; ಕನ್ನಡದಲ್ಲಿ ತೋಮರ ರಗಳೆ ಲಲಿತರಗಳೆಯಂತಿದೆ. ಅದರ ಬಂಧಗತಿ ಬೇರೆ). ಮತ್ತಮಾಯಂಗ್ರೋ

---

೨೧ 'ಪಉಮಚರಿಉ' ಭಾಗ ೩, ಉಪೋದ್ಘಾತದ ಅನುಬಂಧ ೧ ಮತ್ತು ೨, ಪು. ೨೩–೩೫

೨೨ ಅದೇ ಗ್ರಂಥ. ಭಾಗ–೧, ಉಪೋದ್ಘಾತ, ಪು. ೯೫–೯೬

೨೩ ಅದೇ ಗ್ರಂಥ. ಭಾಗ–೩, ಪು. ೧೫

೨೪ ಅದೇ ಪು. ೧೫, ೨೩

೨೫ ಅದೇ ಪು. ೧೫, ೧೬, ೧೭, ೧೮, ೧೯, ೨೦.

೨೬ ಅದೇ ಪು. ೧೬

ಣಾಮ ಛನ್ದೋ[೨೭] (ಮತ್ತಮಾತಂಗ– ೬ + ೪ + ೪ + ∪ ∪ = ೧೬); ರಯಡಾ ಣಾಮ ಛನ್ದೋ[೨೮] (ರಘಟಾ : ೪+೪+೪+–∪∪=೧೬. ಇದುವೆ ಪ್ರಾರಂಭದಲ್ಲಿನ ಕನ್ನಡ 'ರಗಳೆ' ಆಗಿರಬಹುದು): ಪರಿಯನ್ದಿಯಂ ಣಾಮ ಛನ್ದೋ[೨೯] (ಪರಿವನ್ದಿತಾ = ಸ್ವಾಗತ=ರನಭಗಗ: ಕೊನೆಯ ಭಾಗದಲ್ಲಿ ಛಂದಸ್ಸು ಕೆಟ್ಟಿದೆ): ತೋಟ್ಟಕೋಣಾಮ ಛನ್ದೋ[೩೦] (ತೋಟಕ = ಸಸಸಸ; ಇದನ್ನೆ ರನ್ನಕವಿಯು ಅಜಿತಪುರಾಣ ಆ. ೭–೭ : ವರಭಾವಲಯಂ ಪರಭಾವಲಯಂ... ಇತ್ಯಾದಿಯಲ್ಲಿ ಬಳಸಿದ್ದಾನೆ); ಣಾರಾಉ ಣಾಮ ಛನ್ದೋ[೩೧] (ನಾರಾಚ; ∪–×೪+೧೨; ಇದು ಪ್ರಮಾಣೀ ಲಯಗತಿಯದ್ದು ಅಷ್ಟಾಕ್ಷರಿ ×೪): ದೋಧ್ಧಕಂ ಣಾಮ ಛನ್ದೋ[೩೨] (ದೋಧಕ=ಭಭಭಗಗ); ಪದ್ಧಡಿಯಾಣಾಮ ಛನ್ದೋ[೩೩] (ಪದ್ಧತಿಕಾ : ೪+೪+೪+∪–∪); ಭುಅಙ್ಗಪ್ಪಯಾಓಣಾಮಛನ್ದೋ[೩೪] (ಭುಜಂಗಪ್ರಯಾತ = ಯ ಯ ಯ ಯ ): ಮಾಗಧಪ್ರತ್ಯಧಿಕಾಣಾಮಛನ್ದೋ[೩೫] (ಮಾತ್ರಾಗಣ : ೪ + ೪ + ೪ + – – = ೧೬ ); ಪದ್ಧಡಿಯಾಣಾಮಛನ್ದೋ[೩೬] (ಇದರಲ್ಲಿನ ಕೊನೆಯ ಲಘ್ವಕ್ಷರವನ್ನು ಗುರುವೆಂದು ಸ್ವೀಕರಿಸದಿದ್ದರೆ ಪಾದವೊಂದಕ್ಕೆ ೧೫ ಮಾತ್ರೆಗಳಾಗುತ್ತವೆ. ಇಲ್ಲಿನ ಗಣನಿಯಮ; ೪+೪+೪+೩ ಇಲ್ಲವೆ ೪+೪+೪+∪∪ – = ೧೬ ಈ ಬಗೆಯಲ್ಲಿದೆ); ರಯಡಾಣಾಮಛನ್ದೋ[೩೭] (ಇದು ಸಾಮಾನ್ಯ ಪದ್ಧಡಿಯಂತಿದೆ : ೪+೪+೪+∪–∪ ಅಥವಾ ೪+೪+೪+∪∪∪∪); ಉಪ್ಪಹಾಸಿಣೀಣಾಮ ಛಂದೋ[೩೮] (ಉತ್ಪ್ರಹಾಸಿನಿ ಛಂದಸ್ಸನ್ನು ಹಲವು ರೀತಿಯಲ್ಲಿ ವಿವರಿಸಬಹುದು; ಒಟ್ಟು ಮಾತ್ರೆ = ೧೬): ದುವಈಕಡವಯಂ ಣಾಮ ಛನ್ದೋ[೩೯] (ಇಲ್ಲಿ ನಗಣಬಂಧ ವಿಂತಿದೆಯೆಂದು ಹೇಳಲು ಕಠಿಣ : ಒಟ್ಟು ಮಾತ್ರೆ = ೨೮) – ಇವಲ್ಲದೆ ಇನ್ನೂ ಅನೇಕ ಬಗೆಯ ಛಂದಗಳು ಈ ಕಾವ್ಯದಲ್ಲಿವೆ. ೯೦ ಸಂಧಿಗಳನ್ನುಳ್ಳ 'ಪಉಮಚರಿಉ' ವಲ್ಲಿ ೮೮ ಬಗೆಯ ಛಂದಸ್ಸುಗಳಿರುವುದನ್ನುಡಾ. ಭಯಾಣಿ ಗುರುತಿಸಿದ್ದಾರೆ.[೪೦]

ಪ್ರಾಕೃತ ಹಾಗೂ ಕೆಲ ಸಂಸ್ಕೃತ ಕಾವ್ಯಗಳಲ್ಲಿ ಬಳಸಲಾದ ಕಡವಕಗಳಲ್ಲಿ ಛಂದೋ ರಚನೆಗಳನ್ನು ಗಮನಿಸಿದರೆ ಪದ್ಧಡೀ ಅಥವಾ ರಯಡಾ (> ರಡ್ಡಾ > ರಾಡಾ)[೪೧] ಕಾವ್ಯರೂಪದ ತಿಳಿವಳಿಕೆ ನಮಗೆ ಸರಿಯಾಗಿ ಮೂಡಲು ಸಾಧ್ಯ. ಅದಕ್ಕಾಗಿ ಒಂದು ಸ್ಥೂಲ ಪಟ್ಟಿಕೆಯನ್ನು ಕೊಡುವುದು ವಿಹಿತ. ಸೌಲಭ್ಯಕ್ಕೆಂದು ಅದನ್ನು ಕಡವಕದ ರೂಪಕ್ಕನುಗುಣವಾಗಿ ಮೂರು ಭಾಗಗಳಲ್ಲಿ ವಿಭಜಿಸುವೆ :

೨೭ ಅದೇ ಪು. ೧೬, ೨೨ ೨೮ ಅದೇ ಪು ೧೭ ೨೯ ಅದೇ ಪು. ೧೭–೧೮
೩೦ ಅದೇ ಪು. ೧೮ ೩೧ ಅದೇ ಪು. ೧೮–೧೯ ೩೨ ಅದೇ ಪು. ೧೯
೩೩ ಅದೇ ಪು. ೨೦ ೩೪ ಅದೇ ಪು. ೨೦–೨೧ ೩೫ ಅದೇ ಪು. ೨೧
೩೬ ಹಾಗೂ ೩೭ ಅದೇ ಪು. ೨೨; ಇಲ್ಲಿನ ಛಂದಸ್ಸು ಗಮನಾರ್ಹವಾದುದು
೩೮ ಹಾಗೂ ೩೯ ಅದೇ ಪು. ೨೪ ೪೦ ಅದೇ ಗ್ರಂಥ; ಉಪೋದ್ಘಾತ, ಪು. ೨೩- ೨೭
೪೧ ಅದೇ ಅನುಬಂಧ iv, ಟಿಪ್ಪಣಿಗಳು. ಪು. ೨೯೩

| ಕ್ರ. ಸಂ. | ಹೆಸರು | ಜಾತಿ | ಪಾದ ೧ರಲ್ಲಿ ಒಟ್ಟು ಮಾತ್ರೆಗಳು | ಗಣನಿಯಮ ಅ = ಅಥವಾ ಬ = ಬರಬಾರದು. |
|---|---|---|---|---|
| | | | | I ಕಡವಕ[೪೨]ಗಳಲ್ಲಿನ ಆರಂಭದಲ್ಲಿ ಬಳಸಿದ ಕೆಲ ಛಂದಗಳು |
| ೧ | ಮಂಜರಿ | ಸಮದ್ವಿಪದಿ | ೨೧ | ೩ + ೩ + ೪ + ೪(ಜ = ∪ – ∪) + ೪ + ೩ (∪ –) |
| ೨ | ಹೇಲಾ/ಹೇಲಾದ್ವಿಪದಿ (ದುವಈ) | ,, | ೨೨ | ೬+೪ (ಜ / ∪∪∪∪ = ನಲ[೪೩] > ನ್ಲ)+೪+ಜ/ನ್ಲ+ – – |
| ೩ | ಸಾಲಭಂಜಿಕಾ | ,, | ೨೪ | – ∪ (ಅ. ∪ನ್ಲ∪)+ –∪(ನ) + ೪ + ೪ + ೪ + –∪(ನ)+ –∪ |
| ೪ | ಕಾಮಲೇಖಾ | ,, | ೨೭ | ೬ + ಜ + ೪ + ೪ + ೪ (ಜಬ) + ∪ – – |
| ೫ | ದ್ವಿಪದಿ | ,, | ೨೮ | ೬ + ಜ + ೪ + ೪ + ೪ + ∪ – ∪ – |
| ೬ | ಆರನಾಲಾ | ,, | ೩೦ | (a) ೬ + ಜ/ನ್ಲ + ೪ + ೪ + ೪ + – / (∪∪) + ಜ/ನ್ಲ<br>(b) ೬ + ಜ/ನ್ಲ + – / –(∪∪) + ಜ/ನ್ಲ + – / – (∪∪)<br>+ ಜ/ನ್ಲ + – –<br>(ಷಟ್ಪದಿ ಬಗೆಯ ಪ್ರಾಸ ನಿಯಮ ಇಲ್ಲಿರುತ್ತದೆ.) |
| ೭ | ಜಂಭೆಟ್ಟಿಕಾ | ಚತುಷ್ಪದಿ | ೯ | ೪ (ಜಬ) + – ∪ – |
| ೮ | ಅಪ್ಸರೋವಿಲಸಿತ | ,, | ೧೨ | ೬ + ೪ (ಜಬ) + ∪∪ |
| ೯ | ಗಂಧೋದಕಧಾರಾ | ,, | ೧೩ | ೬ + ೪ + ∪∪∪ |

೪೨ 'ಕಡವಕ' ಎಂದರೆ 'ಕಡಪ'ದಂತೆ (= ಒಳ್ಳೆಯ ಮನುಸ್ಸಿನಲ್ಲಿರುವ ಗಂಡುಕುದುರೆ) ಸೊಗಸಾಗಿ ಓಡುವ ರೀತಿಯ ಬಂಧ. ಕುದುರೆ 'ಪೊಡ್ಡ ನಡಿಗೆ' 'ತೂಗುನಡಿಗೆ' ಪದ್ಧತಿಗಳಲ್ಲಿ ಹೋಗುವಂತೆ ಇದು ಕೂಡ ವಿವಿಧ ಲಯದಲ್ಲಿ ಹೋಗುತ್ತದೆ. ಪ್ರಾಯಃ ಪದ್ಧತಿಕ (< ಪದ್ಧತಿಕಾ) ಮೂಲ ಅರ್ಥ ಇದೇ ಆಗಿರಬಹುದು.

೪೩ ಕಂದವನ್ನು ವಿವರಿಸುವಾಗ ಇದರಲ್ಲಿನ ಆರನೆಯ ಗಣ ಜಗಣ ಇಲ್ಲವೆ ನಗಣ ಆಗಿರಬೇಕೆಂದು ಹೇಳುತ್ತಾರೆ. 'ನಗಣ' ಎಂಬ ಮಾತು ಸರಿಯಲ್ಲ. ಅದನ್ನು 'ನ್ಲ' ಎಂದು ಜಯಕೀರ್ತಿ ಹೇಳಿದ ರೀತಿಯಲ್ಲೇ ವಿವರಿಸಬೇಕು (ಜಯದಾಮನ್. ಪು. ೫೭). ನ = ∪∪∪ ಅಲ್ಲವೇ ?

| | | | |
|---|---|---|---|
| ೧೦ ಪಾರಣಕ | ,, | ೧೫ | ೪ + ೪ + ೪ + ∪∪∪ (ಇದು ಸಾಮಾನ್ಯವಾಗಿ ಯಮಕ ಭಾಗದಲ್ಲಿಯೇ ಬರುತ್ತದೆ). |
| ೧೧ ವದನಕ | ,, | ೧೬ | ೬ + ೪ + ೪ (ಜಬ) + ೨ ( ,, ) |
| ೧೨ ನಿಧ್ಯಾಯಿಕ | ,, | ೧೯ | ೪ + ∪∪∪ (ಅ. ∪ –) = ೪ + – ∪ (ಅ. ∪∪∪) + – ∪ – (ಅ. ∪∪∪ –) |
| ೧೩ ದೋಹಾ | ,, | ೧೩, ೧೧ | ೬ + ೪ + ∪∪∪ / ೬ + ∪∪ – (ಅ. – –) + ∪ |
| ೧೪ ಮಾತ್ರಾಮಂಜರಿ | ಅಂತರ ಸಮಪಂಚಪದಿಯ ದ್ವಿಭಂಗಿ ಮತ್ತು ಸಮದ್ವಿಪದಿ | ೧೫, ೧೧. ೨೧ (ಒಟ್ಟು ೭ ಪಾದಗಳು) | (a) ೫ + ೫ + ೪ + ∪<br>(b, d) ೪ + ೪ + ∪∪∪<br>(c, e) ೫ + ೫ + ∪ – ∪∪<br>(f, g) ೩ + ೩ + ೪ + ೪ + ೪ (ಜಬ) + ∪ – |

## II ಕಡವಕಗಳಲ್ಲಿನ ಮಧ್ಯ(ಯಮಕ) ಭಾಗದಲ್ಲಿ ಬಳಸಿದ ಕೆಲ ಛಂದಗಳು

### A ನಿಯತವಾಗಿ ಬರುವವು

| | | | |
|---|---|---|---|
| ೧ ಪಾರಣಕ (ಎರಡು ವಿಧದ್ದು) | ಸಮದ್ವಿಪದಿ | ೧೫ | ೪+೪+೪+∪∪∪ ಅಥ (ಜಬ) + ೪ (ಜಬ) + ೪ (ಜಬ) + – ∪ |
| ೨ ಪದ್ಧತಿಕಾ (ಪದ್ಧಡಿಆ) | ,, | ೧೬ | ೪ + ೪ + ೪ + ಜ / ನ್ಲ |
| ೩ ವದನಕ | ,, | ೧೬ | ೬ + ೪ + ೪ + ∪∪ |
| ೪ ಮಾತ್ರಾಸಮಕ | ,, | ೧೬ | — ∪∪ ನಾಲ್ಕು ಸಲ<br>∪∪ — |
| ೫ ಮಂಥಾನ | ,, | ೧೦ | ೫ + ೫ (∪∪ ∪∪ ∪ + ∪∪ ∪∪ ∪ ಅ / — — ∪ + — — ∪) |

| ಕ್ರ. ಸಂ. | ಹೆಸರು | ಜಾತಿ | ಪಾದ ೧ರಲ್ಲಿ ಒಟ್ಟು ಮಾತ್ರೆಗಳು | ಗಣನಿಯಮ | ಅ = ಅಥವಾ ಬ = ಬರಬಾರದು |
|---|---|---|---|---|---|
| ೬ | ಮದನಾವತಾರ (ಮೂರು ವಿಧದ್ದು) | ,, | ೨೦ | ∪∪ ∪ ∪∪ ನಾಲ್ಕುಸಲ, ಅ ∪∪ ∪∪ ∪ ನಾಲ್ಕುಸಲ<br>ಅ ∪ ∪∪ ∪∪ ನಾಲ್ಕುಸಲ | |
| | **B. ಪರಿವರ್ತನೆಗಾಗಿ ಬರುವವು** | | | | |
| ೭ | ಕರಿಮಕರಭುಜ(ಎರಡು ವಿಧದ್ದು) | ,, | ೮ | ೪ + ಜ/ಸ್ಲ ಅ ೪ + – ∪∪ | |
| ೮ | ವಸುದ್ವಿಪದಿ | ,, | ೮ | ೩ + ೫ (ಪಂಪನ ವಿ.ವಿ.ಆ. ೩–೨೨ರಲ್ಲಿ ಬಂದಿದೆ) | |
| ೯ | ರಯಡಾ | ,, | ೧೬ | ೪ + ೪ + ೪ + ೪ | |
| ೧೦ | ಮಾಗಧಪ್ರತ್ಯಧಿಕಾ | ,, | ,, | ೪ + ೪ + ೪ + – – | |
| ೧೧ | ಮತ್ತಮಾತಂಗ | ,, | ,, | ೬ + ೪ + ೪ + ೨ | |
| ೧೨ | ಅಡಿಲ್ಲಾ | ,, | ,, | ೬ + ೪ + ೨ ∪∪ —<br>— ∪∪ | |
| ೧೩ | ಉತ್ಸಾಹಸಿನಿ | ,, | ,, | ೬ + ೪ + ಜ + – | |
| ೧೪ | ವಿಲಾಸಿನಿ (೧) | ,, | ,, | ೩ + ೩ + ೪ + ೩ + ∪ – | |
| ೧೫ | ಹೇಲಾ (I.೨) | ,, | ೨೨ | ೬ + ಜ/ಸ್ಲ + ೪ + ಜ/ಸ್ಲ + – – | |
| ೧೬ | ಚಂದ್ರಲೇಖಾ (ಎರಡು ವಿಧದ್ದು) | ,, | ೨೪ | ೬ + ಜ/ಸ್ಲ + ೪ + ಜ/ಸ್ಲ + ೪ + – ಅ<br>೬ + ಸ್ಲ/ಭ + ೪ + ಸ್ಲ/ಭ + ೪ + – | |
| ೧೭ | ಸಾಲಭಂಜಿಕಾ (I.೩) | ,, | ೨೪ | ೩ + ೩ + ೪ + ೪ + ೪ + ೩ + ೩ | |

| | | | | |
|---|---|---|---|---|
| ೧೮ | ದ್ವಿಪದಿ (I.೫) | ,, | ೨೮ | ೬ + ೪ + ೪ + ೪ + ೪ + ೪ + – ಇದರಲ್ಲಿ ಜಗಣಗಳು ಬರದಿದ್ದರೆ ಅದು 'ಭ್ರಮರಪದ' ಆಗುತ್ತದೆ. |
| ೧೯ | ಸಾರ್ಧಪದ್ಧತಿಕಾ | ವಿಷಮದ್ವಿಪದಿ | ೮, ೧೬ಅ | ಪದ್ಧತಿಕಾ + ಕರಿಮಕರಭುಜ I ಅ |
| | | | ೧೬, ೮ | ಕರಿಮಕರಭುಜ I + ಪದ್ಧತಿಕಾ |
| ೨೦ | ಸಾರ್ಧವರ್ಧಕ | ,, | ೧೬, ೨ | ವದನಕ + ಕರಿಮಕರಭುಜ II |
| | C. ಅಕ್ಷರಗಣಗಳು | | | |
| ೨೧ | ಪ್ರಮಾಣಿ (= ನಾರಾಚ) | ವೈದಿಕ ಛಂದ | | ∪ – + ∪ – + ∪ – + ∪ – (∪ – × ೪) |
| ೨೨ | ಸಮಾನಿ (= ತೋಮರ) | ,, | | – ∪ + – ∪ + – ∪ + – ∪ (– ∪ × ೪) |
| ೨೩ | ಸೋಮರಾಜಿ (ದ್ರುತ–ಜಕೀ) | ಲೌಕಿಕವೃತ್ತ | ೧೧ | ಯಮ |
| ೨೪ | ಕುಮಾರಲಲಿತ | ,, | ೧೦ | ಜಸಗ |
| ೨೫ | ಭುಜಂಗಪ್ರಯಾತ | ,, | ೨೦ | ಯ ಯ ಯ ಯ (ಯ × ೪) |
| ೨೬ | ತೋಟಕ | ,, | ೨೦ | ಸ ಸ ಸ ಸ (ಸ × ೪) |
| ೨೭ | ದೋಧಕ | ,, | ೧೬ | ಭ ಭ ಭ ಗ ಗ |
| ೨೮ | ಪರಿವಂದಿತ (= ಸ್ವಾಗತ) | ,, | ೧೫ | ರ ನ ಭ ಗ ಗ |
| ೨೯ | ವಿಲಾಸಿನಿII ಮತ್ತು ಪ್ರಮಾಣಿ | ಸಮ್ಮಿಶ್ರ | ೬, ೧೨ | {ಪಾದ – ೧, ೩ : ∪ – × ೨ ; ಪಾದ – ೨, ೪ : ∪ – × ೪} |
| ೩೦ | ಜೀಮೂತ ಮತ್ತು ಲೀಲಾಕಾರ | ದಂಡಕ | | ನನ + ರ × ೧೧/ ರ × ೧೨ |
| ೩೧ | ಉದ್ದಾಮ+ಶಂಖ+ಸಮುದ್ರ | ,, | | ನನ + ರ × ೧೩/ ರ × ೧೪ / ರ × ೧೫ |
| ೩೨ | ಚಂಡಕಾಲ (ಇದರಲ್ಲಿ ಪ್ರಾಸ ಇರದು) | ,, | | ∪∪∪∪∪ + ಅನಿಯಮಿತ ರಗಣಗಳು |

| ಕ್ರ. ಸಂ. | ಹೆಸರು | ಜಾತಿ | ಪಾದ ೧ರಲ್ಲಿ ಒಟ್ಟು ಮಾತ್ರೆಗಳು | ಗಣನಿಯಮ | ಅ = ಅಥವಾ ಬ = ಬರಬಾರದು |
|---|---|---|---|---|---|
| | **III** ಕಡವಕಗಳ ಅಂತ್ಯ(ಘತ್ತಾ)ದಲ್ಲಿ ಬಳಸಿದ ಕೆಲ ಛಂದಗಳು | | | | |
| ೧ | ಸಿಂಹ ವಿಜೃಂಭಿತ | ಅಂತರ ಸಮಚತುಷ್ಪದಿ (೧, ೩ ಮತ್ತು ೨, ೪) | ೬. ೧೩ | ಇವುಗಳ ವಿವರಣೆಗೆ ಯಾವುದಾದರೂ ಪ್ರಾಕೃತ ಛಂದಸ್ಸಿನ ಕುರಿತ ಕೃತಿಯನ್ನು ನೋಡಬಹುದು.* | |
| ೨ | ಮನ್ಮಥತಿಲಕ | | ೭, ೧೩ | | |
| ೩ | ಅಭಿಸಾರಿಕ | ,, | ೮. ೧೨ | | |
| ೪ | ಮದನೋದಯ | ,, | ೮, ೧೪ | | |
| ೫ | ರತ್ನಾವಲಿ | ,, | ೮, ೧೬ | | |
| ೬ | ಮಧುಕರವೃಂದ | ,, | ೯, ೧೩ | | |
| ೭ | ಕೇತಕೀಕುಸುಮ | ,, | ೯, ೧೪ | | |
| ೮ | ತ್ರಿವಲೀ ತರಂಗಕ | ,, | ೯, ೧೬ | | |
| ೯ | ನವಪುಷ್ಪಂಧಯ | ,, | ೧೦, ೧೩ | | |
| ೧೦ | ಕಾಮಿನಿಹಾಸ | ,, | ೧೧, ೧೨ | | |
| ೧೧ | ಪ್ರೇಮವಿಲಾಸ | ,, | ೧೧, ೧೪ | | |
| ೧೨ | ಕಾಂಚನಮಾಲಾ | ,, | ೧೧, ೧೫ | | |
| ೧೩ | ಅಭಿನವ ವಸಂತಶ್ರೀ | ,, | ೧೩, ೯ | | |
| ೧೪ | ಭ್ರಮರವಿಲಾಸ | ,, | ೧೩, ೧೦ | | |
| ೧೫ | ಮುಖಪಾಲನತಿಲಕ | ,, | ೧೩, ೧೪ | | |

| | | | | |
|---|---|---|---|---|
| ೧೬ | ವಸಂತಲೇಖಾ | ,, | ೧೩, ೧೫ | ಇವುಗಳ ವಿವರಣೆ ಯಾವುದಾದರೂ ಪ್ರಾಕೃತ ಛಂದಸ್ಸಿನ ಕುರಿತ ಕೃತಿಯನ್ನು ನೋಡಬಹುದು.* |
| ೧೭ | ಮಧುರಾಲಾಪಿನೀಹಸ್ತ | ,, | ೧೩, ೧೬ | |
| ೧೮ | ಅನಂಗಲಲಿತಾ | ,, | ೧೪, ೧೩ | |
| ೧೯ | ರಾಜಹಂಸ | ,, | ೧೫, ೧೨ | |
| ೨೦ | ಮನ್ಮಥವಿಲಸಿತ | ,, | ೧೫, ೧೩ | |
| ೨೧ | ಕುಂಜರವಿಲಸಿತ | ಅರ್ಧಸಮ ಚತುಷ್ಪದಿ (೧, ೨ ಮತ್ತು ೩, ೪) | ೧೪, ೧೨ | |
| ೨೨ | ಧ್ರುವಕ | ಸರ್ವಸಮಚತುಷ್ಪದಿ | ೯ | a, c = ೫ + ೫: b, d = ೬ + ೩ |
| ೨೩ | ಪಾರಣಕ (I.೧೦) | ,, | ೧೫ | ಮೇಲೆ ಬಂದಿವೆ. |
| ೨೪ | ಪದ್ಧತಿಕಾ (II.೨) | ,, | ೧೬ | |
| ೨೫ | ಷಟ್ಪದ ಜಾತಿ | ಷಟ್ಪದೀ | ೬, ೬, ೧೨ | * |
| ೨೬ | ಷಟ್ಪದ ಉಪಜಾತಿ | ,, | ೮, ೮, ೧೨ | |
| ೨೭ | ಪರಿಣೀಪದ | ,, | ೯, ೭, ೧೨ | |
| ೨೮ | ಚಡ್ಡಣಿಕಾ (೭ ವಿಧದ್ದು) | ,, | ೧೦, ೮, ೧೩ | |
| ೨೯ | ಮೌಕ್ತಿಕದಾಮ | ,, | ೧೨, ೮, ೧೨ | |
| ೩೦ | ಉಪಗಂಧರ್ವ | ,, | ೧೩, ೭, ೧೪ | |

— ಇವುಗಳಲ್ಲದೆ ಯಮಕ ಭಾಗದಲ್ಲಿ 'ಪಾದಾಕುಲಕ' 'ಅಪ್ಸರಾ' 'ಅವಲೀ' 'ರಾಸಕ' 'ಮಾಘಧನರ್ಜಟಿ' 'ಉತ್ಸಾಹ' 'ಮಾಗಧಿಕಾ' 'ಮಾಲಾಗಾಥೀ' 'ಮಧುಕರೀ' 'ಮಾಕ್ತಿಕದಾಮ' 'ಚಾರು' 'ಅಜಲಧೃತಿ' 'ಸಾರಿಣಿ' (ಅಕ್ಷರಗಣ) ಪೃಥ್ವಿ (ಅಕ್ಷರಗಣ) 'ಪಂಚಚಾಮರ' ಮುಂತಾದವುಗಳೂ ಇಲ್ಲಿ ಬಂದಿರುವುದುಂಟು.

ಪ್ರಾಕೃತ ಕಾವ್ಯಗಳು ಮತ್ತು ಸೋಮದೇವಸೂರಿಯ 'ಯಶಸ್ತಿಲಕಚಂಪು' ಮುಂತಾದವುಗಳ ಅಧ್ಯಯನದಿಂದ ಕನ್ನಡ ರಗಳೆಗಳ ಉಗಮ ಮತ್ತು ವಿಕಾಸ[೪೪] ಇವುಗಳ ವಿಷಯದಲ್ಲಿ ಹೊಸ ಆಯಾಮ ಮೂಡಿನಿಲ್ಲುತ್ತದೆ. ನಮ್ಮಲ್ಲಿ ಪ್ರಚಲಿತವಿರುವ ಇದು ವರೆಗಿನ ಅಭಿಪ್ರಾಯ : ಪದ್ಧತಿ ಪಜ್ಝಟಿ ಛಂದವೊಂದೇ ರಗಳೆಗಳಿಗೆ ಮೂಲ ಯೆಂಬುದನ್ನು ಮಾರ್ಪಡಿಸಿಕೊಳ್ಳಬೇಕಾಗುತ್ತದೆ. 'ಪದ್ಧತಿ' ಎಂಬುದಕ್ಕೆ ಹೆಚ್ಚು ವ್ಯಾಪ್ತಿಯನ್ನೂ ಹೊಸ ಅರ್ಥ ವಿವರಣೆಯನ್ನೂ ಕೊಡಬೇಕಾಗುತ್ತದೆ.[೪೫]

■ ■

೪೪ ಮಹಾಕವಿ ಪಂಪನ ಕೆಲ ರಗಳೆಗಳು ಹೊಸಮಾದರಿಯ ಕಡವಕಗಳೆಂದು ನನಗೆ ತೋರುತ್ತಿದೆ. ಆ ವಿಷಯದ ಚರ್ಚೆ ಬೇರೊಂದು ಲೇಖನದ ವಸ್ತು. ಬೇರೆಡೆಯಲ್ಲಿ ಮಾಡುವೆ.

೪೫ ಈ ಲೇಖನವನ್ನು ಬರೆಯುವಲ್ಲಿ ಡಾ। ಹಾ. ಮಾ. ನಾಯಕ, ಡಾ। ಎಂ. ಎಂ. ಕಲ್ಬುರ್ಗಿ ಮತ್ತು ಡಾ। ಕೆ. ಪಿ. ಆಚಾರ್ಯ ಇವರುಗಳಿಗೆ ಋಣಿ ಆಗಿರುವೆ.

# ಶಬ್ದಮಣಿದರ್ಪಣ ಮತ್ತು ಉತ್ತರಕಾಲೀನ ಸಾಹಿತ್ಯ

ಟಿ. ವಿ. ವೆಂಕಟಾಚಲಶಾಸ್ತ್ರಿ

ಕೇಶಿರಾಜನು 'ಶಬ್ದಮಣಿದರ್ಪಣ'ವನ್ನು ಸು. ೧೨೬೦ ರಲ್ಲಿ ರಚಿಸಿದ ಮೇಲೆ, ಮುಂದೆ ಆ ಗ್ರಂಥದ ಅಭ್ಯಾಸ ಎಷ್ಟರಮಟ್ಟಿಗೆ ನಡೆದಿರಬಹುದು, ಅದರ ಪ್ರಯೋಜನವನ್ನು ಕವಿಗಳೂ ಇತರರೂ ಪಡೆದಿರಬಹುದು–ಇದನ್ನು ಸ್ವಲ್ಪಮಟ್ಟಿಗೆ ತಿಳಿಯುವುದು ಇಲ್ಲಿಯ ಉದ್ದೇಶ.

ಕೆಱೆಯಪದ್ಮರಸನ ಚರಿತೆ ವಸ್ತುವಾಗಿರುವ ಪದ್ಮಣಾಂಕನ (ಸು. ೧೩೮೫) "ಪದ್ಮರಾಜ ಪುರಾಣ"ದಲ್ಲಿ, ಗ್ರಂಥದ ಉತ್ಕೃಷ್ಟತೆಯನ್ನು ತಿಳಿಸುವ ಒಂದು ಪದ್ಯ ಹೀಗಿದೆ :

ಸತಿಸಪ್ತಮಿಯ ಭೇದಮಂ ಱಟಿ ಕುಳ ಕ್ಷಳಮ
ನತಿಶಯದ ಗಮಕ ಕ್ರಿಯಾಸಮಾಸಂಗಳಂ
ಶ್ರುತಿಸಹ್ಯಸಂಧಿಯಂ ತದ್ಧಿತಪದಮನಪಭ್ರಂಶ ದೇಶೀಯಂಗಳಂ
ನುತವಾಗೆ ಯೋಗಿಪ ಸಮಾಸಮಂ ಸುಸಮಸಂ
ಸ್ಕೃತಮಂ ವಿರಹಿತಾವ್ಯಯೋರು ಸಂಸ್ಕೃತಲಿಂಗ
ತತಿ ಶಿಥಿಲಪದ ಮುಖಾದ್ಯುಕ್ತ ಲಕ್ಷಣಮಱಿವ ಚತುರರೇ
ಕೃತಿಗೊಲಿಯರೇ ॥ (೧–೩೯)

ಈ ಪದ್ಯ ಶಬ್ದಮಣಿದರ್ಪಣದ "ಗಮಕಸಮಾಸದಿಂ ಱಟಿಕುಳಕ್ಷಳದಿಂ ಶ್ರುತಿಸಹ್ಯಸಂಧಿಯಿಂ. ." (ಪ. ೩೪೨) ಎಂಬ, ಕನ್ನಡದ ಅತಿಶಯತೆಯನ್ನು ಹೇಳುವ ಪದ್ಯದ ನೆನಪನ್ನು ಸಹಜವಾಗಿ ತರುತ್ತದೆ; ಅಲ್ಲದೆ ಆ ಗ್ರಂಥದ ಸಮಾಸ ಮುಂತಾದ ಇತರ ಪ್ರಕರಣಗಳ ಪರಿಚಯವೂ ಪದ್ಮಣಾಂಕನಿಗೆ ಇದ್ದಿರಬಹುದೆಂಬುದನ್ನು ಸೂಚಿಸುತ್ತದೆ.

ಕವಿಮಲ್ಲನು (ಸು. ೧೪೦೦) 'ಮನ್ಮಥ ವಿಜಯ'ದ. ಕರ್ತೃ ಪೂರ್ವಕವಿ ಸ್ತುತಿಯ ಸಂದರ್ಭದಲ್ಲಿ. ಕೇಶಿರಾಜನನ್ನು ಅಲ್ಲಿ ಹೀಗೆ ನೆನೆದಿದ್ದಾನೆ :

ನಿರುತಂ ಕರ್ಣಾಟಕದೊ
ಳ್ಪರಿಕಿಸೆ ಶಬ್ದಜ್ಞನಾವನೊರ್ವನೆ ಲೋಕ
ಕ್ಕರಿದಲ್ತೆ ಭಾಪು ಕವಿಕುಂ
ಜರ ಕೇಶವರಾಜ ಗೋಚರಿಸು ಮನ್ಮನದೊಳ್ ॥೯ (ಪ. ೧೦)

ಇಂತಹ ಪ್ರಶಂಸೆಯನ್ನು ಸಲ್ಲಿಸಬೇಕಾದರೆ ಶಮದ:ವನ್ನು ಮಲ್ಲನು ಆತ್ಮೀಯವಾಗಿ ಪರಿಚಯ ಮಾಡಿಕೊಂಡಿದ್ದಿರಬೇಕು ಎಂದು ಊಹಿಸಬಹುದು. ಈಗಲೂ ಈ ಪ್ರಶಂಸೆ ಸಮರ್ಥನೀಯ.

ಸಾಲ ಚಿಕ್ಕಣಾರಾಧ್ಯ (ಸು. ೧೪೫೦) ತನ್ನ 'ಪಂಚಬ್ರಹ್ಮೋದಯ ಭಾಷ್ಯ' ಎಂಬ ವ್ಯಾಖ್ಯಾನ ಗ್ರಂಥದಲ್ಲಿ ಶಮದ:ದ ಒಂದು ಸೂತ್ರವನ್ನು ಉದಾಹರಿಸಿರುವುದಾಗಿ ಕವಿಚರಿತೆಕಾರರು ತಿಳಿಸಿದ್ದಾರೆ.[೨]

ಈಶ್ವರ ಕವಿಯ (ಸು. ೧೫೦೦) 'ಕವಿಜಿಹ್ವಾಬಂಧನ' ಒಂದು ಛಂದೋಗ್ರಂಥವಾದರೂ ಅಲಂಕಾರ ವ್ಯಾಕರಣ ವಿಷಯಗಳೂ ಅಲ್ಲಿವೆ. ಈತ ತನ್ನನ್ನು 'ಅಭಿನವ ಕೇಶಿರಾಜ' ಎಂದು ಕರೆದುಕೊಂಡಿದ್ದಾನೆ. ಶಮದ.ವನ್ನು ಈತ ಅಭ್ಯಾಸ ಮಾಡಿದ್ದನೆಂಬ ಸಂಗತಿ,

ಲಕ್ಷಣ ಶಿಕ್ಷಾಚಾರ್ಯ ಸು
ಲಕ್ಷಣಿ ಕೇಶವನ ಶಬ್ದಮಣಿದರ್ಪಣಮಂ
ಈಕ್ಷಿಸಿ ಶಿಕ್ಷಿತ ಸೂತ್ರದೆ
ಸಾಕ್ಷಾದಭಿನವ ಸುಕೇಶಿರಾಜಂ ಪೇಳ್ದಂ ॥ (೧-೩)

ಎಂಬ ಪದ್ಯದಿಂದ ವಿಶದಪಡುತ್ತದೆ. ಕವಿಜಿ:ದೊಳಗಿನ "ಕೊರಲುಂ ಜಿಹ್ವಾಮೂಲಮು । ಮುರವು......" ಮತ್ತು "ತನು ಮಾಧ್ಯಂ ನಾಲಗೆ ಪಾ । ದನ ದಂಡಂ ......" ಎಂಬ ಎರಡು ಪದ್ಯಗಳು (೩ ೨೫, ೩೫) ಶಮದ.ದ ಅವೇ ಪದ್ಯಗಳಾಗಿವೆ (೨-೪೦, ೪೪). ಅಲ್ಲದೆ ಕವಿಜಿ.ದ "ಅರಿ ಲಿಂಗಗಳೊಂಬತ್ತುಂ...", "ಭೂತವತಿ ವರ್ತಮಾನ ....." ಎಂಬ ಪದ್ಯಗಳಲ್ಲಿಯು (೪-೭, ೮) ವ್ಯಾಕರಣಾಂಶ ನಿರೂಪಣೆ ಶಮದ.ದ "... ಲಿಂಗಮೊಂಬತ್ತು ತೆಱಂ" (ಸೂ. ೯೮), "ಭೂತ ಭವಿಷ್ಯತ್ಕ್ರಿಯೆಗಳ್..... " (ಸೂ. ೮೩) ಎಂಬ ಸೂತ್ರಗಳಲ್ಲಿ ಹೇಳಿರುವುದಕ್ಕೆ ಅನುಗುಣವಾದದ್ದಾಗಿದೆ.

೧ ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗ, ಕೆ. ಬಿ, ೭೪೪.

೨ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ದೊರೆಯುವ ಈ ಗ್ರಂಥದ ಹಸ್ತಪ್ರತಿ ಅಸಮಗ್ರ; ಉಪಲಬ್ಧ ಭಾಗದಲ್ಲಿ ಶಮದ.ದ ಯಾವ ಸೂತ್ರವನ್ನಾಗಲಿ ಗುರುತಿಸಲು ಸಾಧ್ಯವಾಗಲಿಲ್ಲ.

ಸಾಳ್ವ (ಸು. ೧೫೫೦) ಕೃತ 'ನೇಮಿನಾಥ ಪುರಾಣ' (='ಸಾಳ್ವಭಾರತ')ದ ಆರಂಭ ಭಾಗದಲ್ಲಿ,

ಱಟಿ ಕುಳ ಕ್ಷಳ ಲತ್ವ ರೇಫೋ
ಜ್ವಲ ಱಕಾರ ಪ್ರಾಸ ಭೇದಂ
ಗಳ ಸ್ವರವ್ಯಂಜನ ವಿಭಕ್ತಿ ಸಮಾಸ ಶಿಥಿಲಗಳ
ಪಟಿಯನೇನುಂ ಪಾಡುಗವಿತೆಗ
ಳೊಳು ವಿಚಾರಿಸ ಸಲ್ಲದೆಂಬ
ಗ್ಗಳದ ಪಬಗಬ್ಬಿಗರ ಪೇಟ್ಕೆಯ ತೆಱದಿ ವಿರಚಿಸಿದೆ ॥

ಎಂಬುದಾಗಿ ಒಂದು ಹೇಳಿಕೆಯಿದೆ. ರಳ ಕುಳ ಕ್ಷಳಗಳ ಮತ್ತು ರೇಫ ಱಕಾರಗಳ ಪ್ರಾಸಸಂಘಟನೆ, ವ್ಯಂಜನಾಂತ ಶಬ್ದಗಳು ಸ್ವರಾಂತಗಳಾಗಿ ಬಳಕೆಯಾಗುವುದು, ವಿಭಕ್ತಿಗಳಿಗೆ ಸಮುಚ್ಚಯಾದಿ ಪ್ರತ್ಯಯಗಳು ಹತ್ತುವಾಗಿನ ವಿಶಿಷ್ಟ ನಿಯಮಗಳು, ಅರಿಸಮಾಸ, ದ್ವಿತ್ವ-ಶಿಥಿಲದ್ವಿತ್ವ ಪ್ರಯೋಗಗಳು ಈ ಸಂಬಂಧವಾದ ವ್ಯಾಕರಣ ನಿಯಮಗಳನ್ನು ತನ್ನ ಕೃತಿಯಲ್ಲಿ ಲಕ್ಷಿಸಿಲ್ಲ ಎಂಬುದು ಸಾಳ್ವನ ಹೇಳಿಕೆಯ ಆಶಯ. ಈ ವಿಷಯಗಳ ಸ್ಪಷ್ಟವಾದ ವಿವರಣೆಯಿರುವುದು ಶಮದ.ದಲ್ಲಿಯೇ. ಇದನ್ನು ಆತ ಓದಿರುವುದು ಅಸಂಭವವಲ್ಲ.

ರಾಮಚಂದ್ರ ಗುರುಶಿಷ್ಯನ (ಸು. ೧೫೫೦) 'ಆದಿತ್ಯಪುರಾಣ'ದಲ್ಲಿಯೂ ಮೇಲಿನ ಆಶಯವನ್ನೇ ಬಲುಮಟ್ಟಿಗೆ ಒಳಕೊಂಡ ಒಂದು ಹೇಳಿಕೆ ಹೀಗಿದೆ :

ಶಬ್ದಮಣಿ ಮೊದಲಾದ ಶಾಸ್ತ್ರದ
ಹೊದ್ದಿಗೆಯು ಸಾಹಿತ್ಯಕಲ್ಲದೆ
ಶುದ್ಧಷಟ್ಪದಿ ಕಾಡುಗಬ್ಬಂಗಳಿಗೆ ಬೇಡೆಂದು
ಸಿದ್ಧ ನೂತನ ಕವಿಗಳುಸುರಿದ
ಪದ್ಧತಿಯೊಳಾನೆಡಹಿ ಬೀಳುತ
ಬುದ್ಧಿಯರಿವೆಂತೊರೆವೆಸೀ ಬೆಳ್ನುಡಿಯ ಬೆರಕೆಯಲಿ ॥ (೧–೩೭)

'ಆದಿತ್ಯಪುರಾಣ' ಕರ್ತೃ ಶಮದ.ವನ್ನು ಓದಿರಲಾರನೆಂದರೂ ಆತನ ಕಾಲದಲ್ಲಿ ಪ್ರೌಢ ಭಾಷಾಭ್ಯಾಸಿಗಳೂ ವಿದ್ವಾಂಸರೂ ಅದನ್ನು ಅಭ್ಯಾಸ ಮಾಡುತ್ತಿದ್ದುದಂತೂ ನಿಶ್ಚಯವೆನ್ನುವಂತಿದೆ, ಆತನ ಮಾತು.

ಚೇರಮಾಂಕನ 'ಚೇರಮ ಕಾವ್ಯ'(೧೫೨೬)ದಲ್ಲಿ, ಕರ್ತೃ, ತಪ್ಪುಮಾಡಿದಲ್ಲಿ ತನ್ನನ್ನು ತಿದ್ದುವುದು ಎಂದು ಅರಿಕೆಮಾಡಿಕೊಳ್ಳುವಾಗ,

ಸತಿಸಪ್ತಮಿಗಳ ಸಮಸಂಸ್ಕೃತಂಗಳನು ತದಿ
ಹಿತಮುಂ ಕ್ರಿಯಾ ಗಮಕ ವರಸಮಾಸಂಗಳಂ
ಕೃತ ಜಾತಿ ಭಾವಾದ್ಯಲಂಕಾರಮುಂ ವಿನುತ ಮುಖ್ಯ ಸತ್ಪ್ರಾಸಂಗಳಂ...

ನೋಡಿ, ತಪ್ಪಿದ್ದರೆ ತಿದ್ದುವುದು (೧–೨೧) —ಎಂದು ಮುಂತಾಗಿ ಬರೆದಿದ್ದಾನೆ. ಇಲ್ಲಿ ಉಕ್ತವಾದ ವ್ಯಾಕರಣ ಪ್ರಕ್ರಿಯೆಗಳೆಲ್ಲ ಶಮದ.ದ ಮೂಲಕ ರೂಢವಾದುವೆಂಬುದರಲ್ಲಿ ಅನುಮಾನವಿಲ್ಲ. ೧೫–೧೬ನೆಯ ಶತಮಾನದ ಹಾಮುಗಬ್ಬದ ಕವಿಗಳು ಶಮದ.ದ ವಿಷಯದಲ್ಲಿ ತಳೆದಿದ್ದ ಒಂದು ಬಗೆಯ ಗೌರವಮಿಶ್ರಿತವಾದ ಭೀತಿ ಇಂಥ ಮಾತುಗಳಲ್ಲಿ ವ್ಯಕ್ತಗೊಂಡಿರುವುದು ಕಾಣುತ್ತದೆ.

ಈಗ ಕೆಲವು ಕನ್ನಡ ನಿಘಂಟುಕಾರರು ಶಮದ ದ ಸಹಜ ಱುಗಳ ಪಟ್ಟಿ. ತದ್ಧಿತ ಧಾತು ಮತ್ತು ಅಪಭ್ರಂಶ ಪ್ರಕರಣಗಳು, ಪ್ರಯೋಗಸಾರ ಇವುಗಳಿಂದ ಎಷ್ಟರ ಮಟ್ಟಿಗೆ ಪ್ರಯೋಜನ ಪಡೆದಿದ್ದಾರೆ —ಎಂಬುದನ್ನು ಪರಿಶೀಲಿಸಬಹುದು.[೩]

i. ಅಜ್ಞಾತ ಕರ್ತೃಕ ಕರ್ಣಾಟಕ ಶಬ್ದಸಾರ (ಸು. ೧೪೦೦) : ಇಲ್ಲಿ "ತಱಿಂದು ಮುತ್ತಕಾಯ್" (೭೯), "ತಿಪ್ಪುಱಿಂದು ಗಱಿ" (೧೦೨), "ತುಪ್ಪುಱಿಂದು ಪಕ್ಕಿಯು ರೋಮಂ" (೧೦೩) ಇತ್ಯಾದಿಯಾದವು ಶಮದ.ದ ಸಹಜ ಱುಗಳ ಪಟ್ಟಿಯ ಉಲ್ಲೇಖಗಳು; "ಪೊಚ್ಚಮೆಂದು ಪೊಱೆ" (೧೫೮), "ಅಡಿಮಣೆಯೆಂದು ಕೆಸಱೊಳಾದ ಪಜ್ಜೆ" (೧೬೪) ಇಂಥವು ಪ್ರಯೋಗಸಾರದೊಳಗಿನವು. ಶಮದ.ದ ಅಪಭ್ರಂಶ ಪ್ರಕರಣದ "ದರದಾರ ಬಾರಮುಕ್ಕುಂ..."ಎಂಬ ಸೂತ್ರದ (೩೧೧) ಮತ್ತು ಅದರ ವೃತ್ತಿಪ್ರಯೊಗಗಳ ಆಶಯವೇ "ಸಿರಿಯ ದರಂ, ಸಿರಿಯ ದಾರಂ, ಸಿರಿಯ ಬಾರಂ–ಈ ೩ ಶ್ರೀದ್ವಾರಕ್ಕೆ ಪೆಸರ್" ಮತ್ತು "ವಂಕದರಂ ವಂಕದಾರಂ ವಂಕಬಾರಂ– ಈ ೩ ವಕ್ರದ್ವಾರಕ್ಕೆ ಪೆಸರ್" ಎಂದು ಮುಂತಾಗಿ ರೂಪತಳೆದಿದೆ (೨೯೯–೩೦೨). ಹೀಗೆಯೇ ಕೊಟ್ವಣಿಗ, ಕೊಲ್ಲಟಿಗ, ಝಳಂಬಾಯ್ತು, ನೀರ್ಕುಟಿಗ, ಬೊಂದುಕ ಇತ್ಯಾದಿ ಶಬ್ದಗಳು ಶಮದ.ದ ತದ್ಧಿತ ಪ್ರಕರಣದವಾಗಿವೆ.

ii. ಅಜ್ಞಾತಕರ್ತೃಕ 'ಕರ್ಣಾಟಕ ನಿಘಂಟು' (ಸು. ೧೪೦೦) : ಒಂದೇ ಪದ್ಯದಲ್ಲಿ ಅಲ್ಲಲ್ಲಿ ಚದುರಿರುವ ಶಮದ.ದ ಉಲ್ಲೇಖಗಳನ್ನು ಇಲ್ಲಿ ಒಗ್ಗೂಡಿಸಿದೆ. ಬೇರೆಬೇರೆ ವಿಭಾಗದ ಉಲ್ಲೇಖಗಳಲ್ಲಿ ಒಂದೇ ಕಡೆಯುವನ್ನು ಹಂಚಿರುವುದೂ ಉಂಟು. ಒಂದು ಉದಾ :

ಪಱಿಯಿಗೆಯೆಂದು ಕೇತನದೊಳಂ ಪಱಿಪೆಂದು ಜರಾಸಿತಾರ್ಥದೊಳ್
ಮಱಿಮಱಿಸೆಂದು ನೇತ್ರಮಲಿನತ್ವದೊಳಂ ಪೞ[ಕೆಂ]ದು ತೋಱಿಯೊಳ್
ಕುಱಿದನೆನಲ್ ಕೃಶಾಂಗನೊಳೆ ಪಾಱಿಯೆನಲ್ ಕ್ರಮನಾಮಧೇಯದೊಳ್
ಪಱಗಮೆನಲ್ಕೆ ಶುಷ್ಕದಳದೊಳ್ ಪಱಪಂ ಮೃಗಯಾಂಶುಕಾರ್ಥದೊಳ್ ॥
(ಪ. ೭೯)

೩ ಮುಂದೆ ಹೇಳಿರುವ ನಿಘಂಟುಗಳಿಗೆ ಅನುಸರಿಸಿರುವ ಪರಿಷ್ಕರಣ : (ಸಂ.) ಎಸ್. ಬಸವರಾಧ್ಯ 'ಹಳಗನ್ನಡ ನಿಘಂಟು', ಡಿ. ವಿ. ಕೆ. ಮೂರ್ತಿ, ಪ್ರಕಾಶಕರು, ಮೈಸೂರು–೪, ೧೯೭೬.

ಈ ಪದ್ಯದ ಱೞಘಟಿತ ಶಬ್ದಗಳು ಶಮದ.ದ ಸಹಜ ಱೞಗಳ ಪಟ್ಟಿಯ ಶಬ್ದಗಳೇ ಆಗಿವೆ. ಹೀಗೆಯೇ "ಪಕ್ಕಿ ಪಕ್ಷಿಯೆ ರಕ್ಕೆ ರಕ್ಷೆಯೆ..." (ಪ. ೭೨) ಎಂಬಂತಹ ತದ್ಭವಗಳಾಗಲಿ, "ಕಣ್ಮಲಿದುದು ಪೊಡಕಲಿಸಿತು" (೪೪), "ಮೆಳ್ಪಡೆಯೆಂದು ಮರುಳ್ತನಂ" (೩೬) ಎಂಬಂತಹ ಶಬ್ದಾರ್ಥ ನಿರ್ಣಯವಾಗಲಿ ಶಮದ.ದ ಆಯಾ ವಿಭಾಗಗಳಿಂದ ಆಯ್ದುಕೊಂಡವೇ ಆಗಿವೆ.

iii. ಬೊಮ್ಮರಸನ ಚತುರಾಸ್ಯ ನಿಘಂಟು (ಸು. ೧೪೫೦) : ಒಂದು ರೀತಿಯಲ್ಲಿ ಈ ನಿಘಂಟು ಶಮದ.ದ ನಿಘಂಟು ಸದೃಶಭಾಗಗಳ ಸಂಕ್ಷಿಪ್ತರೂಪವೇ ಆಗಿದೆ. ಮೇಲಿನ ಎರಡು ಆಕರಗಳಿಗಿಂತ ಹೆಚ್ಚಾಗಿ ಇಲ್ಲಿ ಶಮದ.ದ ಅವಲಂಬನೆ ಕಂಡುಬರುತ್ತದೆ. "ಪಱೆಯೆನೆ ವಸ್ತ್ರವಿಶೇಷಂ..." (೪೬). "ಕಚ್ಚಱೆಯೆನೆ ಬಿರುದಿನ ಬಳೆ..." (೧೮೬) ಮುಂತಾದುವು ಶಮದ.ದ ಸಹಜಱೞ ಪಟ್ಟಿಯ ವಿಷಯಗಳು; "ಪೂವಡಿಗಂ ತಾಂ ಪುಲ್ಲವಡಿಗಂ..." (೧೦೦) ಇಂಥವು ತದ್ಧಿತ ಪ್ರಕರಣಕ್ಕೆ ಸೇರಿದವು; "ಬಿಲಲುಮೆಂದೆನೆ ಮಾಱುಂ" (೧೨೫), ಜಱುಚೆನೆ ಕಾಱ್ಗೆಡೆವಂ (೧೩೦) ಇಂಥವು ಧಾತು ಪ್ರಕರಣದವು; "ರನ್ನಂ ರತ್ನಂ ಜ್ಯೋತ್ಸ್ನೆಯೆ ಜೊನ್ನಂ ನಿಷ್ಠುರಮೆ ನಿಟ್ಟುರಂ..." ಇಂಥವು ಅಪಭ್ರಂಶ ಪ್ರಕರಣದವು; "ತಳಪೆಳಗೆನೆ ನಿಬ್ಬೆಱಗು", "ಕೋವರಂ ಬಾಂಬಂ ಕುಱುಂಬಂ" (೧೦೪) ಇಂಥವು ಪ್ರಯೋಗಸಾರದಿಂದ ತೆಗೆದವು; "ಪೋಲೊಳ್ ಪಾಂಗಂತೆವೊಲೆಂಬೀ ಲಲಿತಾಭಿಖ್ಯ ಸಾಮ್ಯಮೆಂಬರ್ಥಂ" (೩೨) ಅವ್ಯಯ ಪ್ರಕರಣಕ್ಕೆ ಸೇರಿದ್ದು. "ಅಲ್ತೆನಲಲ್ಲೆಂಬರ್ಥಮ । ದಲ್ತೆಂದೆನಲಲ್ಲದೆನಿಪ ತೆಱಂ..." (೨೬)–ಇದು ಶಮದ.ದ "ಪ್ರದಿಗುಂ ನಿರ್ಧಾರಣದಲ್ಲದೆಯೆಂಬ..." ಎಂಬ ೫೭ ನೆಯ ಸೂತ್ರದ ವಿಷಯ. ಅಪಭ್ರಂಶ ಪ್ರಕರಣದ ತತ್ಸಮ ಶಬ್ದಗಳನ್ನೇ "ಕಂಕಣಮಾ ಕೋಂಟೆ ಬಿಲಂ..." ಮತ್ತು "ಗಲ್ಲಂ ಮಲ್ಲಂ ತೋರಣಂ..." ಎಂಬೆರಡು ಪದ್ಯಗಳಲ್ಲಿ (೫೩, ೫೪) ಪುನರುಚ್ಚರಿಸಿರುವುದು ವಿಶೇಷವಾಗಿ ಗಮನಾರ್ಹ.

iv. ಲಿಂಗಮಂತ್ರಿ ಬರೆದ 'ಕಬ್ಬಿಗರ ಕೈಪಿಡಿ' (ಸು. ೧೫೩೦) : ಇಲ್ಲಿ ಎಂದಿನಂತೆ ಶಮದ.ದ ಅಪಭ್ರಂಶ, ಅವ್ಯಯ ಪ್ರಕರಣಗಳ ಹಾಗೂ ಪ್ರಯೋಗಸಾರದ ನಾನಾ ಉಲ್ಲೇಖಗಳ ಯಥಾವತ್ತಾದ ಸ್ವೀಕಾರಗಳು ಕಂಡುಬರುತ್ತವೆ. ವಿವರಗಳಿಗೆ ಪ್ರವೇಶಿಸದೆ, ಈ ಒಂದು ಉದಾಹರಣೆಯಿಂದಲೇ ಅದನ್ನು ತಿಳಿಯುವುದು ಸಾಧ್ಯವಿದೆ.

ನಿಗ್ಗವಮೆನೆ ಗಜದಂತಮಕ್ಕು ಗರ್ವಿತನಲ್ಲಿ
ಪ್ರಗ್ಗಾಯ್ಲನೆಂದಕ್ಕುಮಮ್ಮಂಗೊಡಲಿಯೆನಲ್
ಹೆಗ್ಗಟ್ಟವತ್ತಿಗೆಗೆ ಪೆಸರಕ್ಕು ಪನ್ನತಿಕೆಯೆನೆ ಪರಾಕ್ರಮಕೆ ನಾಮಂ
ಬಗ್ಗು ಬಿಪ್ಪಂಡಮೆನೆ ಚಪ್ಪರಣೆಯುರಿಯೆಣ್ಣೆ
ಯುಗ್ಗಿವಳೆದೆಣ್ಣೆಯೆಂದಕ್ಕು ನನಸೆನೆ ದಿಟಂ
ಕಿರ್ಗಿಯೆಂದೊರವು ಕೆಲಜೆನೆ ಸಹಾಯಂ ಪಂಚಮೆಂದಪೂರ್ವಕ್ಕೆ ನಾಮಂ ॥
(ಪ. ೭೬)

ಇಲ್ಲಿಯ ಒಂದೊಂದೂ ಶಬ್ದಾರ್ಥ ಶಮದ.ದ ಪ್ರಯೋಗಸಾರದಲ್ಲಿ ಕಂಡಿರುವಂಥದೇ ಆಗಿದೆ. ವ್ಯಾಕರಣಭಾಗದಿಂದಲೂ ಕೆಲವಂಶಗಳ ಸ್ವೀಕಾರವಾಗಿದೆ. ಇದಕ್ಕೆ ಉದಾ : "ನಿನತೆನತುತನತೆನಲ್ ನಿನ್ನದೆನ್ನದು ತನ್ನದೆನಿಪರ್ಥ..." ಎಂಬ ಈ ನಿಘಂಟಿನ ಪದ್ಯದಲ್ಲಿ (೬೦) ಸರ್ವನಾಮ ಶಬ್ದಗಳ ಮತ್ತು ದಿಗ್ವಾಚಕಗಳ ರೂಪವನ್ನು ಕುರಿತಿದ್ದು, ಇದು ಶಮದ. "ನಿನತೆನತುತನತೆನಿಪ್ಪುವು..." ಎಂಬ ಸೂತ್ರದ (೧೫೮) ಮತ್ತು "ಎತ್ತಣದೆಂಬೀ ಶಬ್ದಮನೆತ್ತಣ್ಗೆಂದಿಂತು..." ಎಂಬ ಸೂತ್ರದ (೧೬೦) ನೇರ ಅನುಕರಣೆಯ ಫಲವಾಗಿದೆ. ೨ ಸೂತ್ರಗಳ ವಿಷಯವನ್ನು ಒಂದೇ ಪದ್ಯದಲ್ಲಿ ಇಲ್ಲಿ ಬೆಸೆದಿದೆ.

v. ತೋಂಟದಾರ್ಯನ 'ಕರ್ಣಾಟಕ ಶಬ್ದಮಂಜರಿ' (ಸು. ೧೫೬೦) : "ಅಳಜು ಪೆಳಜಿಂದು ಭಯಂ" (೪೧), "ಅವ್ಯಕ್ತರವವಲ್ಪವೃಷ್ಟಿಗಳೊಳು ಜಿನುಗು ಶಬ್ದಂ" (೮೪) ಇಂಥವು ಶಮದ.ದ ಧಾತುಪ್ರಕರಣದಿಂದ ತೆಗೆದವು; "ಇಟ್ಸಲೆನೆ ಮಿಗಗೆಡ ಪುವೆಡೆ" (೩೨), "ಬಳಮರ್ದೆನಲ್ಕಂಕದೌಷಧಂ" (೪೦) ಇಂಥವು ಪ್ರಯೋಗಸಾರದೊಳಗಿನವು; "...ಅವಸೆಯುಮಾವಾಸ್ಯೆ ಹುಣ್ಣಿವೆ ಪೌರ್ಣಿಮಾಸ್ಯೆ ಪ್ರತಿಪತ್ತಿಂಗೆ ಪಾಡ್ಯಮೆಂದವತರಿಕು..." ಎಂಬ ಪದ್ಯದ ಎಲ್ಲಾ ಉಲ್ಲೇಖಗಳೂ ಅಪಭ್ರಂಶ ಪ್ರಕರಣದಲ್ಲಿ ಉಕ್ತವಾದವಾಗಿವೆ. ಹೀಗೆಯೇ ಶಮದ.ದ ಅಪಭ್ರಂಶ ಪ್ರಕರಣದ ಕೊನೆಗೆ ತತ್ಸಮಗಳೆಂದು ಕೇಶಿರಾಜ ಪಟ್ಟಿಮಾಡಿರುವ ಎಲ್ಲಾ ಶಬ್ದಗಳೂ, "ಮಣಿ ಮಂಚ ಪಟ್ಟವಟ್ಟಂ ಘಟ್ಟ ಸಬಳಂ..." ಎಂಬ ಒಂದು ಪದ್ಯದಲ್ಲಿ (೭೮) ಪುನರಾವೃತ್ತಿಗೊಂಡಿವೆ; ಕಾಲ, ಘಟ್ಟ ಎಂಬ ಹೊಸ ಶಬ್ದಗಳೂ ಸೇರಿವೆ. ಈ ನಿಘಂಟುಕಾರ ಶಮದ.ದ ಧಾತು ಪ್ರಕರಣದಿಂದ ಹೆಚ್ಚು ಪ್ರಯೋಜನ ಪಡೆದಿರುವಂತೆ ತೋರುತ್ತದೆ.

vi. ಶೃಂಗಾರಕವಿಯ 'ಕರ್ಣಾಟಕ ಸಂಜೀವನ' (ಸು. ೧೬೦೦) : ಇದು ಱಳಕುಳ ಶಬ್ದಗಳ ನಿಘಂಟು. ಇದರ ಆಧಾರ ಶಮದ.ವೇ ಎನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ಇಲ್ಲಿ ಬಂದಿರುವ ಱಳ ಕುಳ ಸ್ವರೂಪನಿರ್ಣಯದ ಎಲ್ಲ ಸೂತ್ರಗಳೂ ಸಹಜ ಱಳಗಳ ಪಟ್ಟಿಯೂ ಶೃಂಗಾರಕವಿಯ ಸಹಾಯಕ್ಕೆ ಒದಗಿವೆ. ಧಾತುಪ್ರಕರಣ, ಸಮಾಸ ಮತ್ತು ಅಪಭ್ರಂಶ ಪ್ರಕರಣಗಳು, ಪ್ರಯೋಗಸಾರ ಇವುಗಳಲ್ಲಿ ದೊರೆಯುವ ಱಳಘಟಿತ ಶಬ್ದಗಳನ್ನೂ ಈ ನಿಘಂಟುಕಾರ ಆಯ್ದುಕೊಂಡಿದ್ದಾನೆ; ಅರ್ಥಗಳನ್ನು ಹೇಳುವಾಗಲೂ ಆಯಾ ಕಡೆ ಕೇಶಿರಾಜ ಕೊಟ್ಟಿರುವ ಅರ್ಥಗಳನ್ನೇ ಅಂಗೀಕರಿಸಿದ್ದಾನೆ. ಷಟ್ಪದೀ ಪದ್ಯಬಂಧದ ಔಚಿತ್ಯಕ್ಕೆ ಅನುಗುಣವಾಗಿ ಇಲ್ಲಿ ಶಮದ.ದ ವಿಷಯಗಳು ಸಮ್ಮಿಶ್ರಗೊಂಡು ಬಂದಿವೆ. ಆದರೆ ಕಹಳೆ > ಕಾಱೆ, ಉಜ್ಜ್ವಳ > ಉಜ್ಜಱ ಎಂದು ಸೂಚಿಸಿರುವುದಾಗಲಿ, "ಗಱಯೆನೆ ಸರಳಭೇದಂ" ಎಂದು ಅರ್ಥ ಬರೆದಿರುವುದಾಗಲಿ ಸರಿಯೆಂದು ಹೇಳಲಾಗದು. ಶಮದ ದ ಅನುಕರಣೆಯನ್ನು ಸ್ಪಷ್ಟಪಡಿಸಲು ಇಲ್ಲಿ ಎರಡು ಉದಾ.ಗಳನ್ನು ಕೊಡಬಹುದು :

ಸೂೞಿನಲ್ ಬಾರಿ ಗೞಿಯೆನೆ ಸರಳಭೇದಮಾ
ೞ್ೞಿಗಂ ಸಾಮಾನ್ಯದಾ ಮಾಲ್ಯಬಂಧಮದು
ಬಾೞುಕಂ ಕೀೞ್ತ್ವಣಗಿ ಬಾಳ್ದ ಶಾ[ಕಂ] ಪೊಳ [ಕು]
ಸಾಮಾನ್ಯಾಕೃತಿಗೆ ನಾಮಂ
ಕೂೞಿನೆಗ್ಗಂ ಪಾೞಿ ಪಾಟಿ ಪೞಿಯುರಮೆನಲ್
ಕೋಟಿ ಸಂಕಲೆ[ದಟ್ಟಿ ೞಿ]ಯೆನಿಪುದಡಿಗೆಯುದು
ಸಾೞಿಗೆ ಕಿಮುೞ್ಚಿನಲ್ ತುೞಿವುದು ತುಡುಂಗುಣಿ ಹಾೞ್ಮನೆಯ
ಹಾೞಿನಕ್ಕುಂ ॥ (ಪ. ೬)

ಪೇಟಿಕೆಗೆ ಪೇೞಗೆಯೆನಿಕ್ಕುಂ ವರಾಳಂ ವ
ರಾಟದೊಳಗಾದುದದು ಕವಡೆ ಘುಟಿಕೆಗೆ ಘುಳಿಗೆ
ವೀಟಿಕೆಗೆ ವೀಳಿಗೆಯೆನಿಪ್ಪುದದು ವೀಳೆಯಂ ಸ್ಫಟಿಕಕ್ಕೆ ಪಳಿಕೆನಿಕ್ಕುಂ
ಖೇಟಕಕೆ ಖೇಳಕಂ ಹರಿಗೆ ರಘಟೆಗೆ ರಗಳೆ
ಪಾಟಿಯಿಂದಾಯ್ತುವುಂ ೞಟಿಕೆ ಜನಿಸಿದ ಕುಳಂ
ಸ್ಫೋಟಕಕ್ಕಾದ ಹೋಳಿಗೆ ಲಂಪಟಕ್ಕೆ ಲಂಪಳಿ ೞಟಕುಳಕ್ಕೆ ಮಧ್ಯಂ ॥
(ಪ. ೨೯)

ಶಮದ.ದ ಪ್ರಸಿದ್ಧ "ಕುಳದ ನಿಯಾಮದೊಳೇಂದುಂ..." ಎಂಬ (ಸೂ. ೧೫) ಹಾಗೂ "ಪಿರಿಯುರ್ ಸಲಿಪರ್ ದಡ್ಡಕ್ಕರದ ೞಟಕ್ಕೈದೆ..." ಎಂಬ (ಸೂ. ೩೪) ಎರಡು ಸೂತ್ರಗಳನ್ನೂ ಈ ನಿಘಂಟುಕಾರ "ಕುಳನುಂ ಕ್ಷಳನುಮೊಂದು ನಿಯಾಮದಿಂ..." (೩೩) ಹಾಗೂ "ಪೇಟ್ದಿ ೞಟನೆಲ್ಲವುಂ ಪ್ರಾಸಕ್ಕೆ .." (೩೨) ಎಂಬೆರಡು ಪದ್ಯಗಳಲ್ಲಿ, ತನ್ನ ಮಾತುಗಳಲ್ಲಿ ನಿರೂಪಿಸಿದ್ದಾನೆ. ಈ ನಿರೂಪಣೆ ೞಟ ಕುಳ ಶಬ್ದ ಸಮಸ್ಯೆಯ ಸಂದರ್ಭಗಳನ್ನು ಶಮದ.ದಲ್ಲಿ ವ್ಯಕ್ತವಾಗಿರುವ ಎಲ್ಲ ಸೂಕ್ಷ್ಮತೆಗಳೊಂದಿಗೆ ಒಳಗೊಂಡಿದೆಯೆಂದು ಭಾವಿಸಲಾಗದು.

vii. ಸೂರ್ಯಕವಿಯ 'ಕವಿಕಂಠ ಹಾರ' (೧೬೪೦) : ಇಲ್ಲಿ ಬಂದಿರುವ ಬಹುಪಾಲು ವಿಷಯ ಈ ಮೊದಲು ನೋಡಿದ ನಿಘಂಟುಗಳಲ್ಲೇ ಬಂದಿವೆಯಾದ್ದರಿಂದ ಇದರ ರಚನೆಗೆ ಶಮದ. ಎಷ್ಟರಮಟ್ಟಿಗೆ ಒದಗಿದೆಯೆಂದು ತಿಳಿಯುವುದು ಕಷ್ಟ. "ಹರುಷಂ ಮಿಗೆ ಮುನ್ನಾದ್ಯ । ರಿನೊರೆದೊಳ್ಗನ್ನಡ ಸುಶಬ್ದಮಣಿ ನಿಚಯಮಂ..." ಎನ್ನುವ ಒಂದು ಪದ್ಯದಿಂದ (೧೨), ಶಮದ.ದ ಪರಿಚಯವನ್ನು ನಿಘಂಟುಕಾರ ಪಡೆದಿರುವ ಸಾಧ್ಯತೆಯನ್ನು ಊಹಿಸಲು ಶಕ್ಯವಿದೆ. "ತಿಟ್ಟನೆ ಬೈಗಳಕ್ಕು" (೧೩೨), ಅಱುತುದೆನಲರ್ತುದಕ್ಕು" (೨೨೨) ಇತ್ಯಾದಿ ಉಲ್ಲೇಖಗಳೂ ಆ ಊಹೆಯನ್ನು ಪೋಷಿಸತಕ್ಕವಾಗಿವೆ.

ಈ ಮೇಲಿನ ನಿರೂಪಣೆಯಿಂದ, ಕನ್ನಡದ ಕೆಲವರು ನಿಘಂಟುಕಾರರು ಶಮದ.ವನ್ನು ಪ್ರಮುಖವಾದ ಒಂದು ಆಕರವನ್ನಾಗಿ ಗ್ರಹಿಸಿರುವುದು ವಿಶದಪಡುತ್ತದೆ. ಅಭ್ಯಾಸಿಗಳು ತಮ್ಮ ಭಾಷಾಭಿವೃದ್ಧಿಗೂ ಕವಿಗಳು ತಮ್ಮ ಕವಿತಾಪ್ರೌಢಿಮೆಗೂ ನಿಘಂಟುಕರು ಶಬ್ದಸಾಮಗ್ರಿಗೂ ಇದನ್ನು ಬಳಸುತ್ತಿದ್ದ ಹಾಗಿಲ್ಲ. ಅದಕ್ಕೆ ಬೇಡಿಕೆ ಹೆಚ್ಚುತ್ತ ಹೋಗಿರಬೇಕು. ಈಗ ದೊರೆಯುತ್ತಿರುವ ಶಮದ.ದ ಪ್ರತಿಗಳ ಸಂಖ್ಯೆಯಿಂದಲೂ ಇದನ್ನು ತಿಳಿಯಬಹುದು. ಅಭ್ಯಾಸಿಗಳೋ ವಿದ್ಯಾರ್ಥಿಗಳೋ ತಮಗೆ ಬೇಕಾದ ಓದಿಯಲಿಗೆ ಇಲ್ಲವೆ ಗುರುಗಳಿಗೆ ಅವರ ಪ್ರತಿಗಳನ್ನು ಸಿದ್ಧಪಡಿಸಿಕೊಡುತ್ತಿದ್ದಂತೆಯೂ ತೋರುತ್ತದೆ.[೪]

ಭಟ್ಟಾಕಳಂಕನು 'ಕರ್ಣಾಟಕ ಶಬ್ದಾನುಶಾಸನ'ವೆಂಬ (೧೬೦೪) ತನ್ನ ಸಂಸ್ಕೃತ ಭಾಷೆಯ ಕನ್ನಡ ವ್ಯಾಕರಣದ ರಚನೆಗೆ ನಾಗವರ್ಮನ ವ್ಯಾಕರಣಗಳನ್ನು ಬಳಸಿಕೊಂಡಿರುವಂತೆ ಶಮದ.ವನ್ನೂ ವಿಶೇಷವಾಗಿ ಬಳಸಿಕೊಂಡಿದ್ದಾನೆ. ಸೂತ್ರಗಳನ್ನು ನೇರವಾಗಿ ಸಂಸ್ಕೃತಕ್ಕೆ ಅನುವಾದಿಸಿ ಹಾಕಿಸಿದ್ದಾನೆ. ಉದಾ. ಗೆ, ನ. ಲಘ್ವಾದಿ ಲಘೂಪಾನ್ತ್ಯ-ದಲೋ ಗದವಜೋ ವೃತ್ತೌ" (೭೩), "ಬರ್ದಿಲಾದಯಃ" (೭೬), "ನೆಯುಯ್ಸ-ಯ್ಬಯಃ" (೫೪) ಮುಂತಾದ ಸೂತ್ರಗಳನ್ನು ನೋಡಬಹುದು. ಇವು ಕ್ರಮವಾಗಿ ಶಮದ.ದ ಸೂ. ೫೩, ೫೫ ಮತ್ತು ೮೦ ನೆಯ ಸೂತ್ರಗಳ ವಿಷಯಗಳನ್ನು ಒಳಗೊಂಡಿವೆ. ಸೂತ್ರಗಳ ದರ್ಜೆಗೆ ಪ್ರಯೋಗಗಳನ್ನೇ ಏರಿಸಿದ್ದಾನೆ. ಉದಾ.ಗೆ, "ಪಾರಯ್ಗೆಯಃ" (೫೬), "ಕಾದಲರಃ" (೭೫) ಮುಂತಾದವನ್ನು ನೋಡಬಹುದು. ನೇರವಾಗಿ ಪ್ರಯೋಗಗಳನ್ನು ಎತ್ತಿಕೊಂಡು ಪ್ರಯೋಗಸ್ಥಾನದಲ್ಲಿಯೇ ಬಳಸಿದ್ದಾನೆ. ಉದಾ. ಗೆ, "ಜುರ್ಜಿದವ್ರೋಲ್ ಬಿಸಿಲಳುರೆ..." (೧೪೦), "ಸವಣಂ ಬಳಪಂಗೊಳೆ.." (೨೯೮), "ಬಡವಾದಿರರಸ .." (೩೨೪) ಎಂಬಂತಹ ಉಲ್ಲೇಖಗಳನ್ನು ಗಮನಿಸಬಹುದು. ಇಷ್ಟು ಮಾತ್ರವಲ್ಲದೆ, "ತದುಕ್ತಂ ಕೇಶಿರಾಜೇನ" ಎಂದು ತಿಳಿಸಿ, ಶಮದ.ದ ಸೂತ್ರಗಳನ್ನೇ ಆಗಾಗ 'ಶಬ್ದಾನುಶಾಸನ'ದ ವ್ಯಾಖ್ಯಾನಭಾಗದಲ್ಲಿ ಉದ್ಧರಿಸಿರುವುದೂ ಉಂಟು. ಉದಾ.ಗೆ ಸೂ. ೮೦ ರ ವ್ಯಾಖ್ಯೆ ನೋಡಬಹುದು.

ಶಮದ ದ ಅಭ್ಯಾಸ ನಿರಂತರವಾಗಿ ಸಾಗಿತ್ತು ಎಂದು ತಿಳಿಯಲು ಲಿಂಗಣಾರಾಧ್ಯನು (ಸು. ೧೫೦೦) 'ಸೂತ್ರಾನ್ವಯ ರತ್ನಮಾಲೆ' ಎಂಬ ವ್ಯಾಖ್ಯೆಯೊಂದನ್ನು ಬರೆದುದೂ ನಿಟ್ಟೂರು ನಂಜಯ್ಯನು (ಸು. ೧೬೨೫) ಟೀಕೆಯೊಂದನ್ನು ರಚಿಸಿದುದೂ ಸಾಕ್ಷ್ಯಗಳಾಗಬಲ್ಲವಾಗಿವೆ. ಲಿಂಗಣಾರಾಧ್ಯನಿಗೆ ಹಿಂದೆ ಇನ್ನೂ ಒಬ್ಬ ವ್ಯಾಖ್ಯಾನಕಾರನಿದ್ದನೆಂದು ಕೆಲವರು ತಿಳಿದಿದ್ದಾರೆ.[೫]

---

೪ ನೋಡಿ: ಡಿ. ಎಲ್. ನರಸಿಂಹಾಚಾರ್, 'ಕನ್ನಡ ಗ್ರಂಥಸಂಪಾದನೆ', ಶಾರದಾಮಂದಿರ. ಮೈಸೂರು-೪, ೧೯೬೪, ಪು. ೪೯.

೫ ಎಚ್. ಚೆನ್ನಕೇಶವ ಅಯ್ಯಂಗಾರ್ ಅವತರಣಿಕೆ, 'ಶಬ್ದಮಣಿದರ್ಪಣ'. ಮದ್ರಾಸ ವಿಶ್ವವಿದ್ಯಾನಿಲಯದ ಪರಿಷ್ಕರಣ, ಮದ್ರಾಸ, ೧೯೭೩, ಪು. ೩.

ರುದ್ರಭಟ್ಟನ 'ಜಗನ್ನಾಥವಿಜಯ'ದ ಮಂಗಳಾಚರಣಪದ್ಯಗಳಿಗೆ 'ಪಂಚಪಾಷಾಣ ವ್ಯಾಖ್ಯಾನ'ವೆಂಬ ಅಜ್ಞಾತ ಕರ್ತೃಕವಾದ ಸಂಸ್ಕೃತವ್ಯಾಖ್ಯಾನವೊಂದಿದೆ ಇದರಲ್ಲಿ ಮೊದಲ ಪದ್ಯಕ್ಕೆ ವ್ಯಾಖ್ಯಾನ ಮಾಡುವಾಗ, ವ್ಯಾಖ್ಯಾನಕಾರನು "ಏಕೇನ್ಯೈವೇಂದ್ರಿಯೇಣ ಪಂಚೇಂದ್ರಿಯ ಸುಖಾನುಭವಸಂ ಚ ಸಂಭವತೀತಿ ಕವಿಕೇಶವೇನಾಪ್ಯುಕ್ತಮಸ್ತಿ" ಎಂದು ತಿಳಿಸಿ, ಶಮ.ದ "ಶ್ರೀವಾಗ್ದೇವಿಗೆ..." ಎಂಬ ಪೀಠಿಕಾಭಾಗದ ಮೊದಲ ಪದ್ಯವನ್ನು ಉದ್ಧರಿಸಿರುವುದು ಕಾಣುತ್ತದೆ.

ಮುದ್ದಣನ 'ರಾಮಾಶ್ವಮೇಧ'ದ (೧೯೦೧) ರಚನೆಯಲ್ಲಿ ಕಂಡುಬರುವ ಹಳಗನ್ನಡ ಭಾಷಾಪ್ರೌಢಿಮೆಯು. ಆತ ಪ್ರಾಚೀನ ಕಾವ್ಯಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದನೆಂಬುದನ್ನು ಸೂಚಿಸುತ್ತದೆ. ಆತನ ಅಭ್ಯಾಸಕ್ಕೆ ಶಮ.ದ. ಕೂಡ ಒಳಪಟ್ಟಿತ್ತೆಂದು ನಿಶ್ಚಯವಾದ ಕೆಲವು ಪ್ರಮಾಣಗಳಿಂದ[೬] ತಿಳಿಯಬಹುದಾಗಿದೆ. ಕೆಲಚು, ಉಟಿಗ, ಕಿಟ್ಸಿಱಿಗು. ಕಚ್ಚುಟಿ, ನೂಳದು, ಪುಚ್ಚುಟಿ, ಪೊಂಜುಱಿಗೆ. ಪೊಱಱಡಿ, ಬದ್ದಬದಸು, ಮುಮ್ಮುರಿ, ಪುಣ್ಮುಟಿಪ್ಪೋಗು– ಈ ಕೆಲವು 'ರಾಮಾಶ್ವಮೇಧದ ಶಬ್ದಗಳು ಶಮ.ದ, ದಿಂದಲೇ ಮುದ್ದಣನಿಗೆ ದೊರೆತಿರಬೇಕು. "ಹಾ ರಾಮಾ ಎಂದು ಸೀತೆ ಬಾಯ್ಟಿಡಲ್ಕೆ" (ಪು. ೩೭), "ಪಿತರ ಮಾತೊ" (ಪು ೪೦, ೫೭), ಬು ಭೂ ಭೂ ಎಂದು ಪೂರಯಿಪ ಶಂಖಂ" (ಪು. ೭೭), "ಕಡುಗಲಿ ದಲಿವಂ" (ಪು. ೬೫), "ಮನುಷಿನ ಮಾರ್ಗದೆ" (ಪು. ೧೦೪), "ಏಮಗಮೀ ವಿಧಿಯಾಯ್ತು" (ಪು. ೧೨೬), "ಏನೆಂಬ ಪೆಂಪೊ" (ಪು. ೧೪೪), "ಪ್ರಾಯಂ ಕೂಸಾದೊಡೇನೀ ಸಾಯಕಂ ಕೂಸಕ್ಕುಮೆ" (ಪು. ೧೫೪) ಇತ್ಯಾದಿಯಾಗಿ ಬಂದಿರುವ 'ರಾಮಾಶ್ವಮೇಧ'ದೊಳಗಿನ ವಾಕ್ಯಗಳು ಶಮ.ದ. ಪರಿಚಯವಿರತಕ್ಕವರಿಗೆ ಕೂಡಲೇ ಅಲ್ಲಿಯ ವಾಕ್ಯಗಳೆಂದು ತಿಳಿಯುವಂತಿವೆ: ಒಂದೊಂದು ಕಡೆ ಸ್ವಲ್ಪ ವ್ಯತ್ಯಾಸಮಾಡಿಕೊಂಡಿರುವುದೂ ಸ್ಪಷ್ಟವಾಗಿದೆ.

---

೬ ಬಳಸಿರುವ ಪರಿಷ್ಕರಣ : ಕಾವ್ಯಾಲಯ. ಮೈಸೂರು. ೧೯೫೩.

# ಕೆಲವು ಪಕ್ಷಿಗಳ ಹೆಸರುಗಳು

□□□□□□□□□□□□□□□□□□

ಎಂ. ಮರಿಯಪ್ಪ ಭಟ್ಟ

□□□□□ □□□□□□□□□□□□

ಸರ್ ರಾಲ್ಫ್ ಟರ್ನರ್ ಎಂಬ ಪ್ರಸಿದ್ಧ ನಿಘಂಟುಕಾರರೂ ಭಾಷಾಶಾಸ್ತ್ರತಜ್ಞರೂ ಹಿಂದೊಮ್ಮೆ ಹೀಗೆ ಹೇಳಿದರು : "ಭಾರತದ ಉಪಭಾಷೆಗಳು ಅವನತಿ ಹೊಂದುತ್ತಿವೆ. ಅವು ನಿರ್ನಾಮವಾಗುವ ಮೊದಲು ಅವನ್ನು ಸಾಧ್ಯವಿರುವಷ್ಟು ಪೂರ್ಣವಾಗಿಯೂ ಶಾಸ್ತ್ರೀಯವಾಗಿಯೂ ವಿವರಿಸುವುದು ಭಾಷಾಭ್ಯಾಸಿಗಳ ಆದ್ಯಕರ್ತವ್ಯ." ಈ ಎಚ್ಚರಿಕೆ ಯನ್ನು ನೀಡಿ ೪೦ ವರ್ಷಗಳು ಸಂದಿವೆ. ಆದರೂ ಈ ದಿಸೆಯಲ್ಲಿ ಹೆಚ್ಚು ಕೆಲಸ ನಡೆದಿಲ್ಲ. ದ. ಕ. ಜಿಲ್ಲೆಯ ಸುಳ್ಯ ತಾಲೂಕಿನ ಉಬರಡ್ಕ ಎಂಬ ಗ್ರಾಮದಲ್ಲಿ ಕನ್ನಡದ ಉಪಭಾಷೆಯೊಂದನ್ನಾಡುವ ಗೌಡ ಸಮುದಾಯವಿದೆ.[೧]

ಈ ಉಪಭಾಷೆಯಲ್ಲಿರುವ ಕೆಲವು ಪಕ್ಷಿಗಳ ಹೆಸರುಗಳನ್ನು ಕೇಳಿ ನನಗೆ ಹರ್ಷವೂ ದುಃಖವೂ ಆಯಿತು. ಹರ್ಷ– ನಮ್ಮ ಭಾಷೆಗಳಲ್ಲಿ ಎಂತಹ ಶಬ್ದಭಂಡಾರವಿದೆ. ಭಗವಂತನ ಸೃಷ್ಟಿಯಲ್ಲಿನ ಎಲ್ಲ ಮೃಗಪಕ್ಷಿಗಳನ್ನೂ ತರುಲತೆಗಳನ್ನೂ ನಮ್ಮ ಜನ ಗುರುತಿಸಿಕೊಂಡು ಅವಕ್ಕೆ ನಾಮಕರಣ ಮಾಡಿದ್ದಾರೆ. ಆದರೆ ಈ ಶಬ್ದಭಂಡಾರವನ್ನು ನಾವು ಸಂಗ್ರಹಿಸಿಕೊಳ್ಳಲಿಲ್ಲ. ಬರುಬರುತ್ತಾ ಇದು ನಶಿಸಿಹೋಗುತ್ತದೆ. ಹಿಂದಣ ತಲೆಮಾರಿನವರಿಗೆ ಗೊತ್ತಿದ್ದುದು ಇಂದಿನ ತಲೆಮಾರಿನವರಿಗೆ ಉಳಿದಿಲ್ಲ. ಈ ವಿಷಯ ದುಃಖಕ್ಕೆ ಕಾರಣ. ಹಳ್ಳಿಯವರಿಗೆ ಅವರು ಹೆಸರಿಸುವ ಎಲ್ಲ ಪಕ್ಷಿಗಳ ಪರಿಚಯವಿದೆ. ಆಧುನಿಕ ಪಕ್ಷಿಜ್ಞಾನಿಯೊಬ್ಬ ಅವರೊಡನೆ ವಿಚಾರವಿನಿಮಯ ನಡೆಸಿ ಗುರುತಿಸಿದ ಪಕ್ಷಿಗಳ ಹೆಸರುಗಳನ್ನು ಕನ್ನಡಕೋಶಕ್ಕೆ ಬರಮಾಡಿಕೊಳ್ಳಬೇಕು, ಕನ್ನಡದಲ್ಲಿ ಪಕ್ಷಿಗಳಿಗೆ

೧ ಈ ಭಾಷೆಯನ್ನು ಕುರಿತು 'ಗೌಡಕನ್ನಡ' ಎಂಬ ಸಂಶೋಧನಾತ್ಮಕ ಗ್ರಂಥವೊಂದನ್ನು ಡಾ. ಕೆ. ಕುಶಾಲಪ್ಪಗೌಡರು ರಚಿಸಿದ್ದಾರೆ.

ಹೊಸದಾಗಿ ನಾಮಕರಣ ಮಾಡುವ ಆಗತ್ಯವಿಲ್ಲ. ಹಳ್ಳಿಗರಿಗೆ ಪ್ರಸ್ತುತದಲ್ಲಿ ಪರಿಚಯವಿರುವ ಕೆಲವು ಪಕ್ಷಿಗಳ ಹೆಸರುಗಳನ್ನು ಮುಂದೆ ಕೊಡಲಾಗಿದೆ.

೧. ಕೊರಂಗ, ಕೊಕ್ಕರೆ ಎಂಬ ಎರಡು ಹೆಸರುಗಳಿಂದ ಬಕಪಕ್ಷಿಯನ್ನು ಕರೆಯುತ್ತಾರೆ. ಇದಕ್ಕೆ ಆಂಗ್ಲದಲ್ಲಿ erane. ಅನ್ನುತ್ತಾರೆ.

೨. ಕೊಟ್ಟು ಕತ್ತಲಿ— ಇದೊಂದು ವಿವರಣಾತ್ಮಕ ಹೆಸರು. ಈ ಹಕ್ಕಿಯ ತಲೆಯ ಹಿಂಭಾಗ ಕತ್ತಲಿಯ (ಒಂದು ಬಗೆಯ ಕತ್ತಿಯ) ಅಲಗಿನಂತಿದೆ, ತಲೆಯ ಮುಂಭಾಗದಲ್ಲಿ ಜುಟ್ಟು ಇದೆ.

೩. ಗಿಳಿ— ಎಲ್ಲರಿಗೂ ಪರಿಚಯವಿರುವ ಪಕ್ಷಿ.

೪. ಗೀಣ— ಗಿಳಿಜಾತಿಯ ಪಚ್ಚೆಬಣ್ಣದ ಪುಟ್ಟಹಕ್ಕಿ. ಬಾಳೆಗೊನೆಯ ಹೂವಿನೊಳಗಿನ ಮಧುವನ್ನು ಹೀರಲು ಹಾರಿಬರುವ ಹಕ್ಕಿ.

೫. ಮಂಡೆ ಮುಕ್ರ— ಗಿಳಿಗಿಂತ ಸ್ವಲ್ಪ ದೊಡ್ಡದಾದ ಅದೇ ಜಾತಿಯ ಹಕ್ಕಿ. ಇದು ಹೆಚ್ಚಾಗಿ ಒಣಗಿದ ಮರಗಳಲ್ಲಿ ಪೊಟರೆಮಾಡಿ ಅಲ್ಲಿ ವಾಸಮಾಡುತ್ತದೆ.

೬. ಏಳಂದಲಿ— ಇದೊಂದು ಪಚ್ಚೆಬಣ್ಣದ ಹಕ್ಕಿ. ಇದರ ವೈಶಿಷ್ಟ್ಯ— ಸಿಳ್ಳು ಹಾಕುವುದು. ಇದನ್ನು ಸಿಳ್ಳು ಹಾಕುವ ಹಕ್ಕಿ ಎನ್ನುವುದೂ ಉಂಟು.

೭. ಕುಪ್ಪುಳು—ಮೈ ಕೆಂಪುಬಣ್ಣ, ಕತ್ತಿನಲ್ಲಿ ಕಂದುಬಣ್ಣದ ಹಕ್ಕಿ—ಭಾರದ್ವಾಜ ಪಕ್ಷಿ.

೮. ಮರಕೊಡಪ್ಪ— ಮರಕುಟಿಗ— ಮರವನ್ನು ಕೊಕ್ಕಿನಿಂದ ಕೊಡಪಿ (ಕುಟ್ಟಿ) ಹುಳಗಳನ್ನು ತಿನ್ನುವ ಹಕ್ಕಿ.

೯. ಗುಬ್ಬಿ–ಗುಬ್ಬಚ್ಚಿ– ಎಲ್ಲರೂ ತಿಳಿದಿರುವ, ಮಕ್ಕಳಿಗೆ ಬಹಳ ಪ್ರಿಯವಾದ, ಮನೆಗಳಲ್ಲಿ ಗೂಡು ಕಟ್ಟಿಕೊಂಡಿರುವ ಪುಟ್ಟಹಕ್ಕಿ. ಇದರಲ್ಲಿ ಮನೆಗುಬ್ಬಿ (house-sparrow) ಕಾಡುಗುಬ್ಬಿ, ಗದ್ದೆಗುಬ್ಬಿ ಎಂಬೀ ಪ್ರಭೇದಗಳಿರುತ್ತವೆ. ಗುಬ್ಬಚ್ಚಿ ಎಂಬ ಪದದಲ್ಲಿ ಗುಬ್ಬಿಹಕ್ಕಿ>ಗುಬ್ಬಕ್ಕಿ>ಗುಬ್ಬಚ್ಚಿ ಆಗಿ ರೂಪಾಂತರಗೊಳ್ಳುವಲ್ಲಿನ ತಾಲವ್ಯ ಸೂತ್ರವನ್ನು ಗಮನಿಸಬಹುದು.

೧೦. ಗುರ್ಬಿ— ಇದು ಗುಬ್ಬಿಯ ಆದಿರೂಪವಿದ್ದರೂ ಇರಬಹುದು. ಗುರ್ಬಿ ಎಂಬ ಪಕ್ಷಿ ಮನೆಗುಬ್ಬಿಗಿಂತ ಗಾತ್ರದಲ್ಲಿ ಸಣ್ಣದಾಗಿರುತ್ತದೆ. ನೂರಾರು ಗುರ್ಬಿಗಳು ಗುಂಪಾಗಿ ಹಾರಿಬಂದು ನೆಲ್ಲಿನ ಪೈರುಗಳಲ್ಲಿ ಕೂತು ನೆಲ್ಲನ್ನು ತಿನ್ನುತ್ತವೆ.

೧೧. ಇದ್ರಾಂಟಿ— ಬಿಳಿಕಪ್ಪು ಮಿಶ್ರಬಣ್ಣದ ಹಕ್ಕಿ. ರಾತ್ರಿ ಹಾರುತ್ತಿರುವ ಪಕ್ಷಿ.

೧೨. ಪುದ, ಚೋರೆ— ಪಾರಿವಾಳದಂತಿರುವ ಒಂದು ಪಕ್ಷಿ.

೧೩. ಬೊಪ್ಪಟೆ — ನೋಡುವುದಕ್ಕೆ ಸಣ್ಣಗಿಡುಗನಂತಿರುವ ದೊಡ್ಡಬಾಯಿಯ ಬೆಳ್ದಿಂಗಳಲ್ಲಿ ಹಾರುವುದು ಇದಕ್ಕೆ ಬಲು ಇಷ್ಟ. ಇದರ ಬಾಯಿ ದೊಡ್ಡದಾಗಲು ಕಾರಣ ಹೇಳುತ್ತಾರೆ : ಅಂದೊಂದು ಮದುವೆಗೆ ಹೋಯಿತಂತೆ, ಅಲ್ಲಿ ಯಾವುದೋ

ಹಾಸ್ಯಸನ್ನಿವೇಶವನ್ನು ನೋಡಿ ದೊಡ್ಡನಗು ಬಂತಂತೆ. ಆಗ ಅದರ ಬಾಯಿ ಹರಿದು ಹೋಯಿತಂತೆ. ಅಂದಿನಿಂದ ಅದರ ಬಾಯಿ ದೊಡ್ಡದಾಯಿತಂತೆ. ಹಳ್ಳಿಯಲ್ಲಿ ಯಾರಾದರೂ ದೊಡ್ಡಬಾಯಿಯ ವ್ಯಕ್ತಿ ಇದ್ದರೆ ಆ ವ್ಯಕ್ತಿಯನ್ನು ಪೊಪ್ಪಟೆ ಬಾಯಿ ಎಂದು ಅಡ್ಡಹೆಸರಿನಿಂದ ಕೂಗುತ್ತಾರೆ.

೧೪. ಹೊಟ್ಟ (ಪೊಟ್ಟ)– ಇದೊಂದು ದೊಡ್ಡಕಾಡುಹಕ್ಕಿ. ಇದು ರಾಮಪತ್ರಿಯೊಳಗಣ ದೊಡ್ಡಬೀಜವನ್ನು ಹಾಗೆಯೇ ನುಂಗಿಬಿಡುತ್ತದೆ.

೧೫. ಮೋಂಟುಕುಳ್ಳ– ಹೊಟ್ಟೆಯ ಅಡಿ ಕೆಂಪುಬಣ್ಣವಿರುವ ನೆಲದ ಮೇಲೆ ಕುಂಟಿ ಕುಂಟಿ ನಡೆದು ಹಾರುವ ಒಂದು ಜಾತಿಯ ಪಕ್ಷಿ.

೧೬. ಮಿಂಚುಳ್ಳಿ– ಮೀನಂಗೊಳ್ಳಿಯೇ ತಾಲವ್ಯೀಕರಣ ಸೂತ್ರದಂತೆ ಕ್ರಮೇಣ ಮಿಂಚುಳ್ಳಿ ಆಗಿರಬಹುದು. ಕೆರೆಹಳ್ಳಗಳ ನೀರ ಮೇಲೆ, ಸರಕ್ಕನೆ ಹಾರಿ ಮೀನುಗಳನ್ನು ಕಚ್ಚಿಕೊಂಡು ಹಾರಿಹೋಗುವ ಪಕ್ಷಿ.

೧೭. ಮಡಿವಾಳಕ್ಕಿ– ಬಿಳಿಯಾದ ಉದ್ದನೆಯ ಬಾಲ (ಗರಿ) ಇರುವ ಸುಂದರ ಪಕ್ಷಿ. ಇದರ ಅಚ್ಚಬಿಳುಪುಬಣ್ಣಕ್ಕಾಗಿ ಇದನ್ನು ಮಡಿವಾಳ ಹಕ್ಕಿ > ಮಡಿವಾಳಕ್ಕಿ ಎಂಬುದಾಗಿ ಕರೆದಿರಬೇಕು.

೧೮. ಕಾಚಿಕುಳ್ಳ– ಕಪ್ಪುಬಣ್ಣದ ಎರಡು ಕತ್ತರಿ ಬಾಲ(ಗರಿ)ವುಳ್ಳ ಪಕ್ಷಿ. ಕಾಚಿ ಎಂದರೆ ಕಪ್ಪುಕಂದುಬಣ್ಣ ಎಂಬರ್ಥವಿದೆ.

೧೯. ಗಿಡುಗ– ಗರುಡನ ವಂಶಕ್ಕೆ ಸೇರಿದ ಪಕ್ಷಿ. ಇದಕ್ಕೆ ಬಹಳ ಸೂಕ್ಷ್ಮದೃಷ್ಟಿ. ಎತ್ತರದ ಬಾನಿನಲ್ಲಿ ವರ್ತುಲಗಳಲ್ಲಿ ಸುತ್ತಿಸುತ್ತಿ ಹಾರುತ್ತಾ ನೆಲದ ಮೇಲಿನ ತನ್ನ ಕೊಳ್ಳೆಯನ್ನು ವೀಕ್ಷಿಸಿ ಅತಿವೇಗದಿಂದ ನೆಲಕ್ಕಿಳಿದು ದೋಚಿಕೊಂಡು ಹಿಂತಿರುಗುವದು. ಇದರಲ್ಲಿ ಕೆಂಗಿಡುಗ, ಗೆಂದಾಳಿ ಗಿಡುಗ ಇತ್ಯಾದಿ ಪ್ರಭೇದಗಳುಂಟು.

೨೦. ಹದ್ದು—ರಣಹದ್ದು, ಹೆಣಗಳ ಮೇಲೆರಗುವ ಮಾಂಸಭಕ್ಷಕ ಪಕ್ಷಿ.

೨೧. ಕುರುಣಿ– ತೆಂಗಿನ ಮರಗಳಲ್ಲಿ ಗೂಡುಕಟ್ಟಿಕೊಂಡಿರುವ ಒಂದು ಜಾತಿಯ ಪಕ್ಷಿ. ದನಕರುಗಳ ಮೈಮೇಲಿನ ಉಣುಗನ್ನು (ಉಣ್ಣೆ) ತಿನ್ನುವುದು ಇದಕ್ಕೆ ಪ್ರೀತಿ.

೨೨. ಗುಳುಗುಮೆ–ಕೋಂಬಕ್ಕಿ–ಮಲೆಗಳಲ್ಲಿ ಹೆಚ್ಚಾಗಿ ಕಾಣಸಿಗುವ ಪಾರಿವಾಳ ಜಾತಿಯ ಪಕ್ಷಿ.

೨೩. ಗೂಮೆ– ಗೂಬೆಯನ್ನು ಗೌಡಭಾಷೆಯಲ್ಲಿ ಮತ್ತು ತುಳುವಿನಲ್ಲಿ ಗೂಮೆ ಎನ್ನುತ್ತಾರೆ.

೨೪. ತೆಕ್ಕಟೆ– ಕಾಲಿನಲ್ಲಿ ಎರಡೆರಡು ಮುಳ್ಳುಗಳು (ಉಗುರುಗಳು) ಇರುವ ಪಕ್ಷಿ. ಇಂಥ ಒಂದೊಂದು ಮುಳ್ಳು ಕೋಳಿಕಾಲಿನಲ್ಲಿಯೂ ಇರುತ್ತದೆ. ಇವನ್ನು ತುಳುವಿನಲ್ಲಿ ಕೇಂಕಾಣ ಎನ್ನುತ್ತಾರೆ.

೨೫. ಕಾಡುಕೋಳಿ– ಕಾಡಿನಲ್ಲಿ ವಾಸಮಾಡುವ ಕೋಳಿಜಾತಿಯ ದೊಡ್ಡಪಕ್ಷಿ.

೨೬. ಚಿಟ್ಟಕ್ಕಿ—(ಚಿಟ್ಟೆ+ಹಕ್ಕಿ>ಚಿಟ್ಟೆಗಿಹಕ್ಕಿ)—ಪುಟ್ಟಹಕ್ಕಿ. ಹೆಚ್ಚಾಗಿ ನುಗ್ಗೆಮರಕ್ಕೆ ಹಾರಿ ಬಂದು ನುಗ್ಗೆಹೂವನ್ನು ತಿನ್ನುತ್ತದೆ.

೨೭. ಜರಿಜರಿಹಕ್ಕಿ—ಬಜಕ್ಕಿರೆಪಕ್ಕಿ— (ಇವು ನೂರಾರು) ಈ ಹೆಸರಿನ ಪುಟ್ಟ ಪಕ್ಕಿಗಳು ಗುಂಪಾಗಿ ಜರಿಜರಿ ಎಂಬ ಶಬ್ದಮಾಡುತ್ತಾ ಹಾರಾಡುತ್ತವೆ. ಬಜಕ್ಕಿರೆ ಎಂದರೆ ತರಗೆಲೆ. ತರಗೆಲೆ ಗಾಳಿಗೆ ಹಾರುವಾಗ ಜರಿಜರಿ ಶಬ್ದಮಾಡುತ್ತದೆ. ಈ ಪಕ್ಷಿಗಳು ಅಂಥ ಶಬ್ದವನ್ನು ಮಾಡುವದರಿಂದ ಇವನ್ನು ಬಜಕ್ಕಿರೆ ಹಕ್ಕಿ ಎನ್ನುವುದು ಸಾರ್ಥಕ್ಯ.

೨೮. ಕೇನೆಮಂಜಾಳ—ಕಾಡುಕೇನೆ ಹಣ್ಣನ್ನು ತಿನ್ನುವುದರಲ್ಲಿ ನಿಸ್ಸೀಮಪಕ್ಷಿ. ತುಸು ತಂಸು ಹಳದಿಬಣ್ಣವೂ ಇದೆ.

೨೯. ಬೆಳ್ಳಾರ ಮಣುಕ —ಮೈನಾಹಕ್ಕಿಯಂತಿರುವ ಒಂದು ಬಗೆಯ ಪಕ್ಷಿ. ಇದರ ನೆಲದ ಮೇಲಿನ ನಡತೆ ನೃತ್ಯದಂತೆ ಸುಂದರವಾಗಿದೆ.

೩೦. ಕೋಲತ್ರಿ —ಗದ್ದೆಗಳ ಅಂಚಿನಲ್ಲಿ ಯಾವಾಗಲೂ ಕಾಣಸಿಗುವ ಪಚ್ಚೆಬಣ್ಣದ ಹಕ್ಕಿ. ಹುಳಹುಪ್ಪಟೆಗಳನ್ನು ತಿಂದು ಜೀವಿಸುವ ಹಕ್ಕಿ. ಬಿಲಗಳಲ್ಲಿ ವಾಸಿಸುವ ವಿಶಿಷ್ಟಜಾತಿಯ ಪಕ್ಷಿ.

೩೧. ಸೆಗಣಿ ಕೇರ-ಸೆಗಣಿಯ ಹುಳಗಳನ್ನು ತಿಂದು ಬದುಕುವ ಪಕ್ಷಿ.

೩೨. ಕುಂಡಕೋಳಿ—ಬಿದಿರಪೊದೆಗಳಲ್ಲಿ ವಾಸಿಸುವ ಒಂದು ಜಾತಿಯ ಪಕ್ಷಿ. ಇದು ಭತ್ತದ ಗದ್ದೆ ಬದಿಯಲ್ಲೂ ಇರುತ್ತದೆ.

ಇಂಥ ಶಬ್ದಗಳನ್ನು ನಾವು ಕಳೆದುಕೊಳ್ಳಬಾರದು. ನಿಘಂಟುಗಳಿಗೆ ಇವು ಪ್ರವೇಶಿಸಬೇಕು.

ಒಂದು ಉಪಭಾಷೆಯಲ್ಲಿ ದೊರೆತ ೩೨ ಶಬ್ದಗಳಿವು. ಇತರ ಉಪಭಾಷೆಗಳಲ್ಲಿ ಇನ್ನೆಷ್ಟೋ ಶಬ್ದಗಳಿರಬಹುದು. ಇವು ಪಕ್ಷಿವರ್ಗದಲ್ಲಿ ಮಾತ್ರ ದೊರೆತುವು. ಇನ್ನು ತರುಲತೆ ಮೊದಲಾದ ವರ್ಗಗಳಲ್ಲಿ ಸಂಗ್ರಹಿಸಲು ಹೊರಟರೆ ನಮ್ಮ ಬೊಕ್ಕಸ ಮತ್ತಷ್ಟು ತುಂಬುವುದರಲ್ಲಿ ಸಂದೇಹವಿಲ್ಲ. ಇಂಥ ಸಂಗ್ರಹ ಎಲ್ಲ ಉಪಭಾಷೆಗಳಿಂದ ಆಗಬೇಕು.

ಈ ಕಾರ್ಯಕ್ರಮದಿಂದ ಉಂಟಾಗುವ ಪ್ರಯೋಜನಗಳು : ನಮ್ಮ ಶಬ್ದಭಂಡಾರವನ್ನು ಉಳಿಸಿಕೊಳ್ಳುವುದು. ಅಳಿಸಿ, ಗಳಿಸುವುದಕ್ಕಿಂತ ಉಳಿಸಿ ಬಳಸುವುದೇ ಲೇಸು. ದ್ರಾವಿಡಭಾಷೆಗಳ ತುಲನಾತ್ಮಕ ಅಭ್ಯಾಸಕ್ಕೆ ವಿಶೇಷಸಾಮಗ್ರಿ ದೊರೆಯುವುದು. ಪ್ರಕೃತಿವಿಜ್ಞಾನಿಗಳಿಗೆ ನೂತನವಸ್ತುಗಳು ಲಭಿಸುವವು. ಉತ್ಸಾಹ-ಸಾಹಸ-ಶ್ರದ್ಧೆಗಳಿಂದ ಈ ದಿಸೆಯಲ್ಲಿ ಮುಂದುವರಿಯೋಣ.

■ ■

# ಕನ್ನಡದಲ್ಲಿ ಕರ್ಮಣಿಪ್ರಯೋಗ

ಕೆ. ಕುಶಾಲಪ್ಪಗೌಡ

'ದ್ರಾವಿಡಭಾಷೆಯ ಕ್ರಿಯಾಪದಗಳಲ್ಲಿ ಕರ್ಮಣಿಪ್ರಯೋಗ ಇಲ್ಲ. ಎಂದಾದರೂ ಅದು ಇದ್ದಿತ್ತು ಎಂದು ಊಹಿಸಲೂ ಯಾವ ಕಾರಣವೂ ಇಲ್ಲ' ಎಂದು ರಾಬರ್ಟ್ ಕಾಲ್ಡ್ವೆಲ್ ಈ ಮೊದಲು ಹೇಳಿದ್ದಾರೆ (ಕಾಲ್ಡ್ವೆಲ್, ೧೯೬೧-೪೬೭). 'ಕನ್ನಡ ಕೈಪಿಡಿ'ಕಾರರೂ ಕಾಲ್ಡ್ವೆಲ್ಲರ ವಾದವನ್ನು ಸ್ವೀಕರಿಸಿದ್ದಾರೆ (ಕೈಪಿಡಿ, ೧೯೫೫-೩೬೪). ಆರ್. ನರಸಿಂಹಾಚಾರ್ಯರೂ ಕಾಲ್ಡ್ವೆಲ್ಲರ ದೃಷ್ಟಿಯನ್ನೊಪ್ಪಿಕೊಂಡು ಕರ್ಮಣಿಗೆ ಪ್ರತ್ಯೇಕವಾದ ಪ್ರತ್ಯಯ ದ್ರಾವಿಡಭಾಷೆಗಳಲ್ಲಿಲ್ಲ. ಅದು ಸಹಾಯಕ ಕ್ರಿಯಾಪದದ (Auxiliary verb) ಮೂಲಕ ವ್ಯಕ್ತವಾಗುತ್ತದೆಂದಿದ್ದಾರೆ. 'ಕರ್ಮಣಿ ಪ್ರಯೋಗವನ್ನು ಸೂಚಿಸಲು ಅನೇಕ ವಿಧಾನಗಳಿವೆ' ಎನ್ನುತ್ತಾ ಉಡೈಂಟರು (ತ), ಒಡೆಯಿತು (ಕ), ಎಟುದಿನ ಪುತ್ತಗಂ (ತ), ಬರೆದ ಪುಸ್ತಕ (ಕ), ಶೆಯ್ಯಲಾಯಿಟ್ರು (ತ), ಕೆಯ್ಯಲಾಯಿತ್ತು (ಕ) ಎಂಬ ಉದಾಹರಣೆಗಳನ್ನು ಕೊಟ್ಟಿದ್ದಾರೆ (ನರಸಿಂಹಾಚಾರ್ಯ, ೧೯೬೯-೧೪೦). ಅಕರ್ಮಕ ಕ್ರಿಯಾಪದಗಳನ್ನೂ ಸಾಪೇಕ್ಷ ಕ್ರಿಯಾಪದವನ್ನೂ (relative participle) ಕಾಲ್ಡ್ವೆಲ್ ಮಾಡಿದಂತೆ ಅವರು ತಪ್ಪಾಗಿ ಭಾಷಾಂತರ ಮಾಡಿದ್ದಾರೆ.

ಕನ್ನಡದಲ್ಲಿ ಕರ್ಮಣಿಪ್ರಯೋಗ ತೀರ ವಿರಳವಾಗಿರುವುದೂ ಅದು ಕೃತಕವಾಗಿ ಕಾಣುವುದೂ ಅಲ್ಲದೆ ಪ್ರಾಚೀನಕಾಲದಲ್ಲಿ ಸಂಸ್ಕೃತದ, ಆಧುನಿಕಕಾಲದಲ್ಲಿ ಇಂಗ್ಲಿಷಿನ ಪ್ರಭಾವ ಕನ್ನಡಕ್ಕೆ ವಿಶೇಷವಾಗಿ ಆಗಿರುವುದು ಕಾಲ್ಡ್ವೆಲ್ಲರ ಅಭಿಪ್ರಾಯವನ್ನು ಪುಷ್ಟೀಕರಿಸುವಂತಿದೆ. ಹಳಗನ್ನಡ ಕೃತಿಗಳಲ್ಲಿ ಕರ್ಮಣಿಪ್ರಯೋಗದ ಬಳಕೆ ಕಂಡಾಗ

ಅದು ಸಂಸ್ಕೃತದ ಪ್ರಭಾವದಿಂದ ಎಂದು ತಿಳಿಯಲಾಗುತ್ತದೆ.[೧] ಆಧುನಿಕ ಕನ್ನಡ ಕೃತಿಗಳಲ್ಲಿ ಅದು ಕಂಡುಬಂದರೆ ಇಂಗ್ಲಿಷಿನ ಪ್ರಭಾವದಿಂದ ಎಂದು ತಿಳಿಯಲಾಗುತ್ತದೆ.[೨]

ತಮಿಳು ವಿದ್ವಾಂಸರು ಕರ್ಮಣಿಯ ಪ್ರಯೋಗವನ್ನು ತೊಲ್ಕಾಪ್ಪಿಯಂ ಗ್ರಂಥದ ಕಾಲದಿಂದಲೇ ಕಂಡುಕೊಂಡಿದ್ದಾರೆ. ತೊಲ್ಕಾಪ್ಪಿಯಂನ ಹೇಳಿಕೆಗಳಲ್ಲಿ ಮಾತ್ರವಲ್ಲ ತಿರುವಳ್ಳುವರ್‌ನ ತಿರುಕ್ಕುರಳ್‌ನಲ್ಲಿಯೂ ಇದರ ಪ್ರಯೋಗ ಕಂಡುಬರುತ್ತದೆ. ಹೊಸಕಾಲದ ಬರಹಗಳಲ್ಲಿ ಹಾಗೂ ಸಭಾವೇದಿಕೆಯ ಭಾಷಣಗಳಲ್ಲಿ ಇದರ ಪ್ರಯೋಗ ಯಥೇಚ್ಛವಾಗಿ ಕಂಡುಬರುತ್ತದೆ. ಅಲ್ಲದೆ ಅದು ಕೃತಕವಾಗಿಯೂ ಕಾಣುವುದಿಲ್ಲ. ಆದುದರಿಂದ ತಮಿಳುಭಾಷೆಯ ಮಟ್ಟಿಗೆ ಇದು ಅನ್ಯಭಾಷೆಗಳಿಂದ ಎರವಲಾಗಿ ಬಂದ ಅಂಶವಲ್ಲ ಎಂಬುದು ಅವರ ಅಭಿಪ್ರಾಯ. ಒಂದು ಭಾಷೆಗೆ ಇನ್ನೊಂದು ಭಾಷೆಯಿಂದ ಪದಗಳನ್ನು ಆಯಾಮ ಮಾಡಿಕೊಳ್ಳುವುದು ಸಹಜ. ವ್ಯಾಕರಣಾಂಶಗಳನ್ನೋ, ರಚನೆಗಳನ್ನೋ ಸ್ವೀಕರಿಸುವ ಸಂದರ್ಭ ಇಲ್ಲವೇ ಇಲ್ಲವೆಂಬುದು ತಿಳಿದ ವಿಷಯ. ಈ ನೆಲೆಯಿಂದ ಕರ್ಮಣಿಪ್ರಯೋಗ ತಮಿಳಿಗೆ ಅಥವಾ ದ್ರಾವಿಡಕ್ಕೆ ಬೇರೆಡೆಯಿಂದ ಬಂದುದಾಗಿರದೆ, ಅದರ ಸಹಜವಾದ ಅಂಗವೆಂಬ ವಾದಕ್ಕೆ ಬಲ ದೊರೆಯುತ್ತದೆ. ಈ ಪೂರ್ವಸಿದ್ಧಾಂತದ ಹಿನ್ನೆಲೆಯಿಂದ ಈಕ್ಷಿಸಿದರೆ ಸಂಸ್ಕೃತ (ಇಂಡೋ ಆರ್ಯನ್) ಇಂಗ್ಲಿಷ್ (ಇಂಡೋ ಯುರೋಪಿಯನ್) ಎಂಬ ಇತರ ಭಾಷಾವರ್ಗಗಳಲ್ಲಿ ಕರ್ಮಣಿಪ್ರಯೋಗ ಅತಿಯಾಗಿ ಕಂಡುಬಂದರೆ, ಅದು ಎಲ್ಲ

---

೧ ಕನ್ನಡಕ್ಕೆ ಬಸವಪ್ಪಶಾಸ್ತ್ರಿಗಳಿಂದ ಭಾಷಾಂತರಿತವಾದ ಶಾಕುಂತಳ ನಾಟಕದ ಗದ್ಯ ಸಂಭಾಷಣೆಯಲ್ಲಿ ಅಲ್ಲಲ್ಲಿ ಕರ್ಮಣಿ ಪ್ರಯೋಗಗಳು ಬರುತ್ತವೆ. "ಬಸವಪ್ಪ ಶಾಸ್ತ್ರಿಗಳಿಂದ ರಚಿಸಲ್ಪಟ್ಟುದು" "ಅನುಗ್ರಹಿಸಲ್ಪಟ್ಟೆನು", "ನಾನು ರಾಕ್ಷಸರ ದೆಸೆಯಿಂದ ಬದುಕಿಸಲಟ್ಟೆನು. "ಭಾವಮಿತ್ರರಿಂದ ಹಿಡಿಯಲ್ಪಟ್ಟೆನು". ಪದ್ಯ ಭಾಗದಲ್ಲಿ ಕರ್ಮಣಿ ಬಂದಿಲ್ಲವೆಂಬುದು ಗಮನಾರ್ಹ. ಹೊಸಗನ್ನಡದಲ್ಲಿ ಅಲ್+ಪಡು ಎಂಬ ಕರ್ಮಣಿ ರೂಪದ ಬದಲಿಗೆ. ಸಾಪೇಕ್ಷ ಕ್ರಿಯಾರೂಪದ ಬಳಕೆಯಾಗುತ್ತದೆ: "ಕೇಶಿರಾಜ ವಿರಚಿತ ಶಬ್ದಮಣಿದರ್ಪಣ".

೨ "ಎಲ್ಲಾ ಹಕ್ಕುಗಳು ಕಾದಿರಿಸಲ್ಪಟ್ಟಿವೆ", "ಪ್ರಕಟಿಸಲ್ಪಟ್ಟಿದೆ" ಎಂಬಂತಹ ರಚನೆಗಳಿಗೆ ಇಂಗ್ಲಿಷಿನ ರಚನೆಗಳೇ ಪ್ರೇರಕವಾಗಿವೆ. ಕಾಲ್ಡ್ವೆಲ್ಲರ ಹೇಳಿಕೆ ಈ ಬಗ್ಗೆ ಸ್ಪಷ್ಟವಾಗಿದೆ:

'The Dravidian languages, indeed, are destitute of passive properly so called, and, therefore, resist every effort to bring paḍu into general use. Such efforts are constantly being made by foreigners, who are accustomed to passive in their tongues, and fancy that they cannot get on without them; but nothing sounds more barbarous to the Dravidian ear than the unnecessary use of paḍu as a passive auxiliary. It is only when combined with nouns that its use is thoroughy allowable' (Caldwell, 1961–467).

ಭಾಷಾವರ್ಗಗಳಿಗೂ ಸರ್ವಸಾಮಾನ್ಯವಾದ ಅಂಶದ (Universality) ವ್ಯಕ್ತ ಸ್ವರೂಪವೇ ಹೊರತು ಬೇರಲ್ಲ ಎಂದು ತಿಳಿಯಬೇಕಾಗುತ್ತದೆ. ಅವುಗಳು ಪ್ರಭಾವ ಬೀರುವ ಮೂಲಗಳೇ ಆಗಿರಬೇಕಾಗಿಲ್ಲ ಎಂದೂ ವಿದಿತವಾಗುತ್ತದೆ.

ತೆಲುಗುಭಾಷೆಯಲ್ಲಿ ಕರ್ಮಣಿಪ್ರಯೋಗದ ಸ್ಥಿತಿ ಹೆಚ್ಚು ಕಡಿಮೆ ಕನ್ನಡದಲ್ಲಿದ್ದಂತೆಯೇ ಇದೆ. ಸಂಸ್ಕೃತದ ಮಾದರಿಯನ್ನನುಸರಿಸಿ ಮಾಡಿಕೊಂಡ ಕೃತಕರಚನೆ ಅದೆಂದು ಪಂಡಿತರ ಅಭಿಪ್ರಾಯ. ಶಾಸನಭಾಷೆಯಲ್ಲಿಯೂ ಇದರ ಪ್ರಯೋಗವಿದೆಯೆಂಬ ವರದಿಯಾಗಿದೆ. ಆದುದರಿಂದ ಬಹಳ ಹಿಂದಿನಿಂದಲೇ, ಸಂಸ್ಕೃತದ ಪ್ರಭಾವ ಈ ವಿಷಯದಲ್ಲಿ ಬಿದ್ದಿದೆಯೆಂದೂ ವೇದ್ಯವಾಗುತ್ತದೆ.

ಮಲೆಯಾಳಂ ಭಾಷೆ ಸಂಸ್ಕೃತದಿಂದ ತುಂಬ ಪ್ರಭಾವ ಹೊಂದಿದೆಯಾದರೂ ಕರ್ಮಣಿಯ ಅಂಶ ಅಲ್ಲಿಯೂ ತೀರ ವಿರಳ. ಅದರ ಪ್ರಯೋಗ ಅಸಹಜ ಎಂಬ ಭಾವನೆಯೂ ಇದೆ. ಕೆಲವೆಡೆಗಳಲ್ಲಿ, ವಿಶೇಷ ಸಂದರ್ಭಗಳಲ್ಲಿ, ಅಂದರೆ, 'ಯುದ್ಧದಲ್ಲಿ ಅನೇಕ ಜನ ಸತ್ತರು', ಅಥವಾ 'ಯಾವನೋ ಒಬ್ಬನ ಕೊಲೆಯಾಯಿತು'— ಎಂದು ವರದಿ ಮಾಡುವ ಸಂದರ್ಭದಲ್ಲಿ ಮಾತ್ರ ಇದರ ಪ್ರಯೋಗ ಸಹಜವಾಗಿ ಬರುತ್ತದೆ. ಇಂಗ್ಲಿಷಿನ 'Many were killed in the war', ಅಥವಾ 'He was murdered' ಎಂಬ ವಾಕ್ಯಗಳಿಗೆ ಸಂವಾದಿಯಾದ ವಾಕ್ಯಗಳಲ್ಲಿ ಕರ್ತೃ ಸೂಚನೆಯಿಂದ ಪ್ರಯೋಗವಾಗುತ್ತದೆ. ಇದು ಮಾತ್ರ ಕರ್ಮಣಿರೂಪ ಪಡೆಯುತ್ತದೆ.

ತಮಿಳಿನ ಹೊರತು ಗ್ರಾಂಥಿಕಭಾಷೆಯ ಯಾವ ಆಡುನುಡಿಗಳಲ್ಲಾಗಲೀ, ಅಥವಾ ಈ ವರ್ಗದ ಅಲಿಖಿತ ಭಾಷೆಗಳಲ್ಲಿ, ಗುಡ್ಡಗಾಡಿನ ಜನಾಂಗದವರ ಮಾತಿನಲ್ಲಾಗಲೀ, ಕರ್ಮಣಿಪ್ರಯೋಗ ಬರುವುದಿಲ್ಲ. ಆದುದರಿಂದ ಇದು ಸಾಹಿತ್ಯಪ್ರಯೋಗಕ್ಕೆ ಮಾತ್ರ ಮೀಸಲಾಗಿರುವ ಅಂಶವೆಂದು ತಿಳಿಯಬೇಕಾಗುತ್ತದೆ. ಇಂತಹ ಮೀಸಲು ತನದ ಗುಣವೇ, ಇದು ದ್ರಾವಿಡವರ್ಗಕ್ಕೆ ಮೂಲಭೂತವಲ್ಲದಿರಬಹುದೆಂಬ ಸಂಶಯ ವನ್ನು (ಕೆಲವು ಪ್ರಧಾನಭಾಷೆಗಳು ಪ್ರಾಚೀನಕಾಲದಿಂದಲೇ ಇದನ್ನು ಪ್ರಯೋಗಿಸುತ್ತ ಬಂದರೂ) ತೋರುತ್ತದೆ. ದ್ರಾವಿಡದಲ್ಲಿ, ಮುಖ್ಯವಾಗಿ ಕನ್ನಡದಲ್ಲಿ, ಕರ್ಮಣಿ ಪ್ರಯೋಗದ ವೈಶಿಷ್ಟ್ಯ ಈ ಕೆಳಗಿನಂತಿದೆ :

ಅ. ಅದಕ್ಕೆ ವ್ಯಾಕರಣ ರಚನಾತ್ಮಕವಾದ ಪ್ರತ್ಯಯ ವಿಶಿಷ್ಟವಿಲ್ಲ.

ಆ. ಸತಿಸಪ್ತಮಿರೂಪದ ಕ್ರಿಯಾಪದದೊಡನೆ ಸೇರುವ ಸಹಾಯಕ ಕ್ರಿಯಾ ಪದವಾದ **ಪಡು** ಎಂಬುದಕ್ಕೆ ಕೋಶಾರ್ಥವಿದೆ (Lexical meaning). ಅದಕ್ಕೆ ನಪುಂಸಕ ಸರ್ವನಾಮ ಪ್ರತ್ಯಯ ಸೇರುತ್ತದೆ.

ಇ. ಕಾವ್ಯಗಳಲ್ಲಿ ವರ್ಣನಾಭಾಗಗಳಲ್ಲೆಲ್ಲಿಯೂ ಇದು ಕಂಡುಬರುವುದಿಲ್ಲ. ಕರ್ತೃಪಿನ ಹೇಳಿಕೆಗಳಲ್ಲಿ ಶಾಸ್ತ್ರ ಹಾಗೂ ನೀತಿ ಗ್ರಂಥಗಳಲ್ಲಿ ಮಾತ್ರ ಬರುತ್ತದೆ.

ಈ. ಹೊಸಗನ್ನಡದಲ್ಲಿ ಕರ್ತೃಪದವಿಲ್ಲದ ಪರೋಕ್ಷ ಹೇಳಿಕೆಯಂತಹ ವಾಕ್ಯಗಳು ಬರುತ್ತವೆ. ಅವುಗಳಲ್ಲಿ ಕ್ರಿಯಾಪದದ ಸತಿಸಪ್ತಮಿಯ ರೂಪದೊಡನೆ 'ಆಯಿತು' ಎಂಬ ಆಗು-ಕ್ರಿಯಾಧಾತುವಿನ ಭೂತಕಾಲರೂಪ ಪ್ರಯೋಗವಾಗುತ್ತದೆ. ಇದು ಕರ್ಮಣಿಪ್ರಯೋಗವನ್ನು ನೇರವಾಗಿ ಹೋಲುತ್ತದಾದರೂ ಒಂದಕ್ಕೊಂದು ಸಂಬಂಧಿಸಿಲ್ಲ.

ಕನ್ನಡದಲ್ಲಿ ದೊರೆಯುವ ಪ್ರಾಚೀನ ಗದ್ಯಕೃತಿಯಾದ ವಡ್ಡಾರಾಧನೆ (ಸು. ಕ್ರಿ.ಶ. ೯೪೦) ಯಲ್ಲಿ ಕರ್ಮಣಿರೂಪದ ಕೆಲವು ಪ್ರಯೋಗಗಳು ಬಂದುದು ಕುತೂಹಲಕಾರಿಯಾಗಿದೆ.

ಕಟ್ಟುಪಡುವುದುಂ ೨೨-೯., ಕಟ್ಟೆಪಟ್ಟ ೩೫-೫, ಕಾದಲಿಸಪಡುವ ೩೨-೬. ೧೧೫-೭, ಖಂಡಿಸೆಪಟ್ಟುದು ೧೪೮-೧೦., ನಿಲೆವಟ್ಟುದೆ ೮೯-೯, ೧೫. ೨೭: ಬಾಧಿಸೆಪಟ್ಟು ೫೬-೯, ಬಾಧಿಸೆಪಟ್ಟೊರ್ ೧೦೪-೧೮, ಬೆಸಗೊಳೆಪಟ್ಟ ೧೪೫-೨೧, ಮೆಚ್ಚೆಪಡುವ ೪೩-೧೭, ಸೈರಿಸೆಪಟ್ಟುವು ೫೩-೭.

ಹದಿಮೂರನೆಯ ಶತಮಾನದ ಕನ್ನಡ ವೈಯಾಕರಣಿ ಕೇಶಿರಾಜ ತನ್ನ ಶಬ್ದಮಣಿದರ್ಪಣದ ಕೆಲವು ಸೂತ್ರಗಳಲ್ಲಿ ಕರ್ಮಣಿಯ ಪ್ರಯೋಗ ಮಾಡಿದ್ದಾನೆ.

೧. ಶಾಸ್ತ್ರ, ವ್ಯವಹಾರ ಜ್ಞಾನಾರ್ಥವಾಗೆ ಪೇೞಲ್ಪಡೆಗುಂ (ಸೂ. ೧೧)
೨....ಅವರ್ಣಂ ಪಿಂಗಿದಾ ಸ್ವರಂ ನಾಮಿಯೆಂದು ಪೇೞಲ್ಪಡೆಗುಂ (ಸೂ. ೧೯)
೩....ಪ್ರಕರಣ ಗಣಸೂತ್ರದಿಂ ಸಂಜ್ಞೆಯೊಡನೆ ಪೇೞಲ್ಪಡೆಗುಂ (ಸೂ. ೬೧)
೪....ತೃತೀಯಾದಿಗಣ್ ಪೇೞಲ್ಪಡೆಗುಂ (ಸೂ. ೧೨೦)
೫....ತೃತೀಯೆ ಪೇೞಲ್ಪಡೆಗುಂ (ಸೂ. ೧೩೯)
೬....ಪಿರಿದುಮುಸಹ್ಯವೃತ್ತಿಯೊಳ್ ಪ್ರಯೋಗಿಸೆಪಡುಗುಂ (ಸೂ. ೩೨೫)

ಶಮದ.ದಲ್ಲಿ ೨೬೩ ನೆಯ ಸೂತ್ರ ಕರ್ಮಣಿಪ್ರಯೋಗದ ಕುರಿತು ಹೇಳುತ್ತದೆ. ಕೆಲವು ಹಸ್ತಪ್ರತಿಗಳಲ್ಲಿ ದೊರೆಯದಿರುವುದರಿಂದಲೂ ಕೇಶಿರಾಜನಿಗಿಂತ ನಾಲ್ಕು ಶತಮಾನಗಳಷ್ಟು ಕಿರಿಯನಾದ ಭಟ್ಟಾಕಳಂಕನ ಶಬ್ದಾನುಶಾಸನದ ಸೂತ್ರೋದಾಹರಣೆಗಳು ಇದರ ವೃತ್ತ್ಯುದಾಹರಣೆಗಳಲ್ಲಿ ಉಲ್ಲೇಖಿತವಾಗಿರುವುದರಿಂದಲೂ ಈ ಸೂತ್ರ ಮೂಲತಃ ಶಮದ.ಕ್ಕೆ ಸೇರಿರುವುದಲ್ಲ, ಮತ್ತಿನವರಾರೋ ಸೇರಿಸಿದ ಅಂಶವೆಂದು ಸಂಪಾದಕರು ಸರಿಯಾಗಿಯೇ ನಿರ್ಧರಿಸಿದ್ದಾರೆ. ಕರ್ಮಣಿ, ಕನ್ನಡಕ್ಕೆ ಮೂಲಭೂತವಾಗಿ ಸೇರಿದ ಅಂಶವಾಗಿದ್ದರೆ ಕೇಶಿರಾಜ ಅದನ್ನು ಹೇಳದೆ ಇರುತ್ತಿರಲಿಲ್ಲ. ಆದರೂ ಅವನ ಸ್ವಂತ ಪ್ರಯೋಗದಲ್ಲಿ ಅಂಥ ಪ್ರಯೋಗಗಳು ಬಂದಿರುವಾಗ, ಮೇಲಿನ ಸೂತ್ರ ಮತ್ತೆ ಸೇರ್ಪಡೆಯಾದುದೆಂದರೂ ಕೂಡ, ಕರ್ಮಣಿಪ್ರಯೋಗ ಕನ್ನಡದ ಒಂದಂಗವೇ ಎಂದು ತಿಳಿಯಬೇಕಾದ ನಿರ್ಬಂಧವುಂಟಾಗುತ್ತದೆ. ಕೇಶಿರಾಜ ಭಾಷೆಯ ಮುಖ್ಯ ಪ್ರಕ್ರಿಯೆಯನ್ನು ಹೇಳದೆ ಬಿಟ್ಟನೆಂಬ ಅಪವಾದಕ್ಕೂ ಗುರಿಯಾಗುತ್ತಾನೆ. ಭಟ್ಟಾ

ಕಳಂಕನಿಗಾದರೋ, ಕರ್ಮಣಿಪ್ರಯೋಗ ಕನ್ನಡದಲ್ಲಿದೆಯೆಂಬುದರ ಬಗ್ಗೆ ಸಂದೇಹವೇ ಇಲ್ಲವೆಂಬಂತೆ ಶಬ್ದಾನುಶಾಸನದಲ್ಲಿ ಅದನ್ನು ಸ್ವೀಕರಿಸಿದ್ದಾನೆ.[೩] ಕೆಳಗಿನ a ಮತ್ತು b ಸಾಲಿನ ವಾಕ್ಯಗಳು ಅವನು ಕರ್ಮಣಿ ಪ್ರಯೋಗಕ್ಕೆ ಕೊಟ್ಟ ಉದಾಹರಣೆಗಳು: ಇವು ಸಂಸ್ಕೃತದ ಪ್ರತಿಬಿಂಬಗಳೇ ಹೊರತು ನೈಜವಾದ ಕನ್ನಡದವುಗಳಲ್ಲ.

a. ೧. ತಾನಿರಲ್ಪಟ್ಟಂ ತಾಂ ಇರಲ್ಪಟ್ಟರ್

೨. ನೀನಿರಲ್ಪಟ್ಟಯ್ ನೀಂ ಇರಲ್ಪಟ್ಟಿರ್

೩. ಆನಿರಲ್ಪಟ್ಟೆಂ ಆಂ ಇರಲ್ಪಟ್ಟೆವು

ಇರ್- ಎಂಬ ಅಕರ್ಮಕ ಕ್ರಿಯಾಪದ ಪ್ರಥಮ, ಮಧ್ಯಮ ಮತ್ತು ಉತ್ತಮ ಪುರುಷ ಸರ್ವನಾಮ ಪ್ರತ್ಯಯಗಳೊಂದಿಗೆ ಇಲ್ಲಿ ಪ್ರಯೋಗವಾಗಿದೆ. ಇಲ್ಲಿ ಕರಣ ಕಾರಕ ಸಂಬಂಧದ ತೃತೀಯಾ ವಿಭಕ್ತಿಯ ಪ್ರತ್ಯಯವುಳ್ಳ ನಾಮಪದ ಪ್ರತ್ಯಕ್ಷವಾಗಿಯಾಗಲೀ, ಪರೋಕ್ಷವಾಗಿಯಾಗಲೀ ಬರುವುದಿಲ್ಲ. ಇವು ವೈಯಾಕರಣನ ವಿಕೃತಿಯ ಉದಾಹರಣೆಗಳಾಗುತ್ತವೆಯೇ ಹೊರತು ಸಹಜವಾದ ಕನ್ನಡದವಲ್ಲ. ಬೇರೆ ಉದಾಹರಣೆಗಳು :

b. ೧. ಪಾರ್ವನಿಂ ಅರಸಂ ಗ್ರಾಮಮಂ ಬೇಡಲ್ಪಟ್ಟಂ

೨. ಗೋವಳನಿಂದೆ ಎಮ್ಮೆ ಪಾಲಂ ಕರೆಯಲ್ಪಟ್ಟುದು

೩. ನೋಡಲ್ಪಟ್ಟನರಸನಂಗನೆಯಿಂ

ಈ ವಾಕ್ಯಗಳಲ್ಲಿ ತೃತೀಯಾ ರೂಪ (ಕರಣ ಕಾರಕ)ವುಳ್ಳ ನಾಮಪದ ಸಕರ್ಮಕ ಕ್ರಿಯಾಪದ ಹಾಗೂ ಕರ್ಮಪದಗಳಿದ್ದು, ಕರ್ಮಣಿಪ್ರಯೋಗಕ್ಕಿರಲೇಬೇಕಾದ ಮೂಲಾಂಶಗಳ ಪೂರೈಕೆಯಾಗಿ, a ಸರದಿಯ ವಾಕ್ಯಕ್ಕಿಂತ ಭಿನ್ನರೂಪದಿಂದ ಕೂಡಿದ್ದರೂ ಕರ್ಮಣಿಯೆಂಬುದು ನೈಜತೆಗೆ ದೂರವಾದುದೆಂಬುದು ಸ್ಪಷ್ಟ.

---

೩ ಹದಿನೇಳನೇ ಶತಮಾನಕ್ಕೆ ಸೇರಿದ ಭಟ್ಟಾಕಳಂಕ ಕನ್ನಡ ಬಹಳ ಪ್ರಬುದ್ಧವಾದ ಭಾಷೆ, ಸಂಸ್ಕೃತಕ್ಕೆ ಇದು ಎಲ್ಲ ವಿಧದಲ್ಲೂ ಸರಿಸಾಟಿಯಾಗಿ ನಿಲ್ಲಬಲ್ಲುದು ಎಂಬ ಸ್ಪಷ್ಟ ಅಭಿಪ್ರಾಯವನ್ನು ಹೊಂದಿರುವವನು (ನೋಡಿ: ತ. ಸು. ಶಾಮರಾಯ, ೧೯೭೫, XV. ನರಸಿಂಹಾಚಾರ್ಯರ ಹೇಳಿಕೆಯ ಉಲ್ಲೇಖ). ಆ ಕಾರಣದಿಂದಲೇ ಕನ್ನಡಕ್ಕೆ ಪ್ರೌಢ ವ್ಯಾಕರಣವೊಂದರ ಅಗತ್ಯವಿದೆಯೆಂದು ಬರೆಯಹೊರಟಿದ್ದಾನೆ. ಅದೇ ಉತ್ಸಾಹದಿಂದ, ಸಂಸ್ಕೃತದ ರಚನೆಯಲ್ಲಿ ಏನೆಲ್ಲ ಇವೆಯೋ ಅದೆಲ್ಲವೂ ಕನ್ನಡದ ರಚನೆಯಲ್ಲೂ ಇವೆಯೆಂದು ತೋರಿಸಲು ಮುಂದಾಗುತ್ತಾನೆ. ಕೇಶಿರಾಜ ಮತ್ತು ಭಟ್ಟಾಕಳಂಕರ ದೃಷ್ಟಿಕೋನ ಕನ್ನಡದ ಬಗ್ಗೆ ಬೇರೆ ಬೇರೆಯಾಗಿದೆಯೆಂದು ತಿಳಿಯುತ್ತದೆ. ಕೇಶಿರಾಜನ ಒಲವು ಅಚ್ಚಗನ್ನಡದ ಕಡೆಗೆ; ಇದು ಒಂದು ತರದ ತುಲನಾತ್ಮಕ ವ್ಯಾಕರಣ ದೃಷ್ಟಿ. ಆದರೆ ಭಟ್ಟಾಕಳಂಕನದು ಆಧುನಿಕ ರಚನಾತ್ಮಕ ಭಾಷಾವಿಜ್ಞಾನಿಗಳ ದೃಷ್ಟಿಯಂತೆ. ಒಂದು ಸಮಾಜದ ಸರ್ವ ರೀತಿಯ ಚಟುವಟಿಕೆಯಲ್ಲಿ ಬಳಕೆಯಾಗುವ ಅಖಂಡರೂಪವೇ ಒಂದು ಭಾಷೆ (ಅಂದರೆ – ಅದು ಕನ್ನಡ); ಅದರಲ್ಲಿ ಸ್ವ- ಅನ್ಯವೆಂಬ ತಾರತಮ್ಯಬೇಕಾಗಿಲ್ಲ.

ಕ್ರಿಯೆಯ ಸತಿಸಪ್ತಮಿಯ ರೂಪ ಮತ್ತು ಪಡು ಎಂಬ ಕ್ರಿಯಾಪದದ ಸಂಯುಕ್ತರೂಪ ಒಂದು ರಚನಾವಿಶೇಷವೇ ಹೊರತು ಕರ್ಮಣಿಪ್ರಯೋಗವಲ್ಲ ಎಂಬ ಕಾಲ್ಡ್ವೆಲ್ಲರ ಹೇಳಿಕೆ ತಮಿಳು ವಿದ್ವಾಂಸರಿಗೆ ಒಪ್ಪಿಗೆಯಾಗಿಲ್ಲವೆಂಬುದು ಪ್ರೊ. ಅಗಸ್ತ್ಯಲಿಂಗಂ ಬರೆದ 'ದ್ರಾವಿಡದಲ್ಲಿ ಕರ್ಮಣಿ' ಎಂಬ ಲೇಖನದಲ್ಲಿ ಉಲ್ಲೇಖಿಸಿದ ಆಕರಗಳಿಂದ ತಿಳಿಯುತ್ತದೆ (ಅಗಸ್ತ್ಯಲಿಂಗಂ. ೧೯೬೯. ೧–೨೨). ಅವರೂ ಸಹ ಕರ್ಮಣಿಪ್ರಯೋಗ ತಮಿಳಿಗೆ, ಅಥವಾ ದ್ರಾವಿಡಕ್ಕೆ ಮೂಲಭೂತವಾದುದೆಂದು ತೋರಿಸಿದ್ದಾರೆ. ಅಲ್ಲದೆ, ಕರ್ತರಿರೂಪವೇ ಕರ್ಮಣಿಯನ್ನು ತೋರಿಸುವ ದ್ರಾವಿಡಭಾಷೆಗಳ ವೈಶಿಷ್ಟ್ಯವೆಂಬ ಇತರ ಪಂಡಿತರ ಅಭಿಪ್ರಾಯಗಳನ್ನು ಅಲ್ಲಗಳೆದಿದ್ದಾರೆ (ಇದೇ ಪು. ೪). **ಪರಿವರ್ತನ** ಮತ್ತು ವಾಕ್ಯೋತ್ಪಾದನಾ ವೈಯಾಕರಣರು (Transformational Generative Grammarians) ಕರ್ತರೂಪದಿಂದಲೇ ಕರ್ಮಣಿಯನ್ನು ಉತ್ಪಾದಿಸುತ್ತಾರೆ. ಹೀಗೆ ವ್ಯುತ್ಪತ್ತಿ ಮಾಡುವಲ್ಲಿ 'ಮೊದಲು-ಅನಂತರ' ಎಂಬ ಕಾಲಕ್ರಮವನ್ನು ಆರೋಪಿಸುವುದು ಸರಿಯೇ? ಎಂಬ ಸಂದೇಹವಿದ್ದರೂ ಅಂತರಾಳದ ರೂಪ (underlying form) ಭಾಷೆಗೆ ಮೂಲವಾದುದು ಎಂದು ತಿಳಿದುಕೊಂಡರೆ ಸತ್ಯಕ್ಕೆ ಬಹುದೂರವಾಗದೆಂದು ಕಾಣುತ್ತದೆ. ಹಾಗಿರುವಾಗ, ಕರ್ಮಣಿಪ್ರಯೋಗ ಅತಿಯಾಗಿ ಬಳಕೆಯಲ್ಲಿರುವ ಭಾಷೆಗಳಲ್ಲೂ ಅದು ಕಾಲಾನಂತರದಲ್ಲಿ ರೂಪುಗೊಂಡುದಾಗಿರಬೇಕೆಂಬುದು ಸಿದ್ಧವಾಗುತ್ತದೆ. ಇದು ಭಾಷೆಯಲ್ಲಿ ಮೂಲವಾದುದೋ, ಅಲ್ಲವೋ ಎಂಬ ಪ್ರಶ್ನೆಯನ್ನು ಕೆದಕದೆ, ಭಾಷೆಯ ಮೇಲ್ಮೈಸ್ತರವನ್ನು ಪರಿಶೀಲಿಸುವುದಾದರೆ, ಇಂಡೋ ಆರ್ಯನ್ ಮತ್ತು ಇಂಡೋ ಯುರೋಪಿಯನ್ ಭಾಷೆಗಳಲ್ಲಿ ಅನುಕ್ರಮವಾಗಿ ಅವುಗಳ ಪ್ರತಿನಿಧಿಗಳಾದ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ ಕಾಣುವಂತೆ, ಕರ್ಮಣಿ ಪ್ರಯೋಗಕ್ಕೆ ವಿಶಿಷ್ಟವಾದ ಪ್ರತ್ಯಯಗಳಿವೆ. ಆದರೆ ದ್ರಾವಿಡಭಾಷೆಗಳಲ್ಲಿ ಹಾಗಿಲ್ಲ. ದ್ರಾವಿಡಭಾಷೆಗಳಲ್ಲಿ ಕರ್ಮಣಿಯೆಂದು ಹೇಳಲಾದ ಪ್ರಯೋಗದಲ್ಲಿ ಬರುವ 'ಪಡು' ಎಂಬುದು ಅರ್ಥವತ್ತಾದ ಘಟಕವಲ್ಲದೆ, ರಚನೆಯನ್ನು ತೋರುವ ಪ್ರತ್ಯಯವಲ್ಲ. ಇಂಗ್ಲಿಷಿನಲ್ಲಿ ಕರ್ಮಣ್ಯರ್ಥವನ್ನು ಗುರುತಿಸುವುದಕ್ಕೆ ಬಹುಮಟ್ಟಿಗೆ -en ಎಂಬ ಪ್ರತ್ಯಯವಿದೆ.[೪]

'He was beaten by some one' — <u>-en</u>
'The picture was shown by some one' — <u>n</u>
'I was told by him' — <u>Φ</u>

---

೪ ಕೃದ್ವಾಚಿ ರೂಪಗಳಿಗೂ ಇದೇ ಪ್ರತ್ಯಯ ಇಂಗ್ಲಿಷಿನಲ್ಲಿ ಬರುತ್ತದೆ. ಇದರಿಂದ, ಕೃದ್ವಾಚಿಗಳಿಗೂ ಕರ್ಮಣಿರೂಪಕ್ಕೂ ಆಂತರಂಗಿಕವಾದ ಏನೋ ಸಂಬಂಧವಿರುವಂತೆ ಕಾಣುತ್ತದೆ. ಬಹುಶಃ ಇದೇ ಕಾರಣದಿಂದ ಸಾಪೇಕ್ಷ ಕ್ರಿಯಾಪದದ ರೂಪವನ್ನು ಕರ್ಮಣಿ ರೂಪದಲ್ಲಿ ಭಾಷಾಂತರ ಮಾಡುವಂತೆ ದಾರಿ ತಪ್ಪಿಸಿರಬೇಕು. ಈ ರೀತಿಯ ಭಾಷಾಂತರ ಸರಿಯಲ್ಲವೆಂದು ಅಗಸ್ತ್ಯಲಿಂಗಂ ತೋರಿಸಿಕೊಟ್ಟಿದ್ದಾರೆ. (೧೯೬೯, ೮)

ಕ್ರಿಯಾಪದವು ಯಾವಾಗಲೂ ಸಕರ್ಮಕವಾಗಿರಬೇಕು. ಅಂತರಾಳದ ಕರ್ತರಿರೂಪದ ವಾಕ್ಯದ ಕರ್ತೃ ತೃತೀಯವಾಗಿ ಪರಿವರ್ತನೆಗೊಳ್ಳುತ್ತದೆ. ಸಂಸ್ಕೃತದಲ್ಲಿ –ಯ– ಮತ್ತು ಆತ್ಮನೇ ಪದದ ಪ್ರತ್ಯಯವೂ ಬಂದು ಕರ್ಮಣಿ ಪ್ರಯೋಗವಾಗುತ್ತದೆ. ಉದಾ : 'ಪುಸ್ತಕಂ ರಾಮೇಣ ಪಠ್ಯತೇ' ಎಂಬುದು ಕರ್ಮಣಿರೂಪ. 'ರಾಮಃ ಪುಸ್ತಕಂ ಪಠತಿ' ರಾಮನು ಪುಸ್ತಕವನ್ನೋದುತ್ತಾನೆಂಬುದು ಕರ್ತರಿ ಪ್ರಯೋಗ. ಇಂಗ್ಲಿಷಿನಲ್ಲಿ ಕರ್ಮಣಿ ಪ್ರಯೋಗದಲ್ಲಿ ಸಕರ್ಮಕ ಕ್ರಿಯೆಯೇ ಇರಬೇಕಾದುದು ನಿಯತವಾಗಿದೆ. ಆದರೆ ಸಂಸ್ಕೃತದಲ್ಲಿ ಅಕರ್ಮಕ ಕ್ರಿಯಾರೂಪಕ್ಕೂ ಕರ್ಮಣಿಯ ರೂಪ ಬರುವದು ಸಾಧ್ಯ. ಉದಾ : 'ವೃಕ್ಷಂ ಸ್ಥೀಯತೇ'.

ಸಂಸ್ಕೃತ ಹಾಗೂ ಇಂಗ್ಲಿಷ ಭಾಷೆಗಳಲ್ಲಿ ಕರ್ಮಣಿಪ್ರಯೋಗ ಅನಿರ್ಬಂಧಿತವಾಗಿ ಬರುತ್ತದೆ. ಕ್ರಿಯಾಪದದಿಂದ ಕರ್ತೃವಿನೆಡೆಗೆ ಅವಧಾನ ಹರಿಯುತ್ತದೆಯೋ—ಎಂಬಂಶ ಸ್ಪಷ್ಟವಾಗುವುದಿಲ್ಲ. 'ಪಡು' ಎಂಬ ಕ್ರಿಯಾಪದ ಸೇರಿದ ಕರ್ಮಣಿಪ್ರಯೋಗವೆಂದು ಕೊಳ್ಳುವ ಪ್ರಯೋಗ ಸಾಮಾನ್ಯವಾದ ಕನ್ನಡಮಾತಿನಲ್ಲಿ ಎಂದೂ ಬಳಕೆಯಾಗುವುದಿಲ್ಲ. ಅದರ ಬದಲಿಗೆ ಕರ್ಮಣಿಪ್ರಯೋಗವನ್ನು ಹೋಲುವ, ಅನಿರ್ದಿಷ್ಟ ಕರ್ತೃವಿನ ಕಾರ್ಯವನ್ನು ಹೇಳುವ ಹೊಸವಿಧಾನವೊಂದು ಬಳಕೆಗೆ ಬಂದಿದೆ. ಅಂತಹ ಎಡೆಯಲ್ಲಿ ಕೂಡ ಕ್ರಿಯಾಪದದ ಸತಿಸಪ್ತಮಿ ರೂಪ ಪ್ರಧಾನಪಾತ್ರ ವಹಿಸುತ್ತದೆ. ಉದಾ : ಅವನಿಂದ ಈ ಪುಸ್ತಕವನ್ನು ಬರೆಸಲಾಯಿತು. ಬರೆಸಲ್—ಎಂಬುದು 'ಬರೆ' ಎಂಬುದರ ಪ್ರೇರಣಾರ್ಥಕ ಸತಿಸಪ್ತಮಿ ರೂಪ. ಇದನ್ನು ಕರ್ಮಣಿ ಪ್ರಯೋಗವಾಗಿ ಪರಿವರ್ತಿಸಿದರೆ ಅದು ಸ್ವೀಕೃತ ವಾಕ್ಯವಾಗುವುದಿಲ್ಲ.

*ಅವನಿಂದ ಈ ಪುಸ್ತಕವನ್ನು ಬರೆಸಲ್ಪಟ್ಟಿತು. ಹೀಗಾಗಿ ಮೇಲಿನ ವಾಕ್ಯ ಕರಣ ಸಂಬಂಧವನ್ನು ತೋರುವ ತೃತೀಯೆ[೫], ಹಾಗೂ ಸಕರ್ಮಕ ಕ್ರಿಯೆ ಮುಂತಾದ ಕೆಲವು ಅವಶ್ಯವಾದ ಅಂಶಗಳಿದ್ದೂ ಕರ್ಮಣಿಪ್ರಯೋಗವೆಂಬ ಅಂಕಿತಕ್ಕೆ ಒಳಗಾಗುವುದಿಲ್ಲ.

ವ್ಯಾಕರಣ ರೀತಿಯಲ್ಲಿ ಕರ್ಮಣಿಯನ್ನು ತೋರುವ ಪ್ರತ್ಯಯವಿಲ್ಲ. ಪಡು ಎಂಬ ಸಹಾಯಕಕ್ರಿಯಾಪದದೊಡನಾಗುವ ಕರ್ಮಣಿಪ್ರಯೋಗದ ರಚನೆ ಕೃತಕವೆಂದಾದರೂ, ಕನ್ನಡದಲ್ಲಿ ಕರ್ಮಣಿಯ ಇತರ ಪ್ರಯೋಗಗಳು ಬರುವ ಅನೇಕ ಸಂದರ್ಭಗಳಿವೆ.

(i) ಸಂಸ್ಕೃತ ರೂಪಗಳನ್ನು ಹಾಗೆಯೇ ಪ್ರಯೋಗಿಸುವುದು : '... ಅವರಿಂದ ಚಿತ್ರಿತವಾಗಿದೆ'

'... ಈ ಶತಮಾನದ ಆದಿಯಲ್ಲಿ ಹಲವು ಕ್ರೈಸ್ತ ಮಿಶನರಿಗಳಿಂದ ಹಲವು ಕನ್ನಡ ಪುಸ್ತಕಗಳು ಪ್ರಕಟಿತವಾಗಿವೆ.

... ಈ ನಾಟಕ...ರಿಂದ ರಚಿತವಾಗಿದೆ

---

೫ ತೃತೀಯೆ ವಿವಿಧಕಾರಕ ಸಂಬಂಧಗಳನ್ನು ಪ್ರತಿನಿಧಿಸುತ್ತದೆ. ಅಂತಹ ಸೂಕ್ಷ್ಮ ವ್ಯತ್ಯಾಸಗಳನ್ನು ಇಲ್ಲಿ ಪರಿಗಣಿಸಿಲ್ಲ.

(ii) ಕ್ರಿಯೆಯ ಸತಿಸಪ್ತಮಿರೂಪದೊಡನೆ 'ಆಗು' ಎಂಬ ಕ್ರಿಯಾಪದದ ನಪುಂಸಕ ಲಿಂಗದ ಆಖ್ಯಾತ ಪ್ರತ್ಯಯಗಳು ಸೇರಿದ ರಚನೆಗಳು ಅನಿರ್ದಿಷ್ಟ ಕರ್ತೃತ್ವವನ್ನು ತೋರುವಂತೆ ಪ್ರಯೋಗವಾಗುತ್ತವೆ :

'... ಯೋಗ್ಯ ಕಥೆಗಳಿಗೆ ಬಹುಮಾನ ಕೊಡಲಾಗುವುದು'

'... ವಿದ್ಯಾರ್ಥಿಗಳಿಗೆ ಪಾಠ ಹೇಳಲಾಗುವುದು'

'... ಯುದ್ಧವಿರಾಮವನ್ನು ಸಾರಲಾಯಿತು'

ಈ ಎಲ್ಲ ವಾಕ್ಯಗಳನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸುವಾಗ ಕರ್ಮಣಿಯ ಪ್ರಯೋಗವನ್ನೇ ಬಳಸಬೇಕಾಗುತ್ತದೆ. ಮೇಲಿನ ಉದಾಹರಣೆಗಳಲ್ಲಿ ಸಂಸ್ಕೃತ ರಚನೆಗಳಲ್ಲೆಲ್ಲ ತೃತೀಯಾ ವಿಭಕ್ತಿ(ಕರಣ)ಯಿರುವ ನಾಮಪದವೊಂದಿದೆ. ಅದಿಲ್ಲದ ವಾಕ್ಯಗಳಲ್ಲಿ ಅದನ್ನು ಸೇರಿಸುವುದಾದರೆ. ಕ್ರಿಯೆಯ ಸ್ವರೂಪವೂ ಬದಲಾಗಿ ಅದು ಕಡ್ಡಾಯವಾಗಿ ಪ್ರೇರಣಾರ್ಥಕವಾಗುತ್ತದೆ. ಉದಾ :

'... ಅವರಿಂದ ಬಹುಮಾನ ಕೊಡಿಸಲಾಗುವದು'

'... ವಿದ್ಯಾರ್ಥಿಗಳಿಗೆ ಅವರಿಂದ ಪಾಠ ಹೇಳಿಸಲಾಗುವುದು'

## ಆಧಾರ ಗ್ರಂಥಗಳು :

೧. Agesthialingom, S. 1969, Passive in Dravidian, in *Dravidian Linguistics* (Seminar Papers), Ed : S. Agesthia lingom & N. Kumaraswami Raja, Annamalai University

೨. Caldwell R 1961 (Reprint), *A Comparative Dravidian, or South Indian Family of Languages*, University of Madras.

೩. ನರಸಿಂಹಾಚಾರ್ ಡಿ. ಎಲ್. ೧೯೫೯ (ಸಂ) ಕೇಶಿರಾಜ ವಿರಚಿತ ಶಬ್ದಮಣಿದರ್ಪಣಂ, ಶಾರದಾ ಮಂದಿರ, ಮೈಸೂರು,

೪. ನರಸಿಂಹಾಚಾರ್ಯ ಡಿ. ಎಲ್. ೧೯೫೫ (ಸಂ.) ವಡ್ಡಾರಾಧನೆ. ಶಾರದಾ ಮಂದಿರ, ಮೈಸೂರು

೫. ನರಸಿಂಹಾಚಾರ್ಯ ಆರ್. ೧೯೬೯ (ಪುನರ್ಮುದ್ರಣ) *History of Kannada Language*, Mysore University.

೬. ಪುಟ್ಟಪ್ಪ ಕೆ. ವಿ. (ಪ್ರಸಂ) ೧೯೫೫, ಕನ್ನಡ ಕೈಪಿಡಿ, ಮೈಸೂರು ವಿಶ್ವವಿದ್ಯಾನಿಲಯ.

■ ■

*ಕೆಲವು ವಿಷಯಗಳ ಬಗ್ಗೆ ಮಾಹಿತಿ ನೀಡಿ ಸಹಕರಿಸಿದ ತಮಿಳು, ತೆಲುಗು, ಮಲೆಯಾಳಂ ಮತ್ತು ಸಂಸ್ಕೃತ ವಿಭಾಗದ ನನ್ನ ಮಿತ್ರರಿಗೆ ಕೃತಜ್ಞನಾಗಿದ್ದೇನೆ.

# ಕನ್ನಡದ ಉಪಭಾಷೆಯೊಂದರಲ್ಲಿ ತಾಲವ್ಯೀಕರಣ ಮತ್ತು ಕಂಠ್ಯೀಕರಣ

ಎಂ. ಚಿದಾನಂದಮೂರ್ತಿ

ಗ್ರಂಥಸ್ಥ ದ್ರಾವಿಡಭಾಷೆಗಳಲ್ಲಿ ತಮಿಳು, ಮಲಯಾಳಂ ಮತ್ತು ತೆಲುಗುಗಳು ತಾಲವ್ಯೀಕರಣದ (Palatalizing) ಭಾಷೆಗಳು.[೧] ಕನ್ನಡ ಅತಾಲವ್ಯೀಕರಣದ ಭಾಷೆಯೆಂಬುದು ಎಲ್ಲರಿಗೂ ತಿಳಿದ ವಿಷಯವೇ. ಆ ಮೂರು ಭಾಷೆಗಳಲ್ಲಿ ತಾಲವ್ಯೀಕರಣವು ನಿರ್ದಿಷ್ಟ ಪರಿಸರಗಳಲ್ಲಿ ನಡೆಯುತ್ತದೆಯೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳುವುದು ಅಗತ್ಯವಾಗಿದೆ. ಪೂರ್ವಸ್ವರಗಳಾದ ಇ, ಈ, ಎ, ಏಗಳ ಹಿಂದಿನ [ಕ್–] ಸ್ವನವು ತೆಲುಗಿನಲ್ಲಿ ನಿಯತವಾಗಿ [ಚ್–] ಆಗುತ್ತದೆ. ತಮಿಳು ಮಲೆಯಾಳಗಳಲ್ಲಿ ಅದೇ ಪೂರ್ವಸ್ವರಗಳ ಮುಂದೆ ಮೂರ್ಧನ್ಯವ್ಯಂಜನವಿಲ್ಲದಿದ್ದರೆ, ಪದಾದಿಯ [ಕ್–] ಸ್ವನವು ಹಾಗೇ ಇರುತ್ತದೆಂದೂ, ಮೂರ್ಧನ್ಯವ್ಯಂಜನವಿಲ್ಲದಿದ್ದ ಪಕ್ಷದಲ್ಲಿ ಆ [ಕ್–] ಸ್ವನವು [ಚ್–] ಆಗಿ ಪರಿವರ್ತಿತವಾಗುತ್ತದೆಂದೂ ಸ್ಥೂಲವಾಗಿ ಹೇಳ

* ಈ ಪ್ರಬಂಧದ ಮೂಲ ರೂಪ "A Palatalizing and Veralizing dialect of Kannada" ಎಂಬ ನನ್ನ ಸಂಪ್ರಬಂಧ (International Journal of Dravidian Linguistics, Vol. 1. No. 2. June 1972). ಈಚೆಗೆ ಎಂದರೆ ೧೯–೨–೭೮ ರಂದು ನಡೆಸಿದ ಸಮೀಕ್ಷೆಯಲ್ಲಿ ಹೊಸ ಅಂಶಗಳು ಗೋಚರವಾಗಿ ಅವು ಇಲ್ಲಿ ಸೇರ್ಪಡೆಯಾಗಿವೆ ಎಂಬುದನ್ನು ಇಲ್ಲಿ ಹೇಳುವುದು ಅಗತ್ಯವಾಗಿದೆ. ಆದ್ದರಿಂದ ಈ ಸಂಪ್ರಬಂಧವು ಆ ಹಿಂದಿನ ಬರಹದ ಮುಂದುವರಿದ ರೂಪವಾಗಿದೆ. ಹೆಚ್ಚಿನ ಅಧ್ಯಯನಗಳಿಂದ ಈ ಸಂಪ್ರಬಂಧವನ್ನು ಇನ್ನೂ ಉತ್ತಮಗೊಳಿಸಲು ಅವಕಾಶವಿದೆ (ಸಂಪ್ರಬಂಧ= Research Paper).

೧ ಕಂಠ್ಯಸ್ವನವೊಂದು (ಉದಾ. ಕ್) ತಾಲವ್ಯಸ್ವನವಾಗುವುದೇ (ಉದಾ. ಚ್) ತಾಲವ್ಯೀಕರಣ ಎನ್ನಿಸಿಕೊಳ್ಳುತ್ತದೆ.

ಬಹುದು. ಕನ್ನಡದಲ್ಲಿ ಸಾಮಾನ್ಯವಾಗಿ ಯಾವುದೇ ಪರಿಸರದಲ್ಲೂ ತಾಲವ್ಯೀಕರಣ ವಾಗುವುದಿಲ್ಲ. ಮತ್ತು ಚೆದರು (< ಕೆದರು), ಚೆನ್ (< ಕೆನ್) ಇಂತಹ ರೂಪಗಳು ಬೇರೆ ಭಾಷೆಯೊಂದರಿಂದ ಬಂದಿವೆಯೆಂದು ಭಾವಿಸುವುದೇ ಉಚಿತ.

ಆದರೆ ಕನ್ನಡದ ಉಪಭಾಷೆಯೊಂದರಲ್ಲಿ ತಾಲವ್ಯೀಕರಣವಾಗುವುದು ಬಹು ಅಪೂರ್ವ ಸಂಗತಿಯಾಗಿದೆ ಮತ್ತು ತಾಲವ್ಯೀಕರಣದ ಜೊತೆ, ಅದಕ್ಕೆ ಪ್ರತಿಸ್ಪರ್ಧಿಯೆಂಬಂತೆ ಕಂಠ್ಯೀಕರಣವೂ (Velarization) ನಡೆದಿರುವುದು ಇನ್ನೂ ಹೆಚ್ಚಿನ ಸ್ವಾರಸ್ಯದ ಸಂಗತಿಯಾಗಿದೆ.

ಈ ಉಪಭಾಷೆಯ ಪ್ರಾದೇಶಿಕ ವ್ಯಾಪ್ತಿಯನ್ನು ಇನ್ನೂ ನಿರ್ಧರಿಸಬೇಕಾಗಿದೆ. ಸದ್ಯಕ್ಕೆ ಇದು ಹಾಸನ ಜಿಲ್ಲೆಯ ಕೆಲವು ತಾಲೂಕುಗಳು ಮತ್ತು ಅವುಗಳ ಸುತ್ತಮುತ್ತ ಇರುವ ತಾಲೂಕುಗಳಲ್ಲಿ ಗೋಚರವಾಗಿದೆ. ಹೊಳೆನರಸೀಪುರ, ಚನ್ನರಾಯಪಟ್ಟಣ, ಅರಕಲ ಗೂಡು, ಸಕಲೇಶಪುರ, ಮೂಡಿಗೆರೆ, ಕೃಷ್ಣರಾಜಪೇಟೆ ತಾಲೂಕುಗಳಲ್ಲಿ ಬಹು ಮಟ್ಟಿಗೆ ಹರಿಜನರ ಭಾಷೆಯಲ್ಲಿ ಈ ತಾಲವ್ಯೀಕರಣ ಕಂಡುಬಂದಿದೆಯಾದ್ದರಿಂದ ಈ ಸಾಮಾಜಿಕ-ಪ್ರಾದೇಶಿಕ (Social-cum-regional) ಉಪಭಾಷೆಯ ಪ್ರದೇಶ ಅದೇ ಎಂದು ಸದ್ಯಕ್ಕೆ ಇಟ್ಟುಕೊಳ್ಳಬಹುದು. ಒಂದು ಕಾಲಕ್ಕೆ ಸಮಾಜದ ಮೇಲು ವರ್ಗದ ಜಾತಿಗಳೂ ಅದೇ ಉಪಭಾಷೆಯನ್ನು ಆಡುತ್ತಿದ್ದುವೆಂದೂ, ಆಧುನೀಕರಣದ ಫಲವಾಗಿ ಆ ಜಾತಿಗಳಲ್ಲಿ ಅದು ಮಾಯವಾಗುತ್ತಾ ಬಂದು ಸದ್ಯಕ್ಕೆ ಹರಿಜನರಲ್ಲಿ ಉಳಿದಿದೆಯೆಂದೂ ಅಲ್ಲೂ ಕ್ರಮೇಣ ಮಾಯವಾಗುತ್ತಿದೆಯೆಂದೂ ಹೇಳಲು ಪ್ರಬಲ ಕಾರಣಗಳಿವೆ (ವಿವರಗಳಿಗೆ ಮುಂದೆ ನೋಡಿ). ಅನುಕೂಲಕ್ಕಾಗಿ ಈ ಉಪಭಾಷೆ ಯನ್ನು 'ಹೊಳೆನರಸೀಪುರದ ಉಪಭಾಷೆ' ಯೆಂದು ಕರೆಯೋಣ.[೨]

ಇಲ್ಲಿ ಪೂರ್ವಸ್ವರಗಳಾದ -ಇ, -ಈ, -ಎ, -ಏ ಹಿಂದಿನ [ಕ್-] [ಗ್-] ಗಳು ನಿಯತ ವಾಗಿ [ಚ್-] ಮತ್ತು [ಜ್-] ಆಗುತ್ತವೆ. ಉದಾಹರಣೆಗಳು :

| | | |
|---|---|---|
| ಕಿವಿ | > | ಚಿವಿ |
| ಕಿಟಕಿ | > | ಚಿಟಕಿ |
| ಕೀವು | > | ಚೀವು |
| ಕೆರೆ | > | ಚೆರೆ |
| ಕೆಳಗಿನ | > | ಚೆಳಗಿನ |
| ಕೆಂಪು | > | ಚೆಂಪು |
| ಕೇಳು | > | ಚೇಳು |

೨ ಹೊಳೆನರಸೀಪುರ ಪಕ್ಕದ ಬಾಗಿವಾಳು ಗ್ರಾಮದ ಸಮೀಪದ ಬೆಟ್ಟದ ಸಾತೇನಹಳ್ಳಿ ಎಂಬ ಹಳ್ಳಿಯಲ್ಲಿ ಏಳು ವರ್ಷಗಳ ಹಿಂದೆ ಸಾಮಗ್ರಿ ಸಂಗ್ರಹಣೆ ಮಾಡಿದಾಗ ನನ್ನ ಜೊತೆಯಿದ್ದು ಸಹಕರಿಸಿದ ಶ್ರೀ ಬಿ. ಎಸ್. ಪರ್ವತಯ್ಯ, ಎಂ. ಎ. ಅವರಿಗೆ ನಾನು ಕೃತಜ್ಞನಾಗಿದ್ದೇನೆ.

| | | |
|---|---|---|
| ಕೆನ್ನೆ | > | ಚೆನ್ನೆ |
| ಕೆಂಡ | > | ಚೆಂಡ |
| ಗಿಡ | > | ಜಿಡ |
| ಗಿಣಿ | > | ಜಿಣಿ |
| ಗೀಟು | > | ಜೀಟು |
| ಗೆರೆ | > | ಜೆರೆ |
| ಗೇಣು | > | ಜೇಣು |
| ಗೆಯ್ಯಿ | > | ಜೆಯ್ಯಿ |

ಹೊಳೆನರಸೀಪುರ ತಾಲೂಕಿನಿಂದ ಸಂಗ್ರಹಿಸಿದ ಕೆಲವು ಉದಾಹರಣೆಗಳು ಮೇಲಿನವು. ಇಲ್ಲಿ ಪದಾದಿಯಲ್ಲಿ ಮಾತ್ರ ಕ್–>ಚ್– ಆಗುತ್ತದೆ, ಗ್–>ಜ್- ಆಗುತ್ತದೆ. ಪದಾದಿಯಲ್ಲದ ಕಡೆ ತಾಲವ್ಯೀಕರಣ ಆಗುವುದಿಲ್ಲ. ಕಿಟಕಿ>ಚಿಟಕಿ ಆಗುತ್ತದೆ, *ಚಿಟಚಿ ಆಗುವುದಿಲ್ಲ; 'ರಾಗಿ' ಎಂಬುದು* 'ರಾಜಿ' ಎಂದಾಗುವುದಿಲ್ಲ. ಪೂರ್ವಸ್ವರಗಳ ಮುಂದೆ ಮೂರ್ಧನ್ಯವ್ಯಂಜನವಿದ್ದರೂ ತಾಲವ್ಯೀಕರಣ ನಡೆಯುತ್ತದೆಯೆಂಬುದು ಗಮನಾರ್ಹ (ಉದಾ : ಕೆಂಡ > ಚೆಂಡ, ಗಿಣಿ > ಜಿಣಿ).

ಪೂರ್ವೇತರ ಸ್ವರಗಳ ಹಿಂದಿನ [ಕ್–], [ಗ್–]ಗಳು ಏನೂ ವ್ಯತ್ಯಾಸವಾಗುವುದಿಲ್ಲ. ಉದಾ : ಕಾಲು. ಕಣ್ಣು, ಕೋಲು, ಕುಡ್ಲು, ಗರಿ, ಗೂಡು, ಕುರಿ, ಗೋಡೆ ಇತ್ಯಾದಿ. ತಾಲವ್ಯೀಕರಣ ನಡೆದಿರುವಲ್ಲಿ ಅಪವಾದಗಳೇ ಇಲ್ಲವೆನ್ನಬಹುದು. ಆದರೂ ಒಂದೆರಡು ಉದಾಹರಣೆಗಳು ನಮ್ಮ ಗಮನವನ್ನು ಸೆಳೆಯುತ್ತವೆ. 'ಕೆಯ್' (=hand) ಪದ ನ್ಯಾಯವಾಗಿ *ಚೆಯ್ ಆಗಬೇಕಿತ್ತು. ಆದರೆ ಅದನ್ನು 'ಕಯ್ಯಿ' ಎಂದು ಉಚ್ಚರಿಸುವುದರಿಂದ ಆ ಪದ ತಾಲವ್ಯೀಕರಣಕ್ಕೆ ಒಳಗಾಗಲಿಲ್ಲ. 'ಕಪಾಲ'ವು 'ಚಪಾಲ' ಎಂದಾಗುವುದು ನಿರೀಕ್ಷಿತವಲ್ಲ. 'ಕಪಾಲ'ವನ್ನು ಅದೇ ಅರ್ಥದ 'ಕೆನ್ನೆ'ಯ ಸಾದೃಶ್ಯದಿಂದ 'ಕೆಪಾಲ' ಎಂದು ಹೇಳುತ್ತಿದ್ದ ಪರಿಪಾಠ ಇದ್ದುದರಿಂದಲೋ ಏನೋ ಅದು 'ಚೆಪಾಲ'/'ಚಪಾಲ' ಎಂದಾಯಿತೆಂದು ತೋರುತ್ತದೆ.

ಸಕಲೇಶಪುರ ಸುತ್ತಮುತ್ತಣ ಹರಿಜನರ ಕನ್ನಡದಲ್ಲೂ ತಾಲವ್ಯೀಕರಣ ನಡೆದಿದೆ.[೩] ಸಕಲೇಶಪುರಕ್ಕೆ ಆರೇಳು ಮೈಲಿ ದೂರದ ನಾರ್ವೆ ಗ್ರಾಮದ ಹತ್ತಿರದ ಹರಿಜನರಲ್ಲಿ ಪದಾದಿಯಲ್ಲಿ ಮಾತ್ರ ತಾಲವ್ಯೀಕರಣವಾಗಿದೆ: ಆದರೆ ಆದ್ಯೇತರ ಅಥವಾ ಪದಾದಿ

೩ ಸಕಲೇಶಪುರ ಪ್ರದೇಶದಿಂದ ಸಾಮಗ್ರಿ ಸಂಗ್ರಹಣ ಮಾಡಿದಾಗ ಅಲ್ಲಿಗೆ ಸಮೀಪದ ನಾರ್ವೆ ಗ್ರಾಮದ ಶ್ರೀ ರಾಜಶೇಖರ ನಾರ್ವೆ (ಬಿ. ಎ. ಆನರ್ಸ್) ಅವರಿಂದ ದೊರೆತ ಸಹಕಾರವನ್ನು ಸಂತೋಷದಿಂದ ಸ್ಮರಿಸುತ್ತೇನೆ. ಮತ್ತು ಸಂಗ್ರಹ ಮಾಡುವಾಗ ಜೊತೆಗಿದ್ದ ಸೀನಿಯರ್ ಎಂ. ಎ. ಕನ್ನಡ ವಿದ್ಯಾರ್ಥಿಗಳಿಗೂ, ಸಹೋದ್ಯೋಗಿ ಶ್ರೀ ಕೆ. ಪಿ ಭಟ್ ಎಂ. ಎ. ಅವರಿಗೂ ನಾನು ಕೃತಜ್ಞನಾಗಿದ್ದೇನೆ.

ಯಲ್ಲದ ಪರಿಸರದಲ್ಲಿ ತಾಲವ್ಯೀಕರಣ ಕಾಣಿಸಿಕೊಂಡಿಲ್ಲ. ಉದಾ : ಗೆಜ್ಜೆ>ಜೆಜ್ಜೆ, ಕಿಟಕಿ>ಚಿಟಕಿ, ಕೆನೆ>ಚೆನೆ, ಕೆಂಡ>ಚೆಂಡ, ಕೃಷ್ಣ-ಕಿಷ್ಣ>ಚಿಷ್ಣ. ಕೆಮ್ಮು>ಚೆಮ್ಮು, ಕಿಚಡಿ>ಚಿಚ್ಚಡಿ, ಕೇರು>ಚೇರು, ಕೀಳು>ಚೀಳು, ಕೆಸರು>ಚೆಸರು, ಕೆಂಪನ್ನ>ಚೆಂಪನ್ನ, ಗೀಟು>ಜೀಟು, ಗೆದ್ದಲು>ಜೆದ್ಲೆ, ಜೆಜ್ಲೆ, ಗಿಡ್ಡಮ್ಮ>ಜಿಡ್ಡಮ್ಮ. ಗಿಡಗ>ಜಿಡಗ, ಗೇಣು>ಜೇಣು, ಗೆರಸಿ>ಜೆರಸಿ : ಹೀಗೆ ಉದಾ ಹರಣೆಗಳನ್ನು ಬೆಳಸಬಹುದು. ಹೊಳೆನರಸೀಪುರ ತಾಲೂಕಿನಲ್ಲಿಯಂತೆ ಇಲ್ಲಿಯೂ ಆದ್ಯೇತರ ಜಾಗದಲ್ಲಿ ತಾಲವ್ಯೀಕರಣ ಇಲ್ಲ (ಉದಾ : ಅಡಕೆ, ಅಡುಗೆ, ಅಕ್ಕಿ).

ಆದರೆ, ಸಕಲೇಶಪುರ ಪಟ್ಟಣದ ಸುತ್ತಮುತ್ತ, ಒಂದು ಒಂದೂವರೆ ಮೈಲು ದೂರದ ಹಳ್ಳಿಗಳ ಹರಿಜನರಲ್ಲಿ ಮೇಲಿನಂತೆ ತಾಲವ್ಯೀಕರಣ ನಡೆದಿದೆ; ಜೊತೆಗೆ, ಪದಾದಿ ಯಲ್ಲದ [-ಕ್-], [-ಗ್-] ಗಳೂ ಪೂರ್ವಸ್ವರಗಳ ಹಿಂದೆ ತಾಲವ್ಯೀಕರಣವನ್ನು ಪಡೆದಿವೆ, ಎಂದರೆ ಅನುಕ್ರಮವಾಗಿ ಅವು [-ಗ್-], [-ಜ್-] ಆಗಿವೆ.[೪]

| | | |
|---|---|---|
| ತಂಗಿ | > | ತಂಜಿ |
| ಬೆಂಕಿ | > | ಬೆಂಚಿ |
| ಹೊಗೆ | > | ಹೊಜೆ |
| ಕುಕ್ಕೆ | > | ಕುಚ್ಚೆ |
| ಅಕ್ಕಿ | > | ಅಚ್ಚಿ |
| ಅಂಗಿ | > | ಅಂಜಿ |
| ಅಡಿಕೆ | > | ಅಡಿಚೆ |
| ರಾಗಿ | > | ರಾಜಿ |
| ಮಡಕೆ | > | ಮಡ್ಚೆ |
| ಹುಡುಗಿ | > | ಹುಡ್ಜಿ |
| ಮಕ್ಕಿಗದ್ದೆ | > | ಮಚ್ಚಿಗದ್ದೆ |
| ಕಿಟಕಿ(ಗೆ) | > | ಚಿಟಿಗೆ ~ ಜಿಟಿಜೆ |
| ಕೋಗಿಲೆ | > | ಕೋಜಿಲೆ |
| ಚಿಕ್ಕಿ | > | ಚಿಚ್ಚಿ |
| ಕಾಗೆ | > | ಕಾಜೆ |
| ಹಕ್ಕಿ | > | ಹಚ್ಚಿ |

ಈ ಉಪಭಾಷೆಯಲ್ಲಿ ದ್ವಿತ್ವ-ಕ್ಕ್- ಕೂಡ -ಚ್ಚ್- ಆಗುತ್ತದೆ. 'ಕೇಜಿ' (=Kg.) ಯಂತಹ ಇಂಗ್ಲಿಷ್ ಸ್ವೀಕರಣವೂ 'ಚೇಜಿ' ಆಗಿದೆ. ಗಿರಿಜ, ಗೀತಾ ಎಂಬ ಹೆಸರು ಗಳು ಜಿರಿಜ, ಜೀತಾ ಆಗುತ್ತವೆ: ಕಿತ್ತೂರು ಎಂಬ ಸ್ಥಳನಾಮ ಚಿತ್ತೂರು ಆಗುತ್ತದೆ.

೪ ಈ ಸಾಮಗ್ರಿ ಸಂಗ್ರಹಣದಲ್ಲಿ ನನಗೆ ಶ್ರೀ ಪಿ. ಸಿಂಗಪ್ಪ, ಎಂ. ಎ. ಅವರಿಂದ ಸಹಾಯ ದೊರೆತಿದೆ.

ನಗು > ನಜಿ, ಹೋಗು > ಹೋಜಿ ಎಂಬ ವ್ಯತ್ಯಾಸಗಳು ಮೇಲಿನ ತಾಲವ್ಯೀಕರಣದ ನಿಯಮಕ್ಕೆ ಹೊಂದಿಕೊಳ್ಳುವಂತೆ ಕಾಣಿಸದೆ ಅಪವಾದಗಳಾಗಿ ತೋರುತ್ತವೆ. ಇಲ್ಲೂ ಸಮರ್ಪಕ ವಿವರಣೆ ಅಸಾಧ್ಯವಲ್ಲವೆಂದು ಹೇಳಬಹುದು. 'ನಗು' ಎಂಬರ್ಥದಲ್ಲಿ 'ನಗೆಯಾಡು' ಎಂಬ ಪ್ರಯೋಗ ಉಂಟು ತಾನೇ! 'ನಗೆಯಾಡು' ಎಂಬುದು 'ನಜೆಯಾಡು' ಎಂದಾಗಿದೆ, ಈ ಉಪಭಾಷೆಯಲ್ಲಿ. 'ನಜೆಯಾಡು' ವಿನ ಮೂಲರೂಪ 'ನಜೆ' ಎಂಬುದಾಗಿ ಕಲ್ಪಿತವಾಗಿದೆಯಾದ್ದರಿಂದ, 'ನಜೆ' ಎಂಬುದನ್ನು 'ನಗು'ವಿನಿಂದ ನಿಷ್ಪತ್ತಿ ಮಾಡಬೇಕಾಗಿಲ್ಲ. ಹಾಗೆಯೇ ಹೋಗು–ಹೋಜೆಗೂ ವಿವರಣೆ ಕೊಡಲು ಸಾಧ್ಯ.

ಸಕಲೇಶಪುರಕ್ಕೆ ಹೊಂದಿಕೊಂಡ ಹಳ್ಳಿಗಳಲ್ಲಿ ಮತ್ತು ಅಲ್ಲಿಂದ ಏಳು ಮೈಲಿ ದೂರದ ನಾರ್ವೆ ಗ್ರಾಮದ ಹತ್ತಿರದ ಹಳ್ಳಿಗಳಲ್ಲಿ ಹೀಗೆ ತಾಲವ್ಯೀಕರಣಕ್ಕೆ ಸಂಬಂಧಿಸಿದ ವ್ಯತ್ಯಾಸಗಳು ಎದ್ದು ಕಾಣುತ್ತವೆ. ಇಷ್ಟು ಸಮೀಪದ ಊರುಗಳಲ್ಲೇ ಸ್ವನವ್ಯತ್ಯಾಸಗಳ ಭಿನ್ನತೆ ಕಾಣುವುದು ಆಶ್ಚರ್ಯಕರ ಸಂಗತಿ. ಸಾಕಷ್ಟು ವಿಶಾಲವಾಗಿರುವ ತಾಲವ್ಯೀಕರಣದ ಉಪಭಾಷಾ ಪ್ರದೇಶದಲ್ಲಿ ಒಳ ಉಪಭಾಷೆಗಳಿರುವುದು ಸ್ಪಷ್ಟವಾಗಿದೆ. ಎಂದರೆ, ಯಾವುದನ್ನು ಹೊಳೆನರಸೀಪುರದ ತಾಲವ್ಯೀಕರಣದ ಉಪಭಾಷೆಯೆಂದು ಕರೆದಿದ್ದೇನೆಯೋ ಆ ಉಪಭಾಷಾಪ್ರದೇಶದಲ್ಲಿ ಸೂಕ್ಷ್ಮ ಪ್ರಭೇದಗಳ ಉಪ್ರೋಪಭಾಷೆಗಳಿವೆಯೆಂದಾಯಿತು.

ಈ ತಾಲವ್ಯೀಕರಣ ನಡೆದಿರುವಂತೆಯೇ ಹೊಳೆನರಸೀಪುರ ತಾಲೂಕಿನಲ್ಲಿ ಕಂಠ್ಯೀಕರಣವೂ[೫] ನಡೆದಿರುವುದು ಕನ್ನಡದಲ್ಲೇ ಏಕೆ, ಇಡೀ ದ್ರಾವಿಡಭಾಷೆಗಳಲ್ಲೇ ಅಪೂರ್ವ. ತಾಲವ್ಯೀಕರಣದ ನಿಯಮಗಳೇ ಇಲ್ಲೂ ಅನ್ವಯವಾಗುತ್ತವೆ. ತಾಲವ್ಯಸ್ವನಗಳಾದ ಪದಾದಿಯ [ಚ್–] [ಜ್–] ಗಳು ಪೂರ್ವಸ್ವರಗಳ ಹಿಂದೆ ಕಂಠ್ಯ [ಕ್–] [ಗ್–] ಆಗುತ್ತವೆ. ಉದಾ :

| | | |
|---|---|---|
| ಚೇಳು | > | ಕೇಣು |
| ಚೆಂಬು | > | ಕೆಂಬು |
| ಚೆಚ್ಚು | > | ಕೆಚ್ಚು |
| ಚೆನ್ನಾಗಿ | > | ಕೆನ್ನಾಗಿ |
| ಕೆಲವರು ಚೆನ್ನಾಗಿ ಬೆಳೆ ಮಾಡ್ತಾರೆ | > | ಚೆಲವ್ರು ಕೆನ್ನಾಗಿ ಬೆಳೆ ಮಾಡ್ತಾರೆ |
| ಚೆಂಡಾಲ (=ಚಂಡಾಲ) | > | ಕೆಂಡಾಲ |
| ಚೀಲ | > | ಕೀಲ |

[೫] ಕಂಠ್ಯವಲ್ಲದ ಸ್ವನವೊಂದು ಕಂಠ್ಯವಾಗಿ ಪರಿವರ್ತನೆ ಹೊಂದುವುದೇ ಕಂಠ್ಯೀಕರಣ. ಉದಾಹರಣೆಗೆ [ಚ್] ಸ್ವನವು [ಕ್] ಆಗುವುದು. ಕಂಠ್ಯೀಕರಣ (Velarization)

| | | |
|---|---|---|
| ಜಿರಲೆ | > | ಗಿರಲೆ |
| ಜಿಗಣೆ | > | ಗಿಗಣೆ |
| ಜೀರಿಗೆ | > | ಗೀರಿಗೆ |
| ಜೇನು | > | ಗೇನು |
| ಜೇನ್‌ತುಪ್ಪ | > | ಗೇನ್‌ತುಪ್ಪ |
| ಚೆನ್ನಣ್ಣ | > | ಕೆನ್ನಣ್ಣ |
| ಜರಿ (ಜಿರಿ) | > | ಗಿರಿ |
| ಚಾವಟಿ ಕೋಲು | > | ಕೆಪಟೇ ಕೋಲು ('ಚಾ' ಮೊದಲು 'ಚೆ' ಆಗಿ ನಂತರ 'ಡೆ' ಆಗಿರಬೇಕು). |

ಪದಾದಿಯಲ್ಲದ ಕಡೆ. ಪೂರ್ವೇತರ ಸ್ವರಗಳ ಹಿಂದೆ ಚ್, ಜ್‌ಗಳು ಯಾವುದೇ ವ್ಯತ್ಯಾಸವನ್ನೂ ಪಡೆಯುವುದಿಲ್ಲ (ಕಂಠ್ಯೀಕರಣವು ಸಕಲೇಶಪುರ ತಾಲೂಕಿನಲ್ಲಿ ತೀರ ವಿರಳವಾಗಿ ಕಾಣಿಸಿಕೊಂಡಿದೆ).

ಹೊಳೆನರಸೀಪುರ ತಾಲೂಕಿನಲ್ಲಿ ಕಂಠ್ಯೀಕರಣವು ತಾಲವ್ಯೀಕರಣದಷ್ಟು ನಿಯತವಾಗಿ ನಡೆದಿಲ್ಲ. ಪೂರ್ವಸ್ವರಗಳ ಹಿಂದೆ [ಚ್-] [ಜ್-] ಗಳು ಹಾಗೆ ಉಳಿದಿರುವುದಕ್ಕೆ ಸಾಕಷ್ಟು ಉದಾಹರಣೆಗಳಿವೆ. ಉದಾ : ಚಿನ್ನ, ಚಿಲುಕ, ಜಿಪುಣ, ಜಿಗುಟು, ಚಿಕ್ಕಣ್ಣ. ಜೊತೆಗೆ ತಾಲವ್ಯೀಕರಣ ನಡೆದಿರುವ ಪ್ರದೇಶ ವಿಶಾಲವಾಗಿದೆಯಾದರೆ ಕಂಠ್ಯೀಕರಣವು ಆ ಪ್ರದೇಶದಲ್ಲೇ ಹೊಳೆನರಸೀಪುರ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದೆ.

ಮೇಲಿನ ಎಲ್ಲ ಸಂಗತಿಗಳು ಕೆಲವು ಪ್ರಶ್ನೆಗಳನ್ನು ಮೂಡಿಸುತ್ತವೆ. ತಾಲವ್ಯೀಕರಣ ಯಾವಾಗ ಆಯ್ತು ? ತಾಲವ್ಯೀಕರಣದ ಪ್ರದೇಶದಲ್ಲೇ ಮತ್ತೆ ಒಳವ್ಯತ್ಯಾಸಗಳು ಕಾಣಿಸಿಕೊಳ್ಳಲು ಕಾರಣವೇನು ? ಈ ದಿನ ಹರಿಜನರಿಗೆ ಮಾತ್ರ ತಾಲವ್ಯೀಕೃತ ರೂಪಗಳು ಸೀಮಿತಗೊಂಡಿದ್ದರೂ, ಹಿಂದೆಯೂ ಹಾಗೆಯೇ ಇತ್ತೆ ? ಅಥವಾ ಆ ಪ್ರದೇಶದ ಎಲ್ಲ ಜಾತಿಯ ಜನರಲ್ಲೂ ಆ ರೂಪಗಳು ಬಳಕೆಯಿದ್ದು ಈ ದಿನ ಮೇಲುಜಾತಿಗಳಿಂದ ಅವು ಮಾಯವಾಗುತ್ತ ಬಂದು ಕೆಳಜಾತಿಯಲ್ಲಿ ಅವು ಉಳಿದಿವೆಯೇ ? ತಾಲವ್ಯೀಕರಣಕ್ಕೆ ಅನ್ಯಭಾಷೆಯ ಪ್ರಭಾವವೇನಾದರೂ ಇದೆಯೇ ? ಈ ಎಲ್ಲ ಪ್ರಶ್ನೆಗಳಿಗೆ ಇನ್ನೂ ಹೆಚ್ಚಿನ ಪರಿವೀಕ್ಷಣೆ ನಡೆದು ಇನ್ನೂ ಹೆಚ್ಚು ಪ್ರದೇಶಗಳಿಂದ ಸಾಮಗ್ರಿ ಸಂಗ್ರಹವಾಗುವ ವರೆಗೆ ಸ್ಪಷ್ಟ ಉತ್ತರಗಳನ್ನು ಕೊಡಲು ಸಾಧ್ಯವಿಲ್ಲವಾದರೂ ಇಲ್ಲಿ ಕೆಲವು ಊಹೆಗಳಿಗೆ ಅವಕಾಶವಿದೆ. ಹಾಸನ ಜಿಲ್ಲೆ ಕನ್ನಡಭಾಷೆಯ ಒಳನಾಡಿನಲ್ಲಿರುವುದರಿಂದ ಮತ್ತು ಅಲ್ಲಿನ ಹರಿಜನರು ಕನ್ನಡವನ್ನು ಮಾತನಾಡುವ ಏಕಭಾಷಿಗಳಾಗಿರುವುದರಿಂದ (monolinguals) ತಾಲವ್ಯೀಕರಣಕ್ಕೆ ಅನ್ಯಭಾಷೆಯ ಪ್ರಭಾವವನ್ನು ಹುಡುಕಿ ಪ್ರಯೋಜನವಿಲ್ಲ. ನಾವು ಅನ್ಯಭಾಷೆಯೊಂದರ ಪ್ರಭಾವ

ವನ್ನು ಸಂಪೂರ್ಣವಾಗಿ ತಳ್ಳಿಹಾಕಬಹುದು. ತಾಲವ್ಯೀಕರಣ ಯಾವಾಗ ಆಯ್ತು ಎಂಬುದಕ್ಕೆ ಯಾವುದೇ ಸುಳುಹುಗಳೂ ದೊರಕುವುದಿಲ್ಲ. ಆ ಪ್ರದೇಶದ ಕಳೆದ ಒಂದುಸಾವಿರ ವರ್ಷಗಳ ಶಾಸನಗಳನ್ನು ತಿರುವಿಹಾಕಿದರೂ ಎಲ್ಲೂ ತಾಲವ್ಯೀಕೃತ ರೂಪ ದೊರಕುವುದಿಲ್ಲವಾದ್ದರಿಂದ, ಈ ವ್ಯತ್ಯಾಸ ಆಧುನಿಕಕಾಲದ್ದು ಎಂಬ ತೀರ್ಮಾನಕ್ಕೆ ಬರುವುದು ಅಪಾಯಕಾರಿಯಾದುದು. ಏಕೆಂದರೆ, ಈಗಿನಂತೆಯೇ ಹಿಂದೆಯೂ ತಾಲವ್ಯೀಕೃತರೂಪಗಳು 'ಅಸಾಧು' ಅಥವಾ ಶಿಷ್ಟೇತರ ರೂಪಗಳು ಎಂಬ ಭಾವನೆಯಿದ್ದಿರಬಹುದಾದ್ದರಿಂದ ಆ ರೂಪಗಳು ಶಾಸನಗಳಲ್ಲಿ ಬಳಕೆಯಾಗಿದ್ದಿರ ಲಾರವು. ಆಧುನಿಕಕಾಲ ತಾಲವ್ಯೀಕರಣದ ಆರಂಭವನ್ನು ಹೇಳುತ್ತಿಲ್ಲ, ಅಂತ್ಯವನ್ನು ಹೇಳುತ್ತಿದೆ. ಕೆಳವರ್ಗದವರಲ್ಲಿ, ಅದರಲ್ಲೂ ಹರಿಜನರಲ್ಲಿ ಈ ರೂಪಗಳು ಬಳಕೆ ಯಲ್ಲಿದ್ದು ಅಲ್ಲೂ ಮಾಯವಾಗುತ್ತಿವೆ. ಅವರಲ್ಲಿ ಹಿರಿಯರಾದವರು ಇಂತಹ ಪದಗಳನ್ನು 'ಹಳಗನ್ನಡ'ವೆಂದೋ 'ಹಳೇಮಾತು' ಎಂದೋ ಕರೆಯುತ್ತಾರೆ. ತಾವು ಚಿಕ್ಕವರಾಗಿದ್ದಾಗ ಅವನ್ನು ಬಳಸುತ್ತಿದ್ದುದಾಗಿಯೂ ಅವನ್ನು ಬಳಸಿದರೆ ಈಗಿನ ತಮ್ಮ ಹುಡುಗರೇ ತಮ್ಮನ್ನು ಹಾಸ್ಯಮಾಡುವುದಾಗಿ ತಿಳಿಸುತ್ತಾರೆ. ಆದರೂ ಅವರವರಲ್ಲೇ ಮಾತನಾಡುವಾಗ ಈಗಲೂ ಅವನ್ನು ಬಳಸುತ್ತಿರುವುದಂತೂ ನಿಜ. ಅವರಲ್ಲಿ ಸ್ವಲ್ಪ 'ನಾಗರಿಕ'ರಾದವರ ಬಳಿ ಶಿಷ್ಟರೂಪಗಳೂ ತಾಲವ್ಯೀಕೃತ ರೂಪಗಳೂ ಇದ್ದು ಹೊರಗಿನವರ ಜೊತೆ ಶಿಷ್ಟರೂಪಗಳನ್ನು ಮಾತ್ರ ಬಳಸುತ್ತಾರೆ. ತಾಲವ್ಯೀಕೃತ ರೂಪಗಳೂ ಆಧುನಿಕತೆಯಿಂದಾಗಿ, ಅದರ ಮುಖವಾಣಿಯಾದ ಶಿಷ್ಟಭಾಷೆಯಿಂದಾಗಿ ಕ್ರಮೇಣ ಮಾಯವಾಗುತ್ತಿವೆ.

ತಾಲವ್ಯೀಕರಣವು ಆ ಜಾತಿ ಈ ಜಾತಿಯೆನ್ನದೆ ಒಟ್ಟು ಆ ಇಡೀ ಪ್ರದೇಶವನ್ನೇ ವ್ಯಾಪಿಸಿದ್ದ ಕಾಲವೊಂದನ್ನು ಊಹಿಸಬಹುದು. ಇಂದೂ ಹಳ್ಳಿಯ ಸ್ವಲ್ಪ ಮೇಲ್ವರ್ಗ ದವರಲ್ಲಿ ಎಂದರೆ ಹರಿಜನರಿಗಿಂತ ಮೇಲಿನ ಬ್ರಾಹ್ಮಣೇತರರಲ್ಲಿ ಕೆಲವರಾದರೂ ತಾಲವ್ಯೀಕೃತ ರೂಪಗಳನ್ನು ಬಳಸುತ್ತಿರುವುದು ಈ ಊಹೆಗೆ ಆಧಾರವಾಗಿದೆ. ಬೆಟ್ಟದ ಸಾತೇನಹಳ್ಳಿಯ ಅಂತಹ ಬ್ರಾಹ್ಮಣೇತರರಲ್ಲಿ 'ಜಿಣೆ' (> ಗಿಣಿ), 'ಜಪಾಲ' (< ಕಪಾಲ) ರೂಪಗಳು ದೊರಕಿದುವು. ಅಲ್ಲದೆ, ಅರವತ್ತು ಎಪ್ಪತ್ತು ಮೈಲಿಯ ಫಾಸಲೆಯಲ್ಲಿ, ಹರಿಜನವರ್ಗದಲ್ಲಿ ಮಾತ್ರ ತಾಲವ್ಯೀಕರಣವು ಆರಂಭವಾಗಿ ಆ ವರ್ಗದ ಜನರ ಉಪಭಾಷೆಯಲ್ಲಿ ಮಾತ್ರ ಹಬ್ಬಿತು ಎಂದು ಊಹಿಸಲು ಸಾಧ್ಯವೇ ಇಲ್ಲದ ಮಾತು. ಆದ್ದರಿಂದ ಒಂದುಕಾಲಕ್ಕೆ ಆ ಇಡೀ ಪ್ರದೇಶದಲ್ಲಿ ತಾಲವ್ಯೀಕರಣವು ಪ್ರವರ್ತಿ ಸಿತ್ತೆಂದೂ, ವಿದ್ಯೆ ಹೆಚ್ಚಿ ಶಿಷ್ಟಭಾಷೆಯ ಪ್ರಭಾವಕ್ಕೊಳಗಾಗಿ ಮೇಲ್ವರ್ಗದ ಜನ ಕ್ರಮೇಣ ಆ ಶಿಷ್ಟೇತರ ರೂಪಗಳನ್ನು ಬಿಡುತ್ತಾ ಬಂದರೆಂದೂ, ವಿದ್ಯೆಯಿಂದ ಇನ್ನೂ ದೂರವಿರುವ ತೀರ ಕೆಳವರ್ಗದ ಜನ ಆ ರೂಪಗಳನ್ನು ಉಳಿಸಿಕೊಂಡು ಬಂದಿರುವ ರೆಂದೂ ಹೇಳುವುದೇ ತರ್ಕಬದ್ಧವಾಗಿ ತೋರುತ್ತದೆ. ಆ ಕೆಳವರ್ಗದ ಜನವೂ ಆ ರೂಪಗಳನ್ನು ಕ್ರಮೇಣ ಕೈಬಿಡುತ್ತಿದ್ದಾರೆ.

ತಾಲವ್ಯೀಕರಣ ಎಲ್ಲ ಕಡೆಯಲ್ಲಿಯೂ ಪದಾದಿಯ ಕಂಠ್ಯಗಳನ್ನು (ಕ್, ಗ್) ಮಾರ್ಪಡಿಸಿರುವುದರಿಂದ, ಬಹುಶಃ ಈ ವ್ಯತ್ಯಾಸ ಮೊದಲು ಆ ಇಡೀ ಪ್ರದೇಶವನ್ನು ವ್ಯಾಪಿಸಿತು ಎಂದು ಕಾಣುತ್ತದೆ. ಬಳಿಕ, ಸಕಲೇಶಪುರದ ಸುತ್ತಮುತ್ತಣ ಪ್ರದೇಶದಲ್ಲಿ ಪದಾದಿಯಂತೆಯೇ ತಾಲವ್ಯೀಕರಣವು ಆದ್ಯೇತರ ಜಾಗಕ್ಕೂ ಹಬ್ಬಿರಬೇಕು. ಈ ಕಡೆ, ಹೊಳೆನರಸೀಪುರದ ಪ್ರದೇಶದಲ್ಲಿ ತಾಲವ್ಯೀಕರಣಕ್ಕೆ ಪ್ರತಿಕ್ರಿಯೆಯ ರೂಪದಲ್ಲಿ, ಅದು ಪ್ರವರ್ತಿಸಿದ ಬಳಿಕ ಕಂಠ್ಯೀಕರಣವು ಕಾಣಿಸಿಕೊಂಡಿರಬೇಕು. ಈ ಸಾಪೇಕ್ಷ ಕಾಲಾನುಕ್ರಮಣಿಕೆಯು ( relative chronology ) ಊಹೆಯಾದರೂ ಅಷ್ಟು ನಿರಾಧಾರವಾದುದೇನೂ ಅಲ್ಲವೆಂದು ತೋರುತ್ತದೆ.

ಕಂಠ್ಯೀಕರಣಕ್ಕೆ ಕಾರಣ ಹೀಗಿರಬಹುದು : 'ಕೇಳು' (=to listen), 'ಚೇಳು' (=scorpion) ಈ ವೈದೃಶ್ಯ (contrast) ಮೊದಲು ಸ್ಪಷ್ಟವಾಗಿತ್ತು. ತಾಲವ್ಯೀಕರಣದ ಬಳಿಕ ಕೇಳು > ಚೇಳು ಆದಾಗ, ಆ ಎರಡು ಅರ್ಥಗಳನ್ನು ಬೇರೆಯಾಗಿಡಲು 'ಚೇಳು' (=scorpion) ಎಂಬುದನ್ನು 'ಕೇಳು' (ಕೇಣು) ಎಂದು ಮಾರ್ಪಡಿಸಿರಬಹುದು. ಈ ಪದದಲ್ಲೇ ಮೊದಲು ಕಂಠ್ಯೀಕರಣ ಆರಂಭವಾಯಿತು ಎಂದು ಹೇಳಲು ಸಾಧ್ಯವಿಲ್ಲದಿದ್ದರೂ, ತಾಲವ್ಯೀಕರಣದಿಂದ ಮಾಯವಾದ ವೈದೃಶ್ಯದ ಪುನಃ ಪ್ರತಿಷ್ಠಾಪನೆಯು ಕಂಠ್ಯೀಕರಣಕ್ಕೆ ಕಾರಣವಾಗಿರಬಹುದೆಂಬ ಊಹೆಗಾಗಿ ಮೇಲಿನ ನಿದರ್ಶನವನ್ನು ತೆಗೆದುಕೊಳ್ಳಬೇಕಾಯಿತು. ಕಂಠ್ಯೀಕರಣವನ್ನು ಇನ್ನೊಂದು ದೃಷ್ಟಿಯಿಂದಲೂ ನೋಡಲು ಸಾಧ್ಯವಿದೆ. ಕ್→ಚ್, ಗ್→ಜ್ ಈ ವ್ಯತ್ಯಾಸಗಳು ಮತ್ತೆ ಹಿಮ್ಮುಖವಾಗಿ ಪ್ರವರ್ತಿಸಿ ಚ್→ಕ್, ಜ್→ಗ್ ಆಗಿರುವುದು ಸ್ವನವ್ಯತ್ಯಾಸಗಳು ಕೆಲವುಬಾರಿಯಾದರೂ ವಿಪರ್ಯಯಗೊಳ್ಳುವುದನ್ನು (reciprocate) ಸೂಚಿಸುತ್ತವೆ. ಇದನ್ನು ಸಮರ್ಥಿಸಲು ಕನ್ನಡದ ಬೇರೆ ಉಪಭಾಷೆಗಳಲ್ಲೂ, ಬೇರೆ ಭಾಷೆಗಳಲ್ಲೂ ಉದಾಹರಣೆಗಳು ಉಂಟು. ಆ ಬಗ್ಗೆ ಪ್ರತ್ಯೇಕ ಲೇಖನವೊಂದರಲ್ಲಿ ವಿಸ್ತಾರವಾಗಿ ಚರ್ಚಿಸಲಿದ್ದೇನೆ.

■ ■

# ಕನ್ನಡದಲ್ಲಿ ಆಸ್ಟ್ರೋ – ಏಷಿಯಾಟಿಕ್ ಶಬ್ದಗಳು

ಹಂಪ. ನಾಗರಾಜಯ್ಯ

ಭಾರತಕ್ಕೆ ಹೊರಗಿನಿಂದ ಬಂದ ಭಾಷಾಜನಾಂಗಗಳಲ್ಲಿ ಮುಂಡಾಗಳು ಅಥವಾ ಕೋಲರು ದ್ರಾವಿಡರಿಗಿಂತ ಮೊದಲು ಬಂದರೆಂಬ ಅಭಿಪ್ರಾಯವಿದೆ. ಇವರ ಭಾಷೆಗಳು : ಮುಂಡಾರಿ, ಸಂತಾಲಿ, ಖಿಡಿಯಾ, ಹೋ, ಸೋರ(ಸವಾರ), ಭೂಮಿಜ್, ಬಿರ್‌ಹರ್, ಕೊರ್ಕು. ಭಾರತದಲ್ಲಿ ಅಸ್ಸಾಮಿನ ಆದಿವಾಸಿಗಳಲ್ಲದೆ ಬರ್ಮಾದ ತೈಲಂಗರು ಮತ್ತು ಪಲೌಂಗರೂ ವಾಗಳೂ ಖಾಂಬೋಡಿಯಾದ ಖೇರರೂ ಈ ಮುಂಡಾಭಾಷೆಗಳನ್ನಾಡುತ್ತಾರೆ. ಈ ಭಾಷೆಗಳು ಆಸ್ಟ್ರೋ–ಏಷಿಯಾಟಿಕ್ ಭಾಷಾ ಪರಿವಾರಕ್ಕೆ ಸೇರಿವೆ. ಈ ಭಾಷೆಗಳ ಪ್ರಭಾವ ದ್ರಾವಿಡ ಮತ್ತು ಇಂಡೋ–ಆರ್ಯನ್ ಭಾಷೆಗಳ ಮೇಲೆ ಸಾಕಷ್ಟು ಕಂಡುಬರುತ್ತದೆ. ದ್ರಾವಿಡಭಾಷೆಗಳು ಈ ಆಸ್ಟ್ರೋ–ಏಷಿಯಾಟಿಕ್ ಭಾಷಾಪರಿವಾರದಿಂದ ನೇರವಾಗಿಯೂ ಸಂಸ್ಕೃತದ ಮೂಲಕ ಪರೋಕ್ಷವಾಗಿಯೂ ಹಲವಾರು ಶಬ್ದಗಳನ್ನು ಸ್ವೀಕರಿಸಿವೆ. ಕನ್ನಡ ಶಬ್ದಕೋಶದಲ್ಲಿ ಸಮಾವೇಶಗೊಂಡಿರುವ ಕೆಲವು ಆಸ್ಟ್ರೋ–ಏಷಿಯಾಟಿಕ್ ಶಬ್ದಗಳನ್ನು ಸೂಚಿಸುವುದು ಈ ಲೇಖನದ ಉದ್ದೇಶ.

ಕನ್ನಡ ಸಾಹಿತ್ಯಪರಿಷತ್ತಿನ ವತಿಯಿಂದ ಪ್ರಕಟವಾಗಿರುವ ಬೃಹತ್ ನಿಘಂಟಿನಲ್ಲಿ (ಪುಟ ೧೬೧೮) ಕವಡೆ$_2$ ಶಬ್ದಕ್ಕೆ 'ಕಪರ್ದಿ, ಕಾಕಿಣಿ, ವರಾಟ' ಎಂಬ ಅರ್ಥಗಳನ್ನು ಕೊಟ್ಟಿದ್ದಾರೆ. ಈ ರೀತಿ ಅರ್ಥೈಸಲು ಇರುವ ಆಧಾರವೆಂದು ಮಂಗರಾಜನ ಅಭಿಧಾನ ಕೋಶದಿಂದ (೧೨೨–೯) 'ಕಪರ್ದ ವರಾಟಕಮೆನಲ್ಕವಡೆಯಕ್ಕುಂ' ಎಂಬ ಸಾಲನ್ನು ಉದಾಹರಿಸಿದ್ದಾರೆ. ಕವಡೆ, ಕವಡಿಕೆ ಎಂಬ ಶಬ್ದಗಳಿಗೆ ಪ್ರಯೋಗಗಳು ವಡ್ಡಾರಾಧನೆ (ಪುಟ ೧೧೮), ಶಾಂತಿನಾಥಕವಿಯ ಸುಕುಮಾರಚರಿತೆ (೧೦–೧೧೮ ವ),

ಕನಕದಾಸನ ಮೋಹನ ತರಂಗಿಣಿ (೨೦-೩೯), ರತ್ನಾಕರವರ್ಣಿಯ ಭರತೇಶ ವೈಭವ (೩೬-೮೮) ಮುಂತಾದ ಕೃತಿಗಳಲ್ಲಿ ಸಿಗುತ್ತವೆ.

ಕವಡೆ ಶಬ್ದಕ್ಕೆ ವ್ಯುತ್ಪತ್ತಿಯನ್ನು ಸೂಚಿಸುತ್ತಾ. ಇದು ಸಂಸ್ಕೃತದ ಕಪರ್ದ ಎಂಬ ಶಬ್ದದಿಂದ ಬಂದಿದೆಯೆಂದು ನಮೂದಿಸಿದ್ದಾರೆ. ಈ ನಿಷ್ಪತ್ತಿ ಸಂದೇಹಕರವಾಗಿದೆ.

೧. ಕವಡೆ ಎಂಬುದು ದ್ರಾವಿಡಶಬ್ದವಲ್ಲವೆಂಬುದು ಸರಿಯೆ ?

ಅ. ದ್ರಾವಿಡದಲ್ಲಿ ಜ್ಞಾತಿರೂಪಗಳು ಅಪರೂಪ ಮತ್ತು ಅರ್ವಾಚೀನ.

ಆ. ಇರುವ ಜ್ಞಾತಿರೂಪಗಳಲ್ಲಿ ಸ್ಪಷ್ಟತೆಯಿಲ್ಲ.

೨. ಇದು ಸಂಸ್ಕೃತದ ಕಪರ್ದ ಅಥವಾ ಕಪರ್ದಿಕಾ ಎಂಬ ರೂಪದಿಂದ ನಿಷ್ಪನ್ನಗೊಂಡಿದ್ದರೆ ಸಂಸ್ಕೃತದಲ್ಲಿರುವ ರೂಪಕ್ಕೆ ಅದರ ಜ್ಞಾತಿಭಾಷೆಗಳಲ್ಲಿ ಜ್ಞಾತಿರೂಪಗಳಿರಬೇಕು. ದ್ರಾವಿಡದಂತೆ ಅಲ್ಲಿಯೂ ಜ್ಞಾತಿರೂಪಗಳಲ್ಲಿ ಸಾಮಂಜಸ್ಯವಿಲ್ಲ.

೩. ಹಾಗಾದರೆ ಕವಡೆ ಶಬ್ದ ಬೇರೆ ಮೂಲದಿಂದ ಬಂದಿರಬಹುದು ಎಂಬ ಸಂದೇಹ ಸುಳಿಯುತ್ತದೆ.

ದ್ರಾವಿಡ ಮತ್ತು ಸಂಸ್ಕೃತೇತರ ಅನ್ಯಮೂಲಗಳಲ್ಲಿ ಆಸ್ಟ್ರೋ-ಏಷಿಯಾಟಿಕ್ ಮೂಲ ಹೊಸ ಸಂಬಂಧದ ಸುಳಿವುಗಳನ್ನು ನೀಡುತ್ತದೆ.

ಕವಡೆ ಶಬ್ದದ ಪ್ರಯೋಗಗಳ ಸಂದರ್ಭವನ್ನು ಗಮನಿಸಬೇಕು. ವಿನಿಮಯ ಪದಾರ್ಥವಾಗಿ ಹಣದಂತೆ ಕವಡೆಯನ್ನು ಸಾವಿರವರ್ಷಗಳ ಹಿಂದೆ ಉಪಯೋಗಿಸುತ್ತಿದ್ದರು. ಕವಡೆಗೆ ಧನದ ಮೌಲ್ಯವಿದ್ದುದು ಕರಾವಳಿ ಪ್ರದೇಶಗಳಲ್ಲಿ. ಕವಡೆ ಕರಾವಳಿ ಸಂಸ್ಕೃತಿಗೆ ಸಮುದ್ರ ತೀರದ ವಾಣಿಜ್ಯ ವ್ಯವಹಾರಕ್ಕೆ ಸೇರಿದ್ದು. ಕವಡೆಯನ್ನು (Cypraea moneta) ಹಣವಾಗಿ ಪರಿಗಣಿಸಿದ್ದು ಮೂಲತಃ ಇಂಡೊ-ಯುರೋಪಿಯನ್ ಪದ್ಧತಿಗೆ ಸೇರಿದ್ದಲ್ಲ; ದ್ರಾವಿಡರಲ್ಲೂ ಅಷ್ಟೆ. ಇದು ಆಸ್ಟ್ರೋ-ಏಷಿಯಾಟಿಕ್ ಪರಂಪರೆಗೆ ಸೇರಿದ್ದು. ಆ ಭಾಷಾ ಪರಿವಾರದ ಸಂತಾಲಿ ಮೊದಲಾದ ಭಾಷೆಗಳಲ್ಲಿ ಪೊನ್, ಪನ್ ಎಂದರೆ ಎಂಬತ್ತು (ಸಂಖ್ಯೆ) ಎಂದರ್ಥ. ಅವರ ಲೆಕ್ಕಾಚಾರ ಹೀಗಿದೆ :

ನಾಲ್ಕು ಕಉಡಿ (ಕೌಡಿ)= ೧ ಗಣ್ಡಾ
೨೦ ಗಣ್ಡಾ= ೧ ಪಣ್ ಅಥವಾ ೮೦ ಕಉಡಿ (ಕೌಡಿ)
೪ ಪಣ್ = ಆನ
೪ ಆನ = ೧ ಕಾಹಣ್ (ಕಾಲು ರೂಪಾಯಿ)

ಈ ರೂಪಗಳೂ ಅರ್ಥಗಳೂ, ಕನ್ನಡದ ಸಂದರ್ಭದಲ್ಲಿಟ್ಟಾಗಲೂ ಗಮನಾರ್ಹವಾಗಿದೆ. ಮುಂಡಾ ಭಾಷೆಗಳಲ್ಲಿ ಈ ಆಕೃತಿಗಳಿಗೆ ಜ್ಞಾತಿರೂಪಗಳಿವೆ; ಕನ್ನಡ ಮತ್ತು ಇತರ

ದ್ರಾವಿಡಭಾಷೆಗಳಲ್ಲಿಯೂ, ಸಂಸ್ಕೃತದ ಇತರ ಜ್ಞಾತಿಭಾಷೆಗಳಲ್ಲೂ ಸಂಬಂಧಿಸಿದ ರೂಪಗಳಿಲ್ಲವೆಂಬುದನ್ನು ಮೇಲೆ ಹೇಳಿದ್ದಾಗಿದೆ. ಆದರಿಂದ ಕವಡೆ ಎಂಬ ಶಬ್ದವನ್ನು ಸಂಸ್ಕೃತದ ಕಪರ್ದ ಶಬ್ದದಿಂದ ನಿಷ್ಪನ್ನಿಸದೆ, ಆಸ್ಟ್ರೋ-ಏಷಿಯಾಟಿಕ್‌ನ ಕೌಡಿ ~ ಕಉಡಿ ಶಬ್ದದಿಂದ ನಿಷ್ಪತ್ತಿಸುವುದು ಸೂಕ್ತವೆನಿಸುತ್ತದೆ.

ಇದೇ ರೀತಿಯಾಗಿ ಆಣೆ, ಆಣಿ (ರೂಪಾಯಿಯ ೧/೧೬ ಭಾಗ) ಮುಂತಾದ ಶಬ್ದಗಳನ್ನೂ ಪರ್ಯಾಲೋಚಿಸಬೇಕು. ಪರಿಷತ್ತಿನ ನಿಘಂಟಿನಲ್ಲಿ ಆಣೆ ಶಬ್ದವನ್ನು (೫೯೮) ಮರಾಠಿ –ಆಣಾ ಹಿಂದಿ–ಆನಾ ಶಬ್ದಗಳಿಗೆ ಸಂಬಂಧಿಸಿದ್ದೆಂದು ಸೂಚಿಸಿದ್ದಾರೆ. ಆದರೆ ಇದನ್ನು ಆಸ್ಟ್ರೋ-ಏಷಿಯಾಟಿಕ್=ಆ–ಏ)ನ 'ಆನ' ಶಬ್ದಕ್ಕೆ ಸೇರಿದ್ದೆಂದು ಸೂಚಿಸುವುದು ಸಂಪೂರ್ಣ ಸಮಂಜಸವಾಗಿರುತ್ತದೆ. ಇದರಂತೆ ಕಾಹಣ (೧೭೫೬) ಎಂಬುದನ್ನು ಆ–ಏ. ನ ಕಾಹಾಣ್ ಎಂಬುದರಿಂದಲೂ, ಪಣ (→ಹಣ) ಎಂಬ ಶಬ್ದ ಆ–ಏ ನ ಪಣ್ (ಸಂತಾಲಿ. ಪಣ್ / ಪನ್ / ಪೊನ್) ಎಂಬುದರಿಂದಲೂ ಬಂದಿವೆಯೆಂದು ಧಾರಾಳವಾಗಿ ಹೇಳಬಹುದು. ಮೂಲತಃ ಮುಂಡಾಭಾಷೆಗಳಲ್ಲಿ ಒಂದು ಪಣವೆಂದರೆ ಎಂಬತ್ತು ಕವಡೆಗಳು ಎಂಬರ್ಥವಿದ್ದುದನ್ನೂ ಲಕ್ಷಿಸಬಹುದು.

ಕನ್ನಡದಲ್ಲಿ ಗಂಡಾಗುಂಡಿ ಎಂಬ ಶಬ್ದ ಬಳಕೆಯಲ್ಲಿದೆ. ದುಂಡಾವರ್ತಿ, ಜಗಳಗಂಟಿ ಎಂಬರ್ಥದ ಈ ಶಬ್ದದ ನಿಷ್ಪತ್ತಿಯು ವಿಚಾರವಾಗಿ ಮುಂಡಾಭಾಷೆಯ ರೂಪಗಳು ಬೆಳಕುಚೆಲ್ಲುತ್ತವೆ. ಏಕೆಂದರೆ ಈ ಶಬ್ದದಲ್ಲಿರುವ 'ಗಂಡಾ'ಕ್ಕೂ ಕನ್ನಡದ ಗಂಡ (ಪತಿ) ರೂಪಕ್ಕೂ, 'ಗುಂಡಿ'ಗೂ ಕನ್ನಡದ ಗುಂಡಿ (ಹಳ್ಳ) ರೂಪಕ್ಕೂ ಸಂಬಂಧವಿಲ್ಲ. ದ್ರಾವಿಡದಲ್ಲಿ ಅಥವಾ ಸಂಸ್ಕೃತದಲ್ಲಿ ಇವಕ್ಕೆ ಜ್ಞಾತಿರೂಪಗಳೂ ಇಲ್ಲ. ಆದರೆ ಸಂತಾಲಿ ಮೊದಲಾದ ಮುಂಡಾಭಾಷೆಗಳಲ್ಲಿ ಇವಕ್ಕೆ ಸಂವಾದಿರೂಪಗಳಿವೆ.

ಗಂಡಾ ಎಂಬುದು ಚತುಷ್ಕ, ನಾಲ್ಕರ ಗುಂಪು ಎಂಬರ್ಥದಲ್ಲಿ ಮುಂಡಾಭಾಷೆಗಳಲ್ಲಿ ಬಳಕೆಯಲ್ಲಿದೆ. ಗಂಡಾ / ಗಂಡ / ಗೊಂಡ ಎಂಬ ಮೂರು ಸಮಾನಾರ್ಥಕ ರೂಪಗಳಿವೆ. ಅಲ್ಲದೆ ಗುಂಡಾಗುಂಡ, ಗುಂಡಗುಂಟಿ ಎಂಬ ಸಮಾಸ ರೂಪಗಳಿವೆ; ಇವುಗಳಿಗಿರುವ ಅರ್ಥ ಚೂರುಗಳು, ತುಣುಕುಗಳು, ಪುಡಿಮಾಡಬೇಕಾದ ತುಣುಕಗಳು, ವಿಭಜಿಸು, ಎಣಿಸು–ಎಂಬುದು. ಸಂಸ್ಕೃತದ ಗಂಡಕ (=ವಿಭಾಗ, ಪ್ರತ್ಯೇಕ) ಎಂಬ ರೂಪ ಕೂಡ ಮುಂಡಾರೂಪಗಳಿಂದ ಬಂದಿದೆಯೆಂದು ವಿದ್ವಾಂಸರು ಭಾವಿಸಿದ್ದಾರೆ (ನೋಡಿ : Pre-Aryan and Pre-Dravidian). ಇದರಂತೆ ಕನ್ನಡದ ಗುಂಡಾಗುಂಡಿ ಎಂಬ ಶಬ್ದ ಕೂಡ ಆ–ಏ.ನ 'ಗಂಡಾ(ಡ)ಗುಂಡ' ದಿಂದ ಬಂದಿದೆಯೆಂದು ಸಾಧಾರವಾಗಿ ಭಾವಿಸಬಹುದು. ಕನ್ನಡದ ರೂಪಗಳಲ್ಲಿ ಆಕೃತಿಕ ಮಾರ್ಪಾಟುಗಳು ಘಟಿಸಿಲ್ಲ, ಶಬ್ದಾರ್ಥ ವ್ಯತ್ಯಾಸ ಉಂಟಾಗಿದೆ. 'ವಿಭಜಿಸು' ಎಂಬ ಮೂಲಾರ್ಥದ ಛಾಯೆಯಲ್ಲಿ ಬೆಳವಣಿಗೆಯುಂಟಾಗಿ 'ವಿರಸ ತಂದು ಹಾಕುವುದು, ಒಡಕು ಮೂಡಿಸುವುದು, ಜಗಳಗಂಟಿತನ' ಎಂದು ಹೆಚ್ಚಿನ ಅರ್ಥವಿಕಾಸವಾಗಿದೆ.

ಸೋರೆ(–ಗಿಡ, –ಕಾಯಿ) ಎಂಬರ್ಥದ ಅಲಾಬು ಶಬ್ದವನ್ನು ನಿಘಂಟಿನಲ್ಲಿ (೪೨೫) ಸಂಸ್ಕೃತಮೂಲದಿಂದ ಬಂದಿದೆಯೆಂದು ಹೇಳಿರುವುದು ವಿವಾದಾಸ್ಪದ ವಿವರಣೆಯಾಗುತ್ತದೆ. ಇದು ಕೂಡ ಆ–ಏ.ನ ಮೂಲಕ್ಕೆ ಸೇರಿದ ಶಬ್ದ. ಅಂಗಾರ್ (ರ)ವೂ (=ಇದ್ದಲು, ೧೬) ಸಂಸ್ಕೃತ ಮೂಲಕ್ಕೆ ಸೇರಿದ ಆ–ಏ ಮೂಲಕ್ಕೆ ಸೇರುತ್ತದೆ. ಕಂಬಲ (=ಕಂಬಳಿ, ಉಣ್ಣೆಯ ಉತ್ತರೀಯ ಅಥವಾ ಹೊದಿಕೆ, ೧೨೫೪) ಶಬ್ದಕ್ಕೆ ಕೊಟ್ಟಿರುವ ವ್ಯುತ್ಪತ್ತಿ ಸ್ಥಾನದಲ್ಲಿ ಸಂಸ್ಕೃತವನ್ನು ಆ–ಏ ಮೂಲ ಸ್ಥಳಾಂತರಿಬೇಕು. ಕರ್ಪಸ್, ಕರ್ಪಾಸ (೧೫೭೩), ಕಾರ್ಪಾಸ (೧೭೪.೨) ಈ ಶಬ್ದಗಳು ಮುಂಡಾಭಾಷೆಗಳಿಗೆ ಸೇರಿವೆ. ಹತ್ತಿ, ಹತ್ತಿಯ ಬಟ್ಟೆ ಮತ್ತು ಗಿಡ ಎಂಬರ್ಥದ ಈ ಶಬ್ದಗಳು ಇಂಡೋ–ಆರ್ಯನ್ ಭಾಷೆಗಳಿಗೆ ಆ–ಏ. ಮೂಲದಿಂದ ಬಂದಿವೆಯೆಂದು ಪ್ರಬಲ ಆಧಾರಗಳಿಂದ ಪ್ರತಿಪಾದಿಸಲಾಗಿದೆ. ಕಪೋಲ (=ಕೆನ್ನೆ. ಗಲ್ಲ ೧೫೦೦), ಕಪೋತ (=ಪಾರಿವಾಳ,–ಗೂಡು ೧೫೦೦), ಕದಲಿ (ಳಿ) (=ಬಾಳೆ,_ಗಿಡ ೧೪೭೮), ಉದುಂಬರ (=ಅತ್ತಿಯಮರ, ೯೧೨), ಕಮಟ (=ಆಮೆ ೧೫೧೨), ಕರ್ಕಟ (=ಏಡಿ, ನಳ್ಳಿ) ಕರ್ಕಟೆ (ಡೆ) ಕರ್ಕದ (=ಆಯುಧ ೧೫೬೧)–ಇವುಗಳಿಗೂ ಆ. ಏ. ಮೂಲವನ್ನು ಸೂಚಿಸಬೇಕಾಗುತ್ತದೆ. ಕರ್ಕಡೆ→ಕಕ್ಕಡೆ ಎಂಬ ಆಯುಧವಿಶೇಷ ಏಡಿ ಅಥವಾ ನಳ್ಳಿ ಆಕಾರದ್ದಿರಬೇಕೆಂದು ಈ ಆಧಾರದಿಂದ (ಪರಾ. ಕರ್ಕಟ=ಏಡಿ) ಊಹಿಸಲು ಅವಕಾಶವಿದೆ.

ಕನ್ನಡದಲ್ಲಿ ಬಾವಲಿ ಎಂಬ ಅರ್ಥದಲ್ಲಿ ಕಪ(ಬ)ಟ ಎಂಬ ಶಬ್ದವೂ ಅನೇಕಕಡೆ ಬಳಕೆಯಲ್ಲಿದೆ. ನಿಘಂಟಿನಲ್ಲಿ ಇದಕ್ಕೆ ವ್ಯುತ್ಪತ್ತಿ ತಿಳಿಯದೆಂದೂ (೧೫೦೨), ತೆಲುಗು ಭಾಷೆಯ ಗಬ್ಬಿದಾಯ ಜ್ಞಾತಿರೂಪವಿರಬಹುದೆಂದೂ ಸೂಚಿಸಿದ್ದಾರೆ. ಆದರೆ ಇದು ಆ–ಏ ಶಬ್ದವೆಂದು ತೋರುತ್ತದೆ. ಮುಂಡಾಭಾಷೆಗಳಲ್ಲಿ ಕವತ್ (ಟ್), ಕವ–ಎಂಬ ರೂಪಗಳು (=ಬಾವಲಿ) ಬಳಕೆಯಲ್ಲಿವೆ. ಕನ್ನಡದಲ್ಲಿರುವ ಕಪ್ಪಡಿ, ಕಪಟ(ಟೆ), ಕಪ್ಪಟೆ, ಕಬ್ಬಟೆ —ಎಂಬ ರೂಪಗಳಿಗೆ ಆ–ಏ ಮೂಲರೂಪ ಸಮಂಜಸವಾದ ನಿಷ್ಪತ್ತಿಯನ್ನು ನೀಡುತ್ತದೆ. ಕದಂಬ (=ನೀಪವೃಕ್ಷ ೧೪೭೩) ಶಬ್ದವೂ ಆ–ಏ ಮೂಲಕ್ಕೆ ಸೇರಿದ್ದು. ಇದರಿಂದ ಕನ್ನಡ ನಾಡಿನ ಕುಂತಳ ಪ್ರದೇಶವನ್ನು ಆಳಿದ ಕದಂಬರು ಆ–ಏ ಜನಾಂಗದ ಸಂಬಂಧ ಹೊಂದಿರಬಹುದೆಂದು ಊಹಿಸಲು ಅವಕಾಶವಿದೆ.

ಕನ್ನಡದ ಮೀಸೆ ಎಂಬ ಶಬ್ದಕ್ಕೆ ಇಂಡೋ–ಆರ್ಯನ್ ಶ್ಮಶ್ರು (→ಪ್ರಾಕೃತ, ಮ್ಹುಚ್ಛು) ಎಂಬ ಮೂಲ ಸೂಚಿಸುವುದು ವಾಡಿಕೆ. ತೆಲುಗುಭಾಷೆಯಲ್ಲಿ ಮೀಸ. ತಮಿಳಿನಲ್ಲಿ ಮೀಕೆ/ವೀಶೆ, ಮಲೆಯಾಳದಲ್ಲಿ ಮೀಶೈ/ವೀಶೈ ಎಂಬ ರೂಪಗಳೇನೋ ಇವೆ. ಆದರೆ ಇದು ದ್ರಾವಿಡೇತರ ಶಬ್ದ. ಇದಕ್ಕೆ ಸಂಸ್ಕೃತದ 'ಶ್ಮಶ್ರು' ಎಂಬುದನ್ನು ಜ್ಞಾತಿಯಾಗಿ ಸೂಚಿಸದೆ ಆ–ಏ ಮೂಲವನ್ನು ವ್ಯುತ್ಪತ್ತಿ ಭಾಗದಲ್ಲಿ ತಿಳಿಸುವುದು ಉಚಿತ; ಸೆಮಾಂಗ್ ಭಾಷೆಯಲ್ಲಿರುವ ಮಿಸ್ಯೆ, ಮಲಯ್ ಭಾಷೆಗಳಲ್ಲಿರುವ ಮಿಸ್ಯೆ ಎಂಬುವು ಇದರ ಜ್ಞಾತಿ ರೂಪಗಳು. ರಾತ್ರಿಯಲ್ಲಿ ಹಾಗೇ ಇಡುವ, ತೊಳೆಯದ ಕೊಳೆಬಟ್ಟೆಗೆ ಮುಸಿಬಟ್ಟೆ,

ಮಸಿಪಾಷಡ ಎಂದು ಕರೆಯುತ್ತಾರೆ. ಅಡಿಗೆಮನೆಯಲ್ಲಿ ಮಸಿಬಟ್ಟೆ ಇಲ್ಲದೆ ನಡೆಯುವುದಿಲ್ಲ. ಈ ಶಬ್ದದ ಪೂರ್ವಾರ್ಧವಾದ 'ಮಸಿ' ಎಂಬುದು ಆ-ಪ.ನ ಮೂಲಕ್ಕೆ ಸೇರಿದ್ದೆಂದು ಪರಿಗಣಿಸಬಹುದು (ಪರಾ. ಮಲಯ್ ಭಾಷೆಯ ಬಸಿ).

ಸಂಸ್ಕೃತದ ಮೂಲಕ ಕನ್ನಡಕ್ಕೆ ಇನ್ನೂ ಹತ್ತಾರು ಆ- ಪ. ಶಬ್ದಗಳು ಬಂದು ಸೇರಿವೆ. ಅವುಗಳಲ್ಲಿ ಮುಖ್ಯವಾದ ಶಬ್ದಗಳು: ಅಂಗವಂಗ, ಕೋಸಲತೋಸಲ, ಕಲಿಂಗ ತ್ರಿಲಿಂಗ, ಉತ್ಕಲಮೇಕಲ, ಪುಲಿಂದಕುಲಿಂದ, ತಕ್ಕೋಲಕಕ್ಕೋಲ (-ಇವೆಲ್ಲಾ ದೇಶ ವಾಚಕ ದ್ವಿರುಕ್ತಿಗಳು): ಲಿಂಗ, ಲಾಂಗೂಲ, ತಾಂಬೂಲ, ಬಾಣ, ಪಿನಾಕ (ಪಿನ್+ ಆಕ), ಚೂಚುಕ, ಮಶಕ (=ಸೊಳ್ಳೆ), ನಾರಿಕೇಲ (=ತೆಂಗು), ಜಂಘಾ (=ಕಾಲು, ಪರಾ. ಜಂಘಾಬಲ), ಜಲೂಕ (=ಜಿಗಳೆ), ಭೇಕ (=ಕಪ್ಪೆ), ಪಾಗಲ್ (=ಹುಚ್ಚ), ಘಂಟಾ (=ಗಂಟೆ), ಗಜ (=ಆನೆ), ತಂಡುಲ (=ಅಕ್ಕಿ), ನಿಂಬ (=ಕಹಿಬೇವು), ನಿಂಬು (ಕ), ಜಂಬು (=ನೇರಿಲೆ), ಜಂಬುರ, ಸ್ತಂಬ, ತುಂಬುರು, ಬಾಲ-, ಶಿಂಬಲ (=ಮನುಷ್ಯ ಅಥವಾ ಪ್ರಾಣಿಯ ಕೂದಲು), ಲಾಂಗಲ (=ನೇಗಿಲು), ತಾಂಬೂಲ/ ತಂಬುಲ, ಪ್ರಾಕಾರ, ರಂಭಾ, ಲಾಬು, ಹಾಲಾಹಲ/ಹಲಾಹಲ- ಇತ್ಯಾದಿ. ಮುಂದೆ ಸಿದ್ಧಪಡಿಸುವ ನಿಘಂಟಿನಲ್ಲಿ ಈ ಶಬ್ದಗಳು ಬರುವಾಗ ವ್ಯುತ್ಪತ್ತಿ ಸೂಚಕ ಭಾಗದಲ್ಲಿ ಆ-ವಿ. ಮೂಲವನ್ನು, ಪ್ರಶ್ನಾರ್ಥಕಚಿಹ್ನೆಯೊಡನಾದರೂ ಸರಿಯೆ, ಅವಶ್ಯ ಸೂಚಿಸಬೇಕು.

## ಆಧಾರ ಗ್ರಂಥಗಳು :

೧ Pre- Aryan and Pre- Dravidian (Tr) P. C. Bagchi, Calcutta, 1929

೨ ದ್ರಾವಿಡ ಭಾಷಾವಿಜ್ಞಾನ, ಹಂಪ. ನಾಗರಾಜಯ್ಯ, ದ್ವಿತೀಯ ಮುದ್ರಣ, ೧೯೮೨



# ಭಾಷಾವಿಜ್ಞಾನ ಮತ್ತು ಜಾನಪದವಿಜ್ಞಾನ

ವಿಲ್ಯಂ ಮಾಡ್ತ

ಭಾಷಾವಿಜ್ಞಾನ ಮತ್ತು ಜಾನಪದವಿಜ್ಞಾನ ಇವುಗಳ ಸಂಬಂಧ ದಿನೇದಿನೇ ಹೆಚ್ಚೆಚ್ಚು ಬೆಳಕಿಗೆ ಬರುವುದನ್ನು ನಾವಿಂದು ಗಮನಿಸುತ್ತೇವೆ. ಜಾನಪದವನ್ನು ಕುರಿತು ಭಾಷಾವಿಜ್ಞಾನಿಗಳ ಆಸಕ್ತಿ ೧೯ನೆಯ ಶತಮಾನದ ಆದಿಯಲ್ಲಿಯೇ ಸಾಕಷ್ಟು ಕ್ರಿಯಾಶೀಲವಾಗಿತ್ತು. ಅಂದಿನ ಭಾಷಾವಿಜ್ಞಾನಿಗಳು ಜಾನಪದಕ್ಷೇತ್ರದಲ್ಲಿಯೂ ದುಡಿಯುತ್ತಿದ್ದರು. ಈ ಕಾರಣದಿಂದಲೇ ಜಾನಪದವೈಜ್ಞಾನಿಕ ವಿಶ್ಲೇಷಣೆಯ ಪದ್ಧತಿಗಳೇ ಅಂದಿನಿಂದ ಇಂದಿನ ವರೆಗೂ ಮಾದರಿಗಳಾಗಿ ಉಳಿದಿವೆ. ಉದಾಹರಣಾರ್ಥವಾಗಿ ಜನಪದ ಕತೆಗಳಲ್ಲಿಯ ಪಾಠಾಂತರ(variant)ಗಳ ಭೌಗೋಲಿಕ ವಿತರಣೆ(geographical distribution)ಯನ್ನು ಅಭ್ಯಸಿಸಿ ಅವುಗಳ ಪ್ರಾಕ್-ರೂಪ (proto-form) ವನ್ನು ನಿರ್ಧರಿಸುವ ಫಿನಿಷ್ ಪದ್ಧತಿ (Finnish method) ಭಾಷಾವಿಜ್ಞಾನದ ತೌಲನಿಕ ಪದ್ಧತಿ(comparative method) ಯನ್ನು ಹೋಲುತ್ತದೆಂಬುದನ್ನು ಇಲ್ಲಿ ನೆನಪಿಸಬಹುದು. ಸ್ಟಿಥ್ ಥಾಮ್ಸನನು ಈ ವಿಧಾನವನ್ನು ಅನುಸರಿಸಿದರೂ ಅದನ್ನು ಅನುಸರಿಸುವಲ್ಲಿ ಬಹು ಎಚ್ಚರಿಕೆಯನ್ನು ವಹಿಸಬೇಕೆಂದು ಆತ (೧೯೫೩ : ೨೭೦) ಹೇಳಿದ್ದಾನೆ. ಜನಪದ ಕತೆಗಳು ಇಂಡೋ-ಯುರೋಪಿಯನ್ ಪುರಾಣಗಳ ಜೀರ್ಣರೂಪಗಳೆಂದು ಕೆಲವರು ತಿಳಿದುಕೊಂಡಿದ್ದುದನ್ನು (Sebeok ೧೯೫೩ : ೩೭೮) ಸ್ಮರಿಸಿಕೊಂಡರೆ ಥಾಮ್ಸನನ ಎಚ್ಚರಿಕೆಯ ಮಾತುಗಳ ಅರ್ಥ ಸ್ಪಷ್ಟಗೊಳ್ಳುತ್ತದೆ.

ಇಪ್ಪತ್ತನೆಯ ಶತಮಾನದ ಆದಿಯ ದಶಕಗಳಲ್ಲಿ ಜಾನಪದವಿಜ್ಞಾನ ಮತ್ತು ಭಾಷಾವಿಜ್ಞಾನಗಳು ಕವಲೊಡೆದು ಬೆಳೆಯತೊಡಗಿದರೂ ಆದರ ಪೂರ್ವದಲ್ಲಿ ಬೋಆಸ್ ಮತ್ತು ಆತನ ಅನುಯಾಯಿಗಳು ಅಮೆರಿಕನ್ ಇಂಡಿಯನರ ಕತೆಗಳನ್ನು ಸಂಗ್ರಹಿಸಿ

ಪ್ರಕಟಿಸಿದ್ದರು. ಇವು ಮುಂದೆ ಭಾಷಾವೈಜ್ಞಾನಿಕ ಮತ್ತು ಜಾನಪದವೈಜ್ಞಾನಿಕ ವಿಶ್ಲೇಷಣೆಗಳಿಗೆ ಉತ್ತಮ ವಸ್ತುಗಳಾದುವು. ಇಂತಹ ಸಂಗ್ರಹಕಾರ್ಯ ಬೋಆಸನ ನಂತರ ಅಷ್ಟೊಂದು ತೀವ್ರಗತಿಯಲ್ಲಿ ಸಾಗಲಿಲ್ಲ (Fisher ೧೯೬೩ : ೨೩೮). ಈಗಲೂ ಭಾಷಾವಿಜ್ಞಾನಿಗಳು ಭಾಷಿಕ ದತ್ತಸಂಗ್ರಹಣೆ ಮಾಡುವಾಗ ಜಾನಪದ ಕ್ಷೇತ್ರದಲ್ಲಿ ಕಾಲಿಡಬೇಕಾಗುತ್ತದೆ. ಈ ದಿಸೆಯಿಂದ ಭಾಷಾವಿಜ್ಞಾನ ಮತ್ತು ಜಾನಪದ ವಿಜ್ಞಾನಗಳ ಸಂಬಂಧ ಹೆಚ್ಚುಕಡಿಮೆ ಸದಾ ಉಳಿಯುವುದರಲ್ಲಿ ಸಂದೇಹವಿಲ್ಲ.

ಪ್ರಸ್ತುತ ಶತಮಾನದ ೨೦ ಮತ್ತು ೩೦ ರ ಸುಮಾರಿಗೆ ರಾಚನಿಕ ಪದ್ಧತಿ (structural method) ಯು ಗಾಳಿ ಭಾಷಾವಿಜ್ಞಾನವನ್ನೊಳಗೊಂಡು ಹಲವಾರು ಅಧ್ಯಯನ ಕ್ಷೇತ್ರಗಳಲ್ಲಿ ರಭಸವಾಗಿ ಬೀಸತೊಡಗಿದರೂ ಡಂಡಿಸನ ಅಭಿಪ್ರಾಯದಂತೆ (೧೯೬೪ : ೩೭) ಜಾನಪದ ವಿಜ್ಞಾನಿಗಳಿಗೆ ಅದು ಬಹುಮಟ್ಟಿಗೆ ತಟ್ಟದೆ ಹೋಯಿತು ! ಬಹುಶಃ ಅಂದಿನ ಜಾನಪದ ವಿದ್ವಾಂಸರಿಗೆ ವೈಜ್ಞಾನಿಕತೆ ಬೇಡವಾಗಿತ್ತೊ ಏನೋ (Jacobs ೧೯೬೬ : ೪೧೭) !

ಇತ್ತೀಚೆಗೆ ರಾಚನಿಕ ವಿಶ್ಲೇಷಣೆಯ ಪದ್ಧತಿ ಭಾಷಾವಿಜ್ಞಾನದಲ್ಲಿರುವಂತೆ ಜಾನಪದ ವಿಜ್ಞಾನದಲ್ಲಿಯೂ ಸಾಕಷ್ಟು ಪ್ರಚಾರದಲ್ಲಿ ಬಂದಿದೆ (Pop ೧೯೬೮, Voigt ೧೯೬೮ ಮತ್ತು Drobin ೧೯೬೯). ಈ ಪದ್ಧತಿಯಿಂದಾಗಿ ಜಾನಪದವಿಜ್ಞಾನ ಮತ್ತು ಭಾಷಾವಿಜ್ಞಾನದೊಳಗಿನ ಸಂಬಂಧ ಬೆಳೆದಿದೆಯಲ್ಲದೆ ಎಷ್ಟೋಬಾರಿ ನೇರವಾಗಿ ಭಾಷಾವಿಜ್ಞಾನದ ಪ್ರಭಾವ ಜಾನಪದವೈಜ್ಞಾನಿಕ ವಿಶ್ಲೇಷಣೆಯಲ್ಲಿ ನಾವು ಸಾಕಷ್ಟು ಕಾಣಬಹುದಾಗಿದೆ. ಉದಾಹರಣಾರ್ಥವಾಗಿ ಭಾಷಾವಿಜ್ಞಾನಿಯಿಂದ ಪೈಕನ etic ಮತ್ತು emic ವರ್ಗೀಕರಣವನ್ನು ಡಂಡಿಸ್‌ನು (೧೯೬೨) ಜನಪದ ಕತೆಗಳ ವಿಶ್ಲೇಷಣೆಯಲ್ಲಿ ಬಳಸಿಕೊಂಡಿರುವುದನ್ನು ಗಮನಿಸಬೇಕು.

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ರಾಚನಿಕ ಪದ್ಧತಿಗೆ ಸುವರ್ಣಕಾಲ ಬಂದೊದಗಿತು. ಈ ಪದ್ಧತಿಯ ಮೂಲಕ ಭಾಷಾವಿಜ್ಞಾನದ ಮುನ್ನಡೆಯನ್ನು ನೋಡಿ ಎಲ್ಲ ವಿದ್ವಾಂಸರಿಗೂ ಭಾಷಾವಿಜ್ಞಾನವನ್ನು ಕುರಿತು ಅಭಿಮಾನ ಉಂಟಾಗಿತ್ತು.

> ಸಾಮಾಜಿಕ ವಿಜ್ಞಾನಗಳಲ್ಲಿ ಭಾಷಾವಿಜ್ಞಾನಕ್ಕೆ ಪ್ರತ್ಯೇಕ ಸ್ಥಾನವಿದೆ.... ಉಳಿದವುಗಳಂತೆ ಅದೂ ಒಂದು ಸಾಮಾಜಿಕ ವಿಜ್ಞಾನವಷ್ಟೆ; ಅದು ಎಲ್ಲವುಗಳಿಗಿಂತ ಹೆಚ್ಚು ಮುಂದುವರಿದಿದೆ. ಬಹುಶಃ ಅದೊಂದೇ ವಿಜ್ಞಾನವೆಂದು ಕರೆಯುವ ಅರ್ಹತೆಯನ್ನು ಪಡೆದಿದೆಯಲ್ಲದೆ ತನ್ನದೇ ಆದ ವಸ್ತುಗತ ವಿಧಾನವನ್ನೂ... ಪಡೆದುಕೊಂಡಿದೆ. ಭಿನ್ನಭಿನ್ನ ಸಂಬಂಧಿತ ಶಾಖೆಗಳ ವಿಜ್ಞಾನಿಗಳು ಭಾಷಾವಿಜ್ಞಾನಿಯಿಂದ ಸ್ಫೂರ್ತಿಯನ್ನು ಪಡೆದುಕೊಂಡು ಆತನ ಮುಂದಾಳುತನವನ್ನು ಅನುಸರಿಸಲು ಪ್ರಯತ್ನಿಸುತ್ತಿದ್ದಾರೆ

ಎಂದು ಲೆವಿ-ಸ್ಟ್ರೌಸನು (೧೯೬೩ : ೨೯)ಅಭಿಪ್ರಾಯ ವ್ಯಕ್ತಗೊಳಿಸಿರುವುದನ್ನು ಪ್ರಸ್ತುತ ದಲ್ಲಿ ಜ್ಞಾಪಿಸಿಕೊಳ್ಳಬೇಕು.

ತಾನು ಸಂಗ್ರಹಿಸಿದ ದತ್ತವನ್ನು ಚಿಕ್ಕಚಿಕ್ಕ ಪ್ರತ್ಯೇಕ ಘಟಕಗಳನ್ನಾಗಿ ವಿಭಜಿಸುವಲ್ಲಿ ಭಾಷಾವಿಜ್ಞಾನಿ ಪಡೆದ ಯಶಸ್ಸನ್ನು ನೋಡಿ ಇತರರಂತೆ ಜಾನಪದ ವಿಜ್ಞಾನಿಗಳೂ ಆಶ್ಚರ್ಯಪಟ್ಟರು. ವಿಭಜನಾತ್ಮಕ ವಿಶ್ಲೇಷಣೆಯ ಮಟ್ಟಿಗೆ ಜಾನಪದವಿಜ್ಞಾನದಲ್ಲಿ ಭಾಷಾವೈಜ್ಞಾನಿಕ ಮಾದರಿ ಅತ್ಯಂತ ಅನುಕೂಲವೆಂಬ ಅಭಿಪ್ರಾಯ ಡಂಡಿಸ್ (೧೯೬೪ : ೫೫) ವ್ಯಕ್ತಪಡಿಸಿದ್ದಾರೆ. ಭಾಷಾವೈಜ್ಞಾನಿಕ ಕ್ಷೇತ್ರಕಾರ್ಯದಂತೆ ಜಾನಪದವೈಜ್ಞಾನಿಕ ಕ್ಷೇತ್ರಕಾರ್ಯವೂ ಅತ್ಯಂತ ಮಹತ್ವದ್ದೆಂದೂ ಯಾಕೊಬ್ಸ್ (೧೯೬೬ : ೪೨೧) ಅಭಿಪ್ರಾಯಪಟ್ಟಿದ್ದಾರೆ. ಭಾಷಾವೈಜ್ಞಾನಿಕ ದತ್ತದಂತೆ ಜಾನಪದ ವೈಜ್ಞಾನಿಕ ದತ್ತ ಕೂಡ ಪರಿಮಿತ(finite)ವೆಂಬ ಅಂಶವನ್ನು ಅನೇಕ ವಿದ್ವಾಂಸರು (ನೋಡಿ : Hymes ೧೯೬೮ : ೧೭೫–೬; Sperber ೧೯೭೮ : ೨೦೮) ತೋರಿಸಿ ಕೊಟ್ಟಿದ್ದಾರೆ.

ಭಾಷಾವಿಜ್ಞಾನದಿಂದ ಪ್ರೇರಿತಗೊಂಡ ಜಾನಪದವಿಜ್ಞಾನಿಗಳಲ್ಲಿ ಲೆವಿಸ್ಟ್ರೌಸ್ ಪ್ರಮುಖನು. ಈತ ಭಾಷಾವಿಜ್ಞಾನದ ರಾಚನಿಕಪದ್ಧತಿಯನ್ನು ಮಕ್ಕಾಮಕ್ಕಿಯಾಗಿ ಅನು ಸರಿಸಿಲ್ಲ(Sperber : ೨೦೭)ವೆಂಬುದನ್ನು ಇಲ್ಲಿ ಗಮನಿಸಬೇಕು. ಆತನಿಗೆ ಪುರಾಣ ಗಳಲ್ಲಿಯ ಅಂತರ್ರಚನೆ (deep structure) ಪ್ರಧಾನವೇ ಹೊರತು ಅದರ ಬಹಿ ರ್ರಚನೆ (Surface structure) ಅಲ್ಲ. ಈ ದೃಷ್ಟಿಯಿಂದ ಲೆವಿಸ್ಟ್ರೌಸನು ರಾಚನಿಕ ಭಾಷಾವಿಜ್ಞಾನಕ್ಕಿಂತ ರೂಪಾಂತರ ಭಾಷಾವಿಜ್ಞಾನಕ್ಕೆ ಹತ್ತಿರನಾಗಿದ್ದಾನೆ (Hymes ೧೯೬೮ : ೧೭೬; Buchler and Selby ೧೯೬೮ : ೨೧). ಚೊಮ್‌ಸ್ಕಿ ಯಂತೆ ಈತನಿಗೂ ಉಕ್ತಿ(performance)ಗಿಂತ ಶಕ್ತಿ(competence)ಯೇ ಪ್ರಧಾನ.

ಭಾಷಾವಿಜ್ಞಾನಿಗಳಂತೆ ಜಾನಪದವಿಜ್ಞಾನಿಗಳೂ ಭಾಷೆಯಲ್ಲಿ ಮೇಲು–ಕೀಳುಗಳೆಂಬ ಭಾವನೆಗಳಿಗೆ ಎಡೆಕೊಡದೆ, ಕೇವಲ ಪಂಡಿತರ ಮತ್ತು ಉಚ್ಚಜಾತಿಗಳ ಭಾಷೆಗೆ ಮನ್ನಣೆ ಈಯದೆ ಎಲ್ಲ– ನಗರ ಹಾಗೂ ಗ್ರಾಮೀಣ– ಜನಪದ ಭಾಷೆಗಳಿಗೂ ಮಹತ್ವ ಕೊಡುವುದನ್ನು ಇಲ್ಲಿ ಸ್ಮರಿಸಬೇಕು. ಆಯಾಯ ಜನಪದದಭಾಷೆ ಆಯಾಯ ಜನಪದಜೀವನ(folk-life)ದ ವಾಚಿಕ ಅಭಿವ್ಯಕ್ತಿಯಾಗಿರುವುದರಿಂದ ಜಾನಪದವಿಜ್ಞಾನ ದಲ್ಲಿ ಎಲ್ಲ ಭಾಷೆಗಳಿಗೂ ಸ್ಥಾನವುಂಟು. ಪ್ರತಿಯೊಂದು ಭಾಷೆಯೂ ಆಯಾಯ ಜನ ಪದದ ಮಹತ್ವಪೂರ್ಣ ಸಾಧನೆಯೆಂದು ಜಾನಪದವಿಜ್ಞಾನ ಪರಿಗಣಿಸುತ್ತದೆ (Hymes ೧೯೭೧ : ೪೮)

ಭಾಷೆ, ಸಂದರ್ಭ (con-text)ವನ್ನವಲಂಬಿಸಿ ಭಿನ್ನತೆಯನ್ನು ಪಡೆಯುವಂತೆ ಜಾನ ಪದದ ಕೆಲವು ಅಂಶಗಳು (ಉದಾ : ಕತೆ, ಗಾದೆ) ಉಕ್ತಿಯ ಹಂತದಲ್ಲಿ ಭಿನ್ನತೆ

ಯನ್ನು ಪಡೆದುಕೊಳ್ಳುತ್ತವೆಯಾದರೂ ಅವುಗಳಲ್ಲಿ ಸಾರ್ವತ್ರಿಕಗಳೂ (universals) ಸಾಕಷ್ಟು ಪ್ರಮಾಣದಲ್ಲಿ ಸಿಗುತ್ತವೆ (Jacobs ೧೯೭೦ : ೧೯೨). ಆದುದರಿಂದ ಭಾಷಾವಿಜ್ಞಾನದಲ್ಲಿರುವಂತೆ ಜಾನಪದವಿಜ್ಞಾನದಲ್ಲಿಯೂ ಸಾರ್ವತ್ರಿಕ ಅಧ್ಯಯನಕ್ಕೆ ಆಸ್ಪದವಿದೆ.

ಸಮಾನ ಆಂತರಿಕರಚನೆಯುಳ್ಳ ಕತೆಗಳನ್ನು ಬೆಳೆಯಿಸುವಾಗ ಆ ಕತೆಯ ರಚನಾ ವಿನ್ಯಾಸ(taxonomy)ವನ್ನು ತಿಳಿದುಕೊಂಡಿರಬೇಕಾಗುತ್ತದೆ. ಕಥಾರೀತಿಯನ್ನವ ಲಂಬಿಸಿ ಸಮಾನಾರ್ಥಕ(equivalent)ಗಳನ್ನು ವಾಕ್ಯಮಾಲಾಕ್ರಮದಲ್ಲಿ (syntagmatically) ಜೋಡಿಸಿ ಕಥೆಯ ಬೆಳವಣಿಗೆಯನ್ನು ಸಾಧಿಸಬೇಕಾಗುತ್ತದೆ. ಈ ಹಂತ ದಲ್ಲಿ ಭಾಷಾವಿಜ್ಞಾನ ಮತ್ತು ಜಾನಪದವಿಜ್ಞಾನ ಪರಸ್ಪರ ಪೂರಕವಾಗಿರುತ್ತವೆಂಬುದು ನಿರ್ವಿವಾದ.

ಜಾನಪದವೈಜ್ಞಾನಿಕ ವಿಶ್ಲೇಷಣೆಯಲ್ಲಿ ವಾಕ್ಯ ಬೃಹದ್ಘಟಕ (macro-segment) ಅಲ್ಲ; ಆದರೆ ಭಾಷಾವಿಜ್ಞಾನದಲ್ಲಿ ಇತ್ತೀಚಿನ ವರೆಗೆ ಅದು ಬೃಹದ್ಘಟಕವಾಗಿತ್ತು. ಈಗ ಭಾಷಾವಿಜ್ಞಾನಿಗಳು ವಾಕ್ಯಾತೀತ (beyond the sentence) ವಿಶ್ಲೇಷಣೆ ಮಾಡುವುದನ್ನು ನಾವು ಕಾಣಬಹುದು (Hendricks, ೧೯೬೭ : ೧೨-೫೧). ಸರ್ವ ನಾಮಗಳ ವಿಶ್ಲೇಷಣೆ ಮಾಡುವಲ್ಲಿ ಕೂಡಾ ನಾವು ವಾಕ್ಯದ ಎಲ್ಲೆಯನ್ನು ಮೀರಬೇಕಾ ಗುತ್ತದೆ. ಉದಾಹರಣಾರ್ಥವಾಗಿ :

೧. ನನ್ನ ಮಗಳಿಗೆ ಏಳು ವರ್ಷ.
೨. ಅವಳು ಎರಡನೆಯ ತರಗತಿಯಲ್ಲಿ ಕಲಿಯುತ್ತಾಳೆ.

ಮೇಲಿನ ಎರಡನೆಯ ವಾಕ್ಯದಲ್ಲಿ "ಅವಳು" ಎಂಬ ಸ್ತ್ರೀವಾಚಕ ತೃತೀಯ ಸರ್ವನಾಮ ವೇಕೆ ? (*ಅವನು/*ಅದು) ಎಂಬುದನ್ನು ತಿಳಿಯಬೇಕಾದರೆ ಮೊದಲಿನ ವಾಕ್ಯದ ವಿಶ್ಲೇ ಷಣೆ ನಡೆಯಬೇಕಾಗುತ್ತದೆ (Halliday, ೧೯೬೪ : ೩೦೨). ಈ ಸಂದರ್ಭದಲ್ಲಿ ವಾಕ್ಯಾತೀತ ವಿಶ್ಲೇಷಣೆಗೆ ಭಾಷಾವಿಜ್ಞಾನ ಬಹುಮಟ್ಟಿಗೆ ಜಾನಪದವಿಜ್ಞಾನಕ್ಕೆ ಋಣಿ ಯಾಗಿದೆಂಬುದನ್ನು ಹೇಳಬೇಕಾಗುತ್ತದೆ.

ಭಾಷಾವೈಜ್ಞಾನಿಕ ವಿಶ್ಲೇಷಣೆಯಲ್ಲಿ ಭಾಷೆಯ ಪಾಠ (text)ಕ್ಕೆ ಮಹತ್ವ ಸಿಕ್ಕಿದೆಯೇ ಹೊರತು ಅದರ ಅನಿವಾರ್ಯಾಂಗವಾದ ಸಂದರ್ಭಕ್ಕಲ್ಲ. ಆದರೆ. ಸಂದರ್ಭವನ್ನು ಬಿಟ್ಟು ಭಾಷೆ ಇರಲಾರದು. ಜಾನಪದವಿಜ್ಞಾನ ಭಾಷೆಯ ಸಂದರ್ಭಕ್ಕೆ ಮಹತ್ವವನ್ನೀಯು ವುದರಿಂದ ಭಾಷಾಧ್ಯಯನದಲ್ಲಿ ಜಾನಪದ ವಿಜ್ಞಾನ ಮತ್ತು ಭಾಷಾವಿಜ್ಞಾನ ಪರಸ್ಪರ ಆನುಷಂಗಿಕಗಳು. ಜನಪದದೊಡನೆ ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಬಂಧ ಗಳನ್ನು ಇಟ್ಟುಕೊಂಡು ಭಾಷೆಯನ್ನು ಅರ್ಥೈಸುವ etic ಪ್ರಯತ್ನ ಜಾನಪದ ವಿಜ್ಞಾನದ್ದಾದರೆ ಭಾಷೆಯನ್ನಷ್ಟೇ ಸ್ವೀಕರಿಸಿ ಅದರ ವ್ಯಾಕರಣವನ್ನು ಗಮನಿಸುವ emic

ಪ್ರಯತ್ನ ಭಾಷಾವಿಜ್ಞಾನದ ರೂಢಿಯಾಗಿದೆ. ಭಾಷೆ ಕೇವಲ ವಿಚಾರಗಳ ವಹನವಲ್ಲ; ಅದು ಜನಪದ ಜೀವನದ ಅಭಿವ್ಯಕ್ತಿಯ ವಾಹಕವೂ ಹೌದು. ಈ ದೃಷ್ಟಿಕೋನವನ್ನು ಗಮನದಲ್ಲಿಟ್ಟು ಭಾಷೆಯ ಅಧ್ಯಯನ ಮೌಖಿಕಕಲೆ (Verbal art)ಗೆ ಪ್ರಾಧಾನ್ಯತೆಯನ್ನಿತ್ತ ಜಾನಪದವಿಜ್ಞಾನ ಮಾಡುತ್ತದೆಯೇ ವಿನಹ ಭಾಷಾವಿಜ್ಞಾನವಲ್ಲ.

ಭಾಷೆಯಾಗಲಿ ಸಂಸ್ಕೃತಿಯಾಗಲಿ ಜನಪದಜೀವನದ ಅಂಶವೇ ಹೊರತು ಅದೇ ಜನಪದ ಜೀವನವಲ್ಲ. ವಸ್ತುಸ್ಥಿತಿ ಹೀಗಿರುವಾಗ ಅವು ಜನಪದಜೀವನದ ಪ್ರತಿಬಿಂಬ (reflex of folk-life) ಆಗಲಾರವು. ಆದ್ದರಿಂದ ಜನಪದಜೀವನದ ಅಧ್ಯಯನದಲ್ಲಿ ಅವು ಪರಸ್ಪರ ಪೂರಕವಾಗಬಲ್ಲುವೇ ಹೊರತು ವೈಯಕ್ತಿಕವಾಗಿ ಸಮಗ್ರತೆಯನ್ನು ನೀಡಲಾರವು.

ಭಾಷೆಯ ಬಳಕೆ ಎಲ್ಲ ಜನಪದಗಳಲ್ಲಿ ಏಕರೀತಿಯಾಗಿರುವುದಿಲ್ಲ. ಕೆಲವರು ವಿಶೇಷ ಉದ್ದೇಶವಿಲ್ಲದೆ ಅರ್ಥಾತ್ ಮಾತಾಡುವುದಕ್ಕೋಸ್ಕರ ಮಾತಾಡಬಹುದು (Phatic Speech ನೋಡಿ Malinowski, ೧೯೨೩); ಕೆಲವರಿಗೆ ಸ್ವಭಾಷೆಯಲ್ಲಿ ಸಲಿಲವಾಗಿ ವಿವರಿಸುವ ಸಾಮರ್ಥ್ಯವಿಲ್ಲದಿರಬಹುದು (Samarin, ೧೯೬೯ : ೩೨೩); ಕೆಲವರು ಅತ್ಯಗತ್ಯ ಸಂದರ್ಭಗಳಲ್ಲಷ್ಟೇ ಮಾತನ್ನು ಬಳಸುತ್ತಿರಬಹುದು (Hymes, ೧೯೭೧ : ೪೪): ಕೆಲವರು ನಾಲ್ವತ್ತು ವರ್ಷಗಳು ದಾಟಿದ ಬಳಿಕ ಹೆಚ್ಚುಕಡಿಮೆ ಮಾತನಾಡುವುದದನ್ನು ನಿಲ್ಲಿಸಿ ಹಾವಭಾವಗಳ ಮೂಲಕವೇ ಸಂಪರ್ಕವನ್ನು ನಡೆಯಿಸಿಕೊಳ್ಳುವ ಪ್ರಯತ್ನ ನಡೆಯಿಸುತ್ತಿರಬಹುದು (Gardner, ೧೯೬೬). ಹೀಗೆ ಎಷ್ಟೋ ಜನಪದಗಳಲ್ಲಿ ಭಾಷೆಗಿಂತ ಹಾವಭಾವ ಅಭಿನಯಗಳೇ ಸಂಸ್ಕೃತಿಯ, ಆಲೋಚನೆಗಳ ವಹನವಾಗಿರುವುದನ್ನು ವಿದ್ವಾಂಸರು ತಮ್ಮ ಕ್ಷೇತ್ರಕಾರ್ಯದ ಮೂಲಕ ಗುರುತಿಸಿದ್ದಾರೆ *(cf. Supra dicta)*.

ಭಾಷಾವಿಜ್ಞಾನಿಗಳ ಅಭಿಪ್ರಾಯದ ಪ್ರಕಾರ ಭಾಷೆಯೆಂಬುದು ನಿತ್ಯ ಅರ್ಥಪೂರ್ಣ; ಮಾನವ, ಸ್ವಭಾಷೆಯನ್ನು ಎಲ್ಲ ಸಂದರ್ಭಗಳಲ್ಲಿಯೂ ಸಲಿಲವಾಗಿ ಬಳಸಬಲ್ಲ (Hockett, ೧೯೫೮ : ೫೩೫); ಆತನಿಗೆ ಭಾಷೆಯೆಂಬುದು ಅತ್ಯಾವಶ್ಯಕವಾದ ಸಂಪರ್ಕಸಾಧನ Sapir, ೧೯೩೩ : ೧೫೫-೧೬೯). ಈ ಎಲ್ಲ ಅಭಿಪ್ರಾಯಗಳೂ, ಈಗಾಗಲೇ ತೋರಿಸಿಕೊಟ್ಟಂತೆ, ಹೆಚ್ಚುಕಡಿಮೆ ಸುಳ್ಳಾಗಿವೆ ! ಸಂದರ್ಭವನ್ನು ಹೊರತುಪಡಿಸಿ ಆ ಮಾತುಗಳನ್ನಾಡಿರುವುದೇ ಇದಕ್ಕೆ ಕಾರಣ. ಭಾಷಾವಿಜ್ಞಾನದ ಈ ದೋಷವನ್ನು ಜಾನಪದವಿಜ್ಞಾನ ಜಾನಪದದ ಸಾಂದರ್ಭಿಕ *(in Situ)* ಅಧ್ಯಯನದಿಂದಾಗಿ ನೀಗಿಸುತ್ತದೆ.

ಚೊಮ್‌ಸ್ಕಿಯ ಸಿದ್ಧಾಂತದ ಪ್ರಕಾರ ಭಾಷಾವಿಜ್ಞಾನ ಭಾಷೆಯ ಉತ್ಪಾದಕತೆ (creativity)ಗೆ ಗಮನವನ್ನೀಯುತ್ತದೆ. ಉತ್ಪಾದಿತ ವಾಕ್ಯಗಳ ಔಚಿತ್ಯ (appropriateness)ವನ್ನು ಅದು ಲಕ್ಷಿಸಿದಂತಿಲ್ಲ ! ವಾಕ್ಯ ಮತ್ತು ಅದರ ಸಂದರ್ಭಗಳ ನಡು

ವಿನ ಸಂಬಂಧವೇ ಔಚಿತ್ಯವನ್ನು ನಿರ್ಧರಿಸುವುದರಿಂದ ಜಾನಪದವಿಜ್ಞಾನದಲ್ಲಿ ಔಚಿತ್ಯದ ಅಧ್ಯಯನಕ್ಕೆ ತುಂಬಾ ಅವಕಾಶವುಂಟು. ಉದಾಹರಣೆಗೆ

೩. ಹೋಗಿ ಬರುತ್ತೇನೆ.

೪. ಚೆನ್ನಾಗಿದ್ದೀರಾ ?

ಎಂಬೀ ವಾಕ್ಯಗಳ ಔಚಿತ್ಯ ಸ್ಫುಟಗೊಳ್ಳುವುದು, ಅವುಗಳ ವ್ಯಾಕರಣಾತ್ಮಕ ವಿಶ್ಲೇಷಣೆಯಿಂದಲ್ಲ. ಯಾವ ಸಂದರ್ಭದಲ್ಲಿ ಆ ಮಾತುಗಳು ಆಡಲಾಗಿವೆ ಎಂಬುದೇ ಅವುಗಳ ಅರ್ಥ ನಿರ್ಣಯಿಸುತ್ತವೆ. ಅಂತೆಯೇ

೫. ಟಾಟಾ.

೬. ಬಯ್ಬ್ಯಾಯ್.

ಇತ್ಯಾದಿ ಔಪಚಾರಿಕ ಮಾತುಗಳ ಅರ್ಥ ಜಾನಪದ ವೈಜ್ಞಾನಿಕ ವಿಶ್ಲೇಷಣೆಯಿಂದ ಮಾತ್ರ ತಿಳಿದುಕೊಳ್ಳಬಹುದಾಗಿದೆ.

ಸಂಕ್ಷಿಪ್ತವಾಗಿ ಹೇಳುವುದಾದರೆ ಭಾಷೆಗೆ ವ್ಯಾಕರಣ, ರೀತಿ, ಸಂದರ್ಭ. ಔಚಿತ್ಯಾದಿ ಹಲವು ಮುಖಗಳಿರುವುದರಿಂದ ಭಾಷಾಧ್ಯಯನದಲ್ಲಿ ವ್ಯಾಕರಣಕ್ಕೆ ಮಹತ್ವವನ್ನೀಯುವ ಭಾಷಾವಿಜ್ಞಾನದ ಜೊತೆಯಲ್ಲಿ ಅದರ ಸಂದರ್ಭಾದಿಗಳಿಗೆ ಪ್ರಾಧಾನ್ಯತೆಯನ್ನೀಯುವ ಜಾನಪದವಿಜ್ಞಾನಕ್ಕೂ ಪ್ರಮುಖ ಸ್ಥಾನವಿದೆ. ಭಾಷಾಧ್ಯಯನದಲ್ಲಿ ಅವೆರಡೂ ಪರಸ್ಪರ ಪೂರಕವಾಗಿ ಕಾರ್ಯವೆಸಗುತ್ತವೆ. ಈ ಕಾರ್ಯದಲ್ಲಿ ಭಾಷಾವಿಜ್ಞಾನ ಜಾನಪದವಿಜ್ಞಾನದ ನೆರವನ್ನು ಪಡೆಯುವಂತೆ ಜಾನಪದವಿಜ್ಞಾನ ಭಾಷಾವಿಜ್ಞಾನದ ಸಹಾಯವನ್ನು ಪಡೆದುಕೊಳ್ಳುತ್ತದೆಂಬುದು ಪ್ರಸ್ತುತದಲ್ಲಿ ಎಲ್ಲರೂ ಒಪ್ಪಬೇಕಾದ ವಿಷಯ.

## ಆಕರ ಸೂಚಿ

Buchler, Ira R. and Henry A. Selby (1968) *A Formal Study of Myth ( = Center for Intercultural Studies in Folklore and Oral History, monograph series 1 )* Austin : University of Texas.

Drobin, Ulf (1969) "A Review of Structuralism", *Temeos* 2, 203–12.

Dundes, Alan (1962) "From Etic to Emic Units in the Structural Study of Folktales", *Journal of American Folklore* 75, 95–105.

Dundes, Alan (1964) *The Morphology of North American Indian Folktales ( = FF Communications*, No. 195 *)* Helsinki : Suomalainen Tiedeakatemia.

Fisher, John L. (1963) "The Sociopsychological Analysis of Folktales", *Current Anthropology* 4, 235–95.

Gardner, Peter M. (1966) "Symmetric Respect and Memorate Knowledge: The Structure and Ecology of Individualistic Culture", *Southwestern Journal of Anthropology*, 22, 389–415.

Halliday, M. A. K. (1964) "The Linguistic Study of Literary Texts", *Proceedings of the Nineth International Congress of Linguistics*, ed. by Horace G. Lunt, The Hague: Mouton.

Hendricks, William O. (1967) "On the Notion 'Beyond the Sentence'", *Linguistics*, 37.

Hendricks, William O. (1973) *Essays on Semiolinguistics and Verbal Art*, Mouton: The Hague. Paris.

Hockett, Charles (1958) *A Course in Modern Linguistics*, New York.

Hymes, Dell (1968) "The 'Wife' Who 'Goes Out' Like a Man: Re-interpretation of a Clackamas Chinook Myth", *Social Science Information* 7, 173–99.

Hymes, Dell (1971) "The Contribution of Folklore to Sociolinguistic Research", *Journal of American Folklore* 84, 42–50.

Jacobs, Melwille (1966) "A Look Ahead in Oral Literature Research" *Journal of American Folklore* 79, 413–27.

Jacobson, Roman (1970) "On Russian Fairy Tales", *Structuralism: A Reader*, ed. by Michael Lane, London: Jonathan Cape. 184–201.

Lévi-Strauss, Claude (1963) *Structural Antropology*, trans. Claire Jacobson and Brooke G. Schoepf, New York: Basic Books.

Malinowski, Bronislaw (1923) "The Problem of Meaning in Primitive Languages", in *The Meaning of Meaning*, ed. C. K. Ogden and I. A. Richards, London, 296–336.

Pop, Mihai (1968) "Der formelhafte Charakter der Volksdichtung", *Deutsches Jahrbuch für Volksunde* 14, 1–15.

Samarin, William J. (1969) "The Art of Gbeya Insults", *International Journal of American Linguistics*, 35.

Sapir, Edward (1933) "Language", *Encyclopedia of the Social Sciences*, Vol. 9, New York.

Sebeok, Thomas A. (1953) "The Structure and Content of Cheremis Charms, part one" *Anthropos* 48, 369–88.

Sperber, Dan (1968) "Le structuralisme en anthropologie", *Qu'est-ce que le structuralisme?* Paris : Seuil, 167–238.

Thompson, Stith (ed) (1953) *Four Symposia an Folklore (=Indiana University Publications, Folklore Series, 8)* Bloomington.

Voigt, Vilmos (1969) "Towards Balancing of Folklore Structuralism", *Acta Ethnographica Academiae Scientiarum Hungaricae* 18, 247–55.

■ ■

# ರಕಾರದ ರಾಜ್ಯಭಾರ

□ □ □ □ □ □ □ □ □ □ □ □ □ □ □ □ □ □

ಎಸ್. ವಿ. ರಂಗಣ್ಣ

□ □ □ □ □ □ □ □ □ □ □ □ □ □ □ □ □ □

ತನ್ನ ಸಹಾಯವನ್ನು ಕೋರಿ ಬಂದ ರಾವಣನಿಗೆ ಮಾರೀಚ ಹೀಗೆ ಬಿನ್ನವಿಸಿ ಕೊಳ್ಳುತ್ತಾನೆ :

ಅಪಿ ರಾಮಸಹಸ್ರಾಣಿ ಭೀತಃ ಪಶ್ಯಾಮಿ ರಾವಣ ।
ರಾಮ ಭೂತಮಿದಂ ಸರ್ವಮರಣ್ಯಂ ಪ್ರತಿಭಾತಿ ಮೇ ।
ರಾಮಮೇವ ಹಿ ಪಶ್ಯಾಮಿ ರಹಿತೇ ರಾಕ್ಷಸಾಧಿಪ ॥
ದೃಷ್ಟ್ವಾ ಸ್ವಪ್ನಗತಂ ರಾಮಮುದ್ಭ್ರಮಾಮಿ ವಿಚೇತನಃ ।

ಅಷ್ಟಕ್ಕೇ ನಿಲ್ಲಿಸದೆ ಮುಂದುವರಿಸುತ್ತಾನೆ ಹೇಳಿಕೆಯನ್ನ :

ರಕಾರಾದೀನಿ ನಾಮಾನಿ ರಾಮತ್ರಸ್ತಸ್ಯ ರಾವಣ ।
ರತ್ನಾನಿ ಚ ರಥಾಶ್ಚೈವ ವಿತ್ರಾಸಂ ಜನಯಂತಿ ಮೇ ॥

ರಾಮ ಹಾಗಿರಲಿ. ಅವನ ಬಿಲ್ಬಲ್ಮೆ ಹಾಗಿರಲಿ, ಅವನ ನಾಮಾಂಕಿತ ಪ್ರಥಮಾಕ್ಷರದ ಉಚ್ಚಾರಣೆಯೇ ಸಾಕು ಮಾರೀಚನನ್ನು ಮೂರ್ಛೆ ಬೀಳಿಸುವುದಕ್ಕೆ. 'ರ'ತ್ವದ ಆರ್ಭಟ ಸಾಮಾನ್ಯವಲ್ಲ! ರಂಪ ರಾದ್ಧಾಂತ ರಭಸ ರೌರವ ರಪ್ಪನೆ ರಟ್ಟಡಿ ರೌದ್ರ ರಕ್ಕಸ ರಕ್ತಚ್ಛಿದ ರಾವುತ ಮುಂತಾದ ಗಲಭೆಯ ಪದಗಳನ್ನೂ ಭಾವಿಸಿ. ಸದ್ದು ಅಬ್ಬರಗಳಿಗೇ ಅಲ್ಲದೆ ತ್ವರೆ ಬಿರುಸುಗಳಿಗೂ ರಕಾರ ಒದಗುವುದನ್ನು ನಾವು ನೋಡ ಬಹುದು : ಉರಿ ಬಿರಿ ಸುರಿ ಮುರಿ ಹರಿ ಮಾರಿ ಬೊಬ್ಬಿರಿ ಜರಿ ಝರಿ ಮೊದಲಾ ದುವು ಆಕೃತಿಯಲ್ಲಿ ಚಿಕ್ಕವಾದರೂ ಭಾವಾರ್ಥದಲ್ಲಿ ಸ್ಫೋಟಕವಾದವು. ಉಗ್ರ ವ್ಯಗ್ರ ಗ್ರಹ ವಿಗ್ರಹ ಸಂಗ್ರಾಮ ನಕ್ರ ಚಕ್ರ ಭದ್ರ ಇತ್ಯಾದಿ ಅರ್ಧರಕಾರವೂ ಪೂರ್ಣ ರಕಾರದಂತೆಯೇ ಗಡುಸಿನ ಕಡೆಗೇ ವಾಲುತ್ತದೆ. ಒಟ್ಟಿನಲ್ಲಿ ರಕಾರವು ಪರುಷವಾಗಿದೆ

ಯೆಂದೂ ಪಾರುಷ್ಯಸಾಧನೆಯೇ ಅದರ ಕಾರ್ಯವೆಂದೂ ಅನೇಕ ಸಾಹಿತಿಗಳು ಬಗೆದಿರುವುದರಲ್ಲಿ ಅಚ್ಚರಿಯೇನೂ ಇಲ್ಲ. ೧೮ನೆಯ ಶತಮಾನದ ಖ್ಯಾತ ರಷ್ಯನ್ ಕವಿ ತನ್ನ ಭಾಷೆ ಮೆಲ್ಲಾಗಿದೆಯೆಂದು ತೋರಿಸುವುದಕ್ಕೋಸ್ಕರ ರಕಾರವನ್ನು 'ಅನಾಕ್ರಿಯಾಂಟಿಕ್' ಪದ್ಯಗಳಲ್ಲಿ ಉಪಯೋಗಿಸದೇ ನಿಂತ. ೧೬ನೆಯ ಶತಮಾನದ ಫ್ರೆಂಚರು 'ರ' ಬದಲು 'ಜ' ಅನ್ನು ಬಳಸುವುದು ಹೆಚ್ಚುಕಡಿಮೆ ಸಾಮಾನ್ಯವಾಡಿಕೆಯಾಗಿತ್ತು :

“ಮಾನ್ ಮರಿ ಎ ಅಲ್ಲೆ ಅ ಪರಿ ಅಶಟೆ ಊನ್ ಚೇರ್” (ನನ್ನ ತಾಯಿ ಪ್ಯಾರಿಸ್ಸಿನಿಂದ ಒಂದು ಕುರ್ಚಿ ತಂದಳು) ಎಂಬ ವಾಕ್ಯ ಕೇಳಿಬರುತ್ತಿದ್ದುದು ಹೀಗೆ : “ಮ್ಯಾನ್ ಮಜಿ ಎ ಅಲ್ಲೆ ಅ ಪಜಿ ಅಶಟೆ ಊನ್ ಚೇಜ್”

ಇಂಗ್ಲಿಷ್ ಮಂದಿ ಈಗಲೂ 'ರ'ಕಾರವನ್ನು ಉಚ್ಚರಿಸುವುದೇ ಇಲ್ಲ. ಅಥವಾ ಲಘುವಾಗಿ ತೇಲಿಸಿಬಿಟ್ಟು ವಚನಿಸಿ ಉಚ್ಚರಿಸಿದಂತೆ ನಟಿಸುತ್ತಾರೆ : “ಇನ್ ಟಾ ಸ್ಟ್ರೀಟ್ ಐ ಗಾಟ್ ಸಮ್ ಮಡ್ ಆನ್ ದ ಟಾಸ್ ಅಫ್ ಮಾ ಕಾ”: ಅರ್ಥಾತ್ “ಇನ್ ಔವರ್ ಸ್ಟ್ರೀಟ್ ಐ ಗಾಟ್ ಸಮ್ ಮಡ್ ಆನ್ ದ ಟಯರ್ಸ್ ಆಫ್ ಮೈ ಕಾರ್” 'ಪೀಟರ್' 'ಪೀಟಾ' ಎಂದೂ 'ವಾಟರ್' 'ವಾಟಾ' ಎಂದೂ ದನಿಗೈಯುತಕ್ಕದು: 'ವರ್ಲ್ಡ್' ಕೂಡದು 'ವಲ್ಡ್' ಸರಿ. ಈ ಕಾರಣದಿಂದ ಅಮೆರಿಕದ ಸಂಯುಕ್ತಸಂಸ್ಥಾನದವರಿಗೆ ಇಂಗ್ಲೆಂಡಿನವರು “ರತ್ವರಹಿತ (R–less) ಇಂಗ್ಲಿಷ್‌ಮೆನ್” ಆಗಿಬಿಟ್ಟಿದ್ದಾರೆ. ಸ್ಪೆನ್ಸರ್ ಕವಿಯ ಮೇಲೆ ಟಿಪ್ಪಣಿ ಬರೆಯುತ್ತ ಬೆನ್‌ಜಾನ್ಸನ್ ಈ ನುಡಿಯನ್ನಾಡಿದ : 'ಆರ್' ನಾಯಿಯ ಅಕ್ಷರ (R is the Dog's letter). ಅದನ್ನು ಸ್ಪೆನ್ಸರ್ ತೀವ್ರ ಕೋಪವನ್ನು ಸೂಚಿಸಲು ಬಳಸುತ್ತಾನೆ”. ಉದಾಹರಣೆ : “ಅಂಡ್ ಬೈ ಹೀಸ್ ಸೈಡ್ ರೈಡ್ಸ್ ಫಿಯರ್ಸ್ ರಿವೆಂಜಿಂಗ್ ರಾತ್” “ಡಾಗ್ಸ್ ಲೆಟರ್” ಎಂಬುದು ಪ್ರಾಚೀನರ ಲಿಟೆರ ಕ್ಯನೀನ (litera canina) ಎಂಬುದರ ಭಾಷಾಂತರ.

ಇಂಥ ವಿದ್ಯಮಾನಗಳಿಗೆ ಸ್ವಲ್ಪ ಸತ್ಯಾಂಶ ಆಧಾರವಾಗಿದ್ದರೂ ಕೂಲಂಕಷ ಪರೀಕ್ಷೆ ನೆರವೇರಿಸಿದಲ್ಲಿ ರಕಾರವನ್ನು ಕಂಡು ದಿಗಿಲುಬಿದ್ದು ದಿಗ್ಭ್ರಮೆಗೊಳ್ಳುವುದು ಸಮನಲ್ಲವೆಂಬುದೂ ಅದರ ನೆತ್ತಿಗೆ ಬಯ್ಗುಳ ಎರಚುವುದು ಅನ್ಯಾಯವೆಂಬುದೂ ಗೊತ್ತಾಗುತ್ತದೆ. ವರ್ಣಮಾಲೆಯನ್ನು ಸ್ಥೂಲವಾಗಿ ವಿಭಾಗಿಸಿದರೆ ದೀರ್ಘಸ್ವರಗಳೂ ಮಹಾಪ್ರಾಣಗಳೂ ಒಂದು ಗುಂಪು, ಹ್ರಸ್ವಸ್ವರಗಳೂ ಅಲ್ಪಪ್ರಾಣಗಳೂ ಇನ್ನೊಂದು ಗುಂಪು. ದರ್ಪ ಶಕ್ತಿ ಸಾಮರ್ಥ್ಯ ದಾರ್ಢ್ಯ ಧಾಷ್ಟೀಕಗಳು ಮೊದಲನೆಯ ಗುಂಪಿನ ಸಾಮಾನ್ಯ ಲಕ್ಷಣಗಳಾದರೆ. ಮೃದುತ್ವ ನಯನಾಜೂಕು ಲಜ್ಜೆ ಹಿಂಜರಿಕೆ ಅಸ್ಫುಟತೆ ಎರಡನೆಯ ಗುಂಪಿನ ಗುರುತುಗಳು: ಅವುಗಳು ಬೆಳಕು ಬಿರುಮಳೆಗಳನ್ನು ಲೆಕ್ಕಿಸದೆ ಬಯಲಿನಲ್ಲೊ ಅಡವಿಯಲ್ಲೊ ದುಡಿಯಬಲ್ಲುವು: ಇವುಗಳಾದರೊ ನೆರಳು ಬೆಳುದಿಂಗಳುಗಳನ್ನು ಬಯಸುತ್ತ ರಕ್ಷಿತಪ್ರದೇಶದಲ್ಲಿ ಮನೆಗೆಲಸ ಮಾಡಬಲ್ಲುವು. ರಕಾರ ಮೊದಲನೆಯ ಗುಂಪಿನೊಂದಿಗೇ ಸಂಬಂಧವುಳ್ಳದ್ದು. ಅದರದ್ದು ಮುಚ್ಚುಮರೆಯನ್ನು ನಿರಾಕರಿಸುವ

ಸುಸ್ಪಷ್ಟ ಬಾಳುವೆ: ಇದ್ದುದನ್ನು ಇದ್ದಂತೆ ನಿರೂಪಿಸುವ ವಾಸ್ತವಿಕತೆಯೇ ಅದರ ಹೆಗ್ಗುರಿ. ರೊಪ್ಪ ರಚ್ಚೆ ರೊಚ್ಚೆ ರಿಂಗಣ ರುಬ್ಬು ರುಂಜೆ ರೂಢಿ ಮರೆ ನೆರೆಹೊರೆ ಬರೆ ಮೊದಲಾದ ಶಬ್ದಗಳ ಸ್ವಾರಸ್ಯವನ್ನು ಗ್ರಹಿಸಿರಿ. ಹೀಗಿದ್ದರೂ ಒಮ್ಮೊಮ್ಮೆ ರಕಾರ ಮಹದಾಶ್ಚರ್ಯವನ್ನೂ ಸಾಧಿಸಬಲ್ಲುದು. ಸ್ಕಾಟ್ಲೆಂಡಿನ ಸಮೀಪದ ಒಂದು ದ್ವೀಪಸ್ತೋಮಕ್ಕೆ ಮೊದಲಿದ್ದ ಹೆಸರು "ಎಬುಡೀಸ್"; ಅದು ಸಪ್ಪೆ ಸಪ್ಪೆ, ಮಂಕುಮಂಕು ಎನ್ನಿಸಿಕೊಳ್ಳುವಂಥ ಹೆಸರು. ಬಲುಹಿಂದೆ ಯಾವನೋ ಒಬ್ಬ ಅಜ್ಞಾತ ಚರಿತ್ರಕಾರ ಒಂದು 'ರ' ಅನ್ನು ತಂದು ಸೇರಿಸಿ ಆ ಭೀಕರ ರಮ್ಯ ಕುತೂಹಲಕಾರಿ ಪ್ರದೇಶಕ್ಕೆ "ಹೆಬ್ರಿಡೀಸ್" ಎಂಬ ರಸಮಯವೂ ಸಮಂಜಸವೂ ಆದ ನಾಮಧೇಯವನ್ನು ಒಡಗೂಡಿಸಿದ. ಅಟ್ಟಿಲ ಎಂಬ ಪ್ರಖ್ಯಾತ ಹೂಣ ವೀರಾಧಿವೀರನ ಬುಡಕಟ್ಟಿನವರಿಗೆ "ಟಾಟರರು" ಎಂಬ ಹೆಸರಿದ್ದಿತು. ಅವನು ಧೀರ ರೋಮನರನ್ನು ಸೋಲಿಸಿದ್ದ. ಆದ್ದರಿಂದ ಬಖೈರು ಬರೆಯುವ ರೋಮನ್ ಚಾರಿತ್ರಕನು ಹೂಣರ ಹೆಸರನ್ನು "ಟಾರ್ಟರರು" ಎಂದು ಬದಲಿಸಿ ತನ್ನ ದ್ವೇಷವನ್ನು ಕಾರಿದ. ಹೀಗೆ ರತ್ವ ಚಕಿತಗೊಳಿಸುವ ರಂಜಕತೆಯನ್ನೂ ಸಾಧಿಸಬಲ್ಲುದು, ನಡುಗಿಸಿಬಿಡುವ ಭೀಷಣತೆಯನ್ನೂ ಸಾಧಿಸಬಲ್ಲುದು. 'ನಾ' 'ಕ'ಗಳ ನಡುವೆ ರ ಅನ್ನು ಇಟ್ಟರೆ ಏನಾಗುತ್ತದೆ ನೋಡಿ! ನೇಗಿಲು ನಡೆಸುವ ರೈತ ತನ್ನ ಕೈಯಲ್ಲಿರುವ ಕಡ್ಡಿಯ ಚಳಕಕ್ಕಿಂತ ಹೆಚ್ಚಾಗಿ ತನ್ನ ಬಾಯಿಯ "ಅ ರ ರ ರ ರ ರಾ !" ಕೂಗಿನಿಂದ ಎತ್ತುಗಳಿಗೆ ಹುರುಪುಕೊಡುತ್ತಾನೆ. ಆಶ್ಚರ್ಯ ಉಕ್ಕಿಬಂದಾಗ "ಅರೆರೇ !" ಉದ್ಗಾರ ತಾನಾಗಿ ಎದ್ದುಬರುತ್ತದೆ. ಕನ್ನಡದ "ಬಾ, ಬಾ" ಕ್ಕಿಂತ ತೆಲುಗಿನ "ರಾ, ರಾ" ಕ್ಕೆ ಹೆಚ್ಚು ಸೆಳೆಶಕ್ತಿ ಉಂಟೆಂದು ನನ್ನ ಅಭಿಪ್ರಾಯ; ಬಹುಶಃ ಅದಕ್ಕೋಸ್ಕರವೇ ಕನ್ನಡಿಗರು ಅನೇಕವೇಳೆ ಸುಮ್ಮನೆ "ಬಾ, ಬಾ" ಎನ್ನುವ ಬದಲು "ಬಾರೊ, ಬಾರೊ" ಎಂದು ಹೇಳುತ್ತಾರೆ. ಸದ್ದು ಮಾಡುವುದೊ ಸದ್ದನ್ನು ಅಧಿಕಗೊಳಿಸುವುದೊ ಅಷ್ಟೇ ಅಲ್ಲದೆ ರಕಾರ ಒತ್ತಾಯವನ್ನೂ ಹೇರುತ್ತದೆ. ಇವುಗಳನ್ನು ಲಕ್ಷಿಸಿ. "ಹೂಮಾಲೆಯಿಲ್ಲದಿದ್ದರೆ ರೂಮಾಲೆ ಬೇಡವೆ?" "ರುದ್ರನಾದರೇನು ಭದ್ರನಾದರೇನು ನಿದ್ರೆ ಬಂದರೆ ಸರಿ." ಎಷ್ಟೋ ಪಾಠಸ್ಥಳಗಳಲ್ಲಿ ರಕಾರ ಪದಗಳ ಹಿಂದೆಯೇ ನಡೆಯುತ್ತ ಲವಲವಿಕೆಯ ಕುರುಹಾದ ಸಪ್ಪಳವನ್ನು ಶ್ರುತಿಗೈಯುತ್ತ ಜೀವಂತವಾಗಿರುತ್ತದೆ. ಇವುಗಳನ್ನು ಆಲಿಸಿ ಕೇಳಿ :

"ಹರಿಯ ಹಳವಿಗೆಯ ಬವರ ಭೈರವನಾತ ।"

"ಪರಮ ನಾರಾಯಣ ಪರಾಯಣ। ನಿರವೆ ಪರತರವೆಂದು ಮುರಹರ ।
ಬರೆದ ತಾವಿದು ಮುಕುತಿಯಿದರೊಳು ಕರತಳಾಮಲಕ ॥"

"ಕೌರವೇಶ್ವರ ಕೇಳು ಧರಣೀ । ನಾರಿಯಂನಿಬರಿಗೊಕ್ಕತನವಿ ।
ದ್ವಾರ ಮೆಚ್ಚಿದಳಾರ ಸಂಗಡವುರಿಯ ಹಾಯಿದಳು ॥
ಭೂರಿ ಮಮಕಾರದಲಿ ನೃಪರು ವಿಚಾರಿಸರು..."

"ಬವರವಾದಡೆ ಹರನ ವದನಕೆ ಬೆವರ ತಹೆನು"

ಮೇಲಣ ವಾಕ್ಯಗಳಲ್ಲಿ ಬಹಳಸಾರಿ ರಕಾರ ಪುನರುಚ್ಚಾರಿತವಾಗಿದ್ದರೂ ಅದು ಕಿವಿ ಕೊರೆಯುವಷ್ಟು ತೀಕ್ಷ್ಣಗೊಂಡಿಲ್ಲ. ಆತಂಕ ಹುಟ್ಟಿಸುವಷ್ಟು ಪ್ರದರ್ಶನಗೊಂಡಿಲ್ಲ. ಕೇಳಿಸದಷ್ಟು ಮರಸಿಕೊಂಡಿಲ್ಲದಿದ್ದರೂ ಗಟ್ಟಿಯಾಗಿ ದನಿಗೈಯುವಂತೆ ಅದರ ಸಂಚಾರ ವಿದೆ. ಅದಕ್ಕೆ ಸಹಜವಾದ ಅಬ್ಬರ ಉಡುಗಿ ಉಕ್ತಿ ಸಹನೀಯವಾಗುವುದಕ್ಕೆ ಮುಖ್ಯ ವಾದ ಕಾರಣಗಳಲ್ಲಿ ಎರಡನ್ನು ಇಲ್ಲಿ ಪ್ರಸ್ತಾಪಿಸಬಹುದು.

ರಕಾರವೇ ಆಗಲಿ ಬೇರೆ ಯಾವೊಂದು ಅಕ್ಷರವೇ ಆಗಲಿ ಒಂಟಿಯಾಗಿ ನಿಂತು ಭಾಷೆಯ ಕರ್ತವ್ಯವನ್ನು ಪಾಲಿಸಲಾರದು. ಹಲವು ಅಕ್ಷರಗಳ ಕೂಟವೇ ಪದ, ಹಲವು ಪದಗಳು ಸೇರಿದರೆ ಪದಗುಚ್ಛ; ಪದಗಳೂ ಪದಗುಚ್ಛಗಳೂ ಒಟ್ಟುಗೂಡಿದರೆ ವಾಕ್ಯ: ಹಲವು ವಾಕ್ಯಗಳ ಸಮೂಹ ಬೇಕಾಗುತ್ತದೆ ಒಂದು ಪ್ರಬಂಧಕ್ಕೆ. ಆದ್ದರಿಂದ ಅಕ್ಷರಗಳು ಗುಂಪುಗುಂಪಾಗಿಯೇ ಕೆಲಸ ಮಾಡತಕ್ಕದ್ದು; ಒಂದರ ಮೇಲೆ ಇನ್ನೊಂದರ ಮತ್ತು ಮಿಕ್ಕೆಲ್ಲವುಗಳ ಪ್ರಭಾವ ಬಿದ್ದೇ ಬೀಳುತ್ತದೆ. "ಕೌರವೇಶ್ವರ ಕೇಳು" ಎಂಬಲ್ಲಿ ಎರಡು ರಕಾರ ಇದ್ದರೂ ಕಕಾರಕ್ಕೆ ಪ್ರಾಧಾನ್ಯ: ಮತ್ತು 'ವೇ' 'ಕೇ' ಗಳ ಸಮಾನ ದೀರ್ಘಸ್ವರ ಗಮನವನ್ನು ತಟ್ಟುತ್ತದೆ; ಪರಿಣಾಮವಾಗಿ ರಕಾರ ಹಿಂದಕ್ಕೆ ಸರಿದು ಪದಪೂರಕವಾಗಿ ಬಿಡುತ್ತದೆ. ಒಂದು ವಾಕ್ಯದಲ್ಲಿ ಅದೊ ಇದೂ ಶಬ್ದವು ಮುಖ್ಯಾಂಗ ವಾಗಿ ಕುಳಿತು ಉಳಿದ ಶಬ್ದಗಳಿಗೆ ಉಪಾಂಗಸ್ಥಾನವನ್ನು ಹಂಚುವಂತೆ, ಒಂದು ಶಬ್ದದಲ್ಲಿ ಅಕ್ಷರಗಳೂ ಹಾಗೆಯೇ ಅನ್ಯೋನ್ಯತೆಯಿಂದ ನಿಗದಿಮಾಡಿಕೊಳ್ಳುತ್ತವೆ. "ಬವರ ಭೈರವನಾತ" ಎಂಬಲ್ಲಿ 'ಭೈ' ಗೆ ಪ್ರಥಮಲಕ್ಷ್ಯ ಸಿಗುತ್ತದೆ: ಆಮೇಲೆ 'ಬ' 'ವ' 'ತ' ಗಳಿಗೆ 'ರ' ಎಂಬುದು ಮುಸುಕಿತೊ ಏನೊ ಎಂಬಂತಿದೆ. ಹೀಗೆ ಅಕ್ಷರಗಳು ತಮ್ಮ ಸದ್ದನ್ನು ಕುಗ್ಗಿಸಿಕೊಳ್ಳುವುದೂ ಹೆಚ್ಚಿಸಿಕೊಳ್ಳುವುದೂ ಪದಸರಣಿಯ ಸನ್ನಿವೇಶಗಳಲ್ಲಿ ಆವಶ್ಯಕ. ಅನಿವಾರ್ಯ, ಪರಿಣಾಮಕರ. ಶ್ವಾಸಸದೃಶವೆಂದು ಹಳಿಯಲ್ಪಟ್ಟಿರುವ ರತ್ವದ ಬಳಿಗೆ "ಮ"ಕಾರ ಬಂದು ಜೊತೆಗೂಡಿದರೆ ಉದ್ಭವಿಸುವ ಸೋಜಿಗವನ್ನು ಬಗೆಯಿರಿ. "ರಾಮ", ಅದನ್ನು "ನೀ ನಾಮ ಎಂಥ ರುಚಿರಾ, ಏಮಿ ರುಚಿರಾ" ಎಂದು ಹೊಗಳಿಲ್ಲವೆ ತ್ಯಾಗರಾಜ? ಷೇಕ್ಸ್‌ಪಿಯರ್ ಕವೀಶ್ವರ ತನ್ನ ಸೃಷ್ಟಿಯ ಆದರ್ಶಪ್ರೇಮಿಗೆ "ರೋಮಿಯೊ" (Romeo) ಎಂದು ನಾಮಕರಣ ಮಾಡಿರುವ ಸಾಹಿತ್ಯ ಸಾಮಂಜಸ್ಯವನ್ನು ಎಷ್ಟು ಸ್ತುತಿಸಿದರೂ ಸಾಲದು. ರ ಮ ಗಳ ಜೋಡಿಯೇ ಸಾಕು ನಾಲಗೆಗೆ ಜೇನು ಸುರಿಯುವುದಕ್ಕೆ: ಓ ಸ್ವರವೂ ಬಂದು ಸೇರಿದರೆ ಜೇನು ಸುಧೆಯಾಗಿ ಬಿಡುತ್ತದೆ. ತನ್ನ ಇನ್ನೊಂದು ನಾಟಕದಲ್ಲಿ ಷೇಕ್ಸ್‌ಪಿಯರ್ "ಡ್ರೋಮಿಯೊ" ಎಂಬ ಹೆಸರಿನ ಪಾತ್ರವನ್ನು ವಿರಚಿಸಿದ್ದಾನೆ: ವಿನೋದನಾಟಕಕ್ಕೆ ಆ ಹೆಸರು ಯುಕ್ತವಾದದ್ದೆ. ಗಂಭೀರ ಪ್ರಪಂಚಕ್ಕೆ ರೋಮಿಯೊ, ವಿನೋದ ಪ್ರಪಂಚಕ್ಕೆ ಡ್ರೋಮಿಯೊ : ಇಂಥ ಸಣ್ಣವಿಚಾರಗಳಲ್ಲೂ ಕವಿಕಾಲಗಾರುವಾದ

ಷೇಕ್ಸ್‌ಪಿಯರನ ವಿವೇಚನೆ ಪ್ರಶಂಸಾತೀತ. ಶಕ್ತಿಯ ಏರು ಇಳಿತಕ್ಕೆ ಪದದ ಅಕ್ಷರಗಳು ವಶವಾಗುವುದರಿಂದ ಭಾಷೆಗೆ ವೈವಿಧ್ಯ ಮತ್ತು ವಿಸ್ಮಯತೆ.

ಎರಡನೆಯ ಕಾರಣ ಇನ್ನೂ ಹೆಚ್ಚು ಸತ್ವವುಳ್ಳದ್ದು, ಭಾಷೆಯ ಅಧಿಷ್ಠಾನಗುಣಕ್ಕೂ ಅಧಿಕೃತ ಪ್ರತಿಷ್ಠೆಗೂ ಸಂಬಂಧಪಟ್ಟದ್ದು, ಮನನೀಯವಾದದ್ದು. ಶಬ್ದಕ್ಕೂ ಅರ್ಥಕ್ಕೂ ಅಭೇದ್ಯ ಹೊಂದಾಣಿಕೆ ಉಂಟಾಗಿದೆಯೇ? ತನ್ನ ಸಂಕಲ್ಪಕ್ಕೆ ಅನುಗುಣವಾಗಿ ಅರ್ಥವು ಸೂಕ್ತ ಶಬ್ದವನ್ನು ಉತ್ಪತ್ತಿಮಾಡುತ್ತದೆಯೇ ? ಅಥವಾ ಶಬ್ದದ ತಾಳಕ್ಕೆ ಅರ್ಥ ಕುಣಿಯುತ್ತದೆಯೇ ? ಅಥವಾ ಶಬ್ದ ಬೇರೆಅರ್ಥ ಬೇರೆ ಎಂಬುದು ನಿಜವೇ ? ಶಬ್ದಾರ್ಥಗಳ ಸಂಯೋಗ ಪಾರ್ವತೀ ಪರಮೇಶ್ವರರ ದಾಂಪತ್ಯದಂತೆ ಎಂಬುದು ಭಾವ ಪ್ರೇರಿತ ಕವಿಯ ರೂಪಕಾಲಂಕಾರ ಅಷ್ಟೇ; ಅದೊಂದು ವೈಯಕ್ತಿಕ ಅನಿಸಿಕೆ, ವೈಚಾರಿಕತೆಯ ಪರಿಣಾಮವಾದ ಶಾಸ್ತ್ರೀಯ ನಿರ್ಧಾರವಲ್ಲ. ಜಿ. ಡಬ್ಬಲ್ಯು ರಸ್ಸೆಲ್ ಎಂಬ ಐರಿಷ್ ಕವಿ ಅತೀಂದ್ರಿಯ ಅನುಭವಗಳನ್ನು ನೆಮ್ಮಿ ನಿಂತವನು. ಆತನ ಸಿದ್ಧಾಂತದಂತೆ "ತಮ್ಮ ಒಗ್ಗೂಡಿಕೆಯಿಂದಲೂ ಪರಸ್ಪರಕ್ರಿಯೆಯಿಂದಲೂ ವಿಶ್ವವನ್ನು ನಿರ್ಮಾಣಮಾಡಿರುವ ಪ್ರಬಲಶಕ್ತಿಗಳಿಗೂ ಮನುಷ್ಯಭಾಷೆಯ ಮೂಲ ಧಾತುಗಳಿಗೂ ತಾಳೆಯಿದೆ." ಭಾಷೆಯನ್ನು ೨೮ ಘಟಕಗಳಾಗಿ (೭ ಸ್ವರಗಳು, ೨೧ ವ್ಯಂಜನಗಳು) ವಿಭಜಿಸಿ ಅವನು "ಈ ಇಪ್ಪತ್ತೆಂಟೇ ಭಾಷೆಯ ದೈವಿಕ ಮೂಲಾಂಶಗಳು" ಎಂದು ಹೇಳಿದ. ಅಷ್ಟೇಅಲ್ಲ; ಪ್ರತಿಯೊಂದಕ್ಕೂ ಇರುವ ಆಕಾರ ಬಣ್ಣ ಭಾವ ಅರ್ಥ ಪ್ರಭಾವಗಳನ್ನೂ ತಾನೇ ಕಣ್ಣಿಟ್ಟು ವೀಕ್ಷಿಸಿದಂತೆ ವರ್ಣಿಸಿದ್ದಾನೆ. "ಅ" ಜೀವಾತ್ಮ ಮತ್ತು ಪರಮಾತ್ಮಗಳ ಸಂಕೇತ, ಅದು ವರ್ಣರಹಿತ; "ಹ" ಶಾಖ ಸಂಬಂಧಿ, ಕಿತ್ತಿಳೆಬಣ್ಣ; "ವ" ಜಲಚರ ಸದೃಶ, ನೀಲಿಬಣ್ಣ; "ಮ" ಅಂತ್ಯ ಅಥವಾ ಮರಣ ಸೂಚಕ, ಊದು ಬಣ್ಣ, ಪ್ರಕೃತ ವಿಷಯವಾದ "ರ" ರಸ್ಸೆಲ್ಲನ ಅಭಿಪ್ರಾಯದಂತೆ ಚಲನವಲನೆಯ ಗುರುತು, ಅದರ ಬಣ್ಣ ಕೆಂಪು. ಇದಾವುದೂ ಸ್ವೇಚ್ಛಾಜಲ್ಪವಲ್ಲ; ವಿವರಣೆಗಳಿಗೆ ಸುವ್ಯವಸ್ಥಿತ ತರ್ಕಬದ್ಧತೆಯ ಮುಸುಕು ಇದ್ದೇ ಇದೆ. ಆದರೂ ನಿರಂಕುಶವೊ ಎಂದು ತೋರುವ ಸಂತೃಪ್ತ ಸ್ವಂತಿಕೆ ತಾಂಡವವಾಡುತ್ತಿರುವುದರಿಂದ ಚರ್ಚೆ ಎಬ್ಬಿಸಿ ಪ್ರಯೋಜನವಿಲ್ಲ. ನಂಬಿಕೆಗೆ ನಂಬಿಕೆಯೇ ಸಾಕ್ಷಿ, ನಂಬಿಕೆಯೇ ತೀರ್ಮಾನ ! ಬರಿ ಸಪ್ಪಳವನ್ನು ಬಗೆಯುವುದಾದರೆ "ಮೆಲನೋಮ" ಎಂಬುದು ಇಂಪುಗೂಡಿದ ಪದ; ಆದರೆ ಅತ್ಯಂತ ತೀಕ್ಷ್ಣವೂ ಕ್ಷಿಪ್ರ ಮಾರಕವೂ ಆದ ಒಂದು ಬಗೆಯ ಭಯಂಕರ ಕ್ಯಾನ್ಸರ್ ರೋಗ. ''ಶ್ಲಕ್ಷ್ಣಃ'' ಎಂಬ ಸಂಸ್ಕೃತ ಪದವನ್ನು ತೆಗೆದುಕೊಳ್ಳಿ : ಅದನ್ನು ಉಚ್ಚರಿಸುವಾಗ ಹಲ್ಲು ಮುರಿದು ಹೋಗದಿದ್ದರೂ ಬಾಯಿಗೆ ತುಂಬ ತ್ರಾಸ; ಅದರ ಅರ್ಥವಾದರೊ 'ಪ್ರಿಯಂವದ' 'ಹಿತವಾಗಿ ಮಾತನಾಡುವವ.' 'ಆನೆ'ಯನ್ನು ಕುಂಭೀ ಸ್ತಂಬೇರಮ ಹಸ್ತಿ ಮತಂಗಜ ಎಂದು ಕರೆಯುವಾಗ ಶಬ್ದಕ್ಕೂ ಅರ್ಥಕ್ಕೂ ಅಲ್ಪಸ್ವಲ್ಪ ನಂಟು ಪ್ರಕಟವಾಗುತ್ತದೆ; ಆದರೆ ಆ ಘನಗಂಭೀರ ಬೃಹನ್ಮೃಗಕ್ಕೆ 'ಆನೆ' ಎಂಬ ಹೆಸರು ಅನುರೂಪವೆ ? ಆದರೆ 'ಆನೆ'

ಎಂಬುದೇ ವಿಶೇಷ ಬಳಕೆಯ ನಾಮಾಂಕಿತ. ಪೂಜನೀಯವಾದ ಮಹಾವೃಕ್ಷಕ್ಕೆ 'ಅಶ್ವತ್ಥ' ಎಂಬ ನಾಮಧೇಯ ಸರಿ: 'ವಟ' ವೆನ್ನುವುದೊ? 'ಇಂಗು' "ರಾಮಠ" ಎಂದು ಕರೆಸಿಕೊಳ್ಳುತ್ತಂತೆ! ಸಾಹಿತಿಯ ಅಪೇಕ್ಷೆ ಏನೇ ಆಗಿದ್ದರೂ ಲೋಕರೂಢಿಗೆ ಅವನು ಮಣಿಯಲೇಬೇಕು. 'ಆನೆ'ಯೆಂಬ ಸಪ್ಪೆ ದನಿಯ ಶಬ್ದ ಕೇಳಿಬಂದೊಡನೆ ನಮ್ಮ ವಿಭಾವನೆಯ ಮುಂದೆ ದೊಡ್ಡಪ್ರಾಣಿ ಅವತರಿಸಿ ನಿಲ್ಲುತ್ತದೆ. ಶಬ್ದ ತನ್ನ ನೈಮಿತ್ತಿಕ ಕೆಲಸವನ್ನು ಮಾಡಿ ಮುಗಿಸಿ ಅರ್ಥಕ್ಕೆ ಜಾಗ ಬಿಟ್ಟುಕೊಟ್ಟು ಹಿಂದೆ ಸರಿಯುತ್ತದೆ.

ವಸ್ತುಸ್ಥಿತಿ ಹಾಗಿರಬಹುದು: ಭಾವಾರ್ಥ ಮುಂದೆ, ಶಬ್ದ ಹಿಂದೆಹಿಂದೆ ಬಲುಹಿಂದೆ ಎಂಬ ಉಪದೇಶವನ್ನು ಒಪ್ಪಿಕೊಳ್ಳಬಹುದು. ಆದರೇನು ಸಾಹಿತಿಗಳು ತಮ್ಮ ಮಂತ್ರ ಜಾಲದಿಂದ ಎರಡನ್ನೂ ಸಮನ್ವಯಗೊಳಿಸಿ ಅವಕ್ಕೆ ತಕ್ಕತಕ್ಕ ಮುಖ್ಯತೆಯನ್ನು ಒದಗಿಸಿಕೊಟ್ಟು, ಅರ್ಧನಾರೀಶ್ವರಮೂರ್ತಿಯನ್ನು ಸೃಷ್ಟಿಸಿ, ಅದು ಹೆಚ್ಚಲ್ಲ ಇದು ಕಡಿಮೆಯಲ್ಲ ಎರಡೂ ಕೂಡಿಕೊಂಡು ಒಂದಾಗಿವೆ ಎಂಬ ಸತ್ಯಾಂಶವನ್ನು ಒತ್ತಿಹೇಳುತ್ತಾರೆ. ಭ ಠ ಥ ಮೊದಲಾದ ಪೌರುಷಾಕ್ಷರಗಳಿಗಿಂತ ಹೆಚ್ಚಾದ ಪರಾಕ್ರಮದಿಂದ ಮೆರೆಯುವ ರಕಾರವನ್ನೂ ಅವರು ಜಾಣ್ಮೆಯಿಂದ ಹತೋಟಿಯಲ್ಲಿ ಇಟ್ಟುಕೊಳ್ಳಬಲ್ಲರು.

"ಮಕ್ಕಳಿರ, ಅಕ್ಕರೆಯ ಮಕ್ಕಳ ಹೆತ್ತ ಕರುಳನು ಮರೆವೆನೆ ?
ಸೊಕ್ಕಿ ಸೆಡೆದವರೀಗ ತಿಳಿದಿರಿ. ಇನ್ನು ನಿಮ್ಮನು ತೊರೆವೆನೆ ?"
"ಪಾವನದ ಮುತ್ತೈದೆ ಸವಿಗರೆದು ನುಡಿದಳಾ ಮೈಸೂರ ಸಿರಿಯು,
ಕನ್ನಡದ ನಾಡ ಸಿರಿಯ"

"ಕ್ರೂರ ನಕ್ರಾಕುಲದೊಳಿಡಿದಿರ್ದ ಪೆರ್ಮಡು ಗ
ಭೀರ ನಿರ್ಮಲ ಜಲದೊಳೆಸೆವಂತೆ ಮನದೊಳ್ ಕ
ಠೋರತರ ಭಾವಮಂ ತಳೆದು ಬಹಿರಂಗದೊಳ್
ವಿನಯಮುಳ್ಳಾತನಾಗಿ।"

ಇಂಥ ವಾಕ್ಯಗಳನ್ನು ಹುಡುಕಿ ಶೇಖರಿಸಿ ಅವನ್ನು ವಿಶ್ಲೇಷಿಸಿ ವಿಷಯದ ಸೂಕ್ಷ್ಮತೆಯನ್ನೂ ವಿಸ್ತಾರವನ್ನೂ ಸಂಕೀರ್ಣತೆಯನ್ನೂ ಆದಷ್ಟುಮಟ್ಟಿಗೆ ಪರಿಚಯಮಾಡಿಕೊಳ್ಳಬೇಕು. ಅವ್ಯವಹಾರಕ್ಕೆ ಇಲ್ಲಿ ಅವಕಾಶವಿಲ್ಲ. ಮಾದರಿಗಾಗಿ ಹಲಕೆಲವು ಸಂಗತಿಗಳನ್ನು ನಿರೂಪಿಸಲು ಮಾತ್ರ ಅವಕಾಶವುಂಟು.

"ಸೆರೆಗೆ ನಮ್ಮನು ನೂಕಿ ದೇವರು
ಸಿರಿಯ ಮದದಲಿ ಕಳೆದರೆಮ್ಮನು
ಮರೆದು ಸಲಹುವರಾರು ನಿಮ್ಮಯ ಕರುಣ ಹೊರತಾಗಿ ।
ಧರೆಯೊಳಿನ್ನಪಕೀರ್ತಿನಾರಿಯ
ಸೆರಗ ಹಿಡಿವುದೆ ಲೇಸೆನುತ ತವೆ
ಕರ ಮುಗಿದು ತಲೆಗುತ್ತಿ ಪೇಳಿದನಾಗ ನರೆದಲೆಗ॥"

"ಊರಿಂಗೆ ದಾರಿಯನು ಯಾರು ತೋರಿದೊಡೇನು ।
ಸಾರಾಯದ ನಿಜವ । ತೋರುವ ಗುರುವು
ಯಾರಾದೊಡೇನು ಸರ್ವಜ್ಞ ॥"

"ಆರ ಹಾರೈಸಿದೊಡೇನುಂಟು । ಬರಿ । ನೀರ
ಕಡೆದರಲ್ಲೇನುಂಟು "

ಇಂಥ ಪ್ರಸ್ತಾವಗಳಲ್ಲಿ, ಕಥಾವಸ್ತು ಸಾಗುವ ದಾರಿಯಲ್ಲಿ ರಕಾರವು ಫರ್ಲಾಂಗು ಕಲ್ಲುಗಳಂತೆ ಇದ್ದುಕೊಂಡು ಗಮನ ಸೆಳೆದರೂ ಸೆಳೆಯುತ್ತದೆ, ಸೆಳೆಯದೆಯೂ ತೆಪ್ಪಗಿರುತ್ತದೆ: ಭಾವಾರ್ಥ ವಿವರಿಸುವ ಪದಗಳಿಗೇ ಪ್ರಾಧಾನ್ಯವಿತ್ತು ಓಂಬದಿಯ ಅಂಶವಾಗುತ್ತದೆ ಸಮಾಧಾನದಿಂದ.

"ಭಯಂಕರಮಾದುದು ಕಾರ ದುರ್ದಿನಂ ರಣರಂಗಂ"

"ಕಾಲನ ಬಲಕೆ ರುಧಿರದ ಕೆರೆಯ ತೂಬೆತ್ತಿದರು
ಸಿಂಹಳ ರಾಯರಾವುತರು"

"ಆರಾತೀಯ ಕವೀಶ್ವರ
ರಾರುಂ ಮುನ್ನಾರ್ತರಿಲ್ಲ ವಾಗ್ದೇವಿಯ ಭಂ ।
ಡಾರದ ಮುದ್ರೆಯನೊಡೆದಂ
ಸಾರಸ್ವತಮೆಸೆಪ ಕವಿತೆಯೊಳ್ ಕವಿರನ್ನಂ ॥"

"ಸುಳಿದನು ವಿಲಯ ರುದ್ರನ ಕುಪಿತ ರೌದ್ರಾವೇಶ ರೋಷದಲಿ"
"ಹರನೆಂಬ ದೈವ ನಮಗುಂಟು । ತಿರಿವರಿಂ ಸಿರಿವಂತರಾರು"

ಇಂಥ ಕಡೆಗಳಲ್ಲಿ ರಕಾರವು ತಲೆಯೆತ್ತಿ ಎದ್ದು ನಿಲ್ಲುವುದನ್ನೂ ಪ್ರತಿಪಾದಿತವಾಗುತ್ತಿರುವ ವಿಚಾರಕ್ಕೆ ತನ್ನಿಂದ ಪುಷ್ಟಿಯೂ ಅವಧಾರಣೆಯೂ ಸಲ್ಲುತ್ತಿದೆಯೆಂದು ಪ್ರಕಟಗೊಳಿಸುವುದನ್ನೂ ನಾವು ಕಾಣಬಹುದು.

"ಅಕಟ ಲಕ್ಷ್ಮಣದೇವ ರಘುನಾಯಕನ ಮರಣದ ನುಡಿ ನಿನಗೆ ರಂ
ಜಕದ ರಾಗವೆರಹಿಯೆ ರಸಭಾವಕವೆ ರುಚಿಕರವೇ ।"

"ರಾಜರ ದೇವ ರಾಜಾದಿತ್ಯ ರಾಜಾಧಿರಾಜರ ರಾಜನಾ ಚಕ್ರಿ
ರಾಜಮಂದಿರ ಕೋಜೆಯಿಂದಡಿಯಿಟ್ಟನು । ರಾಜವಿಡಾಯ ಬಿಮ್ಮೆನಲು"

"ವಾರನಾರಿಯರು ತಾವಾರ ನಾರಿಯರೊ ಶೃಂಗಾರಕೆ ಸೋತು ಭೂವರನಾ"

"ಸುರಸೇನ ವರಸೇನ ಪುಷ್ಪಕರುವಿಂದ । ಅರವಿಂದ ಬಾರೆಂದು ನಮ್ಮಾ ।
ಕರೆದೊಂದು ಕಥೆಯ ಕೇಳೆಂದುಸುರುತ ಪೋ।ಪರರಸ ನೋಡವರ ತಂತ್ರವನು ॥"

ಮುಂತಾದ ಪ್ರಸಂಗಗಳಲ್ಲಿ ಪಡಿ ಪ್ರಾಸ ಅನುಪ್ರಾಸಗಳ ಮೂಲಕ ರಕಾರವು ವಿಷಯಕ್ಕೆ ದರ್ಪವನ್ನು ಹೆಚ್ಚಿಸಿಕೊಡುವುದೇ ಅಲ್ಲದೆ ತನ್ನ ಸ್ವಂತ ವ್ಯಕ್ತಿತ್ವವನ್ನೂ ಪ್ರದರ್ಶಿಸುತ್ತದೆ: ಕಾವ್ಯಾನಂದವನ್ನು ಕುಗ್ಗಿಸುವುದಿಲ್ಲ. ಆದರೆ ಈ ಪದ್ಯವನ್ನು ಪರಿಶೀಲಿಸಿ :

"ನಿರತರ್ ಭರಿತರ್ ಚರಿತರ್
ಪರತತ್ವರತರ್ ನುತರ್ ವಿರಕ್ತನ ತೇಜಃ
ಕಿರಣರ್ ಕರುಣರ್ ಶರಣರ್
ಕರುಣಾಳುಗಳರುಣಮಣಿನಿಭರ್ ನೆಲಸಿರ್ದರ್॥"

ರಕಾರದ ರಣನ ಅತಿಯಾಗಿ ಆಹ್ಲಾದಕ್ಕೆ ಭಂಗಬರುವುದಿಲ್ಲವೆ ? ರತ್ವಕ್ಕೆ ಕರ್ಕಶತೆ ಸ್ವಾಭಾವಿಕವಾಗಿ ಇರುವುದರಿಂದ ಅದನ್ನು ಜಾಗರೂಕತೆಯಿಂದ ಬಳಸಿಕೊಳ್ಳಬೇಕು. "ಸಿಷ್ಟ್ರ ರಾಷ್ಟ್ರ ಕವರ್ಗಾಭ್ರ ಪವನ ಜಯ" "ಇಂದ್ರ ಧರಣೀಧ್ರುಸಿಭಕ್ಷಮುರೀಡ್ಯ ಸತ್ಕ್ರಮುರ್"—ಇವನ್ನು ಉಚ್ಚರಿಸುವುದೆಂತು ? ಉಚ್ಚರಿಸಿದರೆ ಲಭಿಸುವ ಫಲವೇನು ?

■ ■



# ಉತ್ತರಕರ್ನಾಟಕದಲ್ಲಿ ಬಂಡೆಗಲ್ಲಿನ ವರ್ಣಚಿತ್ರಗಳು

ಅ. ಸುಂದರ

ವರ್ಣಚಿತ್ರಕಲೆ, ಕರ್ನಾಟಕದಲ್ಲಿ ಬಹಳ ಹಿಂದಿನ ಕಾಲದಿಂದಲೂ ಬೆಳೆದುಬಂದಿದೆ. ಅಜಂತಾದ ಕೆಲವು ಬೌದ್ಧ ಚೈತ್ಯಾಲಯಗಳಲ್ಲಿರುವ ವರ್ಣಚಿತ್ರಗಳು ಈಗಾಗಲೇ ಜಗತ್ಪ್ರಸಿದ್ಧ. ಇವುಗಳಲ್ಲಿ ಕೆಲವು ಕ್ರಿ. ಪೂ. ೨–೧ ನೇ ಶತಮಾನದವು. ಉಳಿದೆಲ್ಲವುದರ ಕಾಲ ಸು. ೬–೭ ನೇ ಶತಮಾನ. ಇದರಂತೆಯೇ ನಮ್ಮ ನಾಡಿನ ವಿಜಾಪುರ ಜಿಲ್ಲೆಯ ಬಾದಾಮಿಯಲ್ಲಿಯೂ ಸುಮಾರು ೬–೭ ನೇ ಶತಮಾನದ ವರ್ಣಚಿತ್ರಗಳಿವೆ. ಬಾದಾಮಿ ಚಾಲುಕ್ಯ ಮಂಗಳೇಶನು ಇಲ್ಲಿ ಮಾಡಿಸಿದ ವಿಷ್ಣುಲಯಣ (ಶಕ ವರ್ಷ ೫೦೦=ಕ್ರಿ. ಶ. ೫೭೮)ದಲ್ಲಿ ಅತ್ಯಂತ ಚೆಲುವಾದ ವರ್ಣಚಿತ್ರಗಳಿವೆ. ಬಹುಶಃ ಮಂಗಳೇಶನ ಇಲ್ಲವೆ ಇಮ್ಮಡಿ ಪುಲಕೇಶಿಯ ಕಾಲದವು. ಮತ್ತೆ ನಮಗೆ ಗೊತ್ತಿರುವ ಕೆಲವು ಚಿತ್ರ[೧]ಗಳು ವಿಜಯನಗರ ಸಾಮ್ರಾಜ್ಯ–ಆದಿಲ್‌ಷಾಹಿ ಕಾಲದ ಮತ್ತು ಮರಾಠರ, ಹೈದರ್–ಟೀಪ್ಪುಸುಲ್ತಾನ್–ನಾಲ್ಮಡಿ ಕೃಷ್ಣರಾಜರ ಕಾಲದವು. ಮೂಡಬಿದರೆ (ದಕ್ಷಿಣಕನ್ನಡ ಜಿಲ್ಲೆ) ಜೈನಮಠದಲ್ಲಿರುವ ೧೨ನೇ ಶತಮಾನದ ತಾಳೆಗರಿ, ಜೈನಧವಳ ಗ್ರಂಥದಲ್ಲಿಯ ಚಿತ್ರಗಳು, ಹಂಪಿಯ ವಿರೂಪಾಕ್ಷ ದೇವಾಲಯದ ಸಭಾಂಗಣದ ಛತ್ತಿನಲ್ಲಿರುವ, ೧೬ನೇ ಶತಮಾನದ ವಿದ್ಯಾರಣ್ಯರ(?) ಮೆರವಣಿಗೆಯ, ಮಹಾಭಾರತದ ಚಿತ್ರಗಳು, ವಿಜಾಪುರದ ಆಶಾರಮಹಲಿನಲ್ಲಿಯ ಹೂಬಳ್ಳಿ ಮೊದಲಾದ ಚಿತ್ರಗಳು ಅಲ್ಲದೇ ಇತರ ಕೆಲವು ಚಿತ್ರಗಳು, ಕುಮಟಗಿ (ವಿಜಾಪುರದ ಹತ್ತಿರ) ಜಲಮಂದಿರದ ಪೋಲೋ ಆಟದ ಚಿತ್ರ, ನಿಪ್ಪಾಣಿ (ಬೆಳಗಾಂವ ಜಿಲ್ಲೆ) ನರಗುಂದ (ಧಾರವಾಡ ಜಿಲ್ಲೆ) ವಾಡೆಗಳಲ್ಲಿಯ ಮರಾಠರ ಕಾಲದ ಚಿತ್ರಗಳು,

೧ ಶಿವರಾಮ ಕಾರಂತ, ಕೋ.; ೧೯೭೧ : ಕರ್ನಾಟಕದಲ್ಲಿ ಚಿತ್ರಕಲೆ, ಮೈಸೂರ ವಿಶ್ವವಿದ್ಯಾಲಯ, ಮೈಸೂರು, ವರ್ಣಚಿತ್ರಗಳು ೪–೧೬, ೨೫–೩೪.

ಶ್ರವಣಬೆಳಗೊಳದ ಕಮಠನ ಉಪಟಳದ ಚಿತ್ರಗಳು, ಶ್ರೀರಂಗಪಟ್ಟಣದ ಟಿಪ್ಪುಸುಲ್ತಾನ್‌ನ ಅರಮನೆಯಲ್ಲಿ ಮತ್ತು ಮೈಸೂರಿನಲ್ಲಿಯ ಈಗಿನ ಅರಮನೆಯಲ್ಲಿಯ ಭಿತ್ತಿಚಿತ್ರಗಳನ್ನು ಉದಾಹರಿಸಬಹುದು. ಇವೆಲ್ಲವೂ ಆಯಾಯ ಕಾಲದ ನಾಗರಿಕ ಜೀವನದ ಪ್ರಗತಿಪದ ಅನುವಂಶಿಕ ಕಲೆಯ ಕೊಡುಗೆಗಳು. ತಾಂತ್ರಿಕ ಕುಶಲತೆ, ವರ್ಣ ಸಂಯೋಜನೆ, ಪಕ್ವಶೈಲಿ ಇವುಗಳ ವಿಶಿಷ್ಟಲಕ್ಷಣಗಳು. ರಾಮಾಯಣ ಮಹಾ ಭಾರತದ ಕಥೆಗಳು, ಜೈನಪುರಾಣ ಕಥೆಗಳು, ವೈಭವಯುತ ರಾಜಸಭೆ, ನೃತ್ಯಸಭೆ, ರಾಜರಾಣಿಯರ ಪ್ರೇಮ ಸಲ್ಲಾಪ ಹಾಗು ಶ್ರೀಮಂತವರ್ಗ ಸಾಂಸಾರಿಕ ಜೀವನ, ಆಟಗಳ ದೃಶ್ಯಗಳು, ಯುದ್ಧರಂಗ, ಇವೇ ಮೊದಲಾದವುಗಳು ಚಿತ್ರಿಸಲ್ಪಟ್ಟಿವೆ. ಈ ಚಿತ್ರಗಳು ದೇವಾಲಯ. ರಾಜಭವನ ಮತ್ತು ಶ್ರೀಮಂತರ ಸೌಧಗಳಲ್ಲಿವೆ. ಇವು ಗಳನ್ನು ಬರೆಸಿದವರು ರಾಜಮನೆತನದವರು, ಮಾಂಡಲಿಕರು ಮತ್ತು ಶ್ರೀಮಂತ ಜನರು. ಅವರು ತಮ್ಮ ಕಾಲದ ಒಳ್ಳೆಯ ಪ್ರತಿಭಾನ್ವಿತ ವರ್ಣಚಿತ್ರಕಾರರನ್ನು ನಿಯಮಿಸಿ ಕೊಂಡು ತಮಗೆ ಅಭಿರುಚಿಯುಳ್ಳ ವಿಷಯಗಳನ್ನು ಅವರಿಗೆ ತಿಳಿಯ ಹೇಳುತ್ತಿದ್ದರು. ಅವರು ಇವೆಲ್ಲವನ್ನು ಗ್ರಹಿಸಿಕೊಂಡು ತಮ್ಮ ಸೃಜನಶಕ್ತಿಯಿಂದ ಇಂಥ ಚಿತ್ರಗಳನ್ನು ಬರೆದು ಸಂಪತ್ತು, ಗೌರವ, ಹೆಸರು ಗಳಿಸುತ್ತಿದ್ದರು. ಈ ಚಿತ್ರಕಾರರು ಚಿತ್ರಕಲಾ ಕಾರರ ಪರಂಪರೆಯಲ್ಲಿ ಬೆಳೆದು. ಚಿಕ್ಕಂದಿನಿಂದಲೂ ಈ ಕಲೆಯನ್ನು ಮೈಗೂಡಿಸಿ ಕೊಂಡು, ಶಾಸ್ತ್ರೀಯವಾಗಿ ಅಭ್ಯಸಿಸಿ ತಮ್ಮ ಆಸಕ್ತಿ, ಪ್ರತಿಭೆಯನ್ನು ಬೆಳೆಸಿಕೊಂಡ ವರು. ಆದ್ದರಿಂದ ಇದೇ ಕಲಾಕೃತಿಗಳು ಲಾಕ್ಷಣಿಕವಾಗಿಯೂ ಆಯಾಯ ಕಾಲದ ಶ್ರೇಷ್ಠಮಟ್ಟದ ವರ್ಣಚಿತ್ರಗಳಾಗಿ ಮೆರೆದವು. ಇಂದಿಗೂ ಅವು ತಮ್ಮ ಪರಂಪರೆ ಯಲ್ಲಿಯ ವಿಶಿಷ್ಟಸ್ಥಾನವನ್ನು ಸೂಚಿಸುತ್ತವೆ. ಇದು ವರ್ಣಚಿತ್ರಕಲೆಯ ಇತಿಹಾಸದ ಒಂದು ಶಾಖೆ.

ಈ ಕಲೆ, ಕಲಾಭಿರುಚಿಯುಳ್ಳ ಕೇವಲ ಸುಸಂಸ್ಕೃತ ಶ್ರೀಮಂತ. ರಾಜಮನೆತನದವರ ಪೋಷಣೆಯಲ್ಲಿ ಬೆಳೆದುದಲ್ಲದೇ, ಸಮಾಜದ ಜನಸಾಮಾನ್ಯರಲ್ಲೂ ಮತ್ತೊಂದು ರೀತಿ ಯಲ್ಲಿ ಬೆಳೆಯುತ್ತ ಬಂದಿದೆ. ಈ ಶಾಖೆಯ ಇತಿಹಾಸ ಬಹಳ ಪ್ರಾಚೀನ. ಪ್ರಾಗಿತಿಹಾಸ ಜನಾಂಗದವರಲ್ಲಿ ಇದು ಹುಟ್ಟಿ ಬೆಳೆಯಿತು. ಈ ಕಲೆ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಯಾವುದೇ ವಿಶೇಷ ಕುಶಲತೆಯಿಂದ ರಚಿಸಿಕೊಂಡ ತಾಂತ್ರಿಕ ಸಾಧನೆ ಗಳನ್ನು ಬಳಸದೆ, ನೇರವಾಗಿ ಬಿಡಿಸಿದ ಸರಳ ಆದರೆ ಮಾರ್ಮಿಕ ರೇಖಾಚಿತ್ರಗಳು. ಕತ್ತಲು ಗವಿಗಳಲ್ಲಿ ಬಂಡೆಯ ಮೇಲೆ ಅಲ್ಲಿಯೇ ದೊರೆಯುವ ಕೆಂಪು, ಕಪ್ಪು, ಬಿಳಿ ಮಣ್ಣಿನ ಬಣ್ಣದ/ಗಳ ಚಿತ್ರಗಳು ಇವು. ಅತ್ಯಂತ ಶ್ರಮದಾಯಕವಾದ ತಮ್ಮ ಜೀವನ ವನ್ನು ಭರಿಸುವ ಪ್ರಾಣಿಗಳೇ ಹೆಚ್ಚಾಗಿ ಇವರ ಚಿತ್ರಗಳ ಮುಖ್ಯ ವಸ್ತು. ತನ್ನ ಕೆಲ ಸಕ್ಕೆ ಉಪಯೋಗವಾಗುತ್ತಿದ್ದ, ತನಗೆ ಆಹಾರವಾಗುತ್ತಿದ್ದ ಈ ಪ್ರಾಣಿಗಳ ಸಂಗ್ರಹ. ವಂಶಾಭಿವೃದ್ಧಿಯೇ ಈ ಚಿತ್ರಗಳ ಭಾವಾರ್ಥ. ಇದಕ್ಕೆ ಮಾಂತ್ರಿಕ ಪ್ರಭಾವವೂ ಇದೆ

ಎಂದು ಭಾವಿಸಲಾಗಿತ್ತು. ಪ್ರಪಂಚದ ಕೆಲವು ಭಾಗಗಳಲ್ಲಿ ಇಂಥ ಗವಿಚಿತ್ರಗಳು ಶೋಧವಾಗಿವೆ. ಪಶ್ಚಿಮ ಯುರೋಪಿನ ಅಲ್ತಮೀರ (ಸ್ಪೇನ್), ಲ್ಯಾಸ್ಕೊ (ಫ್ರಾನ್ಸ) ಮುಂತಾದೆಡೆಗಳಲ್ಲಿ ಶೋಧವಾದ ಈ ಗವಿಚಿತ್ರ[೨]ಗಳು ಈಗಾಗಲೇ ಜಗತ್ಪ್ರಸಿದ್ಧವಾಗಿವೆ. ಕೆಲವುದರ ಅತಿ ಪ್ರಾಚೀನತೆ ಆಶ್ಚರ್ಯಚಕಿತವಾಗಿದೆ. ಹಳೆ ಶಿಲಾಯುಗದ ಕೊನೆಯ ಹಂತದ ಜನರದ್ದು ಸುಮಾರು ಹತ್ತು ಸಾವಿರದಿಂದ ಇಪ್ಪತ್ತು, ಮೂವತ್ತು ಸಾವಿರ ವರ್ಷಗಳಷ್ಟು ಹಳೆಯದು.

ನಮ್ಮ ದೇಶದಲ್ಲಿಯೂ (ಕರ್ನಾಟಕವು ಸೇರಿ) ಇಂಥ ಗವಿ/ಬಂಡೆ ಚಿತ್ರಗಳು ಅಲ್ಲೊಂದು ಇಲ್ಲೊಂದು ಕಳೆದ ಶತಮಾನದ ಕೊನೆಯ ಭಾಗ[೩]ದಲ್ಲಿ ಮತ್ತು ಈ ಶತಮಾನದ ಆದಿ ಭಾಗ[೪]ದಲ್ಲಿ ಶೋಧವಾದವು. ಇವುಗಳ ಬಗ್ಗೆ ಕೆಲವೊಂದು ಲೇಖನಗಳು ಪ್ರಕಟವಾದವು. ಆದರೆ ಇವುಗಳ ಕಡೆ ತೀವ್ರ ಗಮನ ಹರಿಸಿ ಸತತ ಅನ್ವೇಷಣೆ, ಅಭ್ಯಾಸ ನಡೆಯುತ್ತಿರುವದು ಎರಡು ದಶಕಗಳಿಂದೀಚೆಗೆ, ಸುಮಾರು ೧೯೫೪ರ ರಿಂದ. ಮಧ್ಯಪ್ರದೇಶ ಮತ್ತು ಉತ್ತರಪ್ರದೇಶಗಳ ಮರಳುಕಲ್ಲಿನ ಬೆಟ್ಟಗಳಲ್ಲಿಯ ನೂರಾರು ಗವಿಗಳಲ್ಲಿ ಇಂಥ ಚಿತ್ರಗಳಿವೆ. ಕೆಲವು ಕನಿಷ್ಠ ೮,೦೦೦–೧೦,೦೦೦ ವರ್ಷಗಳಷ್ಟು ಹಿಂದಿನವು. ಇತ್ತೀಚೆಗೆ ದಕ್ಷಿಣಭಾರತದ ಉತ್ತರಕರ್ನಾಟಕ ಭಾಗದಲ್ಲಿ ಹೆಚ್ಚಾಗಿ ವರ್ಣಚಿತ್ರಗವಿಗಳು ಬೆಳಕಿಗೆ ಬಂದಿವೆ. ನಮ್ಮ ನಾಡಿನ ಈ ಪ್ರಕಾರದ ಗವಿವರ್ಣಚಿತ್ರಕಲೆಯ ಲಕ್ಷಣ ಮತ್ತು ಬೆಳವಣಿಗೆಯ ಸ್ಥೂಲ ಪರಿಚಯವನ್ನು ಮೂರು ಉದಾಹರಣೆಗಳಿಂದ ಮಾಡಿ ಕೊಡುವುದೇ ಈ ಲೇಖನದ ಉದ್ದೇಶ.

**ವರ್ಣಚಿತ್ರಗಳ ಶೋಧನೆ :** ಬಯಲಿಗಿರುವ ಬಂಡೆಗಳ ಮೇಲೆ ಕುಟ್ಟಿ ತೆಗೆದ ಚಿತ್ರಗಳು ಕುಪ್ಪಗಲ್ (ಬಳ್ಳಾರಿ ಜಿ.), ಭಿಲ್ಲಮರಾಯನ ಗುಡ್ಡ (ಲಿಂಗಸುಗೂರು ತಾ. ರಾಯಚೂರು ಜಿ.) ಮುಂತಾದೆಡೆಗಳಲ್ಲಿ ಸುಮಾರು ೧೯ನೇ ಶತಮಾನದ ೮ ನೇ ದಶಕದಿಂದಲೆ ಶೋಧವಾಗುತ್ತಿದ್ದವು. ಕುಪ್ಪಗಲ್ಲಿನವುಗಳನ್ನು ಹ್ಯೂಬರ್ಟ್ ನಾಕ್ಸ್[೫] ಎಂಬವರು ಪತ್ತೆಮಾಡಿದರು. ಅಲ್ಲೊಂದು ಇಲ್ಲೊಂದು ಗವಿಚಿತ್ರಗಳು ಶೋಧವಾದುದು ೧೯೩೫ ರಿಂದೀಚೆಗೆ. ಈ ಶೋಧಗಳಲ್ಲಿ ಪ್ರಾಯಶಃ ಲಿಯನಾರ್ಡೊಮನ್ ರವರು ಬೆಳಕಿಗೆತಂದ ಹಿರೆಬೆನಕಲ್ಲಿ (ಗಂಗಾವತಿ ತಾ, ರಾಯಚೂರು ಜಿ)ನ ಮೂರೂ

---

೨ ಪೊವೆಲ್, ಟಿ. ಜಿ. ಇ; ೧೯೬೬ : ಪ್ರಿಹಿಸ್ಟಾರಿಕ್ ಆರ್ಟ್ ನ್ಯೂಯಾರ್ಕ, ಪುಟಗಳು ೧–೬೩ ಚಿತ್ರಗಳು ೧–೬೨

೩ ಫುಟ್ ಆರ್. ಬಿ; ೧೯೧೬ : ಇಂಡಿಯನ್ ಪ್ರಿಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟಿಸ್ (ನೋಟ್ಸ ಆನ್ ದೇರ್ ಏಜಸ್ ಆ್ಯಂಡ್ ಡಿಸ್ಟ್ರಿಬ್ಯೂಶನ್) ಮದ್ರಾಸ್. ಪುಟಗಳು ೮೭–೮೯

೪ ಮನ್ ಲಿಯೋನಾರ್ಡ್; ೧೯೩೫ : "ಪ್ರಿಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಫೈಂಡ್ಸ್ ಆಫ್ ದಿ ರಾಯಚೂರ ಆ್ಯಂಡ್ ಶೋರಾಪುರ ಡಿಸ್ಟ್ರಿಕ್ಟ್ಸ ಆಫ್ ಎಚ್. ಇ. ದಿ ನೈಜಾಮ್ಸ ಡೊಮಿನಿಯನ್ಸ್" ಮ್ಯಾನ್ ಇನ್ ಇಂಡಿಯ ಸಂಪುಟ XV ಪುಟಗಳು ೨೨೫–೩೦

೫ ಫುಟ್ ಆರ್. ಬಿ. : ೧೯೧೬ ಆದೇ ಕಡೆ.

ವರ್ಣಚಿತ್ರಗವಿಗಳೇ ಮೊದಲನೆಯವೆಂದು ತೋರುವವು. ಅನಂತರ ಹಿಂದಿನ ಹೈದರಾಬಾದ್ ಸಂಸ್ಥಾನದ ಭೂವಿಜ್ಞಾನ ಸರ್ವೇಕ್ಷಣ ಶಾಖೆಯವರು ಬಲಜಕ್ರ[೬] (ಯಾದಗಿರಿ ತಾ. ಗುಲ್ಬರ್ಗಾ ಜಿ.)ದಲ್ಲಿ ಒಂದು ವರ್ಣಚಿತ್ರ ಗವಿಯನ್ನು ೧೯೪೧ ರಲ್ಲಿ ಶೋಧಿಸಿದರು. ಮೂರು, ನಾಲ್ಕು ವರ್ಷಗಳ ನಂತರ ರಾಯಚೂರಿಗೆ ಸಮೀಪವಾಗಿರುವ ತೊಗಲ್‌ಗುಡ್ಡ[೭] ಎಂಬಲ್ಲಿ ಇನ್ನೊಂದು ವರ್ಣಚಿತ್ರ ಗವಿಯ ಬಗ್ಗೆ ಪ್ರಕಟಿಸಲಾಯಿತು. ಅಲ್ಚಿನ್ ದಂಪತಿಗಳು ೧೯೫೧ ರಲ್ಲಿ ಮುದಗಲ್-ಪಿಕ್ಲಿಹಾಳ್ ಭಾಗದಲ್ಲಿ ಅನ್ವೇಷಣೆ ನಡೆಸುತ್ತಿದ್ದಾಗ ಪಿಕ್ಲಿಹಾಳ್ ಬೆಟ್ಟಗಳಲ್ಲಿ ಕೆಲವು ವರ್ಣಚಿತ್ರ ಗವಿಗಳನ್ನು, ಕುಟ್ಟಿ ತೆಗೆದ ಚಿತ್ರಗಳನ್ನು ಶೋಧಿಸಿ ಆನಂತರ ತಮ್ಮ ಪಿಕ್ಲಿಹಾಳ್ ಉತ್ಖನನ ವರದಿ[೮]ಯಲ್ಲಿ ಅವುಗಳ ಬಗ್ಗೆ ಪ್ರಕಟಿಸಿದರು. ಬಾದಾಮಿ (ವಿಜಾಪುರ ಜಿ.)ಗೆ ಸುಮಾರು ೫ ಕಿ. ಮೀ. ದೂರದಲ್ಲಿರುವ "ಶಿಡ್ಲಫಡಿ"[೯] ಗವಿಯಲ್ಲಿ ವರ್ಣಚಿತ್ರಗಳಿವೆಯೆಂಬ ವದಂತಿ ಸುಮಾರು ೧೯೫೫-೫೬ ರಿಂದಲೇ ಇತ್ತು. ಉಜ್ಜಯಿನಿ (ಮಧ್ಯ ಪ್ರದೇಶ) ಯ ವಿಕ್ರಮ ವಿಶ್ವವಿದ್ಯಾಲಯದ ನನ್ನ ಸ್ನೇಹಿತ ಡಾ. ವಾಕಣ್‌ಕರವರು (ಮಧ್ಯಪ್ರದೇಶದಲ್ಲಿ ನೂರಾರು ವರ್ಣಚಿತ್ರ ಗವಿಗಳನ್ನು ಶೋಧಿಸಿ, ಇವುಗಳ ಮಹತ್ವವನ್ನು ಪ್ರಕಟಿಸಿ, ಇಂಥ ಚಿತ್ರಗಳ ಶೋಧನೆ, ಅಭ್ಯಾಸದ ಕಡೆ ತಜ್ಞರ ತೀಕ್ಷ್ಣ ಗಮನ ಸೆಳೆದ ಕೀರ್ತಿ ಬಹುಪಾಲು ಇವರಿಗೆ ಸಲ್ಲುತ್ತದೆ.) ೧೯೬೨ ರಲ್ಲಿ ಬಾದಾಮಿಯ ಶಿಡ್ಲಫಡಿ ನೋಡಲು ಹೋದಾಗ ಇವೆರಡು ಸ್ಥಳಗಳ ಮಧ್ಯ ಇರುವ 'ಸಿಕಿದೋಣಿ' ಹತ್ತಿರ ಒಂದು ದೊಡ್ಡ ವರ್ಣಚಿತ್ರ ಗವಿ[೧೦]ಯನ್ನು ನೋಡಿ ವರದಿ ಮಾಡಿದರು.

ಮನ್‌ರವರು ವರದಿ ಮಾಡಿದ ಹಿರೆಬೆನಕಲ್ಲಿನ ಮೂರು ಚಿತ್ರಗವಿಗಳ ಮೇಲೆ ಡಿ. ಎಚ್. ಗೋರ್ಡನ್ ಮತ್ತು ಎಫ್. ಆರ್. ಅಲ್ಚಿನ್ ಒಂದು ಸಂಶೋಧನ ಲೇಖನವನ್ನು[೧೧] ಪ್ರಕಟಿಸಿದರು.

---

೬ ಸಮ್ಮದ್ ಹಜೀಜ್; ೧೯೪೧ : "ಜಿಯಾಲಜಿ ಆಫ್ ದಿ ಯಾದ್‌ಗಿರ್ ತಾಲೂಕ. ಗುಲ್ಬರ್ಗ ಡಿಸ್ಟ್ರಿಕ್ಟ" ಜರ್ನಲ್ ಆಫ್ ದಿ ಹೈದರಾಬಾದ್ ಜಿಯಾಲಜಿಕಲ್ ಸರ್ವೆ. ಸಂಪುಟ IV ಸಂಚಿಕೆ ೧. ಪುಟಗಳು ೧೮೮.

೭ ಆನ್ಯುಯಲ್ ರಿಪೋರ್ಟ ಆಫ ದಿ ಆರ್ಕಿಯಾಲಜಿಕಲ್ ಡಿಪಾರ್ಟಮೆಂಟ್ ಆಫ್ ಎಗ್ಸಾಲ್ಟೆಡ್ ಹೈನೆಸ್ ದಿ ನಿಜಾಮ ಡೋಮಿನಿಯನ್ಸ ೧೯೪೨ ಪ್ಲೇಟ್ XV (b) ಪುಟಗಳು ೨೬-೨೮.

೮ ಅಲ್ಚಿನ ಎಫ್. ಆರ್; ೧೯೬೦ : ಪಿಕ್ಲಿಹಾಳ್ ಎಕ್ಸ್‌ಕವೇಶನ್ಸ, ಹೈದರಾಬಾದ್, ಪು. ೧೦-೧೬

೯ ಪ್ರೊಗ್ರೆಸ್ ರಿಪೋರ್ಟ್ಸ ಆಫ್ ದಿ ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ ಫಾರ್ ೧೯೫೩-೫೬ ಪುಟ ೨೫.

೧೦ ವಿಷ್ಣು, ಎಸ್ ವಾಕಣಕರ; ೧೯೬೨ : "ಪೈಂಟೆಡ್ ರಾಕ್ ಷೆಲ್ಟರ್ಸ ಆಫ್ ಇಂಡಿಯ" ರಿವಿಸ್ತ ದಿ ಸೈನ್ಸ ಪ್ರಿಹಿಸ್ಟಾರಿಚೆ ಸಂಪುಟ XVII. ಸಂಚಿಕೆ ೧-೪. ಪು. ೨೩೮.

೧೧ ಗೋರ್ಡಾನ್ ಡಿ. ಎಚ್. ಮತ್ತು ಅಲ್ಚಿನ್. ಎಫ್. ಆರ್; ೧೯೫೫ : "ರಾಕ್ ಪೈಂಟಿಂಗ್ಸ ಆ್ಯಂಡ್ ಎಂಗ್ರೇವಿಂಗ್ಸ ಇನ್ ರಾಯಚೂರ, ಹೈದರಾಬಾದ್". ಮ್ಯಾನ್ ಸಂಪುಟ LV, ಪುಟಗಳು ೯೫-೯೬.

ಏಣೆಸಲಸವಳವಾದ ಬೃಹತ್ ಬಂಡೆಗಳ ರಾಶಿಗಳಿಂದ ಕೂಡಿದ ಎತ್ತರ ಬೆಟ್ಟದ ಸಾಲುಗಳಲ್ಲಿ ಎಲ್ಲಲ್ಲಿಯೂ ಹಲವಾರು ಕಲ್ಲಾಸರೆಗಳು ಇಲ್ಲವೆ ಗವಿಗಳು ಇವೆ. ಇಂಥ ಯಾವುದೋ ಗವಿ ಕಲ್ಲಾಸರೆಗಳಲ್ಲಿ ವರ್ಣಚಿತ್ರಗಳಿವೆ. ಸಾಮಾನ್ಯವಾಗಿ ಬಂಡೆಗಳ ಸಂದಿಗಳಲ್ಲಿ ನುಸುಳಿ ಹೋಗುವಾಗ ಸಹಜವಾಗಿ ದಾರಿ ತಪ್ಪುವದು. ಆದ್ದರಿಂದ ವರ್ಣ ಚಿತ್ರಗವಿಗಳನ್ನು ಹುಡುಕುವದು ನಿಜವಾಗಿಯೂ ಬಹು ಪ್ರಯಾಸದ ಕೆಲಸ.

ನಾನು ೧೯೬೧-೬೨ ರಲ್ಲಿ ದಂತಕಥೆಯಂತೆ ರಾಮಾಯಣದ ಕಿಷ್ಕಿಂಧೆಯೆಂದು ಕರೆಯು ಲಾದ ಆನೆಗೊಂದಿ ಪ್ರದೇಶದ ಅನ್ವೇಷಣೆ ಕೈಕೊಂಡಾಗ ವೆಂಕಟಾಪುರ (ಹೊಸಪೇಟೆ ತಾ. ಬಳ್ಳಾರಿ ಜಿ.) ದಲ್ಲಿಯ 'ವಾಲಿದಿಬ್ಬದ' ಸಮೀಪದಲ್ಲಿಯೂ ಆನೆಗೊಂದಿ ಮತ್ತು ಚಿಕ್ಕರಾಮಪುರ (ಗಂಗಾವತಿ ತಾ)ದಲ್ಲಿಯೂ ಒಟ್ಟು ೪ ಗವಿಚಿತ್ರಗಳನ್ನು[೧೨] ಶೋಧಿಸಿದೆ. ೧೯೬೪-೬೫ ರಲ್ಲಿ ಎಂ. ಎಸ್. ನಾಗರಾಜರಾಯರು ತೆಕ್ಕಲಕೋಟೆಯಲ್ಲಿ ಪುರಾತತ್ವ ಉತ್ಖನನ ನಡೆಸುತ್ತಿದ್ದಾಗ ಒಂದು ಕಲ್ಲಾಸರೆಯಲ್ಲಿ ವರ್ಣಚಿತ್ರವನ್ನು[೧೩] ಮತ್ತು ೧೯೬೫ ರ ಕೊನೆಯಲ್ಲಿ ಸಂಗನಕಲ್ಲಿನಲ್ಲಿ ಮತ್ತೊಂದನ್ನು ಶೋಧಿಸಿದರು.

೧೯೬೮ರಲ್ಲಿ ಪುರಾತತ್ವ ಸರ್ವೇಕ್ಷಣ ಇಲಾಖೆ, ನೈರುತ್ಯ ಮಂಡಳದ ಅಧಿಕಾರಿಗಳಾಗಿದ್ದ ಡಾ. ವೈ. ಡಿ. ಶರ್ಮರವರು ಹಿರೆಬೆನಕಲ್ಲಿನ ಗವಿಗಳನ್ನು ಸ್ವತಃ ಹುಡುಕಲು ಪ್ರಯತ್ನಿಸಿ ಒಂದನ್ನು ಮಾತ್ರ ಗುರುತಿಸಿದರು. ವಯಸ್ಸಿನ ಹಾಗೂ ಅನಾರೋಗ್ಯದ ಕಾರಣದಿಂದ ಉಳಿದೆರಡು ಹುಡುಕುವದನ್ನು ಅದೇ ಮಂಡಳದಲ್ಲಿ ಪುರಾತತ್ವ ಅನ್ವೇಷಣೆ ಕೆಲಸವನ್ನು ಮಾಡುತ್ತಿದ್ದ ನನಗೆ ಒಪ್ಪಿಸಿದರು. ಆಗಿನ ನನ್ನ ಅನ್ವೇಷಣೆಯಲ್ಲಿ ಅವುಗಳನ್ನು ಪುನಃ ಪತ್ತೆ ಮಾಡಿದುದಲ್ಲದೆ ಹೊಸದಾಗಿ ಏಳು ಚಿತ್ರಗವಿಗಳು ಸಿಕ್ಕವು. ಅಂದಿನಿಂದ ನನಗೆ ಇವುಗಳ ಅಭ್ಯಾಸದಲ್ಲಿ ಆಸಕ್ತಿ ಹೆಚ್ಚಾಗುತ್ತ ಬಂತು. ಈ ಹತ್ತು ಗವಿವರ್ಣಚಿತ್ರಗಳ ಮೇಲೆ ಆಂಗ್ಲಭಾಷೆಯಲ್ಲಿ[೧೪] ಒಂದು ಮತ್ತು ಕನ್ನಡದಲ್ಲಿ ಒಂದು ಲೇಖನವನ್ನು[೧೫] ಪ್ರಕಟಿಸಿದೆನು. ಇಂಥ ಗವಿಚಿತ್ರಗಳು ಇನ್ನೂ ಹಲವಾರು ಸಿಗಬಹುದೆಂಬ ಸೂಚನೆ ಗಳಿದ್ದರಿಂದ ನನ್ನ ಅನ್ವೇಷಣೆ ಮುಂದುವರಿಸಬೇಕೆಂದು ಒಂದು ಯೋಜನೆಯನ್ನು ವಿಶ್ವ ವಿದ್ಯಾಲಯ ಅನುದಾನ ಆಯೋಗಕ್ಕೆ ಸಲ್ಲಿಸಿದೆ. ಅದಕ್ಕೆ ಒಪ್ಪಿಗೆ ನೀಡಿ ನನ್ನ ಸಂಶೋ ಧನೆ ಕಾರ್ಯಕ್ಕೆ ಧನ ಸಹಾಯ ನೀಡಿತು. ೧೯೭೫ ರಿಂದ ಅನ್ವೇಷಣೆಯನ್ನು ನನಗೆ

೧೨ ಇಂಡಿಯನ್ ಅರ್ಕಿಯಾಲಜಿ, ಎ. ರಿವ್ಯೂ, ೧೯೬೧-೬೨, ಪುಟ ೧೦೨.

೧೩ ನಾಗರಾಜರಾವ್. ಎಂ. ಎಸ್; ೧೯೬೫ : ದಿ ಸ್ಟೋನ್ ಏಜ್ ಹಿಲ್‌ಡ್ವೆಲರ್ಸ್ ಆಫ್ ತೆಕ್ಕಲಕೋಟ, ಪೂನಾ, ಪುಟಗಳು ೬೭-೯೯. ಚಿತ್ರ ೩೧.

೧೪ ಸುಂದರ, ಅ: ೧೯೭೪ : "ಫರ್ದರ್ ನೋಟೆಶಿಸ್ ಆಫ್ ರಾಕ್ ಪೈಂಟಿಂಗ್ಸ ಇನ್ ಬೆನಕಲ್", ಜರ್ನಲ್ ಆಫ್ ಇಂಡಿಯನ್ ಹಿಸ್ಟ್ರಿ, ಸಂಪುಟ III. ಸಂಚಿಕೆ ೧, ಪುಟಗಳು ೨೧-೩೨.

೧೫ ಸುಂದರ ಅ: ೧೯೭೪ : 'ಕರ್ನಾಟಕದಲ್ಲಿಯ ಪ್ರಾಗೈತಿಹಾಸಿಕ ವರ್ಣಚಿತ್ರಗಳು' ಸವಿಸಂಚಯ (ಶ್ರೀ ಸದಾಶಿವ ಒಡೆಯರ ಅವರ ೫೦ ನೆಯ ಹುಟ್ಟುಹಬ್ಬದ ಸಂಸ್ಮರಣ ಸಂಪುಟ, ಚೌಡಯ್ಯದಾನಪುರ, ಪುಟಗಳು ೧೮೯-೨೦೭)

ಬಿಡುವು ದೊರೆತಾಗೆಲ್ಲ ಮುಂದುವರಿಸಿದೆ. ಇದರಿಂದ ಇದುವರೆಗೂ ಸುಮಾರು ೨೨ ಸ್ಥಳಗಳಲ್ಲಿ[೧೬] ಒಟ್ಟು ಇಂಥ ೭೪ ವರ್ಣಚಿತ್ರಗವಿಗಳು ಶೋಧವಾಗಿವೆ. ಇವು ಹಿರೆಬೆನಕಲ್–ಹಂಪಿ ಪ್ರದೇಶದಲ್ಲಿಯೇ ಹೆಚ್ಚಾಗಿವೆ. ಸುಮಾರು ೧೦ ಸ್ಥಳಗಳಲ್ಲಿ ೩೪ ಚಿತ್ರಗಳಿವೆ. ಸಂಗನಕಲ್ಲು–ಕುರಗೋಡು–ತೆಕ್ಕಲಕೋಟೆ ಪ್ರದೇಶ, ರಾಯಚೂರು–ಯಾದಗಿರಿ ಪ್ರದೇಶ ಮತ್ತು ಬಾದಾಮಿ-ಐಹೊಳೆ ಪ್ರದೇಶಗಳಲ್ಲಿ ಕ್ರಮವಾಗಿ ೭, ೫ ಮತ್ತು ೧೨ ಗವಿಚಿತ್ರಗಳಿವೆ. ಬಾದಾಮಿ–ಐಹೊಳೆ ಪ್ರದೇಶವೊಂದನ್ನು ಬಿಟ್ಟು ಉಳಿದೆಡೆಗಳಲ್ಲಿ ಸಾಮಾನ್ಯವಾಗಿ ಬಹಳ ಪ್ರಾಚೀನ ಅಂದರೆ ಶಿಲಾ–ತಾಮ್ರಯುಗ ಚಿತ್ರಗಳಲ್ಲಿ ಮನುಷ್ಯರ, ಪ್ರಾಣಿಗಳ, ಪಕ್ಷಿಗಳ ವಿಚಿತ್ರ ರೇಖಾಚಿತ್ರಗಳು ಬಿಡಿಯಾಗಿಯೂ, ಗುಂಪು ಗುಂಪಾಗಿಯೂ ಇವೆ. ಬಿಡಿಚಿತ್ರಗಳಲ್ಲಿ, ವಂಶಾಭಿವೃದ್ಧಿಯ ಸಂಕೇತವಾದ ನಗ್ನ ಗಂಡಸಿನ ಚಿತ್ರ, ಗರ್ಭಧರಿಸಿದ ಜಿಂಕೆ, ಟಗರಿ, ಎತ್ತು, ಆಕಳು, ಆನೆ, ಹುಲಿ, ಚಿರತೆ, ಮೊಸಳೆ, ನವಿಲು ಮತ್ತು ವಿವಿಧ ರೇಖಾಚಿತ್ರಗಳು. ಗುಂಪುಚಿತ್ರಗಳಲ್ಲಿ ಸಮೂಹ ನೃತ್ಯ, ಬೇಟೆಯಾಡುವ ದೃಶ್ಯಗಳಿವೆ. ಇವುಗಳನ್ನು (ರಕ್ತಮಿಶ್ರಿತ ?) ಕೆಮ್ಮಣ್ಣಿನ ಬಣ್ಣದಿಂದ ಬರೆಯಲಾಗಿದೆ. ಒಂದೊಂದು ಗವಿ ಕಲ್ಲಾಸರೆಯಲ್ಲೂ ಅಪರೂಪವಾಗಿ ಒಂದೆರಡು ಇಲ್ಲವೆ ಸಾಮಾನ್ಯವಾಗಿ ಹಲವಾರು ವಿವಿಧ ಚಿತ್ರಗಳಿರುತ್ತವೆ. ಇವು ಒಂದು ಕ್ರಮದಲ್ಲಿರದೆ ಚೆಲ್ಲಾಪಿಲ್ಲಿಯಾಗಿ ಅನುಕೂಲವಾದ ಸಿಕ್ಕಿದೆಡೆಗಳಲ್ಲಿ ಇವೆ. ಮತ್ತು ಒಂದೇ ಸಲಕ್ಕೆ ಎಲ್ಲವನ್ನೂ ಬಿಡಿಸಿದುದಲ್ಲ. ಅಲ್ಲಲ್ಲಿ ಒಂದರ ಮೇಲೊಂದು ಇವೆ. ಶೈಲಿ, ಪ್ರಮಾಣ, ಬದ್ಧತೆಗಳಲ್ಲಿ, ಬಣ್ಣದ ಛಾಯೆ, ಒತ್ತುಗಳಲ್ಲಿ ವೈಪರೀತ್ಯಗಳಿವೆ. ಮನುಷ್ಯ, ಪ್ರಾಣಿ, ಪಕ್ಷಿ ಚಿತ್ರಗಳೆಲ್ಲವೂ ಛಾಯಾಕೃತಿಗಳು. ಪ್ರಾಣಿ, ಪಕ್ಷಿಗಳ ಚಿತ್ರಗಳು ಎಡ ಬಲ ಬದಿಯ, ಮನುಷ್ಯರ ಬದಿಗಳ ಹಾಗೂ ಮುಂಬದಿಯ ಸ್ವರೂಪದ ಛಾಯಾ ರೂಪದಲ್ಲಿ ಬಿಡಿಸಲಾಗಿರುತ್ತದೆ.

ಮೇಲೆ ಹೇಳಿದ ಮೊದಲನೇ ಎರಡು ಪ್ರದೇಶಗಳಲ್ಲಿ ಬಹಳಷ್ಟು ಈ ತರಹದ ಚಿತ್ರಗಳೆ ಹೆಚ್ಚು. ಬಾದಾಮಿ-ಐಹೊಳೆ ಪ್ರದೇಶದಲ್ಲಿ ಬಿಡಿಚಿತ್ರಗಳೇ ಇದ್ದು ಬೇರೆ ತರಹ

---

೧೬ ೧ ಹಿರೆಬೆನಕಲ್ (೧೨); ೨ ಚಿಕ್ಕರಾಮಪುರ (೫); ೩ ಮಲ್ಲಾಪುರ (೨); ೪ ಆನೆಗೊಂದಿ (೬); ೫ ಹಂಪಿ (೨); ೬ ವೆಂಕಟಾಪುರ (೨); ೭ ನಾರಾಯಣಪುರ (೧); ೮ ತಿಮ್ಮಲಾಪುರ (೧); ೯ ಬಳೆಭಾವಿ (೨); ೧೦ ಹರ್ಲಾಪುರ (೧); ೧೧ ಸಂಗನಕಲ್ಲು (೧); ೧೨ ಕುರಗೋಡು (೫); ೧೩ ತೆಕ್ಕಲಕೋಟೆ (೧); ೧೪ ಪಿಕ್ಕಿಹಾಳ್ (೧೬); ೧೫ ಬೈಲ್‌ಮರ್ಚೆಡ್ (೧); ೧೬ ಮಾಸ್ಕಿ (೧); ೧೭ ತೊಗರ್ಲ್‌ಗುಡ್ಡ (೧); ೧೮ ಸಿರಿವಾರ (೧); ೧೯ ಬಲಚಕ್ರ (೧); ೨೦ ಬಾದಾಮಿ (೮); ೨೧ ಹೊಸಮಹಾಕೂಟ (೧); ೨೨ ಐಹೊಳೆ (೩).

ದ್ದಾಗಿವೆ. ಹೆಚ್ಚಾಗಿ ಕೆಮ್ಮಣ್ಣಿನ ಬಣ್ಣದಲ್ಲಿದ್ದರೂ ಒಂದು ಮಾತ್ರ ಬಿಳಿ-ಕಪ್ಪು ಬಣ್ಣಗಳಲ್ಲಿದೆ.

ಬಾದಾಮಿಯಲ್ಲಿ ಒಂದು ಚಿತ್ರ ಮಾತ್ರ ವಿಶಿಷ್ಟವಾಗಿದ್ದು ಚಾರಿತ್ರಿಕಕಾಲದ ಒಬ್ಬ ಕಲಾಕಾರನಿಂದಲೇ ಬಿಡಿಸಲಾಗಿದೆಯೆಂದು ಹೇಳಬಹುದು. ಇದು ಬಹುಶಃ ೮ ನೇ ಶತಮಾನದ್ದು.

ಮತ್ತೆ ಕೆಲವು ಚಿತ್ರಗಳು ೧೫–೨೦ನೇ ಶತಮಾನದವು. ಇವುಗಳಲ್ಲಿ ಜೀನು ಹಾಕಿದ ಕುದುರೆ ಸವಾರರು, ಪ್ರಚಲಿತ ಕಥೆಗಳ ನಿರೂಪಣೆ, ಪ್ರಾಣಿಗಳ ಮನುಷ್ಯರ ಬಿಡಿಚಿತ್ರಗಳು, ರಥ, ಮಂಟಪ, ರೇಖಾಚಿತ್ರಗಳಿವೆ.

ಒಟ್ಟಿನಲ್ಲಿ ಜನಸಾಮಾನ್ಯನ ಗವಿಚಿತ್ರಕಲೆ ಪ್ರಾಗೈತಿಹಾಸ ಕಾಲದಿಂದ ಇತ್ತೀಚಿನ ವರೆಗೂ ಬೆಳೆದುಬಂದಿದೆಯೆಂಬುದು ಈ ಶೋಧನೆಗಳಿಂದ ಸ್ಪಷ್ಟವಾಗಿದೆ. ಈಗ ಇಲ್ಲಿ ಬೇರೆ ಬೇರೆ ಕಡೆಯ ಮತ್ತು ಕಾಲದ ಮೂರು ಸ್ಥಳಗಳಲ್ಲಿಯ ಒಂದೊಂದು ವಿಶಿಷ್ಟಚಿತ್ರವನ್ನು ವಿವೇಚಿಸಿ ಈ ಕಲೆಯ ಕೆಲವೊಂದು ಲಕ್ಷಣಗಳನ್ನು, ಬೆಳವಣಿಗೆಯನ್ನು ತಿಳಿಯೋಣ.

**1. ಹಿರೆಬೆನಕಲ್ಲಿನ ಚಿತ್ರ :** ಹಿರೆಬೆನಕಲ್ಲಿನ ೧೨ ಗವಿಚಿತ್ರಗಳಲ್ಲಿ ೧೨ನೇ ಚಿತ್ರ ಈ ಪ್ರದೇಶದಲ್ಲೇ ವಿಶಿಷ್ಟವಾಗಿದೆ. ಹಲವಾರು ಕಿ. ಮೀ. ಉದ್ದ ಅಗಲದ ಬೆಟ್ಟದ ತುಟ್ಟತುದಿಯಲ್ಲಿ ದುರ್ಗಮವಾದ ಭಾಗದಲ್ಲಿಯ ಒಂದು ಗವಿಯಲ್ಲಿ ಈ ಚಿತ್ರಗಳಿವೆ. ಬೆಟ್ಟದ ಈ ಭಾಗಕ್ಕೆ "ದುರ್ಗದ ದಡಿ" ಎಂದು ಸ್ಥಳೀಯ ಹೆಸರು. ಬೆಟ್ಟದ ಸುಮಾರು ಮಧ್ಯ ಹಂತದಲ್ಲಿ ಒಂದು ಬಯಲುಪ್ರದೇಶ. ಇಲ್ಲಿ ಬೃಹತ್‌ಶಿಲಾಸಂಸ್ಕೃತಿ ಜನರ ವಾಸ್ತವ್ಯವಿದ್ದ ಕುರುಹುಗಳು ವಿಪುಲವಾಗಿವೆ. ಬೂದಿ ಮಿಶ್ರಿತ ಮಣ್ಣಿನಲ್ಲಿ ಕೆಂಪು, ಕೆಂಪು–ಕಪ್ಪು ದ್ವಿವರ್ಣದ ಮತ್ತು ಕಪ್ಪುಬಣ್ಣದ ಮೃತ್‌ಪಾತ್ರೆಗಳ ಅವಶೇಷಗಳು ಹೇರಳವಾಗಿವೆ. ಇದಲ್ಲದೆ ಸುಟ್ಟಮಣ್ಣಿನ ಮಣಿಗಳು, ಬಳೆಚೂರುಗಳು ಮುಂತಾದ ಇತರ ಅವಶೇಷಗಳೂ ಇವೆ. ಇದರ ಸಮೀಪದಲ್ಲೆ ಸ್ವಲ್ಪ ಕೆಳಗೆ ೬ನೇ ವರ್ಣಚಿತ್ರಗವಿ ಮತ್ತು ೧೧ನೇ ವರ್ಣಚಿತ್ರಗವಿಗಳಿವೆ. ಸ್ವಲ್ಪ ದೂರದಲ್ಲೇ ೧ನೆಯ ವರ್ಣಚಿತ್ರಗವಿ. ಅಲ್ಲಿಂದ ಸ್ವಲ್ಪ ಮುಂದಕ್ಕೆ ಸುಮಾರು ಬೃಹತ್‌ಶಿಲಾಗೋರಿಗಳಿವೆ. ಸುತ್ತ ಮುತ್ತಲಿನ ಸಾಂಸ್ಕೃತಿಕ ಪರಿಸರದ ಹಿನ್ನೆಲೆಯಲ್ಲಿ ೧೨ನೇ ಚಿತ್ರಗವಿಯಲ್ಲಿಯ ಚಿತ್ರಗಳನ್ನು ತಿಳಿದುಕೊಳ್ಳುವ.

ಈ ಗವಿಯೊಳಗೆ ಬಂಡೆಗಳ ಸಂದಿಗಳಿಂದ ಸ್ವಲ್ಪಸ್ವಲ್ಪ ಬೆಳಕು ಬರುತ್ತಿದೆ. ಮೇಲಿನ ಬಂಡೆಯ ಕೆಳಮೈ ಮೇಲೂ, ಹಿಂಬದಿಯ ಮೇಲೂ, ಅದರ ಎಡಬದಿಯ ಬಂಡೆಯ ಮೇಲೆ ಚಾಚಿದ ಮತ್ತೊಂದು ಬಂಡೆಯ ಕೆಳಮೈ ಮೇಲೂ ಆ ಬಂಡೆಯ ಮೇಲಿನ ಮತ್ತೆರಡು ಬಂಡೆಗಳ ಸಂದಿಯಲ್ಲಿಯ ಒಂದರ ಮೇಲೆ ಸ್ವಾರಸ್ಯಕರವಾದ ಚಿತ್ರಗಳಿವೆ. ಒಟ್ಟಿನಲ್ಲಿ ಐದು ಕಡೆಗಳಲ್ಲಿ ಇವೆ. ಕುದುರೆಸವಾರರು, ಕುಣಿತದವರ ಗುಂಪು, ಚಿಗರಿಗಳ ಸಾಲು, ಎತ್ತು, ದನಗಳು, ನವಿಲು ಇವೇ ಮೊದಲಾದ ಚಿತ್ರಗಳು.

ಎರಡು ಬಂಡೆಗಳ ಸಂದಿಯಲ್ಲಿ ಪಶ್ಚಿಮದಿಕ್ಕಿಗೆ ಎದುರಾಗಿರುವ ಬಂಡೆಯ ಮೇಲಿನ ಚಿತ್ರದಲ್ಲಿ ೨೭ ಜನರು ಕೈಕೈ ಹಿಡಿದುಕೊಂಡು ಸಾಲಾಗಿ ನಿಂತಿದ್ದಾರೆ. ಬಲಕ್ಕಿರುವ ವ್ಯಕ್ತಿ ಹುಡುಗನೆಂದು ಹೇಳಬಹುದು. ಒಂದು ಬದಿಯಲ್ಲಿರುವವನು ಕೈಯಲ್ಲಿ ಏನನ್ನೊ ಹಿಡಿದಿದ್ದಾನೆ. ಮತ್ತೊಂದು ಬದಿಯಲ್ಲಿ ಅಸ್ಪಷ್ಟ ಚಿತ್ರವಿದ್ದು ಪಾದಗಳ ಕೆಳಗೆ ಉದ್ದಕ್ಕೂ ಎರಡು ಗೆರೆಗಳಿವೆ. ಈ ಸಾಲಿನ ಮೇಲೆ ಒಂದೆರಡು ಅಸ್ಪಷ್ಟ ಚಿತ್ರಗಳಿವೆ. ಕೊನೆಯವನ ತಲೆಯ ಮೇಲೆ ಒಂದರ ಮೇಲೊಂದು ಎರಡು ಬದಿಗಳಿಗೆ ಮೇಲ್ಮುಖವಾಗಿ ಓರೆ ಗೆರೆಗಳಿವೆ. ಇದನ್ನು ಬಹುಶಃ ಅನಂತರ ಸೇರಿಸಿದ ಹಾಗೆ ತೋರುತ್ತದೆ.

ಮುಂಚಾಚಿದ ಬಂಡೆಯ ಕೆಳಮೈಯ ಮೇಲೆ, ಒಬ್ಬ ನಿಂತ ಮನುಷ್ಯನ ಚಿತ್ರವೂ ಅರ್ಧ ಚಂದ್ರಾಕೃತಿಯ ಗೆರೆಯಮೇಲೆ ನಿಂತ ೧೨ ಮನುಷ್ಯರ ಮತ್ತೊಂದೆಡೆಯಲ್ಲಿ, ಜೋಡಿ ಮನುಷ್ಯರ, ಒಬ್ಬ ಮನುಷ್ಯನು ಒಂದು ಗೂಳಿಯನ್ನು ಚಪ್ಪರಿಸುತ್ತಿರುವ ಚಿತ್ರಗಳಿವೆ. ಇದೇ ಭಾಗದ ಒಂದೆಡೆಯಲ್ಲಿ ಕುದುರೆ ಸವಾರರ ಚಿತ್ರಗಳಿವೆ.

ಗವಿಯ ಮೇಲಿನ ದೊಡ್ಡ ಬಂಡೆಯ ಕೆಳಮೈಯಲ್ಲಿ ಒಬ್ಬ ನಗ್ನ ಮನುಷ್ಯನ, ಗಂಡು ಗೊಡಲಿ ಹಿಡಿದ ಒಬ್ಬ ಕುದುರೆ ಸವಾರ, ಮೂರು ವ್ಯಕ್ತಿಗಳ ಸಾಲಿನಲ್ಲಿ ಬಲಗಡೆ ಕೊನೆಯವನ ಉದ್ದನೆ ತಲೆಗೂದಲನ್ನು ಹಿಡಿದುಕೊಂಡ ಒಬ್ಬ ಎತ್ತರದ ಮನುಷ್ಯ. ಈ ಸಾಲಿನ ಎಡಗಡೆಗೆ ಮನುಷ್ಯನ ತಲೆಗೂದಲು ನೆಟ್ಟಗೆ ನಿಂತಿವೆ. ಉದ್ದನೆ ಕೋಡುಳ್ಳ ಎತ್ತು, ಕೈಕೈ ಹಿಡಿದುಕೊಂಡ ಇಬ್ಬರು ವ್ಯಕ್ತಿಗಳ ಸಂಭೋಗ : ಇವೇ ಮೊದಲಾದ ಚಿತ್ರ ಗಳಿವೆ. ಮತ್ತು ಬಲಗಡೆ ಮುಖಮಾಡಿದ ಹತ್ತು ಜಿಂಕೆಗಳ ಸಾಲು, ಉದ್ದನೆ ಕೋಡುಳ್ಳ ಎತ್ತು, ಕುದುರೆ ಸವಾರರು, ಒಂದರಲ್ಲಿ ಏಳು ಮತ್ತೊಂದರಲ್ಲಿ ಆರು ನಿಂತ ವ್ಯಕ್ತಿಗಳ ಎರಡು ಸಾಲುಗಳು, ನಿಂತ ಮನುಷ್ಯ, ಕುದುರೆ ಸವಾರ, ಎಂಟು ಜಿಂಕೆಗಳ ಸಾಲು, ಕುಚ್ಚಿನಂಥ ಬಾಲವಿರುವ ಪ್ರಾಣಿ ಮತ್ತು ಎರಡು ಎತ್ತು(?) ಗಳಿವೆ. ಎರಡನೇ ಸಾಲಿನಲ್ಲಿ ಎಡಗಡೆಯಿಂದ ಮೂರನೆ ವ್ಯಕ್ತಿ ಪ್ರಾಯಶಃ ಹೆಂಗಸಿರಬೇಕು.

ಈ ಬಂಡೆಯ ಕೆಳಗಿರುವ ಬಂಡೆಯ ಮೇಲೆ ಮೇಲಿಂದ ಕೆಳಗಿನವರೆಗೆ ಹಲವಾರು ಚಿತ್ರ ಗಳಿವೆ. ಅಸ್ಪಷ್ಟ ಪ್ರಾಣಿ (?), ನವಿಲು, ಎತ್ತುಗಳು, ಒಂದು ಕುದುರೆಯ ಮೇಲೆ ನಿಂತ, ಇನ್ನೊಂದು ಕುದುರೆಯ ಮೇಲೆ ಕುಳಿತ ಇಬ್ಬರು ಸವಾರರು, ಇಪ್ಪತ್ಮೂರು ಕುದುರೆ ಸವಾರರ ಸಾಲು, ಹದಿನಾಲ್ಕು ಜಿಂಕೆಗಳ ಸಾಲು, ಆಯುಧಪಾಣಿಯಾದ ಮನುಷ್ಯ, ಬಿಲ್ಲು ಹಿಡಿದ ಮನುಷ್ಯನ ಮುಂದೆ ಕುದುರೆ ಸವಾರ, ಮತ್ತೊಬ್ಬ ಕುದುರೆ ಸವಾರ, ಎತ್ತುಗಳು ಮತ್ತು ಒಬ್ಬ ಮನುಷ್ಯ : ಹೀಗೆ ಹಲವಾರು ಚಿತ್ರಗಳಿವೆ. ಜಿಂಕೆಗಳ ಬಾಲ ತುಂಬ ಕೂದಲಿನಿಂದ ಕೂಡಿದೆ.

**ಕೆಲವು ಗಮನಾರ್ಹ ಅಂಶಗಳು :** ಹಿರೆಬೆನಕಲ್ಲಿನಲ್ಲಿ ಇದುವರೆಗೂ ೧೨ ಗವಿಚಿತ್ರ ಗಳು ಶೋಧವಾಗಿವೆಯೆಂದು ಮೇಲೆ ಹೇಳಿದೆಯಷ್ಟೆ. ೧, ೪ ಮತ್ತು ೬ನೇ ಗವಿ ಚಿತ್ರ ಗಳಲ್ಲಿ ಜಿಂಕೆಗಳ, ನವಿಲಿನ, ಕುದುರೆ ಸವಾರರ ಮತ್ತು ಸಾಲು ಮನುಷ್ಯರ ಚಿತ್ರಗಳೂ



ಹಿರೆಬೆನಕಲ್ : ೧೨ನೆಯ ಗವಿ ವರ್ಣಚಿತ್ರಗಳು

1







3

ಚಿತ್ರ 1 ಮತ್ತು 2 : ಬೈಲ್‌ಮರ್ಚೆಡ್ ಗವಿಯ ವರ್ಣಚಿತ್ರಗಳು
ಚಿತ್ರ 3 : ಬಾದಾಮಿ ಗವಿಯ ವರ್ಣಚಿತ್ರ

ಇವೆ. ಆದರೆ ಮೇಲೆ ವಿವರಿಸಿದ ೧೨ನೇ ಗವಿ ವರ್ಣಚಿತ್ರಗಳು ಕೆಲವೊಂದು ರೀತಿಯಲ್ಲಿ ವಿಶಿಷ್ಟವಾಗಿವೆ. ಕುದುರೆ ಸವಾರರನ್ನು ಮತ್ತು ಜಿಂಕೆಗಳನ್ನು ಸಾಧ್ಯವಾದಷ್ಟು ಮಟ್ಟಿಗೆ ಒಂದರ ಹಿಂದೆ ಒಂದರಂತೆ ನೇರ ಸಾಲಿನಲ್ಲಿ ಚಿತ್ರಿಸಿರುವದು. ಎರಡನೆಯದಾಗಿ ಸ್ತ್ರೀ–ಪುರುಷನ ಲೈಂಗಿಕ ಕ್ರಿಯೆಯನ್ನು ದಿಟ್ಟವಾಗಿ ತೋರಿಸಿರುವದು. ಕುದುರೆ ಸವಾರರಲ್ಲಿ ಕುದುರೆಗಳ ಲಗಾಮನ್ನು ತೋರಿಸಿರುವ ರೀತಿ ಮಾತ್ರ ವಿಚಿತ್ರವಾಗಿದೆ. ಕುದುರೆ ಬಾಯಿಯಲ್ಲಿಯ ಕಡಿವಾಣದಿಂದ ಲಗಾಮು ಕುತ್ತಿಗೆ ಕೆಳಗಿನಿಂದ ಮೇಲೆ ಹಾಯದೆ ತಲೆಯ ಮೇಲೆ ಹಾದು ಸವಾರನ ಕೈಯಲ್ಲಿದೆ. ಲಗಾಮು ಹಗ್ಗ, ಚರ್ಮದ್ದಾಗಿರದೇ, ಲೋಹದ ತಂತಿಯದಾಗಿದ್ದಿರಲೇ ಬೇಕು. ಅಂತು ಈ ಕ್ರಮ ವಿಶಿಷ್ಟವಾಗಿದೆ. ಇದು ದಕ್ಷಿಣ ಸ್ವೀಡನ್ನಿನ ಕೀವಿಕ್[೧೭] ಎಂಬಲ್ಲಿಯ ಕಂಚಿನ ಯುಗದ ಒಂದು ಕಲ್ಗೋರಿಯ ಮೇಲೆ ಮೂಡಿಸಿದ ಗಾಡಿ ಎಳೆಯುತ್ತಿರುವ ಕುದುರೆಗಳ ಲಗಾಮಿನ ರೀತಿಗೆ ಬಹುಮಟ್ಟಿಗೆ ಹೋಲುತ್ತದೆ. ಆದ್ದರಿಂದ ಈ ಪದ್ಧತಿ ಬಹಳ ಪ್ರಾಚೀನವಾದದ್ದು ಎಂದು ಹೇಳಬಹುದು.

ಜಿಂಕೆಗಳ ಸಾಲಿನಲ್ಲಿ ಪ್ರತಿಯೊಂದು ಜಿಂಕೆಯು ಆಕಾರ, ದೇಹದ ಪ್ರಮಾಣಬದ್ಧತೆ ಒಂದೇ ರೀತಿಯಲ್ಲಿರುವದು ನಿಜಕ್ಕೂ ಆಶ್ಚರ್ಯಕರ. ಈಗಿನ ಹಾಗೆ ಒಂದು ತಗಡಿನಲ್ಲೊ ರಟ್ಟಿನಲ್ಲೊ ಬೇಕಾದ ಚಿತ್ರವನ್ನು ಕತ್ತರಿಸಿ ಅದನ್ನು ಗೋಡೆಯ ಮೇಲಿಟ್ಟು ಕತ್ತರಿಸಿದ ಭಾಗವನ್ನಷ್ಟು ಬಣ್ಣದಿಂದ ಬಳಿದು ತೆಗೆದ ಚಿತ್ರದ ಹಾಗಿದೆ. ಈ ಕ್ರಮದಲ್ಲಿ ತೆಗೆದ ಎಲ್ಲ ಚಿತ್ರಗಳು ಒಂದೇ ಪ್ರಕಾರವಾಗಿರುತ್ತವೆ. ಮೇಲೆ ಹೇಳಿದ ಸಾಲಿನಲ್ಲಿರುವ ಜಿಂಕೆ ಚಿತ್ರಗಳು ಮೇಲ್ನೋಟಕ್ಕೆ ಈ ರೀತಿ ಒಂದೇ ತರಹ ಇವೆ. ಬಹು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಅಲ್ಲೊಂದು ಇಲ್ಲೊಂದು ಸ್ವಲ್ಪ ವ್ಯತ್ಯಾಸಗಳು ಕಾಣಬಹುದು.

ಇಪ್ಪತ್ತೇಳು ಜನ ಸಾಲಿನ ಮನುಷ್ಯನ ಚಿತ್ರವು, ಹನ್ನೆರಡು ಜನ ಸಾಲಿನ ಚಿತ್ರವು ಶೈಲಿಯಲ್ಲಿ ಭಿನ್ನವಾಗಿವೆ ಮೊದಲನೆಯದರಲ್ಲಿ ಚಿತ್ರಗಳು ಹೆಚ್ಚು ದೃಢಕಾಯದವರಂತೆ ಇವೆ: ವಿಶಾಲ ಭುಜ, ಅಗಲ ಎದೆ, ಪುಷ್ಟವಾದ ತೊಡೆ ಕಾಲುಗಳು. ಎತ್ತರ ಸುಮಾರು ೨೭ ಸೆ. ಮಿ, ಹುಡುಗನ ಎತ್ತರ ಸುಮಾರು ೧೪ ಸೆ. ಮಿ. ಹೆಚ್ಚು ಕಡಿಮೆ ನೇರವಾದ ಸಾಲು (೧.೬೨ ಮಿ. ಉದ್ದ) ಬಣ್ಣವೂ ಕೂಡ ಕಪ್ಪು ನೇರಳೆ. ಎರಡನೆಯದರಲ್ಲಿ ವ್ಯಕ್ತಿಗಳು ಎತ್ತರ, ನೀಳ, ಮುಂಡದ ಭಾಗ ತೆಳ್ಳಗೆ, ಕಾಲುಗಳು ಕಡ್ಡಿಯ ಹಾಗೆ. ತೊಡೆಯ ಭಾಗ ಮಾತ್ರ ಸ್ಥೂಲ. ಸಾಲು ಕ್ರಮವಾಗಿ ವಕ್ರವಾಗಿದ್ದು ಜನರು ವರ್ತುಲಾಕಾರದಲ್ಲಿ ನಿಂತಿದ್ದಾರೆ ಎಂಬುದನ್ನು ಸುಲಭವಾಗಿ ಚಾಣಾಕ್ಷತನದಿಂದ ತೋರಿಸಲಾಗಿದೆ.

ಕೆಂಪೊತ್ತಿದ ಬಣ್ಣ ಸಾಲಿನ ಜಿಂಕೆಗಳ ದೇಹ ಉದ್ದ, ತೆಳ್ಳಗೆ ಕಾಲುಗಳು ಕಡ್ಡಿಯಂತಿವೆ. ಕೋಡುಗಳು ರೋಮನ್ 'ವಿ' ಅಕ್ಷರದ ಹಾಗಿವೆ. ಬಾಲ ಸಣ್ಣದಿದ್ದು ಮೇಲಕ್ಕೆತ್ತಿದೆ.

೧೭ ಬಿಬ್ಬಿಜೆಫರಿ: ೧೯೬೨ : ಫೋರ್ ಥೌಸಂಡ ಇಯರ್ಸ್ ಎಗೊ, ಲಂಡನ್ ಮತ್ತು ಗ್ಲಾಸ್ಗೊ.

ಕುತ್ತಿಗೆ ನೀಳ ಸಣ್ಣ, ನೆಟ್ಟಗಿದೆ. ತಲೆಯೆತ್ತಿ ನೋಡುತ್ತಿರುವ ಹಾಗಿದೆ. ಎತ್ತುಗಳ ಕೋಡುಗಳು ಉದ್ದವಾಗಿದ್ದು ಒಂದೇ ರೀತಿಯಲ್ಲಿ ಮೇಲೆ ಬಾಗಿವೆ. ಇವು ಎದ್ದು ಕಾಣುತ್ತವೆ. ನಿಸರ್ಗದಲ್ಲಿ ಬೆಳೆದ ಒಳ್ಳೆ ಬಲಶಾಲಿ ತಳಿ ಎಂಬಂತೆ ಇವೆ ರೇಖಾ ವಿನ್ಯಾಸ. ಜಿಂಕೆಗಳು ಸಾಮಾನ್ಯವಾಗಿ ಗುಂಪು ಗುಂಪಾಗಿ ಓಡಾಡುತ್ತಿರುತ್ತವೆ.

ಪೂರ್ವ-ಪಶ್ಚಿಮವಾಗಿ ಗಂಗಾವತಿಯಿಂದ ಜಿಳಿಭಾವಿ ಮತ್ತು ಉತ್ತರ-ದಕ್ಷಿಣವಾಗಿ ಇಂದುರ್ಗಿ-ಮುದಗಲ್‌ನಿಂದ ಬಳ್ಳಾರಿ-ಹೊಸಪೇಟೆ ಅಂದರೆ ಕ್ರಮವಾಗಿ ೫೦ ಕಿ. ಮಿ. ಮತ್ತು ೪೦ ಕಿ. ಮಿ. ಪ್ರದೇಶದಲ್ಲೆಲ್ಲಾ ಸಾಲು ಸಾಲಾಗಿ ಬಂಡೆಗಳ ಗುಡ್ಡಗಾಡು ಗಳಿದ್ದು ಹಿಂದೆ ಇಲ್ಲೆಲ್ಲ ಹುಲಿ, ಚಿರತೆ, ಕರಡಿ, ತೋಳ, ಮುಳ್ಳುಹಂದಿ, ಕಾಡೆಮ್ಮೆ, ಗೂಳಿ, ಜಿಂಕೆ ಹಾಗು ನವಿಲು ಮೊದಲಾದ ಪ್ರಾಣಿ ಪಕ್ಷಿಗಳಿದ್ದವು. ಈಗಲೂ ಚಿರತೆ, ತೋಳ, ಮುಳ್ಳುಹಂದಿ ಮುಂತಾದವುಗಳು ಅಲ್ಪ ಪ್ರಮಾಣದಲ್ಲಿವೆ. ಗಂಗಾವತಿಗೆ ಸುಮಾರು ೬ ಕಿ. ಮಿ. ಪಶ್ಚಿಮಕ್ಕೆ ದೂರದಲ್ಲಿರುವ ಹಿರೆಬೆನಕಲ್ಲ ಗುಡ್ಡದಲ್ಲಿ ಮೇಲೆ ಹೇಳಿದಂತೆ ಬೃಹತ್ ಶಿಲಾಸಂಸ್ಕೃತಿಯ ವಾಸ್ತವ್ಯದ ನೆಲೆ ಮತ್ತು ಅವರು ನಿರ್ಮಿಸಿದ ನೂರಾರು ಕಲ್ಗೋರಿಗಳಿವೆ. ಈ ಪ್ರದೇಶದಲ್ಲೆಲ್ಲಾ ನೂತನ ಶಿಲಾಯುಗ ಜನವರ್ಗ (ಸು. ಕ್ರಿ. ಪೂ. ೧೭೦೦-೮೦೦) ದವರಿದ್ದಾಗಲೇ, ನಾನಾ ವಿಧದ ಕಬ್ಬಿಣ ಉಪ ಕರಣಗಳನ್ನು, ಆಯುಧಗಳನ್ನು ಉಪಯೋಗಿಸುತ್ತಿದ್ದ ಬೃಹತ್ ಶಿಲಾ ಸಂಸ್ಕೃತಿ (ಸುಮಾರು ಕ್ರಿ. ಪೂ. ೮೦೦-೧೦೦) ಜನರು ಇಲ್ಲೆಲ್ಲ ನೆಲೆಸಿದ್ದರೆಂದು ಮಸ್ಕಿ, ಪಿಕ್ಕಿಹಾಳ್, ಸಂಗನಕಲ್‌ಗಳಲ್ಲಿಯ ಪ್ರಾಚೀನ ನಿವೇಶನಗಳಲ್ಲಿ ನಡೆಸಿದ ಪುರಾತತ್ವ ಉತ್ಖನನಗಳಿಂದ ತಿಳಿದಿದೆ. ಮತ್ತು ಈ ಜನರು ಹೆಚ್ಚಾಗಿ ಕುದುರೆ ಸವಾರರು ಆಗಿ ದ್ದರು. ಈಗ ಮೇಲೆ ವಿವರಿಸಿದ ಚಿತ್ರಗಳಲ್ಲಿ ಆಯುಧಪಾಣಿಗಳಾದ ಕುದುರೆ ಸವಾ ರರ ಚಿತ್ರಗಳು ಇವೆ. ಒಟ್ಟಿನಲ್ಲಿ, ಸಾಂಸ್ಕೃತಿಕ ಮತ್ತು ನೈಸರ್ಗಿಕ ಪರಿಸರಕ್ಕೆ ಹೊಂದಿದ ಹಾಗೆ ಮನುಷ್ಯರ/ಪ್ರಾಣಿಗಳ ವಿಶಿಷ್ಟ ಲಕ್ಷಣಗಳನ್ನು ಮತ್ತು ಚಲನವಲನಗಳನ್ನು ಸೂಕ್ಷ್ಮವಾಗಿ ನೋಡಿ ಗ್ರಹಿಸಿ ಕೇವಲ ಛಾಯಾ ಕೃತಿಯ ಶೈಲಿಯಾಗಿದ್ದರೂ ರೇಖಾ ವಿನ್ಯಾಸದಲ್ಲಿ ಸ್ಪಷ್ಟವಾಗಿ, ಶಕ್ತಿಶಾಲಿಯಾಗಿ ನೋಡುವವನ ಮನಸ್ಸಿಗೆ ಆಯಾಯ ಪ್ರಾಣಿಗಳ ಸರಿಯಾದ ಕಲ್ಪನೆ ಬರುವ ಹಾಗೆ ಮಾಡಿರುವದು ಮೆಚ್ಚತಕ್ಕದ್ದು. ಬಹುಶಃ ಈ ಚಿತ್ರಗಳನ್ನು ಇವೆರಡು ಸಂಸ್ಕೃತಿಗಳು ಒಂದರಲ್ಲೊಂದು ವ್ಯಾಪಿಸಿಕೊಂಡ ಮತ್ತು ಸ್ವಲ್ಪ ಅನಂತರ ಕಾಲದ ವರೆಗಿನ ಸಮಯದಲ್ಲಿ ಬಿಡಿಸಿರಬೇಕೆಂದು ತರ್ಕಿಸಬಹುದು. ಮತ್ತು ಕುದುರೆ ಸವಾರ ಚಿತ್ರದಲ್ಲಿ ಲಗಾಮು ಹಿಡಿದ ರೀತಿಯು ಈ ಚಿತ್ರಗಳ ಪ್ರಾಚೀ ನತೆಯನ್ನು ಸೂಚಿಸುತ್ತದೆ. ಅಂದರೆ ಇವುಗಳ ಕಾಲಮಾನ ಸುಮಾರು ಕ್ರಿ. ಪೂ. ೭೦೦-೫೦೦.

**2. ಬೈಲ್ ಮರ್ಚೇಡಿನ ಚಿತ್ರ :** ಬೈಲ್ ಮರ್ಚೇಡ ಮಾನ್ವಿ ತಾಲೂಕಿನ ಒಂದು ಸಣ್ಣ ಹಳ್ಳಿ. ಒಂದು ದೊಡ್ಡ ಕಲ್ಗುಡ್ಡದ ಬದಿಯಲ್ಲಿ ಇದೆ. ಇದರ ನೈರುತ್ಯಕ್ಕೆ

ಗುಡ್ಡದಂಚಿನಲ್ಲಿ ಮುಂಚಾಚಿದ ಒಂದು ದೊಡ್ಡ ಬಂಡೆ. ಇದರ ಒಳಮೈ ಮೇಲೆ ಹಲವಾರು ಕುದುರೆ ಸವಾರರ[೧೮] ಚಿತ್ರಗಳಿವೆ. ಈ ಚಿತ್ರದ ಕಲ್ಲುಗುಂಡಿಗೆ ಸ್ಥಳಿಕವಾಗಿ "ಕಾಟಮಯ್ಯನ ಗುಂಡು" ಎಂದು ಹೆಸರು. ಇದರ ಅನತಿ ದೂರದಲ್ಲಿ ಉತ್ತರ ಬದಿಗೆ ಕೆಂಪು-ಕಪ್ಪು ದ್ವಿವರ್ಣದ ಮೃತ ಪಾತ್ರೆಯ ಚೂರುಗಳು ಅಲ್ಲಲ್ಲಿ ಬಿದ್ದಿವೆ. ಬಹುಶಃ ಬೃಹತ ಶಿಲಾ ಸಂಸ್ಕೃತಿಯ ಅವಶೇಷಗಳೆಂದು ಕಾಣುವದು.

ಈ ಗುಂಪಿನ ಹಿಂಬದಿಗೆ ಬಯಲಿನಲ್ಲಿ ಮಧ್ಯಯುಗೀನ ಕಾಲದ ಒಂದು ಜನವಾಸ್ತವ್ಯದ ನೆಲೆಯೂ ಇದೆ. ಇದರಲ್ಲಿ ಮನೆಗಳ ನೆಲಗಟ್ಟಿನ, ಬೂದು ಬಣ್ಣದ ಮೃತ್ ಪಾತ್ರೆಗಳ ಅವಶೇಷಗಳು, ಮೊದಲಾದವು ಇವೆ.

ಚಿತ್ರಗಳು ಎರಡು ಗುಂಪುಗಳಲ್ಲಿವೆ. ಮೇಲಿನ ಗುಂಪಿನಲ್ಲಿ ಕುದುರೆ ಸವಾರರ ಮತ್ತು ಗೂಳಿಗಳ ಚಿತ್ರಗಳು. ಒಬ್ಬ ಕುದುರೆ ಸವಾರ ಎಡಗೈಯಲ್ಲಿ ಉದ್ದನೆಯ ಈಟಿ. ಕುದುರೆಗೆ ಜೀನು ತೊಡಿಸಲಾಗಿದೆ. ತಲೆಯ ಮೇಲೆ ರಕ್ಷಣಾ ಕವಚವಿದೆ. ಬಾಯಿಗೆ ಹಾಕಿದ ಕಡಿವಾಣದಿಂದ ಲಗಾಮು ಸಹಜವಾಗಿ ಕುತ್ತಿಗೆ ಕೆಳಗಡೆಯಿಂದ ಹಾದು ಸವಾರನ ಬಲಗೈಯಲ್ಲಿದೆ. ಸವಾರನು ತಲೆಗೆ ಪೇಟ (ಪಟಗಾ) ವನ್ನು ಕಟ್ಟಿದ್ದಾನೆ. ಇದೇ ತರಹದ ಜೋಡಿ ಸವಾರರು ಎದುರು ಬದುರಿದ್ದು ತಮ್ಮ ಈಟಿಗಳಿಂದ ಕಾದಾಡುತ್ತಿದ್ದಾರೆ. ಇಂಥ ಕಾದಾಟದ ಚಿತ್ರ ಮೂರಿವೆ. ಚಿತ್ರಗಳ ಮಧ್ಯದಲ್ಲಿ ಓಡುತ್ತಿರುವ ಇಣಿಯುಳ್ಳ ಎರಡು ದನ/ಗೂಳಿಗಳಿವೆ.

ಎರಡನೇ ಗುಂಪಿನಲ್ಲಿ ಇಬ್ಬರು ಸವಾರರು ಈಟಿ ಮತ್ತು ಕತ್ತಿಯನ್ನು ಹಿಡಿದು ಜೀನು ಕಡಿವಾಣ ಹಾಕಿದ ಕುದುರೆಯ ಮೇಲೆ ಹೋಗುತ್ತಿರುವುದು. ಇವಲ್ಲದೆ ಬಾಲ ಎತ್ತಿಕೊಂಡು ಗುಂಪು ಗುಂಪಾಗಿ (ಎರಡೆರಡು, ಮೂರು, ನಾಲ್ಕು, ಐದು) ದನ/ಗೂಳಿಗಳು ಕುದುರೆ ಸವಾರರ ಮಧ್ಯ ಮುಂದೆ ಓಡುತ್ತಿರುವುದು. ಬಹುಶಃ ಆಗಿನ ಕಾಲದಲ್ಲಿ ಆಗಾಗ್ಗೆ ನಡೆಯುತ್ತಿದ್ದ ಗೋ ಗ್ರಹಣದ ವಿಷಯ ನಿರೂಪಣೆ ಇರಬಹುದು. ಬಹಳ ಸಹಜವಾಗಿದೆ ನಿರೂಪಣ ಶೈಲಿ. ವೀರಗಲ್ಲು ಶಿಲ್ಪಫಲಕಗಳಲ್ಲಿ ಸುಮಾರು ೯ ನೇ ಶತಮಾನದಿಂದ ಈ ವಿಷಯ ಸರ್ವೇ ಸಾಮಾನ್ಯ. ವರ್ಣಚಿತ್ರದಲ್ಲಿ ಈ ವಿಷಯ ತೋರಿಸಿರುವ ಉದಾಹರಣೆ ಇದೊಂದೇ. ಇವೆರಡು ಗುಂಪು ಚಿತ್ರಗಳ ಮತ್ತೊಂದು ಬದಿಯಲ್ಲಿ ಸ್ವಲ್ಪ ಆಚೆಗೆ ಮತ್ತೊಂದು ಬಂಡೆಯ ಮೇಲೆ ಅಂಗೈಯ ಚಟ್ಟುಗಳಿವೆ,

---

೧೮ ಹಿಂದೆ ಈ ಗ್ರಾಮದಲ್ಲಿ ಡಾ. ಶ್ರೀನಿವಾಸ ಹಾ. ರಿತ್ತಿ ಶಾಸನಗಳ ಶೋಧನೆ ನಡೆಸುತ್ತಿದ್ದಾಗ ಈ ವರ್ಣಚಿತ್ರಗಳನ್ನು ನೋಡಿದ್ದರು. ಈಗ ನಾನು ಇಂಥ ವರ್ಣಚಿತ್ರಗಳ ಅಧ್ಯಯನ ಮಾಡುತ್ತಿದ್ದರಿಂದ ಈ ಚಿತ್ರಗಳ ಬಗ್ಗೆ ನನಗೆ ತಿಳಿಸಿದರು. ೧೯೭೯ ಮಾರ್ಚ ಸಮಯದಲ್ಲಿ ಈ ಗವಿ ಚಿತ್ರವನ್ನು ಪರಿಶೀಲಿಸಿದೆನು. ಮಾಹಿತಿಕೊಟ್ಟ ಶ್ರೀ ಶ್ರೀನಿವಾಸ ರಿತ್ತಿಯವರಿಗೆ ಕೃತಜ್ಞ.

ಚಿತ್ರಗಳೆಲ್ಲವೂ ಕಂದು ಕೆಂಪು ಕೆಮ್ಮಣ್ಣಿನ ಬಣ್ಣದಲ್ಲಿವೆ. ಮೊದಲು ಸ್ವಲ್ಪ ಹಾಲು ಮಿಶ್ರಿತ ಸುಣ್ಣವನ್ನು ಬಂಡೆಯ ಮೇಲ್ಮೈಯ ಮೇಲೆ ಬಳಿದು ಅದರ ಮೇಲೆ ಈ ಚಿತ್ರಗಳನ್ನು ತೆಗೆಯಲಾಗಿದೆ. ಚಿತ್ರಗಳೆಲ್ಲವೂ ಛಾಯಾಕೃತಿಗಳು.

ಕುದುರೆ ಸವಾರರ ಅದರಲ್ಲೂ ಕಾದಾಟದ ಚಿತ್ರಗಳು ಸಮಕಾಲೀನ ಅಂದರೆ ೧೫–೧೬ ನೇ ಶತಮಾನದ ವಿಜಯನಗರ ಶೈಲಿಯ ಸಾಲು ಪಟ್ಟಿಕೆಗಳಲ್ಲಿಯ ಈ ತರಹದ ಶಿಲ್ಪಗಳಿಗೆ ಹೋಲುತ್ತವೆ. ಶೈಲಿ ಹಾಗು ಪಕ್ಕದಲ್ಲಿಯ ಮಧ್ಯಯುಗೀನ ಜನ ವಾಸ್ತವ್ಯದ ನೆಲೆಯನ್ನು ಗಮನಿಸಿದಾಗ ಈ ಚಿತ್ರಗಳು ಸ್ವಲ್ಪ ಹೆಚ್ಚು ಕಡಿಮೆ ಅದೇ ಕಾಲದ್ದೆಂದೇ ಹೇಳಬಹುದು.

ಈ ಚಿತ್ರಗಳನ್ನು ತೆಗೆದ ಸ್ವಲ್ಪ ಕಾಲದ ಮೇಲೆ ದಪ್ಪನೆಯ ಕವಲೊಡೆದ ರೆಂಬೆಯ ಚಿತ್ರ ಮೂಡಿಸಲಾಗಿದೆ. ಇದು ಸುಮಾರು ೨೦೦ ವರ್ಷಗಳಿಂದೀಚಿನದಿರಬಹುದು. ಈ ರೆಂಬೆಯ ಚಿತ್ರದ ಮೇಲೆ ಸುಣ್ಣದಲ್ಲಿ ಹನುಮಂತನ ಚಿತ್ರ ಬರೆಯಲಾಗಿದೆ. ಇದು ತೀರ ಇತ್ತೀಚಿನದು.

**3. ಬಾದಾಮಿಯ ಗವಿ ಚಿತ್ರ :** ಈಗ ನಾವು ಪರಿಶೀಲಿಸುವ ಚಿತ್ರ ಬಾದಾಮಿಯಲ್ಲಿ ಚಾಲುಕ್ಯರ ಕಾಲದ್ದು. ಬಾದಾಮಿಯ ಹೊರ ಪ್ರದೇಶದಲ್ಲಿ ಮತ್ತು ಊರೊಳಗೆ ಪ್ರಾಗೈತಿಹಾಸಿಕ ಮತ್ತು ಇತಿಹಾಸ ಕಾಲದ ಸುಮಾರು ಒಂಭತ್ತು ಗವಿ ವರ್ಣಚಿತ್ರಗಳಿವೆ. ಇತಿಹಾಸ ಕಾಲದ ಎರಡು ಚಿತ್ರಗಳಲ್ಲಿ ಒಂದು ಮಾತ್ರ ಬಹು ವಿಶೇಷವಾದದ್ದು ಎಲ್ಲ ಕಾಲದ ಗವಿ ವರ್ಣಚಿತ್ರಗಳಲ್ಲೆಲ್ಲ ಶೈಲಿ ಮತ್ತು ವಿಷಯದಲ್ಲಿ ಇದು ತೀರ ಭಿನ್ನವಾದುದಲ್ಲದೆ ಈ ತರಹದ ಸಂಪ್ರದಾಯಕ್ಕೆ ಎರಡೇ ಉದಾಹರಣೆ : ಇದೊಂದು, ಮತ್ತು ಮೂಸ್ವಿ ಗುಡ್ಡದಲ್ಲಿರುವಂಥದು. ಬಾದಾಮಿಯದು ಮಂಗಳೇಶನು ನಿರ್ಮಿಸಿದ ವಿಷ್ಣುಲಯಣ (ಗುಹಾ ದೇವಾಲಯ III) ದಲ್ಲಿರುವ ಸುಸಂಸ್ಕೃತ ಪ್ರಬುದ್ಧಪೂರ್ಣ ವರ್ಣಚಿತ್ರಕಲೆ ಸಂಪ್ರದಾಯದ ವರ್ಣಚಿತ್ರಗಳನ್ನು ಹೋಲುತ್ತದೆ.

ಮೊದಲನೇ ಪುಲಕೇಶಿಯ ಕೋಟೆ "ಮೇಲಣ" ಮತ್ತು "ಕೆಳಗಿನ" ಶಿವಾಲಯಗಳನ್ನುಳ್ಳ ಎತ್ತರ ಗುಡ್ಡದ ಉತ್ತರಕ್ಕೆ ಒಂದು ಬೆಟ್ಟದ ಸಾಲಿದೆ. ಈ ಸಾಲಿನಲ್ಲಿ ಅಲ್ಲಲ್ಲಿ ಒಟ್ಟು ೬ ಗವಿಚಿತ್ರಗಳನ್ನು ಹುಡಕಿದ್ದೇನೆ. ಅವುಗಳಲ್ಲಿ ಒಂದು ಕಲ್ಲಾಸರೆಯ ಹಿಂಬದಿಯ ನೆಟ್ಟಗಿನ ಕಲ್ಲು ಬಂಡೆಯ ಮೇಲೆ ತೆಳ್ಳಗೆ ಸ್ವಲ್ಪ ಹಳದಿ ಬಣ್ಣದ ಸುಣ್ಣದ ಲೇಪನ ಮಾಡಿದೆ. ಇದರ ಮೇಲೆ ಕೆಂಪು ಬಣ್ಣದ ರೇಖೆಗಳಲ್ಲಿ ಪ್ರಮಾಣಬದ್ಧವಾಗಿ ಎಲ್ಲ ದೈಹಿಕ ಲಕ್ಷಣಗಳನ್ನು ಕಾಣುವ ಹಾಗೆ ಗಣ್ಯವ್ಯಕ್ತಿಗಳ ಚಿತ್ರಗಳನ್ನು ಬಿಡಿಸಲಾಗಿದೆ. ರೇಖೆಗಳೊಳಗಿನ ಭಾಗವು ಹಿನ್ನೆಲೆ ಹಳದಿ ಬಿಳಿಬಣ್ಣದಿಂದ ತುಂಬಿರುವುದರಿಂದ ವ್ಯಕ್ತಿಗಳ ದೈಹಿಕ ಮಾಟ ಸ್ಫುಟವಾಗಿ ಕಾಣುತ್ತದೆ. ಒಬ್ಬಳು ಗಣ್ಯಸ್ತ್ರೀ ಕುಳಿತಿದ್ದಾಳೆ. ಅವಳ ಬಲಬದಿಗೆ ಅಪೂರ್ಣವಾಗಿ ಬಿಡಿಸಿದ ಮತ್ತೊಬ್ಬ ವ್ಯಕ್ತಿ ಕುಳಿತಿದ್ದು ಮತ್ತು ಎಡಬದಿಗೆ ಇಬ್ಬರು ನಿಂತಿದ್ದಾರೆ. ಮತ್ತು ಈ ಗಣ್ಯವ್ಯಕ್ತಿಯ ಕಡೆಗೆ ಮೂವರು ಸ್ತ್ರೀಯರು ಕವಲ

ಪುಷ್ಪವನ್ನು ಹಿಡಿದು ಬರುತ್ತಿರುವ ಹಾಗಿದೆ. ಎಲ್ಲರೂ ಮಿತವಾಗಿ ಆಭರಣಗಳನ್ನು ತೊಟ್ಟಿದ್ದಾರೆ. ಪ್ರಾಯಶಃ ಉಳಿದವರು ಕುಳಿತ ಗಣ್ಯ ಸ್ತ್ರೀಯ ಸಖಿಯರಿರಬಹುದು. ಇನು ಚಿತ್ರದ ವಿಷಯವಾಗಿದ್ದು ಸುಮಾರು ೨.೨೦×೧.೮೦ ಮಿ. ಕ್ಷೇತ್ರದಲ್ಲಿ ಬಿಡಿಸ ಲಾಗಿದೆ. ನೈಸರ್ಗಿಕವಾಗಿ ಬಣ್ಣ ಬಣ್ಣ ಪಟ್ಟಿಯುಳ್ಳ ಮರಳುಕಲ್ಲಿನ ಹಿನ್ನೆಲೆ, ನಿಂತ ವ್ಯಕ್ತಿಗಳ ಮೊಳಕಾಲಿನ ಕೆಳಭಾಗ ಸಹಜವಾಗಿ ಕಪ್ಪುಬಣ್ಣದ್ದಾದ್ದರಿಂದ ವ್ಯಕ್ತಿಗಳು ಆಕಾಶದಲ್ಲಿ ಸಂಚರಿಸುತ್ತಿದ್ದಾರೇನೊ ಎಂಬ ಭ್ರಮೆ ಉಂಟಾಗುತ್ತದೆ. ವ್ಯಕ್ತಿಗಳ ಮೈಮಾಟ. ಪ್ರಮಾಣ ಬದ್ಧತೆ, ಅಂಗಾಂಗಗಳನ್ನು ಬಿಡಿಸಿದ ಶೈಲಿ, ಸರಳ ಆಭರಣಗಳ ಅಲಂಕಾರ : ಇವೆಲ್ಲವೂ ಬಾದಾಮಿ ಊರೊಳಗಿನ ಮೂರನೇ ವಿಷ್ಣುಲಯಣದಲ್ಲಿರುವ ವರ್ಣಚಿತ್ರಗಳಿಗೆ ಸಮೀಪವಾಗಿದ್ದು, ಈ ಚಿತ್ರ ಒಬ್ಬ ನುರಿತ ಚಿತ್ರಕಾರನಿಂದ ಬಿಡಿಸಿದ್ದೆಂದು ಸೂಚಿಸುವುವು. ಇದರ ಕಾಲ ನಿಸ್ಸಂಶಯವಾಗಿ ಬಾದಾಮಿ ಚಾಲುಕ್ಯರ ಕಾಲದ್ದು ವಿಷ್ಣುಲಯಣದಲ್ಲಿರುವ ವರ್ಣಚಿತ್ರಗಳನ್ನು ಬಿಟ್ಟು ಈ ಕಾಲದ ಇಂಥ ಕಲಾ ಸಂಪ್ರದಾಯಕ್ಕೆ ಸಂಬಂಧಪಟ್ಟ ಚಿತ್ರಗಳು ಮತ್ತೆಲ್ಲಿಯೂ ಗೋಚರವಾಗಿಲ್ಲ. ಆದ್ದರಿಂದ ಈ ಬಂಡೆ ಚಿತ್ರವು ಮಹತ್ವದ್ದು.

**ಕೊನೆಯ ಮಾತು :** ೧. ಜನಸಾಮಾನ್ಯರ ಗವಿ ವರ್ಣಚಿತ್ರಕಲೆ ಪ್ರಾಗೈತಿಹಾಸ ಕಾಲದಲ್ಲಿ ಮಾತ್ರ ವಿಶೇಷವಾಗಿ ವ್ಯಾಪಕವಾಗಿ ಬೆಳೆದುದಲ್ಲದೆ ಚಾರಿತ್ರಿಕ ಯುಗದಲ್ಲೂ ಇತ್ತೀಚಿನವರೆಗೂ ಈ ಕಲೆ ಅಲ್ಪ ಪ್ರಮಾಣದಲ್ಲಿಯಾದರೂ ಅಲ್ಲಲ್ಲಿ ಉಳಿದು ಬಂದಿದೆ.

೨. ಚಾರಿತ್ರಿಕ ಯುಗದಲ್ಲಿ ವರ್ಣಚಿತ್ರಕಲೆ ಪ್ರತಿಭಾನ್ವಿತರಿಂದ ಸುವ್ಯವಸ್ಥಿತವಾಗಿ ತಾಂತ್ರಿಕವಾಗಿ ಮತ್ತು ನಿರೂಪಣೆಯಲ್ಲಿ ಸುಧಾರಣೆ ಹೊಂದಿ ಕಲಾಭಿರುಚಿಯುಳ್ಳ ರಾಜರ/ಶ್ರೀಮಂತರ ಆಶ್ರಯದಲ್ಲಿ ಚೆನ್ನಾಗಿ ಬೆಳೆದು ಇದರದ್ದೆ ಶ್ರೇಷ್ಠ ತರಗತಿಯ ಒಂದು ಪರಂಪರೆ ಬೆಳೆಯಿತು. ಅಜಂತಾ, ಎಲ್ಲೋರ, ಬಾದಾಮಿಗಳಲ್ಲಿ ಕಲ್ಲು-ಬೆಟ್ಟ ಗಳಲ್ಲಿ ಸಾಲು ಸಾಲಾಗಿ ಕೊರೆದು ಸೃಜಿಸಿದ ಚೈತ್ಯಾಲಯ ವಿಹಾರ, ದೇವಾಲಯಗಳ ಗೋಡೆಗಳ ಮೇಲೆ, ಬುದ್ಧ ಜಾತಕಗಳ, ಪೌರಾಣಿಕ ಹಾಗು ಸಾಮಾಜಿಕ ಮೊದಲಾದ ವಸ್ತು ವಿಷಯಗಳೇನೆ ಇರಲಿ, ಚಿತ್ರಗಳನ್ನು ಬಿಡಿಸುವ ಪದ್ಧತಿಗೆ ಪ್ರಾಗೈತಿಹಾಸಿಕ ಜನರೇ ಬುನಾದಿಯನ್ನು ಹಾಕಿ ಮಾರ್ಗದರ್ಶನ ನೀಡಿದ್ದಾರೆ. ಕ್ರಮವಾದ ಕಥಾವಸ್ತು, ತಾಂತ್ರಿಕ ಕುಶಲತೆ, ವರ್ಣ ಸಂಯೋಜನೆ, ಅಭಿವ್ಯಕ್ತಿಯ ಶೈಲಿ ಮತ್ತು ಪ್ರತಿಭೆ ಈ ಉಚ್ಚಮಟ್ಟದ ಕಲಾಕೃತಿಗಳ ವಿಶಿಷ್ಟ ಲಕ್ಷಣಗಳು. ಇದು ಪ್ರತಿಭಾವಂತರಿಂದ ಸೃಷ್ಟಿಯಾದವು. ಇಂಥ ಕಲೆ ಸಮಾಜದ ಜನ ಸಾಮಾನ್ಯ ಗವಿ ವರ್ಣಚಿತ್ರಕಲೆಯ ಮೇಲೆಯೂ ಪ್ರಭಾವ ಬೀರಿತು. ತತ್ಪರಿಣಾಮವಾಗಿ ಬಾದಾಮಿಯಲ್ಲಿ ಚಾಲುಕ್ಯ ಕಾಲದ ಮತ್ತು ಮಾಸ್ಕಿಯಲ್ಲಿಯ ವಿಜಯನಗರ ಕಾಲದ ಗವಿ ವರ್ಣಚಿತ್ರಗಳೂ ಸೃಷ್ಟಿಯಾದವು. ಹಿಂದಿನಿಂದ ಬಂದ ಜನ ಸಾಮಾನ್ಯ ಗವಿ ವರ್ಣಚಿತ್ರ ಪದ್ಧತಿಯಲ್ಲಿ ಚಾರಿತ್ರಿಕ ಕಾಲದ ಶ್ರೇಷ್ಠ ತರಗತಿ ವರ್ಣ ಚಿತ್ರಕಲೆಯ ಒಂದು ತಾಂತ್ರಿಕ ಕ್ರಮವನ್ನು

ಸ್ವಲ್ಪ ಮಟ್ಟಿಗೆ ಅಳವಡಿಸಿಕೊಳ್ಳಲಾಯಿತು. ಚಿತ್ರ ಬಿಡಿಸುವ ಮುನ್ನ ಬಂಡೆಯ ಮೇಲ್ಮೈಯನ್ನು ತೆಳ್ಳಗೆ ಹಳದಿ ಮಿಶ್ರಿತ ಸುಣ್ಣದ ಲೇಪನ ಮಾಡುವದು. ಇದರಿಂದ ಚಿತ್ರಗಳು ಸ್ಪಷ್ಟವಾಗಿ ಕಾಣುತ್ತವೆ. ಪ್ರಾಗೈತಿಹಾಸಿಕ ಗವಿ ವರ್ಣಚಿತ್ರಗಳನ್ನು ನೇರವಾಗಿ ಬಂಡೆಯ ಮೇಲೆ ಬಿಡಿಸದ್ದರಿಂದ ಅವು ಅರ್ಧಂಬರ್ಧ ಇಲ್ಲವೆ ಮಸುಕು ಮಸುಕಾಗಿ ಕಾಣುತ್ತವೆ. ಆದರೂ ಇದರ ವೈಶಿಷ್ಟ್ಯವೇ ಬೇರೆ. ಈ ರೀತಿಯ ಚಿತ್ರಣಗಳ ಭಿನ್ನತೆ ತಾಂತ್ರಿಕ ಕ್ರಮದ ಅಭಾವ ಅಥವಾ ಪ್ರಗತಿಯ ಕಾರಣಕ್ಕಿಂತ ಇವುಗಳ ಹಿನ್ನೆಲೆಯಲ್ಲಿಯ ಉದ್ದೇಶವೇ ಹೆಚ್ಚು ಗಣನೀಯ.

ಪ್ರಾಗೈತಿಹಾಸಿಕ ಚಿತ್ರಗಳು ತಮ್ಮ ದೈನಂದಿನ ಜೀವನದ ಆರ್ಥಿಕ ಸಫಲತೆ, ಅಂದರೆ ತಮಗೆ ಆಹಾರವಾದ ಪ್ರಾಣಿಗಳ ಅಭಿವೃದ್ಧಿ ಅವುಗಳ ಯಶಸ್ವಿ ಬೇಟೆ ಮತ್ತು ತಮ್ಮ ಜನಾಂಗದ ವಂಶಾಭಿವೃದ್ಧಿ ಇವುಗಳ ಮೇಲೆ ಆಧಾರಿತವಾದವು. ಇಂಥ ಚಿತ್ರಗಳನ್ನು ಬಿಡಿಸಿದವನು ಆ ಸಮಾಜದ ಸಾಮಾನ್ಯ ವ್ಯಕ್ತಿ. ಮಾಂತ್ರಿಕ ವಿಧಾನದಿಂದ ಸಮಾಜದ ಅವಶ್ಯಕತೆಗಳನ್ನು ಪೂರೈಸುವ ಪ್ರಯತ್ನ ಅವನದು. ಅವನೇನು ಈ ಕಲೆಯ ಪರಂಪರೆಯ ಅಭಿವೃದ್ಧಿಗೊಳಿಸುತ್ತ ಬಂದ ಬುಡಕ್ಕೆ ಸೇರಿದ ಇಲ್ಲವೇ ಅದನ್ನು ಸತತವಾಗಿ ಒಂದು ಕ್ರಮದಲ್ಲಿ ಸಾಧಿಸಿಕೊಂಡು ಬಂದಂಥ ವ್ಯಕ್ತಿಯಲ್ಲ. ತಾನು ನೋಡಿದ್ದನ್ನು ಉದ್ದೇಶಕ್ಕನುಗುಣವಾಗಿ ಬಿಡಿಸುವ ಕುಶಲಗಾರ, ಚಿತ್ರಗಳು ಸಾಂಕೇತಿಕ. ಆದ್ದರಿಂದ ಕೇವಲ ಛಾಯನಿರೂಪಣ ತಂತ್ರವನ್ನು ಬಳಸಿದ್ದು. ಇದು ಚಾರಿತ್ರಿಕ ಯುಗದಲ್ಲೂ ಮುಂದುವರೆಯಿತು.

ಚಾರಿತ್ರಿಕ ಯುಗದ ಉತ್ತಮ ಚಿತ್ರಗಳು ಒಬ್ಬ ನುರಿತ ಕಲಾಭ್ಯಾಸಿ. ತಾನು ನೋಡಿದ ಸಮಾಜದ ಅಥವಾ ಜನಪ್ರಿಯವಾದ ಕಥಾವಸ್ತುಗಳ ಕೆಲವು ಸನ್ನಿವೇಶಗಳನ್ನು ಕುಶಲತೆಯಿಂದ ತೃಪ್ತಿಗೋಸ್ಕರ, ಅಥವಾ ಬೇಕಾದವರಿಗೆ ನೈಜವಾಗಿ ಪ್ರೌಢಿಮೆಯಿಂದ ಬಿಡಿಸಿದುದು.

ಈ ರೀತಿಯ ಮೇಲಿನ ಉದಾಹರಣೆಗಳಿಂದ ಪ್ರಾಗೈತಿಹಾಸಿಕ ಚಿತ್ರಗಳ ವೈಶಿಷ್ಟ್ಯ ಮತ್ತು ಉದ್ದೇಶ ಮತ್ತು ಚಾರಿತ್ರಿಕ ಯುಗದಲ್ಲಿ ಈ ಪದ್ಧತಿ ಮತ್ತು ಹೊಸ ಪದ್ಧತಿ ಬೆಳೆದು ಬಂದ ರೀತಿ, ಉದ್ದೇಶ, ಲಕ್ಷಣಗಳನ್ನು ಮೇಲಿನ ಉದಾಹರಣೆಗಳು ಸ್ಪಷ್ಟಪಡಿಸುತ್ತವೆ.

■ ■

---

* ೧೯೭೬–೭೮ ರ ಸಮಯದಲ್ಲಿ ನಾನು ಆನೆಗೊಂದಿ–ಚಿಕ್ಕರಾಮಪುರ ಪ್ರದೇಶದಲ್ಲಿ ಇಂಥ ವರ್ಣಚಿತ್ರಗಳ ಶೋಧನೆಗೆ ಮತ್ತೆ ಅನ್ವೇಷಣೆ ಕೈಕೊಂಡಾಗ ಆನೆಗೊಂದಿ ಹಿಂದಿನ ಸಂಸ್ಥಾನದ ರಾಜವಂಶದವರಾದ ಶ್ರೀ ರಾಮದೇವರಾಯರು ತಾವೇ ನನ್ನೊಡನೆ ಎಡಬಿಡದೆ ಸುತ್ತಾಡಿ ಕೆಲವು ಹೊಸ ಗವಿಚಿತ್ರಗಳ ಶೋಧನೆಗೆ ಆತ್ಮೀಯವಾಗಿ ಸಹಾಯ ಮಾಡಿದ್ದಾರೆ. ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು. ನನ್ನ ಈ ಲೇಖನದ ಹಸ್ತಪ್ರತಿಯನ್ನು ಅಂದವಾಗಿ ಬರೆದುಕೊಟ್ಟ ಶ್ರೀ ಯು. ಎಸ್. ಮೂರ್ತಿಯವರಿಗೂ ನಾನು ಕೃತಜ್ಞ.

# ಶಿಲಾಹಾರ : ವಂಶನಾಮದ ನಿರ್ವಚನ

ಎಂ. ವಿ. ಸೀತಾರಾಮಯ್ಯ

ಕರ್ನಾಟಕದ ಸ್ಥಳನಾಮಗಳಂತೆ ಕರ್ನಾಟಕವನ್ನು ಆಳಿದ ದೊಡ್ಡ, ಸಣ್ಣ, ರಾಜವಂಶಗಳ ನಾಮಗಳೂ ಅವುಗಳ ಮೂಲಾರ್ಥ ನಿರ್ವಚನದ ದೃಷ್ಟಿಯಿಂದಲೂ ಶಬ್ದರೂಪ ನಿಷ್ಪತ್ತಿಯ ದೃಷ್ಟಿಯಿಂದಲೂ ಅಧ್ಯಯನಯೋಗ್ಯವಾಗಿವೆ. ವಂಶನಾಮಗಳು ಸಂಖ್ಯಾ ದೃಷ್ಟಿಯಿಂದ ಸ್ಥಳನಾಮಗಳಷ್ಟು ವಿಪುಲವಾಗಿಲ್ಲ, ದಿಟ. ಆದರೆ ನಮ್ಮ ನಾಡಿನ ಸಂಸ್ಕೃತಿ ಮತ್ತು ಚರಿತ್ರೆಯ ದೃಷ್ಟಿಯಿಂದ ಸ್ಥಳನಾಮಗಳ ಅಧ್ಯಯನ ಎಷ್ಟು ಮಹತ್ವದ್ದೋ ಅಷ್ಟೇ ಮಹತ್ವದ್ದು ಅರಸುಮನೆತನಗಳ ಹೆಸರಿನ ಹುಟ್ಟಿನ ಶೋಧನೆ. ಚಾಲುಕ್ಯ, ಹೊಯ್ಸಳ, ರಾಷ್ಟ್ರಕೂಟ ಮುಂತಾದ ಕೆಲವು ಹಿರಿಯ 'ಅರಸುಮನೆತನಗಳ ಹೆಸರಿನ ಹಿಂದೆ ಅಡಗಿರುವ ಕಥೆಯನ್ನು, ಅರ್ಥವಂತಿಕೆಯನ್ನು, ತಿಳಿಯಹೇಳಲು ಚರಿತ್ರಕಾರರು ಪ್ರಯತ್ನಪಟ್ಟಿದ್ದಾರೆ. ಇಂಥ ಪ್ರಯತ್ನಗಳಲ್ಲಿ ಅವರು ಸಾಧಾರಣವಾಗಿ ಶಾಸನಾಧಾರವನ್ನೂ ಕವಿಕೃತಿಗಳ ಆಧಾರವನ್ನೂ ಅವಲಂಬಿಸುತ್ತಾರೆ. ಶಾಸನಾಧಾರ ಎಲ್ಲ ಸಂದರ್ಭಗಳಲ್ಲೂ ನಿರ್ವಿವಾದವಾದ ಪ್ರಮಾಣ ಎಂಬ ತಪ್ಪಾದ ಗ್ರಹಿಕೆ ನಮ್ಮ ಸಂಶೋಧಕರಲ್ಲಿ ನೆಲಸಿದೆ. ಶಾಸನಗಳ ಪ್ರಾರಂಭಿಕ ವಂಶಪ್ರಶಸ್ತಿಯ ಪದ್ಯಗಳನ್ನು ಸಾಧಾರಣವಾಗಿ ಕವಿಗಳೇ ಬರೆದಿರುತ್ತಾರೆ. ಜನ್ನನ ಶಾಸನಪದ್ಯಗಳನ್ನು ಈ ಸಂದರ್ಭದಲ್ಲಿ ನೆನೆಯಬಹುದು. ವಂಶದ ಮೂಲಪುರುಷರನ್ನು ವರ್ಣಿಸುವಾಗ ಕವಿಕಲ್ಪನಾ ವಿಲಾಸ ನಮಗೆ ಗೋಚರವಾಗುತ್ತದೆಯೇ ಹೊರತು ಚಾರಿತ್ರಿಕ ಸತ್ಯಾಂಶ ಹೊರಪಡುವುದಿಲ್ಲ. ರಾಜ್ಯವನ್ನು ಸ್ಥಾಪಿಸಿದ ಪ್ರಥಮ ಶೂರಪುರುಷನು ಗುಣದಿಂದ ಕ್ಷತ್ರಿಯನೆನ್ನುವಲ್ಲಿ ಸಂದೇಹವಿಲ್ಲ: ವಂಶಾವಳಿಯನ್ನು ಬಿತ್ತರಿಸುವ ಶಾಸನಕವಿಯ ಕೈಯಲ್ಲಿ ಆತ ಜಾತಿಯಿಂದ(ವರ್ಣ ಅಲ್ಲ) ಕ್ಷತ್ರಿಯನೂ ಆಗಿ ಬಿಡುತ್ತಾನೆ: ಅವನ ವಂಶಮೂಲ ಸೂರ್ಯವಂಶಕ್ಕೋ ಚಂದ್ರವಂಶಕ್ಕೋ ಹೋಗಿಬಿಡುತ್ತದೆ; ಯಾದವವಂಶವೋ

ಮತ್ತಾವ ಪೌರಾಣಿಕವಂಶವೋ ಅವನ ವಂಶಕ್ಕೆ ಪ್ರಾಚೀನತೆಯು, ವಂಶಶುದ್ಧಿಯು. ಪ್ರಭಾವಳಿಯನ್ನು ಕಟ್ಟಿನಿಲ್ಲಿಸುತ್ತದೆ. ಇದರಿಂದ ಚಾರಿತ್ರಿಕಸತ್ಯ ಹೊರಪಡುವುದಿಲ್ಲ. ಶಬ್ದರೂಪ ನಿಷ್ಪತ್ತಿಯನ್ನು ಹಿಡಿದು ವಂಶನಾಮದ ಅಧ್ಯಯನ ಮಾಡುವುದರಿಂದ ಕೆಲವೊಮ್ಮೆ ಅದರ ಮೂಲದ ನೆಲೆ ಗೊತ್ತಿಗೆ ಬರುವ ಸಂಭವವುಂಟು. ಶಿಲಾಹಾರ ವಂಶನಾಮದ ಬಗೆಗೆ ಅಂಥ ಒಂದು ಪರಿಶೀಲನೆಯ ಪ್ರಯತ್ನವನ್ನು ಇಲ್ಲಿ ಕೈಕೊಂಡಿದೆ.

"ಪ್ರಸಿದ್ಧಗಳಾದ ಉತ್ತರಕೊಂಕಣದ ಶಿಲಾಹಾರವಂಶ, ದಕ್ಷಿಣಕೊಂಕಣದ ಶಿಲಾಹಾರವಂಶ, ಕೊಲ್ಲಾಪುರದ ಶಿಲಾಹಾರವಂಶ, ಇವುಗಳಲ್ಲದೆ, ಮುಂಬಯಿಕರ್ನಾಟಕದ ಉತ್ತರ ಭಾಗಗಳಲ್ಲೂ ಮತ್ತು ಅದರ ಸುತ್ತಮುತ್ತಣ ಪ್ರದೇಶಗಳಲ್ಲೂ ಅನೇಕ ಅರಸು ಮನೆತನಗಳು ಇದ್ದುದು ಗೋಚರಕ್ಕೆ ಬಂದಿದೆ. ವಿದ್ಯಾಧರ ರಾಜನಾದ ಒಬ್ಬ ಜೀಮೂತವಾಹನನು ತಮ್ಮ ವಂಶದ ಮೂಲಪುರುಷ ಎಂದು ಶಿಲಾಹಾರರು ಹೇಳಿಕೊಂಡಿದ್ದಾರೆ. ಅವರ ಧ್ವಜ 'ಸುವರ್ಣಗರುಡಧ್ವಜ'...ಮುಂಬಯಿ ಮತ್ತು ಹೈದರಾಬಾದು ಕರ್ನಾಟಕ ಪ್ರಾಂತಗಳ ಬಹುತೇಕ ಎಲ್ಲ ಶಿಲಾಶಾಸನಗಳೂ ಪ್ರಕಟವಾಗಿಲ್ಲ. ಅವುಗಳನ್ನು ವಿವರಪೂರ್ಣವಾಗಿ ಅಧ್ಯಯನ ಮಾಡಬೇಕಾದದ್ದು ಅತ್ಯಗತ್ಯ" ಎಂಬುದು ಚರಿತ್ರಕಾರರ ಅಭಿಪ್ರಾಯ.[೧]

'ಶಿಲಾಹಾರರ ಶಾಸನಗಳು' ಎಂಬ ಗ್ರಂಥ ಸದ್ಯದಲ್ಲಿಯೆ ಪ್ರಕಟವಾಗಲಿದ್ದು, ಅವುಗಳ ಬಗೆಗೆ ಇದ್ದ ಕೊರತೆ ನಿವಾರಣೆಯಾಗಲಿದೆ ಎಂಬುದು ಸಂತೋಷದ ಸಂಗತಿ.[೨] ಅದರ ಸಂಪಾದಕರಾದ ಡಾ. ವಿ. ವಿ. ಮಿರಾಶಿಯವರು (ಸುಪ್ರಸಿದ್ಧ ಸಂಸ್ಕೃತ ವಿದ್ವಾಂಸರು) 'ಸೆಲಾರ' ಎಂಬ ಶಬ್ದಕ್ಕೆ ಕನ್ನಡದಲ್ಲಿ ಯಾವ ಅರ್ಥವಾದರೂ ಉಂಟೆ ಎಂದು ನನ್ನಿಂದ ತಿಳಿಯಬಯಸಿದರು. ಈ ಸಂಬಂಧವಾಗಿ ಅವರು ನನಗೆ ಬರೆದ (ಕೆಳಗೆ ಉಲ್ಲೇಖಿಸಿರುವ) ಪತ್ರದಲ್ಲಿ ಹೀಗೆ ತಿಳಿಸಿದ್ದಾರೆ :

---

೧ ಕರ್ನಾಟಕ ಪರಂಪರೆ (ಇಂಗ್ಲಿಷ್ ಆವೃತ್ತಿ), ಕರ್ನಾಟಕ ಸರ್ಕಾರದ ಪ್ರಕಟನೆ. ೧೯೬೮, ಪು. ೩೧೨. [ಇದೇ ಗ್ರಂಥದಿಂದ ಈ ವಂಶದ ಹೆಸರು ಸೆಲಾರ ಎಂದು ಇದ್ದುದಾಗಿಯೂ ತಿಳಿದುಬರುತ್ತದೆ: "The Silaharas of Akkalkot: Though the oldest of the Śilāhāra houses, this family has come to light only recently—The name of the family is mentioned as Selāra" (p 312).]

೨ ಈ ಗ್ರಂಥ ಭಾರತ ಸರ್ಕಾರದ ಪುರಾತತ್ತ್ವ ಪರಿವೀಕ್ಷಣಾಶಾಖೆಯ Corpus Inscriptionum Indicarum ಗ್ರಂಥಮಾಲೆಯಲ್ಲಿ ಆರನೆಯ ಸಂಪುಟ (Vol VI) ವಾಗಿ ಪ್ರಕಟವಾಗಲಿದೆ ಎಂದು ಅದರ ಸಂಪಾದಕರಾದ ಮಹಾಮಹೋಪಾಧ್ಯಾಯ ಡಾ. ವಿ. ವಿ. ಮಿರಾಶಿಯವರು ತಿಳಿಸಿದ್ದಾರೆ (ಅವರ ೧೧-೬-೧೯೬೬ ರ ಪತ್ರ). ಈ ಮಹನೀಯರು ನಾಗಪುರ ವಿಶ್ವವಿದ್ಯಾಲಯದ ನಿವೃತ್ತ ಸಂಸ್ಕೃತ ಪ್ರಾಧ್ಯಾಪಕರು.

"The Silaharas were kannada-speaking. They call themselves 'born in the Selara family.' Selāṛa has been sanskritised as Śilāhāra (food on a slab) and The family name is traced to Jimutavahan's rescue of a snake who was sitting on a slab (Śilā) before being devoured by Garuda. Perhaps, that family name Śelāra has some other meaning."

[ಶಿಲಾಹಾರರು ಕನ್ನಡ ಮಾತಾಡುವವರು. ತಾವು ಸೆಲಾರ ವಂಶಸ್ಥರು ಎಂದು ಅವರು ಹೇಳಿಕೊಂಡಿದ್ದಾರೆ. ಸೆಲಾರ ಪದವು ಶಿಲಾಹಾರ (ಕಲ್ಲು ಹಲಗೆಯ ಮೇಲೆ ಆಹಾರ ತೆಗೆದುಕೊಳ್ಳುವವರು) ಎಂದು ಸಂಸ್ಕೃತೀಕರಣವಾಗಿದೆ. ವಂಶನಾಮದ ಮೂಲವು ಜೀಮೂತವಾಹನನ ಕಥೆಗೆ ಸಂಬಂಧಪಟ್ಟಿದೆ. ಶಿಲೆಯ ಮೇಲೆ ಕುಳಿತಿದ್ದ ನಾಗನು (ಸರ್ಪವು) ಗರುಡನಿಗೆ ಆಹಾರವಾಗಲಿದ್ದನು. ಆಗ ಜೀಮೂತವಾಹನನು ಗರುಡನಿಗೆ ತಾನೇ ಆಹಾರವಾಗಲೊಪ್ಪಿಕೊಂಡು, ನಾಗನನ್ನು ಉಳಿಸಿದನು.][೩]

ಡಾ. ಮಿರಾಶಿಯವರ ಅಪೇಕ್ಷೆಯಂತೆ, 'ಸೆಲಾರ > ಶಿಲಾಹಾರ : ಒಂದು ಟಿಪ್ಪಣಿ' (A Note on Selāra > Śilāhāra) ಎಂಬ ನನ್ನ ಅಭಿಪ್ರಾಯವನ್ನು ಅವರಿಗೆ ಬರೆದು ಕಳಿಸಿಕೊಟ್ಟೆನು. ಅದರ ವಿಸ್ತೃತರೂಪವೇ ಈ ಲೇಖನ. ನನ್ನ ಟಿಪ್ಪಣಿ ಕೈಸೇರಿದ ಮೇಲೆ ಆ ವಿದ್ವಾಂಸರು ತಮ್ಮ ಮರುಪತ್ರದಲ್ಲಿ (೩-೭-೧೯೭೬) 'ಶಿಲಾಹಾರ' ಎಂಬ ಸಂಸ್ಕೃತಪದಕ್ಕೆ ಶಾಸನಾಧಾರವುಳ್ಳ ಇನ್ನೊಂದು ಅರ್ಥವಿವರಣೆಯನ್ನು ನೀಡಿದರು. ಅದು ಹೀಗಿದೆ :

"Selāra or Śīlāra is mentioned in the oldest inscription as the name of a royal family, which was derived from the progenitor who protected the ocean when it was terrified by the arrow of Parasurama. So Śīlāra appears to be a great warrior."[೪]

೩ ಜೀಮೂತವಾಹನನ ಆತ್ಮಾರ್ಪಣದ ಕಥೆ ಶ್ರೀಹರ್ಷನ (ಕ್ರಿ. ಶ. ೭ನೆಯ ಶತಮಾನ) ನಾಗಾನಂದ ನಾಟಕದ ವಸ್ತು ಎಂಬುದನ್ನು ಇಲ್ಲಿ ನೆನೆಯಬಹುದು. ಅತ್ಯಂತ ಪ್ರಾಚೀನವಾದ ಶಿಲಾಹಾರ ಮನೆತನಗಳು ೮, ೯, ೧೦ನೆಯ ಶತಮಾನಗಳಲ್ಲಿ ಸ್ಥಾಪಿತವಾದವು ಎಂಬ ಸಂಗತಿ ಗಮನಾರ್ಹ. ಅಂತೆಯೇ, ಜೀಮೂತವಾಹನನ ಆತ್ಮಾರ್ಪಣದ ಘಟನೆ ನಡೆದ ಸ್ಥಳ (ನಾಟಕದಲ್ಲಿ ವರ್ಣಿಸಿರುವಂತೆ) ಗೋಕರ್ಣವಾಗಿದ್ದು, ಅದು ದಕ್ಷಿಣಕೊಂಕಣದ ಅಥವಾ ಉತ್ತರಕನ್ನಡದ (ಕಾರವಾರದ) ಕಡಲ ಕರೆಯಲ್ಲಿದೆ ಎಂಬುದೂ ಗಮನಾರ್ಹ. ಆದ್ದರಿಂದ, ಶಿಲಾಹಾರರು ರಾಜ್ಯವಾಳಿದ ಪ್ರದೇಶಗಳಲ್ಲಿ ಈ ಕಥೆ ಸ್ಥಳಪುರಾಣರೂಪದಲ್ಲಿ ಅಂದಿನ ದಿನಗಳಲ್ಲಿ ಬಹಳ ಹಿಂದಿನಿಂದ ಬಳಕೆಯಲ್ಲಿದ್ದಿರಬಹುದು.

೪ ಈ ಸಂಬಂಧದಲ್ಲಿ, ಮೇಲೆ ಉಲ್ಲೇಖಿಸಿರುವ ಪತ್ರದಲ್ಲಿ ಡಾ. ಮಿರಾಶಿಯವರು ಬರೆದು ಕಳಿಸಿರುವ ಶಾಸನಶ್ಲೋಕ ಹೀಗಿದೆ:

ಜಾಮದಗ್ನ್ಯಶರಾದ್ಭೀತಃ ಶೀಲಾರಚ್ಛದ್ಮಸಾಯಕಾ ।
ಸಾಗರೋ ರಕ್ಷಿತಸ್ತೈಶ್ಚ ಪ್ರಾಪುಸ್ತನ್ನಾಮ ಪೂರ್ವಜಾಃ ॥

[ಅತ್ಯಂತ ಪ್ರಾಚೀನವಾದ ಶಾಸನದಲ್ಲಿ ಸೆಲಾರ ಅಥವಾ ಶೀಲಾರ ಎಂಬ ರಾಜವಂಶದ ಹೆಸರನ್ನು ಉಲ್ಲೇಖಿಸಿದೆ. ಪರಶುರಾಮನ ಶರಹತಿಯಿಂದ ಭೀತಿಗೊಳಗಾದ ಸಾಗರವನ್ನು ಶೀಲಾರನೆಂಬವನು ರಕ್ಷಿಸಿದನು. ಈ ಪೂರ್ವಜನಿಂದ ಶೀಲಾರನೆಂಬ ವಂಶನಾಮವು ನಿಷ್ಪನ್ನವಾಗಿದೆ.]

'ಶಿಲಾಹಾರ' ಸಂಸ್ಕೃತಶಬ್ದಕ್ಕೆ ಮೂರನೆಯದಾದ ಅರ್ಥ ವಿವರಣೆಯೂ ಉಂಟು: ಕರ್ಣಪಾರ್ಯನು ರಚಿಸಿರುವ ನೇಮಿನಾಥಪುರಾಣದ (ಸು. ಕ್ರಿ. ಶ. ೧೧೪೦) ಪೀಠಿಕಾ ಪ್ರಕರಣದಲ್ಲಿ ಶಿಲಾಹಾರವಂಶದ ವಿಜಯಾದಿತ್ಯನ (ಕ್ರಿ. ಶ ೧೧೪೩-೧೧೬೫) ಉಲ್ಲೇಖವಿದೆ. ಕರ್ಣಪಾರ್ಯನು ಲಕ್ಷ್ಮಣಮಂತ್ರಿಯ ಆಶ್ರಿತನಾಗಿದ್ದು, ಅವನ ಕೋರಿಕೆಯಂತೆ ನೇಮಿನಾಥಪುರಾಣವನ್ನು ರಚಿಸಿದನು. ಈ ಲಕ್ಷ್ಮಣ ಅಥವಾ ಲಕ್ಷ್ಮೀಧರನು ವಿಜಯಾದಿತ್ಯನ ತಮ್ಮ. ವಿಜಯಾದಿತ್ಯನು "ಜೀಮೂತವಾಹನ ವಿದ್ಯಾಧರ ಚಕ್ರವರ್ತಿ ವಂಶತಿಳಕ"ನೂ ಕಿಳಿಕಿಳದುರ್ಗದ ಅಧಿಪತಿಯೂ ಆಗಿದ್ದ ಗೋವರ್ಧನ ಅಥವಾ ಗೋಪಣ ಎಂಬ ರಾಜನ ಮಗ.[೫] ನೇಮಿನಾಥಪುರಾಣದ ಸಂಪಾದಕರಾದ ವಿದ್ವಾನ್ ಎಚ್. ಶೇಷ ಅಯ್ಯಂಗಾರರು ತಮ್ಮ ಸುದೀರ್ಘವಾದ ಪ್ರಸ್ತಾವನೆಯಲ್ಲಿ ಅನೇಕ ಶಾಸನಗಳ ಆಧಾರದಿಂದ ಶಿಲಾಹಾರವಂಶದ ವಿಜಯಾದಿತ್ಯನ ವಿಚಾರವಾಗಿ ವಿಪುಲವಾದ ವಿಷಯಸಂಗ್ರಹವನ್ನು ಒದಗಿಸಿದ್ದಾರೆ. ಅವರು ಉಲ್ಲೇಖಿಸಿರುವ ಹಲವು ಶಾಸನಗಳ ಪೈಕಿ ಕೊಲ್ಲಾಪುರದ ಬಳಿಯಿರುವ ಮುತ್ತಿಗೆ ಗ್ರಾಮದ ಶಾಸನದಲ್ಲಿ[೬] ವಂಶದ ಹೆಸರನ್ನು 'ಶಿಲಾಹಾರ' ಎಂದು ಹೇಳಿರುವುದರ ಜೊತೆಗೆ. 'ಸೇಲಾರ' ಎಂಬುದು ವಂಶದ ಮೂಲಪುರುಷನ ಹೆಸರು ಎಂದೂ ಹೇಳಿದೆ. ಮೂಲಪುರುಷನು ಸೆಲಾರ ಎಂದು ತಿಳಿದಿದ್ದ ಒಬ್ಬ ಶಾಸನಕವಿ ಹೆಸರನ್ನು ಶಿಲಾಹಾರ ಎಂದು ಸಂಸ್ಕೃತೀಕರಣ ಮಾಡಿ, ಶಿಲಾಹಾರಕ್ಕೂ ಜೀಮೂತವಾಹನನಿಗೂ ಗಂಟುಹಾಕಿರಬೇಕು. ಈ ಶಾಸನ ಕವಿಗೆ ಶ್ರೀಹರ್ಷನ ನಾಗಾನಂದ ನಾಟಕದ ಪರಿಚಯವಿದ್ದುದು ಸ್ಪಷ್ಟ. ಈ ಮುತ್ತಿಗೆ ಶಾಸನದಲ್ಲಿ ಶಿಲಾಹಾರ ಶಬ್ದದ ಅರ್ಥವಿವರಣೆ ಇದ್ದು, ಅದು ಜೀಮೂತವಾಹನನಿಗೆ ಸಂಬಂಧಪಡದಿರುವುದು ಗಮನಾರ್ಹವಾಗಿದೆ. ಅದರಂತೆ, ವಂಶದ ಮೂಲಪುರುಷನು ಕಠಿನವಾದ 'ಶಿಲಾಹಾರವ್ರತ'ವನ್ನು (ಎಂದರೆ ಕಲ್ಲನ್ನೇ ಆಹಾರವಾಗಿ ಭುಂಜಿಸುವುದನ್ನು) ಆಚರಿಸಿ, ನಾಡಿಸ ದೊರೆಯಾದನು. ಆದರೆ, ನೇಮಿನಾಥಪುರಾಣದ ಸಂಪಾದಕರಾದ ಶೇಷ ಅಯ್ಯಂಗಾರರು ಈ ಅರ್ಥವಿವರಣೆ ಸಮಂಜಸವಾಗಿಲ್ಲವೆಂದು ಅಭಿಪ್ರಾಯಪಟ್ಟು, ತಮ್ಮದೇ ಆದ ಹೊಸ ವಿವರಣೆಯನ್ನು ಮುಂದಿಟ್ಟಿದ್ದಾರೆ. ಅವರು ವಿವರಿಸುವಂತೆ, 'ಶಿಲಾಹಾರ' ಎಂಬ ಶಬ್ದರೂಪ 'ಶಿಲಹಾರ' ಎಂದಿರಬೇಕು;

೫ ಆರ್. ನರಸಿಂಹಾಚಾರ್ : 'ಕರ್ಣಾಟಕ ಕವಿಚರಿತೆ', ಸಂ. I, ಪರಿಶೋಧಿತ ದ್ವಿತೀಯ ಮುದ್ರಣ. ೧೯೨೭; ಪು. ೧೬೨

೬ Kolhapur Inscriptions, No. 9, ಪು. ೩೩ (ನೇಮಿನಾಥಪುರಾಣದ ಪ್ರಸ್ತಾವನೆಯಲ್ಲಿ ಉಲ್ಲಿಖಿತ).

ಅದು 'ಶಿಲವೃತ್ತಿ'ಗೆ ಸಂಬಂಧಪಟ್ಟದ್ದು; ಶಿಲವೃತ್ತಿ ಎಂದರೆ, ಹೊಲಗದ್ದೆಗಳಲ್ಲಿ ಉದುರಿರುವ ಧಾನ್ಯದ ಕಾಳನ್ನು ಸಂಗ್ರಹಿಸಿ ಆಹಾರ ಸಂಪಾದನೆ ಮಾಡುವುದು.[೭]

ಈ ವಿವರಣೆ ವಾಸ್ತವಿಕತೆಯಿಂದ ಕೂಡಿದ್ದರೂ, ಬುದ್ಧಿವಂತಿಕೆಯಿಂದ ಒಂದು ನಿರ್ದಿಷ್ಟ ವಾದ ಅರ್ಥಕ್ಕೆ ಹೊಂದುವಂತೆ ಶಬ್ದರೂಪವನ್ನು ಮಾರ್ಪಡಿಸಿರುವುದರಿಂದ, ಇದನ್ನು ಒಪ್ಪುವುದು ಕಷ್ಟವಾಗುತ್ತದೆ. ಸಾಧಾರಣವಾಗಿ, ಎಲ್ಲ ಶಾಸನಗಳಲ್ಲಿಯೂ ಕಂಡು ಬಂದಿರುವುದು 'ಶಿಲಾಹಾರ' ಎಂಬ ಶಬ್ದರೂಪವೇ. ಒಟ್ಟಿನಲ್ಲಿ ಹೇಳುವುದಾದರೆ, ನಾವು ಈ ವರೆಗೆ ಗಮನಿಸಿದ ಎಲ್ಲ ಅರ್ಥವಿವರಣೆಗಳು ಕಾಲ್ಪನಿಕವೂ ಚಮತ್ಕಾರ ಯುಕ್ತವೂ ಆಗಿವೆ. ಅತ್ಯಂತ ಹಳೆಯವಾದ ಒಂದೆರಡು ಶಾಸನಗಳಲ್ಲಿ 'ಸೆಲಾರ'ಎಂಬ ಮಾತು ಕಂಡುಬರದೆ ಇದ್ದಿದ್ದರೆ, ನೇಮಿನಾಥಪುರಾಣದ ಸಂಪಾದಕರ ಅರ್ಥವಿವರಣೆ ಯನ್ನು ಒಪ್ಪಿಕೊಳ್ಳಬಹುದಾಗಿತ್ತು. ಹೀಗಿರುವುದರಿಂದ, ಸೆಲಾರ ಶಬ್ದದ ವ್ಯುತ್ಪತ್ತಿ ಯನ್ನು ಭಾಷಾಶಾಸ್ತ್ರದೃಷ್ಟಿಯಿಂದ ವಿವೇಚನೆಮಾಡಿ, ಆ ಶಬ್ದದ ಸಂಸ್ಕೃತೀಕರಣ ಹೇಗೆ ನಡೆದಿದೆ ಎಂಬುದನ್ನು ಪರಿಶೀಲಿಸುವುದು ಪ್ರಯೋಜನಕರವಾಗಿ ಕಾಣುತ್ತದೆ.

**ಸೆಲಾರ > ಶಿಲಾಹಾರ :** ಶಿಲಾಹಾರ ಶಬ್ದವು ಸೆಲಾರ ಎಂಬ ಕನ್ನಡ ಶಬ್ದದ ಸಂಸ್ಕೃತರೂಪ ಎನ್ನುವುದರಲ್ಲಿ ಸಂದೇಹವಿಲ್ಲ. ಆದ್ದರಿಂದ ಅರ್ಥವಂತಿಕೆಯ ದೃಷ್ಟಿ ಯಿಂದ ಸೆಲಾರ ಶಬ್ದದ ವ್ಯುತ್ಪತ್ತಿಯನ್ನು ವಿವೇಚನೆಮಾಡಬೇಕಾಗಿದೆ. ಏಕೆಂದರೆ ಇದು ಪರಿಣಾಮತಃ ಒಂದು ವಂಶನಾಮವಾಗಿದ್ದು ಅಂಕಿತನಾಮವೆನಿಸುವುದಾದರೂ ಮೂಲತಃ ಅನ್ವರ್ಥಕವಾಗಿರುವ ಸಾಧ್ಯತೆ ಇರುವುದರಿಂದ, ವ್ಯುತ್ಪತ್ತಿಶೋಧನೆ ಅಗತ್ಯವಾಗುತ್ತದೆ.[೮] ಹಾಗೆ ಶೋಧನೆ ಮಾಡಹೊರಟಾಗ, ಕನ್ನಡವಾಗಿ ತೋರುವ, ಶಿಲಾಹರವೆಂದು ಸಂಸ್ಕೃತೀಕರಣವಾಗಿರುವ, ಅದರ ಮೂಲವು ಸಂಸ್ಕೃತಕ್ಕೇ ಹೋಗು ವುದು ಕಂಡುಬರುತ್ತದೆ. ಸಂಸ್ಕೃತದಿಂದಲೇ ರೂಪಗೊಂಡ ಕನ್ನಡ ಶಬ್ದವೊಂದು ಮತ್ತೆ ಸಂಸ್ಕೃತದ ವೇಷವನ್ನು ಧರಿಸಿರುವುದು ಭಾಷಾಪ್ರಪಂಚದಲ್ಲಿ ಒಂದು ಸೋಜಿಗದ ಸಂಗತಿಯಾಗಿಯೂ ತೋರಿಬರುತ್ತದೆ— ನಮ್ಮ ವ್ಯುತ್ಪತ್ತಿ ಸರ್ವಸಮರ್ಪಕವಾಗಿದ್ದರೆ!

ಶಲ್ಯ, ಶಲ್ಲೆ, ಶಾಲೆ, ಶೆಲ್ಲೆ, ಸೇಲೆ, ಸೆಲೆ– ಇವೆಲ್ಲಾ ನುಡಿಗಳನ್ನು ಕನ್ನಡದಲ್ಲಿ ವಸ್ತ್ರ–ಬಟ್ಟೆ, ಉಡುಪು–ತೊಡಪು (Cloth, Clothes, a garment) ಎಂಬ ಸಾಮಾನ್ಯಾರ್ಥ

೭ ಇದು ನಿಘಂಟುಗಳಲ್ಲೂ ಕೊಟ್ಟಿರುವ ಅರ್ಥ : ಕಿಟೆಲ್ ಅವರ ನಿಘಂಟುವಿನಲ್ಲಿ, **ಶಿಲವೃತ್ತಿ**= ಉಂಛವೃತ್ತಿ ಎಂದು ಅರ್ಥಕೊಟ್ಟಿದೆ (ಪು. ೧೪೫೭). ಆಪ್ಟೆಯವರ ನಿಘಂಟು (ಪು. ೫೫೫): ಶಿಲಃ, ಶಿಲಂ=Gleaning ears of corn (more than one at a time).

೮ "ತ್ರಿವಿಧಾ ಹಿ ನಾಮ-ಭೇದಾಃ : ಅನ್ವರ್ಥಾ ಅಂಕಿತಾ ರೂಢಾಶ್ಚೇತಿ... ಅತ್ರ ಅನ್ವರ್ಥಾ ಏವ ಶಬ್ದಾ ಯಥಾಯೋಗಂ ವ್ಯುತ್ಪತ್ತ್ಯಪೇಕ್ಷಾಃ ಅಂಕಿತಾ ರೂಢಾಶ್ಚ ವ್ಯುತ್ಪತ್ತ್ಯನಪೇಕ್ಷಾ ಏವೇತಿ ಸದೃಷ್ಟಾಂತಮಾಹ— ತೆಂಕಲ್ ಇತ್ಯಾದಿ" (ಆರ್. ನರಸಿಂಹಾಚಾರ್ ಸಂಪಾದಿತ ಭಟ್ಟಾಕಂಲಕನ ಶಬ್ದಾನುಶಾಸನ; ೧೯೨೩, ಪು. ೧೧೬).

ಗಳಲ್ಲಿ ಬಳಸಲಾಗಿದೆ.[೯] ಶಲ್ಯ, ಶಲ್ಲೆ, ಶೆಲ್ಲೆ ಈ ಶಬ್ದಗಳನ್ನು ಮೇಲುಹೊದಿಕೆ ಅಥವಾ ಉತ್ತರೀಯ, ಅಂಗವಸ್ತ್ರ ಎಂಬ ಪರಿಮಿತವಾದ ಅರ್ಥದಲ್ಲೂ ಬಳಸಲಾಗುತ್ತಿದೆ; ಉತ್ತರೀಯ ಸಾಧಾರಣವಾಗಿ ಗಂಡಸರು ಉಪಯೋಗಿಸುವ ವಸ್ತ್ರ. ಶಾಲೆ, ಸಾಲೆ, ಸೇಲೆ, ಸಾಲಿ ಎಂಬೀ ಶಬ್ದಗಳನ್ನು 'ಸೀರೆ' (ಸಂಸ್ಕೃತದ 'ಚೀರ' ಎಂಬುದರ ಅಪಭ್ರಂಶ) ಎಂಬ ಪರಿಮಿತಾರ್ಥದಲ್ಲಿ ಬಳಸಲಾಗುತ್ತದೆ. ಸೀರೆ ಹೆಂಗಸರ ವಸ್ತ್ರ ವಿಶೇಷ ಎಂಬುದು ಪ್ರಸಿದ್ಧವಿದೆಯಷ್ಟೆ.

—*ಆಱ ಮತ್ತು –*ಅಱ, –ಕಾರ ಮತ್ತು –ಗಾರ ಇವು ಕನ್ನಡ ವ್ಯಾಕರಣಗಳಲ್ಲಿ ಹೇಳಿರುವ ತದ್ಧಿತಪ್ರತ್ಯಯಗಳು. ಈ ಪ್ರತ್ಯಯಗಳನ್ನು ಕೆಳಗಿನ (ಊಹೆಮಾಡಿದ) ಮೂಲ ರೂಪಗಳಿಗೆ ಹತ್ತಿಸಿ, 'ಸೆಲಾರ' ಶಬ್ದವನ್ನು ತದ್ಧಿತಾಂತಗಳನ್ನಾಗಿ ಮಾಡಬಹುದು :

೧ *ಸೇಲ(=ಸೇಲೆ)+ಆರ=ಸೇಲಾರ; ಅಥವಾ*ಸೆಲ(=ಸೆಲೆ)+ಆರ=ಸೆಲಾರ.[೧೦]

೨ ಸೇಲೆ+ಗಾರ(< ಕಾರ)=ಸೇಲೆಗಾರ >ಸೇಲಾರ >ಸೆಲಾರ.

[ಹೋಲಿಸಿ : ಕುಂಭ+ಕಾರ=ಕುಂಬಾರ, ಕುಂಬರ; ಕರ್ಮ+ಕಾರ( >ಕಮ್ಮ+ಗಾರ)= ಕಮ್ಮಾರ. ಇದೇ ರೀತಿಯಲ್ಲಿ ಚಮ್ಮಾರ(<ಚರ್ಮಕಾರ), ಸೋನಾರ (<ಸೊನ್ನಗಾರ< ಸುವರ್ಣಕಾರ), ಮಲಾರ(< ಮಾಲಾ+ಹಾರ, ಅಥವಾ ಮಾಲಾ=ಮಲಾ+ಕಾರ).

ಹೀಗೆ ನಿಷ್ಪನ್ನಮಾಡಬಹುದಾದ ಸೆಲಾರ ಅಥವಾ ಸೇಲಾರ ಶಬ್ದಕ್ಕೆ ನೆಯ್ಗೆಯನ್ನೇ ವೃತ್ತಿಯಾಗುಳ್ಳವನು (=ನೆಯ್ಗೆ+ಕಾರ=ನೇಕಾರ) ಎಂದು ಅರ್ಥವಾಗುತ್ತದೆ. ಆದರೆ ಈಗ ಈ ಶಬ್ದ ಬಳಕೆಯಲ್ಲಿಲ್ಲ. ಕಿಟೆಲ್ಲರ ಶಬ್ದಕೋಶದಲ್ಲಿ 'ಸಾಲಿಗ' ಎಂಬ ಶಬ್ದವಿದೆ (ಸಾಲೆ+ಇಗ : ಇಗ ಒಂದು ತದ್ಧಿತಪ್ರತ್ಯಯ): ಇದಕ್ಕೆ ನೆಯ್ಗೆಯುವನು (Weaver) ಎಂಬ ಅರ್ಥವನ್ನು ಕೊಟ್ಟು, ಈ ಪದ ದಕ್ಷಿಣಮಹಾರಾಷ್ಟ್ರದಲ್ಲಿ (ಎಂದರೆ ಈಗಿನ ಉತ್ತರಕರ್ನಾಟಕ) ಬಳಕೆಯಲ್ಲಿದೆ ಎಂದು ಅವರು ಹೇಳಿದ್ದಾರೆ. 'ಸಾಲೆಯ' ಎಂಬ ಪದಕ್ಕೂ ನೆಯ್ಗೆಯುವನು ಎಂದೇ ಅರ್ಥ.[೧೧] 'ಸಾಲಿಗ' ಎಂಬ ಶಬ್ದ ೧೨ನೆಯ ಶತಮಾನದ ವಚನಸಾಹಿತ್ಯದಲ್ಲಿ ದೊರಕುತ್ತದೆ.[೧೨]

೯ ಕಿಟೆಲ್ಲರ ಇಂಗ್ಲಿಷ್–ಕನ್ನಡ ನಿಘಂಟು (ಪ್ರಥಮ ಮುದ್ರಣ) : ಪುಟಗಳು ೧೪೪೯, ೧೪೫೪, ೧೫೯೦, ೧೫೯೩.

೧೦ ಕನ್ನಡದ ಪ್ರಾಚೀನ ವ್ಯಾಕರಣಗಳಲ್ಲಿ –ಕಾರ,–ಗಾರ ಪ್ರತ್ಯಯಗಳನ್ನು ಹೇಳಿದೆಯೇ ಹೊರತು –ಆಱ(=ಆರ),–ಅಱ(=ಅರ) ಪ್ರತ್ಯಯಗಳನ್ನು ಪ್ರತ್ಯೇಕವಾಗಿ ಹೇಳಿಲ್ಲ. ಆದ್ದರಿಂದ, ಆರ,–ಅರ, ಇವನ್ನು ಪ್ರತ್ಯಯಗಳೆಂದು ಭಾವಿಸಲಾಗದಿದ್ದರೆ, ಕುಂಭಕಾರ,>ಕುಂಬಾರ, ಕುಂಬರ, ಇತ್ಯಾದಿ ಶಬ್ದರೂಪಗಳು ನಿಷ್ಪನ್ನವಾಗಿರುವಂತೆ, ಮೇಲೆ ವಿವರಿಸುವ ರೀತಿಯಲ್ಲಿ –ಕಾರ(–ಗಾರ)ಪ್ರತ್ಯಯವನ್ನು ಹತ್ತಿಸಿಯೇ 'ಸೆಲಾರ' ಶಬ್ದವನ್ನು ನಿಷ್ಪನ್ನಮಾಡಲಡ್ಡಿಯಿಲ್ಲ.

೧೧ ಕಿಟೆಲ್ಲರ ನಿಘಂಟು, ಪು. ೧೫೪೮.

೧೨ ನೇಕಾರ ಎಂಬ ಅರ್ಥದ 'ಸಾಲಿಗ' ಬಸವೇಶ್ವರರ ಒಂದು ವಚನದಲ್ಲಿ ಕಾಣಸಿಕ್ಕುತ್ತದೆ : "ಹಾಸಸಿಕ್ಕಿ ಸಾಲಿಗನಾದ; ವೇದವನೋದಿ ಹಾರುವನಾದ" (ಬಸವಣ್ಣನವರ ಪದಪ್ರಯೋಗ ಕೋಶ : ಸಂಗ್ರಾಹಕ, ಎಸ್. ಆರ್. ಗುಂಜಾಳ, ೧೯೭೩; ಪು. ೧೦೪೮).

'ಇಂಪೀರಿಯಲ್ ಗೆಜೆಟಿಯರ್ ಆಫ್ ಇಂಡಿಯಾ' ಗ್ರಂಥದ VIII ನೆಯ ಸಂಪುಟದಲ್ಲಿ (ಪು. ೮೨೩) ಪುಣೆ, ನಾಸಿಕ್, ಸೊಲ್ಲಾಪುರ, ಧಾರವಾಡ ಮತ್ತು ಬೆಳಗಾಂವಿ ಜಿಲ್ಲೆಗಳು ನೆಯ್ಗೆಗೆ ಪ್ರಸಿದ್ಧವಾಗಿರುವುವು ಎಂದೂ, ಹತ್ತಿಬಟ್ಟೆಯ ನೆಯ್ಗೆಯ ಕಾರ್ಯದಲ್ಲಿ ತೊಡಗಿರುವವರು ಬಹುಮಟ್ಟಿಗೆ ಹಿಂದೂ ಕೋಷ್ಟಿಗಳು, 'ಸಾಲಿ'ಗಳು, ಹಾತ್ಕಾರರು ಮತ್ತು ದೇವಾಂಗದವರು ಎಂದು ತಿಳಿದುಬರುತ್ತದೆ. ಈ ಹೇಳಿಕೆಯಿಂದ ನೇಕಾರ ವೃತ್ತಿಯನ್ನು ಹಿಡಿದಿರುವ ಜನರಲ್ಲಿಯೇ ಸಾಲಿಗಳು(=ಸಾಲಿಗರು) ಒಂದು ವಿಶಿಷ್ಟಪಂಗಡ ಅಥವಾ ಜಾತಿ ಎಂದು ಗೊತ್ತಾಗುತ್ತದೆ. ಈ ಸಾಲಿಗಳು ಮುಖ್ಯವಾಗಿ ಸೀರೆಯನ್ನು ನೇಯುತ್ತಿದ್ದರು ಎಂದು ಊಹಿಸಬಹುದು (ಮೇಲೆ ನೋಡಿ : ಸಾಲಿ=ಚೀರ > ಸೀರೆ).[೧೩]

ಈ ಸಂದರ್ಭದಲ್ಲಿ ಆದ್ಯವಚನಕಾರರಲ್ಲಿ ಒಬ್ಬನಾದ ಜೇಡರ ದಾಸಿಮಯ್ಯನ ಸಂಗತಿ ಪ್ರಸ್ತುತವೆನಿಸುತ್ತದೆ. ಕಲ್ಯಾಣ ಚಾಲುಕ್ಯರ ಜಯಸಿಂಹ IIನೆಯ (ಕ್ರಿ. ಶ. ೧೦೧೮–೧೦೪೨) ಪತ್ನಿ ಸುಗ್ಗಲೆಯನ್ನು ವೀರಶೈವಮತಕ್ಕೆ ತಿರುಗಿಸಿದನೆಂಬ ಸಂದರ್ಭವಿದೆಯಷ್ಟೆ. ಚಾಲುಕ್ಯರ ಕಲ್ಯಾಣವು ಕೊಲ್ಲಾಪುರಕ್ಕೆ ಸಮೀಪವಾಗಿದೆ. ಕೊಲ್ಲಾಪುರ ಅಂದು ಕನ್ನಡನಾಡಿನಲ್ಲಿ ಇತ್ತೆಂಬುದು ಪ್ರಸಿದ್ಧವಾಗಿಯೇ ಇದೆ; ಶಿಲಾಹರರ ಬಹುಸಂಖ್ಯೆಯ ಕನ್ನಡಶಾಸನಗಳು ಕೊಲ್ಲಾಪುರದ ಪ್ರಾಂತದಲ್ಲಿ ದೊರೆತಿವೆ. ಜೇಡರ ದಾಸಿಮಯ್ಯನು ಆ ಪ್ರಾಂತದವನೇ ಎಂದು ಊಹಿಸಬಹುದು. ಪುಣೆ, ನಾಸಿಕ, ಮುಂತಾದ ಸ್ಥಳಗಳಿಗೆ ಹತ್ತಿರದಲ್ಲಿರುವ ಕೊಲ್ಲಾಪುರವೂ ಕಲ್ಯಾಣವೂ ಅಂದಿನ ದಿನಗಳಲ್ಲೂ ನೆಯ್ಗೆಯ ಕಸಬಿನ ಸ್ಥಳಗಳಾಗಿದ್ದಿರಬೇಕು. ದಾಸಿಮಯ್ಯನು ನೇಕಾರ ವೃತ್ತಿಯವನು ಎಂಬುದು 'ಜೇಡರ' ಎಂಬ ವಿಶೇಷಣಪದವೇ ಸೂಚಿಸುತ್ತಿದೆ.[೧೪] ಶಿಲಾ

೧೩ "In the Bombay Presidency many years of competition between machine-made and hand-woven cotton cloth have still left a very considerable home industry, the handloom being at work in almost every district. The output, is however, for the most part confined to Sāris and turbans. The hand workers employed in Cotton weaving are for the most part Hindu Koshtis, Sālis, Hatkars and Devangas...The districts of Poona, Nasik, Sholapur, Dharwar and Belgaum are noted for weaving..."

೧೪ ಜೇತ=ಜಾಡ(<ಜಾಳ=ಜಾಲ : ಈ ಸಂಸ್ಕೃತ ಶಬ್ದದ ಅರ್ಥ ಬಲೆ, ಬಲೆ ನೆಯ್ದುದ್ದು ತಾನೆ). ಕನ್ನಡದಲ್ಲಿ ಜೇಡ(ಜಾಡ) ಎಂಬ ಪದಕ್ಕೆ ಜೇಡಹುಳು (spider) ಹಾಗೂ ನೇಕಾರ ಎಂಬ ಎರಡು ಅರ್ಥಗಳೂ ಇವೆ ಕಿಟೆಲ್ಲರ ಕೋಶದಲ್ಲಿ ಜೇಡಪದಕ್ಕೆ ಕೊಟ್ಟಿರುವ ಅರ್ಥ : Jēḍa-Jāḍa A weaver (Mys) belonging to the lingayat Sect. (Cf Jādike, Jāḷige, Sāḷige, Sāle; SK. Jāla, Śāṭa, Śālika). (ಜೇಡರ ದಾಸಿಮಯ್ಯ ದೇವರ ದಾಸಿಮಯ್ಯ ಎಂದೂ ಕೆಲವೆಡೆ ಉಕ್ತನಾಗಿದ್ದಾನೆ. ಕವಿಚರಿತೆಕಾರರು 'ಜೇಡರ' ಪದವನ್ನೇ ಅಂಗೀಕರಿಸಿದ್ದಾರೆ.)

ಹಾರರು ಆಳುತ್ತಿದ್ದ ಕೊಲ್ಲಾಪುರದ ಸುತ್ತಮುತ್ತಣ ಪ್ರದೇಶಗಳಲ್ಲಿ ನೇಕಾರರು ಹೆಚ್ಚಿನ ಸಂಖ್ಯೆಯಲ್ಲಿದ್ದಿರಬೇಕು, ಮತ್ತು ಆ ಪ್ರದೇಶಗಳು ಅಂದಿನ ದಿನಗಳಲ್ಲೂ ನೇಕಾರರ ಕಸಬಿಗೆ ಪ್ರಖ್ಯಾತವಾಗಿದ್ದಿರಬೇಕು ಎಂದು ಊಹಿಸಲು ಅವಕಾಶವಿದೆ. ಅಲ್ಲದೆ ನೇಕಾರ ನನ್ನು ಸಾಲಿ, ಸಾಲಿಗ, ಸಾಲಿಯ, ಸಾಲೆ ಮತ್ತು ಸೇಲೆ (ಅಥವಾ *ಸೇಲ ಎಂದು ಬೇರೆ ಬೇರೆಯ ಹೆಸರುಗಳಿಂದ ಕರೆಯುತ್ತಿದ್ದ ರೂಢಿಯಿದ್ದಂತೆ ಕಾಣುತ್ತದೆ. ಇವುಗಳಲ್ಲಿ ಸಾಲಿ, ಸಾಲಿಗ ಇವು ಇಂದಿಗೂ ಉಳಿದುಬಂದಿವೆಯೆಂದು ತಿಳಿದುಬರುತ್ತದೆ.

ಈ ಶಬ್ದವ್ಯುತ್ಪತ್ತಿಯ ಆಧಾರದ ಮೇಲೆ, ಶಿಲಾಹಾರವಂಶದ ಮೂಲಪುರುಷನು ನೇಕಾರಪಂಗಡದವನಾಗಿರಬಹುದೆಂದೂ. 'ಸೆಲಾರ' (ಅಥವಾ ಸೇಲಾರ, ಸೇಲರ) ಎಂಬುದು ಅವನ ಮನೆತನದ ಹೆಸರಾಗಿದ್ದು ಆ ಹೆಸರಿನಿಂದಲೇ ಅವನು ಪ್ರಸಿದ್ಧಿಗೆ ಬಂದಿರಬಹುದೆಂದೂ ಸಾಧಾರವಾಗಿ ಊಹಿಸಬಹುದು (ಹೋಲಿಸಿ : ಈಗಿನ ಕಾಲ ದಲ್ಲೂ ಬಳಕೆಯಲ್ಲಿರುವ ಕುಲನಾಮಗಳು– ಕುಲಕರ್ಣಿ, ಪಾಠಕ, ನಾಡಿಗ, ಶಾಸ್ತ್ರಿ, ಜೋಷಿ, ಪಟೇಲ, ಪಾಟೀಲ ಇತ್ಯಾದಿ). ವಂಶಕ್ಕೆ ಘನತೆ ಗೌರವಗಳನ್ನು ಸಂಗ್ರಹಿಸುವ ಸಲುವಾಗಿ ಶಾಸನಲೇಖಕರು ಆ ಪದವನ್ನು ಸಂಸ್ಕೃತೀಕರಣಮಾಡಿ. ಅನ್ವರ್ಥಕ ವಾಗಿ ವಂಶಮೂಲದ ಕಥೆಯ ಸಂಗತಿಯನ್ನು ವಂಶಪ್ರಶಸ್ತಿಯಲ್ಲಿ ಜೋಡಿಸಿರಬೇಕು.

'ಸೆಲಾರ>ಶಿಲಾಹಾರ'— ಈ ಕ್ರಮದ ರೂಪನಿಷ್ಪತ್ತಿಗೆ ಎರಡು ಆಕ್ಷೇಪಗಳು ಏಳುವ ಸಾಧ್ಯತೆಯಿದೆ : ೧. ಶಾಸನದ ಶ್ಲೋಕದ ಆಧಾರದಿಂದ ಹೇಳುವುದಾದರೆ, ಶ್ಲೋಕದಲ್ಲಿ ಉಕ್ತನಾದ ಸೆಲಾರ(ಅಥವಾ ಶೀಲಾರ) ಯುದ್ಧವೀರನಾದ ಕ್ಷತ್ರಿಯನಾಗಿರಬೇಕೇ ಹೊರತು, ನೇಕಾರವೃತ್ತಿಯವನಾಗಿರಲಾರ.[೧೫] ೨. ಶಬ್ದವ್ಯುತ್ಪತ್ತಿಯಲ್ಲಿ ಕಂಡುಬರುವ ವರ್ಣವ್ಯತ್ಯಯ(mutation), ಎಂದರೆ— /ಎ/>/ಇ/ [ಸೆಲಾರ (>ಶಿಲಾರ)> ಶಿಲಾಹಾರ], ಉಚ್ಚ (ಮೇಲಿನ) ವಿವೃತಸ್ವರವಾದ /ಎ/ ನೀಚ(ಕೆಳಗಿನ)ಸಂವೃತ ಸ್ವರ ವಾದ /ಇ/ ಆಗಿ ಮಾರ್ಪಾಟುಹೊಂದುವುದು, ದ್ರಾವಿಡಭಾಷಾಶಾಸ್ತ್ರದ ಸ್ವರವ್ಯತ್ಯಯ ನಿಯಮದ ಪ್ರಕಾರ ಸಾಧ್ಯವಿಲ್ಲ.

---

೧೫ ವಾಸ್ತವವಾಗಿ, 'ಸೆಲಾರ' ಶಬ್ದದ ಅರ್ಥನಿಷ್ಕರ್ಷೆಯ ಸಂಬಂಧದಲ್ಲಿ ನನ್ನ ಅಭಿಪ್ರಾಯ ವನ್ನು ಅಪೇಕ್ಷಿಸಿ ಪಡೆದುಕೊಂಡ ಡಾ. ವಿ. ವಿ ಮಿರಾಶಿಯವರು ನನ್ನ ಈ ನಿಷ್ಪತ್ತಿಯನ್ನು ಒಪ್ಪಿಕೊಳ್ಳಲಿಲ್ಲ: "He could not originally have been a weaver" It seems the original meaning of the word is now obscure. ಎಂದು ನನಗೆ ಬರೆದ ಉತ್ತರದಲ್ಲಿ ತಿಳಿಸಿದರು. ನನ್ನ ಅರ್ಥ ವಿವರಣೆಯನ್ನು ಡಾ. ಜಿ. ಎಸ್. ದೀಕ್ಷಿತ್ ಅವರಿಗೆ ಬರೆದು ತಿಳಿಸಿ ಅವರ ಅಭಿಪ್ರಾಯವನ್ನು ಕೋರಲಾಗಿ ಅವರು ತಮ್ಮ ೩೦-೬-೧೯೭೬ ರ ಪತ್ರದಲ್ಲಿ ಹೀಗೆ ಬರೆದು ತಿಳಿಸಿದರು ; "We could make a conjecture that Selāra > Śilāhāra has originated from the word Sali (=Nēkars)."

ಮೊದಲನೆಯ ಆಕ್ಷೇಪಕ್ಕೆ ಹೀಗೆ ಸಮಾಧಾನ ಕೊಡಬಹುದು : ಒಬ್ಬ ನೇಕಾರವೃತ್ತಿಯವನು ತನ್ನ ಭುಜಬಲ ಸಾಮರ್ಥ್ಯದಿಂದ ಕ್ಷತ್ರಿಯನೆನ್ನಿಸಿಕೊಳ್ಳಲು ಅಡ್ಡಿಯೇನಿಲ್ಲ. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ" ಎಂದೂ ತಾನೆ ಗೀತೆಯ ಉಕ್ತಿ. ಪೂರ್ವೋಕ್ತ ಶ್ಲೋಕದ ಜಾಮದಗ್ನಿ (ಪರಶುರಾಮ) ಹುಟ್ಟಿನಿಂದ ಬ್ರಾಹ್ಮಣ. ಕದಂಬ ವಂಶದವರೂ ಬ್ರಾಹ್ಮಣರು. ಹಿಂದು ಸಮಾಜದ ವರ್ಣ–ಜಾತಿ ವ್ಯವಸ್ಥೆಯಲ್ಲಿ ಕೆಳವರ್ಗದ, ಹುಟ್ಟಿನಿಂದ ಕ್ಷತ್ರಿಯರಲ್ಲದ, ಶೂರರಾದ ವ್ಯಕ್ತಿಗಳು ಸಣ್ಣದೊಡ್ಡ ರಾಜ್ಯಗಳನ್ನು ಕಟ್ಟಿ, ಅರಸುಮನೆತನಗಳ ಮೂಲಪುರುಷರಾದ ನಿದರ್ಶನಗಳು ನಮ್ಮ ನಾಡಿನ ಇತಿಹಾಸದಲ್ಲಿ ಬೇಕಾದಷ್ಟಿವೆ.

ಇನ್ನು ಎರಡನೆಯ ಆಕ್ಷೇಪದ ಬಗೆಗೆ ನನ್ನ ಸಮಾಧಾನ ಹೀಗಿದೆ : ಪೂರ್ವದ ಹಳಗನ್ನಡದಲ್ಲೂ ಧ್ವನಿಶಾಸ್ತ್ರನಿಯಮಕ್ಕೆ (Phonetic law) ಅಪವಾದಗಳು ಎನ್ನಬಹುಬಹುದಾದ—ಎಂದರೆ, /ಇ/ >/ಎ/ನಿಯಮಕ್ಕೆ ಹೊರತಾದ /ಎ/ >/ಇ/ ಪ್ರಯೋಗಗಳು ಕಾಣದೊರೆಯುತ್ತವೆ. ಉದಾಹರಣೆಗಳು :

i ಪೂರ್ವದ ಹಳಗನ್ನಡ : ವಿತ್ತಿದಲ್ಲಿ ವೆಳೆಯಾದೆ ಕೆಡುಗೆ; ಎಱಿದು.
   ಹಳಗನ್ನಡ : ಕಿಡುಗೆ; ಇಱಿದು.[೧೬]
   (ಇಲ್ಲಿ ಕೆಡು >ಕಿಡು, ಎಱಿ >ಇಱಿ ಎಂದಾಗಿರುವುದನ್ನು ಗಮನಿಸಬೇಕು).

ii ತಮಿಳು–ಕನ್ನಡಗಳಲ್ಲಿ ಸಂವಾದಿಗಳಾದ ಶಬ್ದರೂಪಗಳು :
   ಕೆಡು–ಕಿಡು, ಎದಿರ್–ಇದಿರ್, ತೆಳಿವು–ತಿಳಿವು,
   ಶೆವಿ–ಕಿವಿ, ಎಲಿ–ಇಲಿ, ವೆದಿರ್–ಬಿದಿರ್,
   ವೆಯಿಲ್–ಬಿಸಿಲ್.[೧೭]
   (ಇಲ್ಲೆಲ್ಲ ತಮಿಳಿನ/ಎ/ ಕನ್ನಡದಲ್ಲಿ /ಇ/ ಆಗಿರುವುದನ್ನು ಗಮನಿಸಬೇಕು).

iii ಎಯ್ (ತ.) —ಎಸು/ಎಸೆ >ಇಸು (ಕ).
   ಎಯಿಲ್(ತ.)—ಎಸಿಲ್ >ಇಸಿಲ (ಕ).[೧೮]

ಮೇಲಿನ ಉದಾಹರಣೆಗಳನ್ನು ಗಮನಿಸಿ ಹೇಳುವುದಾದರೆ, 'ಶಿಲಾಹಾರ' ಶಬ್ದಸಂಬಂಧವಾದ ವ್ಯುತ್ಪತ್ತಿ ಸಾಧನೆಯಲ್ಲಿ /ಎ/ >/ಇ/ ವರ್ಣವ್ಯತ್ಯಯ ಅಸಾಧು ಎಂದು ಹೇಳಲಾಗುವುದಿಲ್ಲ. ಅತ್ಯಂತ ಹಳೆಯ ಶಾಸನದಲ್ಲಿ ಕಂಡುಬರುವ 'ಶೀಲಾರ' ಹಾಗೂ

---

೧೬ ಕನ್ನಡ ಕೈಪಿಡಿ, ೧೯೨೭ ರ ಮುದ್ರಣ; ಪು ೩೨೮.

೧೭ ಆರ್. ನರಸಿಂಹಾಚಾರ್ : History of Kannada Language, ೧೯೩೩; ಪು. ೧೧೨, ೧೧೪.

೧೮ ಡಿ. ಎಲ್. ನರಸಿಂಹಾಚಾರ್ : 'ತೇದಿಯುಳ್ಳ ಪ್ರಾಚೀನತಮ ಕನ್ನಡಪದ' (ಮೂಲಲೇಖನ: The oldest datable Kannada word', ಇದರ ಕನ್ನಡ ಅನುವಾದ); ಸಾಧನೆ. ಸಂ. ೧–೩, ಜುಲೈ–ಸಪ್ಟಂಬರ್ ೧೯೭೨; ಪು. ೧೨೯–೧೩೪.

'ಸೆಲಾರ' ಈ ಎರಡೂ ರೂಪಗಳು ಒಟ್ಟುಗೂಡಿ ಸಂಸ್ಕೃತೀಕರಣವಾದ 'ಶಿಲಾಹಾರ' ಶಬ್ದರೂಪದ ಸಿದ್ಧಿಗೆ ಸಹಾಯಕವಾಗಿವೆ ಎಂದು ಹೇಳಬಹುದು. ಈ ಶಬ್ದರೂಪ ಸಿದ್ಧಿಯ ವ್ಯುತ್ಪತ್ತಿವಿಧಾನವನ್ನು ಹೀಗೆ ತೋರಿಸಬಹುದು :

೧ * ೨ *೩ ೪ ೫
ಸೆಲಾರ > ಸಿಲಾರ > ಶಿಲಾರ > ಶೀಲಾರ > ಶಿಲಾಹಾರ.
('ಸೆಲಾರ'ದ ವ್ಯುತ್ಪತ್ತಿಯನ್ನು ಮೊದಲೇ ವಿಚಾರಮಾಡಿದೆ.)

೧. ೪, ೫ನೆಯ ಶಬ್ದರೂಪಗಳು ಶಾಸನಗಳಲ್ಲಿ ಕಂಡುಬಂದಿರುವಂತಹವು. ಸೆಲಾರ > ಶಿಲಾಹಾರ–ಈ ಮಾರ್ಪಾಟು ಈ ವರೆಗಿನ ವಿವರಣೆಯ ಬೆಳಕಿನಲ್ಲಿ ಎಷ್ಟು ಸಹಜವಾಗಿ ನಡೆದಿದೆ ಎಂಬುದು ಗೋಚರವಾಗುತ್ತದೆ.

ಬೇರೆ ಇನ್ನಾವ ರೀತಿಯಲ್ಲಿ 'ಸೆಲಾರ'ಕ್ಕೂ 'ಶಿಲಾಹಾರ'ಕ್ಕೂ ನಂಟಿನ ಗಂಟು ಹಾಕಬಹುದು ಎಂಬುದನ್ನು ವಿದ್ವಾಂಸರು ವಿಚಾರಮಾಡಲಡ್ಡಿಯಿಲ್ಲ. ಈ ವಿಚಾರದಲ್ಲಿ ನಮ್ಮದೇ ಕೊನೆಯಮಾತು ಎಂದೇನೂ ಇಲ್ಲ.

■ ■

# ಬಿಜ್ಜಲನ ಕಾಲವಿಚಾರ : ಒಂದು ಟಿಪ್ಪಣಿ

ಬಾ. ರಾ. ಗೋಪಾಲ್

ಈ ವಿಷಯವನ್ನು ಕುರಿತು ಈ ಹಿಂದೆ ಡಾ. ಆರ್. ಸಿ. ಹಿರೇಮಠ, ಡಾ. ಪಿ. ಬಿ. ದೇಸಾಯಿ ಮುಂತಾದವರೆಲ್ಲರೂ ಚರ್ಚೆಮಾಡಿದ್ದಾರೆ. ಇತ್ತೀಚೆಗೆ ಡಾ. ಬಾಡಾಲ ರಾಮಯ್ಯನವರು 'ಬಸವೇಶ್ವರ ವಚನಾಲು–ಸಮಗ್ರಸಮೀಕ್ಷ' ಎಂಬ ತಮ್ಮ ತೆಲುಗು ಗ್ರಂಥದ ಸಮೀಕ್ಷಾವಿಭಾಗದಲ್ಲಿ ಈ ವಿಷಯವನ್ನು ಕುರಿತು ಮತ್ತೊಮ್ಮೆ ದೀರ್ಘವಾದ ಚರ್ಚೆಗಳನ್ನು ಮುಂದೂಡಿ ಹೊಸದೆನಿಸುವ ಅಂಶಗಳನ್ನು ನಿರೂಪಿಸಿದ್ದಾರೆ. ಪ್ರಸ್ತುತ ಲೇಖನದಲ್ಲಿ ಅವರು ನೀಡಿರುವ ಸೂಚನೆಗಳನ್ನು ಕುರಿತು ಕೆಲವು ವಿಷಯಗಳನ್ನು ಹೇಳಲಾಗಿದೆ. ಅದರಲ್ಲಿಯೂ ಬಿಜ್ಜಳನ ಜೀವನಕಾಲವನ್ನು ಕುರಿತಾದ ಅವರ ಕೆಲವು ಊಹೆಗಳನ್ನು ಪರಿಶೀಲಿಸಲಾಗಿದೆ.

೧

ಡಾ. ದೇಸಾಯಿಯವರು ತಮ್ಮ 'Basavēśvara and His Times' ಎಂಬ ಗ್ರಂಥದಲ್ಲಿ ಬಿಜ್ಜಲ, ಬಸವರ ಜೀವನಕ್ಕೆ ಸಂಬಂಧಿಸಿದ ವಿವರಗಳನ್ನು ಹೀಗೆ ತೋರಿಸಿದ್ದಾರೆ :

| ಬಿಜ್ಜಲ | ಬಸವೇಶ್ವರ |
|---|---|
| ಜನನ ಕ್ರಿ. ಶ. ೧೧೦೫ | ಜನನ ಸು. ಕ್ರಿ. ಶ. ೧೧೦೫ |
| ಮಹಾಮಂಡಲೇಶ್ವರನಾದುದು ೧೧೩೦ ಅಥವಾ ಸ್ವಲ್ಪ ಮುಂಚೆ | ಬಿಜ್ಜಲನ ಭಂಡಾರಿಯಾದುದು ೧೧೩೨-೪೧ ೧೧೪೧-೫೩ |
| ಅರಸನಾದುದು ೧೧೬೨ | ಕಲ್ಯಾಣಕ್ಕೆ ಹೋದುದು ೧೧೫೩ |
| ಸಿಂಹಾಸನ ತ್ಯಜಿಸಿದುದು ೧೧೬೭ | ಮತಪ್ರಸಾರ ೧೧೫೩–೬೭ |
| ಮರಣ ೨೪–೩–೧೧೬೮ | ಮರಣ ಡಿಸೆಂಬರ್ ೧೧೬೭ |

ಈ ವರ್ಷಗಳಲ್ಲಿ ಒಂದೆರಡು ವರ್ಷಗಳ ಅಂತರವಿರಬಹುದೆಂದೂ ಅವರು ಅಭಿಪ್ರಾಯ ಪಟ್ಟಿದ್ದಾರೆ. ಈಗ ಡಾ. ರಾಮಯ್ಯನವರು ಬಿಜ್ಜಳನು ಸುಮಾರು ಕ್ರಿ. ಶ. ೧೧೧೦ ರಲ್ಲಿ ಜನಿಸಿದನೆಂದೂ ೩೦-೪-೧೧೯೬ ರಲ್ಲಿ ಗತಿಸಿದನೆಂದೂ ಹೇಳಿ ಬಸವೇಶ್ವರನ ಜನನ ೨೧-೧-೧೧೪೦, ಅಧಿಕಾರ ಪದವಿ ಪಡೆದುದು ೧೧೫೭, ಕಲ್ಯಾಣಕ್ಕೆ ಹೋದುದು ೧೧೬೦, ಪದವಿ ತ್ಯಜಿಸಿದುದು ೧೧೬೮, ಕಲ್ಯಾಣದಿಂದ ನಿರ್ಗಮನ ೧೨-೩-೧೧೯೬ ಮತ್ತು ಶಿವೈಕ್ಯನಾದುದು ೨-೭-೧೧೯೬ ಎಂದಿದ್ದಾರೆ.

ದೇಸಾಯರ ಲೆಕ್ಕದ ಪ್ರಕಾರ ಬಿಜ್ಜಲ-ಬಸವರು ಜನಿಸಿದುದು. ಬಾಳಿದುದು ಒಂದೇ ಕಾಲದಲ್ಲಿ. ಬಿಜ್ಜಲ ಸಾಯುವಾಗ ಆತನಿಗೆ ೬೩ ವರ್ಷ: ಬಸವೇಶ್ವರ ಶಿವೈಕ್ಯನಾದುದು ೬೨ ನೆಯ ವಯಸ್ಸಿನಲ್ಲಿ. ರಾಮಯ್ಯನವರ ವಾದದಂತೆ ಬಸವನು ಬಿಜ್ಜಳನಿಗಿಂತ ಸುಮಾರು ೩೦ ವರ್ಷಗಳಷ್ಟು ಕಿರಿಯ. ಬಸವೇಶ್ವರ ೫೬ ವರ್ಷ ಬಾಳಿದರೆ ಬಿಜ್ಜಲ ಬಾಳಿದುದು ೮೬ ವರ್ಷ.

ಉಪಲಬ್ಧ ಆಧಾರಗಳಿಂದ ಇದನ್ನು ಕುರಿತು ಖಚಿತವಾಗಿ ಏನನ್ನೂ ಹೇಳಲಾಗದು. ಆದರೆ ರಾಮಯ್ಯನವರು ಮುಂದೂಡಿರುವ ವಾದಗಳು ಎಷ್ಟರಮಟ್ಟಿಗೆ ಸ್ವೀಕಾರಾರ್ಹ ಎಂಬುದನ್ನು ಮಾತ್ರ ಪ್ರಸ್ತುತ ಲೇಖನದಲ್ಲಿ ಪರಿಶೀಲಿಸಲಾಗಿದೆ.

೨

ನಾನೊಮ್ಮೆ ಬೇಂಟೆಯ ಹೋದರೆ ಭಸಿತಕ್ಕಾಹುತಿಯಸಿಕ್ಕಿಹೆನೆಂದು
ಸಾಸಿರದೇಳುನೂಱುವರುಷ ಒಬ್ಬ ರಾಜನ ಕೊಂದೆನು
ಅವನ ಹೆಂಡತಿ ಐವತ್ತೆರಡು ಕಣ್ಣುಳ್ಳವಳು
ಅವಳು ತನ್ನ ಹೂ ಮುಡಿಯ ಬಿಟ್ಟು ಅತ್ತಾಳು
ಅವಳ ಬಾಯಲಿ ಅಜ ಬಿದ್ದ, ಕಂಗಳಲಿ ಧೂಮಕೇತು ಬಿದ್ದ
ಕೂಡಲಸಂಗಮದೇವರ ದೇವತ್ವ ಕೆಟ್ಟಿತ್ತು

ಇದೊಂದು ಬಸವೇಶ್ವರರ ವಚನ. ಇದನ್ನು ಅರ್ಥೈಸಿದ ರಾಮಯ್ಯನವರು[1] ಇದರಿಂದ ಬಸವೇಶ್ವರರು ೧೧೮೫ ರ ವರೆಗೂ ಜೀವಿಸಿದ್ದರೇದು ಅರ್ಥವಾಗುತ್ತದೆಂದಿದ್ದಾರೆ. ಸಾಸಿರದ ಏಳುನೂರುವರುಷವೆಂಬುದಕ್ಕೆ ೧೧೦೭ ವರ್ಷ ಎಂಬ ಅರ್ಥ ನೀಡಿದ್ದಾರೆ. ಇದಕ್ಕೆ ಪೋಷಕವಾಗಿ ಇವರು ಬಾದಾಮಿಯಲ್ಲಿನ ಮೊದಲನೆಯ ಪುಲಕೇಶಿಯ ಶಾಸನದಲ್ಲಿ ಬರುವ 'ಚತುಶ್ಶತೇಷು ಪಂಚಷಷ್ಟಿಯುತೇಷು' ಎಂಬ ಪದಗುಚ್ಛವನ್ನು ತೋರಿಸಿದ್ದಾರೆ. ಈ ವಚನದ ಅರ್ಥ ಸ್ಪಷ್ಟವಾಗಿಲ್ಲ. ಆದರೆ ರಾಮಯ್ಯನವರು ಇದರಲ್ಲಿ ಐತಿಹಾಸಿಕ ವಿಷಯಗಳಿಗೆ ಸಂಬಂಧಿಸಿದ ಗೂಢಾರ್ಥಗಳಿವೆ ಎಂದಿದ್ದಾರೆ. ಬೇಟೆಗೆ ಹೋದಾತ ಶಿವ. ಇವನು ಕೊಂದ ರಾಜನೆಂದರೆ ಬಸವನ

---

೧ ಡಾ. ಬಾಡಾಲ ರಾಮಯ್ಯ : 'ಬಸವೇಶ್ವರ ವಚನಾಲು-ಸಮಗ್ರಸಮೀಕ್ಷ' (ತೆಲುಗು) ಪು. ೧೭೬-೭೭.

ಸಮಕಾಲೀನನಾದ ಬಿಜ್ಜಲನ ರಾಜ್ಯದ ಅಂತ್ಯ. ಇದು ೧೧೦೭ನೆಯ ವರ್ಷದಲ್ಲಿ. ರಾಜನ ಹೆಂಡತಿಗೆ ಐವತ್ತೆರಡು ಕಣ್ಣುಗಳಿದ್ದುವು. ೫೨ ಎಂಬುದು ಕನ್ನಡದ ಐವತ್ತೆರಡು ಅಕ್ಷರಗಳು. ಕಲಚುರಿ ಸಾಮ್ರಾಜ್ಯಲಕ್ಷ್ಮಿಗೆ ಇವೇ– ವಚನ(ಶರಣ)ಸಾಹಿತ್ಯವೇ ಕಣ್ಣುಗಳು. ಇಂತಹ ಸಾಮ್ರಾಜ್ಯಲಕ್ಷ್ಮಿ ಬಿಜ್ಜಲನ ರಾಜ್ಯ ಅಸ್ತಂಗತವಾದಾಗ (ಬಿಜ್ಜಲ ಸತ್ತಾಗ ಎಂಬರ್ಥವಲ್ಲ !) ಅನಾಥೆಯಾದಳು. ಬಾಯಲ್ಲಿ ಅಜ ಎಂದರೆ ಬ್ರಹ್ಮ-ಸೃಷ್ಟಿಕರ್ತ-ಬಿದ್ದ, ಕಂಗಳಲಿ ಧೂಮಕೇತು ಬಿದ್ದ ಎಂಬ ಮಾತಿಗೆ ಬಿಜ್ಜಲನ ಮಕ್ಕಳೆಲ್ಲಾ ಆಕೆಯ ಬಾಯಲ್ಲಿ ಬಿದ್ದರು, ಆಕೆಗೆ ಬಲಿಯಾದರು. ಎಂದರೆ ಸಾಮ್ರಾಜ್ಯವೇ ಹಾಳಾಯಿತು. ಅಲ್ಲದೆ ವಚನಸಾಹಿತ್ಯ ಸಹ ಸ್ತಂಭಿತವಾಯಿತು. ಆದ್ದರಿಂದ ಕ್ರಿ. ಶ. ೧೧೮೫ ರ ವೇಳೆಗೆ ಬಿಜ್ಜಲನ ರಾಜ್ಯ (ಬಿಜ್ಜಲನಲ್ಲ !) ಮತ್ತು ಆತನ ಸಂತತಿ ನಾಶವಾಯಿತು. ಇದು ಸ್ಥೂಲವಾಗಿ ರಾಮಯ್ಯನವರು ಈ ವಚನಕ್ಕೆ ನೀಡಿರುವ ಅರ್ಥ. ಇಲ್ಲಿ ಗಮನಿಸಬೇಕಾದ ಒಂದು ಅಂಶವೆಂದರೆ ವಚನದಲ್ಲಿ ಒಬ್ಬ ರಾಜನ ಕೊಂದೆನು ಎಂಬ ಮಾತಿಗೆ ಬಿಜ್ಜಲನ ರಾಜ್ಯಲಕ್ಷ್ಮಿಯನ್ನು ಕೊನೆಗಾಣಿಸಿದನು ಎಂಬ ಅರ್ಥವನ್ನು ರಾಮಯ್ಯನವರು ನೀಡಿರುವರೆಂಬುದು.[೨]

೩

ಈ ವಾದಕ್ಕೆ ಪೋಷಕವಾಗಿ ಬಸವನ ಸಮಕಾಲೀನನಾದ ನುಲಿಯ ಚಂದಯ್ಯನ ಶಾಸನವೊಂದನ್ನು ಅವರು ಮುಂದಿಟ್ಟಿದ್ದಾರೆ. ಚನ್ನಪ್ಪ ಎರೆಸೀಮೆಯವರು ರಚಿಸಿದ 'ಬಸವನ ಸಮಕಾಲೀನರು' ಎಂಬ ಗ್ರಂಥದಲ್ಲಿ ಈ ಶಾಸನವನ್ನು ಪ್ರಾಚೀನರು ಯಥಾ ತಥಾ ಓಲೆಗರಿಗಳ ಮೇಲೆ ಬರೆದಿಟ್ಟುಕೊಂಡಿದ್ದರೆಂದೂ ಅದರಲ್ಲಿ ಈಗ ಕೆಲಭಾಗ ತ್ರುಟಿತವಾಗಿ ಉಳಿದಿರುವ ಭಾಗದಲ್ಲಿ ಧೂಮಕೇತಂ, ವಿಶ್ವಾವಸು, ದುರ್ಮುಖಿಸಂವತ್ಸರ ಗಳು, ಚಂದೇಶ್ವರ ಇತ್ಯಾದಿ ಪದಗಳಿದೆ ಎಂದೂ ಹೇಳಿದ್ದಾರೆ. ಇದನ್ನು ಆಧರಿಸಿ ಧೂಮಕೇತು ವಿಶ್ವಾವಸುಸಂವತ್ಸರದಲ್ಲಿ ಕಾಣಿಸಿಕೊಂಡಿದೆ, ಇದು ರಾಜರಿಗೆ ಅನಿಷ್ಟ ಸೂಚಕ. ಅಂದಿನ ರಾಜ ಬಿಜ್ಜಲ, ವಿಶ್ವಾವಸುಸಂವತ್ಸರ ಕ್ರಿ. ಶ. ೧೧೮೫ ಕ್ಕೆ ಸರಿ ಹೊಂದುತ್ತದೆ; ಮೇಲೆ ಹೇಳಿದ ಬಸವನ ವಚನದಲ್ಲಿಯೂ ಆಕೆಯ ಕಣ್ಣಿನಲ್ಲಿ ಧೂಮಕೇತು ಬಿದ್ದಿತೆಂದು ಹೇಳಿದೆ; ಇವುಗಳೆಲ್ಲ ತಮ್ಮ ವಾದಕ್ಕೆ ಪೋಷಕವಾಗಿದೆ ಎಂಬುದು ರಾಮಯ್ಯನವರ ಒಂದು ಭಾವನೆ.

೪

ದೇಸಾಯಿಯರು ಕಾಲಜ್ಞಾನ, ನಂತರದ ಶತಮಾನಗಳ ಸಾಹಿತ್ಯಕೃತಿಗಳಲ್ಲಿ ಉಕ್ತವಾದ ಚಾರಿತ್ರಿಕ ಅಂಶಗಳು, ಅನ್ಯಆಧಾರಗಳಿಂದ ಸಾಬೀತಾದ ಹೊರತು ವಿಶ್ವಸನೀಯವಲ್ಲ ಎಂದಿದ್ದಾರೆ. ಕಾಲಜ್ಞಾನಗಳಲ್ಲಿ ಬಿಜ್ಜಲನು ರಾಕ್ಷಸಸಂವತ್ಸರದಲ್ಲಿ ಮರಣಹೊಂದಿದ ನೆಂದೂ ಹೇಳಿದೆ. ವಾಸ್ತವವಾಗಿ ಬಿಜ್ಜಲ ಮರಣಹೊಂದಿದ್ದು ಸರ್ವಧಾರಿ ಸಂವತ್ಸರ

೨ ರಾಮಯ್ಯನವರ ಪುಸ್ತಕದ ಪು. ೧೭೮.

ದಲ್ಲಿ. ರಾಕ್ಷಸ ಎಂಬ ಮಾತಿಗೆ ಕೆಟ್ಟ, ಭಯಾನಕ ಎಂಬ ಅರ್ಥ ನೀಡಿ ಬಿಜ್ಜಳನ ಮರಣಾನಂತರ ಉಂಟಾದ ಭೀಕರ ಪರಿಸ್ಥಿತಿಗಳಿಗೆ ಕನ್ನಡಿ ಹಿಡಿದಂತೆ 'ರಾಕ್ಷಸ' ಎಂಬ ಪದ ಪ್ರಯೋಗವಾಗಿದೆ. ಅದು ಕಾಲಕ್ರಮೇಣ ಸಂವತ್ಸರದ ಹೆಸರೆಂಬ ಕಲ್ಪನೆ ಉಂಟಾಗಿದೆ. ಇದು ದೇಸಾಯರ ಅಭಿಪ್ರಾಯ.[೩]

ಇದನ್ನು ರಾಮಯ್ಯನವರು ಒಪ್ಪಿಲ್ಲ. ಕರ್ನಾಟಕದ, ಆಂಧ್ರದ ಕವಿಗಳು ಕಾಲಜ್ಞಾನದಲ್ಲಿ ಸ್ವಲ್ಪ ಮಟ್ಟಿಗೆ ವಿಶ್ವಾಸ ತಳೆದಿದ್ದರು. ಕಾಲಾನಂತರ ಕಾಲಜ್ಞಾನದಲ್ಲಿ ಬದಲಾವಣೆಗಳು, ಸೇರ್ಪಡೆಗಳು ಉಂಟಾಗಿರುವುದು ಸಹಜವಾದರೂ ಅವು ಸತ್ಯದೂರವಲ್ಲ. ಪಾಮರರು ತಿಥಿ, ವಾರ, ನಕ್ಷತ್ರಗಳನ್ನು ಸೂಚಿಸುವಾಗ ಅವುಗಳಲ್ಲಿ ಪರುಪೇರುಗಳಾಗಿರಬಹುದು. ಅದನ್ನೇ ಕಾಲಜ್ಞಾನ ಅಳವಡಿಸಿಕೊಂಡಿರಬಹುದು. ಬಸವನ ಜೀವನದ ಕೆಲವು ಘಟನೆಗಳು ಚಾರಿತ್ರಿಕ ಘಟನೆಗಳೊಡನೆ ಸಮನ್ವಯ ಹೊಂದಿದ್ದರೂ ಕಾಲಜ್ಞಾನದಲ್ಲಿ ಹೇಳಲಾದ ವಿಷಯಗಳಲ್ಲಿದ್ದಿರಬಹುದಾದ ಸತ್ಯವನ್ನು ಸೂಕ್ಷ್ಮವಾಗಿ ಪರಿಗ್ರಹಿಸಬಹುದು.

ಈ ವಾದವನ್ನು ಅನುಸರಿಸಿಯೇ ಅವರು ಬಸವೇಶ್ವರನು ಶಿವೈಕ್ಯನಾದ ವರ್ಷವನ್ನು ೧೧೯೬ ಎಂದು ನಿರ್ಧರಿಸಿದ್ದಾರೆ. ಅದು ಹೀಗೆ : ಪ್ರಭುದೇವರ ಕಾಲಜ್ಞಾನದಲ್ಲಿ

> ರಾಕ್ಷಸಸಂವತ್ಸರದಲ್ಲಿ ನಿಂದೀತು ನೀನಾಗ ಅದೇ
> ಕಡೆಯೆಂದು ನಿರೂಪಿಸಲು ಆನಂದಿಸಿ ಅಕ್ಕರಂ ಕೇಳುತ್ತಿರಲು
> ಅಂದಿಗೆ ಆಷಾಢ ಶುದ್ಧ ಪಾಡ್ಯಮಿ ಸೋಮವಾರದ ರಾತ್ರಿಯಲ್ಲಿ...
> ನಮ್ಮ ಗುಹೇಶ್ವರಲಿಂಗದಲ್ಲಿ ಐಕ್ಯವಾದೆವು.

ಎಂದಿದೆ. ರಾಕ್ಷಸಸಂವತ್ಸರ ಮುಗಿಯಿತು. ಆಷಾಢ ಶುದ್ಧ ಪಾಡ್ಯಮಿ ಸೋಮವಾರ ಎಂಬುದು ರಾಕ್ಷಸಸಂವತ್ಸರದ ನಂತರ ಬರುವ ನಳಸಂವತ್ಸರದ ಆಷಾಢ ಎಂಬುದು ಸ್ಪಷ್ಟ. ಆದರೆ ಪಂಚಾಂಗ ರೀತ್ಯಾ ಆ ತಿಥಿ ಸೋಮವಾರದಂದಾಗಿರಲಿಲ್ಲ. ಇದಾದ ನಂತರದ ಒಂದು ತಿಂಗಳಲ್ಲಿ ಶ್ರಾವಣ ಶುದ್ಧ ಪಾಡ್ಯಮಿ ಮಂಗಳವಾರ ಬಸವನ ಕಡೆಯ ದಿನ ಎಂದು ಆ ಕಾಲಜ್ಞಾನದಲ್ಲಿ ಹೇಳಿದೆ. ಈ ತಿಥಿಯೂ ಮಂಗಳವಾರಕ್ಕೆ ಸರಿಹೋಗದು. ಆದರೆ ಆಷಾಢ ಶುದ್ಧ ಪಂಚಮಿ ಸೋಮವಾರವಾಗಿತ್ತು (೩–೬–೧೧೯೬). ಶ್ರಾವಣ ಶುದ್ಧ ಪಂಚಮಿ ಮಂಗಳವಾರವಾಗಿತ್ತು (೨–೭–೧೧೯೬). ಈ ತಿದ್ದುಪಾಡು-ಪಾಡ್ಯಮಿ ಎಂದಿರುವ ಬದಲು ಪಂಚಮಿ-ಮಾಡಿಕೊಂಡರೆ ಕಾಲಜ್ಞಾನದಲ್ಲಿರುವ ವಿವರಗಳು ಸರಿಹೊಂದುತ್ತವೆ.

ರುದ್ರಮುನಿಯ ಕಾಲಜ್ಞಾನದಲ್ಲಿ ಬಸವೇಶ್ವರರು ರಾಕ್ಷಸನಾಮಸಂವತ್ಸರ ಮಾರ್ಗಶಿರ ಶುದ್ಧ ಪಾಡ್ಯಮಿ ಮಂಗಳವಾರ ಲಿಂಗೈಕ್ಯರಾದರೆಂದಿದೆ. ಇದು ೪–೧೧–೧೧೯೫ ಕ್ಕೆ ಸರಿಹೊಂದುತ್ತದೆಯಾದರೂ ಆ ದಿನ ಮಂಗಳವಾರವಲ್ಲ; ಅದೇ ವರ್ಷದ ಫಾಲ್ಗುಣ ಶುದ್ಧ ಪೌರ್ಣಮಿ ಮಂಗಳವಾರ ರೋಹಿಣಿನಕ್ಷತ್ರದಂದು ಬಿಜ್ಜಳನ ಹತ್ಯೆ ಜರುಗಿತೆಂದೂ

---

೩ P. B. Desai: *Basavēśvara and His Times*, p. 181.

ರುದ್ರಮುನಿಯ ಕಾಲಜ್ಞಾನದಲ್ಲಿದೆ. ಆ ದಿನ ೧೬-೨-೧೧೯೬. ಆದರೆ ಇತರ ವಿವರಗಳು – ಮಂಗಳವಾರ, ರೋಹಿಣಿನಕ್ಷತ್ರ ಸರಿ ಹೊಂದುವುದಿಲ್ಲ. ಅಂದು ಗುರುವಾರ, ಅಶ್ವಿನೀನಕ್ಷತ್ರವಾಗಿತ್ತು. ರಾಮಯ್ಯನವರ ತೀರ್ಮಾನದಂತೆ ಬಸವೇಶ್ವರರು ಲಿಂಗೈಕ್ಯರಾದುದು ೨-೭-೧೧೯೬ ರಂದು. ಅದಕ್ಕೆ ಮೊದಲು ೩೦-೪-೧೧೯೬ ರಂದು ಬಿಜ್ಜಲನ ಹತ್ಯೆ ಜರುಗಿತು. ಆದ್ದರಿಂದ ಈ ಮೇಲಿನ ವಿವರಗಳು ಸರಿಯಲ್ಲ. ಅವುಗಳನ್ನು ಒಪ್ಪಲಾಗದು. ಆದರೆ ಇದೇ ಕೃತಿಯ ಇನ್ನೊಂದು ಪ್ರತಿಯಲ್ಲಿ ನಳನಾಮಸಂವತ್ಸರ ವೈಶಾಖ ಬಹುಳ ಬಿದಿಗೆ ಮಂಗಳವಾರ ರೋಹಿಣೀನಕ್ಷತ್ರದಂದು ಬಿಜ್ಜಲನ ಹತ್ಯೆ ಜರುಗಿತೆಂದು ಹೇಳಿದೆ. ಈ ತಿಥಿ ೧೬-೪-೧೧೯೬ ಕ್ಕೆ ಸರಿ ಹೊಂದುತ್ತದೆ. ಆದರೆ ಮಂಗಳವಾರ ರೋಹಿಣೀನಕ್ಷತ್ರ ಎಂಬುದು ಎರಡು ಪ್ರತಿಗಳಲ್ಲೂ ಇದ್ದು, ಈ ಎರಡು ವಿವರಗಳೂ ಸರಿಹೊಂದವು. ಬಸವರಾಜದೇವರ ಕಾಲಜ್ಞಾನದಲ್ಲಿ ಜಗದೇವಾದಿಗಳು ದೀವಟಿಗೆಗಳನ್ನು ಹಿಡಿದುಕೊಂಡು ಹೋಗಿ ಬಿಜ್ಜಲನನ್ನು ಕೊಂದರೆಂದಿದೆ. ಬಿಜ್ಜಲ ಆ ವೇಳೆಗೆ ಅರಸೊತ್ತಿಗೆಯನ್ನು ಕಳೆದುಕೊಂಡಿದ್ದ. ಅವನಿಗೆ ದೀವಟಿಗೆ ಮರ್ಯಾದೆ ಎಂಥದು ? ಆದರೆ ಬಿಜ್ಜಲ ಮುದುಕನಾಗಿದ್ದು ಕಣ್ಣುಗಳು ದೃಷ್ಟಿಹೀನವಾಗಿದ್ದವು. ರಾತ್ರಿಯ ಹೊತ್ತು ದಾರಿ ತೋರಿಸಲು ದೀವಟಿಗೆ ಅವಶ್ಯಕ. ಜಗದೇವಾದಿಗಳು ಅದಕ್ಕೆಂತಲೂ ದೀವಟಿಗೆ ತೋರಲಿಲ್ಲ. ಆದರೆ ಆ ದಿನ ಅಮಾವಾಸ್ಯೆಯ ಕತ್ತಲಿದ್ದಿರಬೇಕು. ಹತ್ಯೆಗಾಗಿ ಬಂದ ಅವರು ಅಮಾವಾಸ್ಯೆಯ ಕತ್ತಲನ್ನೇ ಪ್ರಶಸ್ತವೆಂದು ಪರಿಗಣಿಸಿರಬೇಕು. ನಳಸಂವತ್ಸರದ ವೈಶಾಖ ಬಹುಳ ಅಮಾವಾಸ್ಯೆ ಮಂಗಳವಾರದಂದೇ ಬಂದಿತ್ತು. ಅದು ರೋಹಿಣೀನಕ್ಷತ್ರದ ದಿನವೂ ಹೌದು. ಈ ವಿವರಗಳು ೩೦-೪-೧೧೯೬ ಕ್ಕೆ ಸರಿ ಹೊಂದುತ್ತವೆ. ಆದ್ದರಿಂದ ಅಂದೇ ಬಿಜ್ಜಲನ ಕೊಲೆಯಾಗಿರಬೇಕು. ಬಿಜ್ಜಲನ ಹತ್ಯೆ ಪರ್ವದಿನದಂದು ನಡೆಯಿತೆಂಬುದು ಪ್ರಜೆಗಳಲ್ಲಿ ಪರಂಪರೆಯಾಗಿ ಬೆಳೆದುಬಂದ ಮಾತು. ಪರ್ವದಿನ ಎನ್ನಲು ಪೌರ್ಣಮಿ ಎಂದರು. ಇದನ್ನೇ ಕಾಲಜ್ಞಾನ ಅನುಸರಿಸಿತು. ಆದರೆ ಅಮಾವಾಸ್ಯೆ ಸಹ ಪರ್ವದಿನವೇ. ಆದ್ದರಿಂದ ೩೦-೪-೧೧೯೬ ಕ್ಕೆ ಸರಿಹೊಂದುವ ನಳಸಂವತ್ಸರ ವೈಶಾಖ, ಅಮಾವಾಸ್ಯೆ ಮಂಗಳವಾರ ರೋಹಿಣೀನಕ್ಷತ್ರದಂದು ರಾತ್ರಿ ಬಿಜ್ಜಲ ಕೊಲ್ಲಲ್ಪಟ್ಟವನೆಂದು ನಿಶ್ಚಯಿಸಬಹುದು.[೪]

೫

ಈ ಮೇಲಿನ ಮೂರು ಅಂಶಗಳನ್ನೂ ಪರಿಶೀಲಿಸೋಣ. ಬಸವೇಶ್ವರನ ವಚನಕ್ಕೆ ರಾಮಯ್ಯನವರು ಕೊಟ್ಟಿರುವ ಅರ್ಥವೇ ವಿಪರೀತ ! ಒಬ್ಬ ರಾಜನ ಕೊಂದೆನು ಎಂದಾಗ ಅದು ಬಿಜ್ಜಲನಿಗೆ ಅನ್ವಯವಾಗುವಂತಿದ್ದರೆ ಕೊಲ್ಲಲ್ಪಟ್ಟವ ಬಿಜ್ಜಲನೆಂದಾಗುವುದಿಲ್ಲವೇ ? ಸಾಮ್ರಾಜ್ಯಲಕ್ಷ್ಮಿ ಎಂಬ ವಿಶಿಷ್ಟಾರ್ಥದ ಅವಶ್ಯಕತೆ ಏನು ? ರಾಜನ ಕೊಂದೆನು ಅವನ ಹೆಂಡತಿ... ಅತ್ತಾಳು ಎಂದಾಗ ಬಿಜ್ಜಲನೇ ಕೊಲ್ಲಲ್ಪಟ್ಟವ

೪ ರಾಮಯ್ಯನವರ ಪುಸ್ತಕದ ಪು. ೩೪೨

ನೆಂಬುದು ಸ್ಪಷ್ಟವಲ್ಲವೇ ? ಸಾಸಿರದೇಳುನೂಱುವರುಷ ವೆಂಬುದನ್ನು ೧೧೦೭ ವರ್ಷ ಎಂದು ಅರ್ಥೈಸಿ ಅದರಿಂದ ಸಂಸ್ಕೃತದ ಸಂಪ್ರದಾಯವನ್ನು ಬಸವೇಶ್ವರ ಕನ್ನಡದಲ್ಲಿ ತಂದನೆಂಬುದನ್ನು ಒಪ್ಪುವುದಾದರೂ ಹೇಗೆ ? ಬಾದಾಮಿಯ ಶಾಸನವನ್ನು ಉದಹರಿಸುವುದಂತೂ ವ್ಯರ್ಥವಾದ ವಾದ. ಅದು ಸಂಸ್ಕೃತ ಶಾಸನ. ಅದರಲ್ಲಿ ಉಪಯೋಗಿಸಲಾದ 'ಯುತೇಷು' 'ಕೂಡಿದ' ಎಂಬ ಮಾತಿನಿಂದ ಆ ಸಂಖ್ಯೆಗಳನ್ನು ಕೂಡಬೇಕು (೪೦೦+೫+೬೦) ಎಂಬುದನ್ನು ಅಲ್ಲಿಯೇ ಸೂಚಿಸಿದೆಯಲ್ಲ. ಅಲ್ಲದೆ ಇದು ಶಕಕಾಲದ ವರ್ಷವೆಂದಾದರೂ ಅಲ್ಲೆಲ್ಲಿ ಹೇಳಿದೆ? ಸುಲಿಯ ಚಂದಯ್ಯನ ಶಾಸನದಲ್ಲಿ ವಿಶ್ವಾವಸುಸಂವತ್ಸರದ ಪ್ರಸ್ತಾಪವಿದೆ ಎಂದು ಹೇಳಿ, ಅದು ಕ್ರಿ. ಶ. ೧೧೮೫ ಕ್ಕೆ ಸರಿ ಹೊಂದುತ್ತದೆನ್ನುವ ಮಾತೂ ರಾಮಯ್ಯನವರ ಅದ್ಭುತವಾದ ವಾದಸರಣಿಗೆ ಸಾಕ್ಷಿ. ೧೧೮೫ ರಷ್ಟು ಪುರಾತನವಾದ ಓಲೆಗರಿಯೇ ಅದು ? ಎಲ್ಲಿದೆ ? ನಮ್ಮ ಸಮಕಾಲೀನರಾದ ಚನ್ನಪ್ಪ ಎರೆಸೀಮೆಯವರು ಉಲ್ಲೇಖಿಸಿದ್ದಾರೆಂದಾಕ್ಷಣಕ್ಕೆ ಅದು ಎಷ್ಟರಮಟ್ಟಿಗೆ ಸ್ವೀಕಾರಾರ್ಹ ಎಂಬುದನ್ನು ಪರೀಕ್ಷಿಸಬೇಡವೇ ! ಅದರಲ್ಲಿ ಮ್ಲೇಚ್ಛರಿಂದುಂಟಾದ ತೊಂದರೆಯ ಪ್ರಸ್ತಾಪವೂ ಇದೆಯಲ್ಲ. ೧೧೮೫ ರ ವೇಳೆಗೆ ಕರ್ನಾಟಕಕ್ಕೆ ಬಂದ ಮ್ಲೇಚ್ಛರು ಯಾರು ? ಷಷ್ಟದಶವತ್ಸರ, ತ್ರಯೋದಶ ಎಂಬ ಮಾತುಗಳೂ ಅಲ್ಲಿ ಬಂದಿವೆಯಲ್ಲ ! ರಾಮಯ್ಯನವರು ಕಾಲಜ್ಞಾನದಲ್ಲಿ ತಮಗೆ ಬೇಕಾದುದನ್ನು ಮಾತ್ರ ಉಪಯೋಗಿಸಿಕೊಂಡು ಉಳಿದ ವಿಷಯಗಳನ್ನು ಕಡೆಗಣಿಸಿದ್ದಾರೆಂದಾಗುವುದಿಲ್ಲವೇ ?

ದೇಸಾಯರು ರಾಕ್ಷಸ ಎಂಬ ಮಾತಿಗೆ ನೀಡಿರುವ ಅರ್ಥವನ್ನು ರಾಮಯ್ಯ ತಳ್ಳಿಹಾಕಿದ್ದಾರೆ. ಆದರೆ ಸ್ವತಃ ರಾಮಯ್ಯನವರೇ ರಾಕ್ಷಸಸಂವತ್ಸರವನ್ನು ಒಪ್ಪಿಲ್ಲ. ಅದು ತಪ್ಪೆಂದು ಹೇಳಿ ನಳಸಂವತ್ಸರ ಸರಿ ಎಂದಿದ್ದಾರೆ. ಕಾಲಜ್ಞಾನದಲ್ಲಿರುವ ತೇದಿಯ ವಿವರಗಳನ್ನೂ ತಮಗೆ ಬೇಕಾದಂತೆ ತಿದ್ದಿದ್ದಾರೆ. ಬಿಜ್ಜಳನನ್ನು ಕೊಲ್ಲುವಾಗ ಅಮಾವಾಸ್ಯೆಯ ಕತ್ತಲಿತ್ತು ಎಂತಲೇ ದೀವಟಿಗೆಯನ್ನು ಹಿಡಿದರು ಎಂದಿರುವುದು, ಶ್ರಾವಣ ಶುದ್ಧ ಪಾಡ್ಯಮಿಯನ್ನು ಆಷಾಢ ಶುದ್ಧ ಪಂಚಮಿ ಎಂದು ತಿದ್ದಿಕೊಳ್ಳುವುದು, ಕಾಲಜ್ಞಾನದ ಒಂದು ಪ್ರತಿಯಲ್ಲಿರುವ ಫಾಲ್ಗುಣ ಶುದ್ಧ ಪೌರ್ಣಮಿ ಸರಿಯಲ್ಲವೆಂದು ಹೇಳಿ ಇನ್ನೊಂದು ಪ್ರತಿಯಲ್ಲಿದೆ ಎನ್ನಲಾದ ವೈಶಾಖ ಬಹುಳ ಅಮಾವಾಸ್ಯೆ ಎಂದು ತಿದ್ದುಪಾಡು ಮಾಡಿಕೊಳ್ಳುವುದೂ ಸಂಶೋಧನಮಾರ್ಗಗಳಲ್ಲ.

೬

ಇವುಗಳನ್ನು ನೋಡಿದಾಗ ಒಂದು ಅಂಶ ಸ್ಪಷ್ಟವಾಗುತ್ತದೆ. ಬಿಜ್ಜಲ ೩೦-೪-೧೧೬೭ ರಲ್ಲಿ ಮರಣಹೊಂದಿದನೆಂಬ ಪೂರ್ವನಿಶ್ಚಿತ ನಿರ್ಣಯಕ್ಕೆ, ಸ್ವೀಕಾರಾರ್ಹವಾಗಿರಲಿ ಇಲ್ಲ ಇಲ್ಲದಿರಲಿ, ಲಭ್ಯವಿರುವ ಇತರ ಆಧಾರಗಳನ್ನು ಮನಸೇಚ್ಛೆಯಾಗಿ ತಿದ್ದಿ ಅವು ತಮ್ಮ ನಿರ್ಣಯಕ್ಕೆ ಪೋಷಕವೆಂದು ಹೇಳಲು ಸಾಕಷ್ಟು ಜೊಂಬರಲಾಗ ಹಾಕಿದ್ದಾರೆ. ಕೆಲವು ಸಾಹಿತ್ಯಕೃತಿಗಳಲ್ಲಿ ಮಲ್ಲಿಕಾರ್ಜುನ ಪಂಡಿತಾರಾಧ್ಯರಿಗೆ ಬಸವೇಶ್ವರರು ಲಿಂಗೈಕ್ಯರಾದ ಒಂದು ವಾರದ ನಂತರ ಆ ವಿಷಯ ತಿಳಿಯಿತೆಂಬುದೂ ಬಿಜ್ಜಲನ ಮರಣಾನಂತರ

ಬಸವೇಶ್ವರ ಲಿಂಗೈಕ್ಯರಾದರೆಂಬುದೂ ರಾಮಯ್ಯನವರು ಸತ್ಯವೆಂದು ನಂಬಿರುವ ವಿಷಯಗಳು. ಪಂಡಿತಾರಾಧ್ಯರು ಕ್ರಿ. ಶ. ೧೧೮೦ ರ ವರೆಗೂ ಬದುಕಿದ್ದರಾಗಿ ಅವರ ಮರಣಕ್ಕೆ ಒಂದೆರಡು ವರ್ಷಗಳ ಹಿಂದೆ ಬಸವೇಶ್ವರರು ನಿಧನಹೊಂದಿದರೆಂದಮೇಲೆ ಅದಕ್ಕೆ ಒಂದೆರಡು ತಿಂಗಳುಗಳ ಹಿಂದೆ ಬಿಜ್ಜಲ ಬದುಕಿರಬೇಕು. ಕಾಲಜ್ಞಾನ ಮುಂತಾದವುಗಳ ಆಧಾರದ ಮೇಲೆ ಬಿಜ್ಜಲ ೧೧೯೬ ರ ವರೆಗೂ ಜೀವಿಸಿರುವಂತೆ ಮಾಡಿದ್ದಾರೆ ರಾಮಯ್ಯನವರು. ಎಂತಲೇ ರಾಜ್ಯಕಳೆದುಕೊಂಡ, ಸಂತತಿಯವರನ್ನೆಲ್ಲರನ್ನೂ ಕಳೆದುಕೊಂಡ ಬಿಜ್ಜಲ, ರಾಮಯ್ಯನವರಿಗಾಗಿ, ಅನಾಥನಾಗಿ ೧೧೯೬ ರ ವರೆಗೂ ಬದುಕಬೇಕಾಗಿ ಬಂದಿದೆ. ಎಲ್ಲ ವಿಧದಲ್ಲೂ ಭ್ರಷ್ಟನಾದ ಮುದುಕ ಎಷ್ಟರ ಮಟ್ಟಿಗೆ ಸಾಮಾಜಿಕ–ರಾಜಕೀಯ ವಿಪ್ಲವಗಳಿಗೆ ಕಾರಣನಾಗಿದ್ದಾನು ? ಅದು ಸಾಧ್ಯವೇ ? ಎಂಬ ಯಾವ ಅಂಶಗಳನ್ನೂ ರಾಮಯ್ಯನವರು ಪರಿಶೀಲಿಸದೆ ಇರುವುದು ಆಶ್ಚರ್ಯಕರ.

೭

ಕೊನೆಯದಾಗಿ ಇನ್ನೊಂದು ಅಂಶ. ಬಿಜ್ಜಲನು ಕ್ರಿ. ಶ. ೧೧೭೩ ರ ನಂತರವೂ ಜೀವಿಸಿದ್ದನೆನ್ನಲು ಶಾಸನಾಧಾರಗಳಿವೆ ಎಂದಿರುವ ರಾಮಯ್ಯನವರು ಹಿಪ್ಪರಗಿ ಶಾಸನವೊಂದನ್ನು ಉಲ್ಲೇಖಿಸಿದ್ದಾರೆ. ಈ ಶಾಸನದ ಕಾಲ ಕ್ರಿ. ಶ. ೧೧೯೨. ಸೇಉಣ ಭಿಲ್ಲಮನ ಶಾಸನದಲ್ಲಿ ಚಾಲುಕ್ಯರಲ್ಲಿ ಇಮ್ಮಡಿ ತೈಲಪನಿಂದಾರಂಭಿಸಿ ಅನೇಕ ರಾಳ್ವು ನಂತರ ಬಿಜ್ಜಲನು ಆತನ ವಂಶಸ್ಥರು ಆಳಿದ ಬಳಿಕ ಭಿಲ್ಲಮ ಆಳಿದನೆಂದು ಹೇಳಿದೆ. ಆ ಶಾಸನಪದ್ಯ ಇಂತಿದೆ :

ಅಂತವರನೇಕರಂ ಗೆಲು
ದಂತಿರೆ ಕಳಚುರಿಯ ಬಿಜ್ಜಭೂಪನ ಭುಜದಿಂ
ಸಂತತಿ ರಾಜ್ಯದೊಳಿರೆ ತದ
ನಂತರ ಯದುಕುಲಲಲಾಮ ಸೇಉಣ ಭೀಮಂ ॥

ಇಲ್ಲಿ 'ಬಿಜ್ಜಭೂಪನ ಭುಜದಿಂ ಸಂತತಿ ರಾಜ್ಯದೊಳಿರೆ' ಎಂದಾಗ ಆತನ ಭುಜಬಲದಿಂದ ಕಲಚುರಿಗಳು ಆಳಿದರು ಎಂದು ಅರ್ಥವಾದೀತೆ ಹೊರತು ರಾಮಯ್ಯನವರು ಅರ್ಥೈಸುವಂತೆ ಆತನು ಜೀವಿಸಿದ್ದು ಆತನ ಬಾಹುಬಲ(ಭುಜಬಲ) ದಿಂದಲೇ ಕಲಚುರಿಗಳು ಆಳಿದರು ಎಂಬ ಅರ್ಥಬರುವುದಿಲ್ಲ. 'ತದನಂತರ' ಎಂದಾಗ, ೧೧೯೨ ರ ವೇಳೆಗೆ ಕಲಚುರಿಗಳು ರಾಜ್ಯಭ್ರಷ್ಟರಾಗಿದ್ದರೆಂಬುದು ಸ್ಪಷ್ಟ. ಬಿಜ್ಜಲ ಬದುಕಿದ್ದನೆನ್ನುವುದಾದರೂ ಹೇಗೆ ?

ರಾಮಯ್ಯನವರ ವಾದಗಳು ಕೇವಲ ಊಹೆಗಳು. ಇವು ತಮ್ಮ ನಿಲುವನ್ನು ಸಮರ್ಥಿಸಿಕೊಳ್ಳಲು ಅವರು ಮಾಡಿರುವ ವ್ಯರ್ಥಪ್ರಯತ್ನಗಳು. ಇತರ ಇನ್ನೂ ಕೆಲವು ವಾದಗಳನ್ನು ಹೀಗೆಯೇ ಪರಿಶೀಲಿಸಬಹುದಾದರೂ ಪ್ರಸ್ತುತ ಇಷ್ಟು ಸಾಕು.

■ ■

# ಭಟ್ಟಾಕಲಂಕದೇವನ ಬಿಳಿಗೆಯ ಶಾಸನ

□ □ □ □ □ □ □ □ □ □ □ □ □ □ □ □ □ □

ಆರ್. ಎನ್. ಗುರವ

□ □ □ □ □ □ □ □ □ □ □ □ □ □ □ □ □ □

ಕನ್ನಡಭಾಷೆಯ ಪ್ರಸಿದ್ಧ ವ್ಯಾಕರಣಗ್ರಂಥವಾದ ಶಬ್ದಾನುಶಾಸನವನ್ನು ರಚಿಸಿದ ಭಟ್ಟಾಕಲಂಕನಂತಹ ವೈಯ್ಯಾಕರಣಿ ಈ ಶಾಸನವನ್ನು ಬರೆಸಿರುವುದರಿಂದ ಅದು ಅತ್ಯಂತ ಮಹತ್ವಪೂರ್ಣವಾಗಿದೆ. ಭಟ್ಟಾಕಲಂಕನ ಶಿಷ್ಯರೂ ಹಾಗೂ ಆಶ್ರಯ ದಾತರೂ ಆದ ಬಿಳಿಗೆಯ ರಂಗರಾಜ ಮಹಾರಾಜ ಮತ್ತು ಆತನ ಮಗ ಘಂಟೇಂದ್ರ ಮಹಾರಾಜರ ವಂಶಾವಳಿ ಮತ್ತು ಭಟ್ಟಾಕಲಂಕನ ಗುರುಪರಂಪರೆ ಇವು ಈ ಶಾಸನ ದಲ್ಲಿ ಸುದೀರ್ಘವಾಗಿ ಬಂದಿವೆ. ದಿವಂಗತ ಆರ್. ನರಸಿಂಹಾಚಾರರು ಕರ್ನಾಟಕ ಕವಿಚರಿತೆಯ ಪ್ರಥಮ ಸಂಪುಟದಲ್ಲಿ (ಪುಟ ೨೮೫–೮೬), ಅಗ್ಗಳನ ಚಂದ್ರಪ್ರಭ ಪುರಾಣದ ಸಂದರ್ಭದಲ್ಲಿ ಈ ಶಾಸನದ ಉಲ್ಲೇಖಮಾಡಿ, ಅದರಲ್ಲಿಯ ೧೮ ನೆಯ ಪದ್ಯವನ್ನು ಉದ್ಧರಿಸಿದ್ದಾರೆ. ಮತ್ತು ಈ ಶಾಸನದ ಪಾಠವೊಂದು ಮದರಾಸ್ ಪ್ರಾಚ್ಯಕೋಶಾಲಯದಲ್ಲಿ ಇದೆ ಎಂದು ಹೇಳಿದ್ದಾರೆ. ಆದರೆ, ಈ ಪಾಠವು ಜನ ಸಾಮಾನ್ಯರಿಗೆ ಲಭ್ಯವಿಲ್ಲ. ಶಾಸನ ಇನ್ನೂ ಅಪ್ರಕಟಿತವಿದೆ.

ಬಿಳಿಗೆ ಗ್ರಾಮವು ಕಾರವಾರ ಜಿಲ್ಲೆಯ ಸಿದ್ದಾಪೂರ ತಾಲೂಕಿನಲ್ಲಿ ಸಿದ್ದಾಪುರದಿಂದ ಪಶ್ಚಿಮಕ್ಕೆ ಸುಮಾರು ಎಂಟುಮೈಲು ಅಂತರದಲ್ಲಿದೆ. ಪ್ರಸ್ತುತ ಶಾಸನವನ್ನು ಆ ಗ್ರಾಮದ ತ್ರಿಕೂಟ ಬಸದಿಯ ಚಂದ್ರಶಾಲೆಯಲ್ಲಿ ಗೋಡೆಗೆ ಆನಿಸಿ ಇಡಲಾಗಿದೆ. ರಂಗರಾಜ ಮಹಾರಾಜ ಮತ್ತು ಘಂಟಪ್ಪೊಡೆಯರು ಕಟ್ಟಿಸಿದ ರತ್ನತ್ರಯ ಚೈತ್ಯಾ ಲಯವು ಇದೇ. ನಾಲ್ವತ್ತಾರನೆಯ ಸಾಲಿನ ವರೆಗೆ ಶಾಸನವು ಒಳ್ಳೆಯ ಸ್ಥಿತಿಯಲ್ಲಿದೆ. ಮುಂದಿನ ಭಾಗದಲ್ಲಿ ಶಾಸನದ ಮೇಲೆ ಕೆಲವು ಕಡೆ ಚುಕ್ಕೆಗಳಾಗಿವೆ. ೭೦ ರಿಂದ ೮೦ ರ ವರೆಗಿನ ಸಾಲುಗಳ ಕೊನೆಯ ಭಾಗದಲ್ಲಿ ೮–೧೦ ಅಕ್ಷರಗಳು ಬಹಳಷ್ಟು ಕೆಟ್ಟಿವೆ. ಆದರೂ, ಶಾಸನವನ್ನು ಸಂಪೂರ್ಣವಾಗಿ ಓದಲು ಸಾಧ್ಯವಾಗಿದೆ. ಶಾಸನದ

ಭಾಷೆ ಕನ್ನಡ. ಆದರೆ, ಕೆಲವು ಸಂಸ್ಕೃತಪದ್ಯಗಳೂ ಬರುತ್ತವೆ. ಲಿಪಿಯು ಚೆನ್ನಾಗಿದೆ. ಅದು ಹದಿನಾರನೆಯ ಶತಮಾನದ ಲಿಪಿಗೆ ಹೋಲುತ್ತದೆ. ಅಕ್ಷರಗಳು ಆಳವಾಗಿ ಕಂಡರಿಸಲಾಗಿವೆ.

**ಶಾಸನದ ವಿಷಯ :** ಜಂಬೂದ್ವೀಪದಲ್ಲಿ ಮೇರುಪರ್ವತ. ಮೇರುಪರ್ವತದ ದಕ್ಷಿಣ ದಿಕ್ಕಿಗೆ ಆರ್ಯಾಖಂಡ(ಭರತಕ್ಷೇತ್ರ). ಆರ್ಯಾಖಂಡದಲ್ಲಿ ವನ್ಯದೇಶ(ಬನವಾಸಿ ನಾಡು). ವನ್ಯದೇಶದಲ್ಲಿ ಚಂದ್ರಗುತ್ತಿ ಬೆಟ್ಟ. ಆ ಬೆಟ್ಟದ ಪರಿಸರದಲ್ಲಿ ಐಸೂರ ಎಂಬ ಊರು.

ಈ ಐಸೂರ ಎಂಬ ಪೊಳಲಲ್ಲಿ ಅನೇಕ ಅರಸರು ಆಗಿಹೋದರು. ಆ ಅರಸರಲ್ಲಿ ಮುಂಡಣ್ಣೊಡೆಯನೆಂಬ ಒಬ್ಬ ಮಹಾರಾಜ. ಆತನಿಗೆ ಕಲ್ಲಪ್ಪೊಡೆಯ, ಬೋಳಪ್ಪೊಡೆಯ ಹಾಗೂ ಅಮ್ಮಣ್ಣೊಡೆಯ ಎಂಬ ಮೂವರು ತನಯರು. ಕಲ್ಲಪ್ಪೊಡೆಯನು ತನ್ನ ಮಾತೃಭೂಮಿಯಾದ ಐಸೂರಲ್ಲಿ ಪಾರ್ಶ್ವತೀರ್ಥಂಕರ ಬಸದಿಯನ್ನು ಕಟ್ಟಿಸಿ ಆ ಬಸದಿಗೆ ಜಿಡ್ಡಿಯಹಳ್ಳಿ ಎಂಬ ಗ್ರಾಮದಲ್ಲಿ ಭೂಮಿಯನ್ನು ದಾನಮಾಡಿಕೊಟ್ಟನು. ಮತ್ತು ಇಡುವಣಿಯ ಪಾರ್ಶ್ವತೀರ್ಥಂಕರರ ಪೂಜೋತ್ಸವಕ್ಕೆ ಹೊರಗುಪ್ಪೆ ಹೆಬ್ಬಯಲ ಕಾಡೊಳಗೆ ಭೂಮಿಯನ್ನು ಬಿಟ್ಟನು.

ಕಲ್ಲಪ್ಪೊಡೆಯನಿಗೆ ಮುಂಡಣ್ಣಭೂಪಾಲ ಮತ್ತು ನರಸಿಂಹಭೂಪಾಲರೆಂಬ ಇಬ್ಬರು ಮಕ್ಕಳು. ಮುಂಡಣ್ಣಭೂಪಾಲನಿಗೆ ಭೈರವೇಂದ್ರ ಮತ್ತು ಕಲ್ಲಭೂಪಾಲರೆಂಬ ಇಬ್ಬರು ಕುಮಾರರು. ನರಸಿಂಹಭೂಪಾಲನಿಗೆ ಘಂಟಣ್ಣೊಡೆಯ ಮತ್ತು ಮುಂಡಣ್ಣೊಡೆಯರೆಂಬ ಇಬ್ಬರು ಪುತ್ರರು. ಘಂಟಣ್ಣೊಡೆಯನಿಗೆ ಅಮ್ಮಣ್ಣೊಡೆಯನೆಂಬ ಮತ್ತೊಂದು ಹೆಸರು. ಈ ಘಂಟಣ್ಣೊಡೆಯನು ತನ್ನ ರಾಜ್ಯದಲ್ಲಿ ಸೋಮನದಿಯ ದಂಡೆಯ ಮೇಲೆ ಬಿಳಿಗೆ ಎಂಬ ಪಟ್ಟಣವನ್ನು ಕಟ್ಟಿ ಅದರಲ್ಲಿ ಪಾರ್ಶ್ವತೀರ್ಥಂಕರಬಸದಿಯನ್ನು ನಿರ್ಮಿಸಿದನು. ಆ ದೇವರ ಪೂಜಾರ್ಥವಾಗಿ ನೀರಹಳ್ಳಿ, ಹೊರಗದ್ದೆ ಮತ್ತು ಹೋಂಕುಳಿ ಎಂಬ ಗ್ರಾಮಗಳಲ್ಲಿ ಭೂಮಿಯನ್ನು ದಾನಮಾಡಿದನು.

ಭೈರವೇಂದ್ರನಿಗೆ ಅಭಿನವ ಭೈರವೇಂದ್ರನೆಂಬ ಕುಮಾರನಿದ್ದನು. ಆತನಿಗೆ ಹಿರಿಯಪ್ಪೊಡೆಯ ಎಂದು ನಾಮಾಂಕಿತವಿದ್ದಿತು. ಆತನು ತನ್ನ ಅರಮನೆಯಲ್ಲಿ ಎರಡು ಅಂತಸ್ತಿನ ಪಾರ್ಶ್ವತೀರ್ಥಂಕರಬಸದಿಯನ್ನು ಕಟ್ಟಿಸಿ, ಹೊಕ್ಕುಳಿ ಮತ್ತು ಇಟ್ಟಗೆ ಎಂಬ ಗ್ರಾಮಗಳಲ್ಲಿ ಭೂಮಿಯನ್ನು ದಾನಮಾಡಿದನು. ಆತನ ಪಟ್ಟದ ಅರಸಿ ಮಲ್ಲಿದೇವಿ. ಅವಳ ಹೆಸರಿನಲ್ಲಿ ಮಾಣಿಕ್ಯತೀರ್ಥಂಕರಬಸದಿಯನ್ನು ಕಟ್ಟಿಸಿ ದೇವಕಾರ್ಯಕ್ಕಾಗಿ ಇಟ್ಟಗೆ ಎಂಬ ಗ್ರಾಮವನ್ನು ಬಿಟ್ಟುಕೊಟ್ಟನು. ಮತ್ತು ತಾಳಗುಪ್ಪೆಯ ಪಂಚಬಸದಿಯ ಜೀರ್ಣೋದ್ಧಾರವನ್ನು ಮಾಡಿ ಒಂದು ಭೂಮಿಯನ್ನು ದಾನವಾಗಿ ಕೊಟ್ಟನು. ಹಿರಿಯಪ್ಪೊಡೆಯನ ಮಗನು ಲಕ್ಷ್ಮಣಭೂಪಾಲ. ಆತನು ಆದೀಶ್ವರಬಸದಿಯನ್ನು ಕಟ್ಟಿಸಿ ನಾವಿಲಗಾರು, ಹೊನ್ನೆಯ ಬೀಡಾರ, ಹಿತ್ತಲಮಕ್ಕಿ ಮತ್ತು ಅಂದುಲ ಗ್ರಾಮಗಳಲ್ಲಿ ಭೂಮಿಯನ್ನು ದಾನಮಾಡಿದನು.

ಘಂಟಣ್ಣೊಡೆಯರ ಪುತ್ರ ತಿಮ್ಮರಸೊಡೆಯ. ಈತನು ತ್ರಿಕೂಟಮಂಡಿತವಾದ ರತ್ನತ್ರಯಜಿನಾಲಯವನ್ನು ಕಟ್ಟಿಸಿ ದೇವರಿಗೆ ಕೋಡಿಗದ್ದೆಯನ್ನು ಮತ್ತು ಹೆಂಕೊಪ್ಪ ಗ್ರಾಮದಲ್ಲಿ ಭೂಮಿಯೊಂದನ್ನು ಕೊಟ್ಟನು. ಈತನ ಹಿರಿಯ ಅಕ್ಕ ತಿಮ್ಮಾಂಬಿಕೆ. ಅವಳ ಹೆಸರಿನಲ್ಲಿ ಶಾಂತೀಶ್ವರಬಸದಿಯನ್ನು ಕಟ್ಟಿಸಿ ಎರಡು ಭೂಮಿಗಳನ್ನು ದಾನ ಮಾಡಿದನು. ತಿಮ್ಮರಸೊಡೆಯನ ತಮ್ಮ ನರಸಿಂಹಭೂಪಾಲ. ಈತನು ತನ್ನ ಹಿರಿಯರು ಕಟ್ಟಿಸಿದ ಸಕಲ ಚೈತ್ಯಾಲಯಗಳ ಜೀರ್ಣೋದ್ಧಾರವನ್ನು ಮಾಡಿದನು.

ಈ ನರಸಿಂಹಭೂಪಾಲನ ಕುಮಾರ ವೀರೇಂದ್ರ. ಈತನು ಹಿರಿಯಬಸದಿಯ ಪಾರ್ಶ್ವತೀರ್ಥಂಕರರ ಷೋಡಶಭಾವನಾಪೂಜೋತ್ಸವಕ್ಕೆ ಭೂಮಿಯನ್ನು ಬಿಟ್ಟು ಕೊಟ್ಟನು. ತನ್ನ ತಂಗಿ ತಿಮ್ಮಾಂಬಿಕೆಯು ಕಟ್ಟಿಸಿದ ಚಂದ್ರಪ್ರಭತೀರ್ಥಂಕರಬಸದಿಗಾಗಿ ಬಳುಗುಳಿ, ಕಾರವಳ್ಳಿ ಹಾಗೂ ಹುಬ್ಬಲಸಿನಮಾನಿ ಗ್ರಾಮಗಳಲ್ಲಿ ಭೂಮಿಗಳನ್ನು ಬಿಟ್ಟನು. ಮತ್ತು ಅಭಿನವ ಭೈರವೇಂದ್ರನು ನಿತ್ಯಪೂಜಾರ್ಥವಾಗಿ ಮಾಡಿಸಿದ ಪಾರ್ಶ್ವತೀರ್ಥಂಕರರ ಬೆಳ್ಳಿಯಮೂರ್ತಿಯನ್ನು ಬಿದಿರೆಗ್ರಾಮದ ತ್ರಿಭುವನತಿಲಕ ಎಂಬ ಬಸದಿಯಲ್ಲಿ ಒಯ್ದಿಟ್ಟು ಆ ಮೂರ್ತಿಗಳ ನಿತ್ಯಪೂಜಾರ್ಥವಾಗಿ ಕುಡುಗನಬಯಲ ಎಂಬ ಗ್ರಾಮವನ್ನು ಕೊಟ್ಟನು.

ವೀರೇಂದ್ರನ ಪುತ್ರ ರಂಗರಾಜ ಮಹಾರಾಜ. ಶಾಸನವು ಈತನ ಅನೇಕ ಬಿರುದು ಹಾಗೂ ಗುಣಗಳನ್ನು ವಿಸ್ತಾರವಾಗಿ ವರ್ಣಿಸುತ್ತದೆ. ಈತನಿಗೆ ರಂಗೇಂದ್ರ ಎಂದೂ ಹೆಸರು. ಈತನು ಬಿಳಿಗೆಯಲ್ಲಿ ಹೊಸದಾಗಿ ಒಂದು ರತ್ನತ್ರಯಚೈತ್ಯಾಲಯವನ್ನು ಕಟ್ಟಿಸಿದನು. ರಂಗರಾಜನ ಮಗನಾದ ಘಂಟೇಂದ್ರ ಮಹಾರಾಜನು ಈ ಚೈತ್ಯಾಲಯಕ್ಕೆ ರಂಗಮಂಟಪ, ಚಂದ್ರಶಾಲೆ, ಮುನಿವಾಸ, ಪ್ರಾಕಾರ ಮೊದಲಾದ ಕೆಲಸಗಳನ್ನು ಗೆಯ್ಯಿಸಿ ಮಹೋತ್ಸವದಿಂದ ನೇಮೀಶ್ವರ, ಪಾರ್ಶ್ವನಾಥ ಹಾಗೂ ವರ್ಧಮಾನ ತೀರ್ಥಂಕರರ ಪ್ರತಿಷ್ಠೆಯನ್ನು ಮಾಡಿಸಿದನು. ಮತ್ತು ದೇವರ ಪೂಜೆಪುನಸ್ಕಾರಕ್ಕೆ ಸೋವಿನಕೊಪ್ಪ, ಹಾದರಿಮಾನಿ, ಮಳಿಗೆಯಕೆಯಿ, ಕೊರತಾರಿ, ನೇರಿಲಮಾನಿ, ಚಟ್ಟನಹಳ್ಳಿ, ಗೊರಟಿನಹಳ್ಳಿ, ಬಲುಗಣಿ ಮತ್ತು ಒಂದಾನೆ ಎಂಬ ಒಂಬತ್ತು ಗ್ರಾಮಗಳನ್ನು ದಾನಮಾಡಿದನು. ಪ್ರಸ್ತುತ ಶಾಸನವು ಇದೇ ಬಸದಿಯಲ್ಲಿ ಇದೆ.

ಘಂಟೇಂದ್ರನ ಅರಸಿ ರಾಮಾದೇವಿ. ಇವಳು ಗಂಧಕುಟಿಯ ಶಾಂತೀಶ್ವರಬಸದಿಯನ್ನು ಕಟ್ಟಿಸಿದಳು. ಅದಕ್ಕೆ ಘಂಟೇಂದ್ರನು ಮಾಗಡಬಯಲಸ್ಥಳದಲ್ಲಿ ಭೂಮಿಯೊಂದನ್ನು ಕೊಟ್ಟನು. ಮತ್ತು ತನ್ನ ಅನ್ವಯಪರಂಪರೆಯ ಗುರುಗಳಾದ ಅಕಲಂಕದೇವರಿಗೆ ತಮ್ಮ ತಂದೆ ರಂಗಪ್ಪರಾಜೊಡೆಯರು ಕೊಟ್ಟ ಕಬ್ಬಗಾಹ ಮತ್ತು ಗೋಣಪತ್ತಿ ಗ್ರಾಮಗಳಲ್ಲಿಯ ಕ್ಷೇತ್ರಗಳಿಗೆ ಚತುಸ್ಸೀಮೆಗಳಲ್ಲಿ ಕಲ್ಲುಗಳನ್ನು ನಡಿಸಿಕೊಟ್ಟನು.

ಹಾಗೆಯೆ, ತನ್ನ ಪರಮಗುರುಗಳಾದ ಭಟ್ಟಾಕಲಂಕದೇವರಿಗೆ ತಾನು ಕೊಟ್ಟ ಸೆಟ್ಟಿವಳ್ಳಿ ಗ್ರಾಮದಲ್ಲಿಯ ಕ್ಷೇತ್ರಕ್ಕೆ ಮತ್ತು ಭಟ್ಟಾಕಲಂಕದೇವರಿಗೆ ಶಾಸ್ತ್ರೋಪದೇಶವನ್ನು ಗೆಯ್ದ ವಿಜಯಮುನೀಶ್ವರರ್ಗೆ ಕೊಟ್ಟ ಅದೇ ಗ್ರಾಮದಲ್ಲಿಯ ಕ್ಷೇತ್ರಕ್ಕೆ ಚತುಸ್ಸೀಮೆ ಗಳಲ್ಲಿ ಕಲ್ಲುಗಳನ್ನು ನಡಿಸಿಕೊಟ್ಟನು. ಪದ್ಯ ೮ ಮತ್ತು ೯ರಲ್ಲಿ ಘಂಟೇಂದ್ರನ ಬಿರುದು ಹಾಗೂ ಗುಣಗಳ ವರ್ಣನೆ ಬರುತ್ತದೆ.

ತರುವಾಯ, ಶಾಸನವು ಘಂಟೇಂದ್ರ ಮಹಾರಾಜನ ಗುರುಗಳಾದ ಭಟ್ಟಾಕಲಂಕದೇವನ ಗುರುಪರಂಪರೆಯನ್ನು ಕೊಡುತ್ತದೆ. ಅದೆಂತೆನೆ : ಅಂತ್ಯಜಿನೇಶನೆನಿಸಿದ ವರ್ಧಮಾನ ತೀರ್ಥಂಕರರು ಮುಕ್ತಿಗೆ ಸಂದಬಳಿಕ ಅನುಬದ್ಧಕೇವಲಿಗಳು, ಶ್ರುತಕೇವಲಿಗಳು, ದಶಪೂರ್ವಧಾರಿಗಳು, ಏಕಾದಶಾಂಗಧರರು, ಪ್ರಥಮಾಂಗಧರು ಎಂಬ ಪಂಚವಿಧ ವಿಕಲ್ಪದಿಂದ ಇಪ್ಪತ್ತೆನ್ಬರು ಆಚಾರ್ಯರಾದರು. ಆ ಬಳಿಕ, ಅರ್ಹದ್ಬಲ್ಯಾಚಾರ್ಯರ ಕಾಲದಲ್ಲಿ ಪುಟ್ಟಿದ ನಾನಾಗಣಗಚ್ಛವಿಕಲ್ಪಗಳಲ್ಲಿ ದೇಶೀಗಣ ಪುಸ್ತಕಗಚ್ಛ ಎಂಬ ಸಂಪ್ರ ದಾಯದಲ್ಲಿ ಕುಂಡಕುಂದಾಚಾರ್ಯರೆಂಬ ಮಹಾಮುನೀಶ್ವರರಾದರು. ಕ್ಷಮಾಮಯ ನಾದ ಈ ಮುನೀಶ್ವರನ ವರ್ಣನೆ ಹಾಗೂ ಪವಾಡವನ್ನು ಪದ್ಯ ೧೩, ೧೪ ರಲ್ಲಿ ಕೊಡ ಲಾಗಿದೆ. ಈ ಕುಂಡಕುಂದಾಚಾರ್ಯರ ಅನ್ವಯದಲ್ಲಿ ಅನೇಕ ಆಚಾರ್ಯರು ಆದರು. ರಾಜಋಷಿ ಎನಿಸಿದ ಭರತೇಶ್ವರನಿಂದ ಸೃಷ್ಟವಾದ ವಿಶಿಷ್ಟಜೈನಬ್ರಹ್ಮವಂಶದಲ್ಲಿ ಹುಟ್ಟಿದ ಪಂಡಿತದೇವನೆಂಬ ಬ್ರಾಹ್ಮಣೋತ್ತಮನು ಜಿನದೀಕ್ಷೆಯನ್ನು ತಾಳ್ದು ನಿರತಿ ಚಾರಚಾರಿತ್ರದಿಂದ ಚಾರುಕೀರ್ತಿಪಂಡಿತದೇವಾಚಾರ್ಯ ಎಂಬ ಹೆಸರಿನಿಂದ ಪ್ರಸಿದ್ಧ ನಾಗಿ ಕರ್ನಾಟಕ ಸಿಂಹಾಧೀಶ್ವರನೆನಿಸಿದ ಬಲ್ಲಾಳರಾಯನನ್ನು ಮೆಚ್ಚಿಸಿ ಜಿನಮಾರ್ಗ ಪ್ರಭಾವಕನಾಗಿದ್ದ. ಆ ಕಾಲದಲ್ಲಿ ಉತ್ಪಾತದಿಂದ ನೆಲ ಬಾಯ್ಬಿಟ್ಟಿರಲು ಅದನ್ನು ತನ್ನ ಮಂತ್ರಜಪವಿಧಿಯಿಂದ ಹೂಳ್ದು ಬಲ್ಲಾಳರಾಯನನ್ನು ರಕ್ಷಿಸಿದನು, ಈ ಚಾರು ಕೀರ್ತಿಪಂಡಿತದೇವನು. ಅದರಿಂದ ರಾಯರಾಜಗುರು, ಮಂಡಲಾಚಾರ್ಯ, ರಾಯ ವಾದಿಪಿತಾಮಹ, ಬಲ್ಲಾಳರಾಯ ಜೀವರಕ್ಷಾಪಾಲಕ, ದೇಶೀಗಣಾಗ್ರಗಣ್ಯ ಮುಂತಾದ ಬಿರುದುಗಳನ್ನು ಪಡೆದನು. ಈತನ ಶಿಷ್ಯಪರಂಪರೆಯನ್ನು ಶಾಸನದಲ್ಲಿ ಮುಂದೆ ಹೇಳಲಾಗಿದೆ :

ಆತ್ಮಶಿಷ್ಯನಾದ ಕವಿ ಅಗ್ಗಳನಿಂದ ಚಂದ್ರಪ್ರಭಪುರಾಣವನ್ನು ಬರೆಸಿದ, ಶ್ರುತ ಕೀರ್ತಿದೇವ. ಆತನ ಶಿಷ್ಯ, ವಿಜಯಕೀರ್ತಿಮುನೀಶ್ವರ. ಈ ವಿಜಯಕೀರ್ತಿ ಮುನೀಶ್ವರನ ಏಳ್ಗೆಗೆ ಮೆಚ್ಚಿ ಅಭಯಚಂದ್ರಸೂರಿಯು ತನ್ನ ವೈದಿಕಮತವನ್ನು ಪರಿತ್ಯಜಿಸಿ ಜೈನಮತವನ್ನು ಧರಿಸಿದನು. ಮತ್ತು ಈ ವಿಜಯಕೀರ್ತಿಮುನೀಶ್ವರನು ಸಂಗೀತಪುರಾಧಿಪನಾದ(ಹಾಡುವಳ್ಳಿಪುರಾಧಿಪನಾದ) ಇಂದ್ರಭೂಪಾಲಂಗೆ ಸಾಮ್ರಾಜ್ಯ ಪ್ರದನಾದನು. ಆತನ ಶಿಷ್ಯ, ಶ್ರುತಕೀರ್ತಿದೇವ. ಶ್ರುತಕೀರ್ತಿದೇವನು ತನ್ನ ಆತ್ಮ

ಶಿಷ್ಯನಾದ ಸಂಗಿರಾಯನನ್ನು ಪ್ರತಿಷ್ಠಿಸಿದನು. ಆತನ ಶಿಷ್ಯ, ವಿಜಯಕೀರ್ತಿದೇವ. ಈ ವಿಜಯಕೀರ್ತಿದೇವನು ತನ್ನ ಆತ್ಮೀಯ ಶಿಷ್ಯನಾದ ದೇವರಾಜಭೂಪಾಲನಿಗೆ ಪಶ್ಚಿಮಸಮುದ್ರ ನಿಕಟದಲ್ಲಿ ಭಟ್ಕಳವೆಂಬ ಪಟ್ಟಣವನ್ನು ಅನೇಕ ವಾಸ್ತುಲಕ್ಷಣ ಲಕ್ಷಿತವಾಗಿ ಕಟ್ಟಿಸಿದನು. ಆತನ ಶಿಷ್ಯರು, ಅಕಲಂಕಮುನೀಶ್ವರ ಹಾಗೂ ಚಂದ್ರಪ್ರಭ ಮುನೀಶ್ವರರು. ಇವರು ಶ್ವೇತಪುರದಲ್ಲಿ(ಬಿಳಿಗೆಯಲ್ಲಿ) ತಮ್ಮ ಶಿಷ್ಯರಾದ ತಿಮ್ಮಭೂಪಾಲ ಹಾಗೂ ನರಸಿಂಹಭೂಪಾಲರಿಗೆ ಪರಮಧರ್ಮರಹಸ್ಯೋಪದೇಶವನ್ನು ಗೈಯ್ದು ಜಿನ ಮಾರ್ಗವನ್ನು ಬೆಳಗಿದರು. ಈ ಅಕಲಂಕಮುನೀಶ್ವರನ ಶಿಷ್ಯ, ವಿಜಯಕೀರ್ತಿ ಮುನೀಶ್ವರ. ಆತನ ಶಿಷ್ಯ ಅಕಲಂಕದೇವ. ಅಕಲಂಕದೇವನು ಶಿಷ್ಯಾನುಗ್ರಹ, ಗಣಪೋಷಣ, ಪ್ರವಚನ, ವಾತ್ಸಲ್ಯಾದಿ ಗುಣಗಳಿಂದ ಆಚಾರ್ಯಪದವಿಧುರಂಧರ ನಾದನು. ಅಕಲಂಕದೇವನ ಶಿಷ್ಯ ಭಟ್ಟಾಕಲಂಕದೇವ. ಈತನು ರಂಗರಾಜನೃಪತಿಯ ಪ್ರೇರಣೆಯಿಂದ ಮತ್ತು ವಿಜಯಮುನೀಶ್ವರನ ಉಪದೇಶದಿಂದ ಸಾರತ್ರಿತಯವನ್ನು, ಅಲಂಕಾರತ್ರಿತಯವನ್ನು ಓದಿದನು. ಮತ್ತು ಶಬ್ದ, ಆಗಮ, ತರ್ಕ, ನಾಟಕ, ಭರತ, ಜ್ಯೋತಿಷ, ಶಿಲ್ಪ, ನ್ಯಾಯ, ವೇದ, ಸ್ಮೃತಿ, ಪುರಾಣ, ವೈದ್ಯ, ಗಣಿತ ಮೊದಲಾದ ಶಾಸ್ತ್ರಪಾರಂಗತನಾಗಿದ್ದನು.

ಶಾಸನಾಂತ್ಯದಲ್ಲಿ ಸಂಸ್ಕೃತ, ಕನ್ನಡ ಈ ಎರಡೂ ಭಾಷೆಗಳಲ್ಲಿ ಗದ್ಯಪದ್ಯಮಯ ವಾದ ಎರಡು[೧] ಶಾಸನಗಳನ್ನು ಭಟ್ಟಾಕಲಂಕನು ಬರೆಯಿಸಿದನೆಂದು ಹೇಳಿ ಶಾಸನವನ್ನು ಸಂಪೂರ್ಣ ಮಾಡಿದ ತಿಥಿಯನ್ನು ಕೊಡಲಾಗಿದೆ.

ಶಾಸನದ ತಿಥಿಯನ್ನು ಸಾಲು ೮೩ ರಲ್ಲಿ 'ಶಕವರುಷ ೧೫೧೫ ನೆಯ ನಂದನಸಂವ ತ್ಸರದ ಮಾಘ ಶು ೫ ಲ್ಲೂ' ಎಂದು ಕೊಡಲಾಗಿದೆ. ಶಕವರ್ಷ ೧೫೧೫ ಕ್ಕೆ ನಂದನ ಸಂವತ್ಸರವು ವರ್ತಮಾನ (current) ಸಂವತ್ಸರವಾಗಿದೆ. ಈ ಸಂವತ್ಸರದ ಮಾಘ ಶುದ್ಧ ಪಂಚಮಿಯ ತಿಥಿಗೆ ಕ್ರಿಸ್ತ ತಾರೀಖು ೨೭ ರವಿವಾರ, ಜನವರಿ ೧೫೯೩ ಸಮಾನವಾಗುತ್ತದೆ.

ಕರ್ನಾಟಕ ಸಿಂಹಾಸನಾಧೀಶ್ವರನೆನಿಸಿದ ಬಲ್ಲಾಳರಾಯನಂ ಮೆಚ್ಚಿಸಿ, ಆತನನ್ನು ಉತ್ಪಾತದಿಂದ ಸಂಭವಿಸಿದ ಪ್ರಸಂಗದಿಂದ ರಕ್ಷಿಸಿ, ಆತನಿಂದ ರಾಯರಾಜಗುರು, ಬಲ್ಲಾಳರಾಯ ಜೀವರಕ್ಷಾಪಾಲಕ, ಮಂಡಲಾಚಾರ್ಯ ಮುಂತಾದ ಬಿರುದುಗಳನ್ನು

೧ ಎರಡನೆಯ ಶಾಸನದಲ್ಲಿ ಘಂಟಣ್ಣೊಡೆಯನು ಸೋವಿನಕೊಪ್ಪ, ಹಾದರಿವಾನಿ ಮುಂತಾದ ಒಂಬತ್ತು ಗ್ರಾಮಗಳನ್ನು ರತ್ನತ್ರಯ ಚೈತ್ಯಾಲಯಕ್ಕೆ ದಾನ ಮಾಡಿದ ವಿಷಯ ಮತ್ತು ಆ ಗ್ರಾಮಗಳಿಂದ ಬರುವ ಹಣ ಮತ್ತು ಭತ್ತ ಇವುಗಳ ವಿನಿಯೋಗದ ವಿವರಗಳು ಬರುತ್ತವೆ.

ಚಾರುಕೀರ್ತಿಪಂಡಿತದೇವನು ಪಡೆದನೆಂದು ಶಾಸನದಲ್ಲಿ ಹೇಳಲಾಗಿದೆ. ಸಂದರ್ಭದ ಮೇಲಿಂದ ಈ ಬಲ್ಲಾಳರಾಯನು ಕ್ರಿ. ಶ. ೧೧೭೩ ರಿಂದ ೧೨೨೦ ರ ವರೆಗೆ ಹಳೇಬೀಡಿನಲ್ಲಿ ರಾಜ್ಯವಾಳಿದ ಹೊಯ್ಸಳಮನೆತನದ ಎರಡನೆಯ ಬಲ್ಲಾಳರಾಯನಾಗಿರಬಹುದು ಎಂದು ಭಾವಿಸಬಹುದು.

**ಘಂಟಣ್ಣೊಡೆಯನ ವಂಶಾವಳಿ :**



**ಭಟ್ಟಾಕಲಂಕನ ಗುರುಪರಂಪರೆ :**

ದೇಶೀಗಣ ಪುಸ್ತಕಗಚ್ಛ ಸಂಪ್ರದಾಯದಲ್ಲಿ

ಕುಂದಕುಂದಾಚಾರ್ಯ

:

ಅನೇಕ ಆಚಾರ್ಯರು

:

ಚಾರುಕೀರ್ತಿ

:

ಶ್ರುತಕೀರ್ತಿದೇವ

(ಅಗ್ಗಳನಿಂದ ಕ್ರಿ.ಶ.೧೧೮೯ ರಲ್ಲಿ ಚಂದ್ರಪ್ರಭಪುರಾಣವನ್ನು ಬರೆಯಿಸಿದ)

|

ವಿಜಯಕೀರ್ತಿ

|

ಶ್ರುತಕೀರ್ತಿ

|

ವಿಜಯಕೀರ್ತಿ

|

ಅಕಲಂಕದೇವ ಮುನೀಶ್ವರ ಮತ್ತು ಚಂದ್ರಪ್ರಭ

|

ವಿಜಯಕೀರ್ತಿ

|

ಅಕಲಂಕದೇವ

|

ಭಟ್ಟಾಕಲಂಕ

**ಶಾಸನದಲ್ಲಿ ನಿರ್ದಿಷ್ಟವಾದ ಸ್ಥಳಗಳು :** (೧) ಜಂಬೂದ್ವೀಪ (ಸಾಲು. ೨); (೨) ಮೇರು (ಸಾ. ೨); (೩) ಆರ್ಯಾಖಂಡ (ಸಾ. ೨); (೪) ವನ್ಯಮಂಡಲ (ಸಾ.೩); (೫) ಐಸೂರ (ಸಾ.೩); (೬) ಚಂದ್ರಗುತ್ತಿಗಿರಿ (ಸಾ.೩); (೭) ಬಿಜ್ಜೆಯ ಹಳ್ಳ (ಸಾ.೬); (೮) ಇಡುವಣಿ (ಸಾ.೭); (೯) ಪೊರಂಗುಪ್ಪೆ ಹೆಬ್ಬಯಲ (ಸಾ.೭); (೧೦) ಸೋಮನದಿ (ಸಾ. ೧೦); (೧೧) ಬಳಿಗೆ (ಸಾ. ೧೦, ೩೬), ಶ್ವೇತಪುರ (ಸಾ. ೭೩); (೧೨) ನೀರಹಳ್ಳಿ (ಸಾ. ೧೧); (೧೩) ಪೊಜಿಗದ್ದೆ (ಸಾ. ೧೧); (೧೪) ಹೊನ್ನಾಳಿ, ಹೊಕ್ಕಾಳಿ (ಸಾ. ೧೧, ೧೩); (೧೫) ಇಟ್ಟಿಗೆ (ಸಾ. ೧೩, ೧೪);

(೧೬) ತಾಳಗುಪ್ಪೆ (ಸಾ.೧೪); (೧೭) ನಾವಿಲಗಾರು (ಸಾ.೧೬); (೧೮) ಹೊನ್ನೆಯ ಬಿಹಾರ (ಸಾ.೧೬); (೧೯) ಹಿತ್ತಿಲಮಕ್ಕಿ (ಸಾ.೧೬); (೨೦) ಅನ್ದಲ (ಸಾ.೧೬); (೨೧) ಕೋಡಿಗದ್ದೆ (ಸಾ. ೧೭); (೨೨) ಪೆಜಿಕೊಪ್ಪ (ಸಾ. ೧೭); (೨೩) ಬಳುಗುಳಿ (ಸಾ. ೨೨); (೨೪) ಕಾರವಳ್ಳಿ (ಸಾ. ೨೨); (೨೫) ಪೆಬ್ಬಲಸಿನ ಮಾನಿ (ಸಾ. ೨೨); (೨೬) ಕೊಟ್ಟಹಳ್ಳಿ (ಸಾ ೨೩); (೨೭) ಬಿದಿರೆ (ಸಾ.೨೪); (೨೮) ಕುಡುಗನ ಬಯಲ (ಸಾ. ೨೪, ೨೫); (೨೯) ಸೋವಿನಕೊಪ್ಪ (ಸಾ. ೩೮); (೩೦) ಹಾದರಿಮಾನಿ (ಸಾ. ೩೮); (೩೧) ಮಳಿಗೆಯ ಕೆಯಿ (ಸಾ. ೩೮); (೩೨) ಕೊಜಿತಾರಿ (ಸಾ. ೩೮); (೩೩) ನೇಱಿಲಮಾನಿ (ಸಾ. ೩೮); (೩೪) ಚಟ್ಟನಹಳ್ಳಿ (ಸಾ. ೩೯); (೩೫) ಗೊರಟಿನ ಹಳ್ಳ (ಸಾ. ೩೯); (೩೬) ಬಲುಗಣಿ (ಸಾ. ೩೯); (೩೭) ಒಂದಾನೆ (ಸಾ.೩೯); (೩೮) ಮಾಗಡಬಯಲ (ಸಾ ೪೦); (೩೯) ಕರ್ಬುಗಾಹ (ಸಾ.೪೨); (೪೦) ಗೋಣವತ್ತಿ (ಸಾ. ೪೨); (೪೧) ಸೆಟ್ಟಿವಳ್ಳಿ (ಸಾ. ೪೫); (೪೨) ಸಂಗೀತಪುರ (ಸಾ.೭೦); (೪೩) ಭಟ್ಟಕಳ (ಸಾ. ೭೨).

(೧) ಜಂಬೂದ್ವೀಪ : ಸ್ಥೂಲವಾಗಿ ಏಶಿಯಾಖಂಡ. (೨) ಮೇರು : ಏಶಿಯಾ ಖಂಡದ ಮಧ್ಯದಲ್ಲಿರುವ ಪರ್ವತಶ್ರೇಣಿ. (೩) ಆರ್ಯಾಖಂಡ : ಭರತಕ್ಷೇತ್ರ. (೪) ವನ್ಯಮಂಡಲ : ಬನವಾಸಿನಾಡು. (೬) ಚಂದ್ರಗುತ್ತಿಗಿರಿ : ಸೊರಬ ತಾಲೂಕಿನ ಪಶ್ಚಿಮಭಾಗದಲ್ಲಿಯ ಬೆಟ್ಟ. ಈ ಬೆಟ್ಟದ ಶ್ರೇಣಿಯಲ್ಲಿ ಸುವಿಖ್ಯಾತ ಚಂದ್ರಗುತ್ತಿ ಗ್ರಾಮ ಮತ್ತು ಕೋಟೆ ಇರುತ್ತವೆ. (೮) ಇಡುವಣಿ : ತಾಳಗುಪ್ಪೆಯಿಂದ ಪಶ್ಚಿಮಕ್ಕೆ ಸುಮಾರು ನಾಲ್ಕುಮೈಲು ಅಂತರದಲ್ಲಿದೆ. (೯) ಪೊಂಗುಪ್ಪೆ ಪೆಬ್ಬಯಲ : ಇಡುವಣೆಯಿಂದ ದಕ್ಷಿಣ-ಪೂರ್ವಕ್ಕೆ ಮೂರುಮೈಲು ಅಂತರದಲ್ಲಿರುವ ಈಗಿನ ಹೆಬ್ಬಯಲ ಆಗಿರಬಹುದು. (೧೦) ಸೋಮನದಿ : ಬಿಳಿಗೆಯ ಪಶ್ಚಿಮಕ್ಕೆ ದಕ್ಷಿಣೋತ್ತರವಾಗಿ ಹರಿಯುವ ಅದೇ ಹೆಸರಿನ ಚಿಕ್ಕನದಿ. (೧೧) ಬಿಳಿಗೆ : ಮೇಲೆ ವಿವರಿಸಲಾಗಿದೆ; ಶ್ವೇತಪುರ ನಾಮವು ಬಿಳಿಗೆಯ ಸಂಸ್ಕೃತ ಭಾಷಾಂತರ. (೧೨) ಪೊಜಿಗದ್ದೆ : ಬಿಳಿಗೆಯಿಂದ ದಕ್ಷಿಣ-ಪಶ್ಚಿಮಕ್ಕೆ ಎರಡು ಮೈಲು ಅಂತರದಲ್ಲಿರುವ ಈಗಿನ ಹೊರಗದ್ದೆ. (೧೪) ಪೊನ್ಕುಳಿ : ಬಿಳಿಗೆಯಿಂದ ಪೂರ್ವ-ದಕ್ಷಿಣಕ್ಕೆ ಸುಮಾರು ಐದು ಮೈಲು ಅಂತರದಲ್ಲಿರುವ ಈಗಿನ ಹೊಂಕುಳಿ ಗ್ರಾಮವಾಗಿರಬಹುದು. (೧೫) ಇಟ್ಟಗೆ : ಬಿಳಿಗೆಯ ದಕ್ಷಿಣಕ್ಕೆ ಮೂರುಮೈಲು ಅಂತರದಲ್ಲಿರುವ ಈಗಿನ ಇಟ್ಟಿಗಿ ಗ್ರಾಮ. (೧೬) ತಾಳುಗುಪ್ಪೆ : ಸಾಗರದಿಂದ ಪಶ್ಚಿಮಕ್ಕೆ ಸುಮಾರು ಎಂಟುಮೈಲು ಅಂತರದಲ್ಲಿರುವ ಅದೇ ತಾಲೂಕಿನ ತಾಳಗುಪ್ಪೆ ಗ್ರಾಮ. ಇದು ರೇಲ್ವೆನಿಲ್ದಾಣವೂ ಆಗಿದೆ. (೧೭) ನಾವಿಲಗಾರು : ಬಿಳಿಗೆಯಿಂದ ಪಶ್ಚಿಮೋತ್ತರಕ್ಕೆ ಐದುಮೈಲು ಅಂತರದಲ್ಲಿರುವ ಈಗಿನ ನೇಗರ ಗ್ರಾಮವಾಗಿರಬಹುದು. (೨೧) ಕೋಡಿಗದ್ದೆ : ಬಿಳಿಗೆಯಿಂದ ಪಶ್ಚಿಮಕ್ಕೆ ಸುಮಾರು ೧೨ ಮೈಲು ಅಂತರದಲ್ಲಿದೆ (೨೩) ಬಳುಗುಳಿ : ಬಿಳಿಗೆಯಿಂದ ಪೂರ್ವ-ಪೂರ್ವೋತ್ತರಕ್ಕೆ ಸುಮಾರು ಆರುಮೈಲು ಅಂತರದಲ್ಲಿರುವ ಈಗಿನ ಬಳ್ಳುಗಳಿ ಗ್ರಾಮ.

(೨೬) ಕೊಟ್ಟಹಳ್ಳಿ : ಬಿಳಿಗೆಯಿಂದ ಪಶ್ಚಿಮೋತ್ತರಕ್ಕೆ ಮೂರುಮೈಲು ಅಂತರದಲ್ಲಿರುವ ಈಗಿನ ಕೋಟಳಿ ಗ್ರಾಮವಾಗಿರಬಹುದು. (೨೮) ಬಿದಿರೆ : ದಕ್ಷಿಣಕನ್ನಡ ಜಿಲ್ಲೆಯ ಕಾರ್ಕಳ ತಾಲೂಕಿನ ಮೂಡಬಿದಿರೆ ಆಗಿರಬಹುದು. (೨೯) ಸೋವಿನಕೊಪ್ಪ : ಬಿಳಿಗೆಯಿಂದ ಉತ್ತರಕ್ಕೆ ಸುಮಾರು ನಾಲ್ಕುಮೈಲು ಅಂತರದಲ್ಲಿದೆ. (೩೦) ಹಾವರಿಮಾನಿ : ಸೋವಿನಕೊಪ್ಪದಿಂದ ಪಶ್ಚಿಮೋತ್ತರಕ್ಕೆ ಎರಡುಮೈಲು ಅಂತರದಲ್ಲಿದೆ. (೩೩) ನೇಜಿಲಮಾನಿ : ಸಿದ್ಧಾಪುರದಿಂದ ಉತ್ತರ-ಉತ್ತರ-ಪಶ್ಚಿಮಕ್ಕೆ ಸುಮಾರು ಹತ್ತುಮೈಲು ಅಂತರದಲ್ಲಿರುವ ಈಗಿನ ನೇರಲಮಾನಿ ಆಗಿರಬಹುದು. ಬಿಳಿಗೆಯಿಂದ ಉತ್ತರ-ಉತ್ತರ-ಪಶ್ಚಿಮಕ್ಕೆ ಸುಮಾರು ಹತ್ತುಮೈಲು ಅಂತರದಲ್ಲಿ ಇನ್ನೊಂದು ನೇರಲಮಾನಿ ಇದೆ. (೩೮) ಒಂದಾನೆ : ಬಿಳಿಗೆಯಿಂದ ಪಶ್ಚಿಮಕ್ಕೆ ಐದುಮೈಲು ಅಂತರದಲ್ಲಿದೆ. (೪೦) ಗೋಣವತ್ತಿ : ಒಂದಾನೆಯಿಂದ ಉತ್ತರಕ್ಕೆ ಅರ್ಧಮೈಲು ಅಂತರದಲ್ಲಿರುವ ಈಗಿನ ಗೋಣತಿ ಆಗಿರಬಹುದು. (೪೨) ಸಂಗೀತಪುರ : ಭಟಕಳದಿಂದ ಪೂರ್ವೋತ್ತರಕ್ಕೆ ಸುಮಾರು ಏಳುಮೈಲು ಅಂತರದಲ್ಲಿರುವ ಹಾಡುವಳ್ಳಿ ಗ್ರಾಮ. ಸಂಗೀತಪುರ, ಹಾಡುವಳ್ಳಿಯ ಸಂಸ್ಕೃತರೂಪ. (೪೩) ಭಟ್ಟಕಳ : ಈಗಿನ ಭಟಕಳ ಗ್ರಾಮ. ಕಾರವಾರ ಜಿಲ್ಲೆಯಲ್ಲಿ ಒಂದು ತಾಲೂಕು ಸ್ಥಳವಾಗಿದೆ.

ಇನ್ನುಳಿದ ಗ್ರಾಮಗಳನ್ನು ಸಧ್ಯಕ್ಕೆ ಗುರುತಿಸಲು ಸಾಧ್ಯವಾಗಿಲ್ಲ. ಅವುಗಳಲ್ಲಿ ಕೆಲವು ಗ್ರಾಮಗಳು ಹಾಳಾಗಿರಬಹುದು ಮತ್ತು ಕೆಲವುಗಳ ಹೆಸರು ಬದಲಾಗಿರಬಹುದು.

## ಶಾಸನ ಪಾಠ[೧]

[ವೃತ್ತಗಳು : ಅನುಷ್ಟುಭ್ : ೧, ೨, ೩. ಕಂದ : ೪, ೮, ೧೦, ೧೧, ೧೨, ೧೪-೨೨, ೨೩, ೨೬. ಸ್ರಗ್ಧರೆ : ೫. ಮಹಾಸ್ರಗ್ಧರೆ : ೬, ೧೩. ಚಂಪಕಮಾಲೆ : ೭, ೯. ಮತ್ತೇಭವಿಕ್ರೀಡಿತಂ : ೨೪. ಶಾರ್ದೂಲವಿಕ್ರೀಡಿತಂ : ೨೫]

೧. ಶ್ರೀಮತ್ಪರಗಂಭೀರಸ್ಯಾದ್ವಾದಾಮೋಘಲಾಂಛನಂ । ಜೀಯಾತ್ತ್ರೈಲೋಕ್ಯ ನಾಥಸ್ಯ ಶಾಸನಂ ಜಿನಶಾಸನಂ ॥ [೧*] ಜಯಂತಿ ನಿರ್ಜ್ಜಿತಾಶೇಷ ಸರ್ವ್ವ-

೨. ಥೈಕಾಂತನೀತಯಃ । ಸತ್ಯವಾಕ್ಯಾಧಿಪಾಃ ಶಶ್ವದ್ವಿದ್ಯಾನಂದಾ ಜಿನೇಶ್ವರಾಃ ॥ [೨*] ಅಥಾಸ್ತಿ ಜಂಬೂದ್ವೀಪೇಸ್ಮಿನ್ಮೇರೋರ್ದ್ದಕ್ಷಿಣತೋ ದಿಶಿ । ಆರ್ಯ್ಯಖಂಡಾಗನಾ-

೧. ಬಿಳಗಿ ಗ್ರಾಮಕ್ಕೆ ೧೯೭೪ರ ಜೂನ ತಿಂಗಳ ೨೩ನೆಯ ದಿನಾಂಕದಂದು ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದವರು ಏರ್ಪಡಿಸಿದ ಉಪನ್ಯಾಸ ಶಿಬಿರದಲ್ಲಿ 'ಕಾರವಾರ ಜಿಲ್ಲೆಯ ಶಾಸನಗಳು' ಎಂಬ ವಿಷಯವನ್ನು ಕುರಿತು ಉಪನ್ಯಾಸ ಮಾಡಲು ನಾನು ಹೋದ ಸಮಯದಲ್ಲಿ ತೆಗೆದುಕೊಂಡ ಬಿಳಗಿಯ ಬಸದಿಯಲ್ಲಿರುವ ಶಾಸನದ ಪಡಿಯಚ್ಚಿನಿಂದ.

೩. ವಕ್ತ್ರಮಿವ ಶ್ರೀವನ್ಯಮಂಡಲಂ ॥ [೩*] ಅಂತೆಸೆವ ವನ್ಯದೇಶದೊಳಂತಾ ತೀತಪ್ರಕಾರಶೋಭಾರುಚಿಯಿಂ ತಾಂ ತಳೆದೈಸೂರೆಂಬ ಪುರಂ ತೋಪ್ಪುದು ಚಂದ್ರಗುತ್ತಿಗಿರಿ ಪರಿಸರದೊ–

೪. ಳ್॥ [೪*] ಆ ಪೊಳಲೊಳ್ಪಲಂಬರರಸುಗಳನುಕ್ರಮದಿಂ ಧರ್ಮವಿಜಯಿಗಳಾಗಿ ರಾಜ್ಯಂಗೆಯ್ದರಾ ಸಂತಾನದೊಳ್ಮುಂಡಂಣೊಡೆಯರೆಂಬ ಮಹಾರಾಜಂಗೆ ಕಲ್ಲಪ್ಪೊಡೆಯರುಂ

೫. ಬೋಳಪ್ಪೊಡೆಯರುಂ ಅಂಮಂಣೊಡೆಯರುಮೆಂಬ ಮೂವರ್ತ್ತನಯರಾದರ ವರೊಳ್ಕಲ್ಲಪ್ಪಭೂಪಾಲಂ ತಂನ ಜನನಸ್ಥಾನಮಪ್ಪ ಅಯಿಸೂರೊಳ್ಪಾರ್ಶ್ವ ತೀರ್ತ್ಥಂಕರರ ಬಸದಿ–

೬. ಯಂ ಕಟ್ಟಿಸಿ ಪ್ರತಿಷ್ಠೆಯಂ ಮಾಡಿ ತತ್ಪೂಜಾರ್ತ್ಥವಾಗಿ ಬಿಜ್ಜೆಯಹಳ್ಳದ ಗ್ರಾಮದೊಳಿಪ್ಪತ್ತನಾಲ್ಕು ಗದ್ಯಾಣಮುಂ ನೂಱು ಖಂಡುಗ ಭತ್ತಮುಂ ಬಪ್ಪ ಕ್ಷೇತ್ರಮಂ ಶಾಸನಾಂಕಿತಂ ಮಾ–

೭. ಡಿ ಮತ್ತಂ ಯಿಡುವಣಿಯ ಪಾರ್ಶ್ವತೀರ್ತ್ಥಂಕರರ ಪೂಜೋತ್ಸವಕ್ಕೆ ಹೊರು ಗುಪ್ಪೆ ಹೆಬ್ಬಯಲ ಕಾಡೊಳಗೆ ಅಱುವತ್ತಮೂಱು ಗದ್ಯಾಣಮೆತ್ತಿ ಬಪ್ಪ ಕ್ಷೇತ್ರಮಂ ಶಾಸನಾಂಕಿತಂ ಮಾಡಿ[ದಾ]ತಂಗೆ

೮. ಮುಂಡಂಣಭೂಪಾಲನುಂ ನರಸಿಂಹಭೂಪಾಲನುಮೆಂಬಿರ್ವ್ವರ್ಕ್ಕುಮಾರರಾದ ರವರೊಳ್ಮುಂಡಭೂಪಾಲಂಗೆ ಭೈರವೇಂದ್ರನುಂ ಕಲ್ಲಭೂಪಾಲನುಮೆಂದಿರ್ವ್ವ ರ್ಕ್ಕುಮಾರರಾದರಾ ನರಸಿಂಹ

೯. ಭೂಪಾಲಂಗೆ ಘಂಟಂಣೊಡೆಯರುಂ ಮುಂಡಂಣೊಡೆಯರುಮೆಂಬಿರ್ವ್ವರ್ಕ್ಕು ಮಾರರಾದರವರೊಳ್ ಘಂಟಂಣೊಡೆಯರಂಮಂಣೊಡೆಯರೆಂಬ ನಾಮಾಂತರ ದಿಂ ಪ್ರಸಿದ್ಧನಾಗಿ ತಂನ ರಾ–

೧೦. ಜ್ಯದೊಳ್ಪ್ರಸಿದ್ಧಮಾದ ಸೋಮನದೀ ತೀರದೊಳ್ ಬಿಳಿಗೆಯೆಂಬ ಪಟ್ಟಣಮಂ ಕಟ್ಟಿಯದಱೊಳ್ಪಿರಿಯಬಸದಿಯಂ ಕಟ್ಟಿಸಿ ಪಾರ್ಶ್ವತೀರ್ತ್ಥಂಕರರ ಪ್ರತಿಷ್ಠೆಯಂ ಮಾಡಿಸಿ ತತ್ಪೂಜಾರ್ತ್ಥವಾ–

೧೧. ಗಿ ನೀರಹಳ್ಳಿಯುಂ ಪೊಱಗದ್ದೆಯುಂ ಹೊನ್ನುಕುಳಿಯೊಳ್ಕಿಱಿದು ಭೂಮಿಯುಂ ಬೆರಸಿ ನೂಱಱುವತ್ತಮೂಱು ಗದ್ಯಾಣಮೆತ್ತಿ ಬಪ್ಪ ಕ್ಷೇತ್ರಮಂ ಶಾಸನಾಂಕಿತಂ ಮಾಡಿದನಾ ಭೈರವೇಂದ್ರ–

೧೨. ನ ಕುಮಾರನಭಿನವ ಭೈರವೇಂದ್ರಂ ಹಿರಿಯಪ್ಪೊಡೆಯರೆಂಬ ನಾಮಾಂತರಮಂ ಪಡೆದು ತಂನರಮನೆಯೊಳೆರಲ್ನೆಲೆಯ ಬಸದಿಯಂ ಕಟ್ಟಿಸಿ ಪಾರ್ಶ್ವತೀರ್ತ್ಥಂಕರರ ಪ್ರತಿಷ್ಠೆಯಂ ಮಾಡಿ ತತ್ಪೂ–

೧೩. ಜಾರ್ತ್ಥವಾಗಿ ಪೊಕ್ಕುಳಿಟ್ಟಗೆಯೆಂಬ ಗ್ರಾಮದೊಳ್ನಾಜಾಲ್ಕುಂ ಗದ್ಯಾಣ ಪ್ರಮಿತ ಕ್ಷೇತ್ರಮುಂ ಶಾಸನಾಂಕಿತಂ ಮಾಡಿ ಮತ್ತಂ ತಂನ ಪಟ್ಟದರಸಿಯಪ್ಪ ಮಲ್ಲಿದೇವಿಯರ ಪೆಸರೊಳ್ಮಾಣಿಕ್ಯ

೧೪. ತೀರ್ತ್ಥಂಕರರ ಬಸದಿಯುಂ ಕಟ್ಟಿಸಿ ತತ್ಪೂಜಾರ್ತ್ಥವಾಗಿ ಅಯಿವತ್ತು ಗದ್ಯಾಣಮೊತ್ತಿ ಬರ್ಪ್ಪ ಯಿಟ್ಟಿಗೆಯೆಂಬ ಗ್ರಾಮಮುಂ ಶಾಸನಾಂಕಿತಂ ಮಾಡಿ ಮತ್ತಂ ತಾಳುಗುಪ್ಪೆಯ ಪಂಚಬಸದಿ-

೧೫. ಯುಂ ಜೀರ್ಣ್ಣೋದ್ಧಾರಮುಂ ಮಾಡಿಸಿ ಮೂವತ್ತಾಱುಂ ಗದ್ಯಾಣಮೊತ್ತಿ ಬರ್ಪ್ಪ ನಂದಿಯ ಜೋಗೆಂಬ ಕ್ಷೇತ್ರಮುಂ ಶಾಸನಾಂಕಿತಂ ಮಾಡಿದಾತನ ತನುಜಂ ಲಕ್ಷ್ಮಣಭೂಪಾಲನಾದೀಶ್ವರರ

೧೬. ಬಸದಿಯುಂ ಕಟ್ಟಿಸಿ ತತ್ಪೂಜಾರ್ತ್ಥವಾಗಿ ನಾವಿಲಗಾರು ಹೊಂನೆಯ ಬಿಘಾರ ಹಿತ್ತಿಲಮಕ್ಕಿಯನ್ಸ್ಥಲದೊಳ್ನಾಲ್ವತ್ತಮೂಱುವರೆ ಗದ್ಯಾಣದ ಕ್ಷೇತ್ರಮುಂ ಶಾಸ ನಾಂಕಿತಂ ಮಾಡಿದನಾ ಘಂ-

೧೭. ಟಂಣೊಡೆಯರ ಕುಮಾರಂ ತಿಂಮರಸೊಡೆಯತ್ರಿಕೂಟಮಪ್ಪ ರತ್ನತ್ರಯ ಚೈತ್ಯಾಲಯಮುಂ ಕಟ್ಟಿಸಿ ತತ್ಪೂಜಾರ್ತ್ಥವಾಗಿ ಕೋಡಿಗದ್ದೆಯುಂ ಹೆಱಕೊಪ್ಪ ಮೆಂಬ ಗ್ರಾಮದೊಳ್ನೂ-

೧೮. ಱೊಂದುವರೆ ಗದ್ಯಾಣದ ಕ್ಷೇತ್ರಮುಂ ಶಾಸನಾಂಕಿತಂ ಮಾಡಿ ಮತ್ತಂ ತಂನಗ್ರಜೆ ಯಪ್ಪ ತಿಂಮಾಂಬಿಕೆಯ ಪೆಸರೊಳ್[೧] ಪೆಱತೊಂದು ಬಸದಿಯುಂ ಕಟ್ಟಿಸಿ ಶಾಂತೀಶ್ವರರಂ ಪ್ರತಿ-

೧೯. ಷ್ಠಿಸಿ ತತ್ಪೂಜಾರ್ತ್ಥವಾಗೆ ಮೂವತ್ತಾಱುಂ ಗದ್ಯಾಣಮೊತ್ತಿ ಬರ್ಪ್ಪಯೆಲೆಯ ಬಳ್ಳಿ ಹೂವಿನಮಾನಿಯೆಂಬ ಕ್ಷೇತ್ರಂಗಳಂ ಶಾಸನಾಂಕಿತಂ ಮಾಡಿದಾತನನುಜಂ ನರಸಿಂಹಭೂಪಾಲಂ

೨೦. ತಂನ ಪಿರಿಯರ್ಕ್ಕಟ್ಟಿಸಿದ ಸಕಲ ಚೈತ್ಯಾಲಯಂಗಳಂ ಜೀರ್ಣೋದ್ಧಾರಂ ಮಾಡಿಸಿ ದಾತನ ಕುಮಾರಂ ವೀರೇಂದ್ರನೆಂಬಂ ಕಲಿಯುಗಧರ್ಮಪ್ರತ್ಯನೀಕಿ ಪಿರಿಯ ಬಸದಿಯ ಪಾರ್ಶ್ವತೀರ್ಥಂ-

೨೧. ಕರರ ಶ್ರೀಪಾದಮೂಲದೊಳ್ಷಡೆವ ಷೋಡಶಭಾವನಾಪೂಜೋತ್ಸವಕ್ಕೆ ಪಿರಿಯ ಕೋಲೊಳ್ಮೂವತ್ತಾಱು ಗದ್ಯಾಣಮೊತ್ತಿ ಬರ್ಪ್ಪ ಕ್ಷೇತ್ರಮುಂ ಶಾಸನಾಂಕಿತಂ ಮಾಡಿ ಮತ್ತಂ ತಂನನುಜೆ-

೨೨. ಯಪ್ಪ ತಿಮ್ಮಾಂಬಿಕೆ ಕಟ್ಟಿಸಿದ ಚಂದ್ರಪ್ರಭತೀರ್ಥಂಕರರ ಬಸದಿಯ ಪೂಜೋ ತ್ಸವಕ್ಕೆ ಬಳುಗುಳಿ ಕಾರವಳ್ಳಿ ಹೆಬ್ಬಲಸಿನಮಾನಿ ಕೊಟ್ಟಪಳ್ಳಿಯ ಸ್ಥಲ ನಾಲ್ಕ ಱೊಳೆಪ್ಪತ್ತೆಂ-

೧ 'ಳ್' ಅಕ್ಷರವನ್ನು ಸಾಲಿನ ಮೇಲೆ ಚಿಕ್ಕದಾಗಿ ಬರೆಯಲಾಗಿದೆ.

೨೩. ಟಂ ಗದ್ಯಾಣಮುಂ ಪಣಪಾಗಮೆತ್ತಿ ಬರ್ಪ್ಪ ಕ್ಷೇತ್ರಮುಂ ಶಾಸನಾಂಕಿತಂ ಮಾಡಿ ಮತ್ತಮಭಿನವ ಭೈರವೇಂದ್ರಂ ನಿತ್ಯಪೂಜಾರ್ಥವಾಗಿ ಮಾಡಿಸಿದ ಸುವರ್ಣದ ಪಾರ್ಶ್ವತೀರ್ತ್ಥಂ-

೨೪. ಕರರುಂ ರಜತದ[1] ಚಂದ್ರಪ್ರಭತೀರ್ಥಂಕರರುಂ ಬಿದಿರೆಯ ತ್ರಿಭುವನತಿಲಕ ಮೆಂಬ ಬಸದಿಯೊಳ್ಬಿಜಯಂಗೆಯ್ಸಿ ತತ್ಪೂಜಾರ್ಥವಾಗಿ ನಾಲ್ವತ್ತನಾಲ್ಕುವರೆ ಗದ್ಯಾಣಕ್ಕೆ ಕು-

೨೫. ಡುಗನಬಯಲೆಂಬ ಗ್ರಾಮಮುಂ ಶಾಸನಾಂಕಿತಂ ಮಾಡಿದನಾತನ ಕುಮಾರನನೇಕ ಗುಣಸಮುತ್ತುಂಗಂ ರಂಗರಾಜನೆಂಬ ಮಹಾರಾಜಂ ನಿಜಗಾಂಭೀರ್ಯ್ಯಾದ್ಯನೇಕ ಗುಣಸಂ-

೨೬. ಜಾತ ಭೋಜರಾಜ ಸಂಘಾಲಂಘನಜಂಘಾಲವಿವೇಕವಿತರಣಕಲಾಪಾಂಡಿತ್ಯಾದ್ಯ ನೇಕಗುಣನಿರ್ಜ್ಜಿತ ಕಲ್ಪವೃಕ್ಷ ಮಲಯಹುಲಿ ಮಾಕೊರ್ಕ್ಕಲಬಿರುದೋದ್ದಂಡ ಯೆಂಟು

೨೭. ದಂಡಿಗೆಯ ಮನ್ನೆಯರ ಗಂಡ ಗಡಿಯಂಕಸಿಂಹ ಮೂರ್ಮ್ಮಡಿರಾವುತ್ತರಾಯ ದುರ್ಗವಿಭಾಡ ಶ್ರೀಮನ್ಮಹಾಪ್ರಭುವೆಂಬ ನಿಜಾನ್ವಯಾಗತಮಾದ ಬಿರುದಾ ವಳಿಯಂ ಪರಿ-

೨೮. ಪರಿಪಾಳಿಸಿ ಮತ್ತಮಭಂಗಪ್ರತಾಪಸಂಗತನುಮಶೇಷವೈರಿವಧೂವೈಧವ್ಯ ದೀ ಕ್ಷಾಚಾರ್ಯ್ಯನುಮಖಿಲದಿಗಂತವಿಶ್ರಾಂತಕೀರ್ತ್ತಿಕಾಂತಾಕಾಂತನುಮಶೇಷವಿದ್ವದ್ಗ ಣಗಣನೀ-

೨೯. ಯಗುಣಗಣಾಭರಣನುಮನೂನಸರಸಗಾನಕಲಾಕಾಮಿನೀಕಂದರ್ಪ್ಪರೂಪನು ಮ ನೇಕಸಮಾಶ್ರಿತದಾರಿದ್ರ್ಯವಿದ್ರಾವಣನುಮನೇಕಮಂತ್ರರಹಸ್ಯವಿಚಾರಚಾತುರೀ ಧು ರಂಧ-

೩೦. ರನುಮನವದ್ಯಸ್ಯಾದ್ವಾದವಿದ್ಯಾವಿದಗ್ಧವಿದ್ವಜ್ಜನಪ್ರೀತನುಮಖಿಲಜಗದೇಕ ಶರ ಣ್ಯಜಿನಮಾರ್ಗ್ಗಪ್ರತಿಷ್ಠಾಪನಾಚಾರ್ಯನುಮೆಂಬಿವು ಮೊದಲಾಗಿ ಪೆಱವುಂ ಗುಣನಾ-

೩೧. ಮಂಗಳಂ ತಳೆದು ಪ್ರಸಿದ್ಧಿವಡೆದನಾತನ ಜಸದೆಸಕಮೆಂತೆನೆ॥ ಮೂಲೋಕಕ್ಕೆಂದು ಮೇಲೆತ್ತಿದ ವಿಪುಲಸಿತಚ್ಛತ್ರಮೆಂಬಂತೆ ಸದ್ಧರ್ಮ್ಮಾಲಂಬಂ ಕೀರ್ತ್ತಿಯೊಪ್ಪಲ್ಕ ದಱ ನೆಳಲ-

೩೨. ವೊಲ್ಸಂತತಂ ತೋರ್ಪ್ಪುದಿಂತೀ ನೀಲಾಭ್ರಂ ಪದ್ಮರಾಗೋಜ್ವಲಕಲಶ ಮೆಸಲ್ಪುತ್ತ್ರತಾಪಾರ್ಕ್ಕನಲ್ಲಿಂ ಮೇಲಿರ್ಪ್ಪಂ ನೋಡೆ ತದ್ರಂಗಪಧರಣಿಪನಂ ಬಣ್ಣಿಸಲ್ಬಲ್ಲನಾವಂ ॥ [೫*] ಮತ್ತಮಾತ-

1 'ದ' ಅಕ್ಷರವನ್ನು ಸಾಲಿನ ಮೇಲ್ಭಾಗದಲ್ಲಿ ಸಣ್ಣದಾಗಿ ಬರೆಯಲಾಗಿದೆ.

೩೩. ನ ಕಯ್ಯ ಕೂರಲಗೆಂತಿಪ್ಪ್ರುದೆನೆ ॥ ಪರಭಾಗಾಭೋಗನೇತ್ರಾಗ್ರಿಮೋಕ್ಷಿಭರದಿಂ ಪ್ರೇತರಾಟ್ಟ್ರಕ್ಷಕಂ ತದ್ಗರಳಾಯ್ನು । ಪಿಂಡಮಂ ತಾಪಿಸಿ ಘಣಿಘಾಗ್ರಾವದೋ ಸ್ಫೂರ್ಜ್ಜ–

೩೪. ಘುಪ್ರಸ್ಫುರದುದ್ಧಾಸ್ಫೋಟನೀಘಾತದೊಳ್ ಸಮೆದದಂ ತಂದು ತಾಂ ಕಾಣ್ಕೆ ಯೆಂದೀ ಧರಾಧೀಶಂಗಿತ್ತಪ್ರೋಲೊಪ್ಪಿದುದು ಹೃತರಿಪುಪ್ರಾಣಮುದ್ಯತ್ಕೃಪಾಣಂ॥ [೬*] ಮತ್ತಮಾತ–

೩೫. ನೆಂತಪ್ಪನೆನೆ ॥ ಪಾಪಡಿಗನ ಪೂವಡಿಗನ ದೇವಡಿಗನ ಮಡಲಿ¹ಯುರ್ಕ್ಕರೊಳ್ಕಡು ಸೋಲ್ತುಂ ಭಾವಿಸಲುತ್ತಮನಾಯಕದೇವಂ ಪರದಾರಸೋದರಂ ರಂಗೇಂದ್ರಂ ॥ ॥೭*॥ ಯಿಂತು ಸಕಲಭುವನಪ್ರ–

೩೬. ಸಿದ್ಧನಾದ ರಂಗರಾಜ ಮಹಾರಾಜಂ ಬಿಳಿಗೆಯೊಳ್ನೂತನವಾಗಿ ಶಿಲಾಮಯ ವಾಗಿ ರತ್ನತ್ರಯ ಚೈತ್ಯಾಲಯಮಂ ಕಟ್ಟಿಸಿದನಾತನ ಕುಮಾರಂ ಘಂಟೇಂದ್ರ ನೆಂಬ ಮಹಾರಾಜನಾ

೩೭. ಚೈತ್ಯಾಲಯಕ್ಕೆ ರಂಗಮಂಡಪವಱಂ ಚಂದ್ರಶಾಲೆಯುಂ ಮುನಿವಾಸಮುಂ ಪ್ರಾಕಾರಮುಂ ಮೊದಲಾದ ಕೆಲಸಂಗಳಂ ಗೆಯಿಸಿ ಸಂಪೂರ್ಣ್ಣಂ ಮಾಡಿ ಮಹೋ ತ್ಸವದಿಂ ನೇಮೀಶ್ವರ ಪಾ–

೩೮. ರ್ಶ್ವನಾಥ ವರ್ದ್ಧಮಾನ ತೀರ್ತ್ಥಂಕರರ ಪ್ರತಿಷ್ಠೆಯಂ ಮಾಡಿಸಿ ನಿತ್ಯನೈಮಿತ್ತಿಕ ಅಂಗರಂಗವೈಭವಂಗಳಿಗೆ ಸೋವಿನಕೊಪ್ಪ ಹಾದರಿಮಾನಿ ಮಳಿಗೆಯಕೆಱಿ ಕೊಱತಾರಿ ನೇಱಿಲವಾನಿ

೩೯. ಚಟ್ಟನಹಳ್ಳಿ ಗೊರಟಿನಹಳ್ಳ ಬಲುಗಣೆ ಒಂದಾನೆಯೆಂಬಪ್ರೊಂಭತ್ತು ಗ್ರಾಮಂ ಗಳಿಂ ನಾನೂಱನಾಲ್ವತ್ತಮೂಱು ಗದ್ಯಾಣಮುಂ ಮೂನೂಱು ಖಂಡುಗ ಭತ್ತಮುಂ ಬರ್ಪ್ಪ ಕ್ಷೇತ್ರ–

೪೦. ಮಂ ಕುಳಖಂಡಿತಂ ಮಾಡಿ ಶಾಸನಾಂಕಿತಂ ಮಾಡಿ ಮತ್ತಂ ತಂನ ರಾಣಿವಾಸ ವಾದ ರಾಮಾದೇವಿಯರ್ಕ್ಕಟ್ಟಿಸಿದ ಗಂಧಕುಟಿಯ ಶಾಂತೀಶ್ವರರ ಶ್ರೀಕಾರ್ಯ್ಯಕ್ಕೆ ಮಾಗಡಬಯಲಸ್ಥಲದೊಳ್ಪಂನೆ–

೪೧. ರಡು ಗದ್ಯಾಣವೆತ್ತಿ ಬರ್ಪ್ಪ ಕ್ಷೇತ್ರಮಂ ಶಾಸನಾಂಕಿತಂ ಮಾಡಿ ಮತ್ತಂ ತಂಮ ಅನ್ವಯಪರಂ ಪರಂಪರೆಯ ಗುರುಗಳಾದ ಶ್ರೀಮದಕಲಂಕದೇವ ಮುನೀ ಶ್ವರರ್ಗ್ಗಾಹಾರದಾನ ಶಾಸ್ತ್ರದಾನಾ–

೪೨. ರ್ತ್ಥವಾಗಿ ತಂಮಪ್ಪಾಜಿ ರಂಗಪ್ಪರಾಜೊಡೆಯರ್ದ್ಧಾರಾಪೂರ್ವಕವಾಗಿ ಕೊಟ್ಟ ಕರ್ಬುಗಾ[ಹ] ಗೋಣವತ್ತಿಯೆಂಬೀ ಸ್ಥಲವೆರಡಱಿಂ ಪುಟ್ಟುವ ಅಱುವತ್ತೆರಡು ವರೆ ಗದ್ಯಾಣದ ಕ್ಷೇತ್ರಕ್ಕಂ ಮ–

---

೧ 'ಲಿ' ಅಕ್ಷರವನ್ನು ಸಾಲಿನ ಮೇಲ್ಭಾಗದಲ್ಲಿ ಚಿಕ್ಕದಾಗಿ ಬರೆಯಲಾಗಿದೆ.

೪೩. ತ್ತುಂ ತಂನ ಪರಮಗುರುಗಳಾದ ಶ್ರೀಮದಕಲಂಕದೇವರ ಶಿಷ್ಯರಾದ ಭಟ್ಟಾಕಲಂಕದೇವ ಮುನೀಶ್ವರಗ್ಗೆ ಧಾರಾಪೂರ್ವಕಮಾಗಿ ತಾಂ ಸಮರ್ಪ್ಪಿಸಿಕೊಟ್ಟ ಸೆಟ್ಟಿವಳ್ಳಿಯ ಗ್ರಾಮದೊಳ್ನೂ-

೪೪. ಜಿನಾಲ್ವತ್ತೊಂದು ಗದ್ಯಾಣಮುಮೆಪ್ಪತ್ತಯ್ದು ಖಂಡುಗ ಭತ್ತಮುಂ ಬರ್ಪ್ಪ ಕ್ಷೇತ್ರಕ್ಕಂ ಮತ್ತಮಾ ಭಟ್ಟಾಕಲಂಕದೇವರ್ಗ್ಗೆ ಶಾಸ್ತ್ರೋಪದೇಶಂ[1]ಗೆಯ್ದು ಜಿನಧರ್ಮ್ಮಪ್ರಭಾವಕರಾದ ವಿಜಯ-

೪೫. ಮುನೀಶ್ವರಂಗೆ ಧಾರಾಪೂರ್ವ್ವಕಮಾಗಿ ಕೊಟ್ಟ ಶೆಟ್ಟಿವಳ್ಳಿಯ ಗ್ರಾಮದೊಳಙುವತ್ತುಂ ಗದ್ಯಾಣಮೆತ್ತಿ ಬರ್ಪ್ಪ ಕ್ಷೇತ್ರಕ್ಕಂ ಚತುಸ್ಸೀಮೆಯೊಳ್ಮಕ್ಕೊಡೆಯ ಕಲ್ಲಂ[2] ನೆಡಿಸಿ ಸರ್ವ್ವಮಾನ್ಯವಾಗಿ ಸ-

೪೬. ಮರ್ಪ್ಪಿಸಿ ಜಿನಶಾಸನಪ್ರಭಾವಕನಾಗಿ ನೆಗಳ್ತೆವಡೆದನಂತುಮಲ್ಲದೆಯುಂ ॥ ಮಲೆವರಿರಾಯಜಾಲವಿಲಯಾಳನಿ ಮೂರ್ಮ್ಮಡಿರಾಯರಾವುತಂ ಮಲೆಹುಲಿಯೆಂಟುದಂಡಿಗೆಯ ಮನ್ನೆಯ-

೪೭. ಗಂಡನುದಾತ್ತರಾಘವಂ ಕಲಿ ಗಡಿಯಂಕಸಿಂಹನರಿವಮಾಗ್ಗಣಭೈರವನೆಂಬ ಸಾರ್ತ್ಥಕೋಜ್ವಲ[3] ಬಿರುದಂಗಳೊಪ್ಪಿದುವು ರಂಗನೃಪಾತ್ಮಜ ಘಂಟೆಭೂಪನಾ ॥ [೮*] ಧುರಕಿದಿರಾಂತು

೪೮. ಮುಂದುವರಿದೇಱಿಱಿದಲ್ಲದೆ ಪಿಂದೆ ಮೆಟ್ಟವಾ ಧೊರೆಗಳ ಗಂಡನೆಂಬ ಶರಣಾಗತಭೂಮಿಪಸೇವಕಾಶ್ರಿತಗ್ಗೆರೆದುದನೀವ ಸದ್ಗುಣಕರಂಡಕನೆಂಬುದು ಸರ್ವ್ವದೇಶದೊಳ್ಪಿರಿದೆಸೆದಿರ್ಪ್ಪುದೇ-

೪೯. ಮ[ರ]ರೆ ರಂಗನೃಪಾತ್ಮಜ ಘಂಟೆಭೂಪನಾ ॥ [೯*] ಇಂತು ಸಕಲ ಭುವನ ಪ್ರಸಿದ್ಧನಾದ ಘಂಟೇಂದ್ರ ಮಹಾರಾಜನ ಪರಮಗುರುವೆನಿಸಿದ ಭಟ್ಟಾಕಲಂಕದೇವ ಮುನೀಶ್ವರನ ಗುರು । ಪರ-

೫೦. ಮಗುರು । ಪರಮೇಷ್ಠಿಗುರು । ಪರಾಪರಗುರುಗಳ್ಮೊದಲಾದ ಗುರುಸಂಪ್ರದಾಯ ಪ್ರಶಸ್ತಿಯೆಂತೆನೆ ॥ ಶ್ರೀಮದವಿರತನತಸುತ್ರಾಮತಿರೀಟಾಗ್ರ ಖಚಿತ ಮಣಿಗಣಕಿರಣಸ್ತೋಮ-

೫೧. ದ್ವಿಗುಣಿತಪದನಖರಾಮಲಭಾಭಾಸಿತಾಶಸಂತ್ಯಜಿನೇಶಂ ॥ [೧೦*] ಅಂತೆಸೆವಂತ್ಯಜಿನೇಶಂ ತಾಂ ತುರ್ಯ್ಯಸಮಾಂತ್ಯದೊಳ್ನಿತಾಂತವಿಶುದ್ಧೈಕಾಂತಗುಣಾಷ್ಟಕಮಯ ದೇಹಂ ತಾಳ್ದಿರೆ ಪರಮಮು-

---

೧ ಬಿಂದುವನ್ನು ಅತಿ ಚಿಕ್ಕದಾಗಿ ಬರೆಯಲಾಗಿದೆ.

೨ ಅದೇ.

೩ ಜ್ವಲ ಶಬ್ದವನ್ನು ಲ (ಮೇಲೆ ಜ, ಕೆಳಗೆ ವ) ಎಂದು ಕಂಡರಿಸಲಾಗಿದೆ. ಲಿಪಿಕಾರನು ಜ್ವ ಅಕ್ಷರವನ್ನು ಬಿಟ್ಟು ಅದರ ಸ್ಥಳದಲ್ಲಿ ಲ ಅಕ್ಷರವನ್ನು ಕಂಡರಿಸಿದ ಮೂಲಕ, ಜ್ವ ಅಕ್ಷರವನ್ನು ಕಂಡರಿಸಲು ಸ್ಥಳ ವಿಲ್ಲದಾಗಿ, ಜ್ವ ದಲ್ಲಿಯ ಜ ಅಕ್ಷರವನ್ನು ಲ ಅಕ್ಷರದ ಮೇಲ್ಭಾಗದಲ್ಲಿ ಮತ್ತು ವ ಅಕ್ಷರದ ಒತ್ತನ್ನು ಲ ಅಕ್ಷರದ ಕೆಳಭಾಗದಲ್ಲಿ ಕಂಡರಿಸಿದ್ದಾನೆ.

೫೨. ಕ್ಷಿಪತಿಯೊಳ್ಕಿರಿದಂ ॥ [೧೦*] ಅಂತು ವರ್ದ್ಧಮಾನತೀರ್ತ್ಥೇಶ್ವರಂ ಪರಮ
ಮುಕ್ತಿಗೆ ಸಂದಿಂ ಬಳಿಯಮನುಬದ್ಧಕೇವಲಿಗಳುಂ ಶ್ರುತಕೇವಲಿಗಳುಂ ದಶ
ಪೂರ್ವಧಾರಿಗಳುಮೇಕಾದಶಾಂಗಧರರುಂ-

೫೩. ಂ ಪ್ರಥಮಾಂಗಧರರುಮೆಂಬ ಪಂಚವಿಧವಿಕಲ್ಪದಿನಿಪ್ಪತ್ತೆಣ್ಬರಾಚಾರ್ಯ್ಯರಪ್ಪರಿಂ
ಚತುಃಕಾಲಧರ್ಮ್ಮತೀರ್ತ್ಥಪ್ರವರ್ತ್ತಕರಾದರಲ್ಲಿಂ ಬಳಿಯಂ ॥ ಪ್ರಥಮಾಂಗ
ಪ್ರಥಮಾಂಶ ಪ್ರಥಿತಾಂಬು-

೫೪. ಧಿಮಥನದಕ್ಷಮತಿ ಮಂಥಾದ್ರಿಪ್ರಥನಂ ನಿರ್ವ್ಯಥನಂ ಚಿದ್ವ್ರಥನಂ ಸತ್ಕಥನ
ಧಿಕಮನ್ಮಥಮಥನಂ॥ [೧೨*] ಎನಿಸಿದರ್ಹದ್ಬಲ್ಯಾಚಾರ್ಯ್ಯರ ಕಾಲದೊಳ್ಪುಟ್ಟಿದ
ನಾನಾಗಣಗಚ್ಛವಿಕಲ್ಪದೊಳ್ದೇ-

೫೫. ಶೀಗಣಮುಂ ಪುಸ್ತಕಗಚ್ಛಮೆಂಬ ಸಂಪ್ರದಾಯದೊಳ್ಕೊಂಡಕುಂದಾಚಾರ್ಯ್ಯರೆಂಬ
ಮಹಾಮುನೀಶ್ವರರ್ನೆಗಳ್ದರವರ ಪ್ರಭಾವಮೆಂತೆನೆ ॥ ಮುನಿದೊರ್ವ್ವಂ
ಕುಂಡದೊಳ್ತನ್ಮನಿಯಜಿಯದ-

೫೬. ಪೊಲ್ಮೃದ್ಯಮಂ ತೀವಿ ನೋಡೀ ಮುನಿ ಕಳ್ಳಂ ತಂದನೀ ಗುಂಡಿಗೆಯೊಳೆನಲೊಡಂ
ಮಂತ್ರಸಾಮರ್ತ್ಥ್ಯದಿಂ ನೆಟ್ಟನೆ ನೋಡಲ್ಕೊಲ್ಲಿಪೂವೆಂದೆನೆ ವಿರಚಿಸಿ ಸತ್ಕುಂಡ
ಕುಂದಾಖ್ಯೆಯಂ ತಾನನುಮೋ-

೫೭. ದಂ ಬೆತ್ತು ಪೆತ್ತಂ ನರಪತಿಸಭೆಯೊಳ್ಕೊಂಡಕುಂದಾರ್ಯ್ಯವರ್ಯ್ಯಂ ॥ [೧೩*]
ಕ್ಷಮೆಗಂ ಸ್ವಕೀಯ ದಿವ್ಯಕ್ಷಮೆ ಸಾಲ್ವೆರಳಧಿಕಮೆಂದು ತೋರ್ಪ್ಪವೊಲಂತಾ
ಕ್ಷಮೆಯಂ ಮೆಟ್ಟದೆ ನಡೆವಂ ಕ್ಷಮಾಮ-

೫೮. ಯಂ ಕುಂಡಕುಂದ ಚಾರಣ ಮುನಿಪಂ ॥ [೧೪*] ಮತ್ತಮಾ ಕೊಂಡಕುಂದಾ
ಚಾರ್ಯ್ಯಾನ್ವಯದೊಳನೇಕಾಚಾರ್ಯ್ಯಪೂರ್ವ್ವದಿಂ ಬಳಿಯಂ ಚಾರುಕೀರ್ತ್ತಿಪಂಡಿ
ತದೇವರೆಂಬಾಚಾರ್ಯ್ಯರ್ನೆಗಳ್ದರ-

೫೯. ವರ ವಂಶಪ್ರಶಂಸೆಯೆಂತೆನೆ॥ ಮುಂ ಕೃತಯುಗಾದಿಯೊಳ್ಸಮಲಂಕೃತ ವಿಶ್ವಾವನೀ
ತಲಂ ಕೃತಕರ್ಮ್ಮಹಂಕೃತಿಕೃಂತನ ಪಟುಸರ್ಗ್ಗಂ ಕೃತಿ ಪುರುಷಾಗ್ರಗಣ್ಯ
ನೂರ್ಜ್ಜಿತಪು-

೬೦. ಣ್ಯಂ ॥ [೧೫*] ಎನಿಸಿದಾದಿಬ್ರಹ್ಮನ ಕುಮಾರನುಮಾದ್ಯಚಕ್ರಿಯುಮಂತ್ಯ
ಬ್ರಹ್ಮನುಂ ಪದಿನಾರನೆಯ ಮನುವುಂ ರಾಜರುಷಿಯುಮೆನಿಸಿದ ಭರತೇಶ್ವರನಿಂ
ಸೃಷ್ಟಮಾದ ವಿಶಿಷ್ಟಜೈನಬ್ರಹ್ಮ

೬೧. ವಂಶದೊಳ್ಬಾಲ್ಯದೊಳೌಪಾಸಕಾಗಮಾಭ್ಯಾಸಮಂ ಯೌವನದೊಳುಚಿತಭೋಗಾ
ನುಭವನಮುಂ ವಾರ್ದ್ಧಕದೊಳ್ ಜಿನದೀಕ್ಷಾಶ್ರಯಣಮುಂ ತಮಗೆ ಕುಲವ್ರತ
ಮಾಗಿ ನಿಲೆ ಪಲಂಬರ್ಸ್ಸ-

೬೨. ಂದರಾ ವಂಶದೊಳೊ[1]ರ್ವ್ವಂ ಪಂಡಿತದೇವನೆಂಬಂ ಬ್ರಾಹ್ಮಣೋತ್ತಮನಧಿಗತ ಸ್ವಪರಸಮಯರಾದ್ಧಾಂತಹೃದಯಂ ಸಕಲಲೌಕಿಕವೈದಿಕಕಲಾಚಾತುರೀಧುರಂ ಧರನುಮಾಗಿ ಸಹಜವೈರಾಗ್ಯಪರಾಯ-

೬೩. ಣಂ ಜಿನದೀಕ್ಷೆಯಂ ತಾಳ್ದಿ ನಿರತಿಚಾರಚಾರಿತ್ರದಿಂ ಚಾರುತರಕೀರ್ತ್ತಿಯಂ ಪಡೆದು ಚಾರುಕೀರ್ತ್ತಿಪಂಡಿತದೇವಾಚಾರ್ಯ್ಯರೆಂಬ ಪೆಸರಿಂದೆಸೆದು ಕರ್ನಾಟಸಿಂಹಾಸ ನಾಧೀಶ್ವರನೆನಿಸಿದ ಬಲ್ಲಾಳರಾಯ-

೬೪. ನಂ ಮೆಚ್ಚಿಸಿ ಜಿನಮಾರ್ಗ್ಗಪ್ರಭಾವಕನಾಗಿರಲಾ ಕಾಲದೊಳ್ಪುಟ್ಟಿದುತ್ಪಾತದಿಂ ನೆಲಂ ಬಾಯ್ಬಿಟ್ಟಿರಲದಂ ಪೂಳ್ವಮೆಂದು ಮಿಥ್ಯಾಮತಿಗಳನೇಕ ಹಿಂಸಾಕರ್ಮ್ಮಂ ಗೆಯ್ಯಲದಕ್ಕದು ಪೆರ್ಚ್ಚೆ ಪಾತಾಳಂ ಬರಂ ಬಾ-

೬೫. ಯ್ವಿಟ್ಟು ರಾಯನಂ ತನಗೆ ಬಲಿಗೆಯ್ಯಲ್ವೇಳ್ಕುಮೆನಲದಂ ಪಂಡಿತದೇವಾ ಚಾರ್ಯ್ಯರ್ಕ್ಕಂಡು ಕಾರುಣ್ಯದಿಂ ಜಿನಶಾಸನದೇವತಾರಾಧನಂಗೆಯ್ದು ॥ ಭೀಷ್ಮ ತರ ಜೀವವಧೆಯಿಂ ಶ್ಲೇಷ್ಮಾತಕಮಾತ್ರಮುಪ್ಪೊಡಂ ಪೂ-

೬೬. ಳದುದಂ ಕೂಷ್ಮಾಂಡಫಲದಿನೊಂದಱಿಂಸೂಕ್ಷ್ಮಬಿಲಂಬೂಳ್ದನರರೆ ಪಂಡಿತ ರಾಯಂ ॥ [೧೬*] ತಿಂಬೆಂ ರಾಯನನೆಂದು ನೆಲಂ ಬಾಯ್ವಿಡೆ ತಂನ ಮಂತ್ರ ಜಪವಿಧಿಯಿನದಂ ಕುಂಬಳಕಾಯಿಂ ಪೂಳ್ದು ಜಸಂ-

೬೭. ಬಡೆದೆಸಕಕ್ಕೆ ಪಂಡಿತಾರ್ಯ್ಯನೆ ನೋಂತಂ ॥ [೧೭*] ಇಂತು ನೆಲವಾಯಂ ಪೂಳ್ದು ರಾಯನಂ ರಕ್ಷಿಸಿ ಶ್ರೀಮದ್ರಾಯರಾಜಗುರು ಮಂಡಲಾಚಾರ್ಯ್ಯನುಂ ಮಹಾವಾದವಾದೀಶ್ವರನುಂ ರಾಯವಾದಿಪಿತಾಮ-

೬೮. ಹನುಂ । ಸಕಲವಿದ್ವಜ್ಜನಚಕ್ರವರ್ತ್ತಿಯುಂ । ಬಲ್ಲಾಳರಾಯ ಜೀವರಕ್ಷಾ ಪಾಲಕನುಂ। ದೇಶೀಗಣಾಗ್ರಗಣ್ಯನುಮೆಂಬ ಬಿರುದಾವಲಿಯಂ ಪಡೆದು ಕೀರ್ತ್ತಿ ವಡೆದು ನಡೆದನಾತನ ಶಿಷ್ಯಪರಂಪರೆಯೊಳ್ ॥

೬೯. ಶ್ರುತಕೀರ್ತ್ತಿದೇವನತ್ಯೂರ್ಜ್ಜಿತಕೀರ್ತ್ತಿಕನಾತ್ಮಶಿಷ್ಯನಿಂದಗ್ಗಳನಿಂದ ತಿಳಿಯಿತ ಕಾವ್ಯಮಾರ್ಗ್ಗದೆ ನುತ ಚಂದ್ರಪ್ರಭಪುರಾಣಮಂ ಪೇಳಿಸಿದಂ ॥ [೧೮*] ಆತನ ಶಿಷ್ಯನಪ್ಪ ವಿಜಯಕೀರ್ತ್ತಿ[ಮುನೀಶ್ವರನ ಪ್ರ]ಭಾವಮೆಂತೆನೆ ॥

೭೦. ವರ ವಿಜಯಕೀರ್ತ್ತಿ ಯೋಗೀಶ್ವರನೇಳ್ಗಿಗೆ ಮೆಚ್ಚಿ ತಂನ ವೈದಿಕಮತಮಂ ಪರಿಹರಿಸಿ ಜೈನಮತಮಂ ಧರಿಸಿದನಿರದಭಯಚಂದ್ರಸೂರಿವರೇಣ್ಯಂ ॥ [೧೯*] ಮತ್ತಮಾ ವಿಜಯಕೀರ್ತ್ತಿ ಮುನೀಶ್ವರಂ ಸಂಗೀತಪುರಾ-

೭೧. ಧಿಪನಪ್ಪಿಂದ್ರಭೂಪಾಲಂಗೆ ಸಾಮ್ರಾಜ್ಯಪ್ರದನಾಗಿ ಪ್ರಸಿದ್ಧಿವೆತ್ತನಾತನ ಶಿಷ್ಯಂ ಶ್ರುತಕೀರ್ತ್ತಿದೇವನಖಿಲಶ್ರುತವಿಶ್ರುತನಾಗಿ ನೆಗಳ್ತೆವಡೆದಾತ್ಮಶಿಷ್ಯನಪ್ಪ ಸಂಗಿ ರಾಯ [ಭೂಪಾಲನಂ] ಪ್ರತಿಷ್ಠಿ-

೧ 'ಶೊ' ಅಕ್ಷರವನ್ನು ಸಾಲಿನ ಮೇಲ್ಭಾಗದಲ್ಲಿ ಚಿಕ್ಕದಾಗಿ ಕಂಡರಿಸಲಾಗಿದೆ.
೨ 'ಲ' ಅಕ್ಷರವನ್ನು ಸಾಲಿನ ಮೇಲ್ಭಾಗದಲ್ಲಿ ಸಣ್ಣದಾಗಿ ಕಂಡರಿಸಲಾಗಿದೆ.

೭೨. ಸಿದನಾತನ ಶಿಷ್ಯಂ ವಿಜಯಕೀರ್ತ್ತಿಮುನೀಶ್ವರನಾತ್ಮೀಯ ಶಿಷ್ಯನಾದ ದೇವ ರಾಯಭೂಪಾಲಂಗೆ ಪಶ್ಚಿಮಸಮುದ್ರನಿಕಟದೊಳ್ಕಟ್ಟಿಕಳಮೆಂಬ ಪಟ್ಟಣಮನ ನೇಕ ವಾಸ್ತು[ಲಕ್ಷಣಲಕ್ಷಿತ] ಮಾಗಿ ಕಟ್ಟಿ-

೭೩. ಸಿ ಲಬ್ಧಪ್ರತಿಷ್ಠನಾದನಾತನ ಶಿಷ್ಯರಕಲಂಕಮುನೀಶ್ವರನುಂ ಚಂದ್ರಪ್ರಭ ಮುನೀಶ್ವರನುಮೆಂಬಿರ್ವ್ವರು ಕಲಿಯುಗದೊಳ್ಚಾರಣಯುಗಲದಂತೆ ನಿರತಿಚಾರ ಚಾರಿತ್ರ[ರಾಗಿ ಶ್ವೇತಪುರದೊ]ಳ್ತಿಂಮ-

೭೪. ಭೂಪಾಲನುಂ ನರಸಿಂಹಭೂಪಾಲನುಮೆಂಬಿರ್ವ್ವರುಂ ಶಿಷ್ಯರ್ಗ್ಗಂ ಪರಮ ಧರ್ಮ್ಮರಹಸ್ಯೋಪದೇಶಂಗೆಯ್ದು ಚಂದ್ರಸೂರ್ಯ್ಯರಂತೆ ಜಿನಮಾರ್ಗ್ಗಮಂ ಬೆಳಗಿದವರ[ರೊಳಕಲಂಕಮುನೀ]ಶ್ವರ-

೭೫. ನ ಶಿಷ್ಯಂ ವಿಜಯಕೀರ್ತ್ತಿಮುನೀಶ್ವರಂ ಸಕಲದೇಶದೊಳಂ ಸದ್ಧರ್ಮ್ಮಪ್ರಭಾವಕ ನಾದನಾತನ ಶಿಷ್ಯನಕಲಂಕದೇವಯೋಗೀಂದ್ರಂ ಸ್ವಮತಪರಮತ ಪ್ರಸಿದ್ಧ ಸಕಲಭೂಪಾಲ [ಪೂಜಿತ ಪಾ]ದಾರವಿಂದ-

೭೬. ನಾಗಿ ಜಿನಶಾಸನಪ್ರಭಾವಕನಾದನೆಂತೆನೆ ॥ ಲೌಕಿಕಕಲಾವಿದಗ್ಧಂ ಲೋಕೋತ್ತರ ನಿರತಿಶಯಚರಿತ್ರಸ್ನಿಗ್ಧಂ ವ್ಯಾಕೀರ್ಣ್ಣಯಶೋದಿಗ್ಧಂ ಶ್ರೀಕರಜಿನಗದಿತತತ್ವ ಗತಸಂದಿಗ್ಧಂ ॥ [೨೦*] [ಮತ್ತಂ ಶಿಷ್ಯಾನು]ಗ್ರಹಗಣ-

೭೭. ಪೋಷಣಪ್ರವಚನವಾತ್ಸಲ್ಯಾದಿಗುಣಂಗಳಿನಾಚಾರ್ಯ್ಯಪದವಿಧುರಂಧರನಾಗಿ ಪ್ರ ಸಿದ್ಧಿವೆತ್ತಂ ॥ ಆತನ ಶಿಷ್ಯಂ ಸಕಲಕಲಾತತವೈದುಷ್ಯನಖಿಲಗುಣಗಣಭೂಷ್ಯಂ ಸಾ[ತಿಶಯಚರಿತ]ಪೋಷ್ಯಂ

೭೮. ಖ್ಯಾತಂ ಭಟ್ಟಾಕಲಂಕನನುಪಮ ಭಾಷ್ಯಂ॥ [೨೧*] ಶ್ರೀರಂಗರಾಜ ನೃಪತಿ ಪ್ರೇರಣೆಯಿಂ ವಿಜಯಮುನಿಪನುಪದೇಶದಿಂ ಸಾರತ್ರಿತಯಮುಮಲಂಕಾರ ತ್ರಿತಯಮುಮನೋದಿ ಜ[ಸಮಂ ಪಡೆ]ದಂ ॥ [೨೨*] ಸ್ವ-

೭೯. ಪರಮತಗ್ರಂಥಂಗಳೊಳಪರಿಮಿತಂ ಪಠನಪಾಠನಾಭ್ಯಾಸದಿಂ ನೃಪಸಭೆಯೊ ಳ್ಬುಧಸಭೆಯೊಳ್ ಸುಪರೀಕ್ಷಾಹೃದಯಹಾರಿಯೆನಿಸಿದನಿಳೆಯೊಳ್ ॥ [೨೩*]ವರ [ಶಬ್ದಾಗಮತರ್ಕ್ಕ]ನಾಟಕ-

೮೦. ಮಹಾಲಂಕಾರಸತ್ಸಂಹಿತಾಭರತಜ್ಯೋತಿಮಂತ್ರತಂತ್ರವಿಧಿಶಿಲ್ಪನ್ಯಾಯವೇದ ಸ್ಮೃತಿಪುಷ್ಕರದಧ್ಯಾತ್ಮಪುರಾಣವೈದ್ಯಗೀತಧ್ಯಾನಾದಿಶಾಸ್ತ್ರಾಬ್ಧಿ ಚಂದಿರನೆಂದು [ರ್ವ್ವರೆ ಕೂ]ರ್ತ್ತು ಕೀರ್ತ್ತಿಸು-

೮೧. ವುದೀ ಭಟ್ಟಾಕಲಂಕಾರ್ಯ್ಯನಂ ॥ [೨೪*] ಶ್ರೀಮಜ್ಜೈನಮತಾಬ್ಧಿಸೋಮ ನೆನಿಪೀ ಘಂಟೇಂದ್ರನುಂ ಸದ್ಗುಣಪ್ರೇಮ ಶ್ರೀಯಕಲಂಕದೇವಮುನಿಯುಂ ತಚ್ಛಿಷ್ಯನುದ್ಯದ್ಬುಧಸ್ತೋಮಾರಾಧಿತ ಪಾ-

೮೨. ದಪದ್ಮನೆನಿಪೀ ಭಟ್ಟಾಕಲಂಕಾರ್ಯ್ಯನುಂ ಕ್ಷೇಮಮಂ ಬಾಳ್ಕೆ ಧರಿತ್ರಿಗಕ್ಕೆ ವಿಜಯಂ ಭದ್ರಂ ಶುಭಂ ಮಂಗಲಂ ॥ [೨೫*] ವರಸಂಸ್ಕೃತಕರ್ನಾಟಕವೆರಡಱೊಳಂ ಗದ್ಯಪದ್ಯವಾಙ್ಮಯಮಾಲಾ-

೮೩. ವಿರಚನೆಯಿಂದೀ ಶಾಸನವೆರಡಂ ಭಟ್ಟಾಕಲಂಕಯತಿ ಬರಯಿಸಿದಂ ॥ [೨೬*] ಸ್ವಸ್ತಿ ಶ್ರೀಜಯಾಭ್ಯುದಯ ಶಾಲಿವಾಹನಶಕವರುಷ ೧೫೧೫ ನೆಯ ನಂದನ ಸಂವತ್ಸರದ ಮಾಘ ಶು ೫ ಲ್ಲೂ ಶ್ರೀ–

೮೪. ಮದ್ಭಟ್ಟಾಕಲಂಕದೇವರುಗಳು ಬರಸಿ ಸಂಪೂರ್ಣ್ಣಂ ಮಾಡಿಸಿದ ಜಿನಶಾಸನಕ್ಕೆ ಮಂಗಲ ಮಹಾಶ್ರೀ ಶ್ರೀ ಶ್ರೀ ಶ್ರೀ ಶ್ರೀ [॥*]

■ ■

# ಕರ್ನಾಟಕದಲ್ಲಿ ಗೊಮ್ಮಟನ ಮೂರ್ತಿಶಿಲ್ಪ

ಸಿಂದಿಗಿ ರಾಜಶೇಖರ

ದಕ್ಷಿಣಭಾರತದ ಜೈನಶಿಲ್ಪದಲ್ಲಿ ಬಾಹುಬಲಿಮೂರ್ತಿಯ ಕಂಡರಣೆ ಹಾಗೂ ಪ್ರತಿಷ್ಠಾಪನೆಗಳು ಪ್ರಾಚೀನವಾಗಿರುವಂತೆ ಆ ಮೂರ್ತಿಯ ಅರ್ಚನೆಯೂ ಪ್ರಚಲಿತವಿದ್ದ ಬಗ್ಗೆ ಆಧಾರಗಳಿವೆ. ಪಶ್ಚಿಮ ಮತ್ತು ದಕ್ಷಿಣ ಭಾರತದ ಗುಹೆಗಳಲ್ಲಿ ಈ ಕೇವಲಿಯ ಶಿಲ್ಪಗಳು ಸಾಮಾನ್ಯವಾಗಿ ಕಂಡುಬರುತ್ತವೆ. ಗಂಗ ದೊರೆಗಳಾದ ಮಾರಸಿಂಹ ರಾಚಮಲ್ಲರ ಪ್ರಧಾನಿ ಚಾವುಂಡರಾಯನು ಶ್ರವಣಬೆಳ್ಗೊಳದಲ್ಲಿ ಕ್ರಿ. ಶ. ೯೮೩ ರಲ್ಲಿ ಗೊಮ್ಮಟನ ವಿಗ್ರಹ ಪ್ರತಿಷ್ಠೆಮಾಡುವ ಪೂರ್ವದಲ್ಲಿಯೇ, ಕರ್ನಾಟಕದಲ್ಲಿ ಬಾಹುಬಲಿ ಮೂರ್ತಿಯ ಕಲ್ಪನೆ ಹಾಗೂ ಶಿಲ್ಪಗಳು ಕಂಡುಬರುತ್ತವೆ. ಕರ್ನಾಟಕದಲ್ಲಿ ಸುಮಾರು ೬ನೆಯ ಶತಮಾನದ ಕೊನೆಯ ಭಾಗದಿಂದ ಮೊದಲ್ಗೊಂಡು, ಬಾಹುಬಲಿಯ ಮೂರ್ತಿಗಳು ಕಾಣಬರುತ್ತವೆ. ಕರ್ನಾಟಕದಲ್ಲಿಯೇ ಅತ್ಯಂತ ಪ್ರಾಚೀನವಾದ ಬಾಹುಬಲಿಯ ಮೂರ್ತಿಯನ್ನು ಕಟೆದ ಶ್ರೇಯಸ್ಸು ಬಾದಾಮಿ ಚಾಳುಕ್ಯರ ಕಾಲದ ಶಿಲ್ಪಿಗಳಿಗೆ ಸಲ್ಲುತ್ತದೆ. ಅಲ್ಲಿಂದ ಮುಂದೆ ಅವನ ಮೂರ್ತಿಗಳನ್ನು ಜೈನಗುಹೆ, ಬಸದಿ ಮತ್ತು ಬಂಡೆಗಲ್ಲುಗಳಲ್ಲಿ ಕೊರೆಯುವ ಪದ್ಧತಿ ಆರಂಭವಾಯಿತು. ಬಾದಾಮಿ ಚಾಳುಕ್ಯ ಹಾಗೂ ರಾಷ್ಟ್ರಕೂಟರ ಕಾಲಗಳಲ್ಲಿ ಉಬ್ಬುಶಿಲ್ಪಗಳನ್ನು ಕೊರೆಯಲಾದರೆ, ಗಂಗರ ಕಾಲದಿಂದ ಅಂದರೆ ಹತ್ತನೆಯ ಶತಮಾನದ ಅಂತ್ಯಭಾಗದಿಂದ ಅಖಂಡಶಿಲಾಮೂರ್ತಿಗಳನ್ನು ಕಟೆಯುವ ಸಂಪ್ರದಾಯ ಆರಂಭವಾಗಿ ಇಪ್ಪತ್ತನೆಯ ಶತಮಾನದಲ್ಲೂ ಮುಂದುವರೆದಿದೆ.

ಕದಂಬ ರವಿವರ್ಮನ ಗುಡ್ನಾಪುರ ಶಾಸನದಲ್ಲಿ ಕಾಮಜಿನಾಲಯದ ಉಲ್ಲೇಖವಿದೆ.[1] ಆದರೆ ಈ ಜಿನಾಲಯದಲ್ಲಿ ಪ್ರತಿಷ್ಠಾಪಿಸಲಾಗಿದ್ದ ಬಾಹುಬಲಿಯ ವಿಗ್ರಹ ಲಭ್ಯವಿಲ್ಲ.

---

೧ ಶ್ರೀಕಣ್ಠಿಕಾ, ಮೈಸೂರು. ೧೯೭೩, ಪು. ೬೧–೭೨.

ಆದ್ದರಿಂದ ಕರ್ನಾಟಕದ ಬಾಹುಬಲಿಯ ಶಿಲ್ಪದ ಅಭ್ಯಾಸವನ್ನು ನಾವು ಬಾದಾಮಿ ಮತ್ತು ಐಹೊಳೆಯ ಗುಹಾಲಯಗಳಿಂದಲೇ ಆರಂಭಿಸಬೇಕಾಗುತ್ತದೆ.

ಜೈನಪುರಾಣಗಳ ಪ್ರಕಾರ, ಮೊದಲನೆಯ ತೀರ್ಥಂಕರ ವೃಷಭನಾಥನ ಮಕ್ಕಳಲ್ಲಿ ಭರತ ಬಾಹುಬಲಿಗಳು ಇಬ್ಬರು. ಭರತನ ದಿಗ್ವಿಜಯ ಸಮಯದಲ್ಲಿ ಸಹೋದರರೊಳಗೆ ಕದನವಾಗಿ, ಭರತನು ಜಲ, ಮಲ್ಲ, ದೃಷ್ಟಿಯುದ್ಧಗಳಲ್ಲಿ ಸೋತು ಸ್ಫುರದ್ರೂಪಿಯಾದ ಬಾಹುಬಲಿ ಜಯಗಳಿಸಿದ. ಜಯದ ಅಮಲಿನಲ್ಲಿದ್ದಾಗಲೇ ಅವನಿಗೆ ಪ್ರಾಪಂಚಿಕ ಸುಖ, ಭೋಗಗಳು ಕ್ಷಣಿಕವೆಂಬ ಅರಿವು ಮೂಡಿ ಎಲ್ಲವನ್ನು ತ್ಯಜಿಸಿ ದಿಗಂಬರನಾಗಿ, ಕಾಯೋತ್ಸರ್ಗಭಂಗಿಯಲ್ಲಿ ಧ್ಯಾನಾಸಕ್ತನಾದ. ಬಂಧುಬಳಗದವರ ವಿನಂತಿಗಳನ್ನು ಮನ್ನಿಸದೆ ನೈಸರ್ಗಿಕ ಕಷ್ಟಗಳನ್ನು ಕಡೆಗಣಿಸಿ ಕೇವಲಜ್ಞಾನವನ್ನು ಪಡೆಯಲು ಹಂಬಲಿಸಿ, ವಿಚಲಿತನಾಗದೆ, ವಿಮುಖನಾಗದೆ ತಪಸ್ಥಿತನಾದ. ಕಾಲಾನುಕ್ರಮದಲ್ಲಿ ಮಾಧವೀಬಳ್ಳಿಗಳು ಅವನ ಕೈಕಾಲುಗಳಿಗೆ ಸುತ್ತಿಕೊಂಡವು. ಹುತ್ತಗಳು ಹುಟ್ಟಿಕೊಂಡವು. ಕಾಲಬಳಿ ಸರ್ಪಗಳು ಸುಳಿದಾಡತೊಡಗಿದವು. ಇವಾವನ್ನೂ ಗಣನೆಗೆ ತಂದುಕೊಳ್ಳದೆ, ಕೇವಲಜ್ಞಾನವನ್ನು ಪಡೆದು ಕೊನೆಗೆ ಕೇವಲಿಯಾದ.

ಚಾಳುಕ್ಯ ರೂವಾರಿಗಳು ಗೊಮ್ಮಟನ ಮೂರ್ತಿಗಳನ್ನು ಕೊರೆಯುವಾಗ, ಬಾಹುಬಲಿಯ ಮೇಲ್ಕಾಣಿಸಿದ ವಿವರಗಳನ್ನು ಆಧಾರವಾಗಿಟ್ಟುಕೊಂಡರು. ಬಾದಾಮಿ, ಐಹೊಳೆಗಳಲ್ಲಿ ಕೊರೆಯಲಾದ ಬಾಹುಬಲಿಯ ಶಿಲ್ಪಗಳು ಅನಂತರ ಕೊರೆದ ಬಾಹುಬಲಿಯ ವಿಗ್ರಹಗಳ ಮೇಲೆ ಅಚ್ಚಳಿಯದ ಪ್ರಭಾವ ಬೀರಿದವು. ಅವುಗಳನ್ನು ಕಟೆಯುವಾಗ ಈ ಶಿಲ್ಪಗಳಲ್ಲಿ ಕಂಡುಬರುವ ಮೂರ್ತಿಲಕ್ಷಣಗಳನ್ನು ಅಳವಡಿಸಿಕೊಳ್ಳಲಾಯಿತು.

ಬಾದಾಮಿ ಚಾಳುಕ್ಯರ ಕಾಲದ ಎರಡು ಬಾಹುಬಲಿಯ ಮೂರ್ತಿಗಳಲ್ಲಿ ಒಂದನ್ನು ಐಹೊಳೆಯ ಜೈನಗುಹೆಯಲ್ಲಿ ಕೊರೆಯಲಾಗಿದೆ.[೨] ಮೀನಬಸದಿ ಎಂದು ಕರೆಯಲ್ಪಡುವ ಈ ಗುಹೆಯ ವರಾಂಡದ ಗೋಡೆಯ ಮೇಲೆ ಪಾರ್ಶ್ವನಾಥ ಹಾಗೂ ಬಾಹುಬಲಿಯ ಮೂರ್ತಿಗಳಿವೆ. ಬಾಹುಬಲಿಯ ಶಿಲ್ಪ ಸುಮಾರು ೫ ಅಡಿ, ೧೦ ಅಂಗುಲ ಎತ್ತರವಿದೆ. ಪೊದೆಗಳ ಮಧ್ಯೆ ಪೀಠದ ಮೇಲೆ ಕಾಯೋತ್ಸರ್ಗಭಂಗಿಯಲ್ಲಿರುವ ಈ ಮೂರ್ತಿಯ ಕೈಕಾಲುಗಳಿಗೆ ಮಾಧವೀಬಳ್ಳಿ ಸುತ್ತಿಕೊಂಡಿದೆ. ಕಾಲುಗಳ ಬಳಿ ಸರ್ಪಗಳು ಸುಳಿದಾಡುತ್ತಿವೆ. ಅಕ್ಕಪಕ್ಕದಲ್ಲಿ ಬ್ರಾಹ್ಮೀ ಮತ್ತು ಸೌಂದರಿಯರಿದ್ದಾರೆ. ಜೈನಪುರಾಣಗಳು ಬಾಹುಬಲಿಯು ಧ್ಯಾನಾಸಕ್ತನಾದಾಗ, ಅವನ ಮೈಮೇಲೆ ಹರಡಿದ ಮಾಧವೀಬಳ್ಳಿಯನ್ನು ಬ್ರಾಹ್ಮೀ ಮತ್ತು ಸೌಂದರಿಯರು ಕಿತ್ತೊಗೆಯುತ್ತ ಅವನ ಸೇವೆಯಲ್ಲಿ ನಿರತರಾಗಿದ್ದರೆಂದು ತಿಳಿಸುತ್ತವೆ. ಬಾಹುಬಲಿಯ ಮೇಲ್ಭಾಗದಲ್ಲಿ ಗಂಧರ್ವರು ಆಕಾಶದಲ್ಲಿ

೨ ಎ ಸ್ಟಡಿ ಆಫ್ ಐಹೊಳೆ ಟೆಂಪಲ್ಸ್, ಎಸ್. ರಾಜಶೇಖರ (ಪಿಎಚ್.ಡಿ. ಪ್ರಬಂಧ, ಕರ್ನಾಟಕ ವಿಶ್ವವಿದ್ಯಾಲಯ, ೧೯೭೫.), ಪು. ೩೯೫–೩೯೬.

ಹಾರಾಡುತ್ತಿದ್ದಾರೆ. ಇಲ್ಲಿ ಗೊಮ್ಮಟನ ಶಿಲ್ಪಕ್ಕಿಂತ, ಬ್ರಾಹ್ಮೀ–ಸೌಂದರಿಯರ ಶಿಲ್ಪಗಳನ್ನು ಆಕರ್ಷಕವಾಗಿ ಕೆತ್ತಲಾಗಿದೆ.

ಬಾದಾಮಿಯ ನಾಲ್ಕನೆಯ ಗುಹೆ ಜೈನಸಂಪ್ರದಾಯಕ್ಕೆ ಸೇರಿದುದು. ಇಲ್ಲಿಯೂ ಐಹೊಳೆಯಂತೆಯೇ ಪಾರ್ಶ್ವನಾಥ ಮತ್ತು ಬಾಹುಬಲಿಗಳ ಮೂರ್ತಿಗಳನ್ನು ವರಾಂಡದ ಗೋಡೆಯ ಮೇಲೆ ಕೆತ್ತಿದ್ದಾರೆ. ಇಲ್ಲಿಯ ಬಾಹುಬಲಿಯ ಶಿಲ್ಪದಲ್ಲಿ ಐಹೊಳೆಯ ಶಿಲ್ಪಕ್ಕಿಂತ ಉತ್ತಮವಾದ ಕಲ್ಪನೆ ಮತ್ತು ಸ್ಫುಟವಾದ ಕೆತ್ತುವಿಕೆಯನ್ನು ಕಾಣಬಹುದು.[೩] ಈ ಮೂರ್ತಿ ೭ ಅಡಿ, ೮ ಅಂಗುಲ ಎತ್ತರವಿದೆ. ಕಾಯೋತ್ಸರ್ಗದಲ್ಲಿ ನಿಂತಿರುವ ಬಾಹುಬಲಿಯ ಕೈಕಾಲುಗಳಿಗೆ ಬಳ್ಳಿಗಳು ತೊಡರಿವೆ. ಕಾಲಬಳಿ ಸರ್ಪಗಳು ಬುಸುಗುಡುತ್ತಲಿವೆ. ಅಕ್ಕಪಕ್ಕದಲ್ಲಿ ಬ್ರಾಹ್ಮೀ–ಸೌಂದರಿಯರು ಮತ್ತು ಇನ್ನಿಬ್ಬರು ಕನ್ನಿಕೆಯರು ಅಂಜಲೀಬದ್ಧರಾಗಿ ಪೂಜಿಸುತ್ತಿದ್ದಾರೆ. ಬ್ರಾಹ್ಮೀ–ಸೌಂದರಿಯರು ನಿಂತಿದ್ದರೆ, ಉಳಿದಿಬ್ಬರು ಅವನ ಪಾದಗಳ ಬಳಿ ಕುಳಿತಿದ್ದಾರೆ. ಇಲ್ಲಿಯ ಬ್ರಾಹ್ಮೀ–ಸೌಂದರಿಯರ ಶಿಲ್ಪಗಳು ಐಹೊಳೆಯ ಶಿಲ್ಪಗಳಿಗಿಂತ ಸೌಂದರ್ಯದಲ್ಲಿ ಕೆಳಮಟ್ಟದವಾಗಿವೆ. ನೀಳಕೇಶರಾಶಿಗಳಿಂದ ಅಲಂಕೃತನಾದ ಬಾಹುಬಲಿಮೂರ್ತಿಯು ಸೌಂದರ್ಯದಲ್ಲಿ, ಘನತೆಯಲ್ಲಿ ಐಹೊಳೆಯ ಶಿಲ್ಪವನ್ನು ಮೀರಿಸುತ್ತದೆ.

ಈ ಎರಡೂ ಶಿಲ್ಪಗಳು ಆರನೆಯ ಶತಮಾನದ ಅಂತ್ಯಭಾಗಕ್ಕೆ ಸೇರಿದವುಗಳು. ಆದುದರಿಂದ ಕರ್ನಾಟಕದಲ್ಲಿ ಆರನೆಯ ಶತಮಾನದ ಹೊತ್ತಿಗಾಗಲೇ ಬಾಹುಬಲಿಯ ಮೂರ್ತಿಯನ್ನು ಕಟೆಯುವ, ಪೂಜಿಸುವ ಪದ್ಧತಿ ಜನಪ್ರಿಯವಾಗಿತ್ತೆಂದು ಹೇಳಬಹುದು.

ಬಾದಾಮಿಚಾಳುಕ್ಯರ ಈ ಶಿಲ್ಪಗಳು, ಬಾಹುಬಲಿ ಮೂರ್ತಿಯ ಬಹುತೇಕ ಲಕ್ಷಣಗಳನ್ನು ಪ್ರಮಾಣಬದ್ಧ ಮಾಡಿದವು. ಇವಾವೆಂದರೆ– ಬಾಹುಬಲಿಯು ಕಾಯೋತ್ಸರ್ಗದಲ್ಲಿ ನಿಂತಿರುವ ಭಂಗಿ; ಅವನ ಕೈಕಾಲುಗಳಿಗೆ ಮಾಧವೀ ಬಳ್ಳಿಯು ಸುತ್ತಿಕೊಂಡಿರುವುದು; ಕಾಲಬಳಿ ಹುತ್ತಗಳು; ಸುಳಿದಾಡುವ, ಬುಸುಗುಡುತ್ತಿರುವ ಸರ್ಪಗಳು; ಮತ್ತು ಅಕ್ಕಪಕ್ಕದಲ್ಲಿ ಬ್ರಾಹ್ಮೀ–ಸೌಂದರಿಯರು. ಈ ಎಲ್ಲಾ ಮೂರ್ತಿಲಕ್ಷಣಗಳನ್ನು ಅನಂತರ ಕೊರೆಯಲಾದ ಮೂರ್ತಿಗಳಲ್ಲಿ ಅಳವಡಿಸಿಕೊಳ್ಳಲಾಯಿತು.

ರಾಷ್ಟ್ರಕೂಟರ ಕಾಲದಲ್ಲಿ ಚಾಳುಕ್ಯರ ಶಿಲ್ಪಗಳನ್ನೇ ಹೋಲುವ ಬಾಹುಬಲಿಯ ಮೂರ್ತಿಗಳನ್ನೇ ಕೆತ್ತಲಾಯಿತು. ಆದರೂ ಈ ಮೂರ್ತಿಗಳನ್ನು ಹೆಚ್ಚು ವಿವರವಾಗಿ ಕೆತ್ತಲಾಗಿದೆ. ಉದಾಹರಣೆಗೆ ಎಲ್ಲೋರಾದ ೩೨ನೆಯ ಗುಹೆಯಲ್ಲಿ ಬಾಹುಬಲಿಯ ಮೂರ್ತಿಯನ್ನು ವಿವರವಾಗಿ ಕಟೆಯಲಾಗಿದ್ದು, ಗಂಧರ್ವ ದಂಪತಿಗಳೂ ವಾದ್ಯ

೩ ಜೈನ ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್, ಸಂಪುಟ ೧, ಎ. ಘೋಷ್ (ಸಂ). ನವದೆಹಲಿ, ೧೯೭೪, ಚಿತ್ರ ೧೧೪A.

ಮೇಳದವರೂ ಇರುವರು[೪]. ಮಾಧವೀಬಳ್ಳಿಯನ್ನು ಸುರುಳಿಸುರುಳಿಯಾಗಿ ಬಾಹುಬಲಿಯ ಅಕ್ಕಪಕ್ಕದಲ್ಲಿ ಅಲಂಕೃತವಾಗುವಂತೆ ಕೊರೆಯಲಾಗಿದೆ. ಇಲ್ಲಿಯೂ ಬಾಹುಬಲಿ ನೀಳವಾದ ಕೇಶರಾಶಿ ಹೊಂದಿದ್ದಾನೆ. ಬ್ರಾಹ್ಮೀ—ಸೌಂದರಿಯರು ಮಾಧವೀಬಳ್ಳಿಯನ್ನು ಕೈಯಲ್ಲಿ ಹಿಡಿದಿರುವುದು ಗಮನಾರ್ಹ.

ಕರ್ನಾಟಕದಲ್ಲಿ ರಾಷ್ಟ್ರಕೂಟರ ಕಾಲದ ಬಾಹುಬಲಿಯ ಶಿಲ್ಪಗಳಲ್ಲಿ ವಿಜಾಪುರ ಜಿಲ್ಲೆಯ ಹಳ್ಳೂರಿನ ಮೇಗುಡಿಯ ಗೋಡೆಗಳ ಮೇಲೆ ಕೆತ್ತಿದ ಮೂರ್ತಿಗಳು ಪ್ರಮುಖವಾದವು.[೫] ಹಳ್ಳೂರು, ಬಾಗಲಕೋಟೆಗೆ ಸುಮಾರು ಹತ್ತುಮೈಲು ದೂರದಲ್ಲಿದೆ. ಇಲ್ಲಿಯ ಜೈನಬಸದಿ ಎಂಟನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಾಣವಾಗಿದ್ದು ದೇವಾಲಯದ ಹೊರಗೋಡೆಗಳ ಮೇಲೆ ಎಂಟು ಮೂರ್ತಿಗಳನ್ನು ಕೊರೆಯಲಾಗಿದೆ. ಅವುಗಳಲ್ಲಿ ನಾಲ್ಕು ಪಾರ್ಶ್ವನಾಥನವು. ಉಳಿದವು ಬಾಹುಬಲಿಯವು. ಈ ಮೂರ್ತಿಗಳಲ್ಲಿ ಬಾಹುಬಲಿಯು ಕಾಯೋತ್ಸರ್ಗದಲ್ಲಿ ನಿಂತಿದ್ದು, ಕೈ ಕಾಲುಗಳಿಗೆ ಮಾಧವೀಲತೆ ತೊಡರಿಕೊಂಡಿರುವ ಜೊತೆಗೆ ಅವನ ಹಿಂದೆ ಈ ಲತೆ ಅಡ್ಡಗಲವಾಗಿ ಹರಡಿದೆ. ಅಂಡಾಕಾರದ ಮುಖ, ಉದ್ದವಾದ ಕಿವಿಗಳು ಮತ್ತು ಭುಜಗಳ ಮೇಲೆ ಪಸರಿಸಿದ ನೀಳಕೇಶರಾಶಿ ಎದ್ದು ಕಾಣುತ್ತಿವೆ. ಎಡ, ಬಲಗಳಲ್ಲಿ ಸರ್ಪಗಳನ್ನು ಕೊರೆಯಲಾಗಿದೆ. ಈ ಸರ್ಪಗಳನ್ನು ಕೊರೆದ ರೀತಿ ಬಾದಾಮಿಚಾಳುಕ್ಯರ ಶಿಲ್ಪಗಳ ಪ್ರಭಾವವನ್ನು ಎತ್ತಿ ತೋರುತ್ತದೆ.

ದಕ್ಷಿಣಭಾರತದಲ್ಲಿ ಎಂಟು, ಒಂಬತ್ತನೆಯ ಶತಮಾನಗಳಲ್ಲಿ ಬಾಹುಬಲಿಯ ಮೂರ್ತಿ ಲಕ್ಷಣದಲ್ಲಿ ಪ್ರಮುಖವಾದ ಬದಲಾವಣೆಯಾಗುವದನ್ನು ನಾವು ಕಾಣಬಹುದು. ನೀಳವಾದ ಕೇಶರಾಶಿ ಭುಜಗಳ ಮೇಲೆ ಬಿದ್ದಿರುವುದು, ಬಾದಾಮಿ ಚಾಳುಕ್ಯರ ಮತ್ತು ರಾಷ್ಟ್ರಕೂಟರ ಕಾಲದ ಕೆಲವು ಮೂರ್ತಿಗಳಲ್ಲಿ ಸರ್ವಸಾಮಾನ್ಯ. ಆದರೆ ಎಂಟನೆಯ ಶತಮಾನದಲ್ಲಿ ಕರ್ನಾಟಕ ಹಾಗೂ ತಮಿಳುನಾಡುಗಳಲ್ಲಿ ನೀಳಕೇಶರಾಶಿಯ ಬದಲು ಬಾಹುಬಲಿಗೆ ಗುಂಗುರುಕೂದಲು ಕಟೆಯುವ ಸಂಪ್ರದಾಯ ಆರಂಭವಾಯಿತು. ಉದಾಹರಣೆಗೆ, ಉತ್ತರ ಆರ್ಕಾಟ ಜಿಲ್ಲೆಯ ತಿರುಮಲೈನ ನೇಮಿನಾಥ ದೇವಾಲಯದ ಒಳಭಾಗದಲ್ಲಿ ಬಂಡೆಕಲ್ಲಮೇಲೆ ಕೊರೆದ ಎಂಟನೆಯ ಶತಮಾನದ ಬಾಹುಬಲಿಗೆ ಗುಂಗುರು ಕೂದಲಿವೆ.[೬] ಅದೇರೀತಿ ದಕ್ಷಿಣ ಆರ್ಕಾಟ ಜಿಲ್ಲೆಯ ಚಿತ್ತಮೂರ್‌ನಲ್ಲಿಯ ಬಂಡೆಯೊಂದರ ಮೇಲೆ ಕೊರೆಯಲಾದ ಬಾಹುಬಲಿ ಗುಂಗುರುಕೂದಲುಳ್ಳವನು. ಈ ಶಿಲ್ಪ ೯–೧೦ನೆಯ ಶತಮಾನದ್ದು.

೪ ಅದೇ ಚಿತ್ರ ೧೧೮B.

೫ ಆಸ್ಪೆಕ್ಟ್ಸ್ ಆಫ್ ಜೈನ ಆರ್ಟ್ ಆ್ಯಂಡ್ ಆರ್ಕಿಟೆಕ್ಚರ್, ಯು. ಪಿ. ಷಹಾ ಮತ್ತು ಎಂ. ಎ. ಧಾಕಿ (ಸಂ), ಅಹಮದಾಬಾದ್, ೧೯೭೫, ಪು. ೨೩೦. ಚಿತ್ರ ೯.

೬ ಅದೇ, ಪು. ೧೨೬, ಚಿತ್ರ ೬.

ಗಂಗರ ಕಾಲ ಜೈನಧರ್ಮದ ಇತಿಹಾಸದಲ್ಲಿ ಒಂದು ಸುವರ್ಣಯುಗ. ಈ ಕಾಲದಲ್ಲಿ ಅನೇಕ ಜೈನಬಸದಿಗಳು ನಿರ್ಮಾಣಗೊಂಡವು. ಸುಪ್ರಸಿದ್ಧ ಯತಿಗಳು, ಅರಸರು, ಮಂತ್ರಿಗಳು, ಅಧಿಕಾರಿಗಳು, ದಂಡನಾಯಕರು ಮತ್ತು ಕವಿಗಳು ಜೈನಧರ್ಮದ ಬೆಳವಣಿಗೆಗೆ ಅವಿರತವಾಗಿ ಶ್ರಮಿಸಿದರು. ಇಂಥವರಲ್ಲಿ ಗಂಗರಸರಾದ ಮಾರಸಿಂಹ ಹಾಗೂ ನಾಲ್ವಡಿ ರಾಚಮಲ್ಲರ ಮಂತ್ರಿಯೂ ದಂಡನಾಯಕನೂ ಆದ ಚಾವುಂಡ ರಾಯನು ಸುಪ್ರಸಿದ್ಧನು. ಬ್ರಹ್ಮಕ್ಷತ್ರಕುಲೋತ್ಪನ್ನನೂ ಗಂಗರಸರ ನಿಷ್ಠಾವಂತ ಸೇವಕನೂ ಅವರ ಸಾಮ್ರಾಜ್ಯದ ಆಧಾರಸ್ತಂಭನೂ ಗೋವಿಂದ ಮತ್ತು ಮುದು-ರಾಚಯ್ಯರನ್ನು ಕೊಂದ ಧೀರನೂ ಪಲ್ಲವ, ನೊಳಂಬ, ಪಾಂಡ್ಯ ಮುಂತಾದವರ ಪ್ರತಿರೋಧವನ್ನು ಹತ್ತಿಕ್ಕಿದವನೂ ರನ್ನ, ಗುಣಭದ್ರ, ಅಜಿತಸೇನ ಮೊದಲಾದವರ ಸಮಕಾಲೀನನೂ ಅವರಂತೆ ಸ್ವತಃ ಕವಿಯೂ ಚಾವುಂಡರಾಯಪುರಾಣ(ತ್ರಿಷಷ್ಟಿ ಲಕ್ಷಣ ಮಹಾಪುರಾಣ)ದ ಕರ್ತೃವೂ ಆದ ಇವನು ಸ್ಯಾದ್ವಾದದಲ್ಲಿ ಅಪಾರ ನಂಬಿಕೆಯುಳ್ಳವನು, ಅಜಿತಸೇನನ ಶಿಷ್ಯನು. ದಾನಧರ್ಮಗಳನ್ನು ನಿಷ್ಠೆಯಿಂದ ನಡೆಸಿಕೊಂಡುಬಂದ ಮಹಾತ್ಯಾಗಿ. ಈ ಚಾವುಂಡರಾಯನು ಭಾರತದ ಶಿಲ್ಪಕಲೆಗೆ ಜೈನಧರ್ಮಾಭಿವೃದ್ಧಿಗೆ ಸಂಸ್ಮರಣೀಯಸೇವೆ ಸಲ್ಲಿಸಿದ್ದಾನೆ. ಕ್ರಿ. ಶ. ೯೮೩ ರಲ್ಲಿ ಶ್ರವಣಬೆಳ್ಗೊಳದ ಇಂದ್ರಗಿರಿ ಬೆಟ್ಟದ ಅತ್ಯುನ್ನತ ತುದಿಯಲ್ಲಿ ಅಖಂಡಶಿಲೆಯೊಂದನ್ನು ಕಡೆದು ಗೊಮ್ಮಟನ ಬೃಹತ್‌ವಿಗ್ರಹವನ್ನು ಪ್ರತಿಷ್ಠಾಪಿಸಿದವನು ಇವನೇ. ಗೊಮ್ಮಟನ ಮೂರ್ತಿಯ ಪ್ರತಿಷ್ಠಾಪನಾನಂತರ ಶ್ರವಣಬೆಳ್ಗೊಳ ಕೇವಲ ಶ್ರಮಣರ ಪವಿತ್ರ ಕ್ಷೇತ್ರವಾಗುಳಿಯದೆ, ಯಾತ್ರಾಸ್ಥಳವಾಗಿಯೂ ಪರಿಣಮಿಸಿತು. ಗೊಮ್ಮಟನ ಈ ಮೂರ್ತಿ ೫೮ ಅಡಿಗಿಂತಲೂ ಹೆಚ್ಚು ಎತ್ತರವಾಗಿದೆ. ಜಗತ್ತಿನ ಸುಪ್ರಸಿದ್ಧ ಅತೀ ಎತ್ತರವಾದ ಹಾಗೂ ಅಖಂಡವಾಗಿ ಕೊರೆಯಲ್ಪಟ್ಟ ಮೂರ್ತಿಗಳಲ್ಲಿ ಇದೂ ಒಂದು. ಬೆಣಚುಕಲ್ಲಿನಲ್ಲಿ ಕೆತ್ತಲಾದ ಈ ಮೂರ್ತಿ, ಕರ್ನಾಟಕದ ಸುಪ್ರಸಿದ್ಧ ಐದು ಗೊಮ್ಮಟ ಮೂರ್ತಿಗಳಲ್ಲಿ ಅತ್ಯಂತ ಪ್ರಾಚೀನವಾದುದು, ಎಲ್ಲಕ್ಕೂ ಎತ್ತರವಾದುದು ಮತ್ತು ಸೌಂದರ್ಯದಲ್ಲಿ ಸಾಟಿ ಇಲ್ಲದುದು. ಉಳಿದ ಮೂರ್ತಿಗಳು ಗೊಮ್ಮಟಗಿರಿ, ಕಾರ್ಕಳ, ವೇಣೂರು ಮತ್ತು ಧರ್ಮಸ್ಥಳಗಳಲ್ಲಿವೆ.

ಈ ಬಾಹುಬಲಿ ಮೂರ್ತಿಯ ಅನುಪಮರೂಪಸೌಂದರ್ಯ ಮತ್ತು ಭವ್ಯತೆಯನ್ನು ಬೊಪ್ಪಣಪಂಡಿತ ಮನಂಬುಗುವ ರೀತಿಯಲ್ಲಿ ಹೀಗೆ ಬಣ್ಣಿಸಿದ್ದಾನೆ :[೭]

"ಅತಿತುಂಗಾಕೃತಿಯಾದೊಡಾಗದದರೊಳ್ ಸೌಂದರ್ಯ್ಯಮೌನ್ನತ್ಯಮುಂ
ನುತ ಸೌನ್ದರ್ಯ್ಯಮುಮಾಗೆ ಮತ್ತತಿಶಯಂತಾನಾಗದೌನ್ನತ್ಯಮುಂ
ನುತ ಸೌಂದರ್ಯ್ಯಮುಮೂರ್ಜಿತಾತಿಶಯಮುಂ ತಂನಲ್ಲಿ ನಿನ್ದಿರ್ದ್ದುವೇಂ
ಕ್ಷಿತಿಸಂಪೂಜ್ಯಮೊ ಗೊಂಮಟೇಶ್ವರ ಜಿನಶ್ರೀ ರೂಪಮಾತ್ಮೋಪಮಂ"

೭ ಎಫಿಗ್ರಾಫಿಯ ಕರ್ನಾಟಿಕಾ II, ಶ್ರವಣಬೆಳ್ಗೊಳ ೩೩೬ (೨೩೪).

"ಮಱೆದುಂ ಪಾಱದು ಮೇಲೆ ಪಕ್ಷಿನಿವಹಂ ಕಕ್ಷದ್ವಯೋದ್ದೇಶದೊ
ಳ್ಮಿಱುಗುತ್ತಂ ಪೊಱಪೊಣ್ಮುಗುಂ ಸುರಭಿಕಾಸ್ಮೀರಾರುಣಚ್ಛಾಯಮೀ
ತೆಱದಾಶ್ಚರ್ಯಮನೀ ತ್ರಿಳೋಕದ ಜನಂ ತಾನೆಯ್ದೆ ಕಂಡಿರ್ದುದಾ
ನ್ನೆಱೆವರ್ಣ್ಣಿಟ್ಟಪನೆ ಗೊಮ್ಮಟೇಶ್ವರ ಜಿನಶ್ರೀಮೂರ್ತಿಯಂ ಕೀರ್ತಿಸಲ್"

ಶ್ರವಣಬೆಳ್ಗೊಳದ ಗೊಮ್ಮಟ, ಚಾವುಂಡರಾಯ ಹಾಗೂ ಗಂಗರ ಕಾಲದ ರೂವಾರಿಗಳ ಕಲ್ಪನೆ ಮತ್ತು ಸೌಂದರ್ಯಪ್ರಜ್ಞೆಗಳಿಗೆ ಉತ್ತಮನಿದರ್ಶನವಾಗಿದೆ. ಇಲ್ಲಿಯ ಗೊಮ್ಮಟನು ಕಾಯೋತ್ಸರ್ಗದಲ್ಲಿದ್ದು, ಅವನ ಕೈ ಕಾಲುಗಳಿಗೆ ಮಾಧವೀಬಳ್ಳಿ ಸುತ್ತಿಕೊಂಡಿದೆ. ಎಡ. ಬಲಗಳಲ್ಲಿ ಸರ್ಪಗಳು ಹರಿದಾಡುತ್ತಿವೆ. ವಿಶಾಲವಾದ ಭುಜಗಳು, ಅಜಾನುಬಾಹುಗಳು, ಉದ್ದವಾದ ಕಿವಿಗಳು, ತುಂಬಿದ ಅಧರಗಳು, ಗುಂಗುರ ಕೂದಲುಗಳು, ಬೊಗಸೆಗಣ್ಣುಗಳು ಹಾಗೂ ಮಂದಸ್ಮಿತ—ಈ ಮೂರ್ತಿಯ ವಿಶಿಷ್ಟ ಲಕ್ಷಣಗಳು. ಕುತ್ತಿಗೆ ಹಾಗೂ ಹೊಕ್ಕಳದ ಕೆಳಗೆ ಮೂರುಗೆರೆಗಳು ಸ್ಪಷ್ಟವಾಗಿ ಗೋಚರಿಸುತ್ತಿವೆ. ಮುಂಭಾಗದಂತೆ, ಹಿಂಭಾಗವನ್ನು ಕೂಡ ಅಷ್ಟೇ ಸಹಜವಾಗಿ ಕೆತ್ತಲಾಗಿದೆ. ವಿಶಾಲವಾದ ಬೆನ್ನು ಅತ್ಯಂತ ಆಕರ್ಷಕ.

ಗೊಮ್ಮಟನು ಪದ್ಮಪೀಠದಲ್ಲಿ ನಿಂತಿದ್ದಾನೆ. ಸುತ್ತಲೂ ಅಭಿಷೇಕದ ನೀರು ಹರಿದು ಹೋಗಲು ದಾರಿಯಿದ್ದು ಅದು ಲಲಿತಸರೋವರದಲ್ಲಿ ಶೇಖರಿಸಲ್ಪಡುತ್ತದೆ. ಈ ಭವ್ಯ ಮೂರ್ತಿಯನ್ನು ಕಟೆದ ರೂವಾರಿಯ ಹೆಸರು ನಮಗೆ ತಿಳಿಯದು.

ಹದಿನಾಲ್ಕನೆಯ ಶತಮಾನಕ್ಕೆ ಸೇರಿದ ಗೊಮ್ಮಟನ ಮೂರ್ತಿಯೊಂದು ಮೈಸೂರಿಗೆ ಹದಿನಾರುಮೈಲು ದೂರದಲ್ಲಿರುವ ಗೊಮ್ಮಟಗಿರಿಯಲ್ಲಿದೆ. ಬೆಣಚುಗಲ್ಲಿನಲ್ಲಿ ಕೆತ್ತಿದ ಈ ವಿಗ್ರಹ ಸುಮಾರು ೧೬ ಅಡಿ ಎತ್ತರವಿದೆ. ತಲೆಯ ಗುಂಗುರುಗೂದಲುಗಳ ವಿನ್ಯಾಸ, ಕೆತ್ತನೆ ಶ್ರವಣಬೆಳಗೊಳದ ಗೊಮ್ಮಟನ ಗುಂಗುರುಗೂದಲುಗಳನ್ನು ಹೋಲುತ್ತವೆ. ಕಾಯೋತ್ಸರ್ಗದಲ್ಲಿ ಧ್ಯಾನಾಸಕ್ತನಾಗಿರುವ ಗೊಮ್ಮಟನಿಗೆ ಮಾಧವೀಬಳ್ಳಿಗಳು ತೊಡರಿವೆ. ನೀಳವಾದ ಕೈಗಳು ಅಕ್ಕಪಕ್ಕದಲ್ಲಿರುವ ಸರ್ಪಗಳ ಹೆಡೆಗಳನ್ನು ಮುಟ್ಟು ವಂತೆ ತೋರುತ್ತವೆ. ಶ್ರವಣಬೆಳ್ಗೊಳದ ಮೂರ್ತಿಯಲ್ಲಿ ಸರ್ಪಗಳು ಹುತ್ತದಿಂದ ಹೊರಗೆಬರುತ್ತಿರುವಂತೆ ತೋರಿಸಿದ್ದರೆ, ಇಲ್ಲಿ ಹುತ್ತಗಳೇ ಇಲ್ಲ. ಬರೀ ಸರ್ಪಗಳಿವೆ. ಈ ಮೂರ್ತಿಯನ್ನು ಪ್ರತಿಷ್ಠಾಪಿಸಿದವರ ಹೆಸರಾಗಲಿ, ಕೆತ್ತಿದ ರೂವಾರಿಯ ಹೆಸರಾಗಲಿ, ಕಾಲನಿರ್ದೇಶನವಾಗಲಿ ಇಲ್ಲ. ಶೈಲಿಯ ಆಧಾರದ ಮೇಲೆ ಇದು ೧೪ನೆಯ ಶತಮಾನದ್ದೆಂದು ಹೇಳಬಹುದು.

ಶ್ರವಣಬೆಳ್ಗೊಳದ ಗೊಮ್ಮಟನ ಸ್ಥಾಪನಾನಂತರ ಸುಮಾರು ೪೫೦ ವರ್ಷಗಳ ಮೇಲೆ, ದಕ್ಷಿಣಕನ್ನಡಜಿಲ್ಲೆಯ ಕಾರ್ಕಳದಲ್ಲಿ ಮತ್ತೊಂದು ಗೊಮ್ಮಟ ವಿಗ್ರಹ ಪ್ರತಿಷ್ಠಾಪನೆ ಯಾಯಿತು. ಜಿನದತ್ತವಂಶದ ಭೈರವೇಂದ್ರ ಅರಸನ ಮಗ ವೀರಪಾಂಡ್ಯನು ಈ ಗೊಮ್ಮಟಮೂರ್ತಿಯನ್ನು ಕ್ರಿ. ಶ. ೧೪೩೨ ರ ಫೆಬ್ರುವರಿ ೧೩ ಬುಧವಾರದಂದು

ಪ್ರತಿಷ್ಠಾಪಿಸಿದನು[೮]. ಈ ಕಾರ್ಯಕ್ಕಾಗಿ ತನ್ನನ್ನು ತಾನು "ಅಭಿನವ ಚಾವುಂಡರಾಯ" ಎಂದು ಆತನು ಕರೆದುಕೊಂಡಿದ್ದಾನೆ.

ಕಾರ್ಕಳದ ಬೆಟ್ಟದ ತುದಿಯ ಮೇಲೆ ಪ್ರತಿಷ್ಠಾಪಿಸಲಾದ ಈ ಮೂರ್ತಿ ೪೧ ಅಡಿ, ೫ ಅಂಗುಲ ಎತ್ತರವಿದೆ. ಈ ಮೂರ್ತಿಯನ್ನು ಹತ್ತಿರದಲ್ಲಿಯೇ ಬೇರೊಂದು ಸ್ಥಳದಲ್ಲಿ ಕಟೆದು ಅಲ್ಲಿಂದ ಇಲ್ಲಿಗೆ ಸಾಗಿಸಿ ತರಲಾಗಿದೆ ಸುಮಾರು ೮೦ ಟನ್ ಭಾರದ ಈ ವಿಗ್ರಹವನ್ನು ಆ ಕಾಲದಲ್ಲಿ ಹೇಗೆ ಇಲ್ಲಿಗೆ ಸಾಗಿಸಿ ಎತ್ತರವಾದ ಕಟ್ಟೆಯೊಂದರ ಮೇಲೆ ನಿಲ್ಲಿಸಿದರೆಂಬುದು ಊಹೆಗೆ ನಿಲುಕದ ಮಾತು. ಪೂರ್ವಾಭಿಮುಖವಾಗಿ ನಿಂತಿರುವ ಈ ಮೂರ್ತಿ ಅನೇಕ ಶತಮಾನಗಳ ಮಳೆಯ ಹೊಡೆತದಿಂದಾಗಿ ಕೃಷ್ಣವರ್ಣಕ್ಕೆ ತಿರುಗಿದೆ. ಶಾಸನಗಳಲ್ಲಿ ಈ ಮೂರ್ತಿಯನ್ನು ಬಾಹುಬಲಿಯ ಗುಮ್ಮಟಮೂರ್ತಿಯೆಂದು ಕರೆಯಲಾಗಿದೆ.[೯] ಶ್ರವಣಬೆಳ್ಗೊಳದಲ್ಲಿದ್ದಂತೆಯೇ, ಇಲ್ಲಿಯೂ ಬೆಟ್ಟದ ತುದಿಯನ್ನು ತಲುಪಲು ಮೆಟ್ಟಲುಗಳನ್ನು ಕೊರೆಯಲಾಗಿದೆ.

ನಾಲ್ಕು ವರ್ಷಗಳ ಅನಂತರ (೧೪೩೬) ವೀರಪಾಂಡ್ಯನು ಈ ಮೂರ್ತಿಗೆ ಎದುರಾಗಿ ಬ್ರಹ್ಮದೇವ ಸ್ತಂಭವನ್ನು ನಿಲ್ಲಿಸಿ, ಸ್ತಂಭದ ಮೇಲೆ ಬ್ರಹ್ಮಯಕ್ಷನ ವಿಗ್ರಹವನ್ನು ಪ್ರತಿಷ್ಠಾಪಿಸಿದನು.[೧೦] ಜೈನಧರ್ಮದ ಅಭಿವೃದ್ಧಿಗೆ ಶ್ರಮಿಸಿದ ಈ ವೀರಪಾಂಡ್ಯನು ೧೪೦೮ ರಲ್ಲಿ ಬಾರಕೂರಿನ ಪಾರ್ಶ್ವನಾಥಬಸದಿಯನ್ನು ಕಟ್ಟಿಸಿದುದನ್ನು ಇಲ್ಲಿ ನೆನೆಯಬಹುದು.[೧೧]

ಕಾರ್ಕಳಕ್ಕೆ ೨೪ ಮೈಲುಗಳ ದೂರದಲ್ಲಿರುವ ವೇಣೂರಿನಲ್ಲಿ ೧೭ನೆಯ ಶತಮಾನದ ಆದಿಭಾಗದಲ್ಲಿ ಮತ್ತೊಂದು ಗೊಮ್ಮಟನ ಬೃಹತ್‌ಮೂರ್ತಿಯನ್ನು ಪ್ರತಿಷ್ಠೆಮಾಡಲಾಯಿತು. ಅಜಿಲವಂಶದ ತಿಮ್ಮರಾಜನು ಕ್ರಿ. ಶ. ೧೬೦೪ ರ ಮಾರ್ಚ ತಿಂಗಳ ಮೊದಲನೆಯ ತಾರೀಖು, ಗುರುವಾರದಂದು ಇದನ್ನು ಪ್ರತಿಷ್ಠೆ ಮಾಡಿದನು. ತಿಮ್ಮರಾಜನು ಪಾಂಡ್ಯನ ತಮ್ಮ, ರಾಣಿ ಪಾಂಡ್ಯಕಳ ಮಗ ಮತ್ತು ರಾಯಕುವರನ ಅಳಿಯ. ಇವನ ಗುರು ದೇಸಿಗಣದ ಚಾರುಕೀರ್ತಿ. ಗುರು ಚಾರುಕೀರ್ತಿಯ ಆದೇಶದ ಮೇರೆಗೆ ಈ ಮೂರ್ತಿಯನ್ನು ಕೆತ್ತಿಸಿ ಪ್ರತಿಷ್ಠೆ ಮಾಡಿದ.[೧೨] ಈ ಚಾರುಕೀರ್ತಿ ಶ್ರವಣಬೆಳಗೊಳದ ಮಠಾಧಿಪತಿ. ಶಾಸನಗಳಲ್ಲಿ ಬಾಹುಬಲಿಯ ಮೂರ್ತಿಯನ್ನು ಜಿನಗುಮ್ಮಟೇಶನೆಂದು ಕರೆಯಲಾಗಿದೆ.

---

೮ ಎಫಿಗ್ರಾಫಿಯ ಇಂಡಿಕಾ VII. ಪು. ೧೯–೧೧೧.

೯ ಅದೇ.

೧೦ ಅದೇ ಪು. ೧೧೧–೧೧೨.

೧೧ ಎ ಹಿಸ್ಟರಿ ಆಫ್ ಸೌಥ್‌ಕೆನರಾ. ಕೆ. ವಿ. ರಮೇಶ್, ಧಾರವಾಡ, ೧೯೭೧, ಪು. ೩೦೧.

೧೨ ಎಪಿಗ್ರಾಫಿಕಾ ಇಂಡಿಕಾ VII. ಪು. ೧೧೨–೧೧೩.

ವೇಣೂರಿನ ಮೂರ್ತಿ, ಕಾರ್ಕಳದ ಮೂರ್ತಿಗಿಂತ ಚಿಕ್ಕದು, ಇದು ಸುಮಾರು ೩೫ ಅಡಿಗಳಷ್ಟು ಎತ್ತರವಿದ್ದು ಇದನ್ನು ಎತ್ತರವಾದ ಕಟ್ಟೆಯೊಂದರ ಮೇಲೆ ಪ್ರತಿಷ್ಠಾಪಿಸಲಾಗಿದೆ. ಕಟ್ಟೆಯನ್ನು ಏರಲು ಏಳು ಮೆಟ್ಟಿಲುಗಳಿವೆ. ವೇಣೂರಿನ ಮೂರ್ತಿಯನ್ನು ಇತರ ಗೊಮ್ಮಟಮೂರ್ತಿಗಳಂತೆ ಗುಡ್ಡದ ಮೇಲೆ ಪ್ರತಿಷ್ಠಾಪಿಸಲಾಗಿಲ್ಲ. ಗುರುಪುರ ನದಿಯ ದಕ್ಷಿಣದಂಡೆಯ ಎತ್ತರವಾದ ಪ್ರದೇಶದಲ್ಲಿ ಪ್ರತಿಷ್ಠೆ ಮಾಡಲಾಗಿದೆ. ಪೂರ್ವಾಭಿಮುಖವಾಗಿ ನಿಂತಿರುವ ಗೊಮ್ಮಟನು ಕುದುರೆಮುಖಶ್ರೇಣಿಯನ್ನು ವೀಕ್ಷಿಸುತ್ತಿದ್ದಾನೆ. ನೋಡಲು ಈ ಮೂರ್ತಿ ಇತರ ಮೂರ್ತಿಗಳಿಗಿಂತ ಭಿನ್ನ. ಅಗಲವಾದ ಹೊರಳೆಗಳು, ತುಂಬಿದ ತುಟಿಗಳು, ಗಿಣಿಮೂಗು, ಅಗಲವಾದ ಕೆನ್ನೆಗಳು, ಚಿಕ್ಕದಾದ ಆದರೂ ದಪ್ಪನಾದ ಕುತ್ತಿಗೆ – ಈ ಮೂರ್ತಿಯ ವಿಶಿಷ್ಟಲಕ್ಷಣಗಳು. ಕಾಯೋತ್ಸರ್ಗದಲ್ಲಿ ನಿಂತು ಮಾಧವೀಬಳ್ಳಿಗಳಿಂದ ಆವರಿಸಲ್ಪಟ್ಟಿರುವ ಈ ಗೊಮ್ಮಟನ ಕೈಬೆರಳುಗಳು ಆಚೀಚೆ ಕೆತ್ತಲಾದ ಮೂರುಹೆಡೆಗಳುಳ್ಳ ಸರ್ಪಗಳನ್ನು ತಾಗುವಂತಿವೆ. ಮೂರುಹೆಡೆಗಳುಳ್ಳ ಸರ್ಪಗಳನ್ನು ಇತರ ಯಾವ ಮೂರ್ತಿಗಳಲ್ಲೂ ನಾವು ಕಾಣಲಾರೆವು. ಕೆಳಭಾಗದಲ್ಲಿಯೂ ಬೇರೆ ಸರ್ಪಗಳಿವೆ. ಎಲ್ಲ ಗೊಮ್ಮಟಮೂರ್ತಿಗಳಂತೆ ಇಲ್ಲಿಯೂ ಗೊಮ್ಮಟನು ಪದ್ಮಪೀಠದ ಮೇಲೆ ನಿಂತಿದ್ದಾನೆ.

ಬಾಹುಬಲಿಯ ಬೃಹತ್‌ಮೂರ್ತಿಗಳನ್ನು ಕೊರೆಯುವ ಸಂಪ್ರದಾಯವು ೨೦ ನೆಯ ಶತಮಾನದಲ್ಲಿಯೂ ಮುಂದುವರಿದಿದೆ. ಧರ್ಮಸ್ಥಳದ ಹೆಗ್ಗಡೆ ಮನೆತನದ ಆದೇಶದ ಮೇರೆಗೆ, ಎಪ್ಪತ್ತರ ದಶಕದಲ್ಲಿ ಕಾರ್ಕಳದ ಬೆಟ್ಟವೊಂದರ ಬಂಡೆಯಲ್ಲಿ ಕೊರೆದು ತಯಾರಿಸಲಾದ ಮೂರ್ತಿಯನ್ನು ಧರ್ಮಸ್ಥಳದ ಬೆಟ್ಟವೊಂದರಲ್ಲಿ ಎತ್ತರವಾದ ಕಟ್ಟೆಯೊಂದರ ಮೇಲೆ ನಿಲ್ಲಿಸಲಾಗಿದೆ. ಇದೊಂದು ಸ್ತುತ್ಯಕಾರ್ಯ. ಕರ್ನಾಟಕದ ಇತರ ಬಾಹುಬಲಿ ಶಿಲ್ಪದ ಜೊತೆಗೆ ಇದನ್ನು ಹೋಲಿಸಿ ನೋಡಿದಾಗ ಹೆಚ್ಚಿನ ವಿಶೇಷತೆಗಳೇನೂ ಕಂಡುಬರುವುದಿಲ್ಲ. ಶಿಲ್ಪಸೌಂದರ್ಯದ ದೃಷ್ಟಿಯಿಂದಲೂ ಹೇಳಿಕೊಳ್ಳುವಂತಹದಲ್ಲ.



# ಹಗರಣ

ಎಲ್. ಆರ್. ಹೆಗಡೆ

ಹಗರಣವೆಂಬುದು (ಹಳಗನ್ನಡದಲ್ಲಿ ಪಗರಣ) ಜಾನಪದ ಮನರಂಜನೆಯ ನಾಟಕದೃಶ್ಯವಾಗಿದೆ. ಇದು ಕರ್ನಾಟಕದಲ್ಲೆಲ್ಲ ಐತಿಹಾಸಿಕಕಾಲದಲ್ಲಿ ಪ್ರಚಾರದಲ್ಲಿದ್ದ ಹಾಸ್ಯವೇಷಪ್ರಕಾರವಾಗಿದ್ದು, ಈಗ ಉತ್ತರಕನ್ನಡಜಿಲ್ಲೆಯಲ್ಲಿ ಮಾತ್ರ ಈ ಸಂಪ್ರದಾಯ ಉಂಟು. ಇದು ಸಂಸ್ಕೃತ ಪ್ರಕರಣ ಎಂಬ ರೂಪಕಪ್ರಕಾರದ ತದ್ಭವರೂಪವೆಂಬುದನ್ನು ವಿದ್ವಾಂಸರು ಅಂಗೀಕರಿಸಿದ್ದಾರೆ. ಮೊಟ್ಟಮೊದಲು ಕವಿರಾಜಮಾರ್ಗದಲ್ಲಿ ಉಲ್ಲೇಖ ಪಡೆದ ಈ ಶಬ್ದದ ಕಲಾಸಂಪ್ರದಾಯವು ಆ ಗ್ರಂಥ ಒಂಬತ್ತನೆಯ ಶತಮಾನದ್ದಾದರೂ ಅದಕ್ಕಿಂತಲೂ ಎಷ್ಟೋ ಹಿಂದೆಯೂ ಇದ್ದಿರಬೇಕು. ಆದರೆ ಸಂಸ್ಕೃತ ಪ್ರಕರಣದ ರೀತಿಯಲ್ಲಿಲ್ಲದೆ, ಅದರಲ್ಲಿ ಬರುವ ಜೂಜುಕೋರರು, ಕಳ್ಳರು, ವೇಶ್ಯೆಯರು, ಸೇವಕರು ಮುಂತಾದ ಸಾಮಾನ್ಯಜನರ ಚರ್ಯೆಗಳನ್ನು ಹಾಸ್ಯದೃಷ್ಟಿಯಿಂದ ತೋರಿಸುವಷ್ಟು ಪರಿಮಿತಿಯಲ್ಲಿ ಈ ಸಂಪ್ರದಾಯ ಕನ್ನಡದಲ್ಲಿ ಬೆಳೆದುಬಂದಿತು.

ಕವಿರಾಜಮಾರ್ಗದಲ್ಲಿ ಶ್ರುತಿದುಷ್ಟ ಅರ್ಥದುಷ್ಟ ಮತ್ತು ಕಲ್ಪನೋಕ್ತಿಕಷ್ಟಗಳು. ಇದು ಜನರನ್ನು ನಗಿಸುವುದಾದ್ದರಿಂದ ಪಗರಣದಲ್ಲಿ ಬಂದರೆ ದೋಷವಿಲ್ಲ ಎಂಬ ಕವಿರಾಜಮಾರ್ಗಕಾರನ ಅಭಿಪ್ರಾಯವನ್ನು ವಿಚಾರಿಸುತ್ತ, ಪಗರಣದಲ್ಲಿ ಅಶ್ಲೀಲ ಎನ್ನಬಹುದಾದ ಮಾತುಗಳೂ ಹಾಡುಗಳೂ ಇರುತ್ತಿದ್ದವೆಂದು ಹೇಳಿದ ಡಾ. ಚಿದಾನಂದಮೂರ್ತಿಯವರ[೧] ಅಭಿಪ್ರಾಯ ಇಂದಿನ ಹಗರಣಕ್ಕೂ ಅನ್ವಯಿಸುತ್ತದೆ.

---

೧ ಡಾ. ಚಿದಾನಂದಮೂರ್ತಿಯವರು "ಪಗರಣ"ದ ಕುರಿತು ತುಂಬ ಅಭ್ಯಾಸಪೂರ್ಣ ಲೇಖನವನ್ನು ಪ್ರಬುದ್ಧ ಕರ್ನಾಟಕ (ಸಂ. ೫೫, ಸಂಚಿಕೆ ೪) ದಲ್ಲಿ ಪ್ರಕಟಿಸಿದ್ದಾರೆ. ಈ ಲೇಖನ ಅದಕ್ಕೆ ಪೂರಕವಾಗಿ ಬರೆದದ್ದು. ಅದರಲ್ಲಿ ಬಂದ ಹಲವು ವಿಷಯಗಳನ್ನು ಚರ್ಚಿಸಿ, ಅದರಲ್ಲಿ ಹೇಳಿರದ ಅಂಶಗಳನ್ನೂ ಇಲ್ಲಿ ಪ್ರಸ್ತಾಪಿಸಲಾಗಿದೆ.

ವಡ್ಡಾರಾಧನೆಯ ಕಾರ್ತಿಕಸ್ವಾಮಿಯ ಕಥೆಯಲ್ಲಿ[೨] ಪಗರಣದ ವೇಷಗಳನ್ನು ಉಲ್ಲೇಖಿಸುವಾಗ, ಅನೇಕರು ಹಲವು ತರದ ರೂಪನ್ನು ಕೈಕೊಂಡು ಮರವೊಗಗಳನ್ನು ಇಟ್ಟುಕೊಂಡು ಬಂದು, ಆಡಿಯೂ ಹಾಡಿಯೂ ನಗಿಸಿಯೂ ವೀರಶ್ರೀರಾಣಿ ಅಳುವುದನ್ನು ನಿಲ್ಲಿಸಲಾಗಲಿಲ್ಲ ಎಂಬ ವರ್ಣನೆಯಲ್ಲಿ ಈ ಕಥೆಗಿಂತ ಮೊದಲೇ ಹಗರಣದ ವೇಷಗಳನ್ನು ಹಾಕಿಕೊಂಡು ಜನರ ಮನರಂಜನೆ ಮಾಡುವ ಪದ್ಧತಿಯಿತ್ತು ಎಂದು ತಿಳಿಯುವಂತಿದೆ.

ವೀರಶ್ರೀರಾಣಿಯ ಅಣ್ಣನು ಜೈನಯತಿಯಾಗಿದ್ದನು. ಅವನು ಒಮ್ಮೆ ಬಂದಾಗ, ವೀರಶ್ರೀರಾಣಿಯು ಇಳಿದುಬಂದು ಅಣ್ಣನ ಕಾಲಿಗೆ ಎರಗಿದ್ದಾಗ, ರಾಜನು ಬಂದು ಸಂದೇಹದಿಂದ ಯತಿಯನ್ನು ವಧೆಮಾಡಿದ್ದನು. ಆಮೇಲೆ ರಾಣಿ ಅಳುತ್ತಲೇ ಇರುತ್ತಿದ್ದಳು. ರಾಜನು ಅವಳನ್ನು ನಗಿಸಿದವರಿಗೆ ಬಹುಮಾನವನ್ನು ಕೊಡುವುದಾಗಿ ತಿಳಿಸಿದ್ದನು. ಯಾರಿಂದಲೂ ಅವಳನ್ನು ನಗಿಸಲು ಆಗದಿದ್ದಾಗ, ಒಬ್ಬನು ಅವಳ ಅಣ್ಣನ ಹಾಗೆ ಜೈನಯತಿಯ ವೇಷವನ್ನು ಮಾಡಿಕೊಳ್ಳಲು, ಬತ್ತಲೆಯ ಯತಿ ಎಂದು ಭ್ರಮೆಯನ್ನುಂಟುಮಾಡಲು ಕರಿಯ ಕಚ್ಚುಟ(ಕಚ್ಚೆ, ಲಂಗೋಟಿ)ವನ್ನುಟ್ಟು, ಬೋಳುತಲೆ ಮಾಡಿಕೊಂಡು, ಬಾಯಲ್ಲಿ ಕವಡೆಗಳನ್ನು ಹಲ್ಲುಗಳಂತೆ ಜೋಡಿಸಿಕೊಂಡು ಕುಂಚವನ್ನೂ ಗುಂಡಿಯನ್ನೂ ಹಿಡಿದುಕೊಂಡು ಬಂದನು. ಅದನ್ನು ರಾಜನು ಕಂಡು, ರಾಣಿಯೊಡನೆ "ನಿನ್ನ ಸಹೋದರನಾದ ಯತಿ ಬಂದನು" ಎಂದು ಹೇಳಿದಾಗ, ಅವಳು ನೋಡಿ, ಆತನ ವಿಚಿತ್ರವೇಷವನ್ನು ಕಂಡು ನಕ್ಕು ದುಃಖವನ್ನು ಮರೆತಳು. ಆ ಪಗರಣಿಗನಿಗೆ ಅರಸನು ಬಹಳ ಹೊನ್ನುಗಳನ್ನು ನೀಡಿದನು. ಅಂದಿನಿಂದ ಬಾದುಬ್ಬೆಯ ಹಬ್ಬವೂ ಹಗರಣದ ಆಟಪಾಟವೂ ಆದವು ಎಂದು ಆ ಕಥೆಯಲ್ಲಿದೆ.

ಬಾದುಬ್ಬೆ(ಬನದ ದೇವತೆಯೆಂದು ಡಾ. ಚಿದಾನಂದಮೂರ್ತಿಯವರ ಅಭಿಪ್ರಾಯ)ಯ ಹಬ್ಬವನ್ನು ಯಾಕೆ ಪ್ರಾರಂಭಿಸಿದರು ಎಂಬುದು ಇಲ್ಲಿ ಸ್ಪಷ್ಟವಿಲ್ಲ. ಪಗರಣದ ಮನರಂಜನೆ ಮೊದಲೇ ಇದ್ದರೂ ಆ ಹಬ್ಬವನ್ನು (ಅರಸನು) ಪ್ರಾರಂಭಿಸಿ, ಅದರಲ್ಲಿ ಹಗರಣದ ಆಟುಪಾಟಗಳಾಗಬೇಕೆಂದು ರೂಢಿಯನ್ನು ಮಾಡಿದ್ದಿರಬಹುದು.

ಪಗರಣದ ವೇಷಗಳನ್ನು ಕಾರಹುಣ್ಣಿವೆಯ ದಿನ ಸಹ ಅಭಿನಯಿಸುತ್ತಿದ್ದರೆಂಬುದಕ್ಕೆ ಡಾ. ಚಿದಾನಂದಮೂರ್ತಿಯವರು ಚೆನ್ನಬಸವಣ್ಣನವರ ವಚನವನ್ನು ಉಲ್ಲೇಖಿಸಿದ್ದಾರೆ.[೩]

ಈಗಲೂ ಉತ್ತರಕನ್ನಡಜಿಲ್ಲೆಯಲ್ಲಿ ಹೆಚ್ಚಾಗಿ ಹಬ್ಬದ ದಿನಗಳಲ್ಲಿ ಗಡಿಹಬ್ಬ (ಮಳೆಗಾಲದ ಪ್ರಾರಂಭಕಾಲದಲ್ಲಿ ಮಾಡುವ ಹಬ್ಬ)ದಲ್ಲಿ, ಹಣ್‌ಹಬ್ಬದಲ್ಲಿ, ಮದುವೆಯ

೨ ವಡ್ಡಾರಾಧನೆ: ಸಂ. ಡಿ. ಎಲ್. ಎನ್. ಪುಟ ೧೧೫–೧೨೦.

೩ ಪ್ರ. ಕ. ೫೫–೪ 'ಈ ಆಸೆಯ ವೇಷವ ಕಂಡಡೆ ಕಾರಹುಣ್ಣಿವೆಯ ಹಗರಣವೆಂಬೆ.'

ಉತ್ಸವದ ರಾತ್ರಿಗಳಲ್ಲಿ, ಸತ್ಯನಾರಾಯಣ ಕಥೆಯನ್ನು ಏರ್ಪಡಿಸಿ ನೆಂಟರಿಷ್ಟರನ್ನು ಕರೆವ ಸಮಯದಲ್ಲಿ, ತಿರುಪತಿದೇವರ ಪೂಜಾ–ಸಮಾರಾಧನೆ ಮುಂತಾದ ವಿಶೇಷ ದಿನಗಳಲ್ಲಿ ತೇರು–ಜಾತ್ರೆಗಳಲ್ಲಿ ಹಗರಣ, ಯಕ್ಷಗಾನ, ತಾಳಮದ್ದಳೆ ಇತ್ಯಾದಿ ಕಾರ್ಯಕ್ರಮಗಳನ್ನು (ಹೆಚ್ಚಾಗಿ ರಾತ್ರಿಯಲ್ಲಿ) ಇಟ್ಟಿರುತ್ತಾರೆ. ಹಳ್ಳಿಯ ಜನರು ಹಗರಣ, ಹಗಣ ಎಂಬ ಎರಡೂ ಶಬ್ದಗಳನ್ನು ಬಳಸುತ್ತಾರೆ.

ಡಾ. ಮೂರ್ತಿಯವರು ಜಾತ್ರೆಹಗರಣ, ಸುಗ್ಗಿಹಗರಣ ಮತ್ತು ಹಾಲಕ್ಕಿಯ ಯಜಮಾನನು ಕರೆದು ಮಾಡಿಸುವ ಹಗರಣವೆಂದು ಮೂರುತೆರನ ಹಗರಣಗಳಿವೆಯೆಂದಿದ್ದಾರೆ.[೪] ಹಾಲಕ್ಕಿಯ ಯಜಮಾನನು ಮಾತ್ರವಲ್ಲ, ಯಾರು ಬೇಕಾದರೂ ಹಗಣ ಮಾಡುವವರಿಗೆ ವೀಳ್ಯಕೊಟ್ಟು ಕರೆದು, ಹಗಣ ಮಾಡಿಸಬಹುದು. ಅಂಬಿಗರು, ಮುಕರಿಹರಿಜನರು, ಹರಕಂತ್ರಮೀನುಗಾರರು, ಗಾಮೊಕ್ಕಲು ಮುಂತಾದ ಹಲವು ಒಕ್ಕಲಿಗಜಾತಿಗಳವರು ಹಗಣಗಳನ್ನು ಮಾಡುತ್ತಾರೆ, ಮಾಡಿಸುತ್ತಾರೆ. ವೇಷಗಾರಿಕೆ. ಹಾಸ್ಯಪ್ರಸಂಗ ಎಲ್ಲ ಹಗಣಗಳಲ್ಲಿಯೂ ಉಂಟು. ಕೆಲವು ಸಂದರ್ಭಗಳಲ್ಲಿ ಹೆಚ್ಚು ಆಕರ್ಷಕ ವೇಷಗಳಿರಬಹುದು; ಕೆಲವು ಹಗಣಗಳಲ್ಲಿ ವೇಷಗಾರಿಕೆ ತೀರ ಕೆಳಮಟ್ಟದ್ದಾಗಿರಬಹುದು; ಅಷ್ಟೇ.

ಹಗರಣದಲ್ಲಿ ವಾಚಿಕಾಂಶ ಅಪ್ರಧಾನ, ದೃಶ್ಯಾಂಶವೇ ಹೆಚ್ಚು ಎಂದು ಡಾ. ಮೂರ್ತಿಯವರು ಬರೆದದ್ದು ಅಷ್ಟು ಸಮರ್ಪಕವಲ್ಲ.[೫] ಕಾಮನ ಹಬ್ಬದ ಸುಗ್ಗಿ ಹುಣ್ಣಿಮೆಯ ಅಥವಾ ಚೈತ್ರಹುಣ್ಣಿಮೆಯ ಕಾಲದ ಸುಗ್ಗಿಕುಣಿತಗಳಲ್ಲಿನ ಬಗೆಬಗೆಯ ವೇಷಪ್ರದರ್ಶನಗಳಿಗೆ ದೃಶ್ಯಾಂಶವೇ ಆಧಾರ; ಮಾತುಗಳಲ್ಲ ಎಂಬುದು ಸರಿ. ಆದರೆ ಉಳಿದ ಸಂದರ್ಭದ ಹಗರಣಗಳಲ್ಲಿ, ಜಾತ್ರೆಯ ಹಗರಣದಲ್ಲಿ ಕೂಡ, ದೃಶ್ಯಾಂಶದಷ್ಟೇ ವಾಚಿಕಾಂಶಕ್ಕೂ ಪ್ರಾಧಾನ್ಯವಿದೆ. ಜಾತ್ರೆಗಳಲ್ಲಿ ಜನಸಮೂಹ ವಿಶೇಷವಾಗಿದ್ದು, ಆಗ ಜನರ ಗದ್ದಲದಲ್ಲಿ ಹಾಸ್ಯದ ಮಾತುಗಳೂ ಗೀತಗಳೂ ಕೇಳದೆ ಹೋಗಬಹುದು; ಅಷ್ಟೇ.

ಅನೇಕ ರೀತಿಯ ಜೋಹಗಳನ್ನು ಧರಿಸಿ, ಹಗರಣಿಗರು ಉಚಿತ ವಚನದಿಂದ ಮನ ಮೆಚ್ಚುವಂತೆ ನಟಿಸುವರೆಂದು ಉದ್ಯೋಗಸಾರ(ಕ್ರಿ. ಶ. ೧೨೮೨)ದಲ್ಲಿ ಉಲ್ಲೇಖ ಬಂದುದನ್ನು ತಿಳಿಸಿ, ಜೋಹ(ವೇಷ) ಎಂಬ ಶಬ್ದವು–ಸಂಸ್ಕೃತದ 'ಯೋಗ' ಎಂಬ ಶಬ್ದ ತಮಿಳಿನಲ್ಲಿ ಜೋಕಮ್(ಉಚ್ಚಾರಣೆ ಜೋಗಮ್) ಎಂದಾಗಿ, ಕನ್ನಡದಲ್ಲಿ ಜೋಹ ಎಂದು ಆಗಿರಬೇಕು ಎಂದು ಡಾ. ಮೂರ್ತಿಯವರು ಬರೆದಿರುವುದು ಸಮರ್ಪಕವೆಂದೆನಿಸುತ್ತದೆ.[೬]

---

೪ ಪ್ರ. ಕ. ೫೫–೪. ಪುಟ ೫೯.
೫ ಅದೇ. ಪುಟ ೫೦.
೬ ಅದೇ. ಪುಟ ೫೨.

ಸುಗ್ಗಿಕೋಲಾಟದಲ್ಲಿ ಹಾಲಕ್ಕಿ ಒಕ್ಕಲಿಗರು ತಮ್ಮ ಸುಗ್ಗಿವೇಷ ಹಾಕಿಕೊಂಡು ಕುಣಿವಾಗ "ಜೊಹೋ ಜೋಹ್" ಎಂದೂ "ಸೋಹೋ ಸೋ" ಎಂದೂ ಹೇಳುತ್ತ ಕುಣಿಯುತ್ತಾರೆ. ಆ ಶಬ್ದದ ಅರ್ಥ ಸೋಗು, ವೇಷ ಎಂಬುದೇ ಆಗಿದೆ.

ಹಗರಣ ಎಂಬ ಮಾತಿಗೆ ಗಲಾಟೆ, ಜಗಳ, ಅವ್ಯವಸ್ಥೆ, ಹಾಸ್ಯಾಸ್ಪದ ಎಂಬ ಅರ್ಥಗಳಿರುವುದು ನಿಜ.

ಡಾ. ಬೆಟಗೇರಿ ಕೃಷ್ಣಶರ್ಮರು[೭] ಹಗಣದ ಸಂದರ್ಭದಲ್ಲಿ "ಹಾದರ" ಎಂಬ ಶಬ್ದದ ಮಾರ್ಮಿಕವಾದ ವಿವೇಚನೆ ಮಾಡಿದ್ದಾರೆ. "ಹಾದರಾ ಮಾಡುವಾಕಿ ಮೊದಲ ಹಗಣಾ ಕಲೀಬೇಕು" ಎಂಬ ನಾಡುನುಡಿಯಲ್ಲಿನ 'ಹಾದರ' ಶಬ್ದಕ್ಕೆ ಮೂಲದಲ್ಲಿ ಅಶ್ಲೀಲಾರ್ಥ ಇರಲಿಲ್ಲ. ಹಾದರ ಅಂದರೆ ಪಾತ್ರ(ನಟನೆ, ವೇಷ). ಆ ಶಬ್ದದ ಅರ್ಥದಲ್ಲಿ ಕ್ರಮೇಣ ಅಪಕರ್ಷ (Deterioration) ಆಗಿ ಈಗಿನ ಕೆಟ್ಟ ಅರ್ಥ ಅದಕ್ಕೆ ಬಂದಿದೆ. ಉತ್ತರ ಕನ್ನಡದಲ್ಲಿ "ಹಗಣಗಿತ್ತಿ" ಎಂದರೆ ವೇಷಗಾತಿ, ನಟಿಸಿ ವಂಚಿಸುವವಳು ಎಂಬ ಅರ್ಥವುಂಟು.

"ಶಬ್ದಮಣಿದರ್ಪಣ"ದಲ್ಲಿ ನಾಟ್ಯಗರಣ ಎಂಬ ಶಬ್ದವಿದೆ. ಅದು ವಡ್ಡಾರಾಧನೆಯಲ್ಲಿ "ಲೋಗರ್" ಎಂದು ಉಲ್ಲೇಖಿಸಿದಂತೆ ಜನಸಾಮಾನ್ಯರು ಆಡುವ ಪಗರಣ ಎಂಬ ಅರ್ಥವನ್ನು ಕೊಡುತ್ತದೆ ಎಂಬ ಡಾ. ಮೂರ್ತಿಯವರ ಅಭಿಪ್ರಾಯ ಸಮಂಜಸವಾಗಿದೆ.

"ಭರತೇಶವೈಭವ"ದಲ್ಲಿ ಭರತಚಕ್ರವರ್ತಿಯು ಬಾಹುಬಲಿಯೊಡನೆ ಪುರುಪರಮೇಶ್ವರನ ಮಕ್ಕಳಾದ ತಾವು ಹೋರಾಡುವುದು ಸಲ್ಲದು ಎನ್ನುವಾಗ "ದೊರೆಯೆದ್ದು ಹಗರಣವಾಡಿದಂದದಲಿ" ಎನ್ನುತ್ತಾನೆ. ಹಗರಣವಾಡುವುದು ಕನಿಷ್ಠಜನರ ಕಾರ್ಯ; ಶ್ರೇಷ್ಠರು ಮಾಡಿದರೆ ಶೋಭಿಸುವುದಿಲ್ಲ ಎಂಬುದು ಇಲ್ಲಿದೆ.

ತೊರವೆರಾಮಾಯಣದ ಎಂಟನೆಯ ಸಂಧಿಯಲ್ಲಿ ವಿಶ್ವಾಮಿತ್ರನು ಮಾರೀಚಾದಿಗಳ ಪೀಡೆಯನ್ನು ನಿವಾರಿಸಲು ರಾಮನನ್ನು ಕಳುಹು ಎಂದಾಗ, ದಶರಥನು ರಾಮನು ಚಿಕ್ಕವನೆಂದು ಹೇಳುತ್ತಾನೆ. ಆಗ ವಿಶ್ವಾಮಿತ್ರನು "ನಗೆಯ ಸೂಸುವಡಾವು ಲೋಕದ ಹಗರಣಿಗರೇ ?" ಎಂದು ಕೇಳುತ್ತಾನೆ.

ಕುಮಾರವ್ಯಾಸಭಾರತದಲ್ಲಿ ಧರ್ಮರಾಜನು ಸರ್ಪವಾಗಿದ್ದ ನಹುಷನಿಗೆ "ನಾಡಾಡಿಗಳ ನಾಟಕದ ಫಣಿಯಲ್ಲಾರು ಹೇಳೆಂದ." ಇಲ್ಲಿನ ನಾಡಾಡಿಗಳ ನಾಟಕ ಹಗರಣವೇ ಇರಬೇಕು. ಯಾಕೆಂದರೆ, ಹಗರಣಗಳಲ್ಲಿ ತರುವ ಫಣಿ ಸತ್ತ ಕೇರೆಹಾವು. ಹಾವುಗಳನ್ನು

೭ ಕನ್ನಡ ಜಾನಪದಸಾಹಿತ್ಯ : ಪುಟ ೭೫–೭೬.

ಸಹ ರಂಗದ ಮೇಲೆ ತರುವುದುಂಟು. ಈ ರೀತಿ ನೀನು ಸಾಮಾನ್ಯ ಹಾವಳಿ ಎಂದು ಹೇಳುವುದು ಹಗರಣದಲ್ಲೇ ಇರಬೇಕು. ಮತ್ತು ನಾಡಾಡಿಗಳ ನಾಟಕ ಲೋಕದ ಹಗರಣವೇ ಇರಬೇಕು. ತೊರವೆರಾಮಾಯಣದಲ್ಲಿ ಹಗರಣದ ಹೊಸನಾಟಕವೆಂಬ ಉಲ್ಲೇಖವಿರುವುದೂ ಇದಕ್ಕೆ ಸಹಾಯಕವಾಗಿದೆ.

ಹಗರಣವನ್ನು ಅದಕ್ಕಾಗಿಯೇ ನಿರ್ಮಿಸಿದ, ಯಕ್ಷಗಾನದ ನಾಲ್ಕುಕಂಬಗಳಿಗೆ ಚಪ್ಪರ ಹಾಕಿದ ರಂಗದಂತಿರುವ ರಂಗದಲ್ಲಿ ಅಭಿನಯಿಸಬಹುದು. ಕೆಲವೊಮ್ಮೆ ಬೀದಿಯಲ್ಲಿಯೂ ಅಭಿನಯಿಸಬಹುದು.[೮]

ವಸುದೇವನು ಹಿಂದಿನ ಜನ್ಮದಲ್ಲಿ ನಂದಿಯೆಂಬ ಬ್ರಾಹ್ಮಣ ಕುಮಾರನಾಗಿದ್ದನು. ತಂದೆತಾಯಿಗಳು ಕಾಲವಾಗಲು ಮಾವನು ತನಗೆ ಮಗಳನ್ನು ಕೊಡುವ ಆಸೆಯಿಂದ ಅವನ ಮನೆಗೆ ಹೋದನು. ಬಿಸಿಲಿನಲ್ಲಿ ಕೊರಟಾದ ಉರಿಗೇಶದಿಂದ ಕೂಡಿದ ಅವನ ತಲೆಯಿಂದ ಹೇನುಗಳಿಳಿಯುತ್ತಿದ್ದವು. ಅವನನ್ನು ನೋಡಿ ಹೇಸಿದ ಸೋಮಶರ್ಮನ ಕಿರಿಮಗಳು ಅವನನ್ನು ಒಲ್ಲೆನೆಂದಳು, ಅವನ ಅತ್ತೆ ನಂದಿಯ ನೆತ್ತಿಯಲ್ಲಿ ಬೆಣ್ಣೆಯನ್ನಿಕ್ಕಿ, ಅರಿಷಿನವನ್ನು ಅರೆದು ಅವನ ಮೈಗೆ ಹಚ್ಚಿ, ಹಳೆಯದಾದ ಹೊಲಸು ಬಟ್ಟೆಕೊಟ್ಟು ಹೋಗೆಂದು ಅಟ್ಟಿದಳು; ನಾಲ್ಕು ಹಾದಿ ಕೂಡಿದಲ್ಲಿ ಅವನು ನಾಟಕ ನೋಡುವ ಮನುಷ್ಯರ ಗುಂಪನ್ನು ನೋಡುತ್ತ ನಿಂತನು. ಒಬ್ಬನು ನಂದಿಯನ್ನು ನೋಡಿ "ಇತ್ತ ಒಂದು ಪಗರಣದ ಚೋಹಂ ಬಂದುದು ಎನ್ನಲು ಜನರು ಕಲ್ಲುಗಳಿಂದ ಅವನಿಗೆ ಹೊಡೆದರು. ಇಲ್ಲಿ ಮೈಗೆ ಅರಿಸಿನ ಪೂಸಿದ್ದು, ಹರಡಿದ ಕೇಶವೂ ಅವನು ಹಗರಣದ ವೇಷ ಎನ್ನಲು ಸಹಾಯಕವಾಯಿತು. ಬಹುಶಃ ಹಗಲಿನಲ್ಲೂ ಹಗರಣ ಮಾಡುತ್ತಿದ್ದರೆಂದೂ ಇದರಿಂದ ತಿಳಿಯಬಹುದು. ಈ ಕಥೆ ಬಂದ ಕರ್ಣಪಾರ್ಯನ ನೇಮಿನಾಥಪುರಾಣದ[೯] ಕಾಲ ಕ್ರಿ. ಶ. ೧೧೪೫.

ಮಹಾಲಿಂಗದೇವನು[೧೦] "ಬೀದಿಯ ಭಂಡಾಟದ ಹಗರಣ"ದ ಉಲ್ಲೇಖ ಮಾಡಿರುವುದನ್ನು ಡಾ. ಚಿದಾನಂದ ಮೂರ್ತಿಯವರು ತಿಳಿಸಿದ್ದಾರೆ. 'ಭಂಡ' ಎಂದರೆ ಅವರು ಕೋಡಂಗಿ ಎಂಬ ಅರ್ಥ ಕೊಟ್ಟಿದ್ದಾರೆ. ಭಂಡ ಎಂದರೆ ಹೆಣ್ಣಿನ ವಿಷಯದಲ್ಲಿ ಕೆಟ್ಟ ಭಾವನೆಯುಳ್ಳವನೆಂಬ, ಅಶ್ಲೀಲ ಮಾತಾಡುವನೆಂಬ ಅರ್ಥವಿರುವುದು ಸ್ಪಷ್ಟವಾಗಿದೆ. ಬೀದಿಯ ಭಂಡಾಟದ ಹಗರಣವೆಂದರೆ ಅಶ್ಲೀಲ ಹಗರಣವೆಂದೇ ಅರ್ಥವಾಗುತ್ತದೆ.

ಹಗರಣದ ಮನೆಗಳ ಉಲ್ಲೇಖ ಶಾಸನದಲ್ಲಿ ಇದ್ದುದನ್ನು ಅನುಲಕ್ಷಿಸಿ ಡಾ. ಮೂರ್ತಿಯವರು ಅವು ಹಗರಣದ ಅಭ್ಯಾಸಕ್ಕಾಗಿ ಇರಬಹುದೆಂಬ ಅಭಿಪ್ರಾಯವನ್ನು ಹೇಳಿದ್ದಾರೆ.

---

೮ ಕುಮಾರವ್ಯಾಸಭಾರತ ೧೩ : ೪೧.

೯ ನೇಮಿನಾಥಪುರಾಣ ೩ : ಪದ್ಯ ೧೧೧, ೧೧೨, ೧೧೩ ಮತ್ತು ವಚನಭಾಗ ಪು. ೭೬.

೧೦ ಪ್ರ. ಕ. ಸಂ, ೫೫-೪ ; ಪುಟ ೫೩.

ಆದರೆ ಹಗರಣದ ಅಭ್ಯಾಸವನ್ನು ಈ ರೀತಿ ಪ್ರತ್ಯೇಕ ಮನೆಗಳಲ್ಲಿ ಮಾಡುವುದಿಲ್ಲ. ಹಗರಣದ ವೇಷಗಳ ಮುಖವಾಡ, ಮತ್ತು ಇತರ ವೇಷದ ಸಾಮಾನುಗಳನ್ನು ಇಡುವುದಕ್ಕೆ ಮಾಡಿದ ಕಟ್ಟಡವೆಂದು ಕಾಣುತ್ತದೆ. ವಿಶೇಷವಾಗಿ ಜಾತ್ರೆಗಳ ಹಗರಣಗಳಲ್ಲಿ ಅನೇಕತರದ ಮರದ ಮುಖವಾಡಗಳನ್ನು ಉಪಯೋಗಿಸುತ್ತಾರೆ. ಅವನ್ನು ಇಡಲು ಪ್ರತ್ಯೇಕ ಕೋಣೆಗಳನ್ನು ನಿಗದಿಮಾಡಿರುತ್ತಾರೆ. ಇದು ಅಂಥ ಕೋಣೆಗಳ ಮನೆಯಾಗಿರಬೇಕು.

ನಯಸೇನನ ಧರ್ಮಾಮೃತದಲ್ಲಿ "ಮೂರುದಿನದ ಪಗರಣಕ್ಕೆ ಗಡ್ಡಮೀಸೆ ಮಂಡೆಯುಂ ಬೋಳಿಸಿಕೊಳ್ವಂತೆ"(೧೦-೬೭)ಎಂಬ ಮಾತು ಬರುತ್ತದೆ. "ಪಗರಣಗಳ ವೇಷವನ್ನು ಹಾಕಿಕೊಂಡವರು ಅನೇಕ ದಿವಸ ಅದೇ ವೇಷದಲ್ಲಿದ್ದು, ಆಟಗಳನ್ನಾಡುತ್ತಿದ್ದರೆಂದೂ ಸ್ತ್ರೀಯರು ಮತ್ತು ಸನ್ಯಾಸಿಯರ ವೇಷ ಧರಿಸಿಕೊಳ್ಳುವುದಕ್ಕಾಗಿ ಗಡ್ಡ ಮೀಸೆ ಮಂಡೆಗಳನ್ನು ಬೋಳಿಸಿಕೊಳ್ಳುತ್ತಿದ್ದರೆಂದೂ ಇದರಿಂದ ಸೂಚಿತವಾಗುತ್ತದೆ" ಎಂದು ಡಾ. ಚಿದಾನಂದಮೂರ್ತಿಯವರು[೧೧] ಬರೆದಿದ್ದಾರೆ.

ಇಲ್ಲಿ, ಸ್ತ್ರೀಯರ ವೇಷಹಾಕಿಕೊಳ್ಳುವ ಗಂಡಸರು ಮೀಸೆ-ಗಡ್ಡಗಳನ್ನು ಬೋಳಿಸಿಕೊಳ್ಳಬೇಕು ಎಂಬುದು ಸರಿ. ಆದರೆ, ಬ್ರಾಹ್ಮಣವಿಧವೆಯ ವೇಷಕ್ಕೆ ಮಂಡೆಯನ್ನೂ ಬೋಳಿಸಿಕೊಳ್ಳಬೇಕಿತ್ತು. ಉಳಿದ ಸ್ತ್ರೀಯರ ವೇಷಗಳಿಗೆ ಮಂಡೆಬೋಳಿಸಿಕೊಳ್ಳುವುದಿಲ್ಲ, ಮತ್ತು ಜೈನಸನ್ಯಾಸಿವೇಷಕ್ಕೆ ಗಡ್ಡಬೇಡ, ತಲೆಬೋಳಿಸಿಕೊಳ್ಳಬೇಕು. ಆದರೆ ಉಳಿದ ಸನ್ಯಾಸಿಗಳ ವೇಷಗಳಿಗೆ ಗಡ್ಡ ಮತ್ತು ಜಡೆ ಎರಡೂ ಬೇಕು.

ಸುಗ್ಗಿಯ ಕುಣಿತ ವೇಷಗಳವರು ಐದುದಿನ ಮುಖದ ಬಣ್ಣವನ್ನು ಇಟ್ಟುಕೊಳ್ಳುತ್ತಾರೆ. ಮತ್ತು ರಾತ್ರಿಯೂ ಕುಣಿವುದರಿಂದ ವೇಷವನ್ನು ಇಟ್ಟುಕೊಳ್ಳುತ್ತಾರೆ ಎನ್ನಬಹುದು. ಆದರೆ ಉಳಿದ ಹಗಣಗಳಲ್ಲಿ ಒಂದುದಿನಕ್ಕಿಂತ ಹೆಚ್ಚಾಗಿ ವೇಷವನ್ನಿಟ್ಟುಕೊಳ್ಳುವುದಿಲ್ಲ.

ಮೂರುದಿನ ನಾಲ್ಕುದಿನಗಳ ಹಗರಣ ಜಾತ್ರೆಗಳಲ್ಲಿ ಕ್ವಚಿತ್ತಾಗಿ ಇರುವುದುಂಟು. ಉದಾ : ಕುಮಟಾ ತಾಲೂಕಿನ ಹೆಗಡೆ ಊರಿನ ಜಾತ್ರೆಯಲ್ಲಿನ "ಹಗಣ ಬಸವನ ಮದುವೆ."

ಈ ಹಗಣ ಮೂರು ಅಥವಾ ಕೆಲವುಸಲ ನಾಲ್ಕುದಿನ ಹೆಗಡೆ ಅಮ್ಮನವರ ಜಾತ್ರೆಗೆ ಸಂಬಂಧಪಟ್ಟು ನಡೆಯುತ್ತದೆ. ಅಷ್ಟು ದಿನಗಳಲ್ಲಿಯೂ ಮುದುಕನ ವೇಷದವನು ರಾತ್ರಿ ಬರುತ್ತಾನೆ. ಅವನು ಮೈಗೆ ಗೋಣಿತಟ್ಟಿನ ಅಂಗಿ ಹಾಕಿಕೊಂಡು, ನಾರಿನ ಗಡ್ಡ-ಮೀಸೆ ಧರಿಸಿಕೊಂಡು, ಕೈಯಲ್ಲಿ ಕೋಲು-ಕತ್ತಿ ಹಿಡಿದುಕೊಂಡು, ಧೋತರ

೧೧ ಪ್ರ. ಕ. ೫೫-೪, ಪುಟ ೫೫.

ರುಮಾಲು ಧರಿಸಿ ಬರುತ್ತಾನೆ. ಕುಣಿಯುವ ಅವನು ಕಾಲಿಗೆ ಗೆಜ್ಜೆ ಕಟ್ಟಿರುತ್ತಾನೆ. ಅವನ ಕತ್ತಿ ಮರದಿಂದ ಮಾಡಿದ್ದು. ಎರಡು ಅಡಿ ಉದ್ದವಾದದ್ದು. ಆ ಕತ್ತಿ ಅವನಿಗೆ ಯಾಕೆ ಅಂತ ಪ್ರೇಕ್ಷಕರು ಅವನನ್ನು ಕೇಳುತ್ತಾರೆ. ಅವನು "ಒಡೆಯರು ಒಂದು ಸಾವಿರದ ಐನೂರು ಬಾಳೆಗಿಡಗಳನ್ನು ಸವರಿ. ನಿನ್ನ ಪರಾಕ್ರಮ ತೋರಿಸು ಅಂತ ಹೇಳಿದ್ದಾರೆ. ಆ ಬಾಳೆಗಿಡಗಳನ್ನೆಲ್ಲ ಸವರುತ್ತೇನೆ" ಎಂದು ಉತ್ತರ ಕೊಡುತ್ತಾನೆ. ಅನೇಕ ಅಶ್ಲೀಲಮಾತುಗಳನ್ನೂ ಹೇಳುತ್ತಾನೆ.

ಜಾತ್ರೆ ಇಂಥಾ ದಿನ ಆಗುತ್ತದೆ. ಮುದುಕಿಯರನ್ನೆಲ್ಲಾ ಮನೆಯೊಳಗೆ ಹಾಕಿ: ಪುಂಡಿ (ಪ್ರಾಯದ ದಿಂಡೆಯರು)ಯರನ್ನು ಹೊರಗೆ ಹಾಕು ಎಂದು ಹೇಳುತ್ತಾನೆ.

ಅವನ ಸುತ್ತಲೂ ಮುಗಿಬಿದ್ದ ಹುಡುಗರನ್ನು ಡೊಣ್ಣೆಯಿಂದ ಹೊಡೆವಂತೆ ಸೋಗು ಮಾಡುತ್ತಾನೆ. ಕೊನೆಯ ದಿನ ಅವನಿಗೆ ಮದುವೆ ಮಾಡುವ ನಾಟಕ ನಡೆಯುತ್ತದೆ. ಒಡೆಯರು ಅವನ ಪರಾಕ್ರಮಕ್ಕೆ ಮೆಚ್ಚಿ ಅವನಿಗೆ ಒಂದು ಹೆಣ್ಣನ್ನು ಗೊತ್ತುಮಾಡಿ ಮದುವೆ ಮಾಡುತ್ತಾರೆ. ಆ ಹೆಣ್ಣಿನ ವೇಷಕ್ಕೆ ವಿಶೇಷ ವೇಷಭೂಷಣ ಬೇಡ. ಕಂಬಳಿ ಅಥವಾ ಚಾದರ ಮುಸುಕು ಹಾಕಿಕೊಂಡು ತಲೆಬಗ್ಗಿಸಿಕೊಂಡು ಒಬ್ಬ ಹುಡುಗ ಬರುತ್ತಾನೆ. ಅಂತೂ ಮದುವೆಯ ಶಾಸ್ತ್ರ ನಡೆಯುತ್ತದೆ. ಹಗಣ ಬಸವನು ಕುಣಿಯುವಾಗ ಹಿಂದೆ ಡೋಳು-ಜಾಗಟೆ ಬಾರಿಸುತ್ತಾರೆ.

ಹಿಂದಣ ಕಾಲದಲ್ಲಿ ಹಗಣಬಸವನ ಮದುವೆಯ ಕೊನೆಯ ದಿನ, ಅಂದರೆ ತೇರಿನ ದಿನದ ಮುನ್ನಾದಿನ, ರಾತ್ರಿಯಲ್ಲಿ ಅನೇಕ ತರದ ಮುಖವಾಡ ಹಾಕಿಕೊಂಡು, ಮರಗಾಲು ಕಟ್ಟಿಕೊಂಡು ಬಹಳತರದ ಸೋಗಿನವರು ಬಂದು ಹಗರಣ ಮಾಡುತ್ತಿದ್ದರು. ಆದರೆ ಈಗ ಜನರಲ್ಲಿ ಉತ್ಸಾಹವಿಲ್ಲ. ಮರದ ಮುಖವಾಡಗಳೆಲ್ಲಾ ಗೆದ್ದಲು ತಿಂದು ಹಾಳಾಗಿ ಹೋದವು. ಈಗ ಆ ಹಗಣ ನಡೆಯುವುದಿಲ್ಲ.

ಹಗಣ ಬಸವನು ಪ್ರತಿರಾತ್ರಿ ಬರುವಾಗಲೂ ಹೊಸದಾಗಿ ವೇಷ ಧರಿಸಿಕೊಂಡು ಹಗಣ ಮುಗಿದಾಗ ವೇಷ ತೆಗೆದು ಹಾಕಿಕೊಂಡು ಹೋಗುತ್ತಾನೆ.

ಹಗರಣದ ವೇಷಗಳು "ಬಹುರೂಪ ವಿಕೃತ"ವೆಂದು ವರ್ಧಮಾನಪುರಾಣದಲ್ಲಿ ಹೇಳಿದುದು ಈ ವೇಷಗಳಿಗೆ ಚೆನ್ನಾಗಿ ಹೊಂದುತ್ತದೆ. ಹಳ್ಳಿಯ ಬಡಬಕ್ಕಲಿಗರು ವೇಷ ಕಟ್ಟಿ ಅಭಿನಯಿಸುವ ಹಗರಣಗಳಲ್ಲಿ ಶ್ರೀಮಂತ ಕಂಪನಿಗಳ ನಾಟಕದ ವೇಷಗಳ ಜರ್ಬು, ವೈಭವ ಎಲ್ಲಿ ಬರಬೇಕು ? ಸ್ವಲ್ಪ ಖರ್ಚಿನಲ್ಲಿ ಸ್ವಾರಸ್ಯ ತರುವುದು ಹಗರಣಿಗರ ಅವಶ್ಯಕತೆಯೂ ರೂಢಿಯೂ ಹೌದು. ಪೋಲೀಸನ ವೇಷದಲ್ಲಿ ಬಂಡಿಟೊಪ್ಪಿಗೆ (ಹ್ಯಾಟ್) ಮಾಡಲು ಅಡಿಕೆಯ ಮರದ ಕೊನೆಹಾಳೆಯನ್ನೇ ಕತ್ತರಿಸಿ, ಬಾಗಿಸಿ ಉಪಯೋಗಿಸುತ್ತಾನೆ. ಪೋಲೀಸನ ಬಂದೂಕಿಗೆ ಲೈಸನ್ಸ ಬೇಕಾಗಿಲ್ಲ! ತೆಂಗಿನಮರದ ಹೆಡೆಮಟ್ಟೆ

(ಟೊಂಗೆಯ ಬುಡ)ಯನ್ನು ಬಂದೂಕಿನ ಉದ್ದಕ್ಕೆ ಕತ್ತರಿಸಿ ಒಣಗಿಸಿಬಿಟ್ಟರೆ ಅದು ಹಗರಣದ ಪೋಲೀಸನ ಬಂದೂಕಾಯಿತು! ಪಕ್ಕಾಕಳ್ಳನು ಆ ಬಂದೂಕಿಗೆ ಹೆದರಲೇಬೇಕು!

ಕಲ್ಲಿಮೀಸೆಗೆ ತೆಂಗಿನಕಾಯಿಯ ಮೇಲಿನ ನಾರನ್ನು ಅಥವಾ ಬೇರೆ ನಾರನ್ನು ಇದ್ದಲಿ ಪುಡಿಯ ಅಥವಾ ಮಸಿಯ ರಸದಲ್ಲಿ ಅದ್ದಿದರೆ ಜರ್ಬಿನ ಕಲ್ಲಿಮೀಸೆಯಾಯಿತು! ಕಳ್ಳನ ವೇಷಕ್ಕೆ ಲಂಗೋಟಿ ಧರಿಸಿ, ಮೈಗೆಲ್ಲ ಇದ್ದಲಿಪುಡಿನೀರನ್ನು ಬಳಿದುಕೊಳ್ಳಬೇಕು.

ಗೋಣಿಚೀಲಕ್ಕೆ ನಾರಿನ ಗೇಣುದ್ದ ಕುಚ್ಚಗಳನ್ನು ಉದ್ದಕ್ಕೂ ಸೇರಿಸಿ ಹೊಲಿದು, ನೀಲಿ ಶಾಯಿಯಲ್ಲಿ ಅದ್ದಿದರೆ ಕರಡಿವೇಷದ ಅಂಗಿಯಾಯಿತು. ರಟ್ಟಿನಿಂದ ಅದರ ಮುಖವಾಡವನ್ನು ಮಾಡುವುದು ಸುಲಭವಾಗಿದೆ.

ಹಗರಣದಲ್ಲಿ ಆನೆ ಆಕೃತಿಯನ್ನು ತರುವುದುಂಟು. ಧರ್ಮಾಮೃತದಲ್ಲಿ (೮–೯೪) "ಪಗರಣವ ಆನೆಯಂತೆ..." ಎಂದು ಬಂದಿರುವುದನ್ನು ಡಾ. ಚಿದಾನಂದಮೂರ್ತಿಯವರು ಉಲ್ಲೇಖಿಸಿದ್ದಾರೆ. ಬಿದಿರಿನ ಪಟ್ಟಿಗಳ ಫ್ರೇಮ್ ಮಾಡಿ, ಅದರಲ್ಲಿ ಬತ್ತದ ಹುಲ್ಲನ್ನು ತುಂಬಿ, ಹುಲ್ಲಿನ ಕಟ್ಟನ್ನೇ ಸೊಂಡಿಲಿನ ಆಕಾರಕ್ಕೆ ತಂದು, ರಟ್ಟನ್ನಾಗಲೀ ಅಡಿಕೆಯ ಕೊನೆಯನ್ನಾಗಲೀ ಉಪಯೋಗಿಸಿ ಕಿವಿಯನ್ನು ಮಾಡಿ ಹಚ್ಚಿ, ಆ ಆಕಾರದ ಫ್ರೇಮ್‌ನ ಮೇಲೆ ಕಪ್ಪುಬಟ್ಟೆಯನ್ನು ಹೊದಿಸಿ ಆನೆಯನ್ನು ಮಾಡುತ್ತಾರೆ. ಈ ಆನೆಯನ್ನು ಒಬ್ಬನು ಒಳಗಿನಿಂದ ಹೊತ್ತುಕೊಂಡು ತಿರುಗಾಡುತ್ತಾನೆ. ಹಗರಣದ ಕುದುರೆಯನ್ನು ಮಾಡಲೂ ಇದೇ ತಂತ್ರವನ್ನು ಉಪಯೋಗಿಸುತ್ತಾರೆ. ಬಾಲವನ್ನು ನಾರಿನಿಂದ ಮಾಡುತ್ತಾರೆ. ಆನೆಯ ಮೇಲೂ ಕುದುರೆಯ ಮೇಲೂ ಒಬ್ಬನು ಸವಾರಿ ಮಾಡಿಕೊಂಡು ಬರುತ್ತಾನೆ. ಭಾರಬೀಳುವುದು ಫ್ರೇಮಿನ ಒಳಗೆ ಹೊಕ್ಕಿಕೊಂಡಿರುವ ಮನುಷ್ಯನ ಕುತ್ತಿಗೆಯ ಮೇಲೆ.

ಮುಖಕ್ಕೆ ಬಣ್ಣ ಬಳಿದುಕೊಂಡು, ನಾರಿಗಿ ಆಯಾಲವನ್ನು ಹಚ್ಚಿಕೊಂಡು ಗೋಣಿ ತಟ್ಟಿನಿಂದ ಮೈ, ಕೈಕಾಲು ಮುಚ್ಚಿಕೊಂಡು ನಾರಿನಿಂದ ಬಾಲಮಾಡಿಕೊಂಡು ಸಿಂಹದ ವೇಷ ಮಾಡಿಕೊಳ್ಳುತ್ತಾರೆ.

ಬಿದಿರಿನ ದೋಣಿಯ ಫ್ರೇಮ್ ಮಾಡಿಕೊಂಡು, ಅದಕ್ಕೆ ಬಟ್ಟೆ ಸುತ್ತಿಕೊಂಡು ಅದನ್ನು ಒಡಿದುಕೊಂಡು, ಅಥವಾ ಅದರೊಳಗೆ ಕೂತ ಹಾಗೆ ನಡುವೆ ನಿಂತುಕೊಂಡು, ದೋಣಿ ಹುಟ್ಟು ಹಿಡಿದುಕೊಂಡು ಹುಟ್ಟು ಕಡಿಯುತ್ತ ಬಲೆಬೀಸುತ್ತ ಬರಬಹುದು*. ದೋಣಿತರುವಾಗಿನ ಒಂದು ಹಗಣಪದ ಹೀಗಿದೆ :

---

* ಎಸ್ ಟಿ. ಬಸ್ ಆಕಾರ ಬರಲು ಅಗತ್ಯವಾಗುವಂತೆ ಬಿದಿರಿನಿಂದ ಫ್ರೇಮ್ ರಚಿಸಿ, ಅದರ ಮೇಲೆ ಕಂಪುಬಟ್ಟೆ ಹೊದಿಸಿ, ಮುಂದೆ ಲೈಟಗಳನ್ನು ಜೋಡಿಸಿ, ಬಸ್ಸಿನ ಆಕಾರವನ್ನೂ ಮಾಡಿಕೊಂಡು ಬರುತ್ತಾರೆ.

ಚಿನ್ನದ ಹುಟ್ಟು ಬಂಗಾರದೋಣಿ ತಂದನಾನ ತಾನಾ
ವಳ್ಳ । ಗಾಳೀsಗೆ ಗಾssಸ ಬಾಳಾ ,, ,,
ಕುಲದಲ್ಲೇ ಲಂಬೀರ್ ಹುಡಗಿ ,, ,,
ತರಬಾsಕೆ ತಗ್ಯಬೇಕೋ ,, ,,
ಚಿನ್ನದ ಹುಟ್ಟು ಬಂಗರದೋಣಿ ,, ,,

ಇಲ್ಲಿ 'ಗಾಸ' ಎಂದರೆ ಗಾಳಿಯಿಂದ ಸಮುದ್ರದ ನೀರು ಅಲ್ಲೋಲ-ಕಲ್ಲೋಲ ವಾಗುವುದು. 'ತರಬಾ' ಅಂದರೆ ದೋಣಿಯ ಕಟ್ಟಿಗೆಯ ಮೈಗೆ ಹಚ್ಚುವ ಗೇರೆಣ್ಣೆಯ ಬಣ್ಣ.

ಬಡಮುದುಕಿಯ ವೇಷ ಹಾಕಿಕೊಂಡು ಒಬ್ಬನು ಬರುತ್ತಾನೆ. ಅವಳು ಪಾತ್ರೆಯನ್ನು ಹಿಡಿದುಕೊಂಡು ಅದರಲ್ಲಿನ ಬೆಲ್ಲವನ್ನು ತೆಗೆದು ಸುರಿದು ತಿನ್ನುವಂತೆ ಬರುತ್ತಾನೆ. ಜನರು ಈ ವೇಷ ನೋಡಿ ನಗೆಯಾಡುತ್ತಾರೆ. ಇನ್ನೊಬ್ಬನು ಕೆಳಗಿನ ಪದ ಹೇಳುತ್ತಾನೆ :

ಬಡಮುದ್ಕೀನ್ ಕಂಡೀ ಯಾತರ ನಗಿ ಬಂತಾ ?
ಬಾಯಿವಳಗೆ ವಂದ್ ಹಲ್ಲಿಲ್ಲಾ ಸುರೀತಾಳೊ ಬೆಲ್ಲಾ !
ಹೊಡೀ ಅವಲಕ್ಕಿಕಾಯಿ ಬೆಲ್ಲ ತಿನಲಿಕ್ಕೆ ಬೇಜಾರಾ
ಬಡಮುದ್ಕೀನ್ ಕಂಡೀ ಯಾತರ ನಗಿ ಬಂತಾ ?

ಅವನು ಬಾಯಿವಳಗೆ ವಂದ್ ಹಲ್ಲಿಲ್ಲಾ ಎನ್ನುವಾಗ ಮುದುಕಿ ಬಾಯಿತೆರೆದು ತೋರಿಸುತ್ತಾಳೆ. ಹಲ್ಲುಗಳಿಗೆಲ್ಲಾ ಕಪ್ಪು ಹಚ್ಚಿಕೊಂಡಿದ್ದರಿಂದ ಹಲ್ಲುಗಳಿದ್ದರೂ ಇಲ್ಲದಂತೆಯೇ ಕಾಣುತ್ತದೆ.

ಎರಡು ಜಡೆ ಬಿಟ್ಟುಕೊಂಡು, ಹೆಣ್ಣಿನ ವೇಷಮಾಡಿಕೊಂಡು, ಸೀರೆ ರವಿಕೆ ಅಥವಾ ಜಂಪರ್ ಉಟ್ಟು-ತೊಟ್ಟು ಬಂದು ಕುಣಿವುದೆಂದರೆ ನಮ್ಮ ಹಳ್ಳಿ ಜನರಿಗೆ ಬಹಳ ಆನಂದ. ತೆಂಗಿನ ಪರಟೆಯನ್ನಾಗಲೀ, ವಸ್ತ್ರದ ಚೆಂಡನ್ನಾಗಲೀ ಕಟ್ಟಿಕೊಂಡು ಉಬ್ಬಿದ ಕುಚವನ್ನು ಮಾಡಿಕೊಂಡು ಬಳೆ-ಸರ, ಕಾಲಿಗೆ ಗೆಜ್ಜೆ ಹಾಕಿಕೊಂಡು ಕುಣಿಯುತ್ತ ಬರುತ್ತಾರೆ. ಅವರು ಕುಣಿವುದಕ್ಕೆ ಗುಮಟೆ ಮತ್ತು ಜಾಗಟೆಗಳ ಒನ್ನೆಲೆಯ ವಾದ್ಯಗಳ ಬಡಿತ ವಿರುತ್ತದೆ. ಹೆಣ್ಣಿನ ಸಂಗಡ ಗಂಡೂ ಬಂದು ಕುಣಿದು ಪದ ಹೇಳಬೇಕು.

"ಸೊನಗರ ಮನಿಯಾ ಚಿನ್ನ ಬಂಗರಾ ಬೀದಿಯ ಮೇಲೆ ಚೌಕಾ
ಹೆಣ್ಣಿನ ತಾರಿಫು ಯೇನ ಹೇಳಲೀ ಗಡಗಡ ನಡಿತ್ಕೈತಾ
ಇಂತಾ ಹುಡುಗಿ ಶಂಕಿಲಿದ್ದರೆ ಚಿಂತೆಯಿಲ್ಲ ನಮಗೇ
ಹೆಣ್ಣಿನ ತಾರಿಫು ಯೇನ ಹೇಳಲೀ ಶಂದ್ರುಬಾಳಹಣ್ಣಾ
ಹೆಣ್ಣು ನೋಡಿದರೆ ಬಾಳಿಯಾ ದಿಂಡಿನ್ಹಾಂಗೆ ಕಾಣುತ್ತಾಳೇ

ತಾರಿಫು ಅಂದರೆ ಹೊಗಳಿಕೆ. ಮುದುಕನು ನಾರಿನ ಬಿಳಿಗಡ್ಡ ಮೀಸೆ ಹಚ್ಚಿಕೊಂಡು ಹೆಣ್ಣಿನವೇಷದವನೊಡನೆ ಕುಣಿಯುತ್ತ ಬರುತ್ತಾನೆ. ಆಗಿನ ಪದ :

...ಹಣ್‌ಗಡ್ಡ ಕೋಣೆಸುತ ಬಂದಾ ಶಣಿಯರ ನಾಗಪ್ಪಾ
ತುಂಟ ಬುರುಡೀ ತುಪ್ಪಾ ಕದ್ಮುಡುಗಿ ರಾವುತ ಬರುತಾನಲ್ಲಾ

ಬಾಯಿ ತೆರೆಯುತ್ತ, ಗಡ್ಡ ಕುಣಿಸುತ್ತ ಬರುವ ಮುದುಕನು ಹುಡುಗಿ ಹಿಡಿದು ಎಳೆಯುತ್ತಾನೆ :

ಮುಂಡೆರ ಮಗನೆ ಮೂಗುತಿ ಮುರಿದ್ಹೋಯ್ತಲ್ಲಾ
ಕಲ್ಲುಶಕ್ರಿ ಕಡ್ದ್‌ಹಂಗ್ ಆಯ್ತೋ ಕರಾಕರಾ
ಬೆಲ್ಲದಂತಾ ಮಾತನಾಯ್ತೋ ಗಲ್ಲಾ ಗಲ್ಲಾ
ನಮ್ಮ ಅಡ್ಗೀ ಅಕ್ನಾ ವಗ್ದಂಗ್ ಆಯ್ತೋ ದರಾದರಾ

ವಗ್ದ ಅಂದರೆ ಎಳೆದ ಎಂದು ಅರ್ಥ. ಹೆಣ್ಣಿನ ಪ್ರವೇಶದೃಶ್ಯದಲ್ಲಿ

...ಈಗಿನ ನಾರಿಯುರ ವಯ್ಯಾರಾ ನಾ ಹೇಳುವೆ ಚೂರಾ
ನಾನಾ ನಮುಸಿಯ ರಿಬ್ಬನ್ ಕಟ್ಟೀ ಜೋಲಿ ಬಿಡತಾರಾ

ಮುಂತಾಗಿ ಹೊಸಫ್ಯಾಶನ್ ಬಣ್ಣನೆ ಮಾಡಲು ತೊಡಗುವುದೂ ಉಂಟು. ಹಗರಣದಲ್ಲಿ ವಿವಿಧ ವೇಷ ಹಾಕಿಕೊಂಡು, ವಿವಿಧ ರೀತಿಯ ಜನರ ವೇಷ-ಭೂಷಣ, ಮಾತುಗಳ ಅನುಕರಣೆಯ "ನಕಲಿ" ವೇಷಗಳಿರುವುದರಿಂದ ಗಡ್ಡದ ಸಾಬ, ಫಾರೆಸ್ಟ್‌ಗಾರ್ಡ, ಮಲಯಾಳಿ, ಕಿಂದರಿಜೋಗಿ, ರಾಕ್ಷಸರು, ದೆವ್ವ-ಭೂತಗಳು, ಮಾರಮ್ಮನನ್ನು ತರುವವರು. ಕಲಶ ಹೊತ್ತವರು, ಕ್ರಿಶ್ಚನ್ ಪಾದ್ರಿ, ದಾಸಯ್ಯ, ದೆವ್ವ-ಭೂತಗಳ ಉಚ್ಚಾಟನೆ ಮಾಡಲು ನೋಟನೋಡುವವ. ಹಕ್ಕಿನರಸಣ್ಣ (ಬುಡಬುಡಿಕೆಯ ವೇಷ), ಪೋಲೀಸ, ಪಕ್ಕಾಕಳ್ಳ. ಹೆಂಡದ ಅಮಲಿನಲ್ಲಿ ತೂಗಾಡುತ್ತ ಬರುವವ ಮುಂತಾದ ಯಾವುದೇ ಸೋಗನ್ನು ಅಭಿನಯಿಸಬಹುದು.

ಹಕ್ಕಿನರಸಣ್ಣನ ವೇಷ ಹಾಕಿಕೊಂಡವನ ನಾಲ್ಕು ಮಾತುಗಳನ್ನು ಈ ಕೆಳಗೆ ಕೊಡಲಾಗಿದೆ : ಸ್ವಾಮಿದ್ಯೇವರ ಬುದ್ದೀ ಎಂಬುದು ಪ್ರತಿವಾಕ್ಯದ ಮುಂದೂ ಉಂಟು. ...ಆ ಗಿರಿ, ಈ ಗಿರಿ, ಹೊನ್ನಗಿರಿ, ಚಿನ್ನಗಿರಿ, ಮುತ್ತುರತ್ನರವಗಿರಿ, ಕಂಡ್ ಬಂದೆ ಸ್ವಾಮೀ... ಅಲ್ಲೀ ಕಾಕ್‌ಮಂಡಳಗಿರಿಯನ್ನು ಕಂಡ್ ಬಂದೆ ಸ್ವಾಮೀ...

ಮೂರ್‌ಜನ ಮುದಕೀರು ಮೂಡಿಲ ಬಾಕಲಲ್ಲಿ ಶೋಬನಾಗತ್ಯೆತಿ ಸ್ವಾಮಿ... ನೆರಮನೆ ಹಂಡ ಬೆಕ್ಕು ಬಂದು ಗುರುಮ್ಯಾವ್ ಗುರುಮ್ಯಾವ್ ಅನ್ನತ್ಯೆತೆ ಸ್ವಾಮಿ ದ್ಯೇವರ ಬುದ್ದೀ.

ಯಕ್ಷಗಾನದ ಕೆಲವು ದೃಶ್ಯಗಳನ್ನು ಸಂಗ್ಯಾಬಾಳ್ಯಾ, ಗುಂಡೂ ಬರ್ಮ ಇತ್ಯಾದಿ ಜನಪದ ನಾಟಕದೃಶ್ಯಗಳನ್ನೂ ಅಭಿನಯಿಸುವುದುಂಟು.

ಮಧ್ಯೆಮಧ್ಯೆ ಏನಾದರೂ ಹಾಸ್ಯಪ್ರಸಂಗ, ಮದುವೆ ನಿಶ್ಚಯದ ಮಾತುಕತೆ, ಎಮ್ಮೆಯ ವ್ಯಾಪಾರ ಇತ್ಯಾದಿ ಬರುವುದುಂಟು. ಹಾಗೆಯೇ ಗುಮಟೆ ಬಾರಿಸುತ್ತ ಬಂದು ಪದ ಹೇಳಿಕೊಂಡು ಕುಣಿವುದೂ ಉಂಟು.

ಕರ್ನಾಟಕದಲ್ಲಿ ಮೊದಲು ಸಾರ್ವತ್ರಿಕವಾಗಿದ್ದು, ಈಗ ಉತ್ತರಕನ್ನಡಜಿಲ್ಲೆಯಲ್ಲಿ ಮಾತ್ರ ಜೀವಂತಸಂಪ್ರದಾಯವಾಗಿ ಹಗರಣ ಉಳಿದುದಕ್ಕೆ ೧೬ ನೆಯ ಶತಕದಿಂದ ಯಕ್ಷಗಾನ ಪ್ರಾಬಲ್ಯಕ್ಕೆ ಬಂದುದು ಕಾರಣವಾಗಿರಬಹುದೆಂದು ಹೇಳಲು ಆಸ್ಪದವಿದೆಯೇ ಎಂದು ವಿಚಾರಮಾಡಬೇಕೆಂದು ಡಾ. ಚಿದಾನಂದಮೂರ್ತಿಯವರು ಸೂಚಿಸಿದ್ದಾರೆ. ಆದರೆ ಉತ್ತರಕನ್ನಡಜಿಲ್ಲೆಯಲ್ಲಿ ಯಕ್ಷಗಾನಕಲೆ ಪ್ರಬಲವಾಗಿದ್ದರೂ ಹಗರಣ ಸಹ ಬಹಳ ಪ್ರಚಾರದಲ್ಲಿರುವುದನ್ನು ಇಲ್ಲಿ ಲಕ್ಷಕ್ಕೆ ತೆಗೆದುಕೊಳ್ಳಬೇಕಾಗುತ್ತದೆ. ಉತ್ತರಕನ್ನಡ ಜಿಲ್ಲೆಯಲ್ಲಿ ಧಾರ್ಮಿಕ ಸಾಮಾಜಿಕ ಹಬ್ಬ ಹರಿದಿನಗಳ ಅಂಗವಾಗಿ ಹಗರಣ ಇನ್ನೂ ಜೀವಂತವಾಗಿದೆ.

■ ■

# ಕರ್ನಾಟಕಾಂಧ್ರ ಯಕ್ಷಗಾನ ಸಮೀಕ್ಷೆ

ಬಿ. ರಾಮಚಂದ್ರರಾವ್

ಪಂಡಿತ ಪಾಮರರೆಂಬ ಭೇದವಿಲ್ಲದೆ ಎಲ್ಲರಿಗೂ ಉಪಭೋಗ್ಯವಾದ ಸಂಗೀತ, ಸಾಹಿತ್ಯ, ನೃತ್ಯ, ಅಭಿನಯಗಳ ಸಂಗಮವಾದ 'ಯಕ್ಷಗಾನ' ಕಲೆ ಕರ್ನಾಟಕಾಂಧ್ರದೇಶಗಳಲ್ಲಿ ಸುಮಾರು ೬೦೦ ವರ್ಷಗಳಿಂದ ಬೆಳೆದುಬಂದಿದೆ. ಈ ಕಲೆ ೧೭ ನೆಯ ಶತಮಾನದಲ್ಲಿ ತಮಿಳುದೇಶದಲ್ಲೂ ಯಕ್ಷಗಾನಗಳ ರಚನೆಗೆ ಮಾರ್ಗದರ್ಶಕವಾಯಿತು. ಈ ಕಲೆಯ ಪ್ರದರ್ಶನಸೌಲಭ್ಯಕ್ಕನುಗುಣವಾಗಿ ರಚಿತವಾದ ಕೃತಿಗಳು ಯಕ್ಷಗಾನಕೃತಿಗಳು. ತೆಲುಗಿನಲ್ಲಿ ಸುಮಾರು ೩೬೦, ಕನ್ನಡದಲ್ಲಿ ಸುಮಾರು ೨೬೮ ಯಕ್ಷಗಾನ ಕೃತಿಗಳ ಪ್ರಸಕ್ತಿ ಕಂಡುಬರುತ್ತದೆ. ಒಂದು ಕಾಲದಲ್ಲಿ ಕರ್ನಾಟಕಾಂಧ್ರ ದ್ರಾವಿಡ ದೇಶಗಳಲ್ಲಿ ಪ್ರಚಲಿತವಾಗಿದ್ದ ಈ ಜನಪ್ರಿಯ ಕಲೆಯ ಪ್ರದರ್ಶನವನ್ನು ಸುವ್ಯವಸ್ಥಿತವಾಗಿ ಇಂದಿಗೂ ಕರ್ನಾಟಕ ಉಳಿಸಿಕೊಂಡಿದೆ. ಮುಖ್ಯವಾಗಿ ಉತ್ತರ-ದಕ್ಷಿಣಕನ್ನಡ, ಶಿವಮೊಗ್ಗ ಜಿಲ್ಲೆಗಳಲ್ಲಿ ಪರಂಪರೆಯನ್ನನುಸರಿಸಿಕೊಂಡು ಬಂದಿರುವ ಯಕ್ಷಗಾನ (ದಶಾವತಾರ) ಮೇಳಗಳು ಜೀವಂತವಾಗಿವೆ. ಆಂಧ್ರವಾಙ್ಮಯದಲ್ಲಿ ಯಕ್ಷಗಾನ ಕೃತಿಗಳ ರಚನೆ ಒಂದು ವಿಶಿಷ್ಟಸಾಹಿತ್ಯಶಾಖೆಯಾಗಿ ಬೆಳೆದುಬಂದಿದೆ. ಆದರೆ ಅದರ ಪ್ರದರ್ಶನ ಇಂದು ಆಂಧ್ರದೇಶದಲ್ಲಿ ಅಷ್ಟೊಂದು ಜನಪ್ರಿಯವಾಗಿದ್ದಂತೆ ಕಂಡುಬರುವುದಿಲ್ಲ. ನಮ್ಮಲ್ಲಿ ಊರೂರು ತಿರುಗಿ ಯಕ್ಷಗಾನ ಬಯಲಾಟ ಪ್ರದರ್ಶನಗಳನ್ನು ನೀಡುವ ಕಟೀಲು, ಧರ್ಮಸ್ಥಳ, ಮಂದರ್ತಿ, ಮೂಲ್ಕಿ, ಕೂಡಾವು, ಇಡಗುಂಜಿ ಮೊದಲಾದ ಯಕ್ಷಗಾನ ಮೇಳಗಳಿರುವಂತೆ ಹಿಂದೆ ಸಿದ್ಧೇಂದ್ರಯೋಗಿ ಮೇಳ(೧೬ ನೆಯ ಶತಮಾನ), ದಶರಥರಾಮಯ್ಯನವರ ಮೇಳ(೧೮ ನೆಯ ಶತಮಾನ), ತಂಜಾವೂರಿಗೆ ಸಮೀಪವಿರುವ ಮೆಲಟ್ಟೂರು ಭಾಗವತಮೇಳ (೧೮ ನೆಯ ಶತಮಾನ), ಲೇಪಾಕ್ಷಿಮೇಳ(೧೯ ನೆಯ ಶತಮಾನ), ವೇಮುಲಪಲ್ಲಿಮೇಳ, ತಾಡಿಪತ್ರಿಮೇಳ, ಪಲ್ನಾಟಿಸೀಮೆಮೇಳ(೨೦ ನೆಯ ಶತಮಾನ) ಮೊದಲಾದ

ಪ್ರಸಿದ್ಧ ತೆಲುಗುಯಕ್ಷಗಾನಮೇಳಗಳಿದ್ದವು. ಇಂದಿಗೂ ಆಂಧ್ರಪ್ರದೇಶದ ತೆಲಂಗಾಣಸೀಮೆಯ ವರಂಗಲ್ಲು, ಕರೀಂನಗರ ಜಿಲ್ಲೆಗಳಲ್ಲಿ ಯಕ್ಷಗಾನವನ್ನು ಪ್ರದರ್ಶಿಸುವ ಮೇಳಗಳು ಸಜೀವವಾಗಿವೆ. ಇವುಗಳ ಪ್ರದರ್ಶನಗಳಲ್ಲಿ ಪ್ರಾಚೀನ ಸಂಪ್ರದಾಯ ಸುರಕ್ಷಿತವಾಗಿದೆ.[೧] ಸಾಂಸ್ಕೃತಿಕೋತ್ಸವಗಳಲ್ಲಿ ತೆಲುಗುಯಕ್ಷಗಾನ ಪ್ರದರ್ಶನಗಳನ್ನು ಏರ್ಪಡಿಸುವುದಿದೆ. ಆದರೆ ಕರ್ನಾಟಕದಲ್ಲಿ ಯಕ್ಷಗಾನಪ್ರದರ್ಶನ ಜನಪ್ರಿಯತೆಯನ್ನುಳಿಸಿಕೊಂಡಂತೆ ಆಂಧ್ರದೇಶದಲ್ಲಿ ಉಳಿಸಿಕೊಂಡಿಲ್ಲ.

**ಯಕ್ಷಗಾನದ ಉತ್ಪತ್ತಿ :** ಯಕ್ಷಗಾನದ ಉತ್ಪತ್ತಿಯನ್ನು ಕುರಿತು ತೆಲುಗು ವಿದ್ವಾಂಸರೊಳಗೆ ಮೂರುವಾದಗಳಿವೆ : ಆಂಧ್ರದೇಶದಲ್ಲಿ ಪ್ರಾಚೀನಕಲಾಸಂಪ್ರದಾಯಗಳಿಗೆ ಆಧಾರಭೂತರಾದ 'ಜಕ್ಕುಲ' ಜಾತಿಯವರಿಂದ ಯಕ್ಷಗಾನ ಕಲೆ ಉಗಮ ಹೊಂದಿರಬೇಕೆಂಬುದು ಒಂದನೆಯ ವಾದ. ಎರಡನೆಯದು ಕೊರವಂಜಿವಾದ : ನಗರದ ಹೊರಗಡೆ ಅಡವಿಗಳಲ್ಲಿ ವಾಸಿಸುವ 'ಕೊರವ' ಜಾತಿಯ ಜನ ಶಿವಕ್ಷೇತ್ರಗಳಾದ ಶ್ರೀಶೈಲ, ಇಂದ್ರಕೀಲಾದ್ರಿ(ಬೆಜವಾಡದಲ್ಲಿರುವ ಪರ್ವತ)ಗಳಲ್ಲಿಯೂ ನೃಸಿಂಹ ಕ್ಷೇತ್ರಗಳಾದ ಮಂಗಳಾದ್ರಿ, ಸಿಂಹಾದ್ರಿ, ಗರುಡಾದ್ರಿ, ವೆಂಕಟಾದ್ರಿ ಮೊದಲಾದ ಪರ್ವತಗಳಲ್ಲಿಯೂ ನಡೆಯುವ ಜಾತ್ರೆಗಳ ಸಂದರ್ಭಗಳಲ್ಲಿ ಅಲ್ಲಿಗೆ ಬರುವ ಯಾತ್ರಿಕರ ವಿನೋದಾರ್ಥವಾಗಿ ತಮ್ಮ ಕುಣಿತ, ಹಾಡುಗಳನ್ನು ಪ್ರದರ್ಶಿಸಿ ಧನಾರ್ಜನೆಮಾಡುತ್ತಿದ್ದರು. 'ಕೊರವಂಜಿ' ಎಂಬ ಹೆಸರು ಮೊದಲು ಅವರ ನೃತ್ಯಗಳಿಗೂ ಅನಂತರ ಅವರ ಗೇಯರಚನೆಗಳಿಗೂ ಅನ್ವಯಿಸುತ್ತಿದ್ದು ಕ್ರಮೇಣ ಆಯಾ ಪರ್ವತಪ್ರದೇಶಗಳ ಸ್ಥಳಮಾಹಾತ್ಮ್ಯಕಥೆಗಳೂ ಶಿವ–ವಿಷ್ಣು ಲೀಲೆಗಳೂ ಅದರೊಡನೆ ಸೇರಿ ಗೇಯ ವಿಶಿಷ್ಟವಾದ ನಾಟ್ಯರೂಪಗಳಾಗಿ ಪರಿಣಮಿಸಿದುವು. ಅನಂತರ 'ಜಕ್ಕುಲ'ಜಾತಿಯವರಾದ ಕಲಾವಿದರು ಅವುಗಳನ್ನು ನಗರಗಳಲ್ಲಿ ಅನುಸರಿಸುತ್ತಾ ಬಂದರೆಂದೂ ನೃತ್ಯಾಭಿನಯಗಳೊಡನೆ ಕಥಾಕಥನಗಳು ಸೇರಿರಬೇಕೆಂದೂ ಈ ವಾದ ಪ್ರತಿಪಾದಿಸುತ್ತದೆ.[೨] ಗೊಂಬೆಯಾಟಗಳ ವಿಕಾಸವೇ ಯಕ್ಷಗಾನವೆಂಬುದು ಮೂರನೆಯ ವಾದ. ಈ ಮೂರು ವಾದಗಳಲ್ಲಿ ಯಕ್ಷಗಾನಕ್ಕೂ 'ಜಕ್ಕುಲ' ಜಾತಿಯವರಿಗೂ ಇರುವ ಸಂಬಂಧವನ್ನು ಪ್ರತಿಪಾದಿಸುವ ವಾದವೇ ಅಂಗೀಕಾರಯೋಗ್ಯವೆಂದು ವಿದ್ವಾಂಸರ ಮತ.

'ಕೊರವಂಜಿ'ದೃಶ್ಯರಚನಾಪ್ರಕ್ರಿಯೆ ತೆಲುಗು, ತಮಿಳು, ಕನ್ನಡಗಳಲ್ಲಿ ೧೭–೧೮ನೆಯ ಶತಮಾನಕ್ಕಿಂತ ಪೂರ್ವದಲ್ಲಿ ಕಂಡುಬರುವುದಿಲ್ಲ. ಉದಾ :

ತೆಲುಗು : ರಾಜಮೋಹನ ಕೊರವಂಜಿ (ಕ್ರಿ. ಶ. ೧೭೮೪–೧೭೮೨)[೩]

---

೧ ರಾಮರಾಜು, ಬಿ. ಯಕ್ಷಗಾನ ವಾಙ್ಮಯಮು. ಕಳಾಪ್ರವಂತಿ ಪ್ರಚುರಣ–೬ (ಹೈದರಾಬಾದ್. ೧೯೭೨). ಪುಟ ೨೦.

೨ ಜೋಗರಾವ್, ಎಸ್. ವಿ. ಆಂಧ್ರಯಕ್ಷಗಾನವಾಙ್ಮಯ ಚರಿತ್ರ. ಆಂಧ್ರ ವಿಶ್ವಕಳಾ ಪರಿಷತ್ಪ್ರಕಾಶಿತ (ವಾಲ್ತೇರು, ೧೯೬೧). ಪುಟ ೩೧–೩೭.

೩ ಜೋಗರಾವ್, ಎಸ್. ವಿ. ಆಂಧ್ರಯಕ್ಷಗಾನವಾಙ್ಮಯ ಚರಿತ್ರ. ಪುಟ ೪೦ ಮತ್ತು ೩೧೫.

ಕನ್ನಡ : ಪದ್ಮಾವತಿಯ ಕೊರವಂಜಿ (ಕ್ರಿ. ಶ. ೧೭೨೦)[೪]
ಪಾರ್ವತಿ ಕೊರವಂಜಿ (ಕ್ರಿ. ಶ. ೧೯೦೦) ಇತ್ಯಾದಿ.

ಹದಿನೇಳನೆಯ ಶತಮಾನದ ಯಕ್ಷಗಾನಗಳಲ್ಲಿ ಜಕ್ಕಿಣಿನಾಟ್ಯದೊಡನೆ ಕೊರವಂಜಿ ನಾಟ್ಯ ಕೂಡ ಪ್ರತ್ಯೇಕವಾಗಿ ಹೆಸರಿಸಲ್ಪಟ್ಟಿದೆ. ಯಕ್ಷಗಾನಗಳಲ್ಲಿ 'ಕೊರವಂಜಿ' (ಕಣಿ ಹೇಳುವ ಕೊರವಜಾತಿಯ ಸ್ತ್ರೀ) ಎಂಬ ಪಾತ್ರ ಪ್ರವೇಶಿಸುವುದರಿಂದ ಅಂಥವುಗಳಿಗೆ 'ಕೊರವಂಜಿ ಕಟ್ಟಿ' ಯಕ್ಷಗಾನಗಳೆಂಬ ಹೆಸರು ಬಂದಿರಬೇಕು.

ಗೊಂಬೆಯಾಟಗಳಿಗೂ ಯಕ್ಷಗಾನಗಳಿಗೂ ಗಾಢವಾದ ಸಂಬಂಧ ಕಂಡುಬರುತ್ತದೆ ನಿಜ. ಆದರೆ ಗೊಂಬೆಯಾಟದ ಕಲೆ ಕ್ರಿಸ್ತಶಕಕ್ಕೆ ಪೂರ್ವದಲ್ಲೇ ಆಂಧ್ರಪ್ರದೇಶದಲ್ಲಿ ಇದ್ದಂತೆಯೂ ಅಲ್ಲಿಂದಲೇ ಬೇರೆಬೇರೆ ದೇಶಗಳಿಗೆ ಹೋದಂತೆಯೂ ತಿಳಿಯುವುದಕ್ಕೆ ಆಧಾರಗಳಿವೆ. ಗೊಂಬೆಯಾಟ ಮತ್ತು ಯಕ್ಷಗಾನ ಒಂದುಕಾಲದಲ್ಲಿ ಬೇರೆಬೇರೆ ಕಲೆಗಳಾಗಿ ಜತೆ ಜತೆಯಲ್ಲೇ ಬೆಳೆದುಬಂದಿವೆಯಲ್ಲದೆ ಒಂದರಿಂದ ಇನ್ನೊಂದು ಉತ್ಪತ್ತಿಯಾಯಿತು ಎನ್ನುವುದಕ್ಕೆ ಆಧಾರಗಳಿಲ್ಲ.

**ಕರ್ಣಾಟಕಾಂಧ್ರವಾಙ್ಮಯಗಳಲ್ಲಿ ಯಕ್ಷ, ಯಕ್ಷಗಾನ ಪ್ರಸಕ್ತಿ :** ಯಕ್ಷನಾಮವಿರುವ ಜಾತಿಯ ಪ್ರಸಕ್ತಿ, ಯಕ್ಷಜಾತಿಯ ಪ್ರತಿಷ್ಠೆ ಹಿಂದೂ, ಜೈನ, ಬೌದ್ಧ ಮತಗ್ರಂಥಗಳಲ್ಲಿ ಸಿಂಹಳದಿಂದ ನೇಪಾಳದ ವರೆಗೂ ವ್ಯಾಪಿಸಿರುವುದು ಕಂಡುಬರುತ್ತದೆ. ದೇವತೆಗಳೆಂದೂ ದೇವಯೋನಿಗಳೆಂದೂ ಕರೆಯಲ್ಪಡುವ ಯಕ್ಷರು ದೇಶಾಟನೆಯಿಂದ ಜೀವಿಸುವ ಒಂದು ಅಲೆಮಾರಿ ಮೂಲಜನಾಂಗದವರಾದ ಭಾವುಜೀವಿಗಳಾಗಿದ್ದಿರಬೇಕೆಂದೂ ಅವರು ಯಕ್ಷಾರಾಧಕರಾಗಿದ್ದುದರಿಂದಲೋ ಅಥವಾ ಯಕ್ಷ ವೇಷವನ್ನು ಧರಿಸುವುದೇ ವೃತ್ತಿಯಾಗಿದ್ದ ಕಲಾವಿದರಾಗಿದ್ದುದರಿಂದಲೋ ಅವರಿಗೆ ಆ ಹೆಸರು ರೂಢಿಪಡೆದಿರಬೇಕೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಕನ್ನಡಸಾಹಿತ್ಯದಲ್ಲಿ 'ಯಕ್ಷಾಂದೋಳ'ವೆಂಬ ನಾಟ್ಯದ ಪ್ರಸಕ್ತಿ ಅಭಿನವಪಂಪನ (ಕ್ರಿ. ಶ. ೧೧೦೦) ಮಲ್ಲಿನಾಥಪುರಾಣದಲ್ಲಿ (ಆ. ೨, ಪ. ೪೭) ಬರುತ್ತದೆ. ಮಲ್ಲಿನಾಥ ತೀರ್ಥಂಕರನ ಬಾಲ್ಯದಲ್ಲಿ ಇಂದ್ರನಾಡುವ ನಾಟ್ಯವು 'ಯಕ್ಷಾಂದೋಳವು'ನಾಡುವ ರೀತಿಯಲ್ಲಿದ್ದಿತೆಂದು ಕವಿ ವರ್ಣಿಸಿದ್ದಾನೆ. ಈ ಸಂದರ್ಭದಲ್ಲಿ 'ಯಕ್ಷಾಂದೋಳ'ವೆಂದರೆ ಯಕ್ಷರೆಂಬ ದೇಶೀಯರು ಆಡುತ್ತಿದ್ದ ಬಗೆಬಗೆಯ ಆಟಗಳಲ್ಲಿ ಒಂದಾಗಿದ್ದಿರಬೇಕೆಂದು ಊಹಿಸಲಾಗಿದೆ. ಇನ್ನು ಮಲ್ಲಿನಾಥ ಪುರಾಣದ

"...ನುಣ್ಣರದಿನಾಣತಿಮಾಡಿದುದ ನ್ಮದಾಳಿ ತಾ
ವರೆಯೊಳಗಿರ್ದ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನಂದದಿಂ" (ಆ. ೬, ಪ. ೯೮)

---

೪ ಕೃಷ್ಣರಾವ್, ಕೆ. ಎಂ. ಯಕ್ಷಗಾನ ಸಾಹಿತ್ಯ, ವಿ. ಬಿ. ನಬಳ್ಳಿ ಪ್ರಕಾಶನ (ಧಾರವಾಡ, ೧೯೫೬), ಪುಟ ೯೯–೧೦೦.

ಮತ್ತು ಅಗ್ಗಳನ (ಕ್ರಿ.ಶ. ೧೧೮೯) ಚಂದ್ರಪ್ರಭ ಪುರಾಣದ

"ತಾಳಮನಿತ್ತು ಸಮ್ಮನಿಸದೊತ್ತುವ ಪಂಚಮ ನುಣ್ಚರಕ್ಕಣಂ
ಪೋಳತೆಯಿಲ್ಲ, ಬೀಣೆಯ ಸರಂ ಬಿಡವಿಲ್ಲಿಯೆನಿಪ್ಪ ಠಾಯೆಯಿಂ
ದಾಣತಿಮಾಡಿ ಸಾಳಗದ ದೇಸಿಯ ಗೀತಮನಂದು ಪಾಡುವಿಂ
ಪಾಣಸರ್ವರಾಧಿಪತಿ ಲೀಲೆಯಿನೆಕ್ಕಲಗಾಣನೊರ್ವನಂ"

(ಆ. ೭, ಪ. ೯೬)

ಎಂಬ ಪದ್ಯಗಳಲ್ಲಿ ಬರುವ 'ಎಕ್ಕಲಗಾಣ' ಎಂಬ ಪದ 'ಯಕ್ಷಗಾನ'ದ ಅಪಭ್ರಂಶವೆಂದು ಹೇಳಲಾಗಿದೆ.[೫]

ಇವಲ್ಲದೆ ರತ್ನಾಕರವರ್ಣಿಯು (ಕ್ರಿ. ಶ. ೧೫೬೦) ಭರತೇಶವೈಭವದಲ್ಲಿ

"ಬಲದೊಳು ಭೂಭುಜರೆಡದಲ್ಲಿ ಗಣಿಕೆಯ । ರೊಲುಮೆಯು ಕವಿಗಳು ಮುಂದೆ ॥
ನಿಲೆ ಹಿಂದೆ ಹಿತವರು ಬಳಸಿದೆಕ್ಕಡಿಗರ । ಬಜಾವಣೆಯೊಳೊಪ್ಪಿದನು" ॥

(ಆಸ್ಥಾನ ಸಂಧಿ, ಪದ್ಯ ೫೪)

"ಗಣಿಕೆಯರೆಕ್ಕಡಿಗರು ನಾಟ್ಯಶಾಸ್ತ್ರ ಲ । ಕ್ಷಣಿಕರು ಭಾವರಂಜಕರು ॥
ಗುಣಿಗಳು ಮಂತ್ರಿಗಳರಸನ ಕಂಡು ಕಿಂ । ಕಿಣಿಯಾಗಿ ಕುಳಿತರೋಜೆಯೊಳು"॥

(ಪೂರ್ವನಾಟಕ ಸಂಧಿ, ಪದ್ಯ ೨೯)

ಎಂಬುದಾಗಿ 'ಎಕ್ಕಡಿಗ'ರೆಂಬವರನ್ನು ನಾಟ್ಯ, ವಾದ್ಯ, ಭಾವರಂಜನೆಗಳಿಗೆ ಸಂಬಂಧ ಪಟ್ಟು ಪ್ರಸ್ತಾಪಿಸಲಾಗಿದೆ. ಈ 'ಎಕ್ಕಡಿಗ' ಪದಕ್ಕೂ 'ಯಕ್ಷ' ಶಬ್ದಕ್ಕೂ ಸಂಬಂಧ ವಿರಬೇಕೆಂಬುದನ್ನು ಊಹಿಸಲಾಗಿದೆ.

ತೆಲುಗುಸಾಹಿತ್ಯದಲ್ಲಿ ಮೊಟ್ಟಮೊದಲಿಗೆ ನೃತ್ಯಗಾನಗಳೊಂದಿಗೆ 'ಯಕ್ಷ' ವೇಷದ ಪ್ರಸಕ್ತಿ ಕಂಡುಬರುವುದು ಪಾಲ್ಕುರಿಕೆ ಸೋಮನಾಥನ (ಕ್ರಿ. ಶ. ೧೨೮೦-೧೩೪೦) ಪಂಡಿತಾರಾಧ್ಯಚರಿತ್ರೆಯಲ್ಲಿ. ಅದು ಶಿವರಾತ್ರಿ ಜಾಗರಣ ಸಂದರ್ಭ. ಈ ಸಂದರ್ಭದಲ್ಲಿ ನೆರೆದಿರುವ ಯಾತ್ರಿಕರು ವಿವಿಧ ವೇಷ ನಾಟ್ಯಗಾನಗಳನ್ನು ನೋಡುತ್ತಾ ಕೇಳುತ್ತಾ ಕಾಲಕಳೆಯುತ್ತಿದ್ದರು;

"ಆದಟ ಗಂಧರ್ವ ಯಕ್ಷ ವಿದ್ಯಾಧ
ರಾದುಲೈ ಪಾಡೆದು ನಾಡೆದು ವಾರು
ವಿಧಮುನ ಬ್ರಹ್ಮನ್ನವೇಷಮುಲ್ ದಾಲ್ಚಿ
ಯಧಿಕೋತ್ಸವಮುದುಲುಕಾಡನಟ್ಲಾಡು"

(ಪಂಡಿತಾರಾಧ್ಯ ಚರಿತ್ರ : ಪರ್ವತ ಪ್ರಕರಣ, ಪುಟ ೪೩೬)

---

೫ ತಿಮ್ಮಪ್ಪಯ್ಯ. ಮುಳಿಯ. ಪಾರ್ತಿಸುಬ್ಬ. ಪುಟ ೩೦-೩೧ ಮತ್ತು ಶಿವರಾಮ ಕಾರಂತ. ಯಕ್ಷಗಾನ ಬಯಲಾಟ. ಪುಟ ೬೬-೬೭.

(ಅಲ್ಲಿ ಕೆಲವರು ಗಂಧರ್ವ, ಯಕ್ಷ, ವಿದ್ಯಾಧರಾದಿ ವೇಷಗಳನ್ನು ಧರಿಸಿಕೊಂಡು ಹಾಡುತ್ತಾ ಬಗೆಬಗೆಯ ನಾಟ್ಯಗಳನ್ನಾಡುತ್ತಿದ್ದರು). ಅನಂತರ ಶ್ರೀನಾಥಕವಿಯು (ಕ್ರಿ. ಶ. ೧೪೩೦) 'ಭೀಮೇಶ್ವರ ಪುರಾಣ'ದಲ್ಲಿ "ಕೀರ್ತಿಂತುರೆದ್ದಾನಿ ಕೀರ್ತಿಗಂಧರ್ವುಲು ಗಾಂಧರ್ವಮುನ ಯಕ್ಷಗಾನ ಸರಣಿ" (ಆಶ್ವಾಸ ೩, ಪದ್ಯ ೬೫) (ದಕ್ಷಾರಾಮಕ್ಷೇತ್ರದ ಕೀರ್ತಿಯನ್ನು ಗಂಧರ್ವರು ಗಾಂಧರ್ವದಲ್ಲಿ ಯಕ್ಷಗಾನ ಸರಣಿಯಿಂದ ಸ್ತುತಿಸುತ್ತಿದ್ದರು) ಎಂದಿದೆ. 'ಯಕ್ಷಗಾನ'ವೆಂಬ ಸಮಸ್ತಪದ ವಿಶಿಷ್ಟಾರ್ಥದಲ್ಲಿ ತೆಲುಗುಸಾಹಿತ್ಯದಲ್ಲಿ ದೊರೆಯುವುದು ಇದೇ ಮೊದಲು. ಸಂಸ್ಕೃತ ಭೀಮೇಶ್ವರಪುರಾಣದಲ್ಲಿ (ಅಧ್ಯಾಯ ೧೦, ಶ್ಲೋ. ೧೯) ಇಲ್ಲದ 'ಯಕ್ಷಗಾನ' ಶಬ್ದ ಆಂಧ್ರ ಭೀಮೇಶ್ವರಪುರಾಣದಲ್ಲಿ ಬಂದಿರುವುದರಿಂದ ಆ ಕಾಲದಲ್ಲಿ 'ಯಕ್ಷಗಾನ'ಕ್ಕೊಂದು ಪ್ರತ್ಯೇಕತೆ, ಪ್ರಚಾರ ಬಂದಿದೆಯೆಂದು ವಿದಿತವಾಗುತ್ತದೆ. ಗಂಧರ್ವರು 'ಯಕ್ಷಗಾನ' ಸರಣಿಯಿಂದ ಹಾಡಿದ ರೆಂದರೆ ಶ್ರೀನಾಥನ ಕಾಲಕ್ಕೆ ಅದೊಂದು ಪ್ರತ್ಯೇಕ ಗಾನಶೈಲಿಯಾಗಿ ಪರಿಗಣಿಸಲ್ಪಡು ತ್ತಿತ್ತೆಂಬುದು ಸ್ಪಷ್ಟ.

ಶ್ರೀನಾಥನ ಸಮಕಾಲೀನನಾದ ವಿನುಕೊಂಡ ವಲ್ಲಭರಾಯನ (ಕ್ರಿ. ಶ. ೧೫ನೆಯ ಶತಮಾನ) ಆಂಧ್ರ'ಕ್ರೀಡಾಭಿರಾಮ' ವೀಧಿನಾಟಕದಲ್ಲಿ 'ಜಕ್ಕುಲ ಪುರಂಧ್ರಿ'ಯ ಗಾನ ಕಳಾಕೌಶಲವು ವಿಶೇಷವಾಗಿ ಪ್ರಶಂಸಿಸಲ್ಪಟ್ಟಿದೆ (ಪದ್ಯ ೧೩೭, ೧೩೮)[೬]. ಹದಿನಾರ ನೆಯ ಶತಮಾನದ ಅಲಸಾನಿ ಪೆದ್ದನ್ನನೆಂಬ ಕವಿ ರಚಿಸಿದ 'ಮನುಚರಿತ್ರೆ'ಯೆಂಬ ತೆಲುಗು ಪ್ರಬಂಧ ಕಾವ್ಯದಲ್ಲಿ "ಗಂಧರ್ವ ಯಕ್ಷಗಾನಗಳಿಂದ ಘೂಣಿಸುವ...(II-೧೯)" ಎಂಬುದಾಗಿ ಹಿಮವತ್ಪರ್ವತಪ್ರದೇಶ ವರ್ಣನೆಯಲ್ಲಿಯೂ ಇದೇ ಶತಮಾನದ ನಂದಿ ತಿಮ್ಮಣ್ಣನೆಂಬ ಕವಿಯು 'ಪಾರಿಜಾತಾಪಹರಣ' ಕಾವ್ಯದಲ್ಲಿ ಯಕ್ಷರು ಮೇಳ ದೊಡನೆ ದಿಕ್ಪಾಲಕರ ಸಭೆಗಳಲ್ಲಿ ಹಾಡುತ್ತಿದ್ದರು... (II-೯೨) ಎಂಬ ವರ್ಣನೆ ಯಲ್ಲಿಯೂ 'ಯಕ್ಷಗಾನ', 'ಯಕ್ಷ' ಶಬ್ದಗಳು ಕಂಡುಬರುತ್ತವೆ. ಒಟ್ಟಿನಲ್ಲಿ ಹೇಳುವುದಾದರೆ ಕರ್ನಾಟಕಾಂಧ್ರಸಾಹಿತ್ಯಗಳಲ್ಲಿ ಯಕ್ಷರ ಗಾನಾಭಿನಯಕಲೆಗಳ ಪ್ರಸಕ್ತಿ ೧೨ನೆಯ ಶತಮಾನಕ್ಕಿಂತ ಪ್ರಾಚೀನವಾಗಿ ಕಂಡುಬರುವುದಿಲ್ಲ.

ಶ್ರೀಶೈಲಾದಿ ಕ್ಷೇತ್ರಗಳಲ್ಲಿ ಶಿವರಾತ್ರಿ ಜಾಗರಣೆಯೇ ಮೊದಲಾದ ಜಾತ್ರೆಗಳ ಸಂದರ್ಭ ಗಳಲ್ಲಿ ಯಾತ್ರಿಕರ ವಿನೋದಾರ್ಥವಾಗಿ ಗಂಧರ್ವ ಯಕ್ಷ ವೇಷಗಳನ್ನು ಧರಿಸುತ್ತಾ ಗಾನಕಾಲಕ್ಷೇಪವನ್ನು ಮಾಡುವುದೇ ಪ್ರಧಾನ ವೃತ್ತಿಯಾಗಿದ್ದ ಒಂದು ಜಾತಿಯ ಜನರಿಗೆ ಅವರ ವೃತ್ತಿಗೆ ಸಂಬಂಧಿಸಿದ 'ಯಕ್ಷ' ಶಬ್ದವೇ ಅವರ ಜಾತಿವಾಚಕವಾಗಿ ಜನವ್ಯವಹಾರದಲ್ಲಿ ಕ್ರಮೇಣ ಅದು 'ಜಕ್ಕ' ಶಬ್ದವಾಗಿ ಮಾರ್ಪಟ್ಟಿರಬೇಕು : ಜಕ್ಕಲು > ಜಕ್ಕುಲು = ಜಕ್ಕರು(ಯಕ್ಷರು) — 'ಲು' ತೆಲುಗಿನಲ್ಲಿ ಬಹುವಚನ ಪ್ರತ್ಯಯ. ಈ 'ಜಕ್ಕುಲು' ಜಾತಿಯವರು ವೇಶ್ಯಾವೃತ್ತಿಯಿಂದ ಜೀವಿಸುತ್ತಿದ್ದರು,

---

೬ ರಾಮರಾಜು, ಬಿ. ಯಕ್ಷಗಾನ ವಾಙ್ಮಯಮು, ಪುಟ ೩.

ಇಂದಿಗೂ ಆಂಧ್ರದೇಶದ ಗುಂಟೂರು, ಗೋದಾವರಿ, ತೆನಾಲಿ, ಪೆದ್ದಾಪುರ ಮಂಡಲಗಳಲ್ಲಿ ಈ 'ಜಕ್ಕುಲ' ಸಂತತಿಯವರಿದ್ದಾರೆ. ಮಾತ್ರವಲ್ಲದೆ ಜಕ್ಕಸಾನಿಕುಂಟ್ಲ (ಕರ್ನೂಲುಜಿಲ್ಲೆ), ಜಕ್ಕುಲಾಡಿ(ಬಳ್ಳಾರಿಜಿಲ್ಲೆ), ಜಕ್ಕುಲ ಚೆರುವು(ಗುತ್ತಿ ತಾಲೂಕು), ಜಕ್ಕಸಮುದ್ರ (ಹಿಂದೂಪುರ ತಾಲೂಕು) ಇತ್ಯಾದಿ ಸ್ಥಳನಾಮಗಳು ಜಕ್ಕುಲ ಜಾತಿಯ ಜನರ ನೆಲೆಯ ಕುರುಹುಗಳನ್ನೂ ಪ್ರಾಚುರ್ಯವನ್ನೂ ವ್ಯಕ್ತಪಡಿಸುತ್ತವೆ.

ತೆಲುಗಿನ 'ಜಕ್ಕ' ಶಬ್ದ ಸಂಸ್ಕೃತ 'ಯಕ್ಷ' ಶಬ್ದದ ತದ್ಭವರೂಪ. ಕನ್ನಡಸಾಹಿತ್ಯದಲ್ಲಿ 'ಯಕ್ಷ' ಶಬ್ದಕ್ಕೆ 'ಜಕ್ಕ' ಎಂಬ ತದ್ಭವರೂಪ ದೊರೆಯುತ್ತದೆ. ಉದಾ: "ಕುಬೇರನಿಂ ಕಪ್ಪಂಗೊಂಡು ಪೊನ್ನಂ ಜಕ್ಕರೆಕ್ಕೆಯಿಂ ಪೊತ್ತು ಬರೆ" (ಪಂಪ ಭಾರತ, ಆ. ೬. ಪ. ೩೨, ವಚನ). ಯಕ್ಷಶಬ್ದ ಜಕ್ಕ ಮಾತ್ರವಲ್ಲದೆ ಜನಸಾಮಾನ್ಯರ ಭಾಷೆಯಲ್ಲಿ 'ಎಕ್ಕ' ಕೂಡ ಆಗುವ ಸಾಧ್ಯತೆ ಇದೆ. ಉದಾ : ಯತ್ನ > ಎತ್ನ, ಯಂತ್ರ > ಎಂತ್ರ, ಯಮ > ಎಮ ಇತ್ಯಾದಿ. ಎಕ್ಕಲಜೋಗ 'ಜೋಗಿಗಳಲ್ಲಿ ಒಂದು ಜಾತಿ', ಎಕ್ಕಲದೇವಿ 'ರೇಣುಕೆ', ಎಕ್ಕಲವಾಡ 'ಒಂದು ಊರಿನ ಹೆಸರು' (ಕನ್ನಡ ಸಾಹಿತ್ಯ ಪರಿಷತ್ತಿನ ನಿಘಂಟು, ಬೆಂಗಳೂರು) ಇತ್ಯಾದಿ ಪದಗಳನ್ನು ಗಮನಿಸಿದರೆ ಯಕ್ಷ(=ಒಂದು ದೇವತೆ)ಶಬ್ದಕ್ಕೂ 'ಎಕ್ಕಲ' ಶಬ್ದಕ್ಕೂ ಸಂಬಂಧವಿದ್ದಂತೆ ಕಂಡು ಬರುತ್ತದೆ. ಆದರೆ ಮಲ್ಲಿನಾಥಪುರಾಣ, ಚಂದ್ರಪ್ರಭಪುರಾಣಗಳಲ್ಲಿ ಬರುವ 'ಎಕ್ಕಲಗಾಣ' 'ಯಕ್ಷಗಾನ'ದ ಅಪಭ್ರಂಶವೆಂಬುದನ್ನು ಶ್ರೀ ಕುಕ್ಕಿಲ ಕೃಷ್ಣಭಟ್ಟರು ಒಪ್ಪುವುದಿಲ್ಲ. ಅವರ ಅಭಿಪ್ರಾಯದಂತೆ 'ಯಕ್ಷಗಾನ'ದ ತದ್ಭವವು 'ಜಕ್ಕಗಾನ'ವೊ ಎಕ್ಕಗಾನ'ವೊ ಆಗಬೇಕಲ್ಲದೆ 'ಎಕ್ಕಲಗಾಣ'ವಾಗಲಾರದು. 'ಎಕ್ಕಲಗಾಣ'ದಲ್ಲಿ ಕಂಡುಬರುವ 'ಲ'ಕಾರ ಎಲ್ಲಿಂದ ಬಂತು? ಎಂಬುದು ಅವರ ಸವಾಲು. ಅವರೆನ್ನುವಂತೆ 'ಏಕಲಗಾಯನ' 'ಎಕ್ಕಲಗಾಣ'ವಾಗಿರಬೇಕಲ್ಲದೆ 'ಯಕ್ಷಗಾನ' ಎಂಬ ಅರ್ಥ ಆ ಶಬ್ದಕ್ಕೆ ಸರ್ವಥಾ ಸಾಧುವಲ್ಲ.[೭]

ತೆಲುಗುಸಾಹಿತ್ಯದಲ್ಲಿ 'ಜಕ್ಕುಲಕಥೆ', 'ಜಕ್ಕುಲಪುರಂಧ್ರಿ', 'ಜಕ್ಕುಲಗಾನ'/ಜಕ್ಕುಲ ಪಾಟ (=ಜಕ್ಕರ ಹಾಡು) ಇತ್ಯಾದಿ ಜಕ್ಕರ ವಿಶಿಷ್ಟ ಕಥೆ, ಗಾನಗಳ ಪ್ರಸ್ತಾಪ ಬರುತ್ತದೆ. ಜನಸಾಮಾನ್ಯರ ವ್ಯವಹಾರದಲ್ಲಿದ್ದ 'ಜಕ್ಕುಲಗಾನ' (=ಜಕ್ಕರ ಹಾಡು) ಎಂಬ ವಿಶಿಷ್ಟವಾದ ಹಾಡಿಗೆ ಪಂಡಿತವ್ಯವಹಾರದಲ್ಲಿ 'ಯಕ್ಷಗಾನ'ವೆಂಬ ಹೆಸರು ರೂಢಿಗೆ ಬಂದಿರಬೇಕು. ಪ್ರೋಲುಗಂಟಿ ಚೆನ್ನಶೌರಿ ರಚಿತ 'ಸೌಭರಿ ಚರಿತ'ವೆಂಬ ೧೫ನೆಯ ಶತಮಾನದ ತೆಲುಗು ಯಕ್ಷಗಾನವೊಂದನ್ನು 'ಜಕ್ಕುಲ ಕಥೆ'ಯೆಂಬುದಾಗಿ ಕರೆದಿರುವುದು ಜಕ್ಕರದೇ ಆದ ಒಂದು ವಿಶಿಷ್ಟಗಾನಪದ್ಧತಿ (ಜಕ್ಕುಲಗಾನ) ಬಳಕೆಯಲ್ಲಿರಬೇಕೆಂಬುದಕ್ಕೆ ಉಪಷ್ಟಂಭಕವಾಗಿದೆ.

೭ ಕೃಷ್ಣಭಟ್ಟ, ಕುಕ್ಕಿಲ. "ಎಕ್ಕಲಗಾಣ'–?, ರಾಷ್ಟ್ರಮತ ವಿಶೇಷ ಸಂಚಿಕೆ (ಮಂಗಳೂರು, ೧೯೬೦–೬೧). ಪುಟ ೧೦೭–೧೨೨.

'ಜಕ್ಕುಲಗಾನ'ವೆಂಬುದಕ್ಕೆ ಕೆಲವು ಪ್ರದೇಶದ ಜನಸಾಮಾನ್ಯರ ರೂಢಿಯ ಮಾತಿನಲ್ಲಿ 'ಎಕ್ಕಲಗಾಣ'ವಾಗಿ, ಅದರಿಂದ ಯಕ್ಷಗಾನದ ಭಾಗವತನಿಗೆ (ಹಾಡುಗಾರನಿಗೆ) 'ಎಕ್ಕಲಗಾಣ'ನೆಂಬ ಹೆಸರು ಬಂದಿರಬಹುದೆ? ಹೀಗೆ 'ಜಕ್ಕುಲ' > 'ಎಕ್ಕಲ'ವಾಗಿದ್ದಲ್ಲಿ ಎಕ್ಕಲಗಾಣದಲ್ಲಿ ಕಂಡುಬರುವ 'ಲ'ಕಾರಕ್ಕೆ ಸಮರ್ಥನೆ ದೊರೆತಂತಾಗುತ್ತದೆ, ಎಕ್ಕಲಗಾಣನೆಂದರೆ ಯಕ್ಷಗಾನದ ಭಾಗವತ (ಒಬ್ಬಂಟಿಗನಾದ ಹಾಡುಗಾರ) ಎಂಬ ಅರ್ಥಸಾದೃಶ್ಯದಿಂದ ಸಂಗೀತಶಾಸ್ತ್ರದಲ್ಲಿ 'ಏಕಲಗಾಯನನೆ'ಂಬ ಸಂಸ್ಕೃತೀಕರಿಸಿದ ರೂಪ ಏರ್ಪಟ್ಟಿರಬಹುದೆ? ಸಾಕಷ್ಟು ಖಚಿತವಾದ ಆಧಾರಗಳು ದೊರೆಯುವವರೆಗೆ ಈ ವಿಚಾರದಲ್ಲಿ ನಾವು ಇದಮಿತ್ಥಂ ಎಂದು ಏನನ್ನೂ ಹೇಳುವುದು ಸಾಧ್ಯವಿಲ್ಲ. ಇನ್ನು ರತ್ನಾಕರವರ್ಣಿಯು ಹೇಳುವ 'ಎಕ್ಕಡಿಗ'ರಿಗೂ ಯಕ್ಷ ಶಬ್ದಕ್ಕೂ ಸಂಬಂಧ ಕಂಡುಕೊಳ್ಳಬಹುದೆ? ಯಕ್ಷ > ಎಕ್ಕ ಆಗಿದ್ದಲ್ಲಿ 'ಎಕ್ಕ+ಅಡಿಗ' ಎಂದರೆ 'ಯಕ್ಷಾರಾಧಕ' ಎಂಬ ಅರ್ಥವನ್ನು ಸೂಚಿಸುವುದಿಲ್ಲವೆ? ಈ ಯಕ್ಷಜಾತಿಯ ಅಲೆಮಾರಿಜನ ನೆಲೆನಿಂತಿರುವ ಕುರುಹುಗಳು ಆಂಧ್ರದೇಶದಲ್ಲಿ ಈಗಲೂ ಕಾಣಸಿಗುತ್ತವೆ ಎಂಬುದನ್ನು ನಾವು ಹಿಂದೆಯೇ ನೋಡಿದ್ದೇವೆ. ಕರ್ಣಾಟಕದಲ್ಲಿ ಎಕ್ಕಡಿಗರ ಅಥವಾ ಎಕ್ಕಲಗಾಣರ ಸಂತತಿಯ ಕುರುಹು ಇಂದು ಕಂಡುಬರುವುದಿಲ್ಲ.

ಪಾಲ್ಕುರಿಕೆ ಸೋಮನಾಥನ ಕಾಲ (ಕ್ರಿ. ಶ. ೧೩–೧೪ನೆಯ ಶತಮಾನ) ಕನ್ನಡ ನಾಡಿನಿಂದ ಆಂಧ್ರದೇಶಕ್ಕೆ ವೀರಶೈವಧರ್ಮ ಪ್ರವೇಶಿಸಿ ವಿಜೃಂಭಿಸುತ್ತಿದ್ದ ಕಾಲ. ಆ ಕಾಲದಲ್ಲಿ ಶ್ರೀಶೈಲಾದ್ರಿ ಕ್ಷೇತ್ರಗಳಿಗೆ ಶಿವಸಂದರ್ಶನಾಭಿಲಾಷಿಗಳಾಗಿ ಕನ್ನಡನಾಡಿನಿಂದ ಎಕ್ಕಲಗಾಣರು ಬಂದಿದ್ದರೆ? ಅವರೆ ಆಂಧ್ರದೇಶದಲ್ಲಿ ನೆಲೆಯೂರಿ ನಾಲ್ಕು ದಿಕ್ಕುಗಳಿಗೂ ವ್ಯಾಪಿಸಿ ತೆಲುಗರಿಂದ 'ಜಕ್ಕುಲು' ಎಂಬುದಾಗಿ ಕರೆಯಿಸಿಕೊಂಡರೆ? ಇತ್ಯಾದಿ ಪ್ರಶ್ನೆಗಳಿಗೆ ಚಾರಿತ್ರಿಕ ಆಧಾರಗಳು ದೊರೆಯುವ ವರೆಗೆ ಸರಿಯಾದ ಉತ್ತರ ಕೊಡುವುದು ಸಾಧ್ಯವಿಲ್ಲ. ಅಂತು ಯಕ್ಷಗಾನಕ್ಕೆ ಯಕ್ಷಶಬ್ದವಾಚ್ಯರಾದವರೊಡನೆ ಗಾಢವಾದ ಸಂಬಂಧವಿದ್ದಿರಬೇಕೆಂದೂ ಆ ಯಕ್ಷ ಶಬ್ದವಾಚ್ಯರಾದವರು ಜಕ್ಕುಲು (=ಜಕ್ಕರು) ಅಥವಾ ಕನ್ನಡದ ಎಕ್ಕಲಗಾಣರು, ಎಕ್ಕಡಿಗರು ಆಗಿದ್ದಿರಬಹುದೆಂಬುದು ಸಮಂಜಸವಾಗಿ ಕಂಡುಬರುತ್ತದೆ ಎಂಬುದು ವಿದ್ವಾಂಸರ ಮತ. 'ಜಕ್ಕುಲಪಾಟ' (=ಯಕ್ಷರ ಹಾಡು) ಎಂಬುದು ತೆಲುಗಿನ ಜನಸಾಮಾನ್ಯವ್ಯವಹಾರದಲ್ಲಿಯೂ 'ಯಕ್ಷಗಾನ' ಎಂಬುದು ಪಂಡಿತವ್ಯವಹಾರದಲ್ಲಿಯೂ ಇದ್ದು ಕ್ರಮೇಣ ಪಂಡಿತ ವ್ಯವಹಾರದಲ್ಲಿದ್ದ 'ಯಕ್ಷಗಾನ'ವೇ ರೂಢಿಯಲ್ಲಿ ನೆಲಸಿತು ಎಂಬುದು ತೆಲುಗು ವಿದ್ವಾಂಸರ ಮತ.

ಉತ್ಪತ್ತಿಯಲ್ಲಿ ದೇಶೀಯವಾದ ಒಂದು ಪ್ರತ್ಯೇಕ ನೃತ್ಯಗಾನಶೈಲಿಯಾಗಿ ಪ್ರಾದುರ್ಭವಿಸಿದ 'ಯಕ್ಷಗಾನ' ತನ್ನ ವಿಕಾಸಪಥದಲ್ಲಿ ಹಲವಾರು ದೇಸಿಕಲೆಗಳ ಅಂಶಗಳನ್ನು ಮೈಗೂಡಿಸಿಕೊಂಡು ಬೆಳೆದುಬಂದಿದೆ. ಗೊಂಬೆಯಾಟ, ಕೊರವಂಜಿನಾಟ್ಯ,

ಜಕ್ಕುಲಕಥೆ, ಜಂಗಂ ಕಥೆ, ಬುರ್ರಕಥೆ, ಮಹಾರಾಷ್ಟ್ರದ ಸಂತ್‌ಸಂಪ್ರದಾಯದಿಂದ ಉದಿಸಿದ ಹರಿಕಥೆ, ಕೂಚಿಪೂಡಿನೃತ್ಯ ಇತ್ಯಾದಿ ಕಲೆಗಳು ಯಕ್ಷಗಾನದ ಬೆಳವಣಿಗೆಯಲ್ಲಿ ತಮ್ಮ ಪ್ರಭಾವವನ್ನು ಬೀರಿವೆ. ಇವುಗಳಲ್ಲದೆ ಮಾರ್ಗನಾಟಕ, ಆಧುನಿಕ ನಾಟಕಗಳ ಪ್ರಭಾವವೂ ಪ್ರಬಂಧ ಕಾವ್ಯಗಳ ಪ್ರಭಾವವೂ ತೆಲುಗು ಯಕ್ಷಗಾನಗಳ ಮೇಲೆ ಉಂಟಾಗಿದೆ. ಕನ್ನಡ ಯಕ್ಷಗಾನಗಳ ಮೇಲೆ ನೆರೆ ರಾಜ್ಯವಾದ ಕೇರಳದ ಕಥಕಳಿಯ ಪ್ರಭಾವವನ್ನೂ ಗುರುತಿಸಲಾಗಿದೆ. ಈ ದೇಶೀಯ ರೂಪಕಗಳಾದ ಯಕ್ಷಗಾನಗಳೆ ಪಾಮರಜನರ ಮನರಂಜನೆಗಾಗಿಯೂ, ಪುರಾಣೇತಿಹಾಸಗಳ ಕಥೆಗಳನ್ನು ಜನರಿಗೆ ವ್ಯಾಖ್ಯಾನಿಸಿ ಹೇಳುವುದಕ್ಕಾಗಿಯೂ ಆಂಧ್ರದಲ್ಲಿ 'ವೀಥಿನಾಟಕ'ಗಳಾಗಿ, ಕರ್ಣಾಟಕದಲ್ಲಿ 'ಬಯಲಾಟ'ಗಳಾಗಿ, ತಮಿಳು ದೇಶದಲ್ಲಿ 'ತೆರುಕ್ಕೂತ್ತು'ಗಳಾಗಿ ಪ್ರದರ್ಶಿಸಲ್ಪಡುತ್ತಿದ್ದವು. ಆಂಧ್ರಪ್ರಾಂತ, ತೆಲಂಗಾಣಪ್ರಾಂತಗಳಲ್ಲಿ ಬಹಳ ಪ್ರಾಚೀನ ಕಾಲದಿಂದಲೇ ಯಕ್ಷಗಾನಸಂಪ್ರದಾಯ ಸಾಗಿಬಂದಿದೆ.

ಹದಿನೇಳನೆಯ ಶತಮಾನ ಕರ್ಣಾಟಕಾಂಧ್ರ ಯಕ್ಷಗಾನ ಸಾಹಿತ್ಯಶಾಖೆಯ ಉಚ್ಛ್ರಾಯ ಕಾಲ. ಕನ್ನಡದಲ್ಲಿ ಉತ್ತಮಮಟ್ಟದ ಯಕ್ಷಗಾನ ಪ್ರಸಂಗಗಳನ್ನು ಬರೆದ ದೇವಿದಾಸ, ನಾಗಪ್ಪಯ್ಯ ಮತ್ತು ಸುಬ್ಬ ಈ ಶತಮಾನದವರಾಗಿದ್ದಾರೆ. ಈ ಶತಮಾನಕ್ಕೆ ಸಂಬಂಧಿಸಿದ ಹಾಗೆ ಸುಮಾರು ಮೂವತ್ತು ಕನ್ನಡಯಕ್ಷಗಾನ ಕೃತಿಗಳು ದೊರೆಯುತ್ತವೆ.

ತಂಜಾವೂರಿನ ನಾಯಕರಾಜರಾದ ರಘುನಾಥರಾಯ (ಕ್ರಿ. ಶ. ೧೬೦೦–೧೬೩೪), ಅವನ ಮಗ ವಿಜಯರಾಘವನಾಯಕ (ಕ್ರಿ. ಶ. ೧೬೩೩–೧೬೭೩), ಅನಂತರ ತಂಜಾವೂರನ್ನಾಳಿದ ಮಹಾರಾಷ್ಟ್ರ ರಾಜನಾದ ಶಹಾಜಿ (ಕ್ರಿ. ಶ. ೧೬೮೪–೧೭೧೧) ಈ ರಸಿಕ ರಾಜರು ಅನೇಕ ತೆಲುಗುಯಕ್ಷಗಾನ ಕವಿಗಳಿಗೆ ತಮ್ಮ ಆಸ್ಥಾನದಲ್ಲಿ ಆಶ್ರಯವಿತ್ತು ಹಲವಾರು ಯಕ್ಷಗಾನಗಳ ರಚನೆಗೆ ಮತ್ತು ರಂಗಭೂಮಿಗಳಲ್ಲಿ ಅವುಗಳ ಪ್ರದರ್ಶನಕ್ಕೆ ಸೌಕರ್ಯವನ್ನು ಒದಗಿಸಿ ಯಕ್ಷಗಾನಕಲೆಯನ್ನು ಪ್ರೋತ್ಸಾಹಿಸಿದರು.

ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ತೆಲುಗುಯಕ್ಷಗಾನಕ್ಕೆ 'ಭಾಮಾಕಲಾಪ'ವೆಂಬ ಕೂಚಿಪೂಡಿನೃತ್ಯದೊಡನೆ ಸಂಪರ್ಕವೇರ್ಪಟ್ಟಿತು. ಕೂಚಿಪೂಡಿ ಭಾಗವತರ ಕುಲಪತಿಗಳಲ್ಲಿ ಸುಪ್ರಸಿದ್ಧನಾದ ಸಿದ್ಧೇಂದ್ರಯೋಗಿ 'ಭಾಮಾಕಲಾಪ'ದ ಜನಕ. ಇದರ ವಸ್ತು ಪ್ರಸಿದ್ಧವಾದ ಪಾರಿಜಾತ ಕಥೆ. ಇದು ನೃತ್ಯಪ್ರಧಾನವಾದುದು. ಸಂಗ್ರಹವಾದ ಪಾತ್ರಸಾಮಗ್ರಿಯಿಂದ ಕೂಡಿದ್ದು. ವಿಶಿಷ್ಟವಾದ ಪ್ರದರ್ಶನ ಪ್ರಕ್ರಿಯೆಯುಳ್ಳದು. ಆ ಕಾಲದಲ್ಲಿ ಪ್ರಚಲಿತವಾಗಿದ್ದ ಯಕ್ಷಗಾನಗಳಿಂದಲೇ ಪ್ರೇರಿತವಾಗಿ ಸೃಷ್ಟಿಗೊಂಡು, ಇದು ಯಕ್ಷಗಾನದ ಮೇಲೆ ವಿಶೇಷ ಪ್ರಭಾವವನ್ನು ಬೀರಿದೆ.

ಹದಿನೆಂಟನೆಯ ಶತಮಾನದಲ್ಲಿ ಮಧುರೆ, ಪುದುಕೊಟ್ಟೈ, ಮೈಸೂರು ರಾಜರ ಆಸ್ಥಾನಗಳಲ್ಲಿ ತೆಲುಗುಯಕ್ಷಗಾನಗಳಿಗೆ ಸ್ಥಾನ ದೊರೆಯಿತು. ಈ ಕಾಲದಲ್ಲಿ ಹಲವು ತಮಿಳು ಕನ್ನಡ ಯಕ್ಷಗಾನ ರಚನೆಗಳಿಗೂ ತೆಲುಗುಯಕ್ಷಗಾನಗಳು ಮಾರ್ಗದರ್ಶಕ ಗಳಾದುವು.

ಚಿಕದೇವರಾಜ (ಕ್ರಿ. ಶ. ೧೬೭೨-೧೭೦೪) ಮತ್ತು ಕಂಠೀರವ ನರಸರಾಜ (ಕ್ರಿ. ಶ. ೧೭೦೪-೧೭೧೩)ರ ಆಸ್ಥಾನಗಳಲ್ಲಿ ತೆಲುಗು ಕನ್ನಡ ಯಕ್ಷಗಾನಗಳಿಗೆ ಪ್ರೋತ್ಸಾಹ ದೊರೆಯಿತು. ಈ ಕಾಲದಲ್ಲಿ ತೆಲುಗು, ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ಕೊರವಂಜಿಪದ್ಧತಿಯ ಯಕ್ಷಗಾನರಚನೆ ರೂಢಿಗೆ ಬಂತು.

ಕನ್ನಡದಲ್ಲಿ ಉಪಲಬ್ಧವಿರುವ ಯಕ್ಷಗಾನಕೃತಿಗಳಲ್ಲಿ ಕ್ರಿ. ಶ. ೧೬೦೦ಕ್ಕೆ ಪೂರ್ವದ ಯಾವ ಒಂದು ಕೃತಿಯೂ ದೊರಕಿಲ್ಲ. ಈ ವರೆಗೆ ದೊರೆತಿರುವ ಆಧಾರಗಳ ಮೇಲಿಂದ ಕೃಷ್ಣಸಂಧಾನ, ಭೀಷ್ಮಪರ್ವ, ಅಭಿಮನ್ಯುಕಾಳಗ, ಸೈಂಧವ ವಧೆ, ಚಿತ್ರಸೇನಕಾಳಗ, ಗಿರಿಜಾಕಲ್ಯಾಣ, ಕೃಷ್ಣಾರ್ಜುನರ ಕಾಳಗ, ದೇವೀಮಹಾತ್ಮೆ ಮೊದಲಾದ ಹತ್ತುಹನ್ನೊಂದು ಯಕ್ಷಗಾನ ಪ್ರಸಂಗಗಳನ್ನು ರಚಿಸಿದ ದೇವಿದಾಸನೇ (ಕ್ರಿ ಶ. ೧೬೨೨-೧೬೬೩) ಕನ್ನಡಯಕ್ಷಗಾನಕವಿಗಳಲ್ಲಿ ಮೊದಲಿನವನೆಂದು ಊಹಿಸ ಲಾಗಿದೆ.[೮]

ತೆಲುಗಿನಲ್ಲಿ ಪ್ರಪ್ರಥಮ ಯಕ್ಷಗಾನ ಕರ್ತೃ ಪ್ರೋಲುಗಂಟಿ ಚೆನ್ನಶೌರಿ ಎಂಬವನು. ಈತನ ಕಾಲ ೧೫ನೆಯ ಶತಮಾನದ ಉತ್ತರಾರ್ಧವೆಂದು ತಿಳಿದುಬರುತ್ತದೆ. ಇವನು 'ಸೌಭರಿಚರಿತ'ವೆಂಬ 'ಜಕ್ಕುಲಕಥೆ'ಯನ್ನು ರಚಿಸಿದ್ದಾನೆ. ಈ ಜಕ್ಕುಲಕಥೆ 'ಯಕ್ಷಗಾನ' ಕೃತಿಯೆಂಬುದಾಗಿ ಪಂಡಿತರು ನಿಷ್ಕರ್ಷಿಸಿದ್ದಾರೆ. ಸೌಭರಿ ಒಬ್ಬ ಮಹರ್ಷಿ. ಅವನ ಚರಿತ್ರೆ ಭಾಗವತ ವಿಷ್ಣುಪುರಾಣಗಳಲ್ಲಿ ಬರುತ್ತದೆ. ಈ ಗ್ರಂಥ ಉಪಲಬ್ಧವಿಲ್ಲವಾದುದರಿಂದ ಆ ಕಾಲದ ಯಕ್ಷಗಾನಸ್ವರೂಪವನ್ನು ತಿಳಿದುಕೊಳ್ಳಲು ಅವಕಾಶವಿಲ್ಲದಾಗಿದೆ.

ಚಕ್ರಪುರಿ ರಾಘವಾಚಾರ್ಯನ 'ವಿಪ್ರನಾರಾಯಣಚರಿತೆ' ಕ್ರಿ. ಶ. ೧೫೪೫ರಲ್ಲಿ ರಚಿತ ವಾಗಿರಬಹುದೆಂದು ಊಹಿಸಲಾಗಿದೆ. ದಕ್ಷಿಣದೇಶದಲ್ಲಿ ವೈಷ್ಣವಮತ ಪ್ರವರ್ತಕ ರಾದ ಹನ್ನೆರಡು ಆಳ್ವಾರುಗಳಲ್ಲಿ ಒಬ್ಬನಾದ ವಿಪ್ರನಾರಾಯಣನ ಚರಿತೆ ಇದರಲ್ಲಿ ವರ್ಣಿತವಾಗಿದೆ. ಇದು ಮದ್ರಾಸು ಪ್ರಾಚ್ಯಹಸ್ತಪ್ರತಿಗಳ ಭಾಂಡಾಗಾರದಲ್ಲಿ ದೊರೆತಿದೆ. ಈ ಕೃತಿ ದೊರೆಯುವ ಮೊದಲು ಸುಮಾರು ಕ್ರಿ. ಶ. ೧೫೬೮ರ ಕಂದುಕೂರು ರುದ್ರಕವಿ ರಚಿಸಿದ 'ಸುಗ್ರೀವವಿಜಯ'ವೇ ತೆಲುಗಿನಲ್ಲಿ ಉಪಲಬ್ಧ

೮ ಶಿವರಾಂ ಕಾರಂತ, ಯಕ್ಷಗಾನ ಬಯಲಾಟ, ಹರ್ಷ ಮುದ್ರಣ ಪ್ರಕಟನಾಲಯ (ಪುತ್ತೂರು, ೧೯೫೭). ಪುಟ ೧೬೧–೧೬೯.

ವಿರುವ ಮೊಟ್ಟಮೊದಲಿನ ಯಕ್ಷಗಾನವೆಂದು ಪರಿಗಣಿಸಲ್ಪಡುತ್ತಿತ್ತು.[೯] ಇದರ ಕಥಾವಸ್ತು ವಾಲಿಸುಗ್ರೀವರ ಕಾಳಗ, ವಾಲಿಸಂಹಾರ. ಇದರಲ್ಲಿ ಶ್ರೀರಾಮನ ಸೀತಾವಿರಹಕ್ಲೇಶ, ರಾಮನಿಂದ ನೆಲಕ್ಕೊರಗಿದ ವಾಲಿಯ ವಾದ, ತಾರಾವಿಲಾಪ, ಅಂಗದನನ್ನು ಸುಗ್ರೀವನ ವಶಕ್ಕೆ ಒಪ್ಪಿಸುವುದು, ಮೊದಲಾದ ಘಟ್ಟಗಳಿಗೆ. ಕವಿ ಸೂಚಿಸಿದಂತೆ ಕಥೆ ಕರುಣರಸಪ್ರಧಾನವಾದುದು. ಕರುಣವಿಪ್ರಲಂಭದಿಂದ ಗ್ರಂಥಾರಂಭವಾಗುತ್ತದೆ. ತಾರರೋದನ ಗ್ರಂಥಾಂತ್ಯದ ಮುಖ್ಯ ಸನ್ನಿವೇಶ. ವಾಲಿ ಸುಗ್ರೀವರ ಯುದ್ಧಘಟ್ಟದಲ್ಲಿ ವೀರರಸವಿದೆ. ಈ ಕೃತಿಯನ್ನು ಕವಿ ತನ್ನ ಇಷ್ಟ ದೈವವಾದ ಕಂದುಕೂರು ಜನಾರ್ದನಸ್ವಾಮಿಗೆ ಅಂಕಿತಮಾಡಿದ್ದಾನೆ. ಜನಾರ್ದನ ಸ್ವಾಮಿಯನ್ನು ಸ್ತುತಿಸುವ ಅರ್ಧಚಂದ್ರಿಕೆಗಳೆಂಬ ಛಂದಸ್ಸಿನ ಪದ್ಯಗಳಲ್ಲಿ ದಶಾವತಾರಗಳ ವರ್ಣನೆಯಿದೆ. ಈ ಕೃತಿ ಯಕ್ಷಗಾನವೆಂದೂ, ಯಕ್ಷಗಾನಪ್ರಬಂಧವೆಂದೂ ಕರೆಯಲ್ಪಟ್ಟಿದೆ. ಇದು ಪ್ರದರ್ಶನಸೌಲಭ್ಯವಿರುವ ರಚನೆ. ಸಂವಾದಶೈಲಿ ಪ್ರಚುರವಾದುದು, ವೀಧಿನಾಟಕವಾಗಿ ಆಡಲ್ಪಡುತಿತ್ತು. ತಮಿಳುಭಾಷೆಗೂ ಇದು ಅನುವಾದಿತವಾಗಿದೆಯೆಂದು ತಿಳಿದುಬರುತ್ತದೆ.

ಈ ಯಕ್ಷಗಾನದ ರಚನಾವಿಶೇಷಗಳೆಂದರೆ ತ್ರಿಪುಟ, ಜಂಪೆ, ಅಟತಾಳ, ಏಕತಾಳ ಮೊದಲಾದ ತಾಳಪ್ರಧಾನವಾದ ಮಟ್ಟುಗಳು, ಧವಳ ಶೋಭನಗಳು, ಏಲಪದಗಳು ಅರ್ಧಚಂದ್ರಿಕೆಗಳು, ದೇಶೀಯ ಗೀತಚ್ಛಂದಸ್ಸುಗಳು, ಸುಮಾರು ೩೦೦ ದ್ವಿಪದ ಪಂಕ್ತಿಗಳು, ಒಂದು ವೃತ್ತ, ಎರಡು ಸೀಸ ಪದ್ಯಗಳು, ಒಂದು ಕಂದ, ಮೂರು ಗೀತ ಪದ್ಯಗಳು, ಕೆಲವು ವಚನಗಳು ಇತ್ಯಾದಿ.

ತೆಲುಗು ಯಕ್ಷಗಾನವಾಙ್ಮಯ ಹಲವಾರು ಛಂದೋವೈವಿಧ್ಯಗಳಿಂದ ಶೋಭಿಸುವಂಥದ್ದಾಗಿದೆ. ಲಯಗ್ರಾಹಿ, ಮತ್ತಕೋಕಿಲ, ಉತ್ಪಲಮಾಲೆ, ಚಂಪಕಮಾಲೆ, ಕಂದ, ಸೀಸ, ರಗಳೆ(ರಗಡಲು), ದ್ವಿಪದ, ಅರ್ಧಚಂದ್ರಿಕೆ, ಏಲ, ಧವಳ, ಚೂರ್ಣಿಕೆ, ಕೈವಾರ, ಗದ್ಯ, ವಚನ, ಷಟ್ಪದಿ, ಚೌಪದಿ, ಸಾಂಗತ್ಯ, ಸುವ್ವಾಲಿ, ಲಾವಣಿ, ಲಾಲಿ, ತುಮ್ಮೆದಪದ, ನಿವಾಳಿಪದ, ವೆನ್ನೆಲಪದ, ಚಂದಮಾಮಪದ, ಕೀರ್ತನೆಗಳು, ಮೊದಲಾದ ನಾನಾ ಬಗೆಯ ಛಂದೋರಚನೆಗಳು ತೆಲುಗುಯಕ್ಷಗಾನಗಳಲ್ಲಿ ಸ್ಥಾನವನ್ನು ಪಡೆದಿವೆ.

ಕರ್ಣಾಟಕ ಮತ್ತು ಆಂಧ್ರದೇಶಗಳಲ್ಲಿ 'ಯಕ್ಷಗಾನ' ಒಂದು ಸಮ್ಮಿಶ್ರಕಲೆಯಾಗಿ ಬೆಳೆದುಬಂದಿದೆ. ಧರ್ಮಪ್ರಚಾರ, ಪುರಾಣೇತಿಹಾಸ ಕಥೆಗಳನ್ನು ಜನರಿಗೆ ವ್ಯಾಖ್ಯಾನಿಸಿ ಹೇಳುವುದು, ಮನರಂಜನೆ ಇವೇ ಈ ಕಲೆಯ ಮುಖ್ಯೋದ್ದೇಶಗಳು. ಸಂಗೀತ,

---

೯ ಕಂದುಕೂರು ರುದ್ರಕವಿ : ಸುಗ್ರೀವ ವಿಜಯಮು (ಯಕ್ಷಗಾನಮು). ಪೀಠಿಕಾಕರ್ತ : ಜಿ. ವಿ. ಸುಬ್ರಹ್ಮಣ್ಯಂ, ಮಾಧವಿ ಬುಕ್ ಸೆಂಟರ (ಹೈದರಾಬಾದ್, ೧೯೭೩).

ಸಾಹಿತ್ಯ, ನೃತ್ಯಾಭಿನಯ, ವೇಷಭೂಷಣ, ಚೆಂಡೆಮದ್ದಳೆಗಳ ಬಜಾವಣೆ—ಇವುಗಳ ಮೇಳವಿಕೆಯಿಂದ ತನ್ನದೇ ಆದ ಒಂದು ಯಕ್ಷಲೋಕವನ್ನು (world of fantasy) ಸೃಷ್ಟಿಸಿ ಪ್ರೇಕ್ಷಕರನ್ನು ಮೈಮರೆಯುವಂತೆ ಮಾಡುವ ಅತ್ಯಂತ ಪರಿಣಾಮಕಾರಿಯಾದ ರೂಪಕಕಲೆಯಿದು. ಇದು ಕಷ್ಟಸಾಧ್ಯವಾದ ಕಲೆ. ಕರ್ನಾಟಕದ ಒಂದು ಹೆಮ್ಮೆಯ ಕಲೆಯಾಗಿ ಇಂದಿಗೂ ಇದು ಉಳಿದುಬಂದಿದೆ. ಇಂದಿನ ನಾಗರಿಕತೆಯ ಮಧ್ಯದಲ್ಲಿ ಇದನ್ನು ಉಳಿಸಿಕೊಳ್ಳುವುದು ಜನತೆಯ ಮತ್ತು ರಾಷ್ಟ್ರದ ಕರ್ತವ್ಯವಾಗಿದೆ.

## ಸಹಾಯಕ ಗ್ರಂಥಗಳು

೧ ಆಂಧ್ರಯಕ್ಷಗಾನವಾಙ್ಮಯ ಚರಿತ್ರ : ಡಾ. ಯಸ್. ವಿ. ಜೋಗರಾವು. ಆಂಧ್ರ ವಿಶ್ವಕಳಾ ಪರಿಷತ್ಪ್ರಕಾಶಿತ (ವಾಲ್ತೇರು, ೧೯೬೧).

೨ ಯಕ್ಷಗಾನವಾಙ್ಮಯಮು : ಆಚಾರ್ಯ ಬಿರುದುರಾಜು ರಾಮರಾಜು, ಕಳಾಸ್ರವಂತಿ ಪ್ರಚುರಣ-೬ (ಹೈದರಾಬಾದ್, ೧೯೭೨).

೩ ಸುಗ್ರೀವ ವಿಜಯಮು ( ಯಕ್ಷಗಾನಮು ) : ಕಂದುಕೂರು ರುದ್ರಕವಿ, ಪೀಠಿಕಾಕರ್ತ : ಡಾ. ಜಿ. ವಿ. ಸುಬ್ರಹ್ಮಣ್ಯಂ, ಮಾಧವಿ ಬುಕ್ ಸೆಂಟರ್ (ಹೈದರಾಬಾದ್, ೧೯೭೩).

೪ ಬುರ್ರಕಥಲು : ನದೀರಾ, ಆಂಧ್ರ ಪ್ರದೇಶ್ ಸಂಗೀತ ನಾಟಕ ಅಕಾಡೆಮಿ (ಹೈದ್ರಾಬಾದ್, ೧೯೭೫)

೫ ಯಕ್ಷಗಾನ ಬಯಲಾಟ : ಶ್ರೀ ಶಿವರಾಂ ಕಾರಂತ. ಹರ್ಷ ಮುದ್ರಣ ಪ್ರಕಟಣಾಲಯ (ಪುತ್ತೂರು. ೧೯೫೭).

೬ ಯಕ್ಷಗಾನ ಸಾಹಿತ್ಯ : ಡಾ. ಕೆ. ಎಂ. ಕೃಷ್ಣರಾವ್, ಮಿಂಚಿನಬಳ್ಳಿ ಕಾರ್ಯಾಲಯ (ಧಾರವಾಡ, ೧೯೫೬).



# ಹಚ್ಚೆ : ಒಂದು ಜಾನಪದ ಕಲೆ

ಎಚ್. ಎಂ. ಮಹೇಶ್ವರಯ್ಯ

ಜನಪದರ ನೂರಾರು ರೂಢಮೂಲಸಂಪ್ರದಾಯಗಳಲ್ಲಿ, ಇಂದಿಗೂ ಅಲ್ಲಲ್ಲಿ ಕಾಣಬಹುದಾದ ಹಚ್ಚೆಯೂ ಒಂದು. ಬಹಳ ಹಿಂದಿನಿಂದಲೂ ಮಾನವನೊಡನೆ ನಂಟು ಬೆಳಸಿಕೊಂಡು ಬೆಳದುಬಂದ ಈ ಕಲೆ, ಅತ್ಯಂತ ಜನಪ್ರಿಯವೂ ಲೋಕವ್ಯಾಪಕವೂ ಆಯಿತೆಂಬುದು ಗಮನಾರ್ಹವಾದ ಸಂಗತಿ. ಡಾರ್ವಿನ್ ವ್ಯಕ್ತಪಡಿಸುವ "Not one great country can be named from polar regions in the north to Newzealand in the South in which the aborigines do not tatto themselves"[೧] ಮಾತುಗಳು ಅದರ ವ್ಯಾಪಕ ಬೆಳವಣಿಗೆಯನ್ನು ಸೂಚಿಸುತ್ತವೆ. ಕ್ರಿ. ಪೂ. ೨೦೦೦ ವರ್ಷಗಳ ಹಿಂದೆಯೇ ಈಜಿಪ್ಟನಲ್ಲಿ ಈ ಕಲೆ ಬಳಕೆಯಲ್ಲಿದ್ದುದು ಕಂಡುಬರುತ್ತದೆ. ಬ್ರಿಟಿಷರು, ಗ್ರೀಕರು, ರೋಮನ್ನರು, ಪೂರ್ವ ಜಮನ್ನರಲ್ಲಿ ಇದು ಪ್ರಚಲಿತವಿತ್ತೆಂಬುದು ಬೆಳಕಿಗೆ ಬಂದಿದೆ. ಪಾಲಿನೀಷಿಯನ್ ಮೂಲದ ಈ ವಿಶಿಷ್ಟಕಲೆ ಅಶೋಕನಕಾಲದಲ್ಲಿತ್ತು ಎಂಬುದನ್ನು ಕೆತ್ತಿದ ಅರೆಯುಬ್ಬು ಚಿತ್ರಗಳಿಂದ ಅರಿಯಬಹುದಾಗಿದೆ. ಕನ್ನಡದ ನೆಲದಲ್ಲಿ ಇದರ ಪ್ರಾಚೀನತೆ ಗುರುತಿಸಲು ಬಸವಣ್ಣನವರ ವಚನದಲ್ಲಿ ಪ್ರಯೋಗಗೊಂಡ ಅಣಚಿ, ಮತ್ತು ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವದಲ್ಲಿ ಕಂಡುಬರುವ ಅಣಚಿತನಂ ಎನ್ನುವ ಶಬ್ದಗಳು ಕ್ರಿ.ಶ. ೧೨ನೆಯ ಶತಮಾನದ ಹಿಂದೆಯೇ ಈ ಕಲೆ ವ್ಯಾಪಿಸಿ ಮುತ್ತೈದೆತನದ ಸಂಕೇತಗಳಲ್ಲಿ ಹಚ್ಚೆಗೂ ವಿಶಿಷ್ಟಗೌರವ ಸಂದಿತ್ತು ಎನ್ನುವುದನ್ನು ಸೂಚಿಸುತ್ತವೆ. ಲೋಕವ್ಯಾಪಕವಾದ ಈ ಕಲೆ ಅನೇಕ ದೇಶಗಳ, ಜನಾಂಗಗಳ, ನಂಬಿಕೆಗಳ ಅಡಿಯಲ್ಲಿ ಬೆಳದುಬಂದುದರ ಅಧ್ಯಯನ ಕುತೂಹಲವನ್ನುಂಟು ಮಾಡುತ್ತದೆ.

೧ The Mysore Tribes and Castes (Vol. II). p. 436.

ಇಂಗ್ಲೀಷಿನ tattoo ಎಂದು ಕರೆಯುವ ಪದ ತಾಹಿತಿಯನ್‌ಭಾಷೆಯಿಂದ ಸ್ವೀಕೃತವಾದುದು. ta ಎಂದರೆ ಹೊಡೆ, ತಟ್ಟು ಎನ್ನುವ ಅರ್ಥವಿದೆ. ಈ ರೂಪವೇ ಹಚ್ಚೆ ಕ್ರಿಯೆಯ ಮೂಲಾರ್ಥವನ್ನು ಸೂಚಿಸುತ್ತದೆ. ಹಚ್ಚೆ ಹುಯ್ಯುವವರು ಮೊನಚಾದ ಆಯುಧವ ತುದಿಯಿಂದ ಚರ್ಮದ ಮೇಲಿನ ಪದರನ್ನು ಚುಚ್ಚಿ, ಅದಕ್ಕೆ ಮೊದಲೇ ತಯಾರಿಸಿಟ್ಟುಕೊಂಡ ಹಸಿರುಮಸಿಯನ್ನು ಲೇಪಿಸಿ ಶಾಶ್ವತವಾದ ಗುರುತಂ ಉಳಿಯುವಂತೆ ಮಾಡುತ್ತಾರೆ. ಪೂರ್ವಕಾಲದಲ್ಲಿ ಅತಿಚೂಪಾದ ಮೂಳೆಯನ್ನು ಬಣ್ಣದಲ್ಲಿ ಅದ್ದಿ ಮಾಂಸಖಂಡಕ್ಕೆ ಹೊಡೆಯುವುದರಿಂದ ಅಳಿಸಲಾಗದ ಶಾಶ್ವತಕಲೆಗಳು ಉಳಿಯುತ್ತವೆ ಎನ್ನುವ ನಂಬಿಕೆ ಇತ್ತು. ಕನ್ನಡದಲ್ಲಿ ಹಚ್ಚೆ ಎನ್ನುವ ರೂಪದೊಡನೆ ಅನೇಕ ಪ್ರಾದೇಶಿಕ ಭಿನ್ನರೂಪಗಳೂ ಬಳಕೆಯಲ್ಲಿವೆ. ಅವೇ ಅಚ್ಚೆ, ಅಂಚೆ, ಹಂಚೆ, ಅಣಚಿ, ಹಣಚಿ ಮುಂತಾದವು. ಪಚ್ಚೆ-ಹಸಿರು ಎನ್ನುವುದು ದ್ರಾವಿಡಪದ. ಹಸಿರುಗಿಡಮೂಲಿಕೆಗಳಿಂದ ತಯಾರಿಸಿದ ರಸ ದೇಹದ ಮೇಲೆ ಹಸಿರುರೂಪವನ್ನೇ ಕೊಡುವುದರಿಂದ ಅದಕ್ಕೆ ಪಚ್ಚೆ >ಹಚ್ಚೆ ಎನ್ನುವ ಹೆಸರು ಬಂದಿದೆ. ಮಲೆಯಾಳಂ ಮತ್ತು ತಮಿಳು ಭಾಷೆಯಲ್ಲಿ ಪಚ, ಪಚ್ಚೆ ಎನ್ನುವ ಪದಗಳೊಡನೆ ಇತರ ದ್ರಾವಿಡಭಾಷೆಗಳಲ್ಲಿಯೂ ಇಂಥವೇ ರೂಪಗಳಿವೆ [೨] ಮಲಬಾರಿನ ಗುಡ್ಡಗಾಡಿನ ಜನಗಳು ಹಚ್ಚೆ ಹುಯ್ಯಿಸಿಕೊಳ್ಳುವುದಕ್ಕೆ 'ಪಚಕುತುಕ' ಎನ್ನುತ್ತಾರೆ. ಅಣಚಿ ಎನ್ನುವ ಕನ್ನಡ ರೂಪಕ್ಕೆ ಮುತ್ತೈದೆ, ಸುಮಂಗಲಿ, ಗರತಿ, ಸೌಭಾಗ್ಯವತಿ ಎನ್ನುವ ಅನೇಕ ಅರ್ಥಗಳ ವಿಶಾಲತೆ ಇದೆ ನಮ್ಮ ಪೂರ್ವಿಕರಲ್ಲಿ ಇದು ಗರತಿತನದ, ಸೌಭಾಗ್ಯದ ಸಂಕೇತವಾಗಿಯೇ ಇತ್ತು. ಕನ್ಯೆ ಪ್ರಾಪ್ತವಯಸ್ಕಳಾಗುವ ಪೂರ್ವದಲ್ಲಿಯೇ ಗರತಿತನಕ್ಕೆ ಸಂಕೇತವಾದ ಹಚ್ಚೆಹಾಕಿಸಿಕೊಂಡು ಶೋಭಿಸುತ್ತಿದ್ದಳು. ಆಯುಷ್ಯವಿರುವ ವರೆಗೆ ಶಾಶ್ವತವಾಗಿ ಧರಿಸುತ್ತಿದ್ದಳು.

ಹಚ್ಚೆಸಂಪ್ರದಾಯದ ಉಗಮ ಹೇಗಾಯಿತು ಎಂಬುದನ್ನು ಊಹೆಯಿಂದ ಅರಿಯಬಹುದು. ಅನೇಕ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಅದನ್ನು ಅರಿಯುವ ಪ್ರಯತ್ನ ಮಾಡಬಹುದಾಗಿದೆ. ಆದಿಮಾನವ(Primitive man)ನ ಮೂಲ ಆವಶ್ಯಕತೆಗಳಲ್ಲಿ ವಾಯು, ನೀರು, ಆಹಾರ ಪ್ರಮುಖವಾಗಿದ್ದವು. ಅವುಗಳನ್ನು ಪ್ರಕೃತಿಯಿಂದ ಪೂರೈಸಿಕೊಂಡ ನಂತರ ತನ್ನ ಮನಸ್ಸಿನ ಇತರ ಅನಿಸಿಕೆಗಳ ಕಡೆ ನಿಧಾನವಾಗಿ ಗಮನ ಹರಿಸತೊಡಗಿದ. ತಾನು ಸುಂದರವಾಗಿ ಕಾಣಬೇಕು. ತನ್ನ ಇರುವನ್ನು ವ್ಯವಸ್ಥೆಗೊಳಿಸಿಕೊಳ್ಳಬೇಕೆಂಬ ಭಾವನೆ ಅವನಲ್ಲಿ ಉದಯವಾಗತೊಡಗಿತು. ಕಾಲಾನಂತರದಲ್ಲಿ ಬಣ್ಣವನ್ನು ಮೈಗೆ ಬಳಿದುಕೊಳ್ಳುವುದನ್ನು ಕಲಿತ. ಅದನ್ನೇ ಶಾಶ್ವತವಾಗಿ ಧರಿಸುವುದನ್ನು ಕಲಿತ. ಉಡಿಗೆ-ತೊಡಿಗೆಗಳ ಮೂಲಕ ತನ್ನನ್ನು ಬೆಚ್ಚಗಿಟ್ಟುಕೊಳ್ಳುವುದು,

---

೨ ವಿವರಗಳಿಗೆ ನೋಡಿ ; Dravidian Etymological Dictionany.

ಸಿಂಗರಿಸಿಕೊಳ್ಳುವುದನ್ನು ಕಲಿತ. ಈ ರೀತಿ ಸಿಂಗಾರಗೊಳ್ಳುವುದನ್ನು ಬೇರೆಲ್ಲಿಯೂ ಕಲಿಯದೆ ತನ್ನ ಸುತ್ತಲಿನ ಪ್ರಕೃತಿಯಿಂದಲೇ ಕಲಿತ. ಸುಂದರವಾಗಿ ಕಾಣುವ ಹಕ್ಕಿಗಳ ಸಮೂಹ ಗರಿಗಳನ್ನು ತಿಕ್ಕಿತೀಡಿ ಹೊಳಪುಗೊಳಿಸಿಕೊಳ್ಳುವುದನ್ನು ನೋಡಿದ.[೩] ಜಿಂಕೆ, ಚಿರತೆ, ಹುಲಿಗಳ ಮೈಮೇಲೆ ಸುಂದರ ಬಣ್ಣಗಳನ್ನು ನೋಡಿ ತಾನೂ ಹಾಗೆಯೇ ಕಾಣಬೇಕೆಂಬ ಆಸೆ ಉಂಟಾಯಿತು. ಮೊದಲು ದೇಹಕ್ಕೆ ತಾತ್ಕಾಲಿಕಬಣ್ಣಗಳನ್ನು ಲೇಪನಮಾಡಿಕೊಳ್ಳುವುದನ್ನು ಕಲಿತ. ಈ ಹಿನ್ನೆಲೆಯಲ್ಲಿ ಈಗಲೂ ರಾಜಸ್ಥಾನಿಗಳು, ಇತರ ಜನಾಂಗಗಳು ಮದರಂಗಿ ಮುಂತಾದ ಬಣ್ಣಗಳನ್ನು ಲೇಪನಮಾಡಿಕೊಳ್ಳುವುದನ್ನು ನೋಡಬಹುದಾಗಿದೆ. ಮನುಷ್ಯನಿಗೆ ತಾತ್ಕಾಲಿಕಬಣ್ಣದಿಂದ ತೃಪ್ತಿಯಾದಂತೆ ಕಾಣುವುದಿಲ್ಲ. ಆದ್ದರಿಂದ ಶಾಶ್ವತಬಣ್ಣದ ಕಡೆ ಗಮನ ಹರಿಸಿದ. ಅದರ ಹಿನ್ನೆಲೆಯಲ್ಲಿಯೇ ಹಚ್ಚೆ ಶಾಶ್ವತಬಣ್ಣದ ಕಲೆಯಾಗಿ ಉಗಮವಾಯಿತು. ಜೊತೆಗೆ ಮನುಷ್ಯ ತನ್ನ ಆಹಾರಕ್ಕೋಸ್ಕರ ಅಲೆಯುತ್ತಿದ್ದಾಗ ಕ್ರೂರಪ್ರಾಣಿಗಳಿಂದ ರಕ್ಷಣೆ ಪಡೆಯಲು ಮತ್ತು ಅವುಗಳಂತೆ ಬಣ್ಣಲೇಪನ ಮಾಡಿಕೊಂಡು, ಹಚ್ಚೆ ಹುಯ್ಯಿಸಿಕೊಂಡು ಅತಿ ಚತುರತೆಯಿಂದ ಬೇಟೆಯಾಡಲು ಈ ಕಲೆಯನ್ನು ಕಲಿತನೆನ್ನುವ ಅಭಿಪ್ರಾಯವೂ ಇದೆ.[೪] ಅಂತೂ ದೇಹದ ಮೇಲೆ ಹಚ್ಚಿಕೊಳ್ಳುತಿದ್ದ ಬಣ್ಣವೇ ಕಾಲಾನಂತರದಲ್ಲಿ ಶಾಶ್ವತ ಹಚ್ಚೆಯ ಬಣ್ಣವಾಗಿ ಪರಿವರ್ತನಗೊಂಡಿತು.[೫]

ಒಟ್ಟಿನಲ್ಲಿ ಮನುಷ್ಯ ನಗ್ನಾವಸ್ಥೆಯಲ್ಲಿದ್ದಾಗಲೇ ಈ ರೀತಿಯ ಅಲಂಕಾರ ಪ್ರವೃತ್ತಿ ಅವನಲ್ಲಿ ಬೆಳದುಬಂದಿತು ಎನ್ನುವುದು ನಿರ್ವಿವಾದ. ನಂತರ ದೇಹರಕ್ಷಣೆಗಾಗಿ, ಅಲಂಕಾರಕ್ಕಾಗಿ ಉಡಿಗೆ ತೊಡಿಗೆಗಳನ್ನು ಉಪಯೋಗಿಸುವುದನ್ನು ಕಲಿತ. ಕೆಲವರು ಹಚ್ಚೆಯ ಉಗಮದ ಬಗ್ಗೆ ಊಹಿಸುತ್ತಾ ಮಾನವ ಉರಿಯುತಿದ್ದ ಕೊಳ್ಳಿಯಿಂದ ತನ್ನ ಮೈಯನ್ನು ಸುಟ್ಟುಕೊಂಡಿರಬಹುದು, ನಂತರ ಅದು ಕಲೆಯಾಗಿ ದೇಹದ ಮೇಲೆ

---

೩ The desire to look well, that is to produce an agreeable impression by decoration by ones look, is not peculiar to man alone. Many animals feel and show the same desire. ......this fact is very remarkable in birds which know how to make their feathers look glossy and show themselves with grace, making the most of their bright colours.

—The Mysore Tribes and Castes (Vol. II)

೪ ಮಧ್ಯಪ್ರದೇಶದ ಆದಿವಾಸಿಗಳಲ್ಲಿ ಹಚ್ಚೆ–ಡಾ. ಕೃಷ್ಣಾನಂದ ಕಾಮತ್ (ಮಲ್ಲಿಗೆ, ಮಾರ್ಚ ೧೯೭೯).

೫ The body painting of primeval man apparently passed into tattooing as a means of securing durable designs.

—Chamber Encyclopaedia (Vol. 13) p. 476.

ಉಳಿದು ಆಕರ್ಷಕವಾಗಿ ಅವನಿಗೆ ಕಂಡಿರಬಹುದು. ಉಳಿದವರೂ ಅದನ್ನು ಆಕರ್ಷಕ ಎಂದು ಭಾವಿಸಿ ಉದ್ದೇಶಪೂರ್ವಕವಾಗಿಯೇ ದೇಹದ ಮೇಲೆ ಕಲೆ ಮಾಡುವುದನ್ನು ಪ್ರಾರಂಭಿಸಿರಬಹುದು ಎನ್ನುತ್ತಾರೆ.

ಹರ್ಬರ್ಟ್ ಸ್ಪೆನ್ಸರ್ ಎನ್ನುವ ವಿದ್ವಾಂಸ ಆದಿಮಾನವರು ಭೂತಪ್ರೇತಗಳಿಗೆ ಮತ್ತು ಸತ್ತ ತಮ್ಮ ನಾಯಕನಿಗೆ ರಕ್ತತರ್ಪಣ ಮಾಡಲೋಸುಗ ಈ ಸಂಪ್ರದಾಯಗಳನ್ನು ಬೆಳಸಿಕೊಂಡುಬಂದಿರಬಹುದೆಂದು ಊಹಿಸುತ್ತಾರೆ. ದೇಹವನ್ನು ಕುರೂಪಗೊಳಿಸುವ ಕ್ರಿಯೆ ಅನೇಕ ಆದಿವಾಸಿ ಜನಾಂಗಗಳಲ್ಲಿ ಧಾರ್ಮಿಕವಿಧಿಯಾಗಿ ಉಳಿದುಕೊಂಡು ಬಂದಿರುವುದನ್ನು ಸಹಜವಾಗಿಯೇ ಗಮನಿಸಬಹುದು. ತಿರುವಾಂಕೂರಿನ ಕಾಡಿನಲ್ಲಿರುವ ಕಾದಾರ್ ಎನ್ನುವ ಜನಾಂಗ ಕೆಳದವಡೆಯ ಮತ್ತು ಮೇಲಿನ ದವಡೆಯ ಕೋರೆಹಲ್ಲು ಚೂಪುಗೊಳಿಸುವುದನ್ನು, ಆಸ್ಟ್ರೇಲಿಯಾದ ಬಂತೂಸ್ ಮತ್ತು ಕಾಂಗೋ ನಿವಾಸಿಗಳು ಹಲ್ಲುಕೀಳುವುದನ್ನು ಕಾಣಬಹುದಾಗಿದೆ. ಮೈಸೂರಿನ ಕಾಡಿನಲ್ಲಿರುವ ಮರಸುಬಕ್ಕಲು ಎನ್ನುವ ಜನಾಂಗ ದೇವರಿಗಾಗಿ ತಮ್ಮ ಬೆರಳುಗಳನ್ನು ಕತ್ತರಿಸಿಕೊಳ್ಳುವುದು ಸಾಮಾನ್ಯ ಸಂಗತಿಯಾಗಿದೆ. ಹೀಗೆ ಹಚ್ಚೆಸಂಪ್ರದಾಯ ರಕ್ಷಣೆ, ಸೌಂದರ್ಯ, ಧರ್ಮ, ನಂಬಿಕೆ ಮುಂತಾದ ವಿಚಾರಗಳ ಅಡಿಯಲ್ಲಿ ಬೆಳದುಬಂದಿತು.

ಆದಿಮಾನವನಲ್ಲಿ ಬಣ್ಣಗಳ ಆಕರ್ಷಣೆ ಮತ್ತು ಲೈಂಗಿಕ ಮಿಡಿತಕ್ಕೆ ಸಂಬಂಧವಿತ್ತೆಂಬುದನ್ನೂ (It is also believed that in primitive man, there is close connection between love of colour and sexual impluse) ಕಡಗಣಿಸುವಂತಿಲ್ಲ. ಸೌಂದರ್ಯವಾಗಿ ಅದನ್ನು ಉಪಯೋಗಿಸಿಕೊಂಡು ಬೆಳಸಿಕೊಂಡು ಬಂದಿರುವ ಸಾಧ್ಯತೆಗಳೂ ಇವೆ. ಒಟ್ಟಿನಲ್ಲಿ ಅದು ವಿಶ್ವವ್ಯಾಪಕ ಕಲೆಯಾಗಿ ಬೆಳೆದು ಬಂದಿತೆಂಬುದು ಮಹತ್ವದ್ದಾಗಿದೆ.

ಚರ್ಮಗಳ ಕೆತ್ತನೆಯಲ್ಲಿ ಎರಡು ರೀತಿ ಇರುವುದನ್ನು ಕೆಲವರು ಗಮನಿಸಿದ್ದಾರೆ. ಒಂದನೆಯದು ಚರ್ಮವನ್ನು ಸುಲಿದು ಮಾಂಸಖಂಡದಲ್ಲಿ ಕಪ್ಪುಮಸಿಯನ್ನು ತುಂಬಿ, ಉಬ್ಬಿಸಿ ಆದರಿಂದ ಚರ್ಮವನ್ನು ಕೆತ್ತುವುದು. ಇದಕ್ಕೆ ಇಂಗ್ಲೀಷಿನಲ್ಲಿ Cicatrization ಎನ್ನುತ್ತಾರೆ. ಎರಡನೆಯದು ಚರ್ಮಕ್ಕೆ ಗಾಯವನ್ನು ಮಾಡಿ ಅದಕ್ಕೆ ಮಸಿಯನ್ನು ಲೇಪಿಸಿ, ಬೇಕಾದ ನಮೂನೆಯ ಚಿತ್ತಾರಗಳನ್ನು ಬಿಡಿಸುವ ಹಚ್ಚೆಯ ಕಲೆ. ಇದಕ್ಕೆ ಇಂಗ್ಲೀಷಿನಲ್ಲಿ Tattooing ಎನ್ನುತ್ತಾರೆ. ಉಬ್ಬುಚರ್ಮದ ಕೆತ್ತನೆ (cicatrization) ಹೆಚ್ಚು ಜನಪ್ರಿಯವಲ್ಲದ ಕೆಲವೇ ಬುಡಕಟ್ಟುಜನಾಂಗಗಳಲ್ಲಿ ಕಂಡುಬಂದಿರುವ ಕಲೆ. ಕಪ್ಪುಬಣ್ಣದ ಜನಾಂಗಗಳಿರುವ ನೀಗ್ರೋಆಫ್ರಿಕಾ, ಆಸ್ಟ್ರೇಲಿಯಾ, ಫಿಜಿಯಾ, ಮಲೇಷ್ಯಾ ಮುಂತಾದ ಕಡೆ ಇದು ಬಳಕೆಯಲ್ಲಿದೆ. ಈ ಕಲೆಯನ್ನು ಸೌಂದರ್ಯವಾಗಿ ಬಳಕೆಗೆ ತಂದ ಮನುಷ್ಯ ಕಾಲಾನಂತರದಲ್ಲಿ ಭೀಕರವಾಗಿ ಕಾಣಲು ಬಳಸಿದ. ಶತ್ರುಗಳಿಗೆ ಅತಿಭಯಂಕರವಾಗಿ ಕಾಣಲು, ತನ್ನ ಪೌರುಷ ಪ್ರದರ್ಶನ ಮಾಡಲು ಕೆಲವು

ಜನಾಂಗಗಳು ಈ ಕಲೆಯನ್ನು ಬಳಸಿಕೊಂಡವು. ಉಬ್ಬುಚರ್ಮದ ಕೆತ್ತನೆಗಳು ಸೌಂದರ್ಯಕ್ಕಿಂತ ಭೀಕರತೆಗೆ ಹೆಚ್ಚು ಒಗ್ಗುತ್ತವೆ. ಅವುಗಳಲ್ಲಿ ನಯವಾದ ಕುಸುರಿ ಕೆಲಸಗಳಾಗಲಿ, ಸೂಕ್ಷ್ಮಚಿತ್ರವಿನ್ಯಾಸಗಳಾಗಲಿ ಕಂಡುಬರುವುದಿಲ್ಲ. ಮಾವೋರಿಗಳಲ್ಲಿ ಕಂಡುಬರುವ ಹಚ್ಚೆಗಳಲ್ಲಿಯೂ ಸಹ ಅನೇಕ ಭೀಕರರೂಪ ಕೊಡಬಲ್ಲ ಚಿತ್ರಗಳಿರುವುದು ಕಂಡುಬರುತ್ತದೆ.

ಹಚ್ಚೆಯ ಕಲೆ ಅನೇಕ ಚಿತ್ರವಿನ್ಯಾಸಗಳಿಂದ ವಿಶಿಷ್ಟಕಲೆಯಾಗಿ ಬೆಳೆಯಿತು. ವೈವಿಧ್ಯಮಯ ಆಭರಣ ಹಾಕಿಕೊಳ್ಳುವ ಗೀಳು ಮನುಷ್ಯನಲ್ಲಿ ಹುಟ್ಟಿದಂತೆ ಶಾಶ್ವತ ಆಭರಣವಾದ ಹಚ್ಚೆಯನ್ನೂ ಹಾಕಿಸಿಕೊಳ್ಳುವ ಗೀಳು ಪ್ರಾರಂಭವಾಯಿತು. ಅನುಭವಿಕಣ್ಣುಗಳು ಅದನ್ನು ಹುಯ್ಯಿಸಿಕೊಂಡವರ ಜಾತಿ, ಧರ್ಮ, ಸಾಮಾಜಿಕ ಅಂತಸ್ತು ಮುಂತಾದವುಗಳನ್ನು ಗುರುತಿಸುತ್ತವೆ. ದೇಶ ಮತ್ತು ಜನಾಂಗಗಳಿಗನುಗುಣವಾಗಿ ಹಚ್ಚೆಹಾಕಿಸಿಕೊಳ್ಳುವುದರ ಹಿನ್ನೆಲೆಯಲ್ಲಿದ್ದ ಉದ್ದೇಶ, ನಂಬಿಕೆ ಭಿನ್ನವಾಗಿರುವುದು ಸ್ಪಷ್ಟವಾಗುತ್ತದೆ. ನ್ಯೂಜಿಲ್ಯಾಂಡಿನ ಮಾವೋರಿ ಪ್ರಮುಖರಿಗೆ ಹಚ್ಚೆ ಭಯೋತ್ಪಾದಕತೆಯನ್ನುಂಟುಮಾಡುತ್ತದೆ ಎನ್ನುವ ನಂಬಿಕೆ ಇತ್ತು. ಆದರೆ ಪ್ಯಾಲಿಸ್ ದ್ವೀಪವಾಸಿಗಳಿಗೆ ಇದೊಂದು ಗೌರವದ ಸಂಕೇತವಾಗಿತ್ತು. ಪೆಸಿಫಿಕ್‌ಸಾಗರದ ದ್ವೀಪವಾಸಿಗಳಿಗೆ ಅಲಂಕಾರಿಕ ಸಾಧನ ಎನ್ನುವ ನಂಬಿಕೆ ಇದ್ದರೆ ಅಮೇರಿಕನ್ ಇಂಡಿಯನ್ನರಿಗೆ ಇದು ಲೈಂಗಿಕ ಸೌಂದರ್ಯ ಮತ್ತು ಸಾಹಸಪ್ರವೃತ್ತಿಯ ಪ್ರತೀಕ ಎನ್ನುವ ನಂಬಿಕೆ ಇತ್ತು. ಹಿರೋಡೋಟಸ್ ಎನ್ನುವ ಇತಿಹಾಸತಜ್ಞ ಥ್ರೇಸಿಯಾದ ಮಹಿಳೆಯರಿಗೆ ಹಚ್ಚೆ ದೊಡ್ಡಸ್ಥಿಕೆಯ ಕುರುಹು ಆಗಿತ್ತೆಂಬುದನ್ನು ಗುರಿತಿಸಿದ್ದಾನೆ. ಕನ್ನಡಿಗರಿಗೆ ಹಚ್ಚೆ ಮುತ್ತೈದೆತನ ಮತ್ತು ಸೌಭಾಗ್ಯದ ಸಂಕೇತವಾಗಿತ್ತು. ಹಚ್ಚೆಯನ್ನೇ ಹಾಕಿಸಿಕೊಳ್ಳದ ಕಪ್ಪುಚೀನಿಯರು, ಮುಸ್ಲೀಮರು, ನ್ಯೂಗಿನಿಯದ ಮಾಪ್ರಲರು, ಶ್ರೀಲಂಕಾದ ವಡ್ಡರು ಮತ್ತು ಇನ್ನೂ ಅನೇಕ ಜನಾಂಗಗಳು ಕಂಡುಬರುತ್ತವೆ. ಜರ್ಮ ಮತ್ತು ರೋಮ್‌ದೇಶದ ದೊರೆಗಳು ಅಪರಾಧಿಗಳು ಮತ್ತು ಗುಲಾಮರಿಗೆ ಬಲಾತ್ಕಾರವಾಗಿ ಹಚ್ಚೆಹಾಕಿಸಿ ಅಪರಾಧದ ವಿವರಗಳನ್ನು ಬರೆಯಿಸಿದರು.

ಭಾರತದಲ್ಲಿ ಹಚ್ಚೆಯ ಬೆಳವಣಿಗೆ ಅಲಂಕಾರ, ಧರ್ಮ, ಜಾತಿ, ಅಂತಸ್ತು, ಮಾಟ, ತಂತ್ರ, ನಂಬಿಕೆ ಮುಂತಾದ ಅನೇಕ ಅಂಶಗಳ ಅಡಿಯಲ್ಲಿ ಆಯಿತು. ಇದರ ಅಧ್ಯಯನ ಅನೇಕ ವಿಚಾರಗಳನ್ನು ಹೊರಗೆಡುವುದರಲ್ಲಿ ಸಂಶಯವೇ ಇಲ್ಲ. ಭಾರತಕ್ಕೆ ಬಂದ ತಾವರ್‌ನಿಯರ್ ಎನ್ನುವ ಪ್ರವಾಸಿ 'ಬಂಜಾರಜಾತಿಯ ಹೆಂಗಸರು ಮುಂಗೈಯಿಂದ ತೋಳಿನ ವರೆಗೆ ತಮ್ಮ ಕೈಗಳನ್ನು ಹೂವಿನ ಹಚ್ಚೆಯಿಂದ ಸಿಂಗರಿಸಿಕೊಂಡು ಅದಕ್ಕೆ ಅನೇಕ ಬೇರುಗಳ ರಸದಿಂದ ತಯಾರಿಸಿದ ವಿವಿಧ ಬಣ್ಣಗಳನ್ನು ಹಚ್ಚಿಕೊಂಡು ಚರ್ಮವೇ ಹೂವಿನೋಪಾದಿಯಲ್ಲಿ ಕಾಣುವಂತೆ ಮಾಡಿಕೊಳ್ಳುತಿದ್ದರು' ಎನ್ನುತ್ತಾನೆ. ಹಚ್ಚೆಹಾಕಲು ಇರುವ ಕೆಲವು ಪ್ರಮುಖ ಕಾರಣಗಳನ್ನು ಈ ರೀತಿಯಾಗಿ ಪಟ್ಟಿ ಮಾಡಬಹುದಾಗಿದೆ :

೧. ಅಪರಾಧಿಗಳ ದೇಹದ ಮೇಲೆ ಶಾಶ್ವತವಾದ ಗುರುತನ್ನು ಹಾಕಲು (ರೋಮನ್ನರು, ಬರ್ಮಾದೇಶದವರು ಅಪರಾಧಿಗಳ ಕೈ, ಹಣೆ, ಎದೆಯ ಮೇಲೆ ಅಪರಾಧ, ಅದರ ವಿವರ ಬರೆಯುತ್ತಿದ್ದರು. ಉತ್ತರಕರ್ನಾಟಕದಲ್ಲಿ ಜೇಲಿಗೆ ಹೋದವರ ಕಾಲಿಗೆ ಹಚ್ಚೆಹಾಕುತಿದ್ದರು).

೨. ಸೌಂದರ್ಯವರ್ಧನೆ ಮತ್ತು ಲೈಂಗಿಕ ಆಕರ್ಷಣೆ.

೩. ಗೌರವ ಮತ್ತು ದೊಡ್ಡಸ್ತಿಕೆಯ ಸಲುವಾಗಿ.

೪. ಜಾತಿ ಮತ್ತು ವೃತ್ತಿಸೂಚಕವಾಗಿ (ತಕ್ಕಡಿ, ವ್ಯಾಪಾರಸ್ಥ ಬನಿಯಾ ಪಂಜಾಬಿಗಳ ಚಿಹ್ನೆ. ನೇಕಾರರ ರಾಟಿ, ದರ್ಜಿಗಳ ಸೂಜಿ ಮುಂತಾದವು ವೃತ್ತಿ ಮತ್ತು ಜಾತಿಸೂಚಕಗಳಾಗಿವೆ. ಕೆಲವು ಕ್ರೈಸ್ತರು ಶಿಲುಬೆಹಚ್ಚೆಯನ್ನು ಹಣೆಯ ಮೇಲೆ ಹಾಕಿಸಿಕೊಂಡಿರುತ್ತಾರೆ. ಒಂಟೆ, ಒಳಕಲ್ಲು, ಜರಡಿ ಮುಂತಾದ ಚಿತ್ರಗಳನ್ನೂ ಕಾಣಬಹುದಾಗಿದೆ).

೫. ಅತ್ಯಾಚಾರದಿಂದ ರಕ್ಷಿಸಿಕೊಳ್ಳುವ ಸಲುವಾಗಿ (ಉತ್ತರಕರ್ನಾಟಕದಲ್ಲಿ ಮುಸಲ್ಮಾನ ರಾಜರುಗಳಿಂದ ನಡೆಯಬಹುದಾದ ಅತ್ಯಾಚಾರದಿಂದ ತಪ್ಪಿಸಿಕೊಳ್ಳಲು ಹಚ್ಚೆಹಾಕಿಸಿಕೊಳ್ಳುತಿದ್ದರು. ಹಚ್ಚೆಹಾಕಿಸಿಕೊಂಡ ಹಿಂದೂ ಮಹಿಳೆಯರನ್ನು ಮುಸಲ್ಮಾನರು ಮುಟ್ಟುತ್ತಿರಲಿಲ್ಲವೆಂಬ ನಂಬಿಕೆ ಇದೆ).

೬. ಹೀನಸುಳಿ, ಸರ್ಪಹುಣ್ಣು, ತೊನ್ನು ಮುಂತಾದವುಗಳನ್ನು ಮುಚ್ಚುವುದಕ್ಕಾಗಿ ಹಚ್ಚೆ ಹಾಕಿಸಿಕೊಂಡರೆ ಕಾಲಾನಂತರದಲ್ಲಿ ಅದು ಕಡಿಮೆಯಾಗುತ್ತದೆ ಎನ್ನುವ ನಂಬಿಕೆ ಇದೆ.

೭. ಮಾಟಮದ್ದಿನಿಂದ ತಪ್ಪಿಸಿಕೊಳ್ಳುವುದಕ್ಕಾಗಿ.

೮. ಚೇಳು, ಹಾವು ಮುಂತಾದವುಗಳ ಕಡಿತದಿಂದ ನಂಜು ಮತ್ತು ವಿಷ ಏರದಿರಲಿ ಎಂಬ ಕಾರಣದಿಂದ.

೯. ಗರ್ಭಪಾತವಾಗದಿರಲಿ ಎನ್ನುವ ನಂಬಿಕೆಯಿಂದ.

೧೦. ಅನ್ನ ಮುಂತಾದ ಅಡಿಗೆ ಪದಾರ್ಥಗಳು ಹಳಸದಿರಲಿ ಎಂಬ ಕಾರಣಕ್ಕಾಗಿ.

೧೧. ಧಾನ್ಯಗಳು ಕಣದಲ್ಲಿ ಹೆಚ್ಚಾಗಲಿ, ಮುಟ್ಟಿದ ಕೈಯಿಂದ ಹುಲುಸಾಗಲಿ ಎನ್ನುವ ನಂಬಿಕೆಯಿಂದ.

೧೨. ಧಾರ್ಮಿಕಚಿಹ್ನೆಯಾಗಿ.

೧೩. ಪ್ರಿಯಕರ, ಪ್ರಿಯತಮೆ ಅಥವಾ ನೆಚ್ಚಿನವರ ನೆನಪಿಗಾಗಿ.

೧೪. ಅದೃಷ್ಟದ ಸಂಕೇತವಾಗಿ.

೧೫. ಭೂಮಿ, ಸ್ವರ್ಗ, ಅಷ್ಟದಿಕ್ಕು, ನವಗ್ರಹ ಮುಂತಾದ ವಿಶ್ವಶಕ್ತಿಗಳ ಸಂಕೇತವಾಗಿ.

೧೬. ಸ್ತ್ರೀಶಕ್ತಿಸಂಕೇತವಾಗಿ (ತ್ರಿಕೋನ ಮತ್ತು ಮೀನಗಳು).[೬]

೧೭. ಸೌಭಾಗ್ಯದ ಸಂಕೇತವಾಗಿ.

೧೮. ದೃಷ್ಟಿ ತಾಗದಿರಲಿ ಎನ್ನುವ ಕಾರಣಕ್ಕಾಗಿ.

೧೯. ಭಯೋತ್ಪಾದನೆಯನ್ನುಂಟುಮಾಡಲು.

೨೦. ತಪ್ಪಿಸಿಕೊಂಡವರನ್ನು ಗುರುತಿಸಲು (ಜಾತ್ರೆಯಲ್ಲಿ ಮಕ್ಕಳು ತಪ್ಪಿಸಿಕೊಂಡರೆ ಹಚ್ಚೆಯ ಗುರುತಿನಿಂದ ಕಂಡುಹಿಡಿಯುತ್ತಿದ್ದರು. ಕಾಡಿನಲ್ಲಿ ದುಷ್ಟಪ್ರಾಣಿಗಳಿಗೆ ಆಹುತಿಯಾದರೆ ಹಚ್ಚೆಯಿಂದ ಗುರುತಿಸಲ್ಪಡುತ್ತಿದ್ದರು, ಇತ್ತೀಚಿಗೆ ರಸ್ತೆಯ ಮೋಟರ್‌ಸೈಕಲ್ಲಿನ ಓಟದ ಸ್ಪರ್ಧಾಳುಗಳನ್ನು ಹಚ್ಚೆಯ ಕಲೆಗಳಿಂದ ಗುರುತಿಸುತ್ತಾರಂತೆ)[೭].

೨೧. ನರರೋಗ, ಗಂಟುಕಟ್ಟುವಿಕೆಯಿಂದ ಪಾರಾಗಲು.

ಮನುಷ್ಯನು ಸತ್ತಾಗ ಅವನೊಂದಿಗೆ ಬರುವುದು ಒಡವೆ-ವಸ್ತುಗಳಲ್ಲ, ಶ್ರೀಮಂತಿಕೆಗಳಲ್ಲ ಹಚ್ಚೆಯೊಂದೇ ಎನ್ನುವ ನಂಬಿಕೆ ನಮ್ಮ ಪೂರ್ವಿಕರಲ್ಲಿ ಆಳವಾಗಿ ಬೇರೂರಿತ್ತು. ಜೊತೆಗೆ ಅದು ಸೌಭಾಗ್ಯದ ಸಂಕೇತವೆಂಬ ನಂಬಿಕೆ, ಹೆಂಗಸರಲ್ಲಿ ಅದನ್ನು ಹಾಕಿಸಿಕೊಳ್ಳಬೇಕೆಂಬ ಆಕಾಂಕ್ಷೆಯನ್ನು ಪ್ರಚೋದಿಸಿತು. 'ಗಂಗವ್ವ ಹಾಕಿಸಿಕೊಂಡ ಹಚ್ಚೆ ಗರತಿತನ ತಂತ' ಎನ್ನುವ ಜನಪದ ಉಕ್ತಿಯಿಂದಲೂ ಇದು ವೇದ್ಯವಾಗುತ್ತದೆ. ವಿಷ್ಣು ರಾಕ್ಷಸಸಂಹಾರ ಮಾಡಲು ಹೋದಾಗ ತನ್ನ ಪತ್ನಿಗೆ ಯಾವ ತೊಂದರೆಯೂ ಬರದಿರಲಿ ಎಂದುಕೊಂಡು ತನ್ನ ಆಯುಧಗಳಾದ ಶಂಖ, ಚಕ್ರ, ಗದೆ, ಪದ್ಮದ ಚಿತ್ರಗಳನ್ನು ಅವಳ ಕೈಗೆ ಹಚ್ಚೆ ಹಾಕಿಸಿದನಂತೆ. ದುಷ್ಟಗ್ರಹಗಳಿಂದ ಹಚ್ಚೆ ರಕ್ಷಣೆಕೊಡುತ್ತದೆಯೆ ಎಂದು ಅನೇಕರು ಹಚ್ಚೆ ಹಾಕಿಸಿಕೊಂಡರು. ಶ್ರೀರಾಮನ ಪತ್ನಿ ಸೀತೆಯೂ ಕೂಡ ಹಚ್ಚೆ ಹಾಕಿಸಿಕೊಂಡಳಂತೆ. ಹಚ್ಚೆಹಾಕುವ ಹೆಂಗಸರು ಈ ಎಲ್ಲ ವಿಚಾರಗಳನ್ನೂ ಜನ ನಂಬುವಂತೆ ಹೇಳುತ್ತಾರೆ. ಹಚ್ಚೆ ಹಾಕಿಸಿಕೊಂಡರೆ ಪಾಪಮಾಡಿದರೂ ಸ್ವರ್ಗಕ್ಕೆ ಹೋಗಬಹುದು. ಹಚ್ಚೆ ಇಲ್ಲದಿದ್ದರೆ ಯಮರಾಜ ಅಸಂತುಷ್ಟಿಗೊಂಡು ನರಕಕ್ಕೆ ಕಳಿಸುತ್ತಾನೆ ಎನ್ನುವ ನಂಬಿಕೆಗೇನೂ ಕಡಿಮೆ ಇಲ್ಲ. ಹಚ್ಚೆ ಇದ್ದರೆ ಗರ್ಭಪಾತವಾಗುವುದಿಲ್ಲ, ಗರ್ಭಿಣಿ ಇದ್ದಾಗ ಕಿರೀಟದ ಹಚ್ಚೆ ಹಾಕಿಸಿಕೊಂಡರೆ ಮನೆ ಬೆಳಗುವ ಸುಂದರ ಮಗಳು ಹುಟ್ಟುತ್ತಾಳೆ ಎನ್ನುವ ನಂಬಿಕೆ ಇದೆ. ಎರಡೋ, ಮೂರೋ ಮಕ್ಕಳು ಹುಟ್ಟಿ ಸತ್ತರೆ ತಾಯಿಯ ನಡುವಿನ ಮೇಲೆ ಹಚ್ಚೆ ಚುಚ್ಚಿದರೆ ಮುಂದೆ ಹುಟ್ಟುವ ಮಕ್ಕಳು ಬದುಕುತ್ತವೆ ಎಂಬುದು ವಾಡಿಕೆ. ಕಾಲಿನ ಮೊಣಚಿಪ್ಪು ಅಥವಾ

[೬] Notes on Female tattoo designs in India—B. A. Gupte IA. XXXI pp. 293-98.

[೭] Encyclopaedia Britanica IX, p. 841.

ತೋಳಿನ ಸಂದಿಗಳಿಗೆ ವಾತರೋಗ ತಗುಲಿದ್ದರೆ ಹಚ್ಚೆ ಹಾಕಿಸಿಕೊಂಡರೆ ನಿವಾರಣೆ ಯಾಗುತ್ತದೆ. ಹಚ್ಚೆ ಇದ್ದರೆ ವೈಧವ್ಯ ಬರುವುದಿಲ್ಲ, ಶ್ರೀಮಂತಿಕೆ ಬರುತ್ತದೆ ಎಂದು ಕೆಲವರು ನಂಬುತ್ತಾರೆ. ಇಂತಹ ಅನೇಕ ನಂಬಿಕೆಗಳ ಅಡಿಯಲ್ಲಿ ಹಚ್ಚೆ ಸಾವಿರಾರು ವರ್ಷಗಳಿಂದ ಬಾಳಿ ಬೆಳೆದುಕೊಂಡು ಬಂದಿತು.

ಕರ್ನಾಟಕದ ಅನೇಕ ಜಾತಿಗಳ ಉಪಕಸಬು ಹಚ್ಚೆ ಹುಯ್ಯುವುದೇ ಆಗಿದೆ. ನನಗೆ ದೊರೆತ ಮಾಹಿತಿಯ ಪ್ರಕಾರ ಕೊರಮರು, ಕುಕ್ಕೆಕೊರಮರು, ಕರೆಗಾರರು, ಬೆಸ್ತರು, ಗುಂಡೆಬೆಸ್ತರು, ಬುರುಡೆಬೆಸ್ತರು, ಕೊರವಂಜಿಗಳು, ಬ್ಯಾಡರು, ಕಿಳ್ಳೇಕ್ಯಾತರು, ಶಿಳ್ಳೇಕ್ಯಾತರು, ಮೇದಾರರು, ಗೊಂದಲಿಗರು, ಜೋಗೇರರು, ಒಡ್ಡರು, ಗೊಂಬೆ ಯಾಟದ ಮರಾಠಿಗರು, ಜಾತಿಗಾರರು, ಕುರುಬರು ಹಚ್ಚೆ ಹಾಕುತ್ತಾರೆ. ಅನೇಕರು ನಿರ್ದಿಷ್ಟ ಹಳ್ಳಿಗಳಲ್ಲಿ ವಾಸಿಸುವರಾದರೂ ಕೆಲವರು ಅಲೆಮಾರಿಗಳಾಗಿದ್ದಾರೆ. ಇವ ರಲ್ಲದೆ ಜಾತ್ರೆ ಮತ್ತು ಸಂತೆಗಳಲ್ಲಿ ಹಜಾಮರಂತೆ ಹಚ್ಚೆ ಹುಯ್ಯುವವರನ್ನೂ ಕಾಣ ಬಹುದು. ಇಂಗ್ಲಂಡದ ಕೆಲವು ಬಂದರುಗಳಲ್ಲಿ ಹಚ್ಚೆ ಚುಚ್ಚುವ ಆಧುನಿಕ ಮಾದರಿಯ ಸಲೂನ್‌ಗಳಿವೆ. ಅಮೇರಿಕೆಯಲ್ಲಿ ಪ್ರಪ್ರಥಮ ವಿದ್ಯುತ್‌ಚಾಲಿತ ಹಚ್ಚೆಯ ಯಂತ್ರ ೧೮೯೧ ರಲ್ಲಿ ಸ್ಥಾಪನೆಗೊಂಡಿತೆಂಬುದು ಗಮನಾರ್ಹ ಅಂಶ. ಈ ವಿದ್ಯುತ್‌ಚಾಲಿತ ಯಂತ್ರದಿಂದ ಉಂಟಾಗಬಹುದಾದ ಸಾಂಕ್ರಾಮಿಕ ಚರ್ಮರೋಗ ಮತ್ತು ಚರ್ಮದ ಕ್ಯಾನ್ಸರ್‌ರೋಗಗಳನ್ನು ತಡೆಗಟ್ಟಲು ೧೯೬೧ ರಲ್ಲಿ ನ್ಯೂಯಾರ್ಕ ಸರ್ಕಾರ ಯಂತ್ರಗಳ ಮೂಲಕ ಹಚ್ಚೆ ಹಾಕುವುದನ್ನು ಸಂಪೂರ್ಣ ನಿಷೇಧಿಸಿತು.

ಹಚ್ಚೆ ಹಾಕುವವರ ಜೀವನವಿಧಾನ, ದೈವ, ನಂಬಿಕೆ, ಸಾಮಾಜಿಕ ಸ್ಥಿತಿಗತಿಗಳ ಬಗ್ಗೆ ಸಾಕಷ್ಟು ತಿಳಿಯಬೇಕಾಗಿದೆ. ವಂಶಪರಂಪರೆಯಾಗಿ ಬಂದ ಈ ಕಲೆಯಿಂದ ಬದುಕುವುದು ದುಸ್ಸಾಧ್ಯವಾದರೂ ಅದನ್ನು ಉಪಕಸಬಾಗಿ ನಡೆಸಿಕೊಂಡು ಬಂದಿದ್ದಾರೆ. ಪಂಚಮಿ (ಅಗಸ್ಟ್) ಕಾರ್ತಿಕ (ನವಂಬರ್) ಗಳಲ್ಲಿ ಸಾಮಾನ್ಯವಾಗಿ ಹಚ್ಚೆ ಹುಯ್ಯಲು ಊರೂರಿಗೆ ಬರುತ್ತಾರೆ ಎಂದು ಉತ್ತರಕರ್ನಾಟಕದ ಅನೇಕ ಹಳ್ಳಿಗರು ಹೇಳುತ್ತಾರೆ. ಭಿಕ್ಷೆ ಗೋಸುಗ ಪ್ರವಾಸ ಕೈಕೊಂಡಾಗ ಹಳ್ಳಿಯ ಸುತ್ತಮುತ್ತಲಿನ ಪ್ರಚಲಿತವಿರುವ ಕಥೆ, ಹಾಡು, ಐತಿಹ್ಯ, ಪುರಾಣ ಮುಂತಾದ ಎಲ್ಲ ಜನಪದ ಪ್ರಕಾರಗಳನ್ನೂ ತಮ್ಮದಾಗಿಸಿ ಕೊಂಡು ಜನರನ್ನಾಕರ್ಷಿಸುತ್ತಾರೆ[೮]. ಅತಿ ಚತುರತೆಯಿಂದ ಮಾತನಾಡುವ ಇವರು

೮ They roam about the country in every direction, and undertake frequent long tours for the purpose of begging. In the course of their tour in villages and hamlets, they attract numerous folks around them to whom they relate, with a naive grace, the various legends regarding the efficiency of tattooing, and thus persuade them to get themselves tattooed.

— The Mysore Tribes and Castes (Vol. II)

ಹಚ್ಚೆಹಾಕುವಾಗ ನಗಿಸಿ, ನಂಬಿಸಿ ಜನರನ್ನು ಆಕರ್ಷಿಸುತ್ತಾರೆ. ಹಾಡುಗಳನ್ನು ಸುಶ್ರಾವ್ಯವಾಗಿ ಹಾಡುತ್ತಾ, ಚುಚ್ಚಿದ ನೋವನ್ನು ಇಂಗಿಸುವ ಶಕ್ತಿಪಡೆದ ಇವರ ಬಾಯಿ ಯಲ್ಲಿ ಹಾಡುಗಳ ಮಹಾಪೂರವೇ ಇರುತ್ತದೆ. ಹಚ್ಚೆಹಾಕಿಸಿಕೊಂಡು ಶಾಶ್ವತ ಮುತ್ತೈದೆ ಆಗುತ್ತಿ, ಸುರಲೋಕದ ಸುಂದರಿಯಂತೆ ಕಾಣುತ್ತಿ, ನಿನ್ನ ಗಂಡ ಅರಗಿಣಿ ಯಂತೆ ಸಾಕುತ್ತಾನೆ ಎಂದು ಅನೇಕ ವಿಧದಲ್ಲಿ ಹಾಕಿಸಿಕೊಳ್ಳುವವಳನ್ನು ಕೊಂಡಾಡುವ ಇವರ ಮುತ್ತಿನ ಮಾತಿಗೆ ಮರುಳಾಗದವರ್‍ಯಾರು ?

ಹಚ್ಚೆ ಹಾಕುವವರು ತಮ್ಮ ಕೈಯಲ್ಲಿ ಅನೇಕ ನಮೂನೆಯ ಚಿತ್ರಗಳುಳ್ಳ ಪುಸ್ತಕ ತಂದಿರುತ್ತಾರೆ. ಅದರಲ್ಲಿ ಸರಳಚಿತ್ರಗಳಿಂದ ಕ್ಲಿಷ್ಟಚಿತ್ರಗಳ ವರೆಗೆ ಅನೇಕ ನಮೂನೆ ಗಳಿರುತ್ತವೆ. ಯಾವ ಚಿತ್ರ ಬೇಕಾದರೂ ಹಾಕಬಲ್ಲ ಇವರಿಗೆ ಸಿಗುವ ಸಂಭಾವನೆ ಕೂಡ ಹೆಚ್ಚಿನದಲ್ಲ. ೫ ಆಣೆ ೧ ರೊಟ್ಟಿ ೩ ಮೆಣಸಿನಕಾಯಿಯನ್ನು ಕೆಲವರು ಕೊಟ್ಟರೆ ಕೆಲವರು ನಾಲ್ಕುಪಾವಲಿಯಿಂದ ಒಂಬತ್ತು ಪಾವಲಿಯ ವರೆಗೆ ಹಣವನ್ನು ಕೊಡುವು ದುಂಟು. ಜೊತೆಗೆ ಅಕ್ಕಿ, ಜೋಳ, ರಾಗಿ, ವೀಳ್ಯದೆಲೆ, ಬಾಳೆಹಣ್ಣು, ಅಡಿಕೆ ಮುಂತಾದವನ್ನು ಕೊಡುತ್ತಾರೆ. ೫ ವರ್ಷದ ಮಗುವಿಗೆ ಹಚ್ಚೆ ಚುಚ್ಚಿದರೆ ಅದರ ಪೀಡೆ ತೊಲಗಲಿ ಎಂದು ಆ ಮಗು ಹಾಕಿಕೊಂಡ ಬಟ್ಟೆಯನ್ನು ಸಂಭಾವನೆಯಾಗಿ ಕೊಡುವುದುಂಟು. ಇವರು ಹೀನಜಾತಿಯವರೆಂಬ ನಂಬಿಕೆ ಇದ್ದರೂ ಹಚ್ಚೆ ಹಾಕುವ ಸಮಯದಲ್ಲಿ ಬ್ರಾಹ್ಮಣ ಮತ್ತು ಇತರ ಉತ್ತಮಜಾತಿಯವರ ಮನೆಯ ಪಡಸಾಲೆ ಯನ್ನು ಹೊಗಬಹುದು. ಕೆಲವೊಮ್ಮೆ ಹಚ್ಚೆ ಹಾಕಿಸಿಕೊಂಡವರ ಮನೆಯಲ್ಲಿಯೇ ಊಟಮಾಡಿ ಸಂತೃಪ್ತಿಹೊಂದಿ ಹಚ್ಚೆಹಾಕಿಸಿಕೊಂಡವರ ಮನೆ ಬೆಳೆಯಲಿ ಎಂದು ಹರಸುತ್ತಿದ್ದರು. ಅಲ್ಪ ಸಂಭಾವನೆಯಿಂದಲೇ ತೃಪ್ತಿಗೊಂಡು ಶತಮಾನಗಳಿಂದ ಈ ಕಲೆಯನ್ನು ಬೆಳೆಸಿಕೊಂಡು ಬಂದ ಕಲಾವಿದೆಯರು ಕಾಣೆಯಾಗುತ್ತಿದ್ದಾರೆ.

ಹಚ್ಚೆಯಲ್ಲಿ ಕಂಡುಬರುವ ವಿವಿಧ ಚಿತ್ರಗಳು, ಅದನ್ನು ಹಾಕಿಸಿಕೊಳ್ಳುವವರ ನಂಬಿಕೆ ಗಳನ್ನು ಅಧ್ಯಯನ ಮಾಡಬಹುದಾಗಿದೆ ಹಚ್ಚೆಯ ನಮೂನೆಗಳು ಪ್ರದೇಶದಿಂದ ಪ್ರದೇಶಕ್ಕೆ, ಜನಾಂಗದಿಂದ ಜನಾಂಗಕ್ಕೆ ಭಿನ್ನವಾಗಿವೆ. ಮಹೋರಿನಾಯಕರು ಹಾಕಿಸಿ ಕೊಳ್ಳುವ ರುಪ್ರಭೀಕರ ಚಿತ್ರಗಳಿಗೂ ಬರ್ವಿಂಗಳು ಹಾಕಿಸಿಕೊಳ್ಳುವ ,ಅತ್ಯಂತ ಕಲಾ ತ್ಮಕಚಿತ್ರಗಳಿಗೂ ಅಜಗಜಾಂತರ ವ್ಯತ್ಯಾಸ ಕಂಡುಬರುತ್ತದೆ. ದ್ರಾವಿಡರು ಹಾಕಿಸಿ ಕೊಳ್ಳುತ್ತಿದ್ದ ಚಿತ್ರಗಳಲ್ಲಿ ಬಹುಪಾಲು ಅವರು ನಂಬಿಕೊಂಡುಬಂದ ದೈವ, ಧರ್ಮ, ಸಂಪ್ರದಾಯಗಳಿಗೆ ಸಾಕ್ಷಿಯಾಗಿವೆ. ವಿಶ್ವವನ್ನು ಪ್ರತಿನಿಧಿಸುವ ಚಿತ್ರಗಳಾದ ನಕ್ಷತ್ರ, ಸೂರ್ಯ, ಚಂದ್ರ, ಚೌಕ(ನಾಲ್ಕು ದಿಕ್ಕುಗಳು), ಅಷ್ಟದಿಕ್ಕುಗಳು, ನವಗ್ರಹ, ಪಾಂಡವರು, ಅಷ್ಟಕೊಳ, ಬಸವ, ಸ್ತ್ರೀಶಕ್ತಿಸಂಕೇತವಾದ ತ್ರಿಕೋನ ಮುಂತಾದ ವನ್ನು ನೋಡಬಹುದು. ಅಲ್ಲದೆ ಚೇಳು, ನೊಣ, ನಾಗರಹಾವು, ಮೀನು, ಹುಲಿಉಗುರು, ಜೇಡ, ದುಂಬಿ, ಜಿರಳೆ, ಗಿಳಿ, ಮೊಸಳೆ ಮುಂತಾದ ಪ್ರಾಣಿಗಳೂ































ಹಚ್ಚೆಯ ಕೆಲವು ಮಾದರಿಗಳು





































ಹಚ್ಚೆಯ ಕೆಲವು ಮಾದರಿಗಳು

ಇವೆ. ಕೋಮಲಾಂಗಿಯರ ದೇಹದ ವಿವಿಧಭಾಗಗಳಲ್ಲಿ ನಿಂಬೆಸಸಿ, ತಾವರಿಹೂವು, ಹೊನ್ನೆಮರ, ಬಿಲ್ವಪತ್ರೆ, ತಾವರೆಯೆಲೆ, ಮಲ್ಲಿಗೆಯಿಂಟು, ಶಾವಂತಿಗೆ, ಬಾಳೆಗಿಡ, ಇತರ ಹೂವುಗಳು ಕಂಡುಬರುತ್ತವೆ. ಜೋಳದಕಾಳು, ಗೋದಿಕಾಳು, ಕಡ್ಲೆಕಾಳು, ಚುಕ್ಕೆ, ನಂದಿಕೋಲು, ಸ್ವಸ್ತಿಕ, ಗೌರಿಗದ್ದಿಗೆ, ತೋಳುಚಪ್ಪರ, ತೊಂಡೆಚಪ್ಪರ, ಗಿಂಡಿ, ವಾಲೆಗುಪ್ಪಿ, ಲಿಂಗ, ಹನುಮಂತ, ಶಿವನಮುಡಿ, ನೆಕ್‌ಲೇಸು, ನೆಲ್ಲಿಹಚ್ಚೆ, ಪಾರಿಜಾತ, ಗೌರಿಮುಡಿ, ಜೋಗಿಜಡೆ, ಮುತ್ತಿನ ಆರತಿ, ಕಣ್ಣುಜೋಗಿ, ಗಲ್ಲದಹಚ್ಚೆ, ದೃಷ್ಟಿ ಬೊಟ್ಟು, ಹಸ್ತದ ಹಚ್ಚೆ, ಕುಬುಸದ ಹಚ್ಚೆ, ಮಾವಿನೆಲೆ, ತೇರು, ಮಯೂರ, ಸೂಜಿ, ಒಳಕಲ್ಲು, ಒಂಟಿ, ಜರಡಿ, ಕುದುರೆ, ಶಂಖ, ಚಕ್ರ, ಶಿಲುಬೆ, ಬಾವುಟ, ಹಡಗು ಮುಂತಾದವನ್ನು ಕಾಣಬಹುದು.

ಉತ್ತರಕರ್ನಾಟಕದ ಲಿಂಗಾಯತರು ಅಂಗೈಗೆ ಹಚ್ಚೆ ಹಾಕಿಸಿಕೊಳ್ಳುವುದಿಲ್ಲ. ಕಾರಣ ಹಚ್ಚೆ ಹಾಕಿಸಿಕೊಂಡರೆ ಅಂಗೈಯಲ್ಲಿ ಇಷ್ಟಲಿಂಗವನ್ನು ಇಡಲು ಬರುವುದಿಲ್ಲ ಎನ್ನುವ ನಂಬಿಕೆ ಇದೆ. ಉಳಿದ ಜನಾಂಗಗಳು, ಅಂಗೈ, ಮುಂಗೈ, ಬೆರಳುಗಳು, ಮೊಳಕೈ, ತೋಳು, ಗಲ್ಲ, ಕೆನ್ನೆ, ಹಣೆ, ಹುಬ್ಬು, ಕಣ್ಣಿನ ಎರಡು ಅಂಚುಗಳು, ಎದೆ, ನಡ, ಮೊಲೆ, ಮೊಣಕಾಲು, ತೊಡೆ, ಹೊಟ್ಟೆ, ಕಾಲಿನಮೀನುಖಂಡ, ಬೆನ್ನು ಮುಂತಾದ ದೇಹದ ವಿವಿಧ ಭಾಗಗಳಿಗೆ ಹಚ್ಚೆ ಹಾಕಿಸಿಕೊಳ್ಳುವ ಪಾಡಿಕೆಯುಂಟು. ಯಾವ ಯಾವ ಜಾಗದಲ್ಲಿ ಯಾವ ಯಾವ ಚಿತ್ರಬಿಡಿಸಿಕೊಳ್ಳುತ್ತಾರೆ, ಎಡಗೈ ಮೇಲೆ ಯಾವುದು, ಬಲಗೈ ಮೇಲೆ ಯಾವುದು, ಎಡತೋಳು, ಬಲತೋಳು ಮುಂತಾದ ಜಾಗಗಳ ಮೇಲೆ ಹಚ್ಚೆ ಬಿಡಿಸಿಕೊಳ್ಳುವ ವಿಶಿಷ್ಟ ಚಿತ್ರಗಳಾವುವು ಎಂಬುದನ್ನು ಅಧ್ಯಯನ ಮಾಡಬಹುದಾಗಿದೆ. ಪ್ರಿಯಕರ ಅಥವಾ ಪ್ರಿಯತಮೆಯ ಹೆಸರು, ಇಲ್ಲವೆ ನೆಚ್ಚಿನ ಕ್ರೀಡಾಪಟು, ಚಿತ್ರನಟ, ಚಿತ್ರನಟಿಯರ ಹೆಸರುಗಳು, ಕೈ, ತೊಡೆ, ಎದೆಗಳ ಮೇಲೆ ಶಾಶ್ವತವಾಗಿ ಮೂಡಿರುವುದನ್ನು ಈಗಲೂ ಕಾಣಬಹುದಾಗಿದೆ. ಅನೇಕ ಆಧುನಿಕ ಯುವತಿಯರ ಈ ಗೀಳನ್ನು ನಮ್ಮ ಅನೇಕ ಪತ್ರಿಕೆಗಳು ಬಹಿರಂಗಪಡಿಸಿವೆ. ಹಿಂದೆ ಬರ್ಮಾದೇಶದ ದೊರೆಗಳು ಅಪರಾಧಮಾಡಿದವನ ಅಪರಾಧದ ವಿವರವನ್ನು ಹಣೆ, ಎದೆ, ಮತ್ತು ಕೈಗಳ ಮೇಲೆ ಬರೆಯುತ್ತಿದ್ದರು. ಆನೇಕ ಹೆಂಗಸರು ಗಂಡನ ಹೆಸರನ್ನು ಬಾಯಲ್ಲಿ ಹೇಳಿದರೆ ಆಯುಷ್ಯ ಕಡಿಮೆಯಾಗುತ್ತದೆ ಎಂದು ನಂಬಿ ಕೈಯಲ್ಲಿ ಬರೆಸಿಕೊಂಡು ಇತರರು ಕೇಳಿದರೆ ತೋರಿಸುತ್ತಿದ್ದರು.

ಹೀಗೆ ಶಾಶ್ವತವಾಗಿ ಗುರುತು ಉಳಿಯುವಂತೆ ಮಾಡುವ ಹಚ್ಚೆಕಸುಬಿನ ಕಲಾವಿದೆಯರು ಉಪಯೋಗಿಸುವ ಉಪಕರಣಗಳನ್ನು ನೋಡಿದರೆ ಅವು ಸಾಮಾನ್ಯವಾಗಿ ದೊರಕುವ ಸೂಜಿಗಳು. ೩, ೪, ೬, ೭, ೯ ಮೊನಚಾದ ಸೂಜಿಗಳನ್ನು ಕೂಡಿಸಿ ಅವುಗಳ ಕಟ್ಟನ್ನು ಮಾಡುತ್ತಾರೆ. ಈ ಸಾಧನಕ್ಕೆ 'ಚಕ್ರ' ವೆಂದು ಕರೆಯುತ್ತಾರೆ. ಹೀನ ಕೂಸಮಾಡದೆ ಒಂದೇ ಸಮನೆ ಅವುಗಳನ್ನು ಜೋಡಿಸಿ ಕಟ್ಟುತ್ತಾರೆ. ಆದರೆ ಅವಕ್ಕೆ

ಯಾವ ಒಡಿಕೆಯೂ ಇರುವುದಿಲ್ಲ. ಮರದ ಒಡಿಕೆಯುಳ್ಳ ಸೂಜಿಗಳು ಜಪಾನ್ ದೇಶದಲ್ಲಿ ಬಳಕೆಯಲ್ಲಿವೆ. ಬರ್ಮಾದೇಶದಲ್ಲಿ ಕಂಚಿನಿಂದ ಮಾಡಿದ ಲೇಖನಿಯಂತಹ ಉಪಕರಣವನ್ನು ಬಳಸುತ್ತಾರೆ; ಅದರ ಮೇಲಿನ ತುದಿ ಲೋಹದಿಂದ ಮಾಡಿರುವುದರಿಂದ ಭಾರವಾಗಿರುತ್ತದೆ. ಪ್ರಪ್ರಥಮವಾಗಿ ೧೮೯೧ ರಲ್ಲಿ ಅಮೇರಿಕನ್ನರು ವಿದ್ಯುತ್ ಚಾಲಿತ ಹಚ್ಚೆ ಉಪಕರಣ ಬಳಸಿರುವುದನ್ನು ನೆನಪಿಸಿಕೊಳ್ಳಬಹುದು. ಮೊನಚಾದ ಆಯುಧವಾಗಿ ಮೂಳೆಯ ಚೂರುಗಳನ್ನು ಬಳಸುತ್ತಿದ್ದ ಆದಿವಾಸವನಿಂದ ಬೆಳೆದುಬಂದ ಈ ಕಲೆ ಈಗಲೂ ಸೂಜಿ ಇತರ ಉಪಕರಣಗಳ ಬಳಕೆಯಿಂದ ಅಲ್ಲಲ್ಲಿ ಉಳಿದುಬಂದಿದೆ.

ಮೊನಚಾದ ಸೂಜಿಯಿಂದ ಚುಚ್ಚಿದ ನಂತರ ಅದಕ್ಕೆ ಹಸಿರುಮಸಿಯನ್ನು ಲೇಪಿಸುತ್ತಾರೆ ಎಂದು ಉತ್ತರಕರ್ನಾಟಕದ ಹೆಣ್ಣುಮಕ್ಕಳು ಹೇಳುತ್ತಾರೆ. ಆ ಮಸಿಯನ್ನು ಹೇಗೆ ತಯಾರಿಸುತ್ತಾರೆ ಎನ್ನುವುದು ಆಯಾ ಪ್ರದೇಶ, ಲಭ್ಯವಿರುವ ವಸ್ತುಗಳು ಮತ್ತು ಹಚ್ಚೆ ಹುಯ್ಯುವವರ ಬಳಕೆಗೆ ಬಿಟ್ಟ ವಿಷಯ. ಕೆಲವರು ಇದ್ದಿಲು, ಬರೆಯುವ ಮಸಿ, ಅರಿಷಿಣ ಮತ್ತು ಔಡಲೆಣ್ಣೆಯನ್ನು ಬಳಸಿ ಹಳದಿಮಿಶ್ರಿತ ಹಸಿರು ಬಣ್ಣವನ್ನು ತಯಾರಿಸಿದರೆ, ಇನ್ನು ಕೆಲವರು ಬಳ್ಳಿ, ಕಾಯಿ, ಎಲೆಯ ರಸ, ಬೇರಿನ ರಸಗಳಿಂದ ಬಣ್ಣ ತಯಾರಿಸುತ್ತಾರೆ. ದೇಹವನ್ನು ಹೊಕ್ಕು ನಂಜನ್ನು ನುಂಗಿಕೊಂಡು, ಶಾಶ್ವತವಾಗಿ ದೇಹದ ಮೇಲೆ ಉಳಿಯುವ ಕಲೆಯನ್ನು ಮಾಡುವ ನಮ್ಮ ಪೂರ್ವಿಕರು ಅನೇಕ ಬಣ್ಣಗಳನ್ನು ಬಳಸಿಕೊಂಡರು, ಈ ಪ್ರಯೋಗಗಳಲ್ಲಿ ಯಶಸ್ವಿಯಾದರು. The Mysore Tribes and Castes(Vol. II) ಎನ್ನುವ ಪುಸ್ತಕದಲ್ಲಿ ಕೊಟ್ಟ ಕೆಲವು ಬಣ್ಣ ತಯಾರಿಕೆಯ ಮಾದರಿಗಳನ್ನು ಇಲ್ಲಿ ಕಾಣಬಹುದು :

೧. ಮುನಿಯುವರೆಸೊಪ್ಪನ್ನು ಹಂಚಿಗೆ ತಿಕ್ಕಿ ಹರಳೆಣ್ಣೆಯ ದೀಪಕ್ಕೆ ಒಡಿಯಬೇಕು. ಅದರಿಂದ ಬಂದ ಕಪ್ಪಿಗೆ ನೀರನ್ನು ಹಾಕಿ ತಯಾರಿಸಬಹುದು.

೨. ವೀಳ್ಯದೆಲೆಯ ರಸವನ್ನು ಹೊಸದಾದ ಹಂಚಿಗೆ ಹಚ್ಚಿ ಹರಳೆಣ್ಣೆ ದೀಪಕ್ಕೆ ಒಡಿದರೆ ಅದರಿಂದ ಕಪ್ಪುಬಣ್ಣ ಬರುತ್ತದೆ. ಅದಕ್ಕೆ ಆಕಳಹಾಲು ಅಥವಾ ಮೊಲೆ ಹಾಲನ್ನು ಬೆರಸಿ ಬಣ್ಣ ತಯಾರಿಸಬಹುದು.

೩. ಎಳ್ಳೆಣ್ಣೆ ದೀಪದ ಬತ್ತಿಯ ಕರಿಗೆ ಮೊಲೆಹಾಲನ್ನು ಬೆರಸಿ ಬಣ್ಣ ತಯಾರಿಸಬಹುದು.

೪. ಇದ್ದಲಿನ ನುಣುಪಾದ ಪುಡಿಗೆ ಹಚ್ಚೆಸೊಪ್ಪಿನ ರಸವನ್ನು ಬೆರಸಿದರೆ ಬಣ್ಣ ಬರುತ್ತದೆ.

೫. ಹಾಗಲರಸ ಅಥವಾ ಚಪ್ಪರದವರೆ ರಸವನ್ನು ಮಣ್ಣಿನ ಮಡಕೆಯಲ್ಲಿ ಹಾಕಿ ಸ್ವಲ್ಪ ಬೆಚ್ಚಗೆ ಮಾಡಿದರೆ ಲೋಳೆಯಾಕಾರದ ಬಣ್ಣಬರುತ್ತದೆ.

೬. ಕಿರುಗೋಣಿಸೊಪ್ಪಿನ ರಸಕ್ಕೆ ಅಥವಾ ನೆಲ್ಲಿಸೊಪ್ಪಿನರಸಕ್ಕೆ ಎಳ್ಳೆಣ್ಣೆ ದೀಪದ ಕರಿಯನ್ನು ಸೇರಿಸಿ ಬಣ್ಣ ತಯಾರಿಸಬಹುದು.

೭. ತುಂಬೆಸೊಪ್ಪಿನ ರಸಕ್ಕೆ ಮೊಲೆಹಾಲು ಮತ್ತು ಕೊಬ್ಬರಿಯೆಣ್ಣೆ ಬೆರಸಿ ಬಣ್ಣ ತಯಾರಿಸಬಹುದು.

೮. ಬರಗರನಸೊಪ್ಪಿನರಸ, ಹಚ್ಚೆಸೊಪ್ಪಿನರಸ ಅಥವ ಹೊನಗನೆಸೊಪ್ಪಿನರಸವನ್ನು ಮಡಕೆಯಲ್ಲಿ ಬೆರಸಿ ಮೊಲೆಹಾಲನ್ನು ಸೇರಿಸಿ ಬಣ್ಣ ತಯಾರಿಸಬಹುದು.

ಹೀಗೆ ಅನೇಕರೀತಿಯಲ್ಲಿ ತಯಾರಿಸಿದ ಬಣ್ಣವನ್ನು ಮಣ್ಣಿನ ಕುಡಿಕೆಯಲ್ಲಿ ಹಾಕಿಕೊಂಡು ಬರುವ ಕಲಾವಿದೆಯರಲ್ಲಿ ಮೊದಲೇ ಚಿತ್ರಗಳನ್ನು ಬಿಡಿಸಿಟ್ಟುಕೊಂಡ ನಮೂನೆಯ ಪುಸ್ತಕವಿರುತ್ತದೆ. ಹಾಕಿಸಿಕೊಳ್ಳುವವರು ಬಯಸಿದ ಚಿತ್ತಾರಗಳನ್ನು ಮೊದಲು ಕಡ್ಡಿಯಿಂದ ಚರ್ಮದ ಮೇಲೆ ಬರೆಯುತ್ತಾರೆ. ನಂತರ ಚಕ್ರದಿಂದ ಚುಚ್ಚುತ್ತಾ ಹೋಗುತ್ತಾರೆ. ಚುಚ್ಚುವಾಗ ಚರ್ಮದ ಮೇಲೆ ರಕ್ತ ಸಣ್ಣಗೆ ಜಿನುಗುವುದನ್ನು ಕಂಡರೂ ಹಾಕಿಸಿಕೊಳ್ಳುವವರು ಆ ಕಡೆ ಗಮನ ಹರಿಸದೆ ಹಚ್ಚೆಹಾಕುವವಳ ಸುಶ್ರಾವ್ಯಕಂಠ, ಹಾಡಿನ ಅರ್ಥಗಳಲ್ಲಿ ತಲ್ಲೀನರಾಗಿರುತ್ತಾರೆ. ಹಾಕಿಸಿಕೊಳ್ಳುವವರು ಸಣ್ಣಮಕ್ಕಳಾದರೆ ಅವರ ವಯಸ್ಸಿಗನುಗುಣವಾಗಿ ನಗುವಹಾಡನ್ನು ಹಾಡುತ್ತಾರೆ. ರಕ್ತ ಜಿನುಗಿದ ಚರ್ಮವನ್ನು ತಣ್ಣೀರಿನಿಂದ ತೊಳೆದು ಅದರ ಮೇಲೆ ಕುಡಿಕೆಯಲ್ಲಿರುವ ಮಸಿಯನ್ನು ಸವರುತ್ತಾರೆ. ಸೂಜಿ ನೆಟ್ಟ ಚರ್ಮದ ತೂತುಗಳ ಆಳಕ್ಕೆ ಮಸಿ ಇಳಿಯುತ್ತದೆ. ನಂತರ ಅದರ ಮೇಲೆ ಕೊಬ್ಬರಿಯೆಣ್ಣೆಯನ್ನು ನೋವಿನ ಉಪಶಮನಕ್ಕಾಗಿ ಸವರುತ್ತಾರೆ. ಕೆಲವರು ಅರಿಷಿಣದ ಕೊಂಬನ್ನು ತೇಯ್ದು ಅದರ ರಸವನ್ನು ಗಾಯದ ಮೇಲೆ ಸವರುತ್ತಾರೆ. ಇದರಿಂದ ಹಚ್ಚೆಯ ಬಣ್ಣ ಅರಿಷಿಣಮಿಶ್ರಿತ ಹಸಿರಾಗುವುದೆಂದು ನಂಬುತ್ತಾರೆ. ಜೊತೆಗೆ ಅರಿಷಿಣ ಹಚ್ಚಿದರೆ ಗಾಯಕ್ಕೆ ನಂಜೇರುವುದಿಲ್ಲವೆಂಬ ನಂಬಿಕೆಯೂ ಇದೆ. ಹಚ್ಚೆ ಹಾಕಿಸಿಕೊಂಡ ಒಂದು ವಾರದ ವರೆಗೆ ಅದರ ನೋವಿರುತ್ತದೆ. ಪ್ರತಿದಿನ ಅದಕ್ಕೆ ಕೊಬ್ಬರಿಯೆಣ್ಣೆ ಹಚ್ಚುತ್ತಾರೆ. ಹಕ್ಕಳಗಟ್ಟಿದ ಚರ್ಮ ೭, ೮ ಬಾರಿ ಸುಲಿಯುತ್ತದೆ. ಈ ರೀತಿಯ ಚರ್ಮದ ಪೊರೆಸುಲಿಯುವ ಸಮಯದಲ್ಲಿ ನಂಜೇರುತ್ತದೆಯೆಂದು ಅಡಿಗೆಗೆ ಇಂಗನ್ನು ಉಪಯೋಗಿಸುವುದಿಲ್ಲ. ಜೊತೆಗೆ ಹಚ್ಚೆ ಹಾಕಿಸಿಕೊಂಡ ಸಮಯದಲ್ಲಿ ಕೈ, ಕಾಲಿನ ನರಹಿಡಿಯಬಾರದೆಂಬ ದೃಷ್ಟಿಯಿಂದ ಬೀಸುವುದು, ಕುಟ್ಟುವುದು ಮುಂತಾದ ಕೆಲಸಗಳನ್ನು ಮಾಡುತ್ತಿರುತ್ತಾರೆ. ಹಚ್ಚೆಹಾಕುವ ಹೆಂಗಸರು ಹಚ್ಚೆ ಹಾಕಿದ ನಂತರ ಮುಂದೆ ಕೆಲವುದಿನ ಅನುಸರಿಸಬೇಕಾದ ನಿಯಮ, ಪಥ್ಯಗಳನ್ನು ಮರೆಯದೆ ತಿಳಿಸುತ್ತಾರೆ.

ಹೀಗೆ ಪ್ರಪಂಚದಾದ್ಯಂತ ಅನೇಕ ನಂಬಿಗೆಗಳ ಅಡಿಯಲ್ಲಿ ಬೆಳೆದುಬಂದ ಈ ಕಲೆ ಈಗ ಮಾಯವಾಗುತ್ತಿದೆ. ಇದನ್ನು ಉಪಕಸಬಾಗಿ ಬೆಳಸಿಕೊಂಡುಬಂದ ಕಲಾವಿದೆಯರೂ

ಮಾಯವಾಗುತ್ತಿದ್ದಾರೆ. ಜಪಾನ್ ಮತ್ತು ನ್ಯೂಝಿಲ್ಯಾಂಡ್ ದೇಶಗಳಲ್ಲಿ ಅತ್ಯಂತ ಕಲಾತ್ಮಕ ಬೆಳವಣಿಗೆಯನ್ನು ಪಡೆದ ಈ ಕಲೆ ಅಲ್ಲೀ ನಾಶವಾಗುತ್ತಿದೆ. ಒಂದು ಕಾಲದಲ್ಲಿ ಕೇವಲ ಹಸಿರುಬಣ್ಣದ ಹಚ್ಚೆಯಲ್ಲದೆ ವಿವಿಧ ಬಣ್ಣಗಳ ಹಚ್ಚೆಗಳೂ ಅಲ್ಲಿ ಬಳಕೆಗೆ ಬಂದಿದ್ದವು. ನಾಗರಿಕತೆಯ ಬಿರುಗಾಳಿಯಲ್ಲಿ ಕೊಚ್ಚಿಹೋಗುತ್ತಿರುವ ಅನೇಕ ಜಾನಪದ ಪ್ರಕಾರಗಳಲ್ಲಿ ಇದೂ ಒಂದಾಗಿದೆ. ಶ್ರೇಷ್ಠ ಇತಿಹಾಸತಜ್ಞ ಅರ್ನಾಲ್ಡ್ ಟಾಯ್ನಬಿ ಹೇಳುವಂತೆ ".. When a new level of culture is achieved by a people, it does not abolish the preceeding substratum. It superposes on it, and the older stratum remains in existence, overlaid but not obliterated". ಈ ಕಲೆ ಹೇಗಾದರೂ ಯಾವ ರೂಪದಲ್ಲಾದರೂ ಉಳಿದು ಬಂದರೆ ಅದೊಂದು ದೊಡ್ಡ ಸಾಹಸವೇ ಆದೀತು !

■ ■

# ಪವಾಡಗಳು

ಕೆ. ಜಿ. ಗುರುಮೂರ್ತಿ

ಪವಾಡಗಳನ್ನು ಮಾಡಲು ಮತ್ತು ಪವಾಡಪುರುಷರಾಗಲು ಸಾಧ್ಯವೆಂದು ಆಸ್ತಿಕರಲ್ಲಿ ಅನೇಕರು ನಂಬುತ್ತಾರೆ. ಮಾನವ ದೇವಮಾನವನಾಗುವುದು ಸಾಧ್ಯವಿದೆ, ಇದಕ್ಕೆ ಅವನು ಸಾಧನೆ ಮಾಡಬೇಕು, ಈ ಸಾಧನೆಗೆ ಮೂಲ ಧರ್ಮ ಮತ್ತು ಯೋಗ. ಯೋಗಸಾಧನೆಯಿಂದ ಮೊದಲು ದೇಹ, ನಂತರ ಮನಸ್ಸಿನ ನಿಯಂತ್ರಣ. ಇದರ ಮುಂದಿನ ಮತ್ತು ಕೊನೆಯ ಭಾಗವೇ ಸತ್ಯದ ದರ್ಶನ. ಆದರೆ ಕೆಲವರು ಯೋಗ ಮಟ್ಟವನ್ನು ತಲುಪಿದ ಕೂಡಲೇ ತಮಗೆ ಲಭ್ಯವಾದ ಅಲೌಕಿಕ ಶಕ್ತಿಯಿಂದ ಅನೇಕ ಅತಿಮಾನುಷವಾದ, ಮಾನವನನ್ನು ಚಕಿತಗೊಳಿಸುವ ಅಸಾಮಾನ್ಯ ಘಟನೆ ಅಥವಾ ಕಾರ್ಯಗಳನ್ನು ಮಾಡಲು ತೊಡಗುತ್ತಾರೆ. ಇವೇ ಪವಾಡಗಳಾಗಿ ಪರಿಣಮಿಸಿವೆ. ಈ ಕೆಲಸ ಮಾಡಲು ಶಕ್ತಿಯನ್ನು ಇವರಿಗೆ ದೇವರು ನೀಡಿದನಾದ್ದರಿಂದ ಇದೂ ದೇವರ ಕೆಲಸವೆಂದೇ ಇವರ ವಾದ ಆದ್ದರಿಂದ ಇವರು ದೇವಮಾನವರಾಗಬಯಸುತ್ತಾರೆ. ಆದರೆ ಆಸ್ತಿಕರಲ್ಲೂ ಕೆಲವರು ಇದು ಸಾಧ್ಯವಿಲ್ಲವೆಂದು ವಾದಮಾಡುತ್ತಾರೆ. ಏಕೆಂದರೆ ಸತ್ಯವೇ ಸತ್ಯ, ಸತ್ಯಕ್ಕೆ ಹತ್ತಿರವಾದದ್ದು, ಸತ್ಯದಂತಿರುವುದು, ಸತ್ಯವಾಗಲಾರದು. ಸತ್ಯವಲ್ಲದ್ದನ್ನು ಸತ್ಯವೆಂದರೆ ಸತ್ಯಕ್ಕೆ ಅಪಚಾರವಾಗುತ್ತದೆ. ಈ ಕಾರಣಗಳಿಂದ ಇವರು ದೇವರಿದ್ದಾನೆ ಮತ್ತು ಅವನು ಮಾತ್ರ ಅತಿಮಾನುಷ ಕಾರ್ಯಗಳನ್ನು ಮಾಡಲು ಸಾಧ್ಯವೆಂದು ಒಪ್ಪಿದರೂ, ಮನುಷ್ಯರು ದೇವಮಾನವರಾಗಿ, ಪವಾಡ ಮಾಡಲು ಅಸಾಧ್ಯವೆಂದು ವಾದಮಾಡಿ, ಇದು ಸಲ್ಲದೆಂದು ಖಂಡಿಸಿದ್ದಾರೆ. ಆದರೆ ಇಂದಿಗೂ ಪವಾಡಗಳು ನಡೆಯುತ್ತಿವೆ, ಪವಾಡಪುರುಷರು ದೇವಮಾನವರಾಗಿ ಮೆರೆಯುತ್ತಿದ್ದಾರೆ, ಮತ್ತು ಪವಾಡದ ಹೆಸರಿನಲ್ಲಿ ಸಮಾಜದಲ್ಲಿ ಮೋಸ ನಡೆಯುತ್ತಿದೆ. ಇಂದಿನ ದಿನಗಳಲ್ಲಿ ಸಮಾಜದಲ್ಲಿನ ಬುದ್ಧಿಜೀವಿಗಳು ಈ ದೇವಮಾನವರ ಬಗೆಗೆ ದೊಡ್ಡ

ಆಂದೋಳನವನ್ನೇ ನಡೆಸಿದ್ದಾರೆಯಾದ್ದರಿಂದ ಈ ಬುದ್ಧಿಜೀವಿಗಳಿಗೆ ಮತ್ತು ಪವಾಡ ಪುರುಷರ ಬೆನ್ನಹತ್ತಿದವರಿಗೆ ದೊಡ್ಡ ಜಗಳವೇ ನಡೆದಿದೆ. ಆದ್ದರಿಂದ ಪವಾಡಗಳು, ಪವಾಡಪುರುಷರು ಮತ್ತು ಇವುಗಳ ಸತ್ಯ-ಅಸತ್ಯದ ಬಗೆಗೆ ತಿಳಿದುಕೊಳ್ಳುವುದು ಸೂಕ್ತ ವಾಗಿದೆ. ಪವಾಡ ಎಂದರೇನು? ಅವುಗಳ ಮೂಲವೇನು? ಇವುಗಳನ್ನು ಮಾಡಲು ಸಾಧ್ಯವೆ? ಇವು ಸಮಾಜಕ್ಕೆ ಮಾಡಿದ ಒಳಿತು-ಕೆಡಕುಗಳೇನು? ಮುಂತಾದವೇ ಈ ಲೇಖನದ ಮುಖ್ಯ ವಿಷಯಗಳು.

'ಪ್ರವಾದ' ಎಂಬ ಮೂಲ ಸಂಸ್ಕೃತ ಶಬ್ದದಿಂದ 'ಪವಾಡ' ಶಬ್ದ ಬಂದಿದೆ ಎಂದು ತಜ್ಞರ ಅಭಿಪ್ರಾಯ. ಯೋಗಶಾಸ್ತ್ರದ ವಿವರಣೆಯಂತೆ ಒಬ್ಬ ಸಾಧಕನು ಸತ್ಯಾನ್ವೇಷಣೆ ಯಲ್ಲಿ ತೊಡಗಿದಾಗ, ಅವನಲ್ಲಿ ಕೆಲವೊಂದು ಅಲೌಕಿಕ ಶಕ್ತಿಗಳು ಸಹಜವಾಗಿ ಮೈ ದೋರುತ್ತವೆ. ಈ ಅಲೌಕಿಕ ಶಕ್ತಿಗಳಿಗೆ ಸಿದ್ಧಿ (Psychic powers) ಗಳೆಂದು ಯೋಗಶಾಸ್ತ್ರಪರಿಭಾಷೆಯಲ್ಲಿ ಕರೆಯಲಾಗಿದೆ. ಆತ್ಮಸಾಕ್ಷಾತ್ಕಾರಕ್ಕಾಗಿ ಯೋಗಮಾರ್ಗ ವನ್ನು ಕ್ರಮಿಸುವಾಗ ಹುಟ್ಟಿಕೊಂಡ ಉಪನಿಷ್ಪತ್ತಿಗಳೇ (by-products) ಈ ಸಿದ್ಧಿ ಗಳು. ಈ ಸಿದ್ಧಿಗಳ ಪ್ರದರ್ಶನವನ್ನೇ 'ಪವಾಡ'ಗಳು ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಎಲ್ಲ ಮಹಾತ್ಮರ, ಸಂತಶ್ರೇಷ್ಠರ ಜೀವನದಲ್ಲಿ ಪವಾಡಗಳನ್ನು ಕಾಣುತ್ತೇವೆ. ಅವು ಅಧ್ಯಾತ್ಮಜೀವನದ ಅಂಗವಲ್ಲದಿದ್ದರೂ, ಶ್ರೀ ಕೋಳಿಯವರು (೧೯೭೭ : ೨೪) ಹೇಳುವಂತೆ, ಹೇಗೋ ಅಧ್ಯಾತ್ಮಜೀವಿಗಳ ಜೀವನದಲ್ಲಿ ನುಸುಳಿ ಕೊಂಡು ಬಂದುಬಿಟ್ಟಿವೆ. ಆದರೆ ಸಾಮಾನ್ಯವಾಗಿ ಮಹಾತ್ಮರ ಜೀವನದಲ್ಲಿ ಪವಾಡಗಳ ಉಲ್ಲೇಖವಿದ್ದುದನ್ನು ನೋಡುತ್ತೇವೆ. ರಾಮತೀರ್ಥ, ರಾಮಕೃಷ್ಣ ಪರಮಹಂಸ, ಬಸವಣ್ಣ, ಯೇಸುಕ್ರಿಸ್ತ ಮತ್ತು ಬುದ್ಧ ಮುಂತಾದ ಮಹಾತ್ಮರ ಜೀವನದಲ್ಲಿಯ ಘಟನೆಗಳನ್ನು ತೆಗೆದುಕೊಳ್ಳಬಹುದು. ಈ ಮಹಾತ್ಮರನ್ನು ಪವಾಡಪುರುಷರೆಂದು ಕರೆದರೆ ಅವರಿಗೇ ಅಪಚಾರವಾದಂತೆ ಏಕೆಂದರೆ, ಈ ಎಲ್ಲ ಮಹಾಪುರುಷರೂ ಪವಾಡಗಳನ್ನು ಪಳಿವಿದ್ದಾರಲ್ಲದೆ: ಪವಾಡಗಳನ್ನು ಮಾಡುವವರಿಗೆ ಛೀಮಾರಿ ಹಾಕಿ, ಅವುಗಳನ್ನು ಮಾಡತಕ್ಕದ್ದಲ್ಲ ಎಂದೂ ಕಟ್ಟಪ್ಪಣೆಯನ್ನು ವಿಧಿಸಿದ್ದಾರೆ.

**ಪವಾಡದ ಬಗೆಗಳು :** ಪವಾಡಗಳನ್ನು ಪ್ರಕೃತಿ ರೀತಿಯವು (Natural) ಮತ್ತು ಪ್ರಕೃತಿಗೂ ಮೀರಿದವು (super natural) ಎಂದು ಎರಡು ಭಾಗ ಮಾಡಬಹುದು (ಮಾಸ್‌ಕಾಲ್, ೧೯೫೦ : ೩೪೨-೪೬). ಮೊದಲನೆಯವು ಪ್ರಕೃತಿಯ ನಿಯಮಕ್ಕೆ ಒಳಗಾದವು. ಅಂದರೆ, ಯಾರಾದರೂ ರೋಗದಿಂದ ನರಳುತ್ತಿದ್ದರೆ, ಅಂಗವಿಕಲರಿದ್ದರೆ ಇವನ್ನು ಪವಾಡ ಶಕ್ತಿಯಿಂದ ವಾಸಿಮಾಡುವುದು ಪ್ರಕೃತಿ ನಿಯಮದಂತಿರುತ್ತದೆ. ಆದರೆ ಪ್ರಕೃತಿಗೂ ಮೀರಿದ, ಅಂದರೆ ಸತ್ತ ಪ್ರಾಣಿಯಲ್ಲಿ ಮತ್ತೆ ಜೀವ ತುಂಬುವಂತಹ, ಪವಾಡಗಳು ಸಾಧ್ಯವಿಲ್ಲ. ಪ್ರಕೃತಿಯಲ್ಲಿ ಕೂಡ ಜೀವವು ಹೊಸದಾಗೇ ಹುಟ್ಟಿಬರ

ಬೇಕಾಗುತ್ತದೆಯಾದ್ದರಿಂದ ಇದನ್ನು ಪ್ರಕೃತಿ ಕೂಡ ಮಾಡಲಾರದು. ಆದರೆ ಹಿಂದಿದ್ದ ದೇವಮಾನವರು ಇಂತಹ ಪವಾಡಗಳನ್ನು ಮಾಡಿದ್ದಾರೆಂದು ನಮ್ಮ ಪುರಾಣ-ಪುಣ್ಯ ಕಥೆಗಳು ಸಾರುತ್ತವೆ.

**ಪವಾಡಗಳ ಹುಟ್ಟು :** ಜನಸಾಮಾನ್ಯರ ವಿವರಣೆಯಂತೆ, ಸಮಾಜದಲ್ಲಿ ಧರ್ಮದಲ್ಲಿ ನಂಬಿಕೆ ಕಡಿಮೆಯಾದಾಗ ಜನರು ಬೇರೆ ಧರ್ಮದ ಕಡೆ ನೋಡುತ್ತಾರೆ. ಇದನ್ನು ತಡೆಯಲು ಮತ್ತು ಜನರಲ್ಲಿ ಧರ್ಮದ ಬಗೆಗೆ ಒಲವು, ಭಯ ಮೂಡುವಂತೆ ಮಾಡಲು ಕೆಲವೊಂದು ಕಾರ್ಯಗಳನ್ನು ಮಾಡಬೇಕಾಗುತ್ತದೆ. ಆಗ ಪವಾಡದಂತಹ ಕೆಲವು ಚಟುವಟಿಕೆಗಳು ಬೇಕಾಗುತ್ತವೆ. ಇದೇ ರೀತಿ ಭೂಮಿಯ ಮೇಲೆ ಅಧರ್ಮ ಹೆಚ್ಚಿ ಜನರಲ್ಲಿ ಧರ್ಮದ ಬಗೆಗೆ ನಂಬಿಕೆ ಕಳೆದಾಗ, ಭೂಮಿಯ ಮೇಲೆ ಅನಾಚಾರ ತುಂಬಿದಾಗ, ಧರ್ಮಿಗಳನ್ನು ಅಧರ್ಮಿಗಳು ಪೀಡಿಸತೊಡಗಿದಾಗ, ಜಗತ್ತಿನಲ್ಲಿಯ ಧರ್ಮಿಗಳು ದೇವರಲ್ಲಿ ಮೊರೆಹೊಕ್ಕು, ಭೂಮಿಗೆ ಬಂದು ತಮ್ಮ ಕಷ್ಟಗಳನ್ನು ಪರಿಹರಿಸುವಂತೆ ಕೇಳಿಕೊಳ್ಳುತ್ತಾರೆ. ಆಗ ದೇವರು ತನ್ನ ದೂತರಲ್ಲೊಬ್ಬನನ್ನು ಭೂಮಿಯ ಮೇಲೆ ಅವತರಿಸುವಂತೆ ಮಾಡಿ ಅಥವಾ ತಾನೇ ಬಂದು, ಧರ್ಮವನ್ನು ಪುನಃ ಪ್ರತಿಷ್ಠಾಪನೆ ಮಾಡುತ್ತಾನೆ. ಹೀಗೆ ಭೂಮಿಯ ಮೇಲೆ ಅವತರಿಸಿದ ದೇವಮಾನವನಲ್ಲಿ ದೇವರ ಅಂಶವಿರುವುದರಿಂದ ಅವನು ಮಾನವರು ಮಾಡಲಾರದಂತಹ ಅತಿಮಾನವ ಕ್ರಿಯೆಗಳನ್ನು ಮಾಡಿ ಜನರಲ್ಲಿ ತನ್ನ ಬಗೆಗೆ ಭಕ್ತಿ ಭಾವನೆಗಳು ಮೂಡುವಂತೆ ಮಾಡುತ್ತಾನೆ. ಇವು ತದನಂತರ ಅವನು ಮಾಡಿದ ಪವಾಡಗಳಾಗುತ್ತವೆ.

ಇಂದು ಪವಾಡಪುರುಷರೆನಿಸಿಕೊಂಡವರು ಸಾಮಾನ್ಯವಾಗಿ ಯಾವುದಾದರೊಂದು ಧರ್ಮಕ್ಕೆ ಸೇರಿದ ಗುರುಗಳು ಅಥವಾ ಸಾಧಕರಿರುತ್ತಾರೆ. ಇವರು ಯಾವುದಾದರೊಂದು ಗುಡಿ, ಮಠ ಅಥವಾ ಗುರುಮನೆಯ ಉತ್ತರಾಧಿಕಾರಿಗಳೂ ಇಲ್ಲವೇ ಪಾಲಕರೂ ಇರುತ್ತಾರೆ. ಪವಾಡಕಾರರು ತಮ್ಮ ಶಕ್ತಿಯನ್ನು ಹಿಂದೆ ಆಳಿದ ಸಂತರ ಸಮಾಧಿ, ಅಸ್ಥಿ ಬೂದಿ, ಕೂದಲು ಮುಂತಾದ ಅವಶೇಷಗಳಿಂದ, ಅಥವಾ ಧೂಳು, ಲಿಂಗ, ಹೂ-ಪತ್ರೆ, ಮುಂತಾದವನ್ನು ನೀಡುವುದರಿಂದಲೂ, ಸ್ಥಳದ ಮಹಾತ್ಮೆಯಿಂದಲೂ ಪಡೆಯುತ್ತಾರೆ. ಹೀಗೆ ಧರ್ಮಕ್ಕೂ ಪವಾಡಪುರುಷರಿಗೂ ಒಂದು ನಂಟಿರುತ್ತದೆ. ಆದ್ದರಿಂದ ಯಾರಾದರೂ ಸಂತರು, ಮಹಾತ್ಮರು ಆಗಬೇಕೆಂದಿದ್ದರೆ ಇಂದಿಗೂ ಅವರು ಪವಾಡಪುರುಷರಾಗಿರಬೇಕಾಗುತ್ತದೆ. ಆದ್ದರಿಂದ ಈ ಸ್ಥಾನವನ್ನು ಹೊಂದಬಯಸುವವರು ಪವಾಡಗಳ ಮೊರೆಹೋಗ ಬೇಕಾಗುತ್ತದೆ. ಅನೇಕ ವೇಳೆ ಜನರಲ್ಲಿ ತಮ್ಮ ಧರ್ಮ ಅಥವಾ ಸಂಸ್ಥೆಯ ಬಗೆಗೆ ಭಯ ಭಕ್ತಿ ಕಡಿಮೆಯಾದಾಗ ಹಿಂದೆ ಇವರ ಗುರುಗಳು ಮಾಡಿದರೆನ್ನುವ ಪವಾಡಗಳನ್ನು ಪ್ರಚಾರ ಮಾಡಿ ಜನರಲ್ಲಿ ಮತ್ತೆ ಭಯ-ಭಕ್ತಿ ಮೂಡುವಂತೆ ಮಾಡುವಾಗಲೂ ಪವಾಡಗಳನ್ನೇ ಬಳಸುವರು.

ಈ ವಿಷಯಗಳೂ ಪುರಾಣಗಳಲ್ಲಿ, ಪ್ರವಚನಗಳಲ್ಲಿ ಪ್ರಚಾರಕ್ಕೆ ಬರುತ್ತವೆ. ಹೀಗೆ
ಧರ್ಮಕ್ಕೆ, ಪುರಾಣ-ಕತೆಗಳಿಗೆ, ಪವಾಡಕ್ಕೆ ನಿಕಟ ಸಂಬಂಧವಿದೆ ಮತ್ತು ಒಂದನ್ನೊಂದು
ಬೆಂಬಲಿಸುತ್ತವೆ.

ತಮ್ಮ ಆರಾಧಕ ವ್ಯಕ್ತಿಯೂ ಕೂಡ ಅತಿಮಾನವ ಶಕ್ತಿಯನ್ನು ಹೊಂದಿರುವನೆಂದು
ತೋರಿಸಲು ಭಕ್ತರು ಅವನು ಪವಾಡ ಮಾಡಿದನೆಂದು ಅನೇಕ ಕತೆಗಳನ್ನು ಪ್ರಚಾರಕ್ಕೆ
ತರುತ್ತಾರೆ. ಹೀಗೆ ಮಾಡುವುದರ ಮುಖ್ಯ ಉದ್ದೇಶವೆಂದರೆ ತಮ್ಮ ಆರಾಧಕ ವ್ಯಕ್ತಿ
ಯಲ್ಲಿ ದೇವಾಂಶವಿದೆ ಎಂದು ತೋರಿಸುವುದು. ಇದರಿಂದ ಭಯಗ್ರಸ್ಥರಾದ ಜನರಲ್ಲಿ
ಮತ್ತೆ ಭಯ-ಭಕ್ತಿ, ಜೀವನದಲ್ಲಿ ಸ್ಥೈರ್ಯ ಮೂಡುತ್ತವೆ. ಇನ್ನೂ ಅನೇಕ
ವೇಳೆ ಆಧ್ಯಾತ್ಮಿಕ ವಿಷಯಗಳನ್ನು ತಿಳಿಯಲು ಹೆಚ್ಚಿನ ಜ್ಞಾನವಿಲ್ಲದವರಿಗೆ ಅವನ್ನು
ಲೌಕಿಕ ರೀತಿಯಲ್ಲಿ ಹೇಳಲಾಯಿತು. ಅಥವಾ ಜನಸಾಮಾನ್ಯರು ತಮಗೆ ಬೇಕಾದ
ರೀತಿಯಲ್ಲಿ, ತಮ್ಮ ಮಟ್ಟದಲ್ಲೇ ಈ ದೇವಮಾನವರು ಮಾಡಿರುವ ಕೆಲವೊಂದು
ಘಟನೆಗಳನ್ನು ಪ್ರಚಾರಕ್ಕೆ ತಂದರು. ಉದಾಹರಣೆಗೆ ಬಸವಣ್ಣನವರ ಬಗೆಗೆ ಹೇಳುವ
ಅನೇಕ ಪವಾಡಗಳಲ್ಲಿ ಇವರು ಜೋಳದ ರಾಶಿಯನ್ನು ಮುತ್ತಿನ ರಾಶಿಮಾಡಿದ್ದು
ಮತ್ತು ಒಬ್ಬ ಭಕ್ತನು ಕಳೆದುಕೊಂಡ ಶಿವಲಿಂಗವನ್ನು ತುಂಬಿ ಹರಿಯುತ್ತಿದ್ದ ನದಿಯಿಂದ
ಹುಡುಕಿಕೊಟ್ಟದ್ದು, ಇವನ್ನು ತೆಗೆದುಕೊಳ್ಳಬಹುದು. ಮೊದಲನೆಯದಾಗಿ ಜೋಳದ
ಪವಾಡ ತೆಗೆದುಕೊಳ್ಳೋಣ. ಶಿವಮತ ಪ್ರಚಾರಕ್ಕೆ ತಮಗೆ ಸಾಧ್ಯವಾದ ಎಲ್ಲಾ
ನೆರವನ್ನೂ ಭಕ್ತರು ನೀಡಬೇಕೆಂದು ಬಸವಣ್ಣನವರು ಜನತೆಯನ್ನು ಕೇಳಿದಾಗ ಭಕ್ತರು
ತಮ್ಮ ವೃತ್ತಿ, ಯೋಗ್ಯತೆಗಳಿಗೆ ಅನುಗುಣವಾಗಿ ತಮ್ಮಲ್ಲಿದ್ದುದನ್ನು ನೀಡಿದರು.
ರಾಜ-ಮಹಾರಾಜರುಗಳು, ಶ್ರೀಮಂತರು, ವ್ಯಾಪಾರಿಗಳು ನಗನಾಣ್ಯಗಳನ್ನು ನೀಡಿದರೆ
ನೆಲ ಉಳುವ ರೈತರು ತಮ್ಮಲ್ಲಿದ್ದ ಜೋಳವನ್ನೇ ನೀಡಿದರು. ರೈತರಿಗೆ ಶುಭ್ರ ಬಿಳಿಯ
ಜೋಳದ ರಾಶಿ ಮುತ್ತಿನ ರಾಶಿಯಂತೆ. ಕಣಸುಗ್ಗಿಯಲ್ಲಿ ಜೋಳದ ರಾಶಿ ಮಾಡಿದಾಗ,
ಅವರಿಗೆ ಹಬ್ಬದ ಸಡಗರ. ಅಂದು ಈ ಹೊಸ ಜೋಳದ್ದೇ ಹುಗ್ಗಿಯ ಊಟ.
ಆದರೆ ಅದನ್ನು 'ಜೋಳದ ಹುಗ್ಗಿ' ಎನ್ನದೆ 'ಹೊನ್ನುಗ್ಗಿ' ಎಂದು ಕರೆಯುತ್ತಾರೆ.
ಈ ಭಕ್ತಿ-ಭಾವನೆಯಿಂದ ರೈತರು ಜೋಳವನ್ನು ನೀಡಿದಾಗ ಬಸವಣ್ಣನವರೂ
ಅವನ್ನು ಹೊನ್ನೆಂದು ಸ್ವೀಕರಿಸಿದರು. ರೈತರು ಹೊನ್ನು ಕೊಡಲು ಸಾಧ್ಯವಿಲ್ಲ.
ಅವರೂ ನೀಡಿದರೆಂದರೆ ಇದು ರೈತರ ಗೌರವ ಉಳಿಸಲು ಬಸವಣ್ಣನವರು ಮಾಡಿದ
ಪವಾಡವೆಂದು ಮುಂದೆ ಪ್ರಚಾರವಾಗಿರಬಹುದು.

ಇದೇ ರೀತಿ ಬಸವಣ್ಣನವರು ಕೂಡಲಸಂಗಮದಲ್ಲಿದ್ದಾಗ ನಡೆದ ಒಂದು ಪವಾಡದ
ಉಲ್ಲೇಖವಿದೆ. ತುಂಬಿದ ನದಿಯನ್ನು ದಾಟುವಾಗ ಶಿವಭಕ್ತನೊಬ್ಬನ ಶಿವಲಿಂಗ
ನದಿಯಲ್ಲಿ ಕಳೆದುಹೋಗುತ್ತದೆ ಈ ನದಿಯಿಂದ ಬಸವಣ್ಣನವರು ಭಕ್ತನ ಶಿವಲಿಂಗವನ್ನು
ಎತ್ತಿಕೊಟ್ಟು ಅವನನ್ನು ಉದ್ಧಾರ ಮಾಡುತ್ತಾರೆ. ಇಲ್ಲಿ ಅನೇಕ ಪ್ರಶ್ನೆಗಳು ಬರುತ್ತವೆ.
ತುಂಬಿದ ನದಿಯನ್ನು ಈ ಭಕ್ತನೇಕೆ ದಾಟಹೊರಟ? ಕಳೆದುದನ್ನು ಪ್ರಾಣಾಪಾಯ

ಒಡ್ಡಿ ಹುಡುಕುವ ಪ್ರಮೇಯವೇನಿತ್ತು? ಈ ಶಿವಲಿಂಗವನ್ನು ಬಸವಣ್ಣನವರೇ ಹುಡುಕಿ ಕೊಟ್ಟದ್ದೇಕೆ? ಅಲ್ಲಿ ಅಂಬಿಗರು ಇರಲಿಲ್ಲವೆ? ಆದರೆ ಜನಸಾಮಾನ್ಯರು ತಿಳಿಯುವಷ್ಟು ಲೌಕಿಕವಾಗಿರಲಿಲ್ಲ ಈ ಘಟನೆಗಳು. ಅಂದಿನ ಕಾಲದಲ್ಲಿ ಕೂಡಲ ಸಂಗಮ ಮತ್ತು ಶ್ರೀಶೈಲಗಳು ಶಿವಭಕ್ತರ ತೀರ್ಥಯಾತ್ರೆಯ ಗುರಿಗಳಾಗಿದ್ದವು. ಈ ದೆಸೆ–ದಿಕ್ಕಿನಲ್ಲಿ ಹೊರಡುವ ಮೊದಲು ಶಿವಭಕ್ತ ತನ್ನಲ್ಲಿ ಇಷ್ಟಲಿಂಗವನ್ನು ಪ್ರತಿಷ್ಠಾಪನೆ ಮಾಡಿಕೊಳ್ಳಬೇಕು. ಲಿಂಗಧಾರಿಯಾಗಿ ಹೊರಟವರ ಕೊನೆಯ ಘಟ್ಟ ಮೋಕ್ಷ. ಆದರೆ ಆಸೆ ಆಕಾಂಕ್ಷೆಗಳಿಂದ ತುಂಬಿದ ಜಗತ್ತು ತುಂಬಿದ ನದಿಯಂತೆ ಅಪಾಯಕಾರಿ ಮತ್ತು ಸೆಳೆತ ಪೂರ್ಣ. ಈ ಸಂಸಾರ ಜಂಜಾಟದ ನದಿಯನ್ನು ದಾಟಹೊರಟ ಭಕ್ತ ತನ್ನ ಇಷ್ಟಲಿಂಗವನ್ನು ಕಳೆದುಕೊಂಡು ಮತ್ತೆ ಅಧರ್ಮಿಯಾಗಿರಬಹುದು. ಜೀವನದಲ್ಲಿ ತೊಳಲಾಡುತ್ತಿರುವ ಇಂಥ ಭಕ್ತನನ್ನು ಕಂಡು ಬಸವಣ್ಣನವರು ಅವನಿಗೆ ಶಿವಧರ್ಮವನ್ನು ಉಪದೇಶ ಮಾಡಿ ಅವನನ್ನು ಮತ್ತೆ ಧರ್ಮಿಯನ್ನಾಗಿ ಮಾಡಿರಬಹುದು. ಅಂದರೆ ಅವನು ಕಳೆದುಕೊಂಡ ಶಿವಲಿಂಗವನ್ನು ಮತ್ತೆ ಅವನಿಗೆ ನೀಡಿ ಅವನನ್ನು ಉದ್ಧಾರ ಮಾಡಿದರು. ಈ ಸಂದರ್ಭವನ್ನು ಆಲಿಸುವವರ ಜ್ಞಾನ ಮತ್ತು ಸಂಸ್ಕೃತಿಯ ಮಟ್ಟಕ್ಕೆ ಅನುಗುಣವಾಗಿ ಹೇಳಿ ಜನರಲ್ಲಿ ಧರ್ಮಪ್ರತಿಪಾದನೆ ಮಾಡುವುದೇ ಶಿವಶರಣರ ಉದ್ದೇಶವಾಗಿದ್ದಿತು. ಜನಪದ ಸಂಸ್ಕೃತಿಯ ಮಟ್ಟದಲ್ಲಿದ್ದ ಜನರಿಗೆ ಈ ವಿಷಯಕ್ಕೆ ತಿರುವುಕೊಟ್ಟು ಅದನ್ನೇ ಪವಾಡವೆಂದು ಮಾಡಿದರು. ಏಕೆಂದರೆ ತುಂಬಿ ಹರಿಯುವ ನದಿಯಲ್ಲಿಳಿದು ಶಿವಲಿಂಗವನ್ನು ಎತ್ತಿಕೊಡುವುದೆಂದರೆ ಜನಸಾಮಾನ್ಯರಿಗೆ ದುಸ್ಸಾಹಸದ ಕೆಲಸ. ಇದನ್ನು ಯಾರಾದರೂ ಮಾಡಿದರೆ ಈ ವ್ಯಕ್ತಿಯಲ್ಲಿ ದೈವಾಂಶವಿರಬೇಕು. ಆದ್ದರಿಂದ ಬಸವಣ್ಣನವರು ದೈವಾಂಶ ಉಳ್ಳ ವ್ಯಕ್ತಿ, ಆತ ಹೇಳಿದುದು ದೇವವಾಣಿ–ಎಂಬುದನ್ನು ಜನರಿಗೆ ಹೇಳಿ ತಮ್ಮ ಮತಪ್ರಚಾರವನ್ನು ಸುಲಭ ಮಾಡಿಕೊಂಡುದುದೇ ಪವಾಡವಾಗಿ ಪರಿಣಮಿಸಿತು. ಇಂತಹ ಅನೇಕ ನಿದರ್ಶನಗಳನ್ನು ಎಲ್ಲಾ ಧರ್ಮ ಪ್ರಚಾರಣೆಯಲ್ಲೂ ಕಾಣಬಹುದು.

ಅನೇಕ ವೇಳೆ ಆಕಸ್ಮಿಕವಾಗಿ ಅಥವಾ ಉದ್ದೇಶಪೂರ್ವಕವಾಗಿ ನಡೆಯುವ ಘಟನೆಗಳ ಬಗೆಗೆ ನಿಜವಾದ ವಿವರಣೆ ನೀಡದಿದ್ದರೂ ಮುಗ್ಧ ಜನತೆ ಇದನ್ನು ಪವಾಡವೆಂದು ನಂಬುವುದು ಸಾಧ್ಯವಿದೆ. ಇಂದಿಗೂ ಸಂಭವಿಸುವ ಘಟನೆಗಳ ಉದಾಹರಣಾರ್ಥವಾಗಿ ೧೯೭೦ ರಲ್ಲಿ ನಾವು ಹಳ್ಳಿಯೊಂದರಲ್ಲಿ ಸಂಶೋಧನೆ ಮಾಡುತ್ತಿದ್ದಾಗ ನಡೆದ ಪ್ರಸಂಗ ಒಂದನ್ನು ತೆಗೆದುಕೊಳ್ಳಬಹುದು. ಒಂದು ದಿನ ಬೆಳಗಿನ ಜಾವ ಒಂದು ಕುಟುಂಬದವರು ಜೋಳ ಬೀಸಹೋದಾಗ ಬೀಸುವಕಲ್ಲಿನಿಂದ ಜಲ ಉಕ್ಕಿತೆಂದು ಸುದ್ದಿ ಬಂದಿತು. ಈ 'ಪವಾಡ'ವನ್ನು ನೋಡಲು ನಾವೂ ಅಲ್ಲಿಗೆ ಧಾವಿಸಿದಾಗ ಆ ಮನೆಯಲ್ಲಿ ಅನೇಕ ಜನ ಹಿರಿಯ–ಕಿರಿಯರು ತುಂಬಿದ್ದರು. ಸುಮಾರು ಎರಡು ತಾಸುಗಳ ಕಾಲದಲ್ಲಿ ಇಡೀ ಊರೇ ಬಂದು ಈ 'ಪವಾಡ'ವನ್ನು ನೋಡಿತೆಂದು ಹೇಳಬಹುದು. ನೋಡಿದ ಜನರು

ತವುಗೆ ತೋಚಿದಂತೆ ಮಾತಾಡುತ್ತಿದ್ದುದು ಹೀಗಿದ್ದಿತು—'ಮನೆ ಕಟ್ಟಿದ ನೆಲ ಪುಣ್ಯ ಭೂಮಿ', 'ಮನೆಯ ಯಜಮಾನ ಪುಣ್ಯವಂತ'. 'ಹೊಸ ಸೊಸೆಯಲ್ಲಿ ಏನೋ ದೈವಾಂಶವಿದೆ'—ಮುಂತಾಗಿ. ಇದಾವುದೂ ತನಗೆ ಸಂಬಂಧವಿಲ್ಲವೆನ್ನುವಂತೆ ಒಂದೆಡೆ ಕುಳಿತು ತಂಬಾಕು ತಿನ್ನುತ್ತಿದ್ದ ಮನೆಯ ಯಜಮಾನ ಎಂಟು ಗಂಟೆಯ ಸುಮಾರಿಗೆ ಮನೆಯೊಳಗೆ ಬಂದು ನಿಜ ವಿಷಯ ಹೊರಗೆಡಹಿ ಎಲ್ಲರನ್ನೂ ಹೊರಹೋಗುವಂತೆ ಹೇಳಿದ. ಅದೇನೆಂದರೆ ಆರು ತಿಂಗಳ ಹಿಂದೆ ಯಾವುದೋ ಕೆಟ್ಟ ನಕ್ಷತ್ರದಲ್ಲಿ ತನ್ನ ಹೆಂಡತಿ ಸತ್ತಂದಿನಿಂದ ಊರವರು ಯಾರೂ ಮನೆಯೊಳಗೆ ಬರುತ್ತಿರಲಿಲ್ಲ. ಇದರಿಂದ ಬೇಜಾರಾದ ತಾನು ಜನರನ್ನು ಮನೆಯೊಳಗೆ ಬರುವಂತೆ ಮಾಡಲು ಈ ಉಪಾಯ ಹೂಡಿದುದಾಗಿ ಹೇಳಿದ. ಈ 'ಪವಾಡ'ದ ಬಗೆಗೆ ಏನೇನೋ ಮಾತಾಡಿದ್ದ ಊರ ಗುರು-ಹಿರಿಯರು ತಮ್ಮ ಅಜ್ಞಾನಕ್ಕೆ ನಾಚಿ ಎಲ್ಲರೊಟ್ಟಿಗೆ ತಾವೂ ನಕ್ಕುಬಿಟ್ಟರು. ಕಾಲಕ್ರಮದಲ್ಲಿ ಅದನ್ನು ಊರಜನರೊಟ್ಟಿಗೆ ಮರೆತೂ ಬಿಟ್ಟರು. ಇಲ್ಲಿ ನಾವು ನೆನಪಿಡಬೇಕಾದ ಒಂದು ವಿಷಯವೆಂದರೆ ಮನೆಯ ಯಜಮಾನ ನಿಜಸಂಗತಿಯನ್ನು ಹೊರಗೆಡವುದಕ್ಕೆ ಮೊದಲು ಎಲ್ಲರೂ ಇದನ್ನು 'ಪವಾಡ'ವೆಂದೇ ನಂಬಿದ್ದರು. ಅವನು ನಿಜಸಂಗತಿಯನ್ನು ಹೇಳದಿದ್ದರೆ ಇದು 'ಪವಾಡ'ವೇ ಆಗಿಹೋಗುತ್ತಿತ್ತು ಮತ್ತು ಮನೆಯ ಜನರು 'ಪವಾಡ' ಪುರುಷರಾಗುತ್ತಿದ್ದರು. ಮುಗ್ಧ ಜನ ಇದನ್ನು ನಂಬಿ ಬೀಸುವಕಲ್ಲು ಅಥವಾ ಅದು ಇದ್ದ ಜಾಗವನ್ನು ಪೂಜಿಸಲು ಸಾಲುಗಟ್ಟಿ ನಿಲ್ಲುತ್ತಿದ್ದರು ಮತ್ತು 'ಪವಾಡಪುರುಷ'ರಿಗೆ ಹಣದ ಹೊಳೆಯೇ ಹರಿಯುತ್ತಿತ್ತು.

ಇದೇ ರೀತಿ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳದ ಲಕ್ಷ್ಮೀದೇವರ ಬಾವಿಗೆ ಸಂಬಂಧಿಸಿದ ಕೌತುಕವೊಂದು ವರ್ಷ–ಎರಡು ವರ್ಷಕ್ಕೆ ನಡೆಯುತ್ತದೆ. ಈ ಹೊಕ್ಕು ತುಂಬುವ ಬಾವಿಯಿಂದ ನೀರು ತುಂಬಿದ ತಾಮ್ರದ ಕೊಡ ಮೇಲೇಳುತ್ತದೆ. ಮುಂಜಾನೆ ನೀರು ತರಲು ಬಾವಿಗೆ ಹೋದವರು ಇದನ್ನು ಕಂಡು ಕೂಡಲೇ ಊರ ಹಿರಿಯರಿಗೆ ತಿಳಿಸುತ್ತಾರೆ. ನಂತರ 'ಸೂಕ್ತ' ಈಜುಗಾರರು ಬಾವಿಯಲ್ಲಿಳಿದು ಕೊಡವನ್ನು 'ದಡಕ್ಕೆ ಎಳೆದು' ತರುತ್ತಾರೆ. ನೀರಿನ 'ಅಂಚಿಗೆ' ಈ ಕೊಡವನ್ನಿಟ್ಟು ಇಡೀ ದಿನ ಗ್ರಾಮಸ್ಥರು ಭಕ್ತಿಯಿಂದ ಪೂಜಿಸುತ್ತಾರೆ. ಭಕ್ತರು ಕೊಡದಲ್ಲಿ 'ಹಾಲು-ತುಪ್ಪದ ಜೊತೆಗೆ, ಹಣ, ಬೆಳ್ಳಿ-ಬಂಗಾರವನ್ನು' ಲಕ್ಷ್ಮೀದೇವಿಗೆ ಕಾಣಿಕೆಯಾಗಿ ಹಾಕುತ್ತಾರೆ. ಜನರ ಭಕ್ತಿ ಸಂದಿದ ನಂತರ, ರಾತ್ರಿ, ಕೊಡ "ತನಗೆ ತಾನೇ" ಮತ್ತೆ ನೀರಿನಲ್ಲಿ ಹೋಗಿ ಬಿಡುತ್ತದೆ. ಇದು ಈ ಪವಾಡದ ಬಗೆಗೆ ಜನರು ನೀಡುವ ವಿವರಣೆ. ಇಲ್ಲಿ ನಾವು ಗಮನಿಸಬೇಕಾದ ವಿಷಯಗಳೆಂದರೆ— ಕೊಡ ಮೇಲೇಳುವದನ್ನು "ಯಾರೂ ಕಾಣರು", "ಕೊಡವನ್ನು ನೀರಿಂದ ಮೇಲೆ ಎತ್ತದೆ ಎಳೆದುತರುವರು", 'ಈ ಕೊಡದಲ್ಲಿ ಹಣ ಮುಂತಾದವನ್ನು ಹಾಕುವರು' ಮತ್ತು ಮರುದಿನ ಯಾರಿಗೂ ಕಾಣದಂತೆ ಮತ್ತೆ ಕೊಡ ನೀರೊಳಗೆ ಹೋಗುವುದು". ಭೌತಶಾಸ್ತ್ರದ ವಿವರಣೆಯಂತೆ ಯಾವುದೇ

ವಸ್ತುವನ್ನು ನೀರಿನಲ್ಲಿ ಹಾಕಿದಾಗ ಅದು ಹೊರ ಚೆಲ್ಲುವ ನೀರಿನ ಗಾತ್ರ ಅದರ ಗಾತ್ರಕ್ಕೆ ಸರಿಸಮಾನವಾಗಿದ್ದರೆ ಮಾತ್ರ ಅದು ನೀರಲ್ಲಿ ತೇಲುತ್ತದೆ. ಇದಕ್ಕೆ ವಿರುದ್ಧವಾದದ್ದು, ಅಂದರೆ ತೇಲಬಲ್ಲುವುದು ಕೇವಲ ಎರಡು ರೀತಿಯಲ್ಲಿ ಮಾತ್ರ ಸಾಧ್ಯ : ದೈವ ಅಥವಾ ಪವಾಡಶಕ್ತಿ ಮತ್ತು ಮೋಸ. ಮುಗ್ಧಜನರಲ್ಲಿ ಮೂಢವೈಪರೀತ್ಯ ಇರುವುದರಿಂದ ಯಾರೂ ಇದನ್ನು ವೈಜ್ಞಾನಿಕ ದೃಷ್ಟಿಯಿಂದ ನೋಡಲು ಇಚ್ಚಿಸುವುದಿಲ್ಲ. ಯಾರಾದರೂ ಈ ಬಗೆಗೆ ಸೂಕ್ಷ್ಮವಾಗಿ ವಿಚಾರ ಮಾಡಿದರೆ ಈ ಕೆಳಕಂಡ ವಿಷಯಗಳು ತಿಳಿಯುತ್ತವೆ. ಕೊಡದ ತುಂಬ ನೀರಿರುವುದಿಲ್ಲ, ಅದು ತುಂಬಿದಂತೆ ಕಾಣಲು ಒಳಗೆ ಟೊಳ್ಳುಮಾಡಲಾಗಿರುವುದು. ಇದು ಭಾರವಾಗಿಲ್ಲವಾದ್ದರಿಂದಲೇ ತೇಲುತ್ತದೆ ಮತ್ತು ಈ ಕಾರಣದಿಂದಲೇ ಕೊಡವನ್ನು ಎಲ್ಲರ ಎದುರಿಗೆ ಎತ್ತಿ ತರದೆ ನೀರಿನಲ್ಲೇ ಎಳೆದು ದಡಕ್ಕೆ ತರಲಾಗುವುದು. ಈ ಕೊಡ ನೀರಲ್ಲಿ ಮತ್ತೆ ಮುಳುಗಿ ಹೋಗುವುದೆಂದು ಜನರು ನಂಬಿದರೂ ಇದರಲ್ಲಿನ ಹಣ ಮತ್ತಿತರ ವಸ್ತುಗಳ ಆಸೆಗೆ ರಾತ್ರಿ ಈ ಕೊಡವನ್ನು ತೇಲಿಸಿದವರೇ ಎತ್ತಿಕೊಂಡು ಹೋಗುತ್ತಾರೆ. ಇದರಿಂದ ಅವರಿಗೆ ಲಾಭವಾಗುವುದರ ಜೊತೆಗೆ ದೇವರ ಬಗೆಗೆ, ಈ ಬಾವಿಯ ಬಗೆಗೆ ಜನರಲ್ಲಿ ಹೆಚ್ಚಿನ ಗೌರವಭಾವಗಳು ಮೂಡಿ ಅವರನ್ನು ತಮ್ಮತ್ತ ಸೆಳೆದುಕೊಳ್ಳಲು ಸಹಾಯವಾಗುತ್ತದೆ. ಆದ್ದರಿಂದ ಬುದ್ಧಿವಂತರಾದ ಜನರ ಒಂದು ಗುಂಪೇ ಈ ಕೆಲಸದಲ್ಲಿ ತೊಡಗಿರುವುದು. ಇವರು ಧರ್ಮಕ್ಕೆ ಹತ್ತಿರದವರು, ಪ್ರಬಲರು, ಅಧಿಕಾರಸ್ಥರೂ ಇರಬಹುದಾದ್ದರಿಂದ ಈ ಬಗೆಗೆ ಯಾರೂ ಪ್ರಶ್ನಿಸುವುದಿಲ್ಲ. ಪ್ರಶ್ನಿಸಿದರೂ ಈ ವ್ಯಕ್ತಿಗಳು ಅದನ್ನು ನಿಭಾಯಿಸುವಷ್ಟು ಬುದ್ಧಿಚಾತುರ್ಯ ಹೊಂದಿರುತ್ತಾರೆ. ಹೀಗೆ ಜನರನ್ನು ತಪ್ಪು ದಾರಿಗೆಳೆಯುವ 'ಪವಾಡ'ಗಳು ಇಂದಿಗೂ ನಡೆಯುತ್ತಿವೆ. ಯಾವುದೋ ಕಾರಣಕ್ಕೆ ಕೊಡಗಳು ಬರುವುದು ನಿಂತು, ಕಾಲಕ್ರಮೇಣ ಜನರ ಬಾಯಲ್ಲಿ ಮಾರ್ಪಾಡಾಗಿ ಈ ಘಟನೆ 'ಪವಾಡ'ವೆಂದೇ ಪ್ರಸಿದ್ಧಿಗೆ ಬಂದರೆ ಆಶ್ಚರ್ಯವೇನಲ್ಲ.

**ಪವಾಡಗಳ ಉದ್ದೇಶ:** 'ಪವಾಡ'ಗಳು ನಿಜವಲ್ಲದಿದ್ದರೂ, ಇವು ನಿಜವಲ್ಲವೆಂದು 'ಪವಾಡಕಾರರಿಗೆ', ಬುದ್ಧಿಜೀವಿಗಳಿಗೆ ತಿಳಿದಿದ್ದರೂ ಇಂದು ಸಮಾಜದಲ್ಲಿ ಪವಾಡಗಳ ಬಗೆಗೆ ಇರುವ ಪ್ರಚಾರಕ್ಕೆ ಸೂಕ್ತ ಸಾಮಾಜಿಕ ಕಾರಣಗಳಿವೆ. ಜನಪದ ಮಟ್ಟದ ಸಮಾಜಗಳಲ್ಲಿ ಧರ್ಮ ಉಳಿಯಬೇಕಾದರೆ, ಜನರಲ್ಲಿ ಧರ್ಮ, ಗುರು, ಗುಡಿಗಳ ಬಗೆಗೆ ಭಕ್ತಿ, ಭಯ ಉಳಿಯಬೇಕಾದರೆ ಯಾವುದಾದರೂ ಒಂದು ಹೆದರಿಕೆ ಬೇಕಾಗುತ್ತದೆ. ಇವುಗಳಲ್ಲಿ ಮುಖ್ಯವಾಗಿ ಅನಾದಿಕಾಲದಿಂದಲೂ ಧರ್ಮಪ್ರಚಾರಕರು ಪವಾಡ ಮತ್ತು ಪವಾಡಪುರುಷರ ಹೆಸರನ್ನು ಉಪಯೋಗಿಸುತ್ತಾ ಬಂದಿದ್ದಾರೆ. ಪವಾಡಗಳ ನಿರೂಪಣೆಯ ಮೂಲಕವೇ ಧರ್ಮವು ತನ್ನ ನಿಜರೂಪವನ್ನು ಪಡೆಯಿತೆನ್ನಬಹುದು. ಮುಗ್ಧಜನರಿಗೆ ಧರ್ಮದಲ್ಲಿನ ಆಳವಾದ ವಿಷಯಗಳು ತಿಳಿಯದೆ ಹೋಗಬಹುದು. ಆದರೆ ಮಹಾಪುರುಷರು ಮಾಡಿದ ಪವಾಡಗಳು ತೀರ್ಥದಂತೆ ಸಿದ್ಧವಸ್ತುವಾಗಿ ಸಿಗುವುದರಿಂದ ಇದನ್ನು ಅರಗಿಸಿಕೊಂಡು, ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ.

ಈ ಕಾರಣದಿಂದ ಪವಾಡಗಳು, ಪವಾಡ ಪುರುಷರು ನಿಜವಲ್ಲದಿದ್ದರೂ ಮುಗ್ಧ ಜನರು ಇವನ್ನು ನಂಬಿದರು ಮತ್ತು ಸಮಾಜದಲ್ಲಿನ ಬುದ್ಧಿಜೀವಿಗಳು ಕೆಲಮಟ್ಟಿಗೆ ಇದನ್ನು ಸ್ವೀಕರಿಸಿಕೊಂಡರು. ಆದರೆ ಪವಾಡಕಾರರು ದೇವಮಾನವರಾಗಿ, ತಾವೇ ದೇವರೆಂದು, ತಾವು ಮಾಡದ ಕಾರ್ಯವಿಲ್ಲವೆಂದು ಮೆರೆಯುತ್ತಾ ಸಮಾಜವನ್ನು ಮೋಸಗೊಳಿಸಲು ಹೊರಟಾಗ, ಕೈಚಳಕಗಳನ್ನು ಮಾಡಿ ಇವು ಪವಾಡಗಳೆಂದು ಹೇಳಿದಾಗ, ಬುದ್ಧಿಜೀವಿಗಳು ಇದರ ವಿರುದ್ಧ ಹೋರಾಡಿ ಜನರನ್ನು ಎಚ್ಚರಿಸುತ್ತಾರೆ. ತಮ್ಮ ಮೇಲಿನ ಈ ಪ್ರಚಾರವನ್ನು ಪವಾಡಕಾರರು ಇದು ದೇವರ ವಿರುದ್ಧದ ಪ್ರಚಾರವೆಂದು ಅಪಪ್ರಚಾರ ಮಾಡಿದ ಅನೇಕ ನಿದರ್ಶನಗಳಿವೆ.

**ಪವಾಡಗಳ ಬಗೆಗೆ ಟೀಕೆಗಳು :** ಅನಾದಿಕಾಲದಿಂದಲೂ ಸಮಾಜದಲ್ಲಿನ ಬುದ್ಧಿಜೀವಿಗಳು ಪವಾಡಗಳನ್ನು ಮತ್ತು ಪವಾಡಪುರುಷರನ್ನು ಖಂಡಿಸುತ್ತಾ ಬಂದಿದ್ದಾರೆ. ಪವಾಡಗಳ ಪರೀಕ್ಷೆಗೆ ಆಹ್ವಾನ ನೀಡಿದ ಅನೇಕ ಉದಾಹರಣೆಗಳನ್ನು ನಮ್ಮ ಪುರಾಣ ಪುಣ್ಯಕತೆಗಳಲ್ಲಿ ಕಾಣಬಹುದು. ಆದರೂ ಅವು ಇಂದಿಗೂ ಉಳಿದುಕೊಂಡು ಬಂದಿವೆ. ಸಮಕಾಲೀನವಾಗಿಯೂ ಪವಾಡಗಳ ಬಗೆಗೆ ಅನೇಕ ಪ್ರತಿಕ್ರಿಯೆಗಳಿವೆ. ಪವಾಡಗಳಲ್ಲಿ, ಪವಾಡಪುರುಷರಲ್ಲಿ ನಂಬಿಕೆ ಹೊಂದಿದವರು ಪವಾಡಗಳು ನಿಜ, ಅವನ್ನು ಮಾಡಲು ದೈವೀಶಕ್ತಿ ಬೇಕಾಗುತ್ತದೆ. ಪವಾಡಗಳನ್ನು ಮಾಡುವವರು ದೇವಮಾನವರು. ಆದ್ದರಿಂದ ಪವಾಡ ಮತ್ತು ಪವಾಡಪುರುಷರ ಬಗೆಗೆ ವೈಜ್ಞಾನಿಕ ಪರೀಕ್ಷೆ ಸಾಧ್ಯವಿಲ್ಲ–ಎಂದು ವಾದಮಾಡುತ್ತಿದ್ದಾರೆ. ಯಾರಾದರೂ ಈ ಪರೀಕ್ಷೆಗಳ ಬಗೆಗೆ ಮಾತೆತ್ತಿದರೆ ಈ ಭಕ್ತರು ಅವರ ವಿರುದ್ಧ ದೊಡ್ಡ ಆಂದೋಳನವನ್ನೇ ಪ್ರಾರಂಭಮಾಡುತ್ತಾರೆ. ಕೆಲವು ವರ್ಷಗಳ ಹಿಂದೆ ಬೆಂಗಳೂರು ವಿಶ್ವವಿದ್ಯಾಲಯವು ಪವಾಡಗಳ ಬಗ್ಗೆ ಸತ್ಯಶೋಧನೆಗೆಂದು ಒಂದು ಸಮಿತಿಯನ್ನು ನೇಮಿಸಿತ್ತು. ಈ ಸಮಿತಿಯ ಸದಸ್ಯರು ಪವಾಡಗಳು ನಡೆಯುವ ಸ್ಥಳಗಳನ್ನು ಮತ್ತು ಪವಾಡಪುರುಷರೆನಿಸಿಕೊಂಡವರನ್ನು ಸಂದರ್ಶಿಸಿ ನಿಜಸ್ಥಿತಿಯನ್ನು ಪರೀಕ್ಷಿಸಲು ಯತ್ನಿಸಿದರು. ಈ ಉದ್ದೇಶದಿಂದ ಅವರು ಅನೇಕ ಪವಾಡಪುರುಷರನ್ನು ಪರೀಕ್ಷೆಗೆ ಆಹ್ವಾನಿಸಿದಾಗ ಈ ಪವಾಡಪುರುಷರ ಹಿಂಬಾಲಕರು ಇದನ್ನು ವಿರೋಧಿಸಿದರು. ಕೆಲವರು, ಪವಾಡಗಳ ವೈಜ್ಞಾನಿಕ ಪರೀಕ್ಷೆ ಸಾಧ್ಯವಿಲ್ಲವೆಂದೂ ವಾದಿಸಿದರು.

ಇದಕ್ಕೆ ವಿರುದ್ಧವಾಗಿ ಕೆಲವೊಂದು ಬುದ್ಧಿಜೀವಿಗಳು ಪವಾಡಗಳು ಮತ್ತು ಪವಾಡ ಪುರುಷರಿಲ್ಲ ಎಂದು ವಾದಮಾಡಿದ್ದಾರೆ. ವೈಜ್ಞಾನಿಕ ಟೀಕೆಗಳನ್ನು ನೀಡುವ ಇವರ ವಾದದಂತೆ ಪವಾಡಗಳು ಕೇವಲ ಕೈಚಳಕಗಳು, ಇಲ್ಲಿ ದೈವೀಶಕ್ತಿಯ ಅವಶ್ಯಕತೆ ಇಲ್ಲ. ತಮ್ಮ ಜೀವನೋಪಾಯಕ್ಕೆ ಯಾವ ದೈವೀಶಕ್ತಿಯ ಹಿನ್ನೆಲೆಯನ್ನು ತೆಗೆದುಕೊಳ್ಳದೆ, ಹಾವಾಡಿಗರು, ಮಂತ್ರವಾದಿಗಳೆನಿಸಿಕೊಂಡವರು ಜನರ ಎದುರು, ಹಾಡೇಹಗಲು,

ಸಂತೆಗಳಲ್ಲಿ, ಪೇಟೆಯಲ್ಲಿ, ಜಾತ್ರೆಗಳಲ್ಲಿ ಈ ಕೈಚಳಕಗಳನ್ನು ಮಾಡುವುದನ್ನು ನೋಡಿದ್ದೇವೆ. ಮಂತ್ರದ ಹೆಸರೆತ್ತಿ, ವಿಚಿತ್ರ ವೇಷಧರಿಸಿ, ಮಾತಿನ ಚತುರತೆಯಿಂದ, ಮಂತ್ರದಂಡದ ಚಲನೆಯಿಂದ, ಪ್ರೇಕ್ಷಕರ ಗಮನವನ್ನು ಬೇರೆಡೆ ಸೆಳೆದು ಅನೇಕ ಕೈಚಳಕಗಳನ್ನು ಮಾಡುವುದನ್ನು ಕಂಡಿದ್ದೇವೆ ಇಂತಹ ಕೆಲಸಮಾಡಲು ಪ್ರದರ್ಶನದ ಪೂರ್ವದ ತಯಾರಿ, ನಿಪುಣರಾದ ಸಹಾಯಕರು ಮಾತ್ರ ಇದ್ದರೆ ಸಾಕು. ಈ 'ಮಂತ್ರ'ಗಾರರಿಗೆ ಜನತೆಯ ಮನೋಭಾವ ತಿಳಿದಿರುತ್ತದೆ. ಇವರಲ್ಲಿ ಕೆಲವಂಶ ಮುಗ್ಧರಿರುತ್ತಾರೆ. ಇನ್ನು ಕೆಲವಂಶ ನಿರ್ಲಿಪ್ತರಿರುತ್ತಾರೆ. ಮತ್ತು ಉಳಿದವರಿಗೆ ಸತ್ಯ ತಿಳಿದಿದ್ದರೂ ಸುಮ್ಮನಿರುತ್ತಾರೆ. ಈ ಕೊನೆಯ ಗುಂಪಿನವರನ್ನು ಮತ್ತೆ ಎರಡು ಗುಂಪು ಮಾಡಬಹುದು. ಇವರಲ್ಲಿ ಅರ್ಧ ಜನರು ಇವನಂತೆ ಬೇರೆ ಬೇರೆ ವೃತ್ತಿಗುಂಪಿಗೆ ಸೇರಿದವರು. ತಮ್ಮಂತೆ ಇವನೂ ಜೀವನ ಮಾಡುವವನಾದ್ದರಿಂದ ಇವರಿಗೆ ಸತ್ಯ ಗೊತ್ತಿದ್ದರೂ ಸುಮ್ಮನಿರುತ್ತಾರೆ. ಉಳಿದವರು ಇದೊಂದು ಮನೋರಂಜನ ಕಾರ್ಯವಾದ್ದರಿಂದ ಸಮಾಜದಲ್ಲಿ ಇದಕ್ಕೂ ಒಂದು ಸ್ಥಾನವಿದೆ ಎಂದು ಸುಮ್ಮನಾಗುತ್ತಾರೆ. ಈ ಕಾರಣಗಳಿಂದ ಈ ಮಾಯ–ಮಂತ್ರಕಾರರು ಸಮಾಜದಲ್ಲಿ ಜೀವನ ಮಾಡಲು ಅನುವಾಗುತ್ತದೆ. ಆದರೆ ಯಾರಾದರೂ ಸತ್ಯವನ್ನು ವಿರೋಧಿಸಿ ನಡೆದಾಗ ಇದರಿಂದ ಪ್ರತಿರೋಧನೆ ಬರುವುದನ್ನು ನಾವು ಕಾಣುತ್ತೇವೆ. ಶ್ರೀಲಂಕಾದ ದಿವಂಗತ ಡಾ. ಕೋವೂರ್ ಅವರು ಪವಾಡಗಳನ್ನು ಮಾಡಿತೋರಿಸಿದವರಿಗೆ ಒಂದು ಲಕ್ಷ ರೂಪಾಯಿಗಳ ಬಹುಮಾನ ನೀಡುವುದಾಗಿ ಘೋಷಿಸಿ ಅನೇಕ ವರ್ಷಗಳೇ ಆಗಿದ್ದರೂ ಯಾವ ಪವಾಡಪುರುಷನೂ ಇವರ ಎದುರಿಗೆ ಪವಾಡ ಮಾಡಲು ಮುಂದೆ ಬಂದಿಲ್ಲ. ಡಾ. ಕೋವೂರ್‌ರವರು ತಮ್ಮ ಇತ್ತೀಚಿನ ಪ್ರದರ್ಶನ- ಭಾಷಣ ಸಂಚಾರದಲ್ಲಿ ಪವಾಡಗಳ ಬಗೆಗೆ ಜನರಿಗೆ ತಿಳಿಯಹೇಳುವುದರ ಜೊತೆಗೆ ಕೆಲವೊಂದು ಪವಾಡಪುರುಷರು ಮಾಡುವ ಸಣ್ಣಪುಟ್ಟ ಕಲೆಗಳನ್ನು ಬಹಿರಂಗವಾಗಿ ಪ್ರದರ್ಶಿಸಿದ್ದಾರೆ. ಈ ಬಗೆಗೆ 'ನವನಿರ್ಮಾಣ ಸಮಿತಿ' ಮುಂತಾದ ಪ್ರಗತಿಪರ ಗುಂಪುಗಳು ಸಾಕಷ್ಟು ಪ್ರಚಾರ ಮಾಡಿವೆ ಎನ್ನಬಹುದು.

ಪವಾಡಗಳು ಸತ್ಯವಲ್ಲದಿದ್ದರೂ, ಇವನ್ನು ಇಂದು ನಾವು ಪವಾಡಕಾರರೆಂದು ಒಪ್ಪಿಕೊಂಡಿರುವ ಎಲ್ಲ ಮಹಾತ್ಮರು ಖಂಡಿಸಿದ್ದರೂ ಪವಾಡಗಳು ಮತ್ತು ಅವುಗಳ ಪ್ರಚಾರವೇಕೆ ಇನ್ನೂ ಸಮಾಜದಲ್ಲಿ ಮುಂದುವರೆಯುತ್ತಿದೆ? ಎನ್ನುವುದನ್ನು ಮನೋವೈಜ್ಞಾನಿಕ ವಿವರಗಳನ್ನು ನೀಡಿ ವಿವರಿಸಬಹುದು ಮತ್ತು ಇದಕ್ಕೆ ಅನೇಕ ಕಾರಣಗಳಿವೆ. ಕೆಲವರು ಮನೋಸ್ಥೈರ್ಯ ಪಡೆಯಲು ಪವಾಡಗಳನ್ನು ನಂಬಲೇಬೇಕಾಗುತ್ತದೆ. ಇಂತಹ ನಿದರ್ಶನಗಳು ಮತ್ತು ನಂಬಿಕೆ ಇಲ್ಲದಿದ್ದರೆ ದೇವರ ಮೇಲಿನ ಅವರ ನಂಬಿಕೆ ಸಡಿಲವಾಗಿ ಅವರ ಜೀವನದಲ್ಲಿ ಧೈರ್ಯ ಕುಸಿಯುತ್ತದೆ. ಇದನ್ನು ಪಡೆಯಲು ಅವರಿಗೆ ಪವಾಡಗಳು ಬೇಕಾಗುತ್ತವೆ. ಸಾಮಾಜಿಕ ಶಾಸ್ತ್ರೀಯ ದೃಷ್ಟಿಯಿಂದಲೂ

ಸೂಕ್ತ ಕ್ರಿಯೆಗಳಿರುವುದನ್ನು ಕಾಣಬಹುದು. ಪ್ರತಿಯೊಂದು ಸಮಾಜದಲ್ಲಿಯೂ ಧರ್ಮವು ತನ್ನದೇ ಆದ ಸ್ಥಾನಮಾನ ಮತ್ತು ಕಾರ್ಯವನ್ನು ಹೊಂದಿದೆ. ಧರ್ಮದ ರೀತಿ, ಮಟ್ಟ ಮುಂತಾದವು ಜನರ ಸಂಸ್ಕೃತಿಯ ಮಟ್ಟಕ್ಕೆ ಅನುಗುಣವಾಗಿರುತ್ತವೆ. ಜನತೆ ಇನ್ನೂ ಜನಪದ ಮಟ್ಟದಲ್ಲಿದ್ದರೆ ಅವರಿಗೆ ಧರ್ಮದ ವಿಷಯವನ್ನು ವೇದ್ಯವಾಗುವ ರೀತಿಯಲ್ಲಿ ಹೇಳಬೇಕಾಗುತ್ತದೆ. ವಿಚಾರವಂತರು, ಜ್ಞಾನಿಗಳಿಗೆ ದೇವರು ಕಾಣದಿದ್ದರೂ, ಅವರು ತಮ್ಮ ಜ್ಞಾನಬಲದಿಂದ ತಮ್ಮ ಮನೋಸ್ಥೈರ್ಯವನ್ನು ಉಳಿಸಿಕೊಂಡು ಬೆಳೆಸಿಕೊಂಡು ಬರುತ್ತಾರೆ. ಆದರೆ ಜನಪದಮಟ್ಟದ ಜನರಿಗೆ ಇದು ಅರ್ಥವಾಗುವುದಿಲ್ಲ. ದೇವರನ್ನು ಅಥವಾ ಅವನ ರೂಪವನ್ನು ಕಂಡಾಗಲೇ ಅವರಿಗೆ ಧೈರ್ಯ. ಸಮಾಜಜೀವನದಲ್ಲಿ ಸ್ಥೈರ್ಯ ಪಡೆಯಲು ಅವರು ಜನಪದ ಮಾರ್ಗವನ್ನೇ ಅನುಸರಿಸುತ್ತಾರೆ. ಅಲ್ಲದೆ ಅವರಿಗೆ ಧರ್ಮದ ವಿಷಯಗಳನ್ನು ಬೇರೆ ರೀತಿಯಲ್ಲಿ ಹೇಳಿದರೆ ವೇದ್ಯವಾಗುವುದಿಲ್ಲ. ಜನರಲ್ಲಿಯ ಈ ಒಂದು ದುರ್ಬಲತೆಯನ್ನು ಉಪಯೋಗಿಸಿಕೊಂಡು, ಅದರ ಲಾಭ ಪಡೆಯಲು ಕೆಲವೊಂದು ಜನ ಮುಂದೆ ಬಂದರು. ಈ ಕಾರ್ಯವನ್ನು ಸಮಾಜದಲ್ಲಿಯ ಮಾಯ-ಮಂತ್ರವಾದಿಗಳು ಮಾಡುತ್ತಿದ್ದಾರೆ. ಆದರೆ ಇದು ತಪ್ಪು ಎಂಬುದು ಎಲ್ಲರಿಗೂ ಗೊತ್ತಿರುವ ವಿಷಯ. ಇದು ಧರ್ಮ ಮತ್ತು ನೀತಿಬಾಹಿರವಾದ್ದರಿಂದ ಈ ಬಗೆಗೆ ಹೆಚ್ಚು ಹೇಳುವ ಅವಕಾಶವಿರುವುದಿಲ್ಲ. ಆದರೆ ಧರ್ಮಸ್ಥಾಪಕರು, ಪಾಲಕರು ಎನ್ನಿಸಿಕೊಂಡ ಕೆಲವು ಜನ ಧರ್ಮಗುರುಗಳು, ಈ ಕೆಲಸವನ್ನು ಮಾಡತೊಡಗಿದರೆ ಇದು ಪಾಪ ಕಾರ್ಯವಾಗುತ್ತದೆ. ಇವರು ಧರ್ಮಪ್ರಚಾರಕರಾದ್ದರಿಂದ ಸತ್ಯದ ಪ್ರಚಾರವೇ ಇವರ ಕಾರ್ಯ. ಇದನ್ನು ಬಿಟ್ಟು ಸಮಾಜವಿರೋಧಿಗಳಾದ ಮಾಯ-ಮಾಟಗಾರರಂತೆ ಇವರೂ ಸಮಾಜವನ್ನು ಮೋಸಗೊಳಿಸಹೋದರೆ ಈ ಎರಡು ಗುಂಪುಗಳ ನಡುವೆ ಭಿನ್ನತೆಯೇ ಕಾಣುವುದಿಲ್ಲ.

ಜನಸಾಮಾನ್ಯರು ಪವಾಡ ಮಾಡಿದರೆಂದರೆ ಸಮಾಜ ನಂಬುವುದಿಲ್ಲವಾದ್ದರಿಂದ ಪವಾಡಗಳನ್ನು ಧರ್ಮದ ಹೆಸರಿನಲ್ಲೇ ಮಾಡಬೇಕಾಗುತ್ತದೆ. ಮೊದಲು ಅವರು ತಮ್ಮ ತಾಳಕ್ಕೆ ಕುಣಿಯುವಂತಹ ಒಬ್ಬ ಗುರುವನ್ನು ಹುಡುಕುತ್ತಾರೆ. ಈ ಗುರುವು ತನ್ನ ಸ್ಥಾನಮಾನವನ್ನು ಯಾವುದಾದರೂ ದೊಡ್ಡ ಗುರುವಿನಿಂದ, ದೇವರಿಂದ, ಅಥವಾ ಸ್ಥಳದಿಂದ ಪಡೆಯುತ್ತಾನೆ. ಈ ಹಿನ್ನೆಲೆಯುಳ್ಳ ಗುರುವು ಮಾಡಿದನೆನ್ನಲಾದ ಕೆಲವೊಂದು ಕಾರ್ಯಗಳನ್ನು ಅವನ ಹಿಂಬಾಲಕರು ಅತ್ಯಂತ ಭರದಿಂದ ಪ್ರಚಾರ ಮಾಡುತ್ತಾರೆ. ಅವರ ಕಾರ್ಯಗಳ ಬಗೆಗೆ ಬಣ್ಣ ಕಟ್ಟಿ ಹೇಳುತ್ತಾರೆ. ಹಾಡುಗಳು, ಕತೆಗಳು, ಚಿತ್ರಗಳು ತನಗೆ ತಾನಾಗಿಯೇ ಹುಟ್ಟಿಕೊಳ್ಳುತ್ತವೆ. ಇವು ಜನರಿಗೆ ಹಿಡಿಸುವಂತೆ ಮಾಡಲು ಇವನ್ನು ಹೆಚ್ಚು ಹೆಚ್ಚು ಮಾರ್ಪಾಟು ಮಾಡಿ ಈ ದೇವಮಾನವರನ್ನು ಹೆಚ್ಚಿನ ಶಕ್ತಿಶಾಲಿಗಳನ್ನಾಗಿ ಮಾಡುತ್ತಾರೆ. ಹೀಗೆ ಪವಾಡಗಳಿಗೆ ಚಾರಿತ್ರಿಕ

ವಿವರಣೆಗಳಿವೆ. ಈ ಎಲ್ಲ ಪ್ರಚಾರಕ್ಕೆ ಜನಪದ ಸಂಸ್ಕೃತಿಯಲ್ಲಿನ ಮುಗ್ಧ ಜನರು ಬಲಿಯಾಗುತ್ತಾರೆ, ಪುಸ್ತಕ–ಫೋಟೋಗಳನ್ನು ಕೊಳ್ಳುತ್ತಾರೆ, ಸಭೆ–ಭಾಷಣಕ್ಕೆ ಬರುತ್ತಾರೆ. ಇದಕ್ಕೆಲ್ಲ ಹಣ ಸುರಿಯುತ್ತದೆ. ಗುರುವಿಗೆ ಘನತೆ, ಗೌರವ, ಅಧಿಕಾರ ಗಳು ಪ್ರಾಪ್ತಿಯಾದಂತೆ ಅವರ ಹಿಂಬಾಲಕರಿಗೆ ಹಣದ, ಪ್ರಭಾವದ ಫಲ ಬರುತ್ತದೆ. ಹೀಗೆ ಸಮಾಜದಲ್ಲಿ ಪವಾಡಕಾರ್ಯ ಸೂಕ್ತವಾಗಿ ನಡೆಯುತ್ತದೆ. ಆದರೆ ಇದು ಸತ್ಯದಿಂದ ದೂರವಾದ್ದರಿಂದ ಸಮಾಜಘಾತಕವಾಗಿ, ಮೋಸದ ಕೃತ್ಯವಾಗಿ ಕಾಣುತ್ತದೆ. ಇದಕ್ಕೆ ನಾವು ಬಾವಾಗಳನ್ನು, ಗುರುಗಳನ್ನು ನಿಂದಿಸುವ ಅಗತ್ಯವಿಲ್ಲ. ಹೊರುವ ಜನರಿದ್ದರೆ ತನ್ನ ಮೆರವಣಿಗೆ ಏಕಾಗಬಾರದೆನ್ನುವುದು ಎಲ್ಲ ಧರ್ಮಗುರುಗಳ ಆಕಾಂಕ್ಷೆ. ಇದರಂತೆ ಮುಗ್ಧ ಜನರನ್ನು ನಿಂದಿಸುವುದೂ ಸೂಕ್ತವಲ್ಲ. ತಮ್ಮ ದಿನನಿತ್ಯದ ಸಂಕಷ್ಟಗಳ ಪರಿಹಾರಕ್ಕೆ ದೇವರು ಬರದಾದಾಗ ದೇವದೂತರೆಂದು ಬಂದವರನ್ನೇ ಅವರು ಆಶ್ರಯಿಸಬೇಕಾಗುತ್ತದೆ. ಜನರಿಗೆ ಇದು ಸುಳ್ಳು, ದೇವರು ದೇವರೇ, ಮಾನವ ಮಾನವನೇ, ದೇವಮಾನವನಿಲ್ಲವೆಂದು ತಿಳಿಸುವ ಹೊಣೆ ಸಮಾಜದ್ದು. ಜನ ಎಚ್ಚೆತ್ತರೆ ಈ ಪವಾಡಪುರುಷರು ತಮಗೆ ತಾವೇ ಮರೆಯಾಗುತ್ತಾರೆ. ಈ ಎಚ್ಚರಿಸುವ ಕೆಲಸವನ್ನು ಸಮಾಜದಲ್ಲಿಯ ಬುದ್ಧಿಜೀವಿಗಳು, ಸೂಕ್ತವಾಗಿ ಯಾವ ಪೂರ್ವೋದ್ದೇಶಗಳೂ ಇಲ್ಲದೆ ಮಾಡಿದರೆ ಮಾತ್ರ ಸಾಧ್ಯವಾಗುತ್ತದೆ.

**ಆಧಾರಗ್ರಂಥಗಳು :**


೧. Encyclopaedia Britanica vol. 12, 269–274
೨. Chambers Encyclopaedia vol. ix, 342–43
೩. ಎ. ಆರ್. ಕೋಳಿ, ಪವಾಡಗಳು : ಒಂದು ಸಮಗ್ರ ವಿವೇಚನೆ, ಬಾಗಲಕೋಟೆ, ೧೯೭೭




# ಡಾ. ಆರ್. ಸಿ. ಹಿರೇಮಠರೊಂದಿಗೆ ಸಂದರ್ಶನ

ದೇವೇಂದ್ರಕುಮಾರ ಹಕಾರಿ

ಪ್ರಶ್ನೆ : "ಕನ್ನಡ ಆಡಳಿತದ ಮಾಧ್ಯಮವಾಗಲಿ, ಶಿಕ್ಷಣದ ಮಾಧ್ಯಮವಾಗುವುದು ಬೇಡ"— ಈ ಅಭಿಪ್ರಾಯಕ್ಕೆ ನಿಮ್ಮ ಪ್ರತಿಕ್ರಿಯೆ ಏನು ?

● ಶ್ರೀಸಾಮಾನ್ಯನ ಭಾಷೆ ಆಡಳಿತಭಾಷೆಯಾಗಬೇಕು; ಮಾತೃಭಾಷೆ ಶಿಕ್ಷಣದ ಮಾಧ್ಯಮವಾಗಬೇಕು ಎಂಬುದು ವಿಶ್ವಸಮ್ಮತವಾದ ತತ್ತ್ವ. ಜನರಿಗೆ ತಿಳಿಯದ ಭಾಷೆಯಲ್ಲಿ ರಾಜ್ಯದ ಆಡಳಿತ ನಡೆದರೆ ಅವರನ್ನು ಅಜ್ಞಾನದಲ್ಲಿಟ್ಟು ಆಡಳಿತ ನಡೆಸಿದಂತೆ. ಸಾಮ್ರಾಜ್ಯ ಆಡಳಿತೆಯಲ್ಲಿಯೋ ಅಥವಾ ವಸಾಹತುವಾದದಲ್ಲಿಯೋ ಪ್ರಜೆಗಳನ್ನು ಹತ್ತಿಕ್ಕಿ ಅಧಿಕಾರಶಾಹಿಗಳು ತಮ್ಮತಮ್ಮ ಭಾಷೆಯಲ್ಲಿ ಅಧಿಕಾರ ನಡೆಸಬಹುದು; ಆದರೆ ಆ ಕಾಲ ಹಿಂದಾಗಿ ಈಗ ಪ್ರಜಾಪ್ರಭುತ್ವಯುಗ ಅಸ್ತಿತ್ವದಲ್ಲಿ ಬಂದಿದೆ. ಭರತಖಂಡ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡು ಅದರನ್ವಯ ಆಡಳಿತ ನಡೆಸುತ್ತಿದೆ. ಈ ರಾಷ್ಟ್ರದ ಘಟನೆ ೧೮ ಭಾಷೆಗಳನ್ನು ರಾಷ್ಟ್ರಭಾಷೆಗಳೆಂದು ಒಪ್ಪಿಕೊಂಡಿದೆ. ಇದು ಭಾರತೀಯ ಸಂಸ್ಕೃತಿಯ ಮೂಲಸೂತ್ರಕ್ಕೆ ಅನುಗುಣವಾಗಿದೆ. ಸಾವಿರಾರು ವರ್ಷಗಳಿಂದ ಈ ದೇಶದಲ್ಲಿ ಈ ಭಾಷೆಗಳು ಉತ್ತಮ ಸಾಹಿತ್ಯ ಸಂಸ್ಕೃತಿಗಳನ್ನು ಅರಳಿಸಿವೆ. ಅಂತೆಯೇ ಇವಕ್ಕೆ ರಾಷ್ಟ್ರಭಾಷೆಯ ಸ್ಥಾನ ಸಂದಿದೆ. ಅಲ್ಲದೆ ಭಾಷಾನುಗುಣವಾಗಿಯೇ ರಾಜ್ಯಗಳ ವಿಂಗಡನೆಯೂ ಆಗಿದೆ. ಹೀಗೆ ಅಸ್ತಿತ್ವದಲ್ಲಿ ಬಂದ ರಾಜ್ಯಗಳಲ್ಲಿ ಕರ್ನಾಟಕ ಒಂದು. ರಾಷ್ಟ್ರಭಾಷೆಗಳಲ್ಲಿ ಕನ್ನಡ ಒಂದು. ಅಂದಮೇಲೆ ಕನ್ನಡ ನ್ಯಾಯವಾಗಿ ಆಡಳಿತಭಾಷೆಯಾಗಲೇಬೇಕು; ಆಗಿದೆ, ಆಗುತ್ತಿದೆ. ಆಗದಿದ್ದರೆ ಜನ ಕೇಳುವುದಿಲ್ಲ. ಹೀಗಿದ್ದಾಗ ಕನ್ನಡ ಆಡಳಿತದ ಮಾಧ್ಯಮ ಆಗಕೂಡದು ಎನ್ನುವುದು ಮೂರ್ಖತನದ ಮಾತು. ಇನ್ನು ಶಿಕ್ಷಣ ಮಾಧ್ಯಮದ ವಿಷಯ :

ಶಿಕ್ಷಣವು ಒಂದು ಮಾನಸಿಕ ವಿಕಸನದ ಕ್ರಮ. ಅಲ್ಲಿ ಏನೆಲ್ಲ ಅವ್ಯವಹಾರ ಮಾಡಿದರೆ ಸಲ್ಲದು. ಬ್ರಿಟಿಶರ ಕಾಲದಲ್ಲಿ ನೂರೈವತ್ತುವರ್ಷ ಇಂಗ್ಲಿಷ್ ಮುಖಾಂತರ ಶಿಕ್ಷಣ ನೀಡಲಾಯಿತು. ಆ ಪರಂಪರೆ ನಮ್ಮ ನೂರಿಪ್ಪತ್ತು ವಿಶ್ವವಿದ್ಯಾಲಯಗಳಲ್ಲಿ ಇಂದಿಗೂ ನಡೆದಿದೆ. ಇಷ್ಟು ವಿಪುಲವಾದ ವಿಶ್ವವಿದ್ಯಾಲಯಗಳಿಂದ ಹೊರಬಂದ ವಿದ್ಯಾರ್ಥಿಗಳ ಕಾಣಿಕೆ ಜಗತ್ತಿನ ಜ್ಞಾನಭಾಂಡಾರಕ್ಕೆ ಏನು ಎನ್ನುವುದು ಮುಖ್ಯ ಪ್ರಶ್ನೆ. ಸಣ್ಣ ಸಣ್ಣ ರಾಷ್ಟ್ರಗಳಾದ ಇಂಗ್ಲಂಡ್, ಸ್ವಿಝರ್‌ಲಂಡ ಮೊದಲಾದ ದೇಶಗಳಲ್ಲಿ ನೋಬೆಲ್ ಪಾರಿತೋಷಕ ವಿಜೇತರು ಅನೇಕ ಸಂಖ್ಯೆಯಲ್ಲಿ ಕಂಡುಬರುತ್ತಿದ್ದರೆ ವಿಸ್ತಾರವಾದ ಭೂಖಂಡವಾದ ಭಾರತದಲ್ಲಿ ರಾಮನ್, ಬೋಸ್, ರವೀಂದ್ರನಾಥ, ಖೊರಾನಾ ಇಂತಹ ನಾಲ್ಕಾರು ಜನರನ್ನು ಬಿಟ್ಟರೆ ಬೇರೆ ಹೆಸರುಗಳೇ ತೋರುವುದಿಲ್ಲ. ಬೌದ್ಧಿಕಮಟ್ಟದಲ್ಲಿ ಭಾರತೀಯ ವಿದ್ಯಾರ್ಥಿಗಳು ಜಗತ್ತಿನ ಯಾವ ರಾಷ್ಟ್ರದ ವಿದ್ಯಾರ್ಥಿಗಳಿಗೂ ಕಡಿಮೆ ಯಾಗಿಲ್ಲ; ಅವರ I. Q. ಎತ್ತರದ ಮಟ್ಟದಲ್ಲಿಯೇ ಇದೆ. ಶಿಕ್ಷಣಕ್ರಮದಲ್ಲಿ ಪರಕೀಯ ಭಾಷೆ ಗುರುತರ ಸ್ಥಾನದಲ್ಲಿ ನಿಂತಿರುವುದರಿಂದ ನೇರ ವಿಷಯಜ್ಞಾನ, ಸ್ವತಂತ್ರ ವಿಚಾರ ಇವುಗಳಿಗಿಂತಲೂ ಪರಭಾಷೆಯಲ್ಲಿ ಬರೆದ ವಿಚಾರಗಳನ್ನು ಕಂಠ ದಲ್ಲಿಯೋ, ನೆನಪಿನಲ್ಲಿಯೋ ಇಟ್ಟುಕೊಳ್ಳುವುದೇ ಪ್ರಧಾನ ವಿಷಯವಾಯಿತು. ಸ್ವತಂತ್ರ ವಿಚಾರಶಕ್ತಿ ಅಭಿವ್ಯಕ್ತಿಶಕ್ತಿಗಳನ್ನು ನೀಡದ ಶಿಕ್ಷಣ ನಿಜವಾದ ಶಿಕ್ಷಣವಲ್ಲ. ಇದು ಮಾತೃಭಾಷೆಯಿಂದಲೇ ಸಾಧ್ಯ, ಅನ್ಯಥಾ ಶರಣಂ ನಾಸ್ತಿ. ಸಹಜ ಜ್ಞಾನ, ಈಗ ನಮ್ಮ ವಿದ್ಯಾರ್ಥಿಗಳಿಗೆ ಕೈಗೆಟುಕದಾಗಿದೆ. ಇಂಥ ಸನ್ನಿವೇಶದಲ್ಲಿ ಕನ್ನಡ ಶಿಕ್ಷಣದ ಮಾಧ್ಯಮವಾಗಲೇಬೇಕು.

ಪ್ರಶ್ನೆ : "ಇಂದಿನ ಕನ್ನಡಸಾಹಿತ್ಯದ ಗತಿಯೇನೋ ಚೆನ್ನಾಗಿದೆ, ಸ್ಥಿತಿ ಚೆನ್ನಾಗಿಲ್ಲ" —ಇದು ನಿಜವೇ ?

● ಇಂದು ಕನ್ನಡಸಾಹಿತ್ಯ ಹೊಸಗತಿಯಲ್ಲಿ ನಡೆದಿದೆಯೆಂಬುದು ದಿಟ. ಹಳೆಯ ಪರಂಪರೆ ೨೦ ನೆಯ ಶತಮಾನದ ಮೊದಲದಶಕದ ವರೆಗೆ ನಡೆದುಬಂದಾಗ ಪಾಶ್ಚಾತ್ಯಸಾಹಿತ್ಯದ ಸಂಪರ್ಕ ನಮ್ಮ ಜನತೆಗೆ ಉಂಟಾಗಿ ಅಲ್ಲಿ ರೊಮ್ಯಾಂಟಿಕ್ ಸಂಪ್ರದಾಯ ಒಮ್ಮೆಲೇ ನಮ್ಮ ಮನಸ್ಸನ್ನು ಸೆಳೆಯಿತು. ಆಗ ಕನ್ನಡದ ಕವಿ ಅದಕ್ಕೆ ಮನಸೋತು ಹೊಸ ಸೌಂದರ್ಯವನ್ನು ಅನುಭವಿಸತೊಡಗಿ ಕಾವ್ಯವಸ್ತು ಹಿಗ್ಗಿತು. ಶೈಲಿ ಅರಳಿತು. ನವೋದಯ ಸಂಪ್ರದಾಯ ತಲೆಯೆತ್ತಿತು. ಈ ಸಂಪ್ರದಾಯದಲ್ಲಿ ರಾಗ ತಾಳ ಲಯಗಳಿಗೆ ವಿಶೇಷಮಹತ್ವವಿದ್ದುದರಿಂದ ರಾಗವೇ ಹೆಚ್ಚಾಗಿ, ಅರ್ಥ ಕುಗ್ಗುತ್ತ ಬಂದಿತು. ನವೋದಯ ಸಂಪ್ರದಾಯದ ಮೊದಲಿನ ರಮ್ಯತೆ ಕಡಿಮೆಯಾಗಿ ಸಾಂಪ್ರದಾಯಿಕತೆ ಹೆಚ್ಚಾಗತೊಡಗಿತು ಆಗ ಸಾಹಿತ್ಯದ ಮೂಲಸತ್ವ ಧ್ವನಿ; ರಾಗ ತಾಳಗಳಲ್ಲ ಎಂಬ ಸಿದ್ಧಾಂತಕ್ಕೆ ಮಹತ್ವದ ಸ್ಥಾನ ಪ್ರಾಪ್ತವಾಯಿತು. ನವ್ಯಸಂಪ್ರದಾಯದ ಅಸ್ತಿಭಾರವಿರುವುದು ಈ ಸೂತ್ರದಲ್ಲಿ. ಮಾನವನ್ನಬದುಕು ಅನೇಕ ಸಂಕೀರ್ಣಗಳಲ್ಲಿ

ಸಿಲುಕಿ ತತ್ತರಿಸುತ್ತಿರುವಾಗ ಸಾಹಿತಿ ಜನಜೀವನವನ್ನು ಮರೆತು ಕೇವಲ ತನ್ನ ಕಲ್ಪನಾ ಪ್ರಪಂಚದಲ್ಲಿ ಆನಂದಲಹರಿಯಲ್ಲಿ ಲೀನನಾಗುವುದು ಅವಾಸ್ತವ. ನವ್ಯಸಂಪ್ರದಾಯಕ್ಕೆ ಹೀಗೆ ಹೊಸದಿಸೆ ಪ್ರಾಪ್ತವಾದುದು ಅನಿವಾರ್ಯ. ಈ ಗತಿ ಕನ್ನಡಕ್ಕೆ ಬಂದುದು ಸೂಕ್ತ. ಆದರೆ ಆ ಗತಿಯಲ್ಲಿ ಬೆಳೆದುಬಂದ ಸಾಹಿತ್ಯದ ಸ್ಥಿತಿ ತೃಪ್ತಿಕರವಾಗಿಲ್ಲ. ಕೇವಲ ಕನ್ನಡದಲ್ಲಿ ಮಾತ್ರವಲ್ಲ ಅಖಂಡ ಭಾರತದಲ್ಲಿಯೇ ಈ ಅನುಭವ ವ್ಯಕ್ತವಾಗುತ್ತಿದೆ. ಇದಕ್ಕೆ ಕಾರಣ ಹೊಸತನ ಅನುಭವಿಸಿ ಬರೆಯುತ್ತಿರುವ ನವ್ಯಸಾಹಿತಿಯಲ್ಲಿ ಸ್ವಾನುಭವಕ್ಕಿಂತಲೂ ಇಂಗ್ಲಿಷ್ ಭಾಷಾಸಾಹಿತ್ಯದ ಅನುಕರಣೆಯೇ ಅಧಿಕವಾಗಿದೆ. ಪಾಶ್ಚಾತ್ಯ ದೇಶದಲ್ಲಿ ಆ ಸಂಕೀರ್ಣಜೀವನ ಅನೇಕ ಸಮಸ್ಯೆಗಳನ್ನು ತಂದೊಡ್ಡಿದುದು ನಿಜ. ದ್ವಿತೀಯ ಮಹಾಯುದ್ಧದ ಪರಿಣಾಮವಾಗಿ ಪಶ್ಚಿಮ ಜಗತ್ತು Waste Land ನಂತೆ ಕಂಡುಬರುತ್ತಿತ್ತು. ಈಲಿಯಟ್‌ನಂಥ ಕವಿ ಅದನ್ನು ಕಂಡು ಕಳವಳಪಟ್ಟು ಹೊಸ ಮೌಲ್ಯಗಳ ಆವಶ್ಯಕತೆಯಿದೆಯೆಂಬುದನ್ನು ಎತ್ತಿತೋರಿಸಿದ. ಮಾಡರ್ನಿಸ್ಟ್ ಪೋಯಟ್ರಿ ಅಲ್ಲಿ ಆರಂಭವಾಯಿತು. ಆದರೆ ಭಾರತೀಯ ಜೀವನದಲ್ಲಿ ಸಂಕೀರ್ಣತೆ ಆರಂಭವಾಗಿದ್ದರೂ ಅದರ ಬೇಗೆ ಅಷ್ಟು ತೀಕ್ಷ್ಣವಾಗಿರಲಿಲ್ಲ. ಬದಲು ಸಾಹಿತ್ಯದ ಅನುಕರಣೆ ಮಾತ್ರ ತೀಕ್ಷ್ಣವಾಯಿತು. ಹೀಗಾಗಿ ಈ ನವ್ಯಸಂಪ್ರದಾಯದಲ್ಲಿ ಔನ್ನತ್ಯವನ್ನು ಮುಟ್ಟುವ ಕೃತಿಗಳು ಹುಟ್ಟಿಬರಲಿಲ್ಲ. ಆದಕ್ಕಾಗಿ ಜನ ಮತ್ತೆ ಹೊಸಸಂಪ್ರದಾಯದ ಕಡೆಗೆ ದೃಷ್ಟಿಯನ್ನು ಚಾಚುತ್ತಿದ್ದಾರೆ. ಅಂತೆಯೇ ಅದರ ಸ್ಥಿತಿ ಚೆನ್ನಾಗಿಲ್ಲ ಎಂಬ ಮಾತು ನಿಜ.

ಪ್ರಶ್ನೆ : ಸಾಹಿತ್ಯಸಮ್ಮೇಲನಾಧ್ಯಕ್ಷರು ಸಾರಿದ "ಕನ್ನಡಸಾಹಿತ್ಯ ಇಂಗ್ಲಿಷ ಪ್ರಭಾವದಿಂದ ಮುಕ್ತವಾಗಬೇಕು" ಎಂಬ ಘೋಷಣೆ ಸಾಧುವೇ ? ಸಾಧ್ಯವೇ ?

● ಕನ್ನಡಸಾಹಿತ್ಯ ಇಂಗ್ಲಿಷ್ ಪ್ರಭಾವದಿಂದ ಮುಕ್ತವಾಗಲೇಬೇಕು. ಇದು ಸಾಧ್ಯವೇ ಎಂಬ ಪ್ರಶ್ನೆ ಸಾಧುವಾದದಲ್ಲ. ಏಕೆಂದರೆ ಇಂಗ್ಲಿಷ್ ಸಂಪರ್ಕ ಬರುವ ಪೂರ್ವದಲ್ಲಿಯೇ ಕನ್ನಡಸಾಹಿತ್ಯ ತನ್ನ ಸ್ವಂತಗತಿಯಲ್ಲಿ ನಡೆದು ಉನ್ನತ ಕೃತಿಗಳನ್ನು ನೀಡಿದೆ. ಈಗ ಇಂಗ್ಲಿಷ್ ಪ್ರಭಾವ ಬಂದಮೇಲೆ ಅನುಕರಣೆ, ಅನುವಾದ ಕೃತಿ, ವಿಚಾರ ಚೌರ್ಯ ಹೆಚ್ಚಾಗಿದೆ. ಇಂಗ್ಲಿಷ್ ಪ್ರಭಾವ ಕಡಮೆಯಾಗದೆ ಕನ್ನಡದ ಮೂಲ ಸತ್ತ್ವ ಪ್ರಕಟವಾಗುವಂತಿಲ್ಲ. ಓದುವುದು, ವಿಚಾರಮಾಡುವುದು ಇಂಗ್ಲಿಷ್‌ದಲ್ಲಿ; ಬರೆಯುವುದು ಆಂಗ್ಲ ಪ್ರಭಾವಿತ ಕನ್ನಡದಲ್ಲಿ. ಹೀಗಾದರೆ ಕನ್ನಡದ ನಿಜವಾದ ಪ್ರತಿಭೆ ವ್ಯಕ್ತವಾಗಲಾರದು. ಆದ್ದರಿಂದ ಸಮ್ಮೇಳನಾಧ್ಯಕ್ಷರ ಘೋಷಣೆ ಸಾಧುವಾಗಿದೆ. ಆದರೆ ಅದರ ಸಾಧ್ಯತೆ ಕಷ್ಟದಾಯಕವಾಗಿದೆ. ಕನ್ನಡಭಾಷೆಯನ್ನು ಇಂಗ್ಲಿಷ್ ಮಟ್ಟಕ್ಕೆ ಬರುವಂತೆ ಹದಗೊಳಿಸಬೇಕು. ಅದರಲ್ಲಿ ದುಡಿದು, ಅದನ್ನು ದುಡಿಸಿ, ಭಾಷೆಯನ್ನು ಸರ್ವಸಮರ್ಥವಾಗುವಂತೆ ರೂಪಿಸಬೇಕಾಗುತ್ತದೆ. ದುರ್ದೈವದಿಂದ ನಮ್ಮ ಸಾಹಿತಿಗಳಲ್ಲಿ ಅನೇಕರಿಗೆ ಭಾಷಿಕಪ್ರಜ್ಞೆ ಇಲ್ಲ. ಅವರು ಭಾಷೆಯನ್ನು ಬೆಳೆಸುವುದಕ್ಕೆ

ಪ್ರತಿಯಾಗಿ ಅದನ್ನು ವಿಕೃತಗೊಳಿಸುತ್ತಿದ್ದಾರೆ. ಇಂಗ್ಲಿಷ್‌ಭಾಷೆಯನ್ನು ಕಣ್ಣು ಮುಂದಿಟ್ಟುಕೊಂಡು ಅದರ ಗತಿಯಲ್ಲಿ ಕನ್ನಡವನ್ನು ಬೆಳೆಸುತ್ತಿರುವರು. ಇದನ್ನು ಬಿಟ್ಟು ಕನ್ನಡಭಾಷೆಯನ್ನು ಕನ್ನಡದ ಸ್ವರೂಪ ತತ್ವಗಳಲ್ಲಿಯೇ ಬೆಳೆಸುವ ಹಾದಿಯನ್ನು ಕಂಡುಹಿಡಿಯಬೇಕು.

ಪ್ರಶ್ನೆ : ಕನ್ನಡ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿ ಕ್ಷೇತ್ರಗಳಲ್ಲಿ ಇಂದು ಆಗಬೇಕಾದ ಅಗತ್ಯ ಕೆಲಸಗಳಾವವು ?

● ಕನ್ನಡಭಾಷೆಯ ದೃಷ್ಟಿಯಿಂದ ಮೊದಲು ಸಮಗ್ರ ಜಾನಪದ ಶಬ್ದಕೋಶ ಸಿದ್ಧವಾಗಬೇಕು. ಜನಜೀವನದಲ್ಲಿ ಇಂದಿಗೂ ಅಸ್ತಿತ್ವದಲ್ಲಿರುವ ಶಬ್ದ ಭಂಡಾರ, ಮಾತಿನ ರೀತಿ ಇವೆಲ್ಲ ಒಂದೆಡೆ ಸಂಗ್ರಹವಾದರೆ ಕನ್ನಡಭಾಷೆಯನ್ನು ಮುಂದುವರಿಸುವ–ಸೃಷ್ಟಿಸುವ ದಾರಿ ತಂತಾನೇ ಸ್ಪಷ್ಟವಾಗುತ್ತದೆ. ಇದರಂತೆ ಜಾನಪದ ವಿಶ್ವಕೋಶವೂ ಸಿದ್ಧವಾಗಬೇಕು. ಕನ್ನಡಭಾಷೆಯ ಚರಿತೆ, ಹೊಸಗನ್ನಡಭಾಷೆಯ ಅಧಿಕೃತ ವ್ಯಾಕರಣ, ಇಂದು ಅತ್ಯವಶ್ಯ. ಅಲ್ಲದೆ ಪ್ರಾದೇಶಿಕ ಭಾಷೆಗಳ ಸಮೀಕ್ಷೆ ನಡೆಯಬೇಕು. ಗ್ರಂಥಸ್ಥ ಭಾಷೆಗೂ ಆಡುನುಡಿಗೂ ಇರುವ ಅಂತರವನ್ನು ಕಡಿಮೆಮಾಡಬೇಕು.

ಕನ್ನಡಸಾಹಿತ್ಯದೃಷ್ಟಿಯಿಂದ ಹೇಳುವುದಾದರೆ ನಮ್ಮ ವಿಮರ್ಶೆ ಪರಿತವಾಗಬೇಕು. ಈಗ ಕನ್ನಡದಲ್ಲಿ ನಡೆದಿರುವುದು ಒಮ್ಮುಖದ ವಿಮರ್ಶೆ. ಅರ್ಧಶತಮಾನದ ವರೆಗೆ ಪ್ರಶಂಸೆಯ ವಿಮರ್ಶೆ ನಡೆದು ತಮಗೆ ಬೇಕಾದವರನ್ನು ಹೊಗಳುವ, ಬೇಡಾದವರನ್ನು ತೆಗಳುವ ಕಾರ್ಯ ನಡೆದುಹೋಯಿತು. ಈಗ ಎಲ್ಲವನ್ನೂ ಖಂಡಿಸುವ ಕಾರ್ಯ ಪ್ರಾರಂಭವಾಗಿದೆ. ಗ್ರಂಥವನ್ನು ಓದದೆ ಒಮ್ಮೆ ಅದನ್ನು ಇತರ ಕಾರಣಗಳ ಮೂಲಕ ಖಂಡಿಸಿಬಿಡುವುದು ಇಂದಿನ ಕೆಲ ವಿಮರ್ಶಕರ ಧೋರಣೆಯಾಗಿದೆ. ಏಕೆಂದರೆ ತಾನು ಬಂಡಾಯ ಸಾಹಿತಿ ಎಂದು ಕರೆದುಕೊಳ್ಳುತ್ತಿದ್ದಾನೆ. ಬಂಡಾಯಕ್ಕೆ ಬೇಕಾದ ಕ್ರಾಂತಿ ಜೀವನ, ಕ್ರಾಂತದರ್ಶನ, ಹಳೆಯದರ ಬಗೆಗೆ ಜುಗುಪ್ಸೆ, ಹೊಸತರ ಬಗೆಗೆ ಆಸೆ ತೀಕ್ಷ್ಣವಾಗಿದ್ದರೆ ಅಂಥ ಸಾಹಿತ್ಯ ಸೃಜನವಿರಲಿ-ವಿಮರ್ಶೆಯಿರಲಿ ಅದು ಶ್ರೇಷ್ಠ ಸಾಹಿತ್ಯ ವೆನಿಸಿಕೊಳ್ಳುತ್ತದೆ. ಏಕೆಂದರೆ ಅಲ್ಲಿ ತೀಕ್ಷ್ಣ ಅನುಭವ ಅನಿಸಿಕೆಗಳು ಇರುತ್ತವೆ. ನಮ್ಮ ವಿಮರ್ಶಕ ಇನ್ನೂ ಆ ಹಂತವನ್ನು ಮುಟ್ಟಿದಂತಿಲ್ಲ. ಕನ್ನಡಸಾಹಿತ್ಯದಲ್ಲಿ ಹೊಸಹೊಸ ಪ್ರಯೋಗಗಳೇನೋ ನಡೆಯುತ್ತಿವೆ. ಮಹಾಕಾವ್ಯಕ್ಕೆ ಬೇಕಾದ ಹೊಸ ಛಂದಸ್ಸಿನ ರೂಪರೇಷೆ ಸರಳ ರಗಳೆ, ಮಹಾಛಂದಸ್ಸು– ಈ ರೂಪದಲ್ಲಿ ಪ್ರಕಟ ವಾಯಿತು. ಅನಂತರ ಅವುಗಳನ್ನು ಬಿಟ್ಟರೆ ನಮ್ಮವರಿಗೆ ಬೇರೆ ಹಾದಿಯೇ ಹೊಳೆದಿಲ್ಲ. ಕವಿಗೆ ಅನುಭೂತಿಯಂತೆ ಅಭಿವ್ಯಕ್ತಿಯೂ ವೈವಿಧ್ಯಮಯವಾಗುವುದು ಅಗತ್ಯ. ಮಾನಸಿಕ ತುಮುಲಗಳನ್ನು ಅಭಿವ್ಯಕ್ತಪಡಿಸುವ, ಸಾಮಾಜಿಕ ಸಮಸ್ಯೆಗಳನ್ನು ಸಮಗ್ರ ವಾಗಿ ಗ್ರಹಿಸುವ ಸಾಹಿತ್ಯ ಬೇಕು.

ಪ್ರಶ್ನೆ : ಕನ್ನಡ ಸಾಹಿತ್ಯ ಅಕಾಡೆಮಿ, ಜಾನಪದ ಅಕಾಡೆಮಿ, ಕನ್ನಡ ಸಾಹಿತ್ಯ ಪರಿಷತ್ತುಗಳ ಕಾರ್ಯನಿರ್ವಹಣೆಯ ಬಗೆಗೆ ನಿಮ್ಮ ಅಭಿಪ್ರಾಯವೇನು ?

● ಈ ಮೂರೂ ಸಂಸ್ಥೆಗಳಲ್ಲಿ ಜಾನಪದ ಅಕಾಡೆಮಿ ಇದೀಗ ಉದಯವಾಗಿದೆ. ಅದರ ಕಾರ್ಯಕಲಾಪಗಳನ್ನು ಇನ್ನೂ ಕಾದುನೋಡಬೇಕು.

ಕನ್ನಡ ಸಾಹಿತ್ಯ ಅಕಾಡೆಮಿ ಈಗ ತನ್ನ ಕಾರ್ಯವನ್ನು ಮೊದಲಿಗಿಂತ ಚೆನ್ನಾಗಿ ನಿರ್ವಹಿಸುತ್ತಿದೆ. ಅದು ಕೇವಲ ಪಾರಿತೋಷಕಗಳನ್ನು ಹಂಚುವ ಸಂಸ್ಥೆ ಎಂಬ ಕಲ್ಪನೆ ಈಗ ಮಾಯವಾಗಿ, ಕನ್ನಡಸಾಹಿತ್ಯದ ಆಗುಹೋಗುಗಳ ಬಗೆಗೆ ಅಲ್ಲಿ ನಿಜವಾದ ಚಿಂತನೆ ನಡೆಯುತ್ತಿರುವುದು ಶುಭಸೂಚನೆ.

ಕನ್ನಡ ಸಾಹಿತ್ಯಪರಿಷತ್ತು ತನ್ನ ಮೂಲೋದ್ದೇಶವನ್ನು ಮರೆತು ಸಭೆ-ಸಮಾರಂಭಗಳ ಹಾವಳಿ ಅಧಿಕವಾಗಿ, ಅದೊಂದು ರಾಜಕೀಯದ ರಂಗವಾಗುವ ಲಕ್ಷಣಗಳನ್ನು ತೋರಿಸುತ್ತದೆ. ಇದು ಶುಭಸೂಚನೆಯಲ್ಲ. ಕನ್ನಡಸಾಹಿತ್ಯಕ್ಕೆ ಆಗಬೇಕಾದ ಆವಶ್ಯಕತೆಗಳು ವಿಪುಲವಾಗಿರುವಾಗ ಸಾಹಿತ್ಯಪರಿಷತ್ತೂ ಹೀಗೆ ದುಸ್ಥಿತಿಗಿಳಿಯುತ್ತಿರುವುದು ಚಿಂತಾಜನಕ.

ಪ್ರಶ್ನೆ : ವಿಶ್ವವಿದ್ಯಾಲಯಗಳು ಅಕಾಡೆಮಿಕ್ ಪಾತಳಿಯನ್ನು ಕಳೆದುಕೊಳ್ಳಲು ಯಾರು ಹೊಣೆ ? ಸುಧಾರಣೆಯ ಮಾರ್ಗ ಯಾವವು ?

● ವಿಶ್ವವಿದ್ಯಾಲಯಗಳು ಅಕ್ಯಾಡೆಮಿಕ್ ಪಾತಳಿಯನ್ನು ಕಳೆದುಕೊಳ್ಳಲು ನಮ್ಮ ಸಮಾಜ ಮತ್ತು ರಾಜಕೀಯ ಸ್ಥಿತಿಗತಿಗಳೇ ಕಾರಣ. ನಾವಿರುವಂತೆ ನಮ್ಮ ಸಂಸ್ಥೆಗಳು. ಶಿಕ್ಷಣಸಂಸ್ಥೆಗಳನ್ನು ಸ್ವತಂತ್ರವಾಗಿಟ್ಟು ಅಲ್ಲಿ ಸ್ವತಂತ್ರ ವಿಚಾರಗಳಿಗೆ ಆಸ್ಪದಕೊಟ್ಟರೆ ಅಕಾಡೆಮಿಕ್ ಮೌಲ್ಯಗಳು ಬೆಳೆದು ದೇಶ ಪ್ರಗತಿಪರವಾಗುತ್ತದೆ. ಆದರೆ ನಮ್ಮ ಸರಕಾರಗಳು ಇದರಕಡೆಗೆ ಲಕ್ಷ್ಯಕೊಟ್ಟಂತಿಲ್ಲ; ಇದಕ್ಕೆ ಕಾರಣ ಆ ಸಂಸ್ಥೆಗಳನ್ನು ತಮ್ಮ ಅನುಕೂಲತೆಗಾಗಿ ಬಳಸಿಕೊಳ್ಳುವ ಅವರ ಮಹತ್ವಾಕಾಂಕ್ಷೆ. ಹೀಗಾಗಿ ವಿಶ್ವವಿದ್ಯಾನಿಲಯಗಳ ಸ್ವಾಯತ್ತತೆಯನ್ನು ನಾಶಮಾಡಿ, ಸರಕಾರಗಳು ಆ ವೈಚಾರಿಕ ಸಂಸ್ಥೆಗಳನ್ನು ತಮ್ಮ ಅಧೀನದಲ್ಲಿಟ್ಟುಕೊಂಡಿವೆ. ಇದು ಶೈಕ್ಷಣಿಕ ವಿಕಾಸಕ್ಕೆ ದೊಡ್ಡ ಆತಂಕ. ಇನ್ನು ಸಮಾಜವೂ ಈ ವಿಶ್ವವಿದ್ಯಾಲಯಗಳ ಬಗೆಗೆ ಅತ್ಯಂತ ಅವಜ್ಞೆಯನ್ನು ತೋರಿಸುತ್ತಿವೆ. ಈ ಸಂಸ್ಥೆಗಳು ತಮ್ಮ ಮಕ್ಕಳಿಗೆ ಕೇವಲ ನೌಕರಿಗಳನ್ನು ಒದಗಿಸುವ ಕೇಂದ್ರಗಳೆಂಬ ಭಾವನೆ ಅವರಲ್ಲಿ ಮನದಟ್ಟಾಗಿದೆ. ಪರೀಕ್ಷಾ ಫಲಿತಾಂಶ ಮತ್ತು ನೌಕರಿ ಇವೆರಡನ್ನು ಬಿಟ್ಟು ವಿಶ್ವವಿದ್ಯಾಲಯದ ಬಗೆಗೆ ಸಾಮಾಜಿಕರು ವಿಚಾರಮಾಡುವ ಗೋಜಿಗೇ ಹೋಗುವುದಿಲ್ಲ. ಮುಂದಿನ ಪೀಳಿಗೆಗೆ ಅಗತ್ಯವಾದ ಶಿಕ್ಷಣ ಎಂಥದು ? ದೇಶಕ್ಕೆ ಇಂದಿನ ಅಗತ್ಯಗಳೇನು ? ಎನ್ನುವುದನ್ನು ಮಥಿಸಿ ಮಥಿಸಿ ಹೊಸ ತತ್ವಗಳನ್ನು ಕಂಡುಹಿಡಿದರೆ ಮಾತ್ರ ವಿಶ್ವವಿದ್ಯಾಲಯದಲ್ಲಿ ಅಕ್ಯಾಡೆಮಿಕ್ ಮೌಲ್ಯಗಳು ಉಳಿಯುವ

ಸಂಭವವಿದೆ. ಇಂದಿನ ಸ್ಥಿತಿಯಲ್ಲಿ ವಿಶ್ವವಿದ್ಯಾಲಯದ ಶಿಕ್ಷಕ ತನ್ನ ಮೂಲೋದ್ದೇಶ ವನ್ನು ಮರೆತಿದ್ದಾನೆ. ವಿಶ್ವವಿದ್ಯಾಲಯವೆಂದರೆ ಶಿಕ್ಷಕ, ವಿದ್ಯಾರ್ಥಿ ಮತ್ತು ಸಂಶೋಧನೆ –ಇವುಗಳ ತ್ರಿಪುಟಿ. ಇದಕ್ಕೆ ಪ್ರತಿಯಾಗಿ ವಿಶ್ವವಿದ್ಯಾಲಯದಲ್ಲಿ ಗಣ್ಯ ಗೌರವ ಸ್ಥಾನ ವನ್ನು ಪಡೆದಿರುವ ವ್ಯಕ್ತಿಗಳೆಂದರೆ ಕುಲಾಧಿಪತಿ, ಕುಲಪತಿ, ಕುಲಸಚಿವ, ಇತ್ಯಾದಿ. ಬ್ರಿಟಿಶ್ ಸಾಮ್ರಾಜ್ಯಕಾಲದ ಆಡಳಿತ ವ್ಯವಸ್ಥೆ ನಮ್ಮ ವಿಶ್ವವಿದ್ಯಾಲಯದಲ್ಲಿ ಇನ್ನೂ ಮುನ್ನಡೆದಿದೆ. ಇದು ಬದಲಾಗುವ ವರೆಗೆ ಆಕ್ಯಾಡೆಮಿಕ್ ಪಾತಳಿ ಮೇಲಕ್ಕೇಳಲಾರದು.

ಪ್ರಶ್ನೆ : ನಮ್ಮ ರಾಜ್ಯದ ವಿಶ್ವವಿದ್ಯಾಲಯಗಳ ಬಗೆಗೆ ಪ್ರಾಧ್ಯಾಪಕರಾಗಿ ಮತ್ತು ಕುಲಪತಿಯಾಗಿ ನಿಮಗೆ ಉಂಟಾದ ಅನುಭವ ಕುರಿತು ಕೆಲವು ಮಾತುಗಳನ್ನು ಹೇಳಿರಿ.

● ನಮ್ಮ ರಾಜ್ಯದ ವಿ. ವಿ. ಗಳು ಭಾರತದ ಯಾವ ವಿಶ್ವವಿದ್ಯಾಲಯಗಳಿಗೂ ಕಡಿಮೆಯಾಗಿಲ್ಲ ಎಂಬ ಕಾಲವೊಂದಿತ್ತು. ಆದರೆ ಸರಕಾರವು ವಿಶ್ವವಿದ್ಯಾಲಯಗಳ ಹೊಸ ಕಾನೂನು ರಚಿಸಿ ಈ ಸಂಸ್ಥೆಗಳ ಸ್ವಾಯತ್ತಸ್ವರೂಪವನ್ನು ಕಸಿದುಕೊಂಡಂದಿ ನಿಂದ ಕರ್ನಾಟಕದ ವಿ. ವಿ. ಗಳು ಭಾರತದ ವಿ. ವಿ ಗಳಲ್ಲಿ ತೀರ ಕೆಳಮಟ್ಟಕ್ಕೆ ಬರುವಂತಾಗಿದೆ. ಪ್ರಾಯಶಃ ಇತ್ತೀಚಿನ ದಿನಗಳಲ್ಲಿ ನಮ್ಮ ವಿ. ವಿ. ದಲ್ಲಿ ನಡೆಯು ವಷ್ಟು ಮುಷ್ಕರ, ಬೇರೆ ವಿ. ವಿ. ಗಳಲ್ಲಿ ಕಂಡುಬರುತ್ತಿಲ್ಲ. ಇದಕ್ಕೆ ಕಾರಣ ವಿ. ವಿ. ಗಳಲ್ಲಿ ಕಂಡುಬರುವ ಅಸಂತೃಪ್ತಿ. ಈ ಅಸಂತೃಪ್ತಿಗೆ ಕಾರಣ ಅಲ್ಲಿಯ ಆಡಳಿತ. ಈ ಆಡಳಿತ ಸರಿಯಾಗದೆ ನಮ್ಮ ವಿ. ವಿ. ಗಳು ಸರಿಯಾಗುವಂತಿಲ್ಲ. ಹೊಸ ವೇತನ ಶ್ರೇಣಿಗಳನ್ನು ರೂಪಿಸುವಲ್ಲಿ ತಲೆದೋರಿದ ಅನ್ಯಾಯಗಳನ್ನು ನಿವಾರಿಸುವ ಕಾರ್ಯ, ಅಲ್ಲಿಯ ಕುಲಪತಿ, ಕುಲಸಚಿವ ಹಾಗೂ ಅದರ ಸಂಪೂರ್ಣ ಹೊಣೆಹೊತ್ತ ಸರಕಾರ ಈ ಯಾರಿಂದಲೂ ಸಾಧ್ಯವಾಗಿಲ್ಲ. ಹೀಗಾಗಿ ಅಲ್ಲಿ ಅಸಂತೃಪ್ತಿ ಉಲ್ಬಣಿಸುತ್ತಿದೆ. ವಿ. ವಿ. ದ ಘಟನೆಯಲ್ಲಿ ಅಲ್ಲಿಯ ಶಿಕ್ಷಕ, ವಿದ್ಯಾರ್ಥಿ ಮತ್ತು ಸಾಮಾಜಿಕ ರಂಗದ ಶಿಕ್ಷಣವೇತ್ತರು ಇವರಿಗೆ ಪ್ರಾತಿನಿಧ್ಯವಿರಬೇಕು. ಈಗಿನ ಕಾನೂನಿನಲ್ಲಿ ಮುಖ್ಯ ಸ್ಥಾನ ವಿರುವುದು ರಾಜಕಾರಣಿಗಳಿಗೆ. ಅಲ್ಲಿಯ ಸಿಂಡಿಕೇಟ್, ಅಕ್ಯಾಡೆಮಿಕ್ ಕಾನ್ಸಿಲ್ ಮುಂತಾದವುಗಳ ರಚನೆ ಜಾತೀಯತೆಯ ಆಧಾರದ ಮೇಲೆ ಆಗುತ್ತಿರುವುದು ತೀರ ದುರದೃಷ್ಟಕರ. ವಿ. ವಿ. ಗಳಿಗೆ ಸ್ವಾಯತ್ತತೆ ಮರಳಿಬಂದರೆ ಮಾತ್ರ ಇವುಗಳ ಸುಧಾರಣೆ ಸಾಧ್ಯ.

ಪ್ರಾಧ್ಯಾಪಕನಾಗಿ ಹೇಳುವುದಾದರೆ ವಿ. ವಿ. ಗಳು ಬೆಳೆದಂತೆ ನಮ್ಮ ಶಿಕ್ಷಕನ ಚಿತ್ತವೃತ್ತಿ ಹೆಚ್ಚುಹೆಚ್ಚು ಕಲಕತೊಡಗಿದೆ. ಮೊದಲು ಆತನಿಗೆ ಪರಿಸರ ಅನುಕೂಲವಾಗಿರಲಿಲ್ಲ; ಪರಿಸ್ಥಿತಿ ಚೆನ್ನಾಗಿರಲಿಲ್ಲ. ಆದರೂ ಏಕನಿಷ್ಠೆಯಿಂದ ಕಾರ್ಯಮಾಡಿ ಅಂದಿನ ಶಿಕ್ಷಕ ತನ್ನ ಸ್ವಂತ ವ್ಯಕ್ತಿತ್ವವನ್ನು ಪ್ರಕಟಪಡಿಸುತ್ತಿದ್ದ. ಇಂದು ಶಿಕ್ಷಕನೂ ರಾಜಕಾರಣದ ಸುಳಿಯಲ್ಲಿ ಸಿಲುಕಿದಂತೆ ಕಂಡುಬರುತ್ತಿದೆ. ಈ ಅಪಾಯಕಾರೀ ಧೋರಣೆ ಮಾಯ ವಾಗಿ ಶಿಕ್ಷಕನು ತನ್ನ ವ್ಯಾಸಂಗ, ಸಂಶೋಧನೆಗಳ ಸತ್ವದಿಂದ ತನ್ನ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳುವಂತಾಗಬೇಕು.

ಪ್ರಶ್ನೆ : ನಿಮ್ಮ ಮುಂದಿನ ಯೋಜನೆಗಳಾವವು ?

● ಓದು, ಬರೆಹ.

ಪ್ರಶ್ನೆ : ಒಂದು ಕಾಲಕ್ಕೆ, ಅಂದರೆ ೧೯೫೫ರ ಸುಮಾರು "ಇಷ್ಟೊಂದು ಸಂಬಳ ಪಡೆಯುತ್ತಿದ್ದೇವೆ: ಅದಕ್ಕೆ ಸರಿಸಮನಾಗಿ ನಾವು ಕಾರ್ಯಮಾಡುತ್ತಿಲ್ಲ" ಎಂದು ಹೇಳಿದ್ದಿರಿ. ಅಂದಿನಿಂದ ೨೫ ವರ್ಷಗಳ ನಿಮ್ಮ ನಿರಂತರ ಉದ್ಯೋಗಶೀಲತೆ, ಸೃಜನಶೀಲತೆಗಳು ನಿಮಗೆ ತೃಪ್ತಿಯನ್ನು ತಂದುಕೊಟ್ಟಿವೆಯೇ ?

● ಕಳೆದ ೩೬ ವರ್ಷಗಳ ಅನುಭವದಲ್ಲಿ ನಾನು ಅನೇಕ ವಿಷಯಗಳನ್ನು ಕಂಡುಕೊಂಡಿದ್ದೇನೆ. ಶಿಕ್ಷಕರಾಗಿ ನಾವು ಪಡೆಯುತ್ತಿರುವ ಸಂಬಳ ಅಧಿಕವೆಂಬ ಭಾವನೆ ನನಗೆ ಮೊದಲು ಇದ್ದುದು ನಿಜ. ಅದರ ಅರ್ಥ ನಾವು ಹೆಚ್ಚು ಹೆಚ್ಚು ಕಾರ್ಯಮಾಡಿ ಅದರ ಫಲವನ್ನು ಸಮಾಜಕ್ಕೆ ನೀಡಬೇಕೆಂಬುದೇ ಆಗಿತ್ತು. ಇತ್ತೀಚಿನ ಹಣದುಬ್ಬರದ ಪ್ರವಾಹದಲ್ಲಿ ಶಿಕ್ಷಕನ ಆರ್ಥಿಕ ಸ್ಥಿತಿ ಎಂದಿಗಿಂತಲೂ ಚಿಂತಾಜನಕ. ಅವನಿಗೆ ಸರಿಯಾದ ವೇತನಕೊಟ್ಟು ಯೋಗ್ಯ ಪರಿಸರ ಕಲ್ಪಿಸಿಕೊಟ್ಟರೆ ಅತನೇ ದೇಶವನ್ನು ಉದ್ಧಾರ ಮಾಡಬಲ್ಲ ಎನ್ನುವ ಭಾವನೆ ನನ್ನಲ್ಲಿ ಪ್ರಬಲವಾಗಿದೆ. ಈ ನಾಲ್ಕು ದಶಕಗಳ ಅವಧಿಯಲ್ಲಿ ನನಗೆ ಒಂದು ಬಗೆಯ ಸಮಾಧಾನವಾಗಿದೆ. ನಾನು ಕಂಡ ಅನೇಕ ಕನಸುಗಳಲ್ಲಿ ಕೆಲವು ನನಸಾಗಿರುವುದರಿಂದ ನನಗೆ ಕೆಲಮಟ್ಟಿಗೆ ತೃಪ್ತಿಯುಂಟಾಗಿದೆ. ಆದರೆ ವ್ಯಕ್ತಿಗತವಾಗಿ– ಅದರಲ್ಲಿಯೂ ಸೃಜನಸಾಹಿತ್ಯದಲ್ಲಿ ಇನ್ನೂ ಏನನ್ನೋ ಸೃಷ್ಟಿಸಬೇಕೆಂಬ ಹಂಬಲ ಕತಕತನೆ ಕುದಿಯುತ್ತಿದೆ. ಅದು ಕಾರಣ ತೃಪ್ತಿಯಿಲ್ಲ.

■ ■

# ಅನುಬಂಧ

## ಡಾ. ಆರ್. ಸಿ. ಹಿರೇಮಠ ಅವರ ಗ್ರಂಥಗಳು

| | | |
|---|---|---|
| ೧ | ಸುಮಾಂಜಲಿ (ಕವನ) | ೧೯೪೮ |
| ೨ | ಸಾಹಿತ್ಯ ಸಂಸೃಷ್ಟಿ (ವಿಮರ್ಶೆ) | ೧೯೫೧ |
| ೩ | ಬಸವಪುರಾಣ–೧ (ಸಂಪಾದನೆ) | ೧೯೫೩ |
| ೪ | ಮಹಲಿಂಗಲೀಲೆ (ಸಂಪಾದನೆ) | ೧೯೫೪ |
| ೫ | ಬಸವಪುರಾಣ–೨ (ಸಂಪಾದನೆ) | ೧೯೫೫ |
| ೬ | ಅಖಂಡೇಶ್ವರ ವಚನ (ಸಂಪಾದನೆ) | ೧೯೫೬ |
| ೭ | ಕೈವಲ್ಯದರ್ಪಣ (ಸಂಪಾದನೆ) | ೧೯೫೭ |
| ೮ | ಕವಿ ಪದ್ಮಣಾಂಕ (ವಿಮರ್ಶೆ) | ೧೯೫೮ |
| ೯ | ಪದ್ಮರಾಜಪುರಾಣ (ಸಂಪಾದನೆ) | ೧೯೫೮ |
| ೧೦ | ಮೌನಸ್ಪಂದನ (ಕವನ) | ೧೯೬೧ |
| ೧೧ | ಸೋಮನಾಥ ಚಾರಿತ್ರ (ಸಂಪಾದನೆ) | ೧೯೬೧ |
| ೧೨ | ಕುಂದಣ (ಸಂಪಾದನೆ) | ೧೯೬೧ |
| ೧೩ | ಕೊಟ್ಟೂರ ಬಸವೇಶ್ವರ ಚಾರಿತ್ರ (ಸಂಪಾದನೆ) | ೧೯೬೧ |
| ೧೪ | The Structure of Kannada (Grammar) | ೧೯೬೧ |
| ೧೫ | ಸಮರ ದುಂದುಭಿ (ಸಂಪಾದನೆ) | ೧೯೬೩ |
| ೧೬ | ಬಾಲಲೀಲಾ ಮಹಾಂತೇಶ್ವರ ಪುರಾಣ (ಸಂಪಾದನೆ) | ೧೯೬೪ |
| ೧೭ | ಸೋಮನಾಥಚಾರಿತ್ರ ಸಂಗ್ರಹ | ೧೯೬೪ |
| ೧೮ | ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ–೧ (ಸಂಪಾದನೆ) | ೧೯೬೪ |
| ೧೯ | ಷಟ್‌ಸ್ಥಲಜ್ಞಾನಸಾರಾಮೃತ (ಸಂಪಾದನೆ) | ೧೯೬೪ |
| ೨೦ | ಚೆನ್ನಬಸವಣ್ಣನವರ ವಚನಗಳು (ಸಂಪಾದನೆ) | ೧೯೬೫ |
| ೨೧ | ಷಟ್‌ಸ್ಥಲಪ್ರಭೆ (ಸಂಶೋಧನೆ) | ೧೯೬೫ |
| ೨೨ | Śūnya Saṁpādane-I (Translation) | ೧೯೬೫ |
| ೨೩ | ತ್ರಿಷಷ್ಟಿಪುರಾತನ ಚಾರಿತ್ರಂ (ಸಂಪಾದನೆ) | ೧೯೬೬ |

೨೪ ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ
ರತ್ನಾಕರ-೨ (ಸಂಪಾದನೆ) ೧೯೬೮
೨೫ ಇಪ್ಪತ್ತೇಳು ಶಿವಶರಣೆಯರ ವಚನಗಳು (ಸಂಪಾದನೆ) ೧೯೬೮
೨೬ ಅಮುಗೆ ರಾಯಮ್ಮನ ಮತ್ತು
ಅಕ್ಕಮ್ಮನ ವಚನಗಳು (ಸಂಪಾದನೆ) ೧೯೬೮
೨೭ ಬಸವಣ್ಣನವರ ವಚನಗಳು (ಸಂಪಾದನೆ) ೧೯೬೮
೨೮ ಮಹಾಕವಿ ರಾಘವಾಂಕ (ಸಂಶೋಧನೆ) ೧೯೬೮
೨೯ ಬಸವರಾಜ ವಿಜಯಂ (ಸಂಪಾದನೆ) ೧೯೬೮
೩೦ ಸಿದ್ಧರಾಮೇಶ್ವರ ವಚನಗಳು (ಸಂಪಾದನೆ) ೧೯೬೮
೩೧ ಜ್ಯೋತಿ ಬೆಳಗುತಿದೆ (ಸಂಪಾದನೆ) ೧೯೬೯
೩೨ ಪದ್ಮಶ್ರೀ (ಸಂಪಾದನೆ) ೧೯೭೦
೩೩ ವಿಭೂತಿಪುರುಷರು (ಸಂಪಾದನೆ) ೧೯೭೦
೩೪ ರಾಜಶೇಖರ ವಿಳಾಸ ಸಂಗ್ರಹ ೧೯೭೦
೩೫ ವೀರಶೈವ ಚಿಂತಾಮಣಿ (ಸಂಪಾದನೆ) ೧೯೭೦
೩೬ ಮುಕ್ತಿಕಂಠಾಭರಣ (ಸಂಪಾದನೆ) ೧೯೭೧
೩೭ ಬಸವಪುರಾಣ– ಸಮಗ್ರ (ಸಂಪಾದನೆ) ೧೯೭೧
೩೮ ನೀಲಮ್ಮನ ವಚನಗಳು ಮತ್ತು
ಲಿಂಗಮ್ಮನ ವಚನಗಳು (ಸಂಪಾದನೆ) ೧೯೭೧
೩೯ ಶೂನ್ಯಸಂಪಾದನೆ–ಮಹಾದೇವಯ್ಯ (ಸಂಪಾದನೆ) ೧೯೭೧
೪೦ ವಿಶೇಷಾನುಭವ ಷಟ್‌ಸ್ಥಲ (ಸಂಪಾದನೆ) ೧೯೭೧
೪೧ ಹರಿಹರನ ನೂತನ ರಗಳೆಗಳು (ಸಂಪಾದನೆ) ೧೯೭೨
೪೨ ಶೂನ್ಯಸಂಪಾದನೆ–ಸಿದ್ಧಲಿಂಗದೇವ (ಸಂಪಾದನೆ) ೧೯೭೨
೪೩ ಆಸಾಮಿ ಸಾಹಿತ್ಯಚರಿತ್ರೆ (ಅನುವಾದ) ೧೯೭೨
೪೪ ಸಕಲಪುರಾತನರ ವಚನಗಳು–೧ (ಸಂಪಾದನೆ) ೧೯೭೩
೪೫ ಪುರಾತನರ ರಗಳೆಗಳು (ಸಂಪಾದನೆ) ೧೯೭೩
೪೬ ಪ್ರಭುಲಿಂಗಲೀಲೆ (ಸಂಪಾದನೆ) ೧೯೭೩
೪೭ ಬ್ರಹ್ಮಾದ್ವೈತ ಸಿದ್ಧಾಂತ ಷಟ್‌ಸ್ಥಲಾಭರಣ (ಸಂಪಾದನೆ) ೧೯೭೩
೪೮ ಮಹಾದೇವಿಯಕ್ಕನ ವಚನಗಳು (ಸಂಪಾದನೆ) ೧೯೭೩
೪೯ ಮೋಹನ ತರಂಗಿಣಿ (ಸಂಪಾದನೆ) ೧೯೭೩
೫೦ ಪುರಾತನರ ಆರು ರಗಳೆಗಳು (ಸಂಪಾದನೆ) ೧೯೭೪
೫೧ ಜಾನಪದ ಸಾಹಿತ್ಯದರ್ಶನ–೧ (ಸಂಪಾದನೆ) ೧೯೭೪
೫೨ ಕನ್ನಡ ಶಾಸನ ಸಂಪದ (ಸಂಪಾದನೆ) ೧೯೭೪

## ಡಾ. ಆರ್. ಸಿ. ಹಿರೇಮಠ ಅವರ ಲೇಖನಗಳು

### ಕನ್ನಡ

**ಜಯಕರ್ನಾಟಕ**

೧ ಮೃತ್ಯುಂಜಯ ಮಹಾಸ್ವಾಮಿಗಳು ೩೯–೪
೨ ಮಹಾಕವಿ ಪಂಪನ ಹಿರಿಮೆಯ ಒಂದು ನೋಟ ೩೪–೧೧
೩ ಕನ್ನಡ ಸಾಹಿತ್ಯಕ್ಕೆ ಶ್ರೀಬಸವೇಶ್ವರರ ಕಾಣಿಕೆ ೩೧–೧
೪ ಹರಿಹರ ರಾಘವಾಂಕರ ಮಹಾಕ್ರಾಂತಿಮಾರ್ಗ ೩೩–೧
೫ ರಾಘವಾಂಕನ ಸೋಮನಾಥಚರಿತ್ರೆ ೨೫–೯
೬ ಗೆಲುವೆನೆಂಬುವ ಭಾಷೆ ೨೪–೧೨
೭ ರಾಘವಾಂಕನ ವೀರೇಶಚರಿತೆ ೨೪–೧೧
೮ ತ್ಯಾಗವೀರ ವಾರದ ಮಲ್ಲಪ್ಪನವರು ೩೧–೨

**Journal of Karnatak University**

೯ 'ಅಳಕ' ಶಬ್ದದ ಅರ್ಥವಿವೇಚನೆ I–೨
೧೦ ಪಂಪನನ್ನು ಕುರಿತು ಒಂದು ಅಪೂರ್ವಶಾಸನ XI (೧೯೬೭)
೧೧ ನೂರೊಂದು ವಿರಕ್ತರು VII (೧೯೬೩)

**ವೀರಶೈವ**

೧೨ ಬಸವಪುರಾಣ II–೬
೧೩ ಬಸವಚರಿತಾವತಾರ I–೨
೧೪ ಸಿಂಗಿರಾಜಪುರಾಣದಲ್ಲಿ ಬಸವಣ್ಣನವರ ಜೀವನಚರಿತ್ರೆ

**ಕರ್ನಾಟಕ ಭಾರತಿ**

೧೫ ಭಾಷಾಪ್ರಭೇದ ೯–೧, ೨

**ಶಿವಾನುಭವ**

೧೬ ಸೊನ್ನಲಿಗೆಯ ಸಿದ್ಧರಾಮನು ಶೈವನೇ ? ೨೦–೮
೧೭ ರಾಘವಾಂಕನ ಸಿದ್ಧರಾಮ ಚರಿತ್ರೆ ೨೧–೧೦

**ವಿಶೇಷ ಉಪನ್ಯಾಸಗಳು**

೧೮ ಕನ್ನಡ ಕಾವ್ಯದಲ್ಲಿ ನಾಟಕೀಯತೆ
(ಮಹಾಕವಿ ರನ್ನ ಹಾಗೂ ಅವನ ಕೃತಿಗಳು)
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೧೯ ಪಂಪನ ಆದಿಪುರಾಣ
(ಮಹಾಕವಿ ಪಂಪ ಹಾಗೂ ಅವನ ಕೃತಿಗಳು)
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೨೦ ವಚನ ಸಾಹಿತ್ಯ ಹಾಗೂ ಸರ್ವಜ್ಞ
(ಸರ್ವಜ್ಞ ಕವಿ : ಜೀವನ ಹಾಗೂ ಕಾವ್ಯ)
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೨೧ ಪ್ರಾಚೀನ ಕನ್ನಡ ಸಾಹಿತ್ಯವಿಮರ್ಶೆಯ ತತ್ತ್ವಗಳು
(ಸಾಹಿತ್ಯ ವಿಮರ್ಶೆ)
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
೨೨ ಬಸವಣ್ಣನವರ ವ್ಯಕ್ತಿತ್ವ ವಿಕಾಸ
(ಬಸವಣ್ಣನವರ ವ್ಯಕ್ತಿತ್ವ ವಿಕಾಸ ಹಾಗೂ ಜೀವನಸಿದ್ಧಿ)

**ಕನ್ನಡ ನುಡಿ**

೨೩ ಕನ್ನಡ ಸಾಹಿತ್ಯದಲ್ಲಿ ವೀರಶೈವರ ಸ್ಥಾನ ೨–೬, ೭

**ಜಯಂತಿ**

೨೪ ಕೇಶಿರಾಜ ೨೪–೭

**ಇತರ**

೨೫ ಎಲೆಮರೆಯ ಹೂ ಪ್ರೊ. ಕೆ. ಜಿ. ಕುಂದಣಗಾರ
–ಕುಂದಣ (ಕುಂದಣಗಾರ ಸಂಭಾವನ ಗ್ರಂಥ)
೨೬ ಕನ್ನಡ ಸಾಹಿತ್ಯಕ್ಕೆ ಶ್ರೀ ಬಸವನಾಳರ ಕಾಣಿಕೆ
–ಬಸವನಾಳ ಸ್ಮಾರಕ ಸಂಪುಟ

೨೭ ಸರಸ್ವತಿಯ ಶಿರಿಮುಡಿಗೊಂದು ಪುಷ್ಪಮಣಿಕಾಂತಿ
–ದಾಸೋಹ (ಜಚನಿ ರಜತಮಹೋತ್ಸವ ಗ್ರಂಥ)
೨೮ ಹೂವಿಗಿಂತ ಮೃದು ವಜ್ರಕ್ಕಿಂತ ಕಠೋರ
–ದೇಜಗೌ ವ್ಯಕ್ತಿ ಮತ್ತು ಸಾಹಿತ್ಯ (ಜವರೇಗೌಡ ಸಂಭಾವನ ಗ್ರಂಥ)
೨೯ ಹಿಂದೂ ವಿಶ್ವವಿದ್ಯಾಲಯ
–ವಿಶ್ವಮಾನವನೆಡೆಗೆ (ರವೀಂದ್ರನಾಥ ಠಾಕೂರ ಸಂಭಾವನ ಗ್ರಂಥ)
೩೦ ಬಸವಣ್ಣನವರ ವಿಶ್ವಸಂದೇಶ
–ಶ್ರೀ ಬಸವೇಶ್ವರ (ಬಸವೇಶ್ವರ ಅಷ್ಟಶತಮಾನೋತ್ಸವ ಸಂಸ್ಮರಣ ಗ್ರಂಥ)
೩೧ ಶ್ರೀ ಬಸವೇಶ್ವರ : ಒಂದು ಜೀವನ ಚಿತ್ರ
–ಶ್ರೀ ಬಸವೇಶ್ವರ (ಬಸವೇಶ್ವರ ಅಷ್ಟಶತಮಾನೋತ್ಸವ ಸಂಸ್ಮರಣ ಗ್ರಂಥ)
೩೨ ಧಾರವಾಡ–ವಿಜಾಪುರ ಕನ್ನಡ
–ಸುವರ್ಣ ಸಂಚಯ (ಸುವರ್ಣಮಹೋತ್ಸವ ಸಂಪುಟ ಮೈಸೂರ ವಿ. ವಿ )
೩೩ ಚನ್ನಬಸವಣ್ಣನವರ ಸೂಕ್ತಿಸುಧೆ
–ಅನುಭವ ಮಂಟಪ (ವೀರಶೈವ ವಿದ್ಯಾಪೀಠ ಪ್ರಕಟನೆ)
೩೪ ಕನ್ನಡದಲ್ಲಿ ಶಾಸ್ತ್ರಸಾಹಿತ್ಯ
–ಕನ್ನಡದ ಕಾಲುಶತಮಾನ (ಮಿಂಚಿನಬಳ್ಳಿ ಶತಮಾನೋತ್ಸವ ಸಂಪುಟ)
೩೫ ಶ್ರೀ ಬಾಲಲೀಲಾ ಮಹಾಂತ ಶಿವಯೋಗಿಗಳು
–ಬಾಲಲೀಲಾ ಮಹಾಂತೇಶ್ವರ ಪುರಾಣ
೩೬ ಷಣ್ಮುಖ ಶಿವಯೋಗಿಗಳು : ಜೀವನ ಚರಿತ್ರೆ, ತತ್ತ್ವಜ್ಞಾನ
–ಅಖಂಡೇಶ್ವರ ವಚನಗಳು
೩೭ ನಾಗಚಂದ್ರನ ಅರ್ಥಾಂತರನ್ಯಾಸಗಳು
–ಬಾನುಲಿ ಭಾಷಣ
೩೮ ಕನ್ನಡ ಗ್ರಂಥಗಳು
–ಬಾನುಲಿ ಭಾಷಣ
೩೯ ಕಿಟೆಲ್
–ಕನ್ನಡ ಸಾಹಿತ್ಯಕ್ಕೆ ಕಿಟೆಲ್‌ರ ಕೊಡುಗೆ
೪೦ ಕವಿ–ಕಾವ್ಯಸೃಷ್ಟಿ (ಅಧ್ಯಕ್ಷ ಭಾಷಣ)
–ಕವಿ ಸಮ್ಮೇಲನ, ಧರ್ಮಸ್ಥಳ
೪೧ ಕನ್ನಡ ಕಾವ್ಯದ ಸಿರಿಸಂಪತ್ತು (ಅಧ್ಯಕ್ಷ ಭಾಷಣ)
–ಕವಿಸಮ್ಮೇಲನ, ದಸರಾಮಹೋತ್ಸವ, ಮೈಸೂರು
೪೨ ಕನ್ನಡ ಸಾಹಿತ್ಯಕ್ಕೆ ಧಾರವಾಡ ಜಿಲ್ಲೆಯ ಕಾಣಿಕೆ (ಅಧ್ಯಕ್ಷ ಭಾಷಣ)
–ಧಾರವಾಡ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಲನ

೪೩ ಕನ್ನಡ ಗದ್ಯದ ಮುನ್ನಡೆ (ಅಧ್ಯಕ್ಷ ಭಾಷಣ)
–ಕನ್ನಡ ಸಾಹಿತ್ಯ ಸಮ್ಮೇಲನ, ಮಣಿಪಾಲ
೪೪ ಪಂಪ : ವಿಚಾರಗೋಷ್ಠಿ (ಅಧ್ಯಕ್ಷ ಭಾಷಣ)
–ಬೆಂಗಳೂರ ವಿಶ್ವವಿದ್ಯಾಲಯ, ಬೆಂಗಳೂರು
೪೫ ಭಾಷಾವಿಜ್ಞಾನ ಗೋಷ್ಠಿ (ಅಧ್ಯಕ್ಷ ಭಾಷಣ)
–ಅಖಿಲ ಭಾರತ ಪ್ರಾಚ್ಯ ಸಮ್ಮೇಲನ, ಪುಣೆ
೪೬ ಸಾಹಿತ್ಯಗೋಷ್ಠಿ
–ಕನ್ನಡ ಸಾಹಿತ್ಯ ಸಮ್ಮೇಲನ, ಮಂಡ್ಯ
೪೭ ಭಾಷಾ ಬಾಂಧವ್ಯ ವಿಚಾರಗೋಷ್ಠಿ (ಅಧ್ಯಕ್ಷ ಭಾಷಣ)
–ಸಾಹಿತ್ಯ ಸಮ್ಮೇಲನ, ಗದಗ

## ENGLISH

48 Tirukkural and Basaveswar Vachanagalu
–Proceedings of the Seminar, Madras
49 Compound Verb in Kannada
–Proceedings of the Seminar, Annamalai Nagar
50 Problems of local contact dialects
–Proceedings of the seminar on Language & Society, Simla
51 Problems of the unrecognised local contact languages
–Transaction of the Indian Institute of Advanced Study, Simla
52 Linguistic Alternations
–Proceedings of the seminar on Dialect Survey, Patiala
53 Linguistic investigation of some Place names in Karnataka
–Journal of Indian History, XXXI
54 Vowel Phonomes in Kannada
–Journal of K.U.D. I–2
55 Values in Kannada Literature : ancient and modern
–Journal of K.U.D. IV–2
56 Place names in Karnataka
–Studies in Indian Linguistics
57 An adumbration of some problems in Kannada graphemics
–Journal of K.U.D. XIII
58 The Role of Universities in the integrated Rural Deveopment

59 Formation of Adverbs in Kannada
–Deccan College, Poona
60 Compound Verses in Kannada
–Winter Seminar of Linguistics, Poona
61 Library buildings An Academic Achievement
–Timeless Fellowship x
62 Basavageeta and Bhagavadgeeta
–All India Oriental Conference Proceedings XVII
63 Another View of Kannada
–Transactions of the Indian Institute of Advance Study Vol. V

■ ■

## ಡಾ. ಆರ್. ಸಿ. ಹಿರೇಮಠ ಅವರ ಜೀವನದ ಕೆಲವು ಪ್ರಮುಖ ಘಟನೆಗಳು

| | | |
|---|---|---|
| ಜನನ | — | ೧೯೨೦, ಜನವರಿ ೧೫ |
| ಮುಲ್ಕೀಪರೀಕ್ಷೆ | — | ೧೯೩೪ |
| ಮ್ಯಾಟ್ರಿಕ್ ಪರೀಕ್ಷೆ | — | ೧೯೩೯ |
| ಬಿ ಎ. | — | ೧೯೪೩ |
| ಎಂ.ಎ. | — | ೧೯೪೫ |
| ಬಾಗಿಲುಕೋಟೆಯಲ್ಲಿ ಅಧ್ಯಾಪಕ | — | ೧೬-೫-೧೯೪೫ |
| ಮದುವೆ | — | ೨೧-೫-೧೯೪೮ |
| ಕನ್ನಡ ವಿಭಾಗಕ್ಕೆ (ರೀಡರ್) ಪ್ರವೇಶ | — | ೨೧-೯-೧೯೫೧ |
| ಪಿಎಚ್. ಡಿ. | — | ೧೯೫೫ |
| ಪ್ರೊಫೆಸರ್ | — | ೧೯೫೭ |
| 'ರಾಕಿಫೆಲರ್ ಫೌಂಡೇಶನ್ ಸೀನಿಯರ್ ಫೆಲೋಶಿಪ್'– ಅಮೇರಿಕೆಗೆ ಪ್ರಯಾಣ | — | ೧೯೫೮ |
| ಭಾಷಾವಿಜ್ಞಾನದ ಸಂದರ್ಶಕ ಪ್ರಾಧ್ಯಾಪಕರಾಗಿ ಅಮೇರಿಕೆಗೆ ಪ್ರಯಾಣ | — | ೧೯೬೫ |
| ಸೀನಿಯರ್ ಪ್ರೊಫೆಸರ್ | — | ೧೯೬೬ |
| ಸಿಂಡಿಕೇಟ ಸದಸ್ಯ | — | ೧೯೭೦ |
| ರಾಜ್ಯ ಸಾಹಿತ್ಯ ಅಕಾಡೆಮಿ ಸನ್ಮಾನ | — | ೧೯೭೦ |
| ಆರ್. ಸಿ. : ಐವತ್ತು ಸಮಾರಂಭ | — | ೧೯೭೦ |
| ಕನ್ನಡ ವಿಭಾಗ ಅಧ್ಯಯನಪೀಠವಾದುದು | — | ೧೯೭೨ |
| ಹಂಗಾಮಿ ಕುಲಪತಿ | — | ೧೯೭೪, ಆಗಷ್ಟ ೨೯ |
| ಕುಲಪತಿ ಅಧಿಕಾರ ಸ್ವೀಕಾರ | — | ೧೯೭೫, ಮೇ ೧ |
| ಕಾಮನ್‌ವೆಲ್ಥ ಯುನಿವ್ಹರ್ಸಿಟಿ ವೈಸ್ ಛಾನ್ಸಲರ್ಸ ಕಾನ್ಫರನ್ಸ (ನ್ಯೂಝಿಲಂಡ್) | — | ೧೯೭೬ |
| ಅಖಿಲಭಾರತ ದ್ರಾವಿಡಭಾಷಾ ಸಮ್ಮೇಲನ ಅಧ್ಯಕ್ಷತೆ (ವಾಲ್ಟೇರ್) | — | ೧೯೭೬ |
| ರಾಷ್ಟ್ರೀಯ ಪ್ರಾಧ್ಯಾಪಕ | — | ೧೯೭೮ |
| ಅಂತರರಾಷ್ಟ್ರೀಯ ದ್ರಾವಿಡಭಾಷಾ ಸಂಸ್ಥೆ(ತ್ರಿವೇಂದ್ರಂ) ನಿರ್ದೇಶಕ | — | ೧೯೭೯, ಮಾರ್ಚ ೧೦ |

